S.M.S.O. Publication No. 171.

# ಶ್ರೀಮದ್ ಭಾಗವತ

## ತೃತೀಯಸ್ಕಂಧ ಸಂಪುಟ ೧

### ಅಧ್ಯಾಯ ೧ ರಿಂದ ೧೨



ತಸ್ಮೈ ನಮಸ್ತ ಉದರಸ್ಥಭವಾಯ ಯೋಗನಿದ್ರಾವಸಾನವಿಕಸನ್ನಲಿನೇಕ್ಷಣಾಯ

ಅನುವಾದ ಹಾಗೂ ಸಂಪಾದನೆ

**ಪಂ. ಪೂ. ಶ್ರೀ ಗುತ್ತಲ ರಂಗಾಚಾರ್ಯರು**

ಕುಲಪತಿಗಳು ಶ್ರೀ ಜಯತೀರ್ಥ ವಿದ್ಯಾಪೀಠ

S.M.S.O SABHA PUBLICATION No 171

# ಶ್ರೀಮದ್ ಭಾಗವತ

## ತೃತೀಯಸ್ಕಂಧ - ಸಂಪುಟ - 1

ಅಧ್ಯಾಯ ೧ ರಿಂದ ೧೭ರ ವರೆಗೆ

*ಅನುವಾದ ಹಾಗೂ ಸಂಪಾದನೆ*

**ಪಂ.ಪೂ.ಗುತ್ತಲ ರಂಗಾಚಾರ್ಯರು**

ಕುಲಪತಿಗಳು ಶ್ರೀಜಯತೀರ್ಥ ವಿದ್ಯಾಪೀಠ

ಸಹ ಸಂಪಾದನೆ :

**ಪಂ. ಕೃಷ್ಣಾಚಾರ್ಯ ಉಪಾಧ್ಯಾಯ**

ಅಧ್ಯಾಪಕರು ಶ್ರೀಜಯತೀರ್ಥ ವಿದ್ಯಾಪೀಠ

ಪ್ರಕಾಶಕರು

ಶ್ರೀಮನ್ ಮಧ್ವಸಿದ್ಧಾಂತೋನ್ನಾಹಿನೀ ಸಭಾ

ತಿರುಚಾನೂರು.

2005

**Srimad Bhagavata** Tritiyaskandha in Kannada
by **Pandita Rangacharya Guttala**, Kulapati of Sri Jayateertha Vidyapitha, Published by S.M.S.O. SABHA, Tiruchanuru.

Copies : 1000

First Edition : July 2005

No.of Pages : XVI+487



**Price . 200/-**

Copies can be had from :
1. **Hon. Secretary**
S.M.S.O Tiruchanuru, (A.P)

2. **Jayateertha Vidyapeetha**
Sri Uttaradi Math Basavanagudi
Bangalore - 04

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ಮಂದಿರ

ಮುದ್ರಣ:
ಜಯಂತ್ ಪ್ರಿಂಟರ್ಸ್
ಚಾಮರಾಜಪೇಟೆ. ಬೆಂಗಳೂರು-18.
ಫೋನ್: 26758874, 30914815

॥ ಶ್ರೀ ದಿಗ್ವಿಜಯಮೂಲರಾಮೋ ವಿಜಯತೇ ॥

ಶ್ರೀ ಶ್ರೀ ಮದುತ್ತರಾದಿಮಠಾಧೀಶರಾದ
ಶ್ರೀಶ್ರೀ ೧೦೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಶ್ರೀಮದ್‌ಭಾಗವತವು ಶ್ರೀಕೃಷ್ಣನ ಪ್ರತಿಮೆ. ಮೋಕ್ಷಸಾಧನ. ಆದರೆ ಯಥಾರ್ಥಜ್ಞಾನ ಮಾಡಿಕೊಂಡವರಿಗೆ ಮಾತ್ರ. ಇಲ್ಲದಿದ್ದರೆ ಅನರ್ಥಸಾಧನ. ಯಥಾರ್ಥಜ್ಞಾನಕ್ಕಾಗಿ ಶ್ರೀಮದಾಚಾರ್ಯರ ಶ್ರೀಮದ್ಭಾಗವತತಾತ್ಪರ್ಯದ ಅಧ್ಯಯನ ಅತ್ಯಂತ ಅಗತ್ಯವಾದುದು. ಶ್ರೀಮದಾಚಾರ್ಯರ ಭಾವದ ಅವಬೋಧವಾಗುವದಕ್ಕೆ ಶ್ರೀವಿಜಯಧ್ವಜತೀರ್ಥರು ಶ್ರೀಯಾದವಾರ್ಯರು ಶ್ರೀಸತ್ಯಧರ್ಮರು ಶ್ರೀಶ್ರೀನಿವಾಸತೀರ್ಥರೇ ಮೊದಲಾದ ಅನೇಕಮಹನೀಯರ ವ್ಯಾಖ್ಯಾನಗಳ ಸಹಾಯ ವ್ಯಾಖ್ಯಾನಕಾರರ ಪರಮಾನುಗ್ರಹ ಅತ್ಯವಶ್ಯ. ಈ ನಿಟ್ಟಿನಲ್ಲಿ ಎಲ್ಲ ತತ್ತ್ವಜಿಜ್ಞಾಸುಗಳಿಗೆ ಅನುಕೂಲವಾಗುವಂತೆ ನಮ್ಮ ಪಂ. ಸುಧಾವಿಶಾರದರಾದ ಆಚಾರ್ಯರವರು (ಶ್ರೀಪಾದಪುತ್ರರು) (ಗುತ್ತಲ ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳನ್ನು ಆಳವಾಗಿ ಅಧ್ಯಯನಮಾಡಿ ಎಲ್ಲ ವ್ಯಾಖ್ಯಾನಕಾರರ ಅಭಿಪ್ರಾಯಗಳನ್ನು ಅಳವಡಿಸಿಕೊಂಡು ಬಹುಸುಂದರವಾಗಿ ಎಲ್ಲರಿಗೂ ಮನಮುಟ್ಟುವಂತೆ ಈ ಅನುವಾದದಲ್ಲಿ ಮೂಡಿಸಿದ್ದಾರೆ. ಪ್ರಕೃತ ಈ ತೃತೀಯಸ್ಕಂಧಕ್ಕೆ ವಿಜಯಧ್ವಜೀಯ ಯಾದುಪತ್ಯ ಹಾಗೂ ತಾತ್ಪರ್ಯದ ಇನ್ನೂ ಕೆಲವು ವ್ಯಾಖ್ಯಾನಗಳನ್ನು ಅಳವಡಿಸಿದ್ದಾರೆ. ಶ್ರೀಮದಾಚಾರ್ಯರು ಹಾಗೂ ವ್ಯಾಖ್ಯಾನಕಾರರು ಮಾಡಿದ ಉಪಕಾರವನ್ನು ಎಷ್ಟು ತಿಳಿದರೂ ಕಡಿಮೆ. ಉದಾಹರಣೆಗೆ

➤ ಭಾಗವತದಲ್ಲಿ ಸೃಷ್ಟಿಗೆ ಗುಣವೈಷಮ್ಯ ಎಂದು ಕರೆದಿದ್ದಾರೆ. ಅರ್ಥವಾಗುವದಿಲ್ಲ. ಶ್ರೀಮದಾಚಾರ್ಯರು ತಿಳಿಸುತ್ತಾರೆ, ಸೃಷ್ಟಿ ಕಾಲದಲ್ಲಿ ರಾಶೀಕೃತ ಸತ್ವವು ಶುದ್ಧವಾಗಿರುತ್ತದೆ. ರಾಶೀಕೃತ ರಜಸ್ಸು ತಮಸ್ಸುಗಳು ಮಿಶ್ರವಾಗಿರುತ್ತವೆ ಎಂದು. ಹಾಗಾದರೆ ಸತ್ವದಲ್ಲಿ ಅಮಿಶ್ರಿತತ್ವ ರಜಸ್ಸು ತಮಸ್ಸುಗಳಲ್ಲಿ ಮಿಶ್ರಿತತ್ವ ಎಂಬ ವಿರುದ್ಧ ಧರ್ಮಗಳಿರುವದರಿಂದ ಗುಣಗಳಲ್ಲಿ ವೈಷಮ್ಯ ಬಂದಂತೆ ಆಯಿತು ಅಂತ ಯಾದವಾರ್ಯರು ಸ್ಪಷ್ಟಪಡಿಸುತ್ತಾರೆ. ಇಲ್ಲವಾದರೆ ಸ್ಪಷ್ಟವಾಗುವದಿಲ್ಲ.

➤ ಅದರಂತೆ ರಜಸ್ಸು ತಮಸ್ಸುಗಳಲ್ಲಿ ಮಿಶ್ರಣಕ್ರಮವನ್ನು ಶ್ರೀಮದಾಚಾರ್ಯರು ತಿಳಿಸುತ್ತಾರೆ. ರಜಸ್ಸಿನಲ್ಲಿ ಸತ್ವ-೧೦೦, ರಜಸ್ಸು-೧, ತಮಸ್ಸು ೧.೧೦೦. ಹೀಗೆ ತಮಸ್ಸಿನಲ್ಲಿ ಸತ್ವ-೧೦, ರಜಸ್ಸು ೧.೧೦ ತಮಸ್ಸು ೧ ಹಾಗಾದರೆ ರಜಸ್ಸು ತಮಸ್ಸುಗಳಲ್ಲಿ ಎರಡರಲ್ಲಿಯೂ ಸತ್ವವೇ ಹೆಚ್ಚಿರುವಾಗ ರಜಸ್ಸು ತಮಸ್ಸು ಎಂಬ ಹೆಸರಿನಿಂದೇಕೆ ಕರೆಯುತ್ತಾರೆ ? ಎಂಬ ಪ್ರಶ್ನೆಗೆ ಮೂಲದಲ್ಲಿ ಉತ್ತರವು ಮಂದರಾದ ನಮ್ಮಂತಹವರಿಗೆ ಗೋಚರವಾಗುವದಿಲ್ಲ. ಆದಕ್ಕೆ ಯಾದವಾರ್ಯರು ತಿಳಿಸುತ್ತಾರೆ -

"ರಜೋರಾಶಿತಮೋರಾಶ್ಯೋಃ ಸತ್ವಗುಣಸ್ಯಾಧಿಕ್ಯೇಽಪಿ ಇತರಗುಣಯೋ-ರ್ಮಧ್ಯೇ ಯಸ್ಯ ಯತ್ರ ಆಧಿಕ್ಯಂ ಸ ರಾಶಿಸ್ತನ್ನಾಮ್ನಾ ಅಭಿಧೀಯತೇ"

ರಜಸ್ತಮೋರಾಶಿಗಳಲ್ಲಿ, ಸತ್ವಾತಿರಿಕ್ತಗುಣಗಳ ಮಧ್ಯದಲ್ಲಿ ಎಲ್ಲಿ ಯಾವುದರ ಆಧಿಕ್ಯವಿದೆಯೋ ಅಲ್ಲಿ ಆ ಗುಣದ ಹೆಸರಿನಿಂದ ವ್ಯವಹಾರ ಮಾಡುತ್ತಾರೆ. ಹೀಗೆ ಹೇಳುವ ಅನಿವಾರ್ಯತೆಯೂ ಇದೆ. ಇಲ್ಲದಿದ್ದರೆ ಎಲ್ಲಕಡೆಗೂ ಸತ್ವವೇ ಹೆಚ್ಚು ಇರುವದರಿಂದ ರಜಸ್‌ತಮಸ್‌ಗಳ ಹೆಸರೇ ಇಲ್ಲದೆ ಅವುಗಳ ಅಸ್ತಿತ್ವವೇ ಜನರಿಗೆ ಗೊತ್ತಾಗದೇ ಹೋಗುವ ಪ್ರಸಂಗ ಬರುತ್ತದೆ.

➤ ಗುಣತ್ರಯಗಳ ಮಿಶ್ರಿತತ್ವೇನ ಅವಸ್ಥಾನವು ಸಾಮ್ಯಾವಸ್ಥಾ. ಅದುವೇ ಪ್ರಲಯ ಎನ್ನುವುದಾದರೆ ಗುಣತ್ರಯಗಳ ಲಯವಾದಮೇಲೆ ಪ್ರಲಯಕ್ಕೆ ಸಾಮ್ಯಾವಸ್ಥಾ ಎಂದು ಹೇಗೆ ಹೇಳುವದು ಎಂಬ ಪ್ರಶ್ನೆಗೆ ಯಾದವಾರ್ಯರು ಅನುಗ್ರಹಿಸುತ್ತಾರೆ -

ಗುಣತ್ರಯಗಳಿಗೂ ಕಾರಣವಾದ ಸೂಕ್ಷ್ಮರೂಪಗಳಿವೆ. ಗುಣತ್ರಯಗಳು ಲೀನವಾಗಿ ಸೂಕ್ಷ್ಮರೂಪೇಣ ಇರುವಾಗಲೂ ಮಿಶ್ರಿತತ್ವೇನ ಸಾಮ್ಯವನ್ನು ಹೊಂದಿಯೇ ಇರುತ್ತವೆ. ಹೀಗಾಗಿ ಗುಣತ್ರಯ ಲಯೋತ್ತರದಲ್ಲೂ ಸಾಮ್ಯಾವಸ್ಥೆ ಉಳಿಯುತ್ತದೆ. ಇದು ಬಹಳ ಅಪರೂಪದ ವಿಷಯ

➤ ಇಂದ್ರಾದಿ ದೇವತೆಗಳು ಮೊದಲ ಬಾರಿ ವೈಕಾರಿಕ ಅಹಂಕಾರದಿಂದ ಹುಟ್ಟಿದಾಗ ವೈಕಾರಿಕ ಎಂಬ ಹೆಸರು ಬಂತು. ಅವರಲ್ಲಿ ಕಿಂಚಿತ್ ವಿಕಾರ ಬಂದ ಕಾರಣ ವೈಕಾರಿಕ ಎಂದು ಕರೆದರು. ಆದರೆ ಅದೇ ದೇವತೆಗಳಿಗೆ ಇಂದ್ರಿಯಾಭಿ-ಮಾನಿಗಳಾಗಿ ತೈಜಸಾಹಂಕಾರದಿಂದ ಹುಟ್ಟಿದಾಗ ಅತಿವಿಕಾರವಾದರೂ ಯಾಕೆ ವೈಕಾರಿಕ ಎಂಬ ಹೆಸರು ಬರಲಿಲ್ಲ ? ಎಂಬ ಶಂಕೆಗೆ ಶ್ರೀಮದಾಚಾರ್ಯರು ತಿಳಿಸುತ್ತಾರೆ. ವೈಕಾರಿಕತ್ವಕ್ಕೆ ವಿಕಾರವತ್ವ ಪ್ರಯೋಜಕವಲ್ಲ. ಅವಿಕಾರಿತ್ವ

ಯೋಗ್ಯತಾನಿವೃತ್ತಿಯು ಪ್ರಯೋಜಕ. ಅದು ಪ್ರಥಮಜನ್ಮದಲ್ಲಿಯೇ ಆಗಿದೆ. ಹೀಗಾಗಿ ದ್ವಿತೀಯಜನ್ಮದಲ್ಲಿ ವೈಕಾರಿಕಶಬ್ದದ ಪ್ರಯೋಗವಿಲ್ಲ ಎಂದು. ಆದರೆ ಅವಿಕಾರಿತ್ವಯೋಗ್ಯತಾನಿವೃತ್ತಿಯು ಧ್ವಂಸರೂಪವಾದದ್ದು. ಅದು ದ್ವಿತೀಯಾದಿ ಜನ್ಮಗಳಲ್ಲೂ ಅನುವೃತ್ತಿಯಾಗುವಾಗ ಅವಿಕಾರಿತ್ವಯೋಗ್ಯತಾನಿವೃತ್ತಿಯು ವೈಕಾರಿಕ ಶಬ್ದಪ್ರವೃತ್ತಿನಿಮಿತ್ತವಾದರೂ ದ್ವಿತೀಯಾದಿಜನ್ಮಗಳಲ್ಲಿ ವೈಕಾರಿಕಶಬ್ದವನ್ನು ವಾರಣ ಮಾಡಲಿಕ್ಕೆ ಬರುವದಿಲ್ಲ ಎಂಬ ಶಂಕೆಯು ಸ್ಥೂಲದೃಷ್ಟಿಗಳಾದ ನಮಗೆ ಬರುತ್ತದೆ. ಸೂಕ್ಷ್ಮದೃಷ್ಟಿಗಳಾದ ಯಾದವಾರ್ಯರು ತಿಳಿಸುತ್ತಾರೆ. –

ಅವಿಕಾರಿತ್ವಯೋಗ್ಯತಾನಿವೃತ್ತಿಜನಕಉತ್ಪತ್ತಿಮತ್ತ್ವವು ವೈಕಾರಿಕ ಶಬ್ದಪ್ರವೃತ್ತಿ ನಿಮಿತ್ತ ದ್ವಿತೀಯಜನ್ಮದಲ್ಲಿ ಅವಿಕಾರಿತ್ವಯೋಗ್ಯತಾನಿವೃತ್ತಿ ಇದ್ದರೂ ಅವಿಕಾರಿತ್ವ ಯೋಗ್ಯತಾನಿವೃತ್ತಿಜನಕಉತ್ಪತ್ತಿ ಇಲ್ಲ. ಮೊದಲನೆಯ ಉತ್ಪತ್ತಿಯಿಂದಲೇ ಯೋಗ್ಯತಾನಿವೃತ್ತಿಯ ಜನನವಾದ ಮೇಲೆ ಮತ್ತೆ ಎರಡನೆಯ ಉತ್ಪತ್ತಿಯಿಂದ ಜನನವಾಗುವ ಪ್ರಸಕ್ತಿ ಇಲ್ಲ. ಹೀಗೆ ಒಂದೇ ಎರಡೆ ಸಾವಿರಾರು ವಿಷಯಗಳನ್ನು ತಿಳಿಸಿ ನಮ್ಮನ್ನು ಉದ್ಧಾರ ಮಾಡಿದ್ದಾರೆ. ಇಂತಹ ಅನೇಕ ಜಟಿಲ ವಿಷಯಗಳನ್ನು ಅತಿಸುಲಲಿತವಾಗಿ ಕನ್ನಡದಲ್ಲಿ ಆಚಾರ್ಯರು ತಿಳಿಸಿದ್ದಾರೆ. ಜಿಜ್ಞಾಸುಗಳು ಇದರ ಲಾಭವನ್ನು ಪಡೆದುಕೊಳ್ಳಬೇಕು. ನಮ್ಮ ಉಪಾಸ್ಯ ಮೂರ್ತಿಗಳಾದ ಶ್ರೀಮೂಲರಾಮ ದಿಗ್ವಿಜಯರಾಮ ವೇದವ್ಯಾಸದೇವರು ಗುತ್ತಲ ಆಚಾರ್ಯರ ಮೇಲೆ ಪೂರ್ಣಾನುಗ್ರಹ ಮಾಡಿ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಟ್ಟು ಶ್ರೀಮದ್ಭಾಗವತದ ಈ ಅನುವಾದಕಾರ್ಯವನ್ನು ಪೂರ್ಣಮಾಡಿಸಲಿ ಮತ್ತು ನಿರಂತರ ಗ್ರಂಥಗಳ ಪಾಠ ಪ್ರವಚನಗಳನ್ನು ಮಾಡಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣೆಗಳು

ಪಾರ್ಥಿವ , ಅಕ್ಷಯ ತೃತೀಯಾ

# ಲೇಖಕರ ನಿವೇದನ

ದಯಾಮಯನಾದ ಭಾಗವತ ಪ್ರತಿಪಾದ್ಯ ಕಪಿಲನಾಮಕ ಭಗವಂತನ ದಯೆಯಿಂದ ಪ್ರಾತಸ್ಮರಣೀಯರಾದ ಸ್ವರೂಪೋದ್ಧಾರಕರಾದ ಶ್ರೀಶ್ರೀಸತ್ಯಪ್ರಮೋದತೀರ್ಥರ ಹಾಗೂ ಪರಮಹಂಸಪೀಠದಲ್ಲಿ ವಿರಾಜಮಾನರಾದ ಶ್ರೀ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ ಪರಮಾನುಗ್ರಹದಿಂದ ಶ್ರೀಮದ್ಭಾಗವತ ಕುಸುಮರೂಪವಾದ ಈ ತೃತೀಯಸ್ಕಂಧವನ್ನು ಪ್ರಕಾಶಿಸಿ ಶ್ರೀಹರಿಯ ಪಾದಾರವಿಂದಗಳಲ್ಲಿ ಸಮರ್ಪಿಸಿ ಪ್ರಸಾದ-ರೂಪವಾದ ಈ ಗ್ರಂಥಸುಮವನ್ನು ಸಹೃದಯ ಜಿಜ್ಞಾಸುಗಳ ಅಂಜಲಿಗಳಲ್ಲಿ ಇಡುತ್ತಿದ್ದೇನೆ. ಭಕ್ತಿಭಾವದಿಂದ ಇದನ್ನು ಸ್ವೀಕರಿಸಿ ಇದರಲ್ಲಿಯ ಮನೋಜ್ಞವಾದ ಭಗವದ್ಭಕ್ತಿಯನ್ನು ಉದ್ಬೋಧಗೊಳಿಸುವ ಆಖ್ಯಾನಗಳ ಸವಿಯನ್ನುಂಟು ಕೃತಾರ್ಥರಾಗಬೇಕಾಗಿ ವಿನಂತಿಸುತ್ತೇನೆ.

ಜಿಜ್ಞಾಸುಗಳ ನಿರೀಕ್ಷೆ ಬೇರೆಯೇ ಆಗಿದೆಯೆಂದು ನಾನು ಬಲ್ಲೆ. ಏಕಾದಶಸ್ಕಂಧ ಈಗಾಗಲೇ ಹೊರಬರಬೇಕಾಗಿತ್ತು. ಇದನ್ನೇ ನೀವೆಲ್ಲ ಬಯಸಿದ್ದು ಆದರೆ ಭಗವತ್ಸಂಕಲ್ಪ ಬೇರೆಯೇ ಆಗಿತ್ತು. ಸಂಕಲ್ಪಿಸುವುದು ನಮ್ಮ ಕರ್ತವ್ಯ. ಫಲ ನೀಡುವುದು ಶ್ರೀಹರಿ ಸಂಕಲ್ಪ. ''ಹರಿಚಿತ್ ಸತ್ಯ ನರಚಿತ್ತಲವಲೇಶವೂ ಇಲ್ಲವಯ್ಯಾ'' ಅಷ್ಟೇ ! ನಾವೆಷ್ಟೇ ಪ್ರಯತ್ನಿಸಿದರೂ ಅವನ ಇಚ್ಛೆಯಿದ್ದ ದಿನ ಅದು ಪ್ರಕಟವಾಗಬೇಕು. ಹೊರತು ನಮ್ಮ ಸಂಕಲ್ಪದಂತೆ ಅದು ಸಿದ್ಧವಾಗದು. ಆ ಭಗವಂತನ ಇಚ್ಛೆಯಂತೆ ಪ್ರಕೃತ ತೃತೀಯಸ್ಕಂಧದ ಮೊದಲ ಒಂದು ಸಂಪುಟವನ್ನು ನಿಮ್ಮ ಕೈಯಲ್ಲಿಡುತ್ತಿದ್ದೇನೆ.

ಈ ತೃತೀಯಸ್ಕಂಧದಲ್ಲಿ ವಿದರ ಮೈತ್ರೇಯರ ಸಂವಾದದಲ್ಲಿ ಅನೇಕ ವಿಷಯ ನಿರೂಪಿಸುವರು.

ದುರ್ಯೋಧನನಿಂದ ಅವಮಾನಿತನಾದ ವಿದುರನು ಉದ್ಧವನ ಸೂಚನೆಯಂತೆ ಹರಿದ್ವಾರಕ್ಕೆ ತೆರಳಿದನು. ಅಲ್ಲಿ ಮೈತ್ರೇಯನು ಭಗವಂತನ ಮಹಿಮೆಯನ್ನು ವರ್ಣಿಸುತ್ತ ಭಗವಂತನು ಮಾಡಿದ ತತ್ವ, ತತ್ವಾಭಿಮಾನಿಗಳ ಸೃಷ್ಟಿ ಬ್ರಹ್ಮಾಂಡಸೃಷ್ಟಿ ಹಿರಣ್ಯಗರ್ಭನ ಸೃಷ್ಟಿ ನಂತರ ಹಿರಣ್ಯಗರ್ಭನಿಂದಾದ ನವವಿಧ ಸೃಷ್ಟಿ ಪರಮಾತ್ಮನ ಕಾಲಸ್ವರೂಪ ಕಾಲದ ವಿವರಗಳು ಚತುರ್ಮುಖಬ್ರಹ್ಮನಿಂದ ಪಂಚವಿಧ ಅವಿದ್ಯಾ ಸೃಷ್ಟಿ ರುದ್ರದೇವರ ಸೃಷ್ಟಿ ರುದ್ರದೇವರಿಂದ ಪ್ರಮಥಗಣಗಳ ಸೃಷ್ಟಿ ಚತುರ್ಮುಖ ಬ್ರಹ್ಮನಿಂದ ಸನಕಾದಿಗಳ ಸೃಷ್ಟಿ ಮರೀಚಿ, ಅತ್ರಿ, ಮೊದಲಾದ ಋಷಿಗಳ ಸೃಷ್ಟಿ ನಾರದನ ಸೃಷ್ಟಿ ವೇದಾದಿ ವಿದ್ಯೆಗಳ ಸೃಷ್ಟಿ ಕೊನೆಗೆ ತಾನೇ ಎರಡು ಹೋಳಾಗಿ ಪುರುಷ ಮತ್ತು ಸ್ತ್ರೀರೂಪಿಗಳಾದ ಸ್ವಾಯಂಭುವ ಮನು, ಮತ್ತು ಶತರೂಪಾದೇವಿಯಾಗಿ ಅವತರಿಸುವುದು. ಈ ಎಲ್ಲ ವಿಷಯಗಳು ಮೂರನೇ ಸ್ಕಂಧದ ಮೊದಲಿನ ಕೆಲವು ಅಧ್ಯಾಯಗಳಲ್ಲಿ ನಿರೂಪಿತವಾಗಿದೆ. ಮುಂದೆ ವರಾಹ ಅವತಾರದ ಕಥೆ, ದಿತಿಯು ಅಕಾಲದಲ್ಲಿ ಕಾಮಪೀಡಿತಳಾಗಿ ಒತ್ತಾಯದಿಂದ

ಪತಿಯನ್ನು ಒಪ್ಪಿಸಿ ಗರ್ಭಿಣಿಯಾಗಿ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷರೆಂಬ ಮಕ್ಕಳನ್ನು ಪಡೆದುದು, ಇವರು ಮೊದಲು ಜಯವಿಜಯರೆಂಬ ಹೆಸರಿನಿಂದ ವೈಕುಂಠದ ದ್ವಾರಪಾಲಕರಾಗಿದ್ದು ಸನಕಾದಿಗಳ ಶಾಪದಿಂದ ಈಗ ದೈತ್ಯರಾಗಿ ಜನಿಸಿದ್ದು, ಭಗವಂತನು ವರಾಹರೂಪದಿಂದ ಹಿರಣ್ಯಾಕ್ಷನನ್ನು ಸಂಹಾರಮಾಡಿ ಭೂಮಿಯನ್ನು ಪಾತಾಳದಿಂದ ಮೇಲೆ ತಂದದ್ದು, ಈ ವಿಷಯಗಳು ಮಧ್ಯ ಕೆಲವು ಅಧ್ಯಾಯಗಳಿಂದ ಪ್ರತಿಪಾದಿತವಾಗಿದೆ. ಮುಂದೆ ಕೆಲವು ಅಧ್ಯಾಯಗಳಲ್ಲಿ ಬ್ರಹ್ಮನ ಸೃಷ್ಟಿಯ ಇನ್ನೂ ಕೆಲವು ವಿವರಗಳನ್ನು ಹೇಳಿ ಮುಂದೆ ಮನುಪುತ್ರಿಯಾದ ದೇವಹೂತಿಯು ಕರ್ದಮನನ್ನು ಮದುವೆಯಾದ ವಿಷಯವನ್ನು ತಿಳಿಸಿ ಇವರಲ್ಲಿ ಅವತರಿಸಿದ ಪರಮಾತ್ಮನ ಕಪಿಲಾವಪತಾರವನ್ನೇ ವರ್ಣಿಸಿದೆ. ಮುಂದೆ ಸ್ಕಂಧದ ಕೊನೆಯವರೆಗೆ ಕಪಿಲರೂಪದಿಂದ ಪರಮಾತ್ಮನು ಉಪದೇಶಿಸಿದ ಇಪ್ಪತ್ತನಾಲ್ಕು ತತ್ವಗಳನ್ನೇ ಇವೆಲ್ಲವುಗಳಿಗೂ ನಿಯಾಮಕನಾದ ಪರಮಾತ್ಮನ ಮಹಿಮೆಯನ್ನೇ ವರ್ಣಿಸಲಾಗಿದೆ.

ವೇದವ್ಯಾಸದೇವರು ನಿರೂಪಿಸಿದ ವಿಷಯದುರವಗಾಹವಾಗಿದೆ. ಸುಲಭವಾಗಿ ನಮ್ಮ ಬುದ್ಧಿಗೆ ನಿಲುಕುವುದಿಲ್ಲ. ಹೀಗಾಗಿ ಅದರ ಅಭಿಪ್ರಾಯ ಸ್ಪಷ್ಟವಾಗಿ ತಿಳಿಯಬೇಕಾದರೆ ಶ್ರೀಮದಾಚಾರ್ಯರು ಜಗತ್ತಿಗೆ ನೀಡಿದ ಕರದೀವಿಗೆ ಬೇಕು. ಭಾಗವತ ತಾತ್ಪರ್ಯಕ್ಕೆ ಅನುಗುಣವಾಗಿ ಅರ್ಥೈಸಿದಾಗ ಮಾತ್ರ ನಿಜವಾದ ಅಭಿಪ್ರಾಯ ಆದೀತು ! ಇಲ್ಲವಾದರೆ ಬಹಳ ಕಷ್ಟ ಅನರ್ಥವೂ ಆಗುತ್ತದೆ.

ಶ್ರೀಮದಾಚಾರ್ಯರ ಹೃದಯವನ್ನು ಬಿಚ್ಚಿ ಇಟ್ಟವರು ಶ್ರೀಯಾದವಾರ್ಯರು ತಮ್ಮ ಸರಳ ಹಾಗೂ ಸ್ಪಷ್ಟ ಮಾತಿನಿಂದ ಆಚಾರ್ಯರ ವಾಣಿಯಯ ಭಾವವನ್ನು ಹೊರಹಾಕಿದ್ದಾರೆ.

ಶ್ರೀಮದಾಚಾರ್ಯರ ತಾತ್ಪರ್ಯ ಹಾಗೂ ಯಾದವಾರ್ಯರ ವ್ಯಾಖ್ಯಾನಕ್ಕೆ ಅನುಗುಣವಾಗಿ ಭಾಗವತಕ್ಕೆ ಅನುವಾದ ಮಾಡಿರುವೆ. ಎಲ್ಲ ಅನುವಾದದ ಪುಣ್ಯಫಲವನ್ನು ಗುರುಗಳಾದ ಶ್ರೀಸತ್ಯಾತ್ಮತೀರ್ಥರ ಅಂತರ್ಗತರಾದ ಶ್ರೀಮತ್ಸತ್ಯಪ್ರಮೋದತೀರ್ಥರ ಅಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಪತಿ ಶ್ರೀರಾಮಚಂದ್ರದೇವರಿಗೆ ಸಮರ್ಪಿಸುತ್ತೇವೆ.

ಈಗ್ರಂಥಕ್ಕೆ ಸಂದೇಶವನ್ನು ನೀಡಿ ಪರಮಾನುಗ್ರಹಗೈದ ಕುಲಗುರುಗಳಾದ ಶ್ರೀಶ್ರೀ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರಿಗೆ ಅನಂತ ಶಿರಸಾಷ್ಟಾಂಗಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಇದನ್ನು ತಮ್ಮ ಮಧ್ವಸಿದ್ಧಾಂತ ಉನ್ನಾಹಿನಿ ಸಭೆಯಿಂದ ಪ್ರಕಾಶನಗೊಳಿಸಿದ ಅಧ್ಯಕ್ಷರಾದ ಪೂಜ್ಯ ಪಂ. ಕೂಸನೂರು ಆಚಾರ್ಯರಿಗೂ ಸಾಷ್ಟಾಂಗಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಈ ಗ್ರಂಥಕ್ಕೆ ಮುನ್ನುಡಿಯನ್ನು ಕೊಟ್ಟಿರುವ ಪಂಡಿತ ಪ್ರಕಾಂಡ ವಿದ್ಯಾಸಿಂಹಾಚಾರ್ಯ ಮಾಹುಲಿ ಅವರಿಗೆ ಅಭಿಮಾನಪೂರ್ವಕವಾದ ನಮನಗಳು.

ಈ ಗ್ರಂಥಪ್ರಕಾಶನದಲ್ಲಿ ಅನೇಕ ಕೈಗಳು ದುಡಿದಿವೆ ಆ ಎಲ್ಲ ಕೈಗಳಿಗೂ ಹಾರೈಸುವೆ. ಮತ್ತು ನಮ್ಮ ಚಿರಂಜೀವನಾದ ವಿದ್ಯಾಧೀಶಾಚಾರ್ಯನು ಮತ್ತು ನಮ್ಮ ಶಿಷ್ಯನಾದ ಕೃಷ್ಣಾಚಾರ್ಯ ಉಪಾಧ್ಯಾಯನು ಪುಸ್ತಕ ಹೊರಬರುವಲ್ಲಿ ಬಹಳ ಶ್ರಮವಹಿಸಿದ್ದಾರೆ. ಅವರಿಗೂ ದೇವರು ಜ್ಞಾನಭಕ್ತಿವೈರಾಗ್ಯನೀಡಲೆಂದು ಹಾರೈಸುತ್ತೇನೆ. ಇದೇ ರೀತಿ ಮುಂದಿನ ಎಲ್ಲ ಭಾಗವತ ಸ್ಕಂಧಗಳ ಅನುವಾದ ಪ್ರಕಾಶನದಲ್ಲಿ ಶಕ್ತಿಯನ್ನು ಅವರಿಗೆ ನೀಡಲಿ ಎಂದು ಹಾರೈಸುತ್ತೇನೆ.

ಇದನ್ನು ಮಧ್ವಸಿದ್ಧಾಂತೋನ್ನಾಹಿನಿ ಸಭೆಯವತಿಯಿಂದ ಪ್ರಕಾಶಿಸಿದ ಕಾರ್ಯದರ್ಶಿಗಳಾದ ಆರ್ ಅನಂತನ್ ಅವರಿಗೂ ಆಭಾರಿಯಾಗಿರುವೆ.

ಸಜ್ಜನವಿಧೇಯ
**ರಂಗಾಚಾರ್ಯ ಗುತ್ತಲ**
ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ

# ಮುನ್ನುಡಿ

ನಾಲ್ಕು ವೇದ, ಮಹಾಭಾರತ, ಮೂಲರಾಮಾಯಣ, ಪಂಚರಾತ್ರ, ಸಮಗ್ರಪುರಾಣ ಇತ್ಯಾದಿಯಾಗಿದೆ ವಾಙ್ಮಯ. ಇವುಗಳಲ್ಲಿ ಹಲವಾರು ಗ್ರಂಥಗಳು ಉಪಲಬ್ಧವಿಲ್ಲ. ಉಪಲಬ್ಧವಿದ್ದರೂ ಅವುಗಳ ಅರ್ಥ ಮಾನವರಿಗೆ ಗಮ್ಯವಲ್ಲ.

ಅನಂತವೇದಗಳು ದೊರಕುವುದೇ ಇಲ್ಲ. ಉತ್ಸನ್ನವಾಗಿವೆ. ದೊರಕಿದ ವೇದಗಳಿಗೂ ಇದೇ ಅರ್ಥ ಎಂದು ಕರಾರುವಕ್ಕಾಗಿ ಹೇಳಲು ಸಂಪ್ರದಾಯ ಉಳಿದಿಲ್ಲ.

ಮೂಲರಾಮಾಯಣ ಶತಕೋಟಿವಿಸ್ತಾರ. ಈಗ ದೊರಕುವದೇ ಇಲ್ಲ.

ಪಂಚರಾತ್ರ ಶತಕೋಟಿ. ಭಾಗಶಃ ಸಿಕ್ಕಿದೆ. ಹೆಚ್ಚು ಸಿಕ್ಕಿಲ್ಲ.

ಶತಕೋಟಿವಿಸ್ತೀರ್ಣ ಆದಿಕಾಲದ ಪುರಾಣ. ಅದು ಉಪಲಬ್ಧವಿಲ್ಲ.

ಅದನ್ನು ಭಗವಾನ್ ವ್ಯಾಸರು ಸಂಗ್ರಹಮಾಡಿದರು.

ಪಂಚರಾತ್ರಾಧಾರದಿಂದ ಮೂಡಿಬಂದದ್ದೇ ಸಾತ್ವಿಕಪುರಾಣ.

ವೇದದ ಮೇಲ್ನೋಟದ ಅರ್ಥವನ್ನು ಅವಲಂಬಿಸಿ ಹೊರಬಂದದ್ದೇ ರಾಜಸಪುರಾಣ.

ಪಾಶುಪತಾದಿ ಶಾಸ್ತ್ರವನ್ನು ಆಧರಿಸಿ ರಚಿಸಿದ್ದೇ ತಾಮಸ ಪುರಾಣ.

ಮೂರೂ ತೆರ ಪುರಾಣಗಳಲ್ಲಿ ಅಸುರಮೋಹನೆಯ ಬಯಕೆ ಬೇರೆ. ಅದಕ್ಕಾಗಿ ಮೂರು ಭಾಷೆಗಳನ್ನು ಅನುಸರಿಸಿದ್ದಾಯಿತು. ಮೂರು ಭಾಷೆಗಳು ಒಟ್ಟಾರೆ ಎಂಭತ್ತೊಂದು ಭಾಷೆಗಳಾಗುತ್ತವೆ. ನೂರು ರೀತಿಗಳನ್ನು ಅಳವಡಿಸಿದ್ದಾಯಿತು. ಏಳು ಕ್ರಮದಿಂದ ವಿಷಯ ನಿರೂಪಣೆಯಾಯಿತು.

ಎಲ್ಲಕ್ಕೆ ಮೇಲೆ ಅರ್ವಾಚೀನ ಕಾಲದಲ್ಲಿ ನಡೆದ ಪ್ರಕ್ಷಿಪ್ತ, ಅಂತರಿತ, ವ್ಯತ್ಯಾಸ, ಅನ್ಯಥಾಕಥನಗಳ ತೊಡಕು. ಇದೆಲ್ಲ ಭಯಾನಕ ಗೊಂಡಾರಣ್ಯ. ಇದೆಲ್ಲ ಮಾನವನ ತಿಳಿವಿಗೆ ಬಾಹಿರ. ಅಂತೆಯೇ ತತ್ವನಿರ್ಣಯ ಅಸಾಧ್ಯ.

ಈ ಎಲ್ಲ ಕಾರಣಗಳಿಂದಾಗಿಯೇ ಮಾಧ್ವಸಂಪ್ರದಾಯದಲ್ಲಿ ವೇದ, ಮಹಾಭಾರತ, ಪುರಾಣಗಳನ್ನು ವ್ಯಾಖ್ಯಾನಿಸುವ, ಪಾಠಹೇಳುವ, ಪ್ರವಚನಮಾಡುವ ರೂಢಿ ಹೆಚ್ಚಾಗಿ ಬರಲಿಲ್ಲ.

ಶ್ರೀಮದ್ಭಾಗವತವು ಅನಂತವೇದ, ಶತಕೋಟಿ ರಾಮಾಯಣ ಪಂಚರಾತ್ರ ಪುರಾಣಗಳಂತೆ ಅತಿವಿಸ್ತೃತವಲ್ಲ. ಮಾನವರಿಗೆ ದುರ್ಲಭವಾಗಿ ಉಳಿದಿಲ್ಲ. ಮಹಾಭಾರತದಂತೆ ದೇವದುರ್ಗಮವೂ ಅಲ್ಲ. ಶ್ರೀಮದ್ಭಾಗವತದ ಪ್ರತಿಪದದ ಅರ್ಥವನ್ನು ತಿಳಿಯಲು ಮನುಷ್ಯರಿಗೂ ಅಧಿಕಾರವಿದೆ.

ಅಲ್ಲದೇ ಇತರ ಎಲ್ಲ ಪುರಾಣಗಳಿಗಿಂತ ಹೆಚ್ಚಾಗಿ ಭಾಗವತದಲ್ಲಿ ಭಗವಂತನ ಮಹಿಮೆ ಹೆಜ್ಜೆ ಹೆಜ್ಜೆಗೂ ನಿರೂಪಿತವಾಗಿದೆ. ಇಷ್ಟಿದ್ದರೂ ಭಾಷಾತ್ರಯದ ಬಿಗಿ ಇಲ್ಲಿಯೂ ಬಿಟ್ಟಿಲ್ಲ.

ಅಸುರಮೋಹನದ ಉದ್ದೇಶ್ಯ ಇಲ್ಲಿಯೂ ಅನುಸ್ಯೂತವಾಗಿದೆ. ಅಪಪಾಠದ ಪಾಡಂತೂ ಆಚಾರ್ಯರ ಕಾಲದಲ್ಲೇ ಹೆಡೆ ಎತ್ತಿದ್ದು ಕಾಣುತ್ತೇವೆ. ಇದಕ್ಕಾಗಿಯೇ ಭಗವಾನ್ ವ್ಯಾಸರ ಹೃದಯವನ್ನು ಚೆನ್ನಾಗಿ ಬಲ್ಲ ಶ್ರೀಮದಾನಂದತೀರ್ಥಭಗವತ್ಪಾದರು ಶ್ರೀಮದ್ಭಾಗವತಕ್ಕೆ ''ತಾತ್ಪರ್ಯ''ವೆಂಬ ಭಾಷ್ಯವನ್ನು ರಚಿಸಿದರು. ಶ್ರೀಮದಾಚಾರ್ಯರ ಭಾಗವತ ತಾತ್ಪರ್ಯ ತತ್ವಗಳ ಕಡಲು. ಪ್ರಮೇಯಗಳ ಮಹಾಸಾಗರ.

ಆಚಾರ್ಯರು ಎಲ್ಲ ಕಡೆಗೆ ಸಂಕ್ಷಿಪ್ತವಾಕ್ಯರು. ಆಚಾರ್ಯರ ಪ್ರತಿ ಶಬ್ದ ಹೊಸ ತತ್ವವನ್ನು ನಿರ್ಣಯಿಸುವಂಥದು. ಆಚಾರ್ಯರೂ ಸ್ವತಃ ಗಂಭೀರವಚನರು. ಅವರ ಗ್ರಂಥಗಳಲ್ಲಿ ಉದಾಹೃತವಾದ ಭಗವದ್ವಚನಗಳಂತೂ ಮಿಗಿಲಾಗಿ ಗಂಭಿರ. ಸಂಕ್ಷಿಪ್ತ.

ಭಕ್ತಿಯ ಪರಾಕಾಷ್ಠೆ ಕರಾರುವಕ್ಕಾದ ತತ್ವನಿರ್ಣಯ, ಅತಿದುರ್ಘಟವಾಕ್ಯಗಳ ವ್ಯಾಖ್ಯಾನ, ಅತ್ಯಂತ ಅಪ್ರಸಿದ್ಧ ಪದಗಳ ಸಮಂಜಸ ಅರ್ಥನಿರೂಪಣೆ, ಸಿದ್ಧಾಂತಸ್ಥಾಪನೆಗೆ ಅನುವಾದ ಪ್ರಬಲತಮ ರಾಶಿ ರಾಶಿ ಯುಕ್ತಿ ಪ್ರಮಾಣಗಳ ಉಪಪಾದನೆ, ದುರ್ಮತ ಖಂಡನೆ, ಪರಕೀಯ ವ್ಯಾಖ್ಯಾನಗಳ ಅಸಮಂಜಸತೆಯ ಸಮರ್ಥನೆ ಇದೆಲ್ಲದಕ್ಕೆ ಪ್ರಧಾನ ಆಕಾರ ಆಚಾರ್ಯರ ಗ್ರಂಥ.

ಆಚಾರ್ಯರ ಭಾಗವತತಾತ್ಪರ್ಯವನ್ನು ವ್ಯಾಸಂಗ ಮಾಡುವಾಗ ಹಿರಿದಾದ ಮತ್ತೊಂದು ಮಹಾಲಾಭವೆಂದರೆ ಶ್ರೀಹರಿ ರಚಿಸಿದ, ಈಗ ಉಪಲಬ್ಧವಾಗದ ನೂರಾರು ಗ್ರಂಥಗಳ ಹಾಗೂ ಶ್ರುತಿವಚನಗಳ ಅಧ್ಯಯನವಾಗುವದು. ಇದು ಬೇರೆ ಯಾವ ಟೀಕಾಟಿಪ್ಪಣೀಕಾರರ ಗ್ರಂಥಗಳಲ್ಲಿ ಪ್ರಾಯಃ ಕಾಣಸಿಗದು.

ಆಚಾರ್ಯರ ಗ್ರಂಥಗಳ ಉಪಲಬ್ಧಿ ಅನಂತ ಜನ್ಮಗಳ ಉರುತರ ಪುಣ್ಯಫಲ.

ಶ್ರೀಮದಾಚಾರ್ಯರ ಗ್ರಂಥವನ್ನೂ ಅದಕ್ಕನುಗುಣವಾಗಿ ಭಾಗವತಮೂಲವನ್ನೂ ವ್ಯಾಖ್ಯಾನ ಮಾಡಿದ ಅನೇಕಾನೇಕ ಮಹಾನುಭಾವರು ಇದ್ದಾರೆ. ಜ್ಞಾನಿಗಳು ಪ್ರಸ್ಥಾನತ್ರಯದ ನಂತರ ಅತಿಹೆಚ್ಚಿನ ಪ್ರಮಾಣದಲ್ಲಿ ಭಾಗವತವನ್ನು ವ್ಯಾಖ್ಯಾನಿಸಿದ್ದಾರೆ. ಅವರ ನಾಮಸಂಕೀರ್ತನ ನಮ್ಮ ಪಾಪಪರಿಹಾರ.

ಇದೆಲ್ಲವನ್ನು ಇಟ್ಟುಕೊಂಡು, ಪ್ರಕೃತ ಪಂಡಿತಪ್ರಕಾಂಡರಾದ ಪರಮಪೂಜ್ಯ ಆಚಾರ್ಯರವರು (ಪಂಡಿತ ಗುತ್ತಲ ರಂಗಾಚಾರ್ಯರು) ಶ್ರೀಮದ್ಭಾಗವತಕ್ಕೆ ಕನ್ನಡದಲ್ಲಿ ಅನುವಾದವನ್ನು ರಚಿಸಿದ್ದಾರೆ.

ಪೂಜ್ಯ ಪಂಡಿತವರ್ಯ ಆಚಾರ್ಯರವರು ಸ್ವತಃ ಮಹಾಮೇಧಾವಿಗಳು. ಅವರ ಗ್ರಹಣಶಕ್ತಿ ಅದ್ಭುತ. ಯಾರೇ ಏನೇ ವಿಷಯವನ್ನು ಹೇಳಿ ಮುಗಿಸುವದರೊಳಗೆ ಆ ವಿಷಯವನ್ನು ಸಮಗ್ರವಾಗಿ ತಿಳಿದುಕೊಳ್ಳುವ ಹರಿತಬುದ್ಧಿ. ಅವರಿಗಿರುವ ಶ್ರೀಮನ್ ನ್ಯಾಯಸುಧಾಗ್ರಂಥದ ಉಪಸ್ಥಿತಿಯಂತೂ ಭಾರೀ ಪಂಡಿತರಿಗೂ ಬೆರಗುಗೊಳಿಸುವದು. ಅವರು ಶಿಷ್ಯರನ್ನು ನ್ಯಾಯಾಮೃತ, ಚಂದ್ರಿಕಾ ಸುಧಾದಿ ಗ್ರಂಥಗಳಲ್ಲಿ ಅಚ್ಚರಿಗೊಳಿಸುವಂತೆ ಸಿದ್ಧಪಡಿಸಿದ್ದನ್ನು ನೋಡಬಹುದು.

ಎಷ್ಟೇ ಗಹನವಾಕ್ಯಾರ್ಥವನ್ನು ಅವರು ಲೀಲಯಾ ಯಥಾರ್ಥವಾಗಿ – ಎಂದೆಂದಿಗೂ ಅಡ್ಡದಾರಿಗೆ ಹೋಗದೆ ನಿರೂಪಣೆ ಮಾಡುತ್ತಾರೆ. ಚರ್ಚೆಮಾಡುವಾಗ ಯಾವುದೇ ದುರಾಗ್ರಹವಿಲ್ಲದೇ ಕೇವಲ ತತ್ವನಿರ್ಣಯಕ್ಕಾಗಿಯೇ ಪ್ರಾಂಜಲವಾಗಿ ಚರ್ಚೆಮಾಡುವ ಸೌಜನ್ಯವನ್ನು ಕಾಣಬಹುದು. ಸನಿಹದ ಸಂಪರ್ಕವಿಲ್ಲದವರಿಗೆ ಅತಿಗಂಭೀರರೆಂದು ತೋರುವ ಆಚಾರ್ಯರವರು ಹತ್ತಿರದ ಒಡನಾಟವಿದ್ದವರಿಗೆ ತುಂಬ ಸರಳ ಸಹೃದಯ ಆತ್ಮೀಯರಾಗಿಯೇ ಇರುತ್ತಾರೆ. ಅವರು ಶ್ರೀಮದ್ಭಾಗವತವನ್ನು ಅನೇಕ ವರ್ಷಗಳಿಂದ ಕನ್ನಡದಲ್ಲಿ ಅನುವಾದಿಸುತ್ತಿರುವರು. ಇದೊಂದು ಅತಿದೀರ್ಘಕಾಲದ ತಪಸ್ಸೆ. ಇದಕ್ಕಾಗಿರುವ ಅವರ ಹಟ ಅನನ್ಯವೂ ಹೌದು. ಆದರ್ಶವೂ ಹೌದು.

ತಮ್ಮ ನಿತ್ಯದ ಅವಿರತ ಪಾಠಪ್ರವಚನಗಳು, ಶ್ರೀಮಠದ ಬೃಹತ್ತಾದ ಜವಾಬ್ದಾರಿ, ವಿದ್ಯಾಪೀಠದ ಹೋಣೆ ಇವುಗಳ ಮಧ್ಯದಲ್ಲಿ ಪ್ರಾಯಃ ಒಂದೂ ದಿನ ಬಿಡದೆ ಒಂಭತ್ತು, ಹತ್ತು ಹನ್ನೊಂದು ಹನ್ನೆರಡು ಸ್ಕಂಧಗಳ ಅನುವಾದ ವ್ಯಾಖ್ಯಾನ ಮುಗಿಸಿ ಈಗ ಮೂರನೆಯ ಸ್ಕಂಧದ ಅನುವಾದವನ್ನು ಮಾಡುತ್ತಲಿದ್ದಾರೆ.

ಅವರ ಅನುವಾದದ ವೈಶಿಷ್ಟ್ಯವೆಂದರೆ ಪ್ರಾಯಃ ಉಪಲಬ್ಧ ಎಲ್ಲ ಟಿಪ್ಪಣೀಗಳ ಅರ್ಥ ವಿವರಣೆ. ಕೇವಲ ಮೂಲಭಾಗವತಕ್ಕೇ ಅನುವಾದಮಾಡುವದು ಕಠಿಣ. ಅಂಥ ಗ್ರಂಥಗಳು ತುಂಬ ವಿರಳ.

ಹೀಗಿರುವಾಗ ಶ್ರೀಶ್ರೀ ಸತ್ಯಧರ್ಮತೀರ್ಥರೇ ಮೊದಲಾದವರು ಬರೆದ ಜಟಿಲ ಟಿಪ್ಪಣೀಗಳ ತುಂಬ ಸರಳ ವಿವರಣೆ ಮಾಡುವದು ಕಠಿಣವೆಂದು ಹೇಳಬೇಕೆ ?

ಒಂಭತ್ತು, ಹನ್ನೊಂದು ಮೂರು ಸ್ಕಂಧಗಳಲ್ಲಿ ಅನೇಕ ಕಡೆಗೆ ತುಂಬ ಸ್ವಾರಸ್ಯವಾಗಿ ಅನುವಾದಿಸಿದ್ದುಂಟು. ಇದಕ್ಕೆ ಒಂದು ನಿದರ್ಶನ ಶ್ರುತಿಗೀತಾ. ಅಲ್ಲಿ ಅವರ ಕೌಶಲ, ಪಾಂಡಿತ್ಯ ಎದ್ದು ಕಾಣುತ್ತದೆ. ಹೀಗೆ ಅನೇಕ ಉದಾಹರಣಗಳನ್ನು ಕೊಡಬಹುದು.

ಭಾಗವತವನ್ನು ಅಥವಾ ತಾತ್ಪರ್ಯ ಟಿಪ್ಪಣೀಗಳನ್ನು ಸಾಕ್ಷಾತ್ತಾಗಿ ಅರ್ಥಮಾಡಿಕೊಳ್ಳ-ಲಾರದ ಜಿಜ್ಞಾಸುಗಳಿಗೆ, ಅಷ್ಟೇ ಅಲ್ಲ ಅವುಗಳನ್ನು ಅರ್ಥಮಾಡಿಕೊಳ್ಳುವ ವಿದ್ವಾಂಸರಿಗೂ ಸ್ಪಷ್ಟೀಕರಣಕ್ಕಾಗಿ ಇವರ ಈ ಅನುವಾದ ಗ್ರಂಥಗಳು ತುಂಬ ಉಪಯುಕ್ತವಾಗಿವೆ.

ಶ್ರೀಹರಿವಾಯುಗಳ ಅಧಿಷ್ಠಾನರಾದ ಆಚಾರ್ಯರವರಿಗೆ ನನ್ನ ಭಕ್ತಿಪುರಸ್ಸರ ಅನೇಕಾನೇಕ ದಂಡವತ್ ಪ್ರಣಾಮಗಳು.

ಬ್ರಹ್ಮಾತ್ಮದಾಸ,

ಪರಮಪೂಜ್ಯಮಾಹುಲೀಆಚಾರ್ಯಪಾದಪದ್ಮಾರಾಧಕ

**ವಿದ್ಯಾಸಿಂಹಾಚಾರ್ಯ ಮಾಹುಲಿ**

## PUBLISHER'S NOTE

We are extremely happy and overwhelmed with joy to present our 171st publication of Srimad Bagavatham Third Skandha Vol-1 in Kannada as rendered by our beloved and learned Dharmathikari Pandit *Guttal Rangacharya*. He is well known for his dynamic presentation of high proficiency in Dwaitha philosophy in all Madhwa conglomeration. The present work by the author relates to the third Skandha consists of a conversation that took place between *Uddhava* and *Vidura*, *Vidura* and *Maitreya*. A detailed highly devotional review of shri Krishna's life and doing is made by shri *Uddhava*. The topics of *sarga* (primary creation) and *visarga* (secondary creation) are discussed in this skandha. The incarnation of the Lord as *Varaha*, the measurements of time and space, the birth of *Hiranyaksha* and *Hiranyakasipu*, the destruction of *Hiranyaksha*, the story of *Kardama Prajapati* are some of the other important topics covered in this skandha. Not but not the least is the famous Kapilopadesa to his mother Devahuti. The commentary of production of 24 Tattvas is also contained in this skandha.

This third skandha of Srimad Bhagavatham has been taken for this book with the acharya's *Bhagavatha Thatparyanirnaya* and tippanis connected therein, the vivid commentary and collection of tippanis beautify the best understanding of contexts involved in this skandha. This book is a valuable one to be possessed by one and all.

SMSO Sabha profoundly thanks Pandit shri Guttal Rangacharya for this valuable work which will stand to time. Shri Guttal Rangacharya has already published Bhagavathams 11th and 12th Skandha through our Sabha and we genuinely pray that this holy work will please lord Vishnu. We also thank the printer of the publication *Jayanta Printars* who has printed the book in an attractive manner.

May the publications infuse in the people who read them, Bhakthi, the essential one for attaining Moksha.

Tirupur

**R ananthan, B.Sc., F.C.A.,**
Chartered accountant,
Honorary secretary,
SMSO Sabha, Tiruchanoor.

# ವಿಷಯಾನುಕ್ರಮಣಿಕಾ

## ಅಧ್ಯಾಯ - ೧



## ಅಧ್ಯಾಯ - ೨



## ಅಧ್ಯಾಯ - ೩

## ಅಧ್ಯಾಯ – ೪



## ಅಧ್ಯಾಯ ೫



## ಅಧ್ಯಾಯ ೬



## ಅಧ್ಯಾಯ ೭

## ಅಧ್ಯಾಯ ೮



## ಅಧ್ಯಾಯ ೯



## ಅಧ್ಯಾಯ ೧೦

## ಅಧ್ಯಾಯ ೧೧



## ಅಧ್ಯಾಯ ೧೨



## ಅಧ್ಯಾಯ ೧೩

## ಅಧ್ಯಾಯ ೧೪



## ಅಧ್ಯಾಯ ೧೫

## ಅಧ್ಯಾಯ ೧೬



## ಅಧ್ಯಾಯ ೧೭





# ಅಥ ಶ್ರೀಮದ್ಭಾಗವತೇ ತೃತೀಯಸ್ಕಂಧೇ

## ಪ್ರಥಮೋಽಧ್ಯಾಯಃ

ಶ್ರೀಹರಿಯ ಅಪರೋಕ್ಷಜ್ಞಾನವಾಗಲು ಮುಮುಕ್ಷುಗಳಿಗೆ ಭಕ್ತಿಯೊಂದೇ ಮುಖ್ಯಸಾಧನವು. ಉಳಿದೆಲ್ಲವೂ ಭಕ್ತಿಗೆ ಸಾಧನವೆಂದು ಈ ಅಧ್ಯಾಯದಲ್ಲಿ ವಿವರಿಸುವರು. ಸೂತರು ಶೌನಕರ ಪ್ರಶ್ನೆಯನ್ನು ಪರಿಹರಿಸಲು ಶುಕಪರೀಕ್ಷಿತರ ಸಂವಾದವನ್ನು ಹೇಳುವರು. ಶ್ರೀ ಶುಕಾಚಾರ್ಯರು 'ಆಸೀದ್ಯದುದರಾತ್ ಪದ್ಮಂ' ಮುಂತಾಗಿ ಪರೀಕ್ಷಿತನು ಕೇಳಿದ ಪ್ರಶ್ನೆಗೆ ಪಾದ್ಮಕಲ್ಪ, ಕಾಲಲಕ್ಷಣಾದಿ ಉತ್ತರವನ್ನು ವಿದುರ ಮೈತ್ರೇಯರ ಸಂವಾದ ಮುಖದಿಂದ ಹೇಳುವೆನು, ಎಂಬ ಅಭಿಪ್ರಾಯ-ದಿಂದ ಹೇಳುವರು-

**ಶ್ರೀಶುಕ ಉವಾಚ**

**ಏವಮೇತತ್ ಪುರಾ ಪೃಷ್ಟೋ ಮೈತ್ರೇಯೋ ಭಗವಾನ್ ಕಿಲ ।**
**ಕ್ಷತ್ರಾ ವನಂ ಪ್ರವಿಷ್ಟೇನ ತ್ಯಕ್ತ್ವಾ ಸ್ವಗೃಹಮೃದ್ಧಿಮತ್ ॥೧॥**

ಯಥಾ=ಹೇಗೆ, ಅಹಂ=ನಾನು, ಏತತ್=ಪಾದ್ಮಕಲ್ಪ, ಕಾಲಲಕ್ಷಣಾದಿಗಳನ್ನು ಕುರಿತು, ತ್ವಯಾ=ನಿನ್ನಿಂದ, ಪೃಷ್ಟಃ=ಕೇಳಲ್ಪಟ್ಟಿರುವೆನೋ, ಏವಂ=ಹಾಗೆಯೇ ಋದ್ಧಿಮತ್=ಸಂಪದ್ಭರಿತವಾದ, ಸ್ವಗೃಹಂ ತ್ಯಕ್ತ್ವಾ=ತನ್ನ ಮನೆಯನ್ನು ಬಿಟ್ಟು ವನಂ= ಅಡವಿಯನ್ನು, ಪ್ರವಿಷ್ಟೇನ=ಪ್ರವೇಶಿಸಿದ, ಕ್ಷತ್ರಾ=ವಿದುರನಿಂದ ಭಗವಾನ್ ಮೈತ್ರೇಯಃ=ಪೂಜ್ಯರಾದ ಮೈತ್ರೇಯರು, ಪೃಷ್ಟಃ ಕಿಲ=ಪ್ರಶ್ನಿಸಲ್ಪಟ್ಟರಷ್ಟೇ. 'ಮೈತ್ರೇಯಃ ತಸ್ಮೈಯದುತ್ತರಂ ಉಕ್ತವಾನ್ ತತ್ ತುಭ್ಯಂ ಅಭಿಧಾಸ್ಯೇ' (ಎಂದು ಶೇಷ) ಮೈತ್ರೇಯರು ವಿದುರನಿಗೇನು ಹೇಳಿದರೋ ಅದೇ ಉತ್ತರವನ್ನೇ ನಿನಗೆ ನಾನು ಹೇಳುವೆನು ಎಂದರ್ಥ ॥೧॥

ವಿದುರನು ಯಾವಾಗ ವನ ಪ್ರವೇಶ ಮಾಡಿದನು ಎಂದು ಹೇಳುವರು–

**ಯದಾ ತ್ವಯಂ ಮಂತ್ರಕೃದ್ ವೋ ಭಗವಾನಖಿಲೇಶ್ವರಃ ।**
**ಪೌರವೇಂದ್ರಪುರಂ ಹಿತ್ವಾ ಪ್ರವಿವೇಶಾತ್ಮಸಾತ್ ಕೃತಂ ॥ ೨ ॥**

ವಃ=ನಿನ್ನ ಅಜ್ಜಂದಿರಾದ ಪಾಂಡವರಿಗಾಗಿ, ಮಂತ್ರಕೃತ್=ರಾಜ್ಯವನ್ನು ಕೊಡಿಸು-ವುದಕ್ಕಾಗಿ ವಿಚಾರ ಮಾಡುವ, (ಸಂಧಿಯನ್ನು ಮಾಡುವ) ಅಖಿಲೇಶ್ವರಃ= ಸರ್ವೇಶ್ವರನಾದ,ಭಗವಾನ್=ಶ್ರೀಕೃಷ್ಣನು, ಪೌರವೇಂದ್ರಪುರಂಹಿತ್ವಾ=(ಸಂಧಿಯು ಒಪ್ಪಿಗೆಯಾಗದಿರುವಾಗ) ಹಸ್ತಿನಾಪುರವನ್ನು ಬಿಟ್ಟು, ಆತ್ಮಸಾತ್‌ಕೃತಂ=ಸ್ವಾಧೀನ-ವಾದ ಉಪಪ್ಲಾವ್ಯ ಎಂಬ ಪುರವನ್ನು, ಯದಾ=ಯಾವಾಗ, ಪ್ರವಿವೇಶ=ಪ್ರವೇಶ ಮಾಡಿದನೋ, 'ತದಾ ವನಂ ಪ್ರವಿಷ್ಟೇನ' ಎಂದು ಹಿಂದಿನ ಶ್ಲೋಕದಿಂದ ಅನ್ವಯ ಮಾಡಬೇಕು. ದ್ರುಪದನ ಪುರೋಹಿತರ ಸಾಮ್ಯವನ್ನು ವ್ಯಾವೃತ್ತಿ ಮಾಡಲು 'ಅಯಂ ತು' ಎಂದು ತುಶಬ್ದ ಇಟ್ಟಿರುವರು.

ಈ ರೀತಿ ಹೇಳುವುದರಿಂದ ಯುದ್ಧ ಕಾಲದಲ್ಲಿ ವಿದುರನು ಹಸ್ತಿನಾಪುರದಲ್ಲಿ ಇರಲಿಲ್ಲ ಎಂದು ತೋರುವುದು. ಅದು ಸರಿಯಲ್ಲ ಪ್ರಥಮಸ್ಕಂಧದಲ್ಲಿ 'ತತ್ರಾಸೀನಂ ಕುರುಪತಿಂ ಧೃತರಾಷ್ಟ್ರಂ ಸಹಾನುಜಂ' ಎಂದೂ, ಯುದ್ಧ ಮುಗಿದ ಮೇಲೆ ಧೃತರಾಷ್ಟ್ರನ ಸಾಂತ್ವನ ಕಾಲದಲ್ಲಿ ವಿದುರನಿದ್ದನೆಂದು ಹೇಳಿರುವರು. ಮತ್ತು ಹತ್ತನೇ ಸ್ಕಂಧದಲ್ಲಿ ಯುಧಿಷ್ಠಿರನ ರಾಜ್ಯಾಭಿಷೇಕವಾದ ಮೇಲೆ ಶ್ರೀಕೃಷ್ಣನು ದ್ವಾರಾವತಿಗೆ ಪ್ರಯಾಣ ಮಾಡುವಾಗಲೂ ವಿದುರನಿದ್ದನೆಂದು ಹೇಳುವುದ- ರಿಂದಲೂ ವಿರೋಧ ಬರುವುದು ಎಂಬ ಶಂಕೆಯನ್ನು ಪ್ರಮಾಣದಿಂದಲೇ ಪರಿಹರಿಸುವರು ಶ್ರೀಮದಾಚಾರ್ಯರು–

**''ಯುದ್ಧಕಾಲೇ ತು ವಿದುರಸ್ತೀರ್ಥಯಾತ್ರಾಂ ಗತೋಽಪಿ ಸನ್ ।**
**ಪ್ರಾಯ ಆಸ್ತೇ ಗಜಪುರೇ ಪಾಂಡವಾನಾಂ ವ್ಯಪೇಕ್ಷಯಾ (ಹಿತೇಚ್ಛಯಾ)''**
**ಇತಿ ಸ್ಕಾಂದೇ ॥**

ಯುದ್ಧಕಾಲದಲ್ಲಿಯೇ ವಿದುರನು ತೀರ್ಥಯಾತ್ರಾಕ್ಕೆ ಹೋಗಿದ್ದರೂ ಬಹುಶಃ ಹಸ್ತಿನಾಪುರದಲ್ಲಿ ಪಾಂಡವರ ವಿಜಯವನ್ನು ತಿಳಿಯುವುದಕ್ಕಾಗಿ ಅಥವಾ ಈ ಕಾಲದಲ್ಲಿ ವಿದುರನು ದೂರ ಹೋಗಬಾರದು ಎಂಬ ಪಾಂಡವರ ಅಪೇಕ್ಷೆಯಿಂದ ಇರುತ್ತಿದ್ದನು. ಅಂದರೆ ಸಂಧಾನಕ್ಕಾಗಿ ಬಂದ ಶ್ರೀಕೃಷ್ಣನು ಹಸ್ತಿನಾಪುರವನ್ನು ಬಿಟ್ಟು ಉಪಪ್ಲಾವ್ಯಕ್ಕೆ ಹೋದನಂತರ ಯುದ್ಧಾರಂಭಕ್ಕೂ ಮುಂಚೆಯೇ ವಿದುರನು ತೀರ್ಥಯಾತ್ರೆಗೆ ಹೋದರೂ ಬಹಳ ದೂರ ಹೋಗಿರಲಿಲ್ಲ. ಸಮೀಪದಲ್ಲಿರುವ

ತೀರ್ಥಗಳಿಗೆ ಹೋಗಿ ಯುದ್ಧ ಮುಗಿಯುವ ಹೊತ್ತಿಗೆ ಮತ್ತೆ ಹಸ್ತಿನಾಪುರ ಪ್ರಾಂತಕ್ಕೆ ಬರುತ್ತಿದ್ದನು ಪ್ರಾಯಃ ಎಂದದ್ದರಿಂದ ಸಮೀಪದ ತೀರ್ಥಗಳಿಗೂ ಪ್ರತಿ ದಿನ ಹೋಗುತ್ತಿರಲಿಲ್ಲ ಎಂದು ತಿಳಿಯುವುದು. ಇದಕ್ಕೆ ಕಾರಣ ಪಾಂಡವರ ಹಿತೇಚ್ಛೆಯಿಂದ ಎಂಬುದು ॥೨॥

ವಿದುರನಿಂದ ಪ್ರಶ್ನಿಸಿಲ್ಪಟ್ಟ ಮೈತ್ರೇಯರು ಹೇಳಿದ್ದನ್ನೇ ನಿನಗೆ ಹೇಳುವೆನು ಎಂದಾಗ ರಾಜನು ವಿದುರ ಮೈತ್ರೇಯರ ಸಂವಾದ ಎಲ್ಲಿ ಯಾವಾಗ ನಡೆಯಿತು ಎಂದು ಕೇಳುವನು.

**ಪರೀಕ್ಷಿದುವಾಚ**

**ಕುತ್ರ ಕ್ಷತ್ತುರ್ಭಗವತಾ ಮೈತ್ರೇಯೇಣಾಸ ಸಂಗಮಃ ।**
**ಕದಾ ವಾ ಸಹ ಸಂವಾದ ಏತದ್ವರ್ಣಯ ನಃ ಪ್ರಭೋ ॥ ೩ ॥**

ಪ್ರಭೋ=ಸಮರ್ಥರಾದ ಶುಕಾಚಾರ್ಯರೆ, ಕ್ಷತ್ತುಃ=ವಿದುರನಿಗೆ ಭಗವತಾ ಮೈತ್ರೇಯೇಣ=ಪೂಜ್ಯರಾದ ಮೈತ್ರೇಯರೊಡನೆ, ಸಂಗಮಃ=ಸಮಾಗಮವು, ಕದಾ=ಯಾವಾಗ, ಕುತ್ರ=ಯಾವ ಕ್ಷೇತ್ರದಲ್ಲಿ ಆಸ=ಆಯಿತು, ಏತದ್=ಏಕೆ ವನ ಪ್ರವೇಶ ಮಾಡಿದ ಎಂಬುದನ್ನು, ನಃ ವರ್ಣಯ=ನನಗೆ ಹೇಳಿರಿ ॥೩॥

ತನಗೆ ಈ ಎರಡು ವಿಷಯವನ್ನು ಕೇಳಲು ಆಸಕ್ತಿ ಉಂಟು ಎಂದು ಸೂಚಿಸಲು ವಿದುರ ಮೈತ್ರೇಯರ ಪ್ರಶ್ನೋತ್ತರ ರೂಪವಾದ ಸಂವಾದವನ್ನು ಸ್ತುತಿಸುವನು–

**ನ ಹ್ಯಲ್ಪಾರ್ಥೋದಯಸ್ತಸ್ಯ ವಿದುರಸ್ಯಾಮಲಾತ್ಮನಃ ।**
**ತಸ್ಮಿನ್ ವರೀಯಸಿ ಪ್ರಶ್ನಃ ಸಾಧುವಾದೋಪಬೃಂಹಿತಃ ॥ ೪ ॥**

ಅಮಲಾತ್ಮನಃ=ನಿರ್ದುಷ್ಟಮನಸ್ಕನಾದ ವಿದುರಸ್ಯ=ವಿದುರನಿಗೆ ತಸ್ಮಿನ್ ವರೀಯಸಿ=ಗುರುಗಳಾದ ಮೈತ್ರೇಯರಲ್ಲಿ ಮಾಡಿದ ಪ್ರಶ್ನಃ=ಪ್ರಶ್ನೆಯು ಅವರು ಹೇಳಿದ ಉತ್ತರವು ಸಾಧುವಾದೋಪಬೃಂಹಿತಃ=ಶ್ರೀಹರಿಯೇ ಮುಂತಾದ ಸಾಧುಗಳ ಕಥಾದಿಂದ ಕೂಡಿರುವುದು ಶ್ರೀಹರಿಕಥಾಪ್ರತಿಪಾದಕವೂ ಆದ್ದರಿಂದ ತಸ್ಯ= ವಿದುರನಿಗೆ ಅಲ್ಪಾರ್ಥೋದಯಃ ನಹಿ=ಕ್ಷುದ್ರಫಲಕಾರಿಯಲ್ಲ, ಸಂಪೂರ್ಣ ಪ್ರಯೋಜನಕಾರಿಯಾಗಿದೆ ಎಂದು ಭಾವ ॥೪॥

**ಸೂತ ಉವಾಚ**

**ಸ ಏವಮೃಷಿವರ್ಯೋಽಯಂ ಪೃಷ್ಟೋ ರಾಜ್ಞಾ ಪರೀಕ್ಷಿತಾ ।**
**ಪ್ರತ್ಯಾಹ ತಂ ಸುಬಹುವಿತ್ ಪ್ರೀತಾತ್ಮಾ ಶ್ರೂಯತಾಮಿತಿ ॥ ೫ ॥**

ರಾಜ್ಞಾ ಪರೀಕ್ಷಿತಾ=ರಾಜನಾದ ಪರೀಕ್ಷಿತನಿಂದ, ಏವಂ=ಈ ರೀತಿ, ಪೃಷ್ಟಃ= ಪ್ರಶ್ನಿಸಲ್ಪಟ್ಟ ಸುಬಹುವಿತ್=ಪರಿಪೂರ್ಣನಾದ ಭಗವಂತನನ್ನು ತಿಳಿದ, ಸಃ= ಪ್ರಸಿದ್ಧರಾದ, ಅಯಂ=ಈ, ಋಷಿವರ್ಯಃ=ಶ್ರೇಷ್ಠರಾದ ಶುಕಾಚಾರ್ಯರು, ಪ್ರೀತಾತ್ಮಾ=ಸಂತುಷ್ಟರಾಗಿ, ಶ್ರೂಯತಾಂ ಇತಿ=ಕೇಳು ಎಂದು ಹೇಳಿ, ತಂ ಪ್ರತಿ ಆಹ=ರಾಜನನ್ನು ಕುರಿತು ಹೇಳಿದರು ॥೫॥

**ಶ್ರೀಶುಕ ಉವಾಚ**

**ಯದಾ ತು ರಾಜಾ ಸ್ವಸುತಾನಸಾಧೂನ್**
**ಪುಷ್ಣನ್ನಧರ್ಮೇಣ ವಿನಷ್ಟದೃಷ್ಟಿಃ ।**
**ಭ್ರಾತುರ್ಯವಿಷ್ಠಸ್ಯ ಸುತಾನ್ ವಿಬಂಧೂನ್**
**ಪ್ರವೇಶ್ಯ ಲಾಕ್ಷಾಭವನೇ ದದಾಹ ॥ ೬ ॥**

ಈ ಶ್ಲೋಕದಿಂದ ಆರಂಭ ಮಾಡಿ ೧೧ನೇ ಶ್ಲೋಕದವರೆಗೆ ವಿದುರನು ವನವನ್ನು ಪ್ರವೇಶಿಸಲು ಕಾರಣವನ್ನು ಮೊದಲಿಗೆ ಹೇಳುವರು ಇಲ್ಲಿ ಯದಾ ಶಬ್ದವು ಹೇತ್ವರ್ಥಕವಾಗಿದೆ-

ಇಲ್ಲಿ "ಯದಾ" ಶಬ್ದ ಕಾಲವಾಚಕವಲ್ಲ, ಕಾರಣ ವಾಚಂ

**ಯದಾ ದದಾಹ । ಯದಾ ಕೇಶಾಭಿಮರ್ಶಃ ಪ್ರಾಪ್ತಃ ಇತಿ ಯದಾ ಶಬ್ದೋ ಹೇತ್ವರ್ಥಃ ।"ಯದಾ ತದೇತಿ ಹೇತ್ವರ್ಥೇ ಕಾಲಾರ್ಥೇ ಚಾಪಿ ಭಣ್ಯತೇ"॥ ಇತ್ಯಭಿಧಾನಂ ।**

ಆಚಾರ್ಯರು, ಇಲ್ಲಿರುವ ಯದಾ ಶಬ್ದಗಳು ಕಾಲಾರ್ಥಕವೆಂದರೆ ಬಾಧಕವನ್ನೂ ತಿಳಿಸುವರು ಮತ್ತು ವಿವಕ್ಷಿತ ಅರ್ಥವನ್ನೂ ಹೇಳಿರುವರು. ಇಲ್ಲಿ ಆಚಾರ್ಯರು 'ಕೇಶಾಭಿಮರ್ಶಃ ಪ್ರಾಪ್ತಃ' ಎಂದು ಹೇಳಿದುದು ಮುಂದೆ ಹೇಳುವ ಶ್ರೀಕೃಷ್ಣನ ಮಾತು ಕೇಳದಿರುವುದು, ವಿದುರನು ಬಂದದ್ದು, ಅವನು ಹೇಳಿದ ಮಾತುಗಳು, ಅವನ ಅವಮಾನ ಮುಂತಾದಕ್ಕೆ ಉಪಲಕ್ಷಕವಾಗಿದೆ. ಅಂದರೆ ಒಂದು ವೇಳೆ ಯದಾ ಶಬ್ದಗಳು ಕಾಲವಾಚಕಗಳು ಎಂದಿಟ್ಟುಕೊಂಡರೆ ಯಾವ ಕಾಲದಲ್ಲಿ ಅರಗಿನ ಮನೆಯಲ್ಲಿ ಸುಟ್ಟನೋ ಅದೇ ಕಾಲದಲ್ಲಿ ಮುಂದೆ ಹೇಳಿದ ಕೂದಲನ್ನು ಸೆಳದಿದ್ದು ಶ್ರೀಕೃಷ್ಣನ ಮಾತು ಕೇಳದಿರುವುದು, ವಿದುರ ಬಂದದ್ದು, ಅವನು ಮಾತಾಡಿದ್ದು ಅವನಿಗೆ ಆದ ಅವಮಾನ ಮುಂತಾದ ನಿಮಿತ್ತಗಳು, ವಿದುರನ ವನ ಪ್ರವೇಶ ಎಲ್ಲವೂ ಏಕಕಾಲದಲ್ಲಿ ಆದಂತೆ ಅರ್ಥವಾಗುವುದು. ಅದು ಸರಿಯಲ್ಲ, ಎಲ್ಲವೂ ಬೇರೆ ಬೇರೆ ಕಾಲದಲ್ಲಿ ನಡೆದಿವೆ. ಆದ್ದರಿಂದ 'ಯದಾ' ಶಬ್ದಗಳು ಹೇತ್ವರ್ಥಕ-

ಗಳಾಗಿವೆ. ಜಾತ್ಯಭಿಪ್ರಾಯದಿಂದ ಏಕವಚನ ಇಟ್ಟಿದ್ದಾರೆ. ತದಾ ಎಂದು ಆಚಾರ್ಯರು ತಚ್ಛಬ್ದವನ್ನೂ ಪ್ರಮಾಣದಲ್ಲಿ ಗ್ರಹಣ ಮಾಡಿದ್ದರಿಂದ ಮೂಲದಲ್ಲಿ ಯದಾ ಶಬ್ದಾಪೇಕ್ಷಿತವಾದ್ದರಿಂದ ಅಧ್ಯಾಹೃತವಾದ ತದಾ ಶಬ್ದವೂ ಹೇತ್ವರ್ಥಕ ಎಂದು ಸೂಚಿಸಿದಂತಾಯಿತು.

ಮೂಲಾರ್ಥ- ರಾಜಾ=ಧೃತರಾಷ್ಟ್ರನು, ವಿನಷ್ಟದೃಷ್ಟಿಃ=ಧರ್ಮಜ್ಞಾನವಿಲ್ಲದವನಾಗಿ, ಅಸಾಧೂನ್=ದುಷ್ಟರಾದ, ಸ್ವಸುತಾನ್=ತನ್ನ ಮಕ್ಕಳನ್ನು, ಅಧರ್ಮೇಣ ತು= ಧರ್ಮವಿರುದ್ಧ ಕಾರ್ಯಗಳಿಂದಲೇ, ಪುಷ್ಣನ್=ಪೋಷಿಸುತ್ತ, ವಿಬಂಧೂನ್= ತಂದೆಯಿಲ್ಲದಿರುವ, ಯವಿಷ್ಠಸ್ಯ ಭ್ರಾತುಃ=ಚಿಕ್ಕ ತಮ್ಮನಾದ ಪಾಂಡುರಾಜನ, ಸುತಾನ್=ಮಕ್ಕಳನ್ನು ಲಾಕ್ಷಾಭವನೇ ಪ್ರವೇಶ್ಯ=ಅರಗಿನ ಮನೆಯಲ್ಲಿರಿಸಿ, ಯದಾ= ಯಾವಕಾರಣ, ದದಾಹ=ಸುಟ್ಟನೋ, ತದಾ=ಆ ಕಾರಣ, ಅಯಾತ್=ಹೊರಟನು ॥ ೬ ॥

**ಯದಾ ಸಭಾಯಾಂ ಕುರದೇವದೇವ್ಯಾಃ**
**ಕೇಶಾಭಿಮರ್ಶಂ ಸುತಕರ್ಮ ಗರ್ಹ್ಯಮ್।**
**ನ ವಾರಯಾಮಾಸ ನೃಪಃ ಸ್ನುಷಾಯಾ**
**ಅಸ್ರೈರ್ಹರಂತ್ಯಾಃ ಕುಚಕುಂಕುಮಾನಿ ॥ ೭ ॥**

ಯದಾ=ಯಾವಕಾರಣ, ಸ್ನುಷಾಯಾಃ=ತನ್ನ ಸೊಸೆಯಾದ, ಕುರುದೇವದೇವ್ಯಾಃ= ಕುರುಶ್ರೇಷ್ಠನಾದ ಧರ್ಮ ರಾಜನ ಪಟ್ಟಾಭಿಷಿಕ್ತಳಾದ ಹೆಂಡತಿಯ, ಅಸ್ರೈಃ=ದುಃಖಾತಿಶಯದಿಂದ ಹೊರಟ ಕಣ್ಣೀರಿನಿಂದ, ಕುಚಕುಂಕುಮಾನಿ ಹರಂತ್ಯಾಃ=ಸ್ತನಗಳಿಗೆ ಲೇಪಿಸಿದ ಕೇಸರಯುಕ್ತ ಗಂಧವನ್ನು ತೊಳೆಯುತ್ತಿರುವ ದ್ರೌಪದಿಯ, ಕೇಶಾಭಿಮರ್ಶಂ=ಕೂದಲನ್ನು ಹಿಡಿದು ಎಳೆದು ತರುವ, ಗರ್ಹ್ಯಂ= ನಿಂದ್ಯವಾದ, ಸುತಕರ್ಮ=ದುಃಶಾಸನನ ಕಾರ್ಯವನ್ನು,ನೃಪಃ=ಧೃತರಾಷ್ಟ್ರನು,ನ ವಾರಯಾಮಾಸ=ತಡೆಯಲಿಲ್ಲವೋ ಆ ಕಾರಣದಿಂದ ವನಕ್ಕೆ ತೆರಳಿದನು. ॥ ೭ ॥

**ದ್ಯೂತೇ ತ್ವಧರ್ಮೇಣ ಜಿತಸ್ಯ ಸಾಧೋಃ**
**ಸತ್ಯಾವಲಂಬಸ್ಯ ವನಾಗತಸ್ಯ ।**
**ನ ಯಾಚಿತೋಽದಾತ್ ಸಮಯೇನ ದಾಯಂ**
**ತಮೋ ಜುಷಾಣೋ ಯದಜಾತಶತ್ರೋಃ ॥ ೮ ॥**

ನೃಪಃ=ಧೃತರಾಷ್ಟ್ರನು,ದ್ಯೂತೇ=ಜೂಜಾಟದಲ್ಲಿ,ಅಧರ್ಮೇಣ ತು=ಅನ್ಯಾಯದಿಂದಲೇ,ಜಿತಸ್ಯ=ಸೋತಂಥ,ಸತ್ಯಾವಲಂಬಸ್ಯ=ಸತ್ಯವನ್ನೇ ಆಧರಿಸಿದ, ವನಾಗತಸ್ಯ=

ರಾಜ್ಞಾ ಪರೀಕ್ಷಿತಾ=ರಾಜನಾದ ಪರೀಕ್ಷಿತನಿಂದ, ಏವಂ=ಈ ರೀತಿ, ಪೃಷ್ಟಃ=ಪ್ರಶ್ನಿಸಲ್ಪಟ್ಟ ಸುಬಹುವಿತ್=ಪರಿಪೂರ್ಣನಾದ ಭಗವಂತನನ್ನು ತಿಳಿದ, ಸಃ=ಪ್ರಸಿದ್ಧರಾದ, ಅಯಂ=ಈ, ಋಷಿವರ್ಯಃ=ಶ್ರೇಷ್ಠರಾದ ಶುಕಾಚಾರ್ಯರು, ಪ್ರೀತಾತ್ಮಾ=ಸಂತುಷ್ಟರಾಗಿ, ಶ್ರೂಯತಾಂ ಇತಿ=ಕೇಳು ಎಂದು ಹೇಳಿ, ತಂ ಪ್ರತಿ ಆಹ=ರಾಜನನ್ನು ಕುರಿತು ಹೇಳಿದರು ॥೫॥

**ಶ್ರೀಶುಕ ಉವಾಚ**

**ಯದಾ ತು ರಾಜಾ ಸ್ವಸುತಾನಸಾಧೂನ್**
**ಪುಷ್ಣನ್ನಧರ್ಮೇಣ ವಿನಷ್ಟದೃಷ್ಟಿಃ ।**
**ಭ್ರಾತುರ್ಯವಿಷ್ಠಸ್ಯ ಸುತಾನ್ ವಿಬಂಧೂನ್**
**ಪ್ರವೇಶ್ಯ ಲಾಕ್ಷಾಭವನೇ ದದಾಹ ॥ ೬ ॥**

ಈ ಶ್ಲೋಕದಿಂದ ಆರಂಭ ಮಾಡಿ ೧೧ನೇ ಶ್ಲೋಕದವರೆಗೆ ವಿದುರನು ವನವನ್ನು ಪ್ರವೇಶಿಸಲು ಕಾರಣವನ್ನು ಮೊದಲಿಗೆ ಹೇಳುವರು ಇಲ್ಲಿ ಯದಾ ಶಬ್ದವು ಹೇತ್ವರ್ಥಕವಾಗಿದೆ–

ಇಲ್ಲಿ ''ಯದಾ'' ಶಬ್ದ ಕಾಲವಾಚಕವಲ್ಲ, ಕಾರಣ ವಾಚಂ

**ಯದಾ ದದಾಹ । ಯದಾ ಕೇಶಾಭಿಮರ್ಶಃ ಪ್ರಾಪ್ತಃ ಇತಿ ಯದಾ ಶಬ್ದೋ ಹೇತ್ವರ್ಥಃ ।''ಯದಾ ತದೇತಿ ಹೇತ್ವರ್ಥೇ ಕಾಲಾರ್ಥೇ ಚಾಪಿ ಭಣ್ಯತೇ''॥ ಇತ್ಯಭಿಧಾನಂ ।**

ಆಚಾರ್ಯರು, ಇಲ್ಲಿರುವ ಯದಾ ಶಬ್ದಗಳು ಕಾಲಾರ್ಥಕವೆಂದರೆ ಬಾಧಕವನ್ನೂ ತಿಳಿಸುವರು ಮತ್ತು ವಿವಕ್ಷಿತ ಅರ್ಥವನ್ನೂ ಹೇಳಿರುವರು. ಇಲ್ಲಿ ಆಚಾರ್ಯರು 'ಕೇಶಾಭಿಮರ್ಶಃ ಪ್ರಾಪ್ತಃ' ಎಂದು ಹೇಳಿದುದು ಮುಂದೆ ಹೇಳುವ ಶ್ರೀಕೃಷ್ಣನ ಮಾತು ಕೇಳದಿರುವುದು, ವಿದುರನು ಬಂದದ್ದು, ಅವನು ಹೇಳಿದ ಮಾತುಗಳು, ಅವನ ಅವಮಾನ ಮುಂತಾದಕ್ಕೆ ಉಪಲಕ್ಷಕವಾಗಿದೆ. ಅಂದರೆ ಒಂದು ವೇಳೆ ಯದಾ ಶಬ್ದಗಳು ಕಾಲವಾಚಕಗಳು ಎಂದಿಟ್ಟುಕೊಂಡರೆ ಯಾವ ಕಾಲದಲ್ಲಿ ಅರಗಿನ ಮನೆಯಲ್ಲಿ ಸುಟ್ಟನೋ ಅದೇ ಕಾಲದಲ್ಲಿ ಮುಂದೆ ಹೇಳಿದ ಕೂದಲನ್ನು ಸೆಳದಿದ್ದು ಶ್ರೀಕೃಷ್ಣನ ಮಾತು ಕೇಳದಿರುವುದು, ವಿದುರ ಬಂದದ್ದು, ಅವನು ಮಾತಾಡಿದ್ದು ಅವನಿಗೆ ಆದ ಅವಮಾನ ಮುಂತಾದ ನಿಮಿತ್ತಗಳು, ವಿದುರನ ವನ ಪ್ರವೇಶ ಎಲ್ಲವೂ ಏಕಕಾಲದಲ್ಲಿ ಆದಂತೆ ಅರ್ಥವಾಗುವುದು. ಅದು ಸರಿಯಲ್ಲ, ಎಲ್ಲವೂ ಬೇರೆ ಬೇರೆ ಕಾಲದಲ್ಲಿ ನಡೆದಿವೆ. ಆದ್ದರಿಂದ 'ಯದಾ' ಶಬ್ದಗಳು ಹೇತ್ವರ್ಥಕ-

ಗಳಾಗಿವೆ. ಜಾತ್ಯಭಿಪ್ರಾಯದಿಂದ ಏಕವಚನ ಇಟ್ಟಿದ್ದಾರೆ. ತದಾ ಎಂದು ಆಚಾರ್ಯರು ತಚ್ಛಬ್ದವನ್ನೂ ಪ್ರಮಾಣದಲ್ಲಿ ಗ್ರಹಣ ಮಾಡಿದ್ದರಿಂದ ಮೂಲದಲ್ಲಿ ಯದಾ ಶಬ್ದಾಪೇಕ್ಷಿತವಾದ್ದರಿಂದ ಅಧ್ಯಾಹೃತವಾದ ತದಾ ಶಬ್ದವೂ ಹೇತ್ವರ್ಥಕ ಎಂದು ಸೂಚಿಸಿದಂತಾಯಿತು.

ಮೂಲಾರ್ಥ- ರಾಜಾ=ಧೃತರಾಷ್ಟ್ರನು, ವಿನಷ್ಟದೃಷ್ಟಿಃ=ಧರ್ಮಜ್ಞಾನವಿಲ್ಲದವನಾಗಿ, ಅಸಾಧೂನ್=ದುಷ್ಟರಾದ, ಸ್ವಸುತಾನ್=ತನ್ನ ಮಕ್ಕಳನ್ನು, ಅಧರ್ಮೇಣ ತು= ಧರ್ಮವಿರುದ್ಧ ಕಾರ್ಯಗಳಿಂದಲೇ, ಪುಷ್ಣನ್=ಪೋಷಿಸುತ್ತ, ವಿಬಂಧೂನ್=ತಂದೆಯಿಲ್ಲದಿರುವ, ಯವಿಷ್ಠಸ್ಯ ಭ್ರಾತುಃ=ಚಿಕ್ಕ ತಮ್ಮನಾದ ಪಾಂಡುರಾಜನ, ಸುತಾನ್=ಮಕ್ಕಳನ್ನು ಲಾಕ್ಷಾಭವನೇ ಪ್ರವೇಶ್ಯ=ಅರಗಿನ ಮನೆಯಲ್ಲಿರಿಸಿ, ಯದಾ=ಯಾವಕಾರಣ, ದದಾಹ=ಸುಟ್ಟನೋ, ತದಾ=ಆ ಕಾರಣ, ಅಯಾತ್=ಹೊರಟನು ॥ ೬ ॥

**ಯದಾ ಸಭಾಯಾಂ ಕುರದೇವದೇವ್ಯಾಃ**
**ಕೇಶಾಭಿಮರ್ಶಂ ಸುತಕರ್ಮ ಗರ್ಹ್ಯಮ್।**
**ನ ವಾರಯಾಮಾಸ ನೃಪಃ ಸ್ನುಷಾಯಾ**
**ಅಸ್ರೈರ್ಹರಂತ್ಯಾಃ ಕುಚಕುಂಕುಮಾನಿ ॥ ೭ ॥**

ಯದಾ=ಯಾವಕಾರಣ, ಸ್ನುಷಾಯಾಃ=ತನ್ನ ಸೊಸೆಯಾದ, ಕುರುದೇವದೇವ್ಯಾಃ= ಕುರುಶ್ರೇಷ್ಠನಾದ ಧರ್ಮ ರಾಜನ ಪಟ್ಟಾಭಿಷಿಕ್ತಳಾದ ಹೆಂಡತಿಯ, ಅಸ್ರೈಃ=ದುಃಖಾತಿಶಯದಿಂದ ಹೊರಟ ಕಣ್ಣೀರಿನಿಂದ, ಕುಚಕುಂಕುಮಾನಿ ಹರಂತ್ಯಾಃ=ಸ್ತನಗಳಿಗೆ ಲೇಪಿಸಿದ ಕೇಸರಯುಕ್ತ ಗಂಧವನ್ನು ತೊಳೆಯುತ್ತಿರುವ ದ್ರೌಪದಿಯ, ಕೇಶಾಭಿಮರ್ಶಂ=ಕೂದಲನ್ನು ಹಿಡಿದು ಎಳೆದು ತರುವ, ಗರ್ಹ್ಯಂ=ನಿಂದ್ಯವಾದ, ಸುತಕರ್ಮ=ದುಃಶಾಸನನ ಕಾರ್ಯವನ್ನು,ನೃಪಃ=ಧೃತರಾಷ್ಟ್ರನು,ನ ವಾರಯಾಮಾಸ=ತಡೆಯಲಿಲ್ಲವೋ ಆ ಕಾರಣದಿಂದ ವನಕ್ಕೆ ತೆರಳಿದನು. ॥ ೭ ॥

**ದ್ಯೂತೇ ತ್ವಧರ್ಮೇಣ ಜಿತಸ್ಯ ಸಾಧೋಃ**
**ಸತ್ಯಾವಲಂಬಸ್ಯ ವನಾಗತಸ್ಯ ।**
**ನ ಯಾಚಿತೋಽದಾತ್ ಸಮಯೇನ ದಾಯಂ**
**ತಮೋ ಜುಷಾಣೋ ಯದಜಾತಶತ್ರೋಃ ॥ ೮ ॥**

ನೃಪಃ=ಧೃತರಾಷ್ಟ್ರನು,ದ್ಯೂತೇ=ಜೂಜಾಟದಲ್ಲಿ,ಅಧರ್ಮೇಣ ತು=ಅನ್ಯಾಯದಿಂದಲೇ,ಜಿತಸ್ಯ=ಸೋತಂಥ,ಸತ್ಯಾವಲಂಬಸ್ಯ=ಸತ್ಯವನ್ನೇ ಆಧರಿಸಿದ, ವನಾಗತಸ್ಯ=

ವನವಾಸಮಾಡಿತಿರುಗಿಬಂದ ಅಜಾತಶತ್ರೋಃ=ಯಾರಲ್ಲಿಯೂ ಶತ್ರುಭಾವನೆ ಇಲ್ಲದ ಧರ್ಮರಾಜನಿಗೆ ಸಮಯೇನ=ಜೂಜಿನಲ್ಲಿ ನಿಗದಿತವಾದ ಸಮಯವು ಮುಗಿದ ನಿಮಿತ್ತದಿಂದ, ಯಾಚಿತಃ=ಕೇಳಲ್ಪಟ್ಟ ದಾಯಂ=ಪಿತ್ರಾರ್ಜಿತ ಆಸ್ತಿಯ ಭಾಗವನ್ನು, ತಮೋಜುಷಾಣಃ=ತಾಮಸಪುತ್ರರಲ್ಲಿ ಆಸಕ್ತನಾಗಿ, ಯತ್=ಯಾವ ಕಾರಣ, ನ ಅದಾತ್=ಕೊಡಲಿಲ್ಲವೋ, ಆ ಕಾರಣ ವನಕ್ಕೆ ತೆರಳಿದನು || ೮ ||

**ಯದಾ ತು ಪಾರ್ಥಪ್ರಹಿತಃ ಸಭಾಯಾಂ**
**ಜಗದ್ಗುರುರ್ಯಾನಿ ಜಗಾದ ಕೃಷ್ಣಃ ।**
**ನ ತಾನಿ ಪುಂಸಾಮಮೃತಾಯನಾನಿ**
**ರಾಜಾನುಮೇನೇ ಹೃತಪುಣ್ಯಲೇಶಃ || ೯ ||**

ಯದಾ=ಯಾವ ಕಾರಣ, ಪಾರ್ಥಪ್ರಹಿತಃ=ಧರ್ಮರಾಜನಿಂದ ಕಳಿಸಲ್ಪಟ್ಟ ಜಗದ್ಗುರುಃ=ಇಡೀ ಪ್ರಪಂಚಕ್ಕೆ ಗುರುವಾದ,ಕೃಷ್ಣಃ=ಶ್ರೀಕೃಷ್ಣನು,ಅಮೃತಾಯನಾನಿ= ಮೋಕ್ಷಾದಿ ಸಕಲಪುರುಷಾರ್ಥಸಾಧನಗಳಾದ, ಯಾನಿ=ಯಾವ ಮಾತುಗಳನ್ನು, ಸಭಾಯಾಂ ಜಗಾದ=ಸಭೆಯಲ್ಲಿ ಹೇಳಿದನೋ, ತಾನಿ=ಅವುಗಳನ್ನು, ಹೃತಪುಣ್ಯ-ಲೇಶಃ=ಸಂಪೂರ್ಣ ಪುಣ್ಯವನ್ನು ಕಳೆದುಕೊಂಡ, ರಾಜಾ=ಧೃತರಾಷ್ಟ್ರನು, ನ ಅನುಮೇನೇ=ಅನಕೂಲವೆಂದು ತಿಳಿಯಲಿಲ್ಲ, ಸಾಮಾನ್ಯ ಗುರುಗಳ ಮಾತೇ ಮೀರಲಾರದ್ದು (ಅನುಲ್ಲಂಘ್ಯ) ಅಂದ ಮೇಲೆ ಜಗದ್ಗುರುವಿನ ಮಾತಂತೂ ಅತ್ಯಂತ ಅನುಲ್ಲಂಘ್ಯವು ಆದ್ದರಿಂದ ಬಹಳ ಪಾಪ ಬಂದಿತು. ಸಂಪಾದಿತ ಸ್ವಲ್ಪ ಪುಣ್ಯವೂ ನಾಶವಾಯಿತು. ಈ ಕಾರಣಕ್ಕಾಗಿಯೂ ವನಕ್ಕೆ ತೆರಳಿದನು || ೯ ||

**ಯದೋಪಹೂತೋ ಭವನಂ ಪ್ರವಿಷ್ಟೋ**
**ಮಂತ್ರಾಯ ಪೃಷ್ಟಃ ಕಿಲ ಪೂರ್ವಜೇನ ।**
**ಅಥಾಹ ತಂ ಮಂತ್ರದೃಶಾಂ ವರೀಯಾನ್**
**ಯನ್ಮಂತ್ರಿಣೋ ವೈದುರಿಕಂ ವದಂತಿ ||೧೦||**

ಯದಾ=ಯಾವ ಕಾರಣ, ಅಥ=ಶ್ರೀಕೃಷ್ಣನು ಉಪಪ್ಲಾವ್ಯಕ್ಕೆ ಹೋದನಂತರ, ಪೂರ್ವಜೇನ=ಅಣ್ಣನಾದ ಧೃತರಾಷ್ಟ್ರನಿಂದ, ಮಂತ್ರಾಯ=ವಿಚಾರ ಮಾಡುವುದ-ಕ್ಕಾಗಿ, ಉಪಹೂತಃ=ಕರೆಯಲ್ಪಟ್ಟವನಾಗಿ, ಭವನಂ ಪ್ರವಿಷ್ಟಃ=ರಾಜಭವನವನ್ನು ಪ್ರವೇಶಿಸಿದ, ಯತ್=ಯಾವ ಕಾರಣ, ಮಂತ್ರಿಣಃ=ಬೇರೆ ಎಲ್ಲ ಮಂತ್ರಿಗಳು, ವೈದುರಿಕಂ=ವಿದುರನು ಹೇಳಿದ್ದನ್ನೇ, ವದಂತಿ=ತಮ್ಮರಾಜರಿಗೆ ಹೇಳುವರು, ಆದ್ದರಿಂದ ರಾಜನೀತಿ ಸಂಪ್ರದಾಯ ಪ್ರವರ್ತಕನಾದ್ದರಿಂದ ಮಂತ್ರದೃಶಾಂ

ವರೀಯಾನ್=ವಿಚಾರವನ್ನು ತಿಳಿದವರಲ್ಲಿ ಶ್ರೇಷ್ಠನಾದ ವಿದುರನು, ಪೃಷ್ಟಃ= ಪ್ರಶ್ನಿಸಲ್ಪಟ್ಟು,ತಂ ಪ್ರತಿ=ಧೃತರಾಷ್ಟ್ರನನ್ನು ಕುರಿತು, ಆಹ=ಹೇಳಿದನು ॥೧೦॥

ಏನು ಹೇಳಿದನೆಂದು ಹೇಳುವರು –

**ಅಜಾತಶತ್ರೋಃ ಪ್ರತಿಯಚ್ಛ ದಾಯಂ**
**ತಿತಿಕ್ಷತೋ ದುರ್ವಿಷಹಂ ತವಾಗಃ ।**
**ಸಹಾನುಜೋ ಯತ್ರ ವೃಕೋದರೋ ಹಿ**
**ಸ್ವಶತ್ರುಹಾ ಯಂ ತ್ವಮಲಂ ಬಿಭೇಷಿ ॥೧೧॥**

ಯಂ=ಯಾವ ಅರ್ಜುನ ಸಹಿತನಾದ ಭೀಮನನ್ನು ಕುರಿತು, ತ್ವಂ=ನೀನು, ಅಲಂ ಭಿಭೇಷಿ=ಬಹಳವಾಗಿ ಹೆದರುವಿಯೋ, ಅಂತಹ ಸಹಾನುಜಃ=ಅರ್ಜುನ ಸಹಿತನಾದ, ಸ್ವಶತ್ರುಹಾ ವೃಕೋದರಃ=ತನ್ನ ವೈರಿಯನ್ನು ಕೊಲ್ಲುವ ಸಾಮರ್ಥ್ಯ-ವುಳ್ಳ ಅಥವಾ 'ಸ್ವಸ್ಯ' ರಾಜ್ಯವೆಂಬ (ದ್ರವ್ಯಕ್ಕೆ) ಸ್ವತ್ತಿಗೆ ಶತ್ರುಗಳಾದ ದುರ್ಯೋಧ-ನಾದಿಗಳನ್ನು ಸಂಹರಿಸುವ ಭೀಮಸೇನನು, ಹಿ=ಯಾವ ಕಾರಣ, ಯತ್ರ=ಯಾವ ಧರ್ಮರಾಜನ ಪಕ್ಷದಲ್ಲಿದ್ದಾನೆಯೋ ಅಂತಹ, ಮತ್ತು ತವ=ನಿನ್ನ, ದುರ್ವಿಷಹಂ= ವಿಶೇಷವಾಗಿ ದುಃಖದಿಂದ ಸಹಿಸಬಹುದಾದ (ಅಸಹನೀಯಃ ವಾದ) ಆಗಃ= ಪಾಪವನ್ನು(ಅಪರಾಧವನ್ನು)ತಿತಿಕ್ಷತಃ=ಸಹಿಸುವ, ಅಜಾತಶತ್ರೋಃ=ಧರ್ಮರಾಜ-ನಿಗೆ, ದಾಯಂ ಪ್ರತಿಯಚ್ಛ=ಅವರ ತಂದೆಯ ಹಣವನ್ನು ಅವರಿಗೆ ಸೇರಬೇಕಾದ್ದನ್ನು ಕೊಡು. ಇಲ್ಲವಾದರೆ ಭೀಮಸೇನನಿಂದ ನಿನ್ನ ಮಕ್ಕಳ ವಧನಿಶ್ಚಿತ ಎಂದು ಸೂಚಿಸುವನು. ॥೧೧॥

ರಾಜ್ಯವನ್ನು ಕೊಡಲು ಪ್ರಬಲ ಕಾರಣವೆಂದರೆ, ಕೊಡದೆ ಹೋದರೆ ಶ್ರೀಕೃಷ್ಣನ ದ್ರೋಹ ಮಾಡಿದಂತಾಗುವುದು ಎಂದು ಹೇಳುವರು-

**ಯದಾ ತು ಪಾರ್ಥಾನ್ ಭಗವಾನ್ ಮುಕುಂದೋ**
**ಗೃಹೀತವಾನ್ ಸಕ್ಷಿತಿದೇವದೇವಃ ।**
**ಆಸ್ತೇ ಸ್ವಪುರ್ಯಾಂ ಯದುದೇವದೇವೋ**
**ವಿನಿರ್ಜಿತಾಶೇಷನೃದೇವದೇವಃ ॥೧೨॥**

ವಿನಿರ್ಜಿತಾಶೇಷನೃದೇವದೇವಃ=ಗೆಲ್ಲಲ್ಪಟ್ಟ (ಸೋಲಿಸಲ್ಪಟ್ಟ) ಶ್ರೇಷ್ಠ ರಾಜರು-ಗಳುಳ್ಳ (ಇದರಿಂದ ಶ್ರೀಕೃಷ್ಣನ ಮನಸ್ಸು ಬೇರೆಡೆ ಆಸಕ್ತವಾಗಿಲ್ಲ ಎಂದು ಸೂಚಿತವಾಯಿತು) ಶ್ರೀಕೃಷ್ಣನು, ಸ್ವಪುರ್ಯಾಂ=ತಮ್ಮವರಾದ ಪಾಂಡವರ

ಸ್ಥಾನವಾದ ಉಪಪ್ಲಾವ್ಯದಲ್ಲಿ, ಆಸ್ತೇ=ಇರುವನು. ಯದಾ=ಯಾವ ಕಾರಣ, ಸಕ್ಷಿತಿದೇವದೇವಃ=ಬ್ರಾಹ್ಮಣರು ಮತ್ತು ದೇವತೆಗಳಿಂದ ಸಹಿತನಾದ, ಭಗವಾನ್=ಷಡ್ಗುಣಸಂಪನ್ನನಾದ, ಮುಕುಂದಃ=ಮೋಕ್ಷಪ್ರದನಾದ ಶ್ರೀಕೃಷ್ಣನು, ಪಾರ್ಥಾನ್=ಪಾಂಡವರನ್ನು, ಗೃಹೀತವಾನ್=ವಿಶೇಷವಾಗಿ ಆತ್ಮೀಯರೆಂದು ಸ್ವೀಕರಿಸಿರುವನು. ಆದ್ದರಿಂದ ಅವರಿಗೆ ರಾಜ್ಯವನ್ನು ಕೊಡು ಇಲ್ಲವಾದರೆ ಬ್ರಾಹ್ಮಣದ್ರೋಹ, ದೇವದ್ರೋಹ ಬರುವುದು. ಮೋಕ್ಷವನ್ನೇ ಭಕ್ತರಿಗೆ ಕೊಡುವ ಶ್ರೀಕೃಷ್ಣನಿಗೆ ನಿನ್ನಿಂದ ರಾಜ್ಯವನ್ನು ಕೊಡಿಸುವುದೇನು ದೊಡ್ಡ ಕೆಲಸವಲ್ಲಾ ಎಂದು ಮುಕುಂದ ಪದದಿಂದ ಸೂಚಿಸಿರುವರು ॥೧೨॥

ಔರಸಪುತ್ರನನ್ನು ಬಿಟ್ಟು ಯುಧಿಷ್ಠಿರನಿಗೆ ಹೇಗೆ ರಾಜ್ಯ ಕೊಡುವುದು ಎಂದರೆ ಹೇಳುವರು -

**ಸ ಏಷ ದೋಷಃ ಪುರುಷದ್ವಿಡಾಸ್ತೇ**
**ಗೃಹಂ ಪ್ರವಿಷ್ಟೋ ಯಮಪತ್ಯಮತ್ಯಾ।**
**ಪುಷ್ಣಾಸಿ ಕೃಷ್ಣಾದ್ ವಿಮುಖೋ ಗತಶ್ರೀ-**
**ಸ್ತ್ಯಜಾಶ್ವಶೈವಂ ಕುಲಕೌಶಲಾಯ॥೧೩॥**

ಹೇ ಅಗ್ರಜ=ಎಲೋ ಅಣ್ಣನೇ, ತ್ವಂ=ನೀನು, ಯಂ=ಯಾವನನ್ನು ಅಪತ್ಯಮತ್ಯಾ=ಕುಲಉದ್ಧಾರಕನೆಂದು ತಿಳಿದು, (ಕುಲಂ ಯಸ್ಮಾತ್ ನ ಪತತಿ ತತ್ ಅಪತ್ಯಂ) ಪುಷ್ಣಾಸಿ=ರಾಜ್ಯಕೊಡುವುದೇ ಮೊದಲಾದುದರಿಂದ ಬೆಳೆಸುತ್ತಿರುವಿಯೋ, ಸಃ ಏಷಃ=ಅವನು, ಕೃಷ್ಣಾದ್ವಿಮುಖಃ=ಶ್ರೀಕೃಷ್ಣನ ಮಾತು ಕೇಳದಿದ್ದರಿಂದ ವಿರೋಧಿಯಾಗಿರುವನು, ಗತಶ್ರೀಃ=ಲಕ್ಷ್ಮಿಯ ಅನುಗ್ರಹ ರಹಿತನು, ಪುರುಷದ್ವಿಟ್=ಭಗವದ್ವೇಷಿಯೂ ಆದ, ದೋಷಃ=ಸಕಲ ದೋಷಾಭಿಮಾನಿಯಾದ ಕಲಿಯು, ಗೃಹಂ ಪ್ರವಿಷ್ಟಃ ಆಸ್ತೇ=ಮನೆಯನ್ನು ಹೊಕ್ಕಿರುವನು, ಅಥ=ಆದ್ದರಿಂದ, ಕುಲಕೌಶಲಾಯ=ಕುರುವಂಶದ ಕಲ್ಯಾಣಕ್ಕಾಗಿ, ಆಶು=ಶೀಘ್ರದಲ್ಲಿ ಏನಂ=ಇವನನ್ನು, ತ್ಯಜ=ಬಿಡು, ಇತಿ=ಈ ರೀತಿಯಾಗಿ, ಊಚಿವಾನ್=ಧೃತರಾಷ್ಟ್ರನಿಗೆ ಹಿತನುಡಿಗಳನ್ನು ವಿದುರ ಹೇಳಿದನು. ಎಂದು ಮುಂದಿನ ಶ್ಲೋಕದಿಂದ ಅನ್ವಯ ॥೧೩॥

**ಇತ್ಯೂಚಿವಾಂಸ್ತತ್ರ ಸುಯೋಧನೇನ**
**ಪ್ರವೃದ್ಧಕೋಪಸ್ಫುರಿತಾಧರೇಣ ।**
**ಅಸತ್ಕೃತಃ ಸತ್ಸ್ಪೃಹಣೀಯಶೀಲಃ**
**ಕ್ಷತ್ತಾ ಸಕರ್ಣಾನುಜಸೌಬಲೇನ ॥೧೪॥**

ತತ್ರ=ಧೃತರಾಷ್ಟ್ರನ ಮುಂದೆಯೇ, ಸತ್‌ಸ್ಪೃಹಣೀಯಶೀಲಃ=ಸಜ್ಜನರಿಂದ, ಅಪೇಕ್ಷಣೀಯವಾದ ಸ್ವಭಾವವುಳ್ಳ, ಕ್ಷತ್ತಾ=ವಿದುರನು, ಸಕರ್ಣಾನುಜ ಸೌಬಲೇನ= ಕರ್ಣ, ತಮ್ಮನಾದ ದುಃಶಾಸನ, ಶಕುನಿಯಿಂದ ಸಹಿತನಾದ, ಪ್ರವೃದ್ಧ=ಹೆಚ್ಚಾದ, ಕೋಪ=ಸಿಟ್ಟಿನಿಂದ, ಸ್ಫುರಿತ=ಚಲಿಸುತ್ತಿರುವ, ಅಧರೇಣ=ಕೆಳದುಟಿಯುಳ್ಳ, ಸುಯೋಧನೇನ=ದುರ್ಯೋಧನನಿಂದ, ಅಸತ್ಕೃತಃ=ಧಿಕ್ಕರಿಸಲ್ಪಟ್ಟನು, ॥೧೪॥

ಧಿಕ್ಕರಿಸಿದ ರೀತಿಯನ್ನು ಹೇಳುವರು -

**ಕ ಏನಮತ್ರೋಪಜುಹಾವ ಜಿಹ್ಮಂ**
**ದಾಸ್ಯಾಃ ಸುತಂ ಯದ್ಬಲಿನೈವ ಪುಷ್ಟಃ ।**
**ತಸ್ಮಿನ್ ಪ್ರತೀಪಃ ಪರಕೃತ್ಯ ಆಸ್ತೇ**
**ನಿರ್ವಾಸ್ಯತಾಮಾಶು ಪುರಾತ್ ಶ್ವಸಾನಃ ॥೧೫॥**

ಯದ್ಬಲಿನಾ ಏವ=ಯಾವ ನಾನು ಕೊಟ್ಟ ಅನ್ನದಿಂದಲೇ, ಪುಷ್ಟಃ=ಪೋಷಿತನಾಗಿ-ರುವನೊ, ತಸ್ಮಿನ್=ಅಂಥ ನನ್ನಲ್ಲಿ ಪ್ರತೀಪಃ=ವಿರೋಧ ಮಾಡುವನು, ಪರಕೃತ್ಯೇ= ಶತ್ರುಗಳಾದ ಪಾಂಡವರ ಕಾರ್ಯಸಾಧನೆಯಲ್ಲಿ, ಆಸ್ತೇ=ಇರುವನು, ಕಾರಣ ಏನಂ=ಇಂಥವನನ್ನು, ಜಿಹ್ಮಂ=ಕಪಟಿಯಾದ, ದಾಸ್ಯಾಃ ಸುತಂ=ದಾಸೀಪುತ್ರನನ್ನು, ಕಃ ಅತ್ರ ಉಪಜುಹಾವ=ಯಾವನು ಕರೆದವನು, ಆಶು=ಬೇಗನೇ, ಶ್ವಸಾನಃ= ಕೇವಲ ಶ್ವಾಸಬಿಡುತ್ತಿರುವವನನ್ನು ಪುರಾತ್ ನಿರ್ವಾಸ್ಯತಾಂ=ಊರಿನಿಂದ ಹೊರಗೆ ಹಾಕಿರಿ. ಕೇವಲ ಉಸಿರಾಡುವನನ್ನು ಎಂದದ್ದರಿಂದ ಹೊಡೆದು ಹೊರಗೆ ಹಾಕು ಎಂದಂತಾಯಿತು ॥೧೫॥

ಹೊಡೆಯುವದಕ್ಕೆ ಮುಂಚೆಯೇ ಹೊರಡುವುದು ಲೇಸು ಎಂಬ ಭಾವನೆ-ಯಿಂದ ವ್ಯಥೆಪಡಲಿಲ್ಲವೆಂದು ಹೇಳುವರು-

**ಸ ಇತ್ಥಮತ್ಯುಲ್ಬಣಕರ್ಣಬಾಣೈ-**
**ರ್ಭ್ರಾತುಃ ಪುರೋ ಮರ್ಮಸು ತಾಡಿತೋಽಪಿ ।**
**ಸ್ಮಯನ್ ಧನುರ್ದ್ವಾರಿ ನಿಧಾಯ ಮಾಯಾಂ**
**ಗತವ್ಯಥೋಽಯಾದುರು ಮಾನಯಾನಃ ॥೧೬॥**

ಸಃ=ವಿದುರನು, ಇತ್ಥಂ=ಈ ರೀತಿಯಾಗಿ, ಭ್ರಾತುಃ=ಧೃತರಾಷ್ಟ್ರನ, ಪುರಃ= ಎದುರಿಗೆ, ಅತ್ಯುಲ್ಬಣಕರ್ಣಬಾಣೈಃ=ಬಾಣದಂತಿರುವ ಅತ್ಯಂತ ಕ್ರೂರವಾದ ನುಡಿಗಳಿಂದ,ಮರ್ಮಸು=ಮರ್ಮಸ್ಥಳದಲ್ಲಿ ತಾಡಿತೋಽಪಿ=ಹೊಡೆಯಲ್ಪಟ್ಟರೂ,

ಸ್ಮಯನ್=ಮಂದಹಾಸ ಮಾಡುತ್ತ ಧನುಃ=ಬಿಲ್ಲು ಬಾಣಗಳನ್ನು, ದ್ವಾರಿ ನಿಧಾಯ= ಅವನ ಬಾಗಿಲಿನಲ್ಲಿರಿಸಿ, ಗತವ್ಯಥಃ=ದುಃಖವಿಲ್ಲದೇ, ಮಾಯಾಂ=ಶ್ರೀಹರಿಯ ಬಂಧಕ ಶಕ್ತಿಯನ್ನು ಉರುಮಾನಯಾನಃ=ಗೌರವಿಸುವನಾಗಿ, ಅಯಾತ್=ಅವರು ತಳ್ಳುವುದಕ್ಕೆ ಮುಂಚೆ ತಾನೇ ವನಕ್ಕೆ ಹೋದನು. ಮಡದಿ ಮಕ್ಕಳಲ್ಲಿ ಅತಿಯಾದ ಸ್ನೇಹ ಹುಟ್ಟಿಸುವ ಈಶ್ವರನ ಬಂಧಕ ಶಕ್ತಿ ಜಗದ್ವಿಮೋಹಕವಾಗಿದೆ ಆಶ್ಚರ್ಯವೆನ್ನುತ್ತ ತೆರಳಿದ. ಇವನು ಪಾಂಡವರ ಪಕ್ಷ ಸೇರಿ ನಮ್ಮೊಡನೆ ಯುದ್ಧ ಮಾಡುವನೆಂಬ ಸಂಶಯ ಬರದಿರಲಿ ಎಂದು ಧನುಸ್ಸನ್ನು ಹೊಸ್ತಿಲಿನಲ್ಲಿ ಇಟ್ಟು ನಡೆದನು ॥೧೬॥

ವನದಲ್ಲಿ ವ್ಯರ್ಥ ಕಾಲ ಕಳೆಯಲ್ಲಿಲ್ಲವೆಂದು ಹೇಳುವರು –

**ಸ ನಿರ್ಗತಃ ಕೌರವಪುಣ್ಯಲಬ್ಧ-**
**ಗಜಾಹ್ವಯಾತ್ ತೀರ್ಥಪದಃ ಪದಾನಿ ।**
**ಅನ್ವಾಕ್ರಮಾತ್ ಪುಣ್ಯಚಿಕೀರ್ಷಯೋರ್ವ್ಯಾ-**
**ಮಧಿಷ್ಠಿತೋ ಯಾನಿ ಸಹಸ್ರಮೂರ್ತಿಃ ॥೧೭॥**

ಸಃ=ವಿದುರನು, ಕೌರವಪುಣ್ಯಲಬ್ಧಗಜಾಹ್ವಯಾತ್=ಪೂರ್ವಜರಾದ ಕೌರವರ ಪುಣ್ಯದಿಂದ ಲಭಿಸಿದ ಹಸ್ತಿನಾಪುರದಿಂದ, (ಇದೂ ಪುಣ್ಯಕ್ಷೇತ್ರವೇ ಎಂದು ಸೂಚಿತ) ನಿರ್ಗತಃ=ಹೊರಟವನಾಗಿ, ಪುಣ್ಯಚಿಕೀರ್ಷಯಾ=ಶ್ರೀಹರಿ ಪ್ರೀತಿಜನಕ ಪುಣ್ಯ ಸಂಪಾದನೆ ಮಾಡುವ ಇಚ್ಛೆಯಿಂದ, ಉರ್ವ್ಯಾಂ=ಭೂಮಿಯಲ್ಲಿ, ಯಾನಿ=ಯಾವ ಕ್ಷೇತ್ರಗಳಲ್ಲಿ, ಸಹಸ್ರಮೂರ್ತಿಃ=ಅನಂತರೂಪವುಳ್ಳ ಶ್ರೀಹರಿಯು ಅಧಿಷ್ಠಿತಃ= ನೆಲೆಸಿರುವನೋ, ತಾನಿ=ಅಂಥ, ತೀರ್ಥಪದಃ=ಶ್ರೀಹರಿಯ, ಪದಾನಿ=ಸ್ಥಾನಗಳನ್ನು, ಅನ್ವಾಕ್ರಮತ್=ಕ್ರಮವಾಗಿ ಸಂಚರಿಸಿದನು ॥೧೭॥

ಇದನ್ನೇ ವಿವರಿಸುವರು –

**ವನೇಷು ಪುಣ್ಯೋಪವನಾದ್ರಿಕುಂಜೇ-**
**ಷ್ವಪಂಕತೋಯೇಷು ಸರಿತ್ಸರಸ್ಸು ।**
**ಅನಂತಲಿಂಗೈಃ ಸಮಲಂಕೃತೇಷು**
**ಚಚಾರ ತೀರ್ಥಾಯತನೇಷ್ವನನ್ಯಃ ॥೧೮॥**

ಪುಣ್ಯೋಪವನಾದ್ರಿಕುಂಜೇಷು=ಪುಣ್ಯಜನಕಗಳಾದ, ಉಪವನ=ತೋಟಗಳು, ಅದ್ರಿ=ಪರ್ವತಗಳು, ಕುಂಜೇಷು=ಬಳ್ಳಿ ಮುಂತಾದ ಏಕಾಂತ ಸ್ಥಾನಗಳಲ್ಲಿ, ವನೇಷು=ಅಡವಿಗಳಲ್ಲಿ ಅಪಂಕತೋಯೇಷು=ಶುದ್ಧವಾದ ನೀರುಳ್ಳ, ಸರಿತ್=ನದಿ, ಮತ್ತು ಸರಸ್ಸು=ಸರೋವರಗಳಲ್ಲಿ, ಅನಂತಲಿಂಗೈಃ=ಶ್ರೀಹರಿಯ ಪ್ರತಿಮೆಗಳಿಂದ,

ಸಮಲಂಕೃತೇಷು=ಚನ್ನಾಗಿ ಅಲಂಕರಿಸಲ್ಪಟ್ಟ, ತೀರ್ಥಾಯತನೇಷು=ತೀರ್ಥಕ್ಷೇತ್ರಗಳಲ್ಲಿ, ಅನನ್ಯಃ=ಏಕಾಕಿಯಾಗಿ, ಚಚಾರ=ಸಂಚರಿಸಿದನು॥೧೮॥

ಸಂಚರಿಸುವಾಗಿನ ಅವನ ಸ್ಥಿತಿಯನ್ನು ಹೇಳುವರು –

**ಗಾಂ ಪರ್ಯಟನ್ ಮೇಧ್ಯವಿವಿಕ್ತವೃತ್ತಿಃ**
**ಸದಾऽऽಪ್ಲುತೋऽಧಃಶಯನಾವಧೂತಃ ।**
**ಅಲಕ್ಷಿತಃ ಸ್ವೈರವಧೂತ (ಕೇಶೋ) ವೇಷೋ**
**ವ್ರತಾನಿ ಚೇರೇ ಹರಿತೋಷಣಾನಿ ॥೧೯॥**

ಗಾಂ=ಭೂಮಿಯನ್ನು ಪರ್ಯಟನ್=ಸಂಚರಿಸುತ್ತ, ಮೇಧ್ಯವಿವಿಕ್ತವೃತ್ತಿಃ ಮೇಧ್ಯೈಃ=ಶುದ್ಧವಾದ, ವಿವಿಕ್ತೈಃ=ಗಿಡದಿಂದ ಬಿದ್ದಿರುವ ಎಲೆ ಮುಂತಾದವುಗಳಿಂದ, ವೃತ್ತಿಃ=ಜೀವಿಸುವ, ಅಥವಾ ಮೇಧ್ಯೇ=ಶುದ್ಧವಾದ, ವಿವಿಕ್ತೇ=ಏಕಾಂತಸ್ಥಲದಲ್ಲಿ ವೃತ್ತಿಃ=ವಾಸವಾಗಿವುಳ್ಳವನಾಗಿ, ಸದಾ ಆಪ್ಲುತಃ=ತ್ರಿಕಾಲದಲ್ಲೂ ಸ್ನಾನ ಮಾಡುವನಾಗಿ, ಅಧಃಶಯನಾವಧೂತಃ=ಕೆಳಗೆ ಅಂದರೆ ಭೂಮಿಯಲ್ಲಿಯೇ ಮಲಗುವುದರಿಂದ ಧೂಲಿಯಿಂದ ಕೂಡಿದ ದೇಹವುಳ್ಳ, ಸ್ವೈಃ=ತನ್ನವರಿಂದ, ಅಲಕ್ಷಿತಃ=ಕಾಣದಿರುವವನಾಗಿ, ಅವಧೂತವೇಷಃ=ಅವಜ್ಞೆಯಿಂದ ಬಿಡಲ್ಪಟ್ಟ ಹುಚ್ಚರಂತೆ ವೇಷವುಳ್ಳ, ಅವಧೂತಕೇಶಃ ಎಂಬ ಪಾಠದಲ್ಲಿ ಗಾಳಿಯಿಂದ ಹಾರಾಡುವ ಕೂದಲುಗಳುಳ್ಳವನಾಗಿ ಹರಿತೋಷಣಾನಿ=ಶ್ರೀಹರಿಪ್ರೀತಿಜನಕವಾದ, ವ್ರತಾನಿ=ವ್ರತಗಳನ್ನು, ಚೇರೇ=ಆಚರಿಸಿದನು. ಇದರಿಂದ 'ಕ್ರಿಯೆಗಳಿಗೆ ಉದ್ದೇಶ್ಯರಾದ ದೇವತೆಗಳ ವಶೀಕರಣ ಸಮರ್ಥವಾದವುಗಳು' ಎಂದು ವ್ರತಶಬ್ದಾರ್ಥ ಸೂಚಿಸಿದಂತಾಯಿತು. 'ವೃಞವರಣೆ' ಎಂಬಧಾತುವಿನಿಂದ 'ವ್ರಿಪ್ರಿಯತೇ ಅನೇನ ಏತತ್' ಎಂಬರ್ಥದಲ್ಲಿ ವ್ರತ ಎಂಬ ರೂಪವಾಗುವುದು. ॥೧೯॥

**ಇತ್ಥಂ ವ್ರಜನ್ ಭಾರತಮೇವ ವರ್ಷಂ**
**ಕಾಲೇನ ಯಾವದ್ ಗತವಾನ್ ಪ್ರಭಾಸಮ್ ।**
**ತಾವಚ್ಛಶಾಶ ಕ್ಷಿತಿಮೇಕಚಕ್ರಾ-**
**ಮೇಕಾತಪತ್ರಾಮಜಿತೇನ ಪಾರ್ಥಃ ॥೨೦॥**

ಇತ್ಥಂ=ಈ ರೀತಿಯಾಗಿ, ಭಾರತಮೇವವರ್ಷಂ=ಕರ್ಮಭೂಮಿಯಾದ್ದರಿಂದ ಭಾರತದಲ್ಲಿ ಮಾತ್ರ, ವ್ರಜನ್=ಸಂಚರಿಸುತ್ತ, ಕಾಲೇನ=ಕೆಲವು ಕಾಲದಿಂದ, ಯಾವತ್=ಯಾವಾಗ, ಪ್ರಭಾಸಂ ಗತವಾನ್=ಪ್ರಭಾಸಕ್ಷೇತ್ರಕ್ಕೆ ಬಂದನೋ, ತಾವತ್=ಆಗ, ಪಾರ್ಥಃ=ಧರ್ಮರಾಜನು, ಅಜಿತೇನ=ಶ್ರೀಕೃಷ್ಣನಿಂದ ಹೇಳಲ್ಪಟ್ಟ

ರೀತಿಯಿಂದ, ಏಕಚಕ್ರಾಂ=ಒಂದೇ ಆಜ್ಞೆಯುಳ್ಳ, ಏಕಾತಪತ್ರಾಂ=ಒಂದೇ ಛತ್ರವುಳ್ಳ, ಕ್ಷಿತಿಂ=ಭೂಮಿಯನ್ನು, ಶಶಾಸ=ಪಾಲಿಸಿದನು. ಸಮಸ್ತ ಭೂಮಂಡಲಕ್ಕೆ ಒಬ್ಬನೇ ಒಡೆಯನಾಗಿದ್ದನೆಂದು ಭಾವ. ॥೨೦॥

**ತತ್ರಾಥ ಶುಶ್ರಾವ ಸುಹೃದ್ವಿನಷ್ಟಿಂ**
**ವನಂ ಯಥಾ ವೇಣುಜವಹ್ನಿನಾಶ್ರಯಂ ।**
**ಸಂಸ್ಪರ್ಧಯಾ ದಗ್ಧಮಥಾನುಶೋಚನ್**
**ಸರಸ್ವತೀಂ ಪ್ರತ್ಯಗಿಯಾಯ ತೂಷ್ಣೀಂ ॥೨೧॥**

ಅಥ=ಪ್ರಭಾಸಕ್ಕೆ ಬಂದನಂತರ, ತತ್ರ=ಪ್ರಬಾಸದಲ್ಲಿ , ಯಥಾ=ಹೇಗೆ, ಸಂಸ್ಪ-ರ್ಧಯಾ=ವಿಶೇಷವಾಗಿ ತಿಕ್ಕಾಡುವುದರಿಂದ, ವೇಣುಜವಹ್ನಿನಾ=ಬಿದುರಿನಲ್ಲಿ ಉಂಟಾದ ಅಗ್ನಿಯಿಂದ, ಆಶ್ರಯಂ=ಬೆಂಕಿಗೆ ಆಧಾರವಾದ, ವನಂ=ಅಡವಿಯು, ದಗ್ಧಂ ಭವತಿ=ಸುಡುವುದೋ, ತಥಾ=ಹಾಗೆ, ಸಂಸ್ಪರ್ಧಯಾ=ಪರಸ್ಪರ ಚೇಷ್ಟೆಯ ಮಾತುಗಳಿಂದುಂಟಾದ ಈರ್ಷೆಯಿಂದ ಆಗುವ, ಸುಹೃದ್ವಿನಷ್ಟಿಂ=ಯಾದವರ ನಾಶಕ್ಕೆ ಕಾರಣವಾದ ಬ್ರಾಹ್ಮಣರ ಶಾಪವನ್ನು, ಶುಶ್ರಾವ=ಸಂಕ್ಷೇಪವಾಗಿ ಕೇಳಿದನು, ಅಥ=ಕೇಳಿದನಂತರ, ಅನುಶೋಚನ್= ಅವರಿಗಾಗಿ ದುಃಖಪಡುತ್ತ, ಪ್ರತ್ಯಕ್ ಸರಸ್ವತೀಂ=ಪಶ್ಚಿಮದಿಕ್ಕಿಗೆ ಹರಿಯುವ ಸರಸ್ವತೀ ಎಂಬ ನದಿಗೆ, ಇಯಾಯ= ಹೋದನು.

ಇಲ್ಲಿ ಸುಹೃತ್ ಎಂದರೆ ಯಾರು? ದುರ್ಯೋಧನಾದಿಗಳು ಎಂದು ಹೇಳುವಂತಿಲ್ಲ ಅವರ ನಾಶವನ್ನು ಮೊದಲೆ ಕೇಳಿ ಆಗಿದೆ. ಪಾಂಡವರೆಂದಾಗಲಿ, ಯಾದವರೆಂದಾಗಲಿ ಹೇಳಲಾಗುವುದಿಲ್ಲ ಆಗ ಇನ್ನೂ ಅವರ ವಿನಾಶವಾಗಿಲ್ಲ, ಇಲ್ಲವಾದರೆ 'ಅಜಿತೇನ ಪಾರ್ಥಃ ಶಶಾಸ' ಎಂಬುದರ ವಿರೋಧ ಬರುವುದು. ಕಾರಣ ತಾತ್ಪರ್ಯ ಹೇಳುವರು.

**ಸುಹೃದ್ವಿನಷ್ಟಿಂ ಯದುಕುಲವಿನಷ್ಟಿಂ ಏಷ್ಯಾಂ । "ವಿದುರಸ್ತು ಪ್ರಭಾಸಸ್ಥಃ ಶಾಪಂ ಸಂಕ್ಷೇಪತೋಽಶೃಣೋತ್।ಯದೂನಾಂ ವಿಸ್ತರಾತ್ ಪಶ್ಚಾತ್‌ಉದ್ಧವಾದ್ಯಮುನಾ-ಮನು" ॥ ಇತಿ ಸ್ಕಾಂದೇ । ಭಾರತವಿರೋಧಾಚ್ಚ ಅನ್ಯಥಾ ।**

ಸುಹೃತ್ ಎಂದರೆ ಯಾದವರು. ಅವರ, ಮುಂದೆ ಆಗುವ ನಾಶವನ್ನು ಅರ್ಥಾತ್ ನಾಶಕ್ಕೆ ಕಾರಣವಾದ ವಿಪ್ರಶಾಪವನ್ನು ಕೇಳಿದನೆಂದರ್ಥ. ಕಾರಣ ಯಾವ ವಿರೋಧವಿಲ್ಲ. ಇನ್ನು ವಿಪ್ರಶಾಪವನ್ನೂ ಯಮುನಾದಡದಲ್ಲಿ ಉದ್ಧವ-ನಿಂದ ಕೇಳಿದನೆಂದು ಮುಂದೆ ಸ್ಪಷ್ಟವಾಗುವುದು ಕಾರಣ ಈಗಲೇ ಕೇಳಿದನೆಂದು

ಹೇಳಿದ್ದು ಅಯುಕ್ತವೆಂದರೆ ಪ್ರಮಾಣ ಹೇಳಿರುವರು. 'ಪ್ರಭಾಸದಲ್ಲಿರುವ ವಿದುರನು ಯಾದವರ ಶಾಪವನ್ನು ಸಂಕ್ಷೇಪದಿಂದ ಮಾತ್ರ ಕೇಳಿದನು. ಯಮುನಾ ತೀರದಲ್ಲಿ ಉದ್ಧವನಿಂದ ವಿಸ್ತಾರವಾಗಿ ಮತ್ತೆ ಕೇಳಿದನು' ಎಂದು ಸ್ಕಾಂದ ಪುರಾಣದಲ್ಲಿದೆ. ವಿನಾಶ ಮುಂದಿನದೆಂದು ಹೇಳದಿದ್ದರೆ ಭಾರತ ವಿರೋಧವೂ ಬರುವುದು ಎಂದು ತಾತ್ಪರ್ಯದ ಭಾವ ॥೨೧॥

**ತಸ್ಯಾಂ ತ್ರಿತಸ್ಯೋಶನಸೋ ಮನೋಶ್ಚ**
**ಪೃಥೋರಥಾಗ್ನೇರಸಿತಸ್ಯ ವಾಯೋಃ ।**
**ತೀರ್ಥಂ ಸುದಾಸಸ್ಯ ಗವಾಂ ಗುಹಸ್ಯ**
**ಯಚ್ಛ್ರಾದ್ಧದೇವಸ್ಯ ಸ ಆಸಿಷೇವೇ ॥೨೨॥**

ತಸ್ಯಾಂ=ಆ ಸರಸ್ವತಿಯಲ್ಲಿರುವ, ತ್ರಿತಸ್ಯ=ತ್ರಿತನೆಂಬ ಹೆಸರಿನ ಋಷಿಯ, ಮತ್ತು ಉಶನಸಃ=ಶುಕ್ರಾಚಾರ್ಯರ, ಮನೋಃ=ಮನುವಿನ, ಪೃಥೋಃ=ಪೃಥುವಿನ, ಅಗ್ನೇಃ= ಅಗ್ನಿಯ, ಅಸಿತಸ್ಯ=ಅಸಿತನೆಂಬ ಋಷಿಯ, ವಾಯೋಃ=ವಾಯುವಿನ, ಮತ್ತು ಸುದಾಸಸ್ಯ=ಸುದಾಸನ, ಗವಾಂ=ಗೋವುಗಳ, ಗುಹಸ್ಯ=ಗುಹನ, (ಸ್ಕಂದನ) ಶ್ರಾದ್ಧದೇವಸ್ಯ=ಸ್ವಾಯಂಭುವ ಮನುವಿನ, ತೀರ್ಥಂ=ಇವರೆಲ್ಲರ ತೀರ್ಥವನ್ನು ಸಃ=ವಿದುರನು, ಆಸಿಷೇವೆ=ಚನ್ನಾಗಿ ಸೇವಿಸಿದನು ಇದರಿಂದ ವಿದುರನು ಜ್ಞಾನಿಯಾದ್ದರಿಂದ ಈ ಸಂಸಾರ ನಶ್ವರವಾದುದು ಆದ್ದರಿಂದ ತೀರ್ಥಸ್ನಾನಾದಿ-ಗಳನ್ನು ಮಾಡಿ ಶುದ್ಧಾಂತಃಕರಣನಾಗಿ ಭಗವಂತನ ಅಪರೋಕ್ಷ ಪಡೆಯುವುದು ಶ್ರೇಷ್ಠವೆಂದು ತೀರ್ಥಸ್ನಾನ ಮಾಡಿದನು ಹೊರತು ಬಂಧುಗಳ ನಾಶ ಕೇಳಿ ತಾನೂ ಸಾಯಲು ಸರಸ್ವತಿಗೆ ಹೋಗಲಿಲ್ಲವೆಂದು ತಿಳಿಯುವುದು ॥೨೨॥

**ಅನ್ಯಾನಿ ಚೇಹ ದ್ವಿಜದೇವದೇವೈಃ**
**ಕೃತಾನಿ ನಾನಾಯತನಾನಿ ವಿಷ್ಣೋಃ ।**
**ಪ್ರತ್ಯಂಕಮುಖ್ಯಾಂಕಿತಮಂದಿರಾಣಿ**
**ಯದ್ದರ್ಶನಾತ್ ಕೃಷ್ಣಮನುಸ್ಮರಂತಿ ॥೨೩॥**

ಅನ್ಯಾನಿ=ಬೇರೆ ಬೇರೆ, ಇಹ=ಸರಸ್ವತೀತೀರದಲ್ಲಿ, ದ್ವಿಜದೇವ=ಬ್ರಾಹ್ಮಣೋತ್ತ-ಮರು, ಮತ್ತು ದೇವೈಃ=ಬ್ರಹ್ಮಾದಿ ದೇವತೆಗಳಿಂದಲೂ, ಕೃತಾನಿ=ನಿರ್ಮಿಸಲ್ಪಟ್ಟ, ಪ್ರತ್ಯಂಕಮುಖ್ಯಾಂಕಿತಮಂದಿರಾಣಿ=ಸಮ್ಯಕ್ ಲಕ್ಷಣ ಉಳ್ಳವರಲ್ಲಿ ಶ್ರೇಷ್ಠನಾದ ಶ್ರೀಹರಿಯಿಂದ ಚಿಹ್ನಿತವಾದ ದೇವಸ್ಥಾನಗಳುಳ್ಳ, (ವಿಷ್ಣುಪ್ರತಿಮೆಗಳಿಂದ ಕೂಡಿದ) ಯದ್ದರ್ಶನಾತ್=ಯಾವ ಕ್ಷೇತ್ರಗಳನ್ನು ನೋಡುವದರಿಂದ, ಕೃಷ್ಣಂ ಅನುಸ್ಮರಂತಿ=

ಶ್ರೀಹರಿಯನ್ನು ಧ್ಯಾನ ಮಾಡುವರೋ, ಅಂಥ ವಿಷ್ಣೋಃ=ಶ್ರೀಹರಿಯ, ನಾನಾ-ಯತನಾನಿ=ಅನೇಕ ಕ್ಷೇತ್ರಗಳನ್ನೂ ನೋಡಿದನು ಸಂಚರಿಸಿದನು.

ಇಲ್ಲಿ ತಿಳಿಯದಿರುವ ಪ್ರತ್ಯಂಕಮುಖ್ಯ ಶಬ್ದಾರ್ಥವನ್ನು ಹೇಳುವರು–

**ಪ್ರತ್ಯಂಕಮುಖ್ಯೋ ವಿಷ್ಣುಃ ।**
**"ಬ್ರಹ್ಮಾ ಪ್ರತ್ಯಂಕವಾನ್ ವಿಷ್ಣುಃ ಸಮ್ಯಗ್ಲಕ್ಷಣವತ್ತಮಃ" ।**
**ಇತಿ ತಂತ್ರಮಾಲಾಯಾಂ ॥**

ಪ್ರತಿ ಎಂದರೆ ಸಮ್ಯಕ್ ಎಂದರ್ಥ. 'ಪ್ರತ್ಯಕ್ ಅಂಕಾನಿ ಲಕ್ಷಣಾನಿ ಯಸ್ಯ ಸಃ ಪ್ರತ್ಯಂಕಃ' ಚನ್ನಾಗಿ ಲಕ್ಷಣವುಳ್ಳವನು ಚತುರ್ಮುಖನು ಅವನಿಗಿಂತ ಅತಿಶಯ-ವಾಗಿ ಸಮ್ಯಕ್ ಲಕ್ಷಣವುಳ್ಳವನಾದ್ದರಿಂದ ಪ್ರತ್ಯಂಕಮುಖ್ಯನೆಂದು ಶ್ರೀಹರಿಯನ್ನು ಕರೆಯುವರು ಎಂದು ಭಾವ ॥೨೩॥

**ತತಸ್ತ್ವತಿವ್ರಜ್ಯ ಸುರಾಷ್ಟ್ರಮೃದ್ಧಂ**
**ಸೌವೀರಮತ್ಸ್ಯಾನ್ ಕುರುಜಾಂಗಲಾಂಶ್ಚ ।**
**ಕಾಲೇನ ತಾವದ್ ಯಮುನಾಮುಪೇತ್ಯ**
**ತತ್ರೋದ್ಧವಂ ಭಾಗವತಂ ದದರ್ಶ ॥೨೪॥**

ತತಃ=ಅನಂತರ,ಋದ್ಧಂ=ಸಂಪದ್ಭರಿತವಾದ,ಸುರಾಷ್ಟ್ರಂ=ಸೌರಾಷ್ಟ್ರವನ್ನು,ಸೌವೀರಂ=ಸೌವೀರದೇಶವನ್ನು, ಮತ್ಸ್ಯಾನ್=ಮತ್ಸ್ಯದೇಶವನ್ನು, ಕುರುಜಾಂಗಲಾನ್=ಕುರು ಮತ್ತು ಜಾಂಗಲದೇಶಗಳನ್ನು, ಅತಿವ್ರಜ್ಯ=ದಾಟಿನಡೆದು,ಕಾಲೇನ=ಕೆಲವು ಕಾಲಗಳಲ್ಲಿ ಯಮುನಾಂ ಉಪೇತ್ಯ=ಯಮನಾನದಿಯನ್ನು ತಲುಪಿ, ತಾವತ್=ಮೊದಲಿಗೆ, ಭಾಗವತಂ=ಭಗವದ್ಭಕ್ತನಾದ, ಉದ್ಧವಂ=ಉದ್ಧವನನ್ನು ದದರ್ಶ=ನೋಡಿದನು. ವಿದುರನಿಗೆ ತೀರ್ಥಯಾತ್ರೆ ಮಾಡುವ ಆಸಕ್ತಿಯೇ ಹೊರತು ರಾಷ್ಟ್ರಗಳನ್ನು ನೋಡುವುದರಲ್ಲಿ ಅಲ್ಲ ಎಂದು ತಿಳಿಸಲು ಅವುಗಳನ್ನು ದಾಟಿ ಎಂದು ಹೇಳಿರುವರು. ನಂತರ ಮೈತ್ರೇಯರನ್ನೂ ಕಾಣುವನಾದ್ದರಿಂದ ಮೊದಲಿಗೆ ಉದ್ಧವನನ್ನು ಎಂದಿರುವರು ॥೨೪॥

**ಸ ವಾಸುದೇವಾನುಚರಂ ಪ್ರಶಾಂತಂ**
**ಬೃಹಸ್ಪತೇಃ ಪ್ರಾಪ್ತನಯಂ ಪ್ರತೀತಂ ।**
**ಆಲಿಂಗ್ಯ ಗಾಢಂ ಪ್ರಣಯೇನ ಭದ್ರಂ**
**ಸ್ವಾನಾಮಪೃಚ್ಛದ್ ಭಗವತ್ಪ್ರಜಾನಾಂ ॥೨೫॥**

ಸಃ=ವಿದುರನು, ವಾಸುದೇವಾನುಚರಂ=ಶ್ರೀಕೃಷ್ಣನ ದಾಸನಾದ, ಪ್ರತೀತಂ=ಪ್ರಸಿದ್ಧನಾದ, ಪ್ರಶಾಂತಂ=ಬಹಳವಾದ ಭಗವನ್ನಿಷ್ಠೆಯುಳ್ಳ, ಬೃಹಸ್ಪತೇಃ=ಬೃಹಸ್ಪತ್ಯಾ-ಚಾರ್ಯರಿಂದ, ಪ್ರಾಪ್ತನಯಂ=ನೀತಿಶಾಸ್ತ್ರವನ್ನು ಅಧ್ಯಯನ ಮಾಡಿದ ಉದ್ಧವನನ್ನು ಪ್ರಣಯೇನ=ಸ್ನೇಹದಿಂದ, ಗಾಢಂ ಆಲಿಂಗ್ಯ=ಗಟ್ಟಿಯಾಗಿ ಅಪ್ಪಿಕೊಂಡು, ಭಗವತ್ಪ್ರ-ಜಾನಾಂ=ಶ್ರೀಹರಿಯೇ ಮಗನಾಗಿವುಳ್ಳ,ಸ್ವಾನಾಂ=ತನ್ನವರಾದ ಯಾದವರ,ಭದ್ರಂ=ಕುಶಲವನ್ನು , ಉದ್ಧವನನ್ನು ಕುರಿತು, ಆಪೃಚ್ಛತ್=ಕೇಳಿದನು ॥೨೫॥

**ಕಚ್ಚಿತ್ ಪುರಾಣೌ ಪುರುಷೌ ಸ್ವನಾಭ್ಯ-**
**ಪದ್ಮಾನುವೃತ್ಯೇಹ ಕಲಾವತೀರ್ಣೌ ।**
**ಆಸಾತ ಉರ್ವ್ಯಾಃ ಕುಶಲಂ ವಿಧಾಯ**
**ಕೃತಕ್ಷಣೌ ಕುಶಲಂ ಶೂರಗೇಹೇ ॥೨೬॥**

ಸ್ವನಾಭ್ಯಪದ್ಮಾನುವೃತ್ಯಾ ಸ್ವ=ಸ್ವತಂತ್ರನಾದ ಶ್ರೀಹರಿಯ, ನಾಭ್ಯ=ನಾಭಿಯಲ್ಲಿ (ಹೊಕ್ಕಳಿನಲ್ಲಿ) ಜನಿಸಿದ, ಪದ್ಮ=ಪದ್ಮದಲ್ಲಿ ಜನಿಸಿದ ಬ್ರಹ್ಮದೇವರ, ಅನುವೃತ್ಯಾ=ಪ್ರಾರ್ಥನೆಯಿಂದ, ಕೃತಕ್ಷಣೌ=ಅವಕಾಶವನ್ನು ಪಡೆದ, ಕಲಾವತೀರ್ಣೌ=ಸ್ವರೂಪಾಂಶವಾದ ಕೃಷ್ಣಕೇಶಾಂಶದಿಂದ ಮತ್ತು ಶುಕ್ಲಕೇಶಾವಿಷ್ಟವಾಗಿ ಅವತರಿಸಿದ, ಪುರಾಣೌ ಪುರುಷೌ=ಶ್ರೀಕೃಷ್ಣ ಬಲರಾಮರು, ಉರ್ವ್ಯಾಃ=ಭೂಮಿಗೆ, ಕುಶಲಂ ವಿಧಾಯ=ಕ್ಷೇಮವನ್ನುಂಟುಮಾಡಿ, ಶೂರಗೇಹೇ=ವಸುದೇವನ ಮನೆಯಲ್ಲಿ ಕುಶಲಂ ಆಸಾತೇ ಕಚ್ಚಿತ್=ಜಗತ್ತಿಗೆ ಕಲ್ಯಾಣ ಮಾಡುತ್ತ ಇರುವರಷ್ಟೆ ಕಚ್ಚಿತ್ ಎಂಬ ಶಬ್ದವೇ ಕುಶಲ ಪ್ರಶ್ನಾರ್ಥಕವಾಗಿದೆ. ಮುಂದೆಯೂ ಕುಶಲ ಮುಂತಾದ ಶಬ್ದಗಳು ಬೇರೆ ಇರುವುದರಿಂದ ಕೇವಲ ಪ್ರಶ್ನಾರ್ಥಕವೆಂದು ತಿಳಿಯಬೇಕು.

'ಸ್ವನಾಭ್ಯಪದ್ಮ' ಎಂಬಲ್ಲಿ ನಾಭಿ ಸಂಬಂಧಿಯಾದ ಪದ್ಮ ಜಡವಾದುದರಿಂದ 'ಅನುವೃತ್ತಿ' ಶಬ್ದದಿಂದ ಹೇಳಲ್ಪಡುವ ಪ್ರಾರ್ಥನೆ ಕೂಡಲಾರದು ಕಾರಣ ಪದ್ಮ ಶಬ್ದದ ವಿವಕ್ಷಿತವಾದ ಅರ್ಥವನ್ನು ಪ್ರಮಾಣದಿಂದ ತಿಳಿಸುವರು –

**''ಪದ್ಮೋ ಬ್ರಹ್ಮಾ ಸಮುದ್ದಿಷ್ಟಃ ಪದ್ಮಾ ಶ್ರೀರಪಿ ಚೋಚ್ಯತೇ'' ।**

**ಇತಿ ಬ್ರಾಹ್ಮೇ ।**

ಪದ್ಮ ಎಂದರೆ ಬ್ರಹ್ಮನು, ಪದ್ಮಾ ಎಂದು ಲಕ್ಷ್ಮಿಯೂ ಕರೆಯಲ್ಪಡುವಳು.

ಕುಶಲರಾಗಿದ್ದಾರೇನು ? ಎಂದು ಭಗವಂತನ ಕುಶಲ ಪ್ರಶ್ನೆಯ ಅಭಿಪ್ರಾಯ ಹೇಳುವರು –

**"ಲೋಕಾನಾಂ ಸುಖಕರ್ತೃತ್ವಮಪೇಕ್ಷ್ಯ ಕುಶಲಂ ವಿಭೋಃ।**
**ಪೃಚ್ಛ್ಯತೇ ಸತತಾನಂದಾತ್ ಕಥಂ ತಸ್ಯೈವ ಪೃಚ್ಛ್ಯತೇ" ॥ ಇತಿ ಪಾದ್ಮೇ ।**

ಪುರಾಣಗಳಲ್ಲಿ ಜಗತ್ತಿಗೆ ಸುಖವನ್ನುಂಟು ಮಾಡುತ್ತಿರುವನೇ ಎಂಬ ಅಭಿಪ್ರಾಯದಿಂದ ಪರಮಾತ್ಮನ ಕುಶಲ ಕೇಳುವುದೇ ಹೊರತು ಅವನದೇ ಕುಶಲ-ವನ್ನಲ್ಲ. ನಿರಂತರ ಸುಖಿಯಾದ ಶ್ರೀಹರಿಗೆ ಅಕುಶಲ ಪ್ರಸಕ್ತಿ ಇಲ್ಲದಿರುವುದರಿಂದ ಅವನದೇ ಕುಶಲ ಪ್ರಶ್ನೆಗೆ ಅವಕಾಶವಿಲ್ಲವೆಂದು ಭಾವ. ಭಗವಂತನು ಭೂಮಿಗೆ ಸುಖವನ್ನೀಯಲು ಅವತಾರ ಮಾಡುವ ಆವಶ್ಯಕತೆ ಇರಲಿಲ್ಲ. ಇದ್ದಲ್ಲಿಂದಲೇ ಮಾಡಬಹುದಿತ್ತು. ಬ್ರಹ್ಮದೇವರ ಪ್ರಾರ್ಥನೆಯಿಂದಾಗಿ ಅವತಾರ ಮಾಡುವ ಅವಸರ ಬಂದಿತು ಎಂದು 'ಕೃತಕ್ಷಣೌ' ಎಂಬುದರ ಭಾವ ॥೨೬॥

**ಕಚ್ಚಿತ್ ಕುರೂಣಾಂ ಪರಮಃ ಸುಹೃನ್ನೋ**
**ಭಾಮಃ ಸ ಆಸ್ತೇ ಸುಖಮಂಗ ಶೌರಿಃ ।**
**ಯೋ ವೈ ಸ್ವಸೃಣಾಂ ಪಿತೃವದ್ ದದಾತಿ**
**ವರಾನ್ ವದಾನ್ಯೋ ವರತರ್ಪಣೇನ ॥೨೭॥**

ಹೇಅಂಗ=ಉದ್ಧವನೇ,ಕುರೂಣಾಂ ನಃ=ಕುರುವಂಶದವರಾದ ನಮಗೆ, ಭಾಮಃ= ಪೂಜ್ಯನಾದ, ಅಥವಾ ತಂಗಿಯ ಗಂಡನಾದ ಯಃ=ಯಾವನು, ಸ್ವಸೃಣಾಂ= ಕುಂತಿಮೊದಲಾದ ಅಕ್ಕ ತಂಗಿಯರಿಗೆ, ವರತರ್ಪಣೇನ=ಅವರ ಗಂಡಂದಿರಿಗೆ ತೃಪ್ತಿಪಡಿಸುವ ಮೂಲಕ, ಪಿತೃವತ್=ತಂದೆಯಂತೆ, ವದಾನ್ಯಃ=ದಾನಶೀಲನಾದ, ಇವನು ವರಾನ್=ಅಪೇಕ್ಷಿತ ಪದಾರ್ಥಗಳನ್ನು, ದದಾತಿ=ಕೊಡುವನು, ಸಃ ಶೌರಿಃ= ವಸುದೇವನು, ಸುಖಂ ಆಸ್ತೇ ಕಚ್ಚಿತ್=ಸುಖವಾಗಿರುವನಷ್ಟೇ

**ವರತರ್ಪಣೇನ ಭರ್ತೃತರ್ಪಣೇನ ।**

(ಪುರು, ಯದು ಅಣ್ಣ ತಮ್ಮಂದಿರು. ಪುರುವಂಶದವರು ಪಾಂಡವ ಕೌರವರು. ಯದುವಂಶದವರು ಯಾದವರು ಹೀಗಾಗಿ ಕಕ್ಕಕ್ಕನ ಮಕ್ಕಳು ಆದ್ದರಿಂದ ದೇವಕಿ ಪಾಂಡು ಅಣ್ಣ ತಂಗಿಯರಾಗಬೇಕು). ॥೨೭॥

**ಕಚ್ಚಿದ್ ವರೂಥಾಧಿಪತಿರ್ಯದೂನಾಂ**
**ಪ್ರದ್ಯುಮ್ನ ಆಸ್ತೇ ಸುಖಮಂಗ ವೀರಃ ।**
**ಯಂ ರುಕ್ಮಿಣೀ ಭಗವತೋಽಭಿಲೇಭೇ**
**ಆರಾಧ್ಯ ವಿಪ್ರಾನ್ ಸ್ಮರಮಾದಿಸರ್ಗೇ ॥೨೮॥**

ಹೇ ಅಂಗ=ಉದ್ಧವನೇ, ಆದಿಸರ್ಗೇ=ಪೂರ್ವಜನ್ಮದಲ್ಲಿ, ಸ್ಮರಂ=ಕಾಮನಾದ, ಯಂ=ಯಾವನನ್ನು, ರುಕ್ಮಿಣೀ=ರುಕ್ಮಿಣಿಯು, ವಿಪ್ರಾನ್=ಬ್ರಾಹ್ಮಣರನ್ನು, ಆರಾಧ್ಯ= ಸೇವಿಸಿ, ಭಗವತಃ=ಶ್ರೀಕೃಷ್ಣನಿಂದ, ಲೇಭೇ=ಪಡೆದಳೋ, ಸಃ=ಅಂಥ, ವೀರಃ= ಸಮರ್ಥನಾದ,ಯದೂನಾಂ=ಯಾದವರ, ವರೂಥಾಧಿಪತಿಃ=ಸೇನಾಧಿಪತಿಯಾದ, ಪ್ರದ್ಯುಮ್ನಃ=ಪ್ರದ್ಯುಮ್ನನು, ಸುಖಂ ಆಸ್ತೇ ಕಚ್ಚಿತ್=ಸುಖವಾಗಿರುವನೆ? ಬ್ರಾಹ್ಮಣರ ಆರಾಧನೆ ಲೋಕಾನುಕರಣವೆಂದು ತಿಳಿಯಬೇಕು ॥೨೮॥

**ಕಚ್ಚಿತ್ ಸುಖಂ ಸಾತ್ವತವೃಷ್ಣಿಭೋಜ-**
**ದಾಶಾರ್ಹಕಾಣಾಮಧಿಪಃ ಸ ಆಸ್ತೇ ।**
**ಯಮಭ್ಯಷಿಂಚತ್ ಶತಪತ್ರನೇತ್ರೋ**
**ನೃಪಾಸನಾಧಿಂ ಪರಿಹೃತ್ಯ ದೂರಾತ್ ॥೨೯॥**

ಶತಪತ್ರನೇತ್ರಃ=ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ ಶ್ರೀಕೃಷ್ಣನು, ನೃಪಾ- ಸನಾಧಿಂ=ತನಗೆ ರಾಜಸಿಂಹಾಸನಬೇಕೆಂಬ ಮನಸ್ಸಿದೆ ಎಂಬುದನ್ನು, ದೂರಾತ್ ಪರಿಹೃತ್ಯ=ದೂರದಿಂದಲೆ ಪರಿಹರಿಸಿ, ಯಂ=ಯಾವನನ್ನು, ಅಭ್ಯಷಿಂಚತ್= ಪಟ್ಟಾಭಿಷೇಕಮಾಡಿದನೋ, ಸಃ=ಆ, ಸಾತ್ವತವೃಷ್ಣಿಭೋಜದಾಶಾರ್ಹಕಾಣಾಂ= ಸಾತ್ವತ, ವೃಷ್ಣಿ,ಭೋಜ, ದಾಶಾರ್ಹ ಈ ರೀತಿ ನಾಲ್ಕು ಪ್ರಬೇಧವುಳ್ಳ ಯಾದವರಿಗೆ, ಅಧಿಪಃ=ರಾಜನಾದ ಉಗ್ರಸೇನನು, ಸುಖಂ ಆಸ್ತೇ ಕಚ್ಚಿತ್=ಸುಖವಾಗಿರುವನೇ?

ಇಲ್ಲಿ 'ಆಧಿಸ್ತು ಮಾನಸೀ ಪೀಡಾ' ಎಂದು ಅಮರ ಇರುವುದರಿಂದ ನೃಪಾಸನಾಧಿಂ ಎಂದರೆ ಸಿಂಹಾಸನವಿಷಯಕ ಮನೋವ್ಯಥೆ ಶ್ರೀಕೃಷ್ಣನಿಗೆ ಇತ್ತೆಂದು ತೋರುವುದು. ಅದು ಸರಿಯಲ್ಲ ಕಾರಣ ಪ್ರಮಾಣದಿಂದ ಆಧಿ ಶಬ್ದಾರ್ಥ ಹೇಳುವರು –

**"ಆಧಿರ್ಮನೋವರೂಥಂ ಚ ಆತ್ಮಾ ಸ್ವಮಿತಿ ಚೋಚ್ಯತೇ" ।**

**ಇತ್ಯಭಿದಾನಂ ।**

ಆಧಿ ಶಬ್ದಕ್ಕೆ ಮನಸ್ಸು ಎಂದೂ ಅರ್ಥ ಇರುವುದರಿಂದ ಪ್ರಕೃತದಲ್ಲಿ ಮನಸ್ಸು ಎಂದಷ್ಟೆ ಅರ್ಥ ಹೊರತು, ಅಲ್ಲಿರುವ ಪೀಡೆ ಎಂದರ್ಥವಲ್ಲ. ಸಿಂಹಾಸನ ನನಗಾಗಲಿ ಎಂಬ ಮನಸ್ಸನ್ನು ಪರಿಹರಿಸಿ ಎಂದರ್ಥ. ಮನೋವ್ಯಥೆ ಬೇಡ ಮನಸ್ಸಾದರೂ ಇತ್ತು ಎಂದಾಯಿತಲ್ಲ ಎಂದರೆ ಅದು ದೋಷವೇ ಅಲ್ಲ. ಅದನ್ನು ಬಿಟ್ಟದ್ದರಿಂದ ವೈರಾಗ್ಯ ರೂಪ ಗುಣವನ್ನೆ ಹೇಳಿದಂತಾಗುವುದು ಎಂದು ಯಾದವಾರ್ಯರ ಅಭಿಪ್ರಾಯ. ಇನ್ನು ಶ್ರೀ ಸತ್ಯಾಭಿನವತೀರ್ಥರ ಅಭಿಪ್ರಾಯ– 'ನೃಪಾಸನಾಧಿಂ ಪರಿಹೃತ್ಯ' ಎಂಬುದಕ್ಕೆ ಸಿಂಹಾಸನವಿಷಯಕ ಮನೋ ವ್ಯಥೆಯನ್ನು

ಪರಿಹರಿಸಿ ಎಂದು ಮತ್ತು ಸಿಂಹಾಸನವಿಷಯಕ ಮನಸ್ಸಿದೆ ಎಂಬ ಭ್ರಮವನ್ನು ಪರಿಹರಿಸಿ ಎಂದೂ ಅರ್ಥ. 'ಪುಂಸ್ಯಾಧಿರ್ಮಾನಸೀವ್ಯಥಾ' ಎಂದು ಲೋಕಪ್ರಸಿದ್ಧ-ವಾದ ಅಮರದ ಪ್ರಕಾರ ಆಧಿಶಬ್ದಕ್ಕೆ ಮನೋವ್ಯಥಾ ಎಂಬ ಅರ್ಥ ಸಿದ್ಧವಾದ್ದ-ರಿಂದ, 'ಉಗ್ರಸೇನನಿಗೆ ಇರುವ ಸಿಂಹಾಸನ ವಿಷಯಕ ಮನೋವ್ಯಥೆಯನ್ನು ಪರಿಹರಿಸಿ' ಎಂಬ ಅರ್ಥವನ್ನು ಶಿಷ್ಯರೇ ಮಾಡಿಕೊಳ್ಳುವರು ಎಂದು ಆ ಅರ್ಥವನ್ನು ಹೇಳದೆ ಆಚಾರ್ಯರು ಮನೋವಾಚಕವಾದ ಆಧಿಶಬ್ದಕ್ಕೆ ಮನಸ್ಸಿದೆ ಎಂಬ ಭ್ರಮಲಕ್ಷಕತ್ವವನ್ನಂಗಿಕರಿಸಿ (ಲಕ್ಷಣಾವೃತ್ತಿಯಿಂದ ಆಧಿಶಬ್ದಕ್ಕೆ 'ಮನಃ ವರ್ತತೇ ಇತಿ ಭ್ರಮಃ' ಎಂದರ್ಥ) ನೃಪಾಸನಾಧಿಂ ಪರಿಹೃತ್ಯ ಎಂಬುದಕ್ಕೆ ಕೃಷ್ಣನಿಗೆ ಸಿಂಹಾಸನ ಬೇಕೆಂಬ ಮನಸ್ಸಿದೆ ಎಂಬ ಜನರ ಭ್ರಮೆಯನ್ನು ಪರಿಹರಿಸಿ ಎಂಬ ಅರ್ಥವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಆಧಿಶಬ್ದ ಮನೋವಾಚಕ ಎಂಬ ವಿಷಯದಲ್ಲಿ ಅಭಿಧಾನ ಹೇಳಿರುವರು ಎಂದು ಭಾವ ॥೨೯॥

**ಕಚ್ಚಿದ್ಧರೇಃ ಸೌಮ್ಯ ಸುತಃ ಸದೃಕ್ಷ**
**ಆಸ್ತೇಽಗ್ರಣೀ ರಥಿನಾಂ ಸಾಧು ಸಾಂಬಃ ।**
**ಅಸೂತ ಯಂ ಜಾಂಬವತೀ ವ್ರತಾಢ್ಯಾ**
**ದೇವಂ ಗುಹಂ ಯೋಽಂಬಿಕಯಾ ಧೃತೋಽಗ್ರೇ ॥೩೦॥**

ಹೇ ಸೌಮ್ಯ=ಉದ್ಧವನೇ ಅಗ್ರೇ=ಹಿಂದಿನ ಜನ್ಮದಲ್ಲಿ ಯಃ=ಯಾವನು ಅಂಬಿಕಯಾ=ಪಾರ್ವತಿಯಿಂದ ಧೃತಃ=ಮಗನೆಂದು ರಕ್ಷಿಸಲ್ಪಟ್ಟನೋ, ಯಂ=ಯಾವ ಗುಹಂ ದೇವಂ=ಸ್ಕಂದನನ್ನು ವ್ರತಾಢ್ಯಾ=ವ್ರತಾನುಷ್ಠಾನದಿಂದ ಕೂಡಿದ ಜಾಂಬವತೀ=ಜಾಂಬವತಿಯು ಅಸೂತ=ಪ್ರಸವಿಸಿದಳೋ ಸಃ=ಅಂಥ ರಥಿನಾಂ ಅಗ್ರಣೀಃ=ರಥಿಕರಲ್ಲಿ ಶ್ರೇಷ್ಠನಾದ ಸದೃಕ್ಷಃ=ಮಗನಾಗಲು ಯೋಗ್ಯನಾದ, ಹರೇಃ ಸುತಃ ಸಾಂಬಃ ಸಾಧು ಆಸ್ತೇ ಕಚ್ಚಿತ್=ಹರಿಯ ಪುತ್ರನಾದ ಸಾಂಬನು ಸುಖವಾಗಿರುವನೆ ?

ಸ್ಕಂದನ ಜನ್ಮವಾದ ಕ್ರಮ ಹೀಗೆ – ರುದ್ರದೇವರು ಅಗ್ನಿ ಮುಖದಲ್ಲಿ ರೇತಸ್ಸನ್ನು ವಿಸರ್ಜಿಸಿದಾಗ ಅದರ ತಾಪ ತಡೆಯಲಾಗದೆ ಅಗ್ನಿಯು ಗಂಗೆಯಲ್ಲಿ ಹಾಕುವನು. ಅವಳು ಕೂಡ ಅದರ ತಾಪ ತಡೆಯದೇ ದಂಡೆಯಲ್ಲಿರುವ ಹುಲ್ಲಿನಲ್ಲಿ ಹಾಕುವಳು. ಅಲ್ಲಿ ಮಗು ಉತ್ಪನ್ನವಾಗುವುದು. ಆಗ ಆರು ಜನ ಕೃತ್ತಿಕೆಯರು ಸ್ತನಪಾನ ಮಾಡಿಸಿದಾಗ ಆರು ಮುಖಗಳಾದವು. ನಂತರ ಆ ಮಾರ್ಗದಿಂದ ಆಕಾಶದಲ್ಲಿ ತನ್ನ ಪತಿಯೊಡನೆ ಹೋಗುತ್ತಿರುವ ಪಾರ್ವತಿಯು ಹಾಲು ಸೋರಿದವಳಾಗಿ ರುದ್ರದೇವರ ಮಾತಿನ ಪ್ರಕಾರ ಮಗುವನ್ನು ಸ್ವೀಕರಿಸಿದಳು. ಹೊರತು ಗರ್ಭದಲ್ಲಿ

ಧಾರಣ ಮಾಡಿಲ್ಲ ಎಂದು ಪುರಾಣಗಳಲ್ಲಿ ಪ್ರಸಿದ್ಧವಿದೆ. ಕಾರಣ 'ಅಗ್ರೇ ಅಂಬಿಕಯಾ ಧೃತಃ' ಎಂಬುದಕ್ಕೆ ರಕ್ಷಣೆಗಾಗಿ ತನ್ನಲ್ಲಿ ಇಟ್ಟುಕೊಂಡ ಎಂದರ್ಥ ಮಾಡಬೇಕು ಹೊರತು ಶ್ರೀಧರೀ ವ್ಯಾಖ್ಯಾನದಂತೆ ಗರ್ಭದಲ್ಲಿ ಧರಿಸಿದ ಎಂದರ್ಥ ಮಾಡಬಾರದು. ಅಥವಾ 'ಬುಧ್ಯಾಂ ಉಮಾಯಾಂ ಸಃ ಶಿವಃ ತ್ರಿರೂಪಃ ಮನಶ್ಚ ವೈಕಾರಿಕದೇವಸಂಘಾನ್' ಎಂಬ ವಚನದಲ್ಲಿ ಮನಶ್ಶಬ್ದದಿಂದ ಸ್ಕಂದ ಮತ್ತು ಇಂದ್ರರನ್ನು ತೆಗೆದುಕೊಂಡದ್ದರಿಂದ, ಅಗ್ರೆ=ಆದಿಸೃಷ್ಟಿಯಲ್ಲಿ ಅಂಬಿಕಯಾ= ಉಮಾಳಿಂದ ಧೃತಃ=ಧರಿಸಲ್ಪಟ್ಟ ಎಂದೂ ಅರ್ಥ ಮಾಡಬಹುದು ॥೩೦॥

**ಕ್ಷೇಮಂ ಸ ಕಚ್ಚಿದ್ ಯುಯುಧಾನ ಆಸ್ತೇ**
**ಯಃ ಫಲ್ಗುನಾಲ್ಲಬ್ಧಧನೂರಹಸ್ಯಃ ।**
**ಲೇಭೇಽಂಜಸಾಽಧೋಕ್ಷಜಸೇವಯೈವ**
**ಗತಿಂ ತದೀಯಾಂ ಯತಿಭಿರ್ದುರಾಪಾಂ ॥೩೧॥**

ಯಃ=ಯಾವನು, ಫಲ್ಗುನಾತ್=ಅರ್ಜುನನಿಂದ, ಲಬ್ಧಧನೂರಹಸ್ಯಃ=ಹೊಂದಲ್ಪಟ್ಟ ಧನುರ್ವಿದ್ಯಾರಹಸ್ಯವುಳ್ಳವನೋ ಮತ್ತು, ಅಧೋಕ್ಷಜಸೇವಯಾ ಏವ=ಶ್ರೀಹರಿಯ ಸೇವೆಯಿಂದಲೇ, ಯತಿಭಿಃ ದುರಾಪಾಂ=ಯತಿಗಳಿಂದಲೂ ಕಷ್ಟಸಾಧ್ಯವಾದ, ತದೀಯಾಂ, ಗತಿಂ=ಭಗವಂತನ ಜ್ಞಾನವನ್ನು ಅಂಜಸಾ ಲೇಭೇ=ಚೆನ್ನಾಗಿ ಪಡೆದನೋ, ಸಃ ಯುಯುಧಾನಃ=ಆ ಸಾತ್ಯಕಿಯು, ಕ್ಷೇಮಂ ಆಸ್ತೇ ಕಚ್ಚಿತ್=ಕ್ಷೇಮವಾಗಿರುವನೇ ?

**ಕಚ್ಚಿದ್ ಬುಧಃ ಸ್ವಸ್ತ್ಯನಮೀವ ಆಸ್ತೇ**
**ಶ್ವಫಲ್ಕಪುತ್ರೋ ಭಗವತ್ಪ್ರಪನ್ನಃ ।**
**ಯಃ ಕೃಷ್ಣಪಾದಾಂಕಿತಮಾರ್ಗಪಾಂಸು-**
**ಷ್ವಚೇಷ್ಟತ ಪ್ರೇಮವಿಭಿನ್ನಧೈರ್ಯಃ ॥೩೨॥**

ಬುಧಃ=ಜ್ಞಾನಿಯಾದ, ಅನಮೀವಃ=ಪಾಪರಹಿತನಾದ, ಭಗವತ್ಪ್ರಪನ್ನಃ=ಶ್ರೀಕೃಷ್ಣನನ್ನು ಶರಣು ಹೊಂದಿದ, ಪ್ರೇಮವಿಭಿನ್ನಧೈರ್ಯಃ=ಭಕ್ತ್ಯುದ್ರೇಕದಿಂದ ನಷ್ಟವಾದ (ರಾಜನಾದ್ದರಿಂದ ನಾನು ಧೂಳಿಯಲ್ಲಿ ಹೊರಳಾಡಬಾರದು ಎಂಬ ಭಾವನೆ ಇರಲಿಲ್ಲ) ಮನೋದಾರ್ಢ್ಯವುಳ್ಳ ಯಃ=ಯಾವನು ಕೃಷ್ಣಪಾದಾಂಕಿತಮಾರ್ಗ- ಪಾಂಸುಷು=ಶ್ರೀಕೃಷ್ಣನ ಪಾದದಿಂದ ಚಿಹ್ನಿತವಾದ ದಾರಿಯಲ್ಲಿಯ ಧೂಳಿನಲ್ಲಿ, ಅಚೇಷ್ಟತ=ಹೊರಳಾಡಿದನೋ, ಸಃ=ಅಂಥ, ಶ್ವಫಲ್ಕಪುತ್ರಃ=ಅಕ್ರೂರನು, ಸ್ವಸ್ತಿ ಆಸ್ತೇ ಕಿಲ=ಸುಖವಾಗಿರುವನಷ್ಟೇ ? ॥೩೨॥

**ಕಚ್ಚಿಚ್ಛಿವಂ ದೇವಕಭೋಜಪುತ್ರ್ಯಾ**
**ವಿಷ್ಣುಪ್ರಜಾಯಾ ಇವ ದೇವಮಾತುಃ ।**
**ಯಾ ವೈ ಸ್ವಗರ್ಭೇಣ ಬಭಾರ ದೇವಂ**
**ತ್ರಯೀ ಯಥಾ ಯಜ್ಞವಿತಾನಮರ್ಥಂ ॥೩೩॥**

ಯಥಾ=ಹೇಗೆ, ತ್ರಯೀ=ವೇದವು, ಯಜ್ಞವಿತಾನಂ ಅರ್ಥಂ=ಯಾಗಗಳ ವಿಸ್ತಾರರೂಪವಾದ ಅರ್ಥವನ್ನು ಅಥವಾ ಯಜ್ಞ ಅಂದರೆ ವಿಷ್ಣುವು ಅವನ, ವಿತಾನಂ=ವಿಭೂತಿಗಳನ್ನು ಮಹಾತ್ಮ್ಯವಿಸ್ತಾರವನ್ನು, ಬಿಭರ್ತಿ=ತಾತ್ಪರ್ಯ ಪೂರ್ವಕವಾಗಿ ಪ್ರತಿಪಾದಿಸುವದೋ, ತಥಾ=ಹಾಗೆ, ಯಾ=ಯಾವಳು, ಸ್ವಗರ್ಭೇಣ=ತನ್ನ ಉದರದಿಂದ, ದೇವಂ=ಶ್ರೀಹರಿಯನ್ನು, ಬಭಾರ=ಧರಿಸಿದಳೋ, ವೈ=ಅವಳ ಪೂಣ್ಯಾತಿಶವು ಪ್ರಸಿದ್ಧ (ಅಥವಾ ದೇವಕಿಯು ಯಾವಾಗಲೋ ಒಮ್ಮೆ ಗರ್ಭ ಧರಿಸಿದಳು. ವೇದವು ಸರ್ವದಾ ಪ್ರತಿಪಾದಿಸುವುದು. ಕಾರಣ ದೃಷ್ಟಾಂತ ಹೇಗೆ ಎಂದರೆ ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಸಂಪೂರ್ಣ ಸಾಮ್ಯಬೇಕಿಲ್ಲ ಸ್ವಲ್ಪ ಸಾಮ್ಯವಿದ್ದರೂ ಸಾಕು ಎಂಬುದು ಪ್ರಸಿದ್ಧ ಎನ್ನುತ್ತಾರೆ ವಿಜಯಧ್ವಜರು) ಮತ್ತು ದೇವಮಾತುಃ ಇವ=ಅದಿತಿಯಂತೆ, ವಿಷ್ಣುಪ್ರಜಾಯಾಃ=ಶ್ರೀಹರಿಯೇ ಮಗನಾಗಿ-ವುಳ್ಳ, ದೇವಕಭೋಜಪುತ್ರ್ಯಾಃ=ಭೋಜಕುಲದಲ್ಲಿ ಜನಿಸಿದ ದೇವಕನ ಮಗಳಾದ ದೇವಕಿಗೆ ಶಿವಂ ಕಚ್ಚಿತ್=ಕುಶಲವಷ್ಟೇ ? ॥೩೩॥

**ಅಪಿ ಸ್ವಿದಾಸ್ತೇ ಭಗವಾನ್ ಸುಖಂ ವಾ**
**ಯಃ ಸಾತ್ವತಾಂ ಕಾಮದುಘೋಽನಿರುದ್ಧಃ ।**
**ಯಮಾಮನಂತಿಸ್ಮ ಹಿ ಶಬ್ದಯೋನಿಂ**
**ಮನೋಮಯಂ ಸತ್ವತುರೀಯಮರ್ಥಂ ॥೩೪॥**

ಯಃ=ಯಾವನು, ಸಾತ್ವತಾಂ=ಯಾದವರಿಗೆ, ಕಾಮದುಘಃ=ಅಭೀಷ್ಟಪ್ರದನೋ, ಯಂ=ಯಾವನನ್ನು,ಶಬ್ದಯೋನಿಂ=ವೇದಗಳಿಂದ ಮಾತ್ರ ತಿಳಿಯುವನು ಎಂದು, ಮನೋಮಯಂ=ಜ್ಞಾನರೂಪನೆಂದೂ, ಸತ್ವತುರೀಯಂ ಅರ್ಥಂ=ವಾಸುದೇವನಿಂದ ನಾಲ್ಕನೆಯವನೆಂದೂ, ಆಮನಂತಿ=ಹೇಳುವರೋ, ಸಃ ಭಗವಾನ್=ಪೂಜ್ಯನಾದ, ಅನಿರುದ್ಧೋ ವಾ=ಅನಿರುದ್ಧನಾದರೂ, ಸುಖಂ ಆಸ್ತೇ ಅಪಿಸ್ವಿತ್=ಸುಖವಾಗಿ-ರುವನಷ್ಟೇ ? ಇಲ್ಲಿ ಕೊಟ್ಟಿರುವ ವೇದ್ಯೈಕವೇದ್ಯತ್ವಮುಂತಾದ ವಿಶೇಷಣಗಳು, ಬಲರಾಮನಿಗೆ ಪುರಾಣಪುರುಷ ಮುಂತಾಗಿ ಹೇಳಿದಂತೆ ಅನಿರುದ್ಧನಲ್ಲಿ ಆವಿಷ್ಟ-ವಾದ ಶ್ರೀಹರಿಯ ರೂಪಕ್ಕೆ ಹೇಳಿದವುಗಳೆಂದು ತಿಳಿಯಬೇಕು. ॥೩೪॥

**ಅಪಿ ಸ್ವಿದನ್ಯೇ ಚ ನಿಜಾತ್ಮದೈವ-**
**ಮನನ್ಯವೃತ್ತ್ಯಾ ಸಮನುವ್ರತಾ ಯೇ ।**
**ಹಾರ್ದಿಕ್ಯಸತ್ಯಾತ್ಮಜಚಾರುದೇಷ್ಣ-**
**ಗದಾದಯಃ ಸ್ವಸ್ತಿ ಚರಂತಿ ಸೌಮ್ಯ ॥೩೫॥**

ಹೇ ಸೌಮ್ಯ=ಎಲೋ ಉದ್ಧವನೇ ನಿಜಾತ್ಮದೈವಂ=ಸ್ವಾಭಾವಿಕವಾಗಿ ತಮ್ಮ ದೇವತೆಯಾದ ಶ್ರೀಕೃಷ್ಣನನ್ನು ಅನನ್ಯವೃತ್ತ್ಯಾ=ಅನನ್ಯ ಭಕ್ತಿಯಿಂದ ಸಮನುವ್ರತಾಃ= ಅನುಸರಿಸುವ, ಹಾರ್ದಿಕ್ಯಸತ್ಯಾತ್ಮಜ=ಸತ್ಯಭಾಮೆಯ ಮಗನಾದ ಭಾನುವು, ಚಾರುದೇಷ್ಣಃ=ಈ ಹೆಸರಿನ ರುಕ್ಮಿಣಿಯ ಮಗನು, ಗದಃ=ವಸುದೇವನ ಮಗ ಶ್ರೀಕೃಷ್ಣನ ತಮ್ಮನೇ ಮೊದಲಾದವರು, ಅನ್ಯೇ=ಹಿಂದೆ ಹೇಳಿದವರಲ್ಲದೆ ಇವರೆಲ್ಲ ಸ್ವಸ್ತಿ ಚರಂತಿ ಅಪಿಸ್ವಿತ್=ಸುಖವಾಗಿ ಸಂಚರಿಸುವರಷ್ಟೇ? ॥೩೫॥

**ಅಪಿ ಸ್ವದೋರ್ಭ್ಯಾಂ ವಿಜಯಾಚ್ಯುತಾಭ್ಯಾಂ**
**ಧರ್ಮೇಣ ಧರ್ಮಃ ಪರಿಪಾತಿ ಸೇತುಂ ।**
**ದುರ್ಯೋಧನೋಽತಪ್ಯತ ಯತ್ಸಭಾಯಾಂ**
**ಸಾಮ್ರಾಜ್ಯಲಕ್ಷ್ಮ್ಯಾ ವಿಜಯಾನುವೃತ್ತ್ಯಾ ॥೩೬॥**

ಯತ್ಸಭಾಯಾಂ=ಯಾವ ಯುದಿಷ್ಠಿರನ ಸಭೆಯಲ್ಲಿ ವಿಜಯಾನುವೃತ್ತ್ಯಾ= ದಿಗ್ವಿಜಯವನ್ನು ಅನುಸರಿಸಿರುವ ಅಥವಾ ಅರ್ಜುನನಿಂದ ಉತ್ಪತ್ತಿಯುಳ್ಳ ಅಥವಾ ಶ್ರೀಹರಿಯನ್ನನುಸರಿಸುವ, ಸಾಮ್ರಾಜ್ಯಲಕ್ಷ್ಮ್ಯಾ=ಸಾಮ್ರಜ್ಯದ ಸಂಪತ್ತನ್ನು ಕಂಡು, ದೂರ್ಯೋಧನಃ=ದುರ್ಯೋಧನನು,ಅತಪ್ಯತ=ದುಃಖ ಪಟ್ಟನೋ,ಸಃ ಧರ್ಮಃ= ಅಂಥ ಧರ್ಮರಾಜನು, ವಿಜಯಾಚ್ಯುತಾಭ್ಯಾಂ=ವಿಜಯಅವ್ಯಭಿಚಾರಿಗಳಾದ, ಸ್ವದೋರ್ಭ್ಯಾಂ=ತನ್ನ ಬಾಹುಗಳಿಂದ ಅಥವಾ, ಸ್ವದೋರ್ಭ್ಯಾಂ=ತನ್ನ ಬಾಹುಗಳಂತಿರುವ ವಿಜಯಾಚ್ಯುತಾಭ್ಯಾಂ=ಅರ್ಜುನ, ಶ್ರೀಕೃಷ್ಣರಿಂದ ಕೂಡಿಕೊಂಡು, ಧರ್ಮೇಣ= ಧರ್ಮಮಾರ್ಗದಿಂದ,ಸೇತುಂ=ಧರ್ಮಮರ್ಯಾದೆಯನ್ನು, ಪರಿಪಾತಿ ಅಪಿ ಕಿಂ= ಕಾಪಾಡುತ್ತಿರುವನಷ್ಟೇ? ಐಶ್ವರ್ಯ ಮದದಿಂದ ಇತರರಿಗೆ ಧರ್ಮಸೇತುವನ್ನು ಮೀರುವ ಸಂಭವವಿರುಮದು ಅದು ಇವನಿಗಿಲ್ಲವೆಂದು ತಿಳಿಯುವುದು ಪ್ರಶ್ನೆಗೆ ಕಾರಣ ॥೩೬॥

**ಕಿಂ ವಾ ಕೃತಾಘೇಷ್ವಘಮತ್ಯಮರ್ಷೀ**
**ಭೀಮೋಽಹಿವದ್ ದೀರ್ಘತಮಂ ವ್ಯಮುಂಚತ್ ।**

**ಯಸ್ಯಾಂಘ್ರಿಪಾತಂ ರಣಭೂರ್ನ ಸೇಹೇ**
**ಮಾರ್ಗಂ ಗದಾಯಾಶ್ಚರತೋ ವಿಚಿತ್ರಂ ॥೩೭॥**

ಯಸ್ಯ=ಯಾವ ಭೀಮಸೇನನ, ಗದಾಯಾಃ=ಗದಾಯುದ್ಧದ, ವಿಚಿತ್ರಂ ಮಾರ್ಗಂ=ವಿವಿಧ ರೀತಿಯನ್ನು, ಚರತಃ=ಸಂಚರಿಸುವವನ, ಅಂಘ್ರಿಪಾತಂ=ಹೆಜ್ಜೆ ಇಡುವುದನ್ನು, ರಣಭೂಃ=ಯುದ್ಧಭೂಮಿಯು, ನ ಸೇಹೆ=ಸಹಿಸಿಲಿಲ್ಲವೋ, ಸಃ= ಅಂತಹ, ಅತ್ಯಮರ್ಷೀ=ಬಹಳ ಕೋಪವುಳ್ಳ, ಭೀಮಃ=ಭೀಮಸೇನನು, ಕೃತಾಘೇಷು= ಅಪರಾಧ ಮಾಡಿದ ದುರ್ಯೋಧನಾದಿಗಳಲ್ಲಿ, ಅಹಿವತ್=ನಾಗರಹಾವಿನಂತೆ, ದೀರ್ಘತಮಂ=ಬಹುಕಾಲ ಇರುವ, ಅಘಂ=ಪ್ರತೀಕಾರ ಬುದ್ಧಿಯನ್ನು ವ್ಯಮುಂಚತ್ ಕಿಂ=ಬಿಟ್ಟನೇನು ? ಅಂದರೆ ತಾನು ಮಾಡಬೇಕೆಂದುಕೊಂಡಿರುವ ಪ್ರತ್ಯಪಕಾರ ಮಾಡಿದನೇನು ಎಂದರ್ಥ.

ಮೇಲಿನ ಶ್ಲೋಕದಲ್ಲಿ 'ಅಘಂ ವ್ಯಮುಂಚತ್' ಎಂಬುದಕ್ಕೆ ತನ್ನಲ್ಲಿರುವ ಪಾಪವನ್ನು ಅವರಲ್ಲಿ ಬಿಟ್ಟನು ಎಂದು ವಿಪರೀತ ಅರ್ಥವಾಗುವುದು ಕಾರಣ ತಾತ್ಪರ್ಯ ಹೇಳುವರು –

**ಅಘಂ ವ್ಯಮುಂಚತ್ ಪುನರಪರಾಧಬುದ್ಧಿಂ ಹಿತ್ವಾ ಆಸ್ತೇ ।**

ಅಪಕಾರ ಮಾಡಿದನೇ ಇಲ್ಲವೆ ಎಂದು ಭಾವ ॥೩೭॥

**ಕಚ್ಚಿದ್‌ಯಶೋಧಾ ರಥಯೂಥಪಾನಾಂ**
**ಗಾಂಢೀವಧನ್ವೋಪರತಾರಿರಾಸ್ತೇ ।**
**ಅಲಕ್ಷಿತೋ ಯಚ್ಛರಕೂಟಗೂಢೋ**
**ಮಾಯಾಕಿರಾತೋ ಗಿರಿಶಸ್ತುತೋಷ ॥೩೮॥**

ಯಚ್ಛರಕೂಟಗೂಢಃ=ಯಾವನ ಬಾಣಗಳ ಸಮೂಹದಿಂದ, ಗೂಢಃ= ಮುಚ್ಚಲ್ಪಟ್ಟವನಾಗಿ, ಅಲಕ್ಷಿತಃ=ಅಜ್ಞಾತನಾದ, ಮಾಯಾಕಿರಾತಃ=ತನ್ನ ಇಚ್ಛೆಯಿಂದ ಸ್ವೀಕೃತವಾದ ಬೇಡರವೇಷವುಳ್ಳ, ಗಿರಿಶಃ=ರುದ್ರದೇವನು ತುತೋಷ=ಸಂತೋಷ-ಪಟ್ಟನೋ, ಸಃ=ಅಂಥ, ರಥಯೂಥಪಾನಾಂ=ಸೇನಾಪತಿಗಳ, (ಮಹಾರಥಿಕರ) ಯಶೋಧಾಃ=ಕೀರ್ತಿಯನ್ನು ಧರಿಸಿದ, ಗಾಂಡೀವಧನ್ವಾ=ಅರ್ಜುನನು, ಉಪರತಾರಿಃ ಆಸ್ತೇ ಕಚ್ಚಿತ್=ಶತ್ರುಗಳನ್ನು ಸಂಹರಿಸಿ ಇರುವನಷ್ಟೇ ? ॥೩೮॥

**ಯಮಾವುತ ಸ್ವಿತ್ ತನಯೌ ಚ ಮಾದ್ರ್ಯಾಃ**
**ಪಾರ್ಥೈರ್ವೃತೌ ಪಕ್ಷ್ಮಭಿರಕ್ಷಣೀವ ।**

**ರೇಮಾತ ಉದ್ಧೃತ್ಯ ಮೃಧೇ ಸ್ವರಿಕ್ಥಂ**
**ಸುಧಾಂ ಸುಪರ್ಣಾವಿವ ವಜ್ರಿವಕ್ತ್ರಾತ್ ॥೩೯॥**

ವಜ್ರಿವಕ್ತ್ರಾತ್=ಇಂದ್ರನ ಮುಖದಿಂದ,ಸುಪರ್ಣಾವಿವ=ಎರಡು ಗರುಡಗಳಂತೆ (ಅಭೂತೋಪಮಾ ಒಂದು ವೇಳೆ ಎರಡು ಗರುಡಗಳಿದ್ದು ಅವು ಇಂದ್ರನಿಂದ ಅಮೃತವನ್ನು ತಂದರೆ ಅದರಂತೆ ಎಂದರ್ಥ) ಮೃಧೇ=ಯುದ್ಧದಲ್ಲಿ ಸ್ವರಿಕ್ಥಂ=ತಮ್ಮರಾಜ್ಯವೆಂಬ ಧನವನ್ನು, ಉದ್ಧೃತ್ಯ=ವೈರಿಗಳಿಂದ ಪಡೆದುಕೊಂಡು, ಪಕ್ಷ್ಮಭಿಃ=ರೆಪ್ಪೆಗಳಿಂದ, ಅಕ್ಷಿಣೀ ಇವ=ಕಣ್ಣುಗಳಂತೆ, ಪಾರ್ಥೈಃ=ಕುಂತೀಪುತ್ರರಿಂದ, ವೃತೌ=ರಕ್ಷಿಸಲ್ಪಟ್ಟು, ಮಾದ್ರ್ಯಾಃ ತನಯೌ=ಮಾದ್ರಿಯ ಮಕ್ಕಳಾದ ನಕುಲ ಸಹದೇವ-ರೆಂಬ, ಯಮೌ=ಅವಳಿಗಳು, ರೇಮಾತೇ ಉತ ಸ್ವಿತ್=ಕ್ರೀಡಿಸುತ್ತಿರುವರಷ್ಟೇ?

**ಅಹೋ ಪೃಥಾಪಿ ಧ್ರಿಯತೇಽರ್ಭಕಾರ್ಥೇ**
**ರಾಜರ್ಷಿವರ್ಯೇಣ ವಿನಾಪಿ ತೇನ ।**
**ಯಸ್ತ್ವೇಕವೀರೋಽತಿರಥೋ ವಿಜಿಗ್ಯೇ**
**ಧನುರ್ದ್ವಿತೀಯಃ ಕಕುಭಶ್ಚತಸ್ರಃ ॥೪೦॥**

ಯಃ=ಯಾವನು, ಅತಿರಥಃ=ಮಹಾಪರಾಕ್ರಮಿಯು, ಏಕವೀರಃ=ಮುಖ್ಯ-ಸಮರ್ಥನು, ಧನುರ್ದ್ವಿತೀಯಃ=ಧನುಸ್ಸೇ ಎರಡನೆಯದಾಗಿ ಉಳ್ಳವನು, ಚತಸ್ರಃ ಕಕುಭಃ=ನಾಲ್ಕೂ ದಿಕ್ಕುಗಳನ್ನು ವಿಜಿಗ್ಯೇ=ಗೆದ್ದನೋ (ಕೇವಲ ಧನುಸ್ಸಿನ ಸಹಾಯದಿಂದ ಒಬ್ಬನೇ ಗೆದ್ದನೋ ಎಂದರ್ಥ) ತೇನ=ಅಂಥ ರಾಜರ್ಷಿ-ವರ್ಯೇಣ ವಿನಾ=ರಾಜರ್ಷಿಯಾದ ಪಾಂಡುರಾಜನಿಲ್ಲದೇ ಅರ್ಭಕಾರ್ಥೇ=ಮಕ್ಕಳಿಗಾಗಿ,ಪೃಥಾಽಪಿ=ಕುಂತಿಯಾದರೂ, ಧ್ರಿಯತೇ=ಪ್ರಾಣಧಾರಣ ಮಾಡಿರು-ವಳು, ಅಹೋ=ಆಶ್ಚರ್ಯ ಅವಳ ಕುಶಲವನ್ನೇನು ಕೇಳುವುದು ಎಂದು ಭಾವ

**ಸೌಮ್ಯಾನುಶೋಚೇ ತಮಧಃ ಪತಂತಂ**
**ಭ್ರಾತ್ರೇ ಪರೇತಾಯ ವಿದುದ್ರುಹೇ ಯಃ ।**
**ನಿರ್ಯಾಪಿತೋ ಯೇನ ಸುಹೃತ್ ಸ್ವಪುರ್ಯಾ**
**ಅಹಂ ಸ್ವಪುತ್ರಾನ್ ಸಮನುವ್ರತೇನ ॥೪೧॥**

ಹೇ ಸೌಮ್ಯ=ಸೋಮಪಾನಾರ್ಹನಾದ ಉದ್ಧವನೇ, ಯಃ=ಯಾವನು, ಪರೇತಾಯ=ಮೃತನಾದ, ಭ್ರಾತ್ರೇ=ಪಾಂಡುರಾಜನಿಗೆ, ವಿದುದ್ರುಹೇ=ಅವನ ಮಕ್ಕಳಿಗೆ ರಾಜ್ಯ ಕೊಡದೆ ದ್ರೋಹ ಬಗೆದನೋ, ಸ್ವಪುತ್ರಾನ್ ಸಮನುವ್ರತೇನ=ತನ್ನ ಮಕ್ಕಳನ್ನನುಸರಿಸುವ, ಯೇನ=ಯಾವನಿಂದ, ಸುಹೃತ್ ಅಹಂ=ತಮ್ಮನಾದ

ನಾನು, ಸ್ವಪುರ್ಯಾತ್ ನಿರ್ಯಾಪಿತಃ=ತನ್ನ ಊರಿನಿಂದ ಹೊರಗೆ ಹಾಕಲ್ಪಟ್ಟೆನೋ, ಅಧಃಪತಂತಂ=ಪಾಪದಿಂದ ಕೆಳಗೆ ಬೀಳುವ, ತಂ=ಧೃತರಾಷ್ಟ್ರನನ್ನು ಕುರಿತು, ಅನುಶೋಚೇ=ದುಃಖಪಡುವೆನು. ಅವನು ಕುಶಲಪ್ರಶ್ನೆಗೆ ಯೋಗ್ಯನಲ್ಲವೆಂದರ್ಥ.

ಊರಿನಿಂದ ಹೊರಗೆ ಹಾಕಿದ್ದರಿಂದ ನನಗೇನು ಖೇದವಿಲ್ಲವೆಂದು ಹೇಳುವನು-

**ಸೋಽಹಂ ಹರೇರ್ಮರ್ತ್ಯವಿಡಂಬನೇನ**
**ದೃಶೋ ನೃಣಾಂ ಚಾಲಯತೋ ವಿಧಾತುಃ ।**
**ನಾನ್ಯೋಪಲಕ್ಷ್ಯಃ ಪದವೀಂ ಪ್ರಸಾದಾತ್**
**ಚರಾಮಿ ಪಶ್ಯನ್ ಗತವಿಸ್ಮಯೋಽತ್ರ ॥೪೨॥**

ಸಃ ಅಹಂ=ಹೊರಗೆ ಹಾಕಲ್ಪಟ್ಟ ನಾನು, ಮರ್ತ್ಯವಿಡಂಬನೇನ=ತನ್ನ ಮಹಾತ್ಮ್ಯ ತಿಳಿಯದಂತೆ ಮನುಷ್ಯರ ಅನುಕರಣ ಮಾಡುವುದರಿಂದ, ನೃಣಾಂ=ಜನರ, ದೃಶಃ= ಶ್ರೀಹರಿಯೇ ಭೂಭಾರಹರಣಕ್ಕಾಗಿ ಅವತರಿಸಿರುವನು ಎಂಬ ಭಾವನೆ- ಯನ್ನು, ಚಾಲಯತಃ=ಚಲಿಸುವಂತೆ ಮಾಡುವ,(ಭ್ರಮೆತರಿಸುವ) ವಿಧಾತುಃ=ಸೃಷ್ಟಿಕರ್ತನಾದ, ಹರೇಃ=ಪರಮಾತ್ಮನ,ಪದವೀಂ=ಮಹಾತ್ಮ್ಯವನ್ನು,ಪಶ್ಯನ್=ನೋಡುತ್ತ, ಗತವಿಸ್ಮಯಃ= ಮನೋವಿಕಾರವಿಲ್ಲದೇ, ನಾನ್ಯೋಪಲಕ್ಷ್ಯಃ=ಬೇರೆಯವರಿಗೆ ತಿಳಿಯದಂತೆ, ಪ್ರಸಾದಾತ್=ಅವನ ಅನುಗ್ರಹದಿಂದ, ಅತ್ರ=ವನದಲ್ಲಿ, ಚರಾಮಿ=ಸಂಚರಿಸುವೆನು. ಶ್ರೀಕೃಷ್ಣನೇ ತನ್ನ ಮಹಾತ್ಮ್ಯವನ್ನು ಅಡಗಿಸುವನಾಗಿ ತಾನು ಮನುಷ್ಯನೆಂಬ ಭ್ರಮೆ ಹುಟ್ಟಿಸಿ ಧೃತರಾಷ್ಟ್ರಾದಿಗಳನ್ನು ಪಾಪಕ್ಕೆ ಗುರಿ ಮಾಡುವನು. ಇದೆಲ್ಲ ಅವನ ಪ್ರಸಾದವೆಂದೇ ತಿಳಿದು ಸುಖವಾಗಿ ಸಂಚರಿಸುವೆನೆಂದರ್ಥ ॥೪೨॥

ಭೂಭಾರ ಹರಣಕ್ಕೆ ಅವತರಿಸಿ ಶ್ರೀಕೃಷ್ಣ ಪಾಂಡವದ್ರೋಹಿ ದುರ್ಯೋಧ- ನಾದಿಗಳನ್ನು ತಕ್ಷಣ ಏಕೆ ಕೊಲ್ಲಲಿಲ್ಲವೆಂದು ಹೇಳುವರು -

**ನೂನಂ ನೃಪಾಣಾಂ ತ್ರಿಮದೋತ್ಪಥಾನಾಂ**
**ಮಹೀಂ ಮುಹುಶ್ಚಾಲಯತಾಂ ಚಮೂಭಿಃ ।**
**ವಧಾತ್ ಪ್ರಪನ್ನಾರ್ತಿಜಿಹೀರ್ಷಯೇಶೋ**
**ಹ್ಯುಪೇಕ್ಷತಾಘಂ ಭಗವಾನ್ ಕುರೂಣಾಂ ॥೪೩॥**

ತ್ರಿಮದೋತ್ಪಥಾನಾಂ=ವಿದ್ಯಾಮದ, ಧನಮದ, ಕುಲೀನಮದ ಇವುಗಳಿಂದ ದಾರಿಯನ್ನು ಬಿಟ್ಟಿರುವ ಚಮೂಭಿಃ=ಹದಿನೆಂಟು ಅಕ್ಷೌಹಿಣೀ ಸೈನ್ಯದಿಂದ ಮಹೀಂ=ಭೂಮಿಯನ್ನು, ಮುಹುಃ ಚಾಲಯತಾಂ=ಮತ್ತೆ ಮತ್ತೆ ನಡುಗಿಸುವ, ನೃಪಾಣಾಂ=ರಾಜರ, ವಧಾತ್=ಸಂಹಾರದಿಂದ ಪ್ರಪನ್ನಾರ್ತಿಜಿಹೀರ್ಷಯಾ=

ಶರಣಾಗತಳಾದ ಭೂಮಿಯ ಭಾರನಿಮಿತ್ತ ದುಃಖವನ್ನು ಪರಿಹರಿಸುವ ಇಚ್ಛೆಯಿಂದ, ಭಗವಾನ್=ಶ್ರೀಕೃಷ್ಣನು, ಕುರೂಣಾಂ=ಕೌರವರ, ಅಘಂ=ಅಪರಾಧವನ್ನು ಉಪೇಕ್ಷಿತಃ ನೂನಂ=ಉದಾಸೀನ ಮಾಡಿದನೆಂದು ತರ್ಕಿಸುವೆ. ಈಶೋऽಪಿ ಆಗಲೇ ಕೊಲ್ಲಲು ಸಮರ್ಥನಾಗಿದ್ದರೂ. ಆಗಲೇ ಸಂಹರಿಸಿದರೆ ಸಂಪೂರ್ಣ ಭೂಭಾರ ಹರಣ-ವಾಗುತ್ತಿರಲಿಲ್ಲ ಕಾರಣ ಕೊಲ್ಲಲಿಲ್ಲವೆಂದು ಭಾವ ॥೪೩॥

ಉತ್ಪತ್ತಿರಹಿತನಾದ ಶ್ರೀಹರಿಗೆ ಶ್ರೀಕೃಷ್ಣನಾಗಿ ಜನಿಸುವದಾಗಲಿ, ಕರ್ತೃ ಅಲ್ಲವೆಂದು ಹೇಳುವವನಿಗೆ ಕರ್ಮಗಳಾಗಲಿ ಕೂಡುವುದಿಲ್ಲ, ಪೂರ್ಣನಾದವನಿಗೆ ಅವುಗಳಿಂದ ಪ್ರಯೋಜನವೂ ಇಲ್ಲ ಎಂಬ ಶಂಕೆಗೆ ಉತ್ತರಿಸುವರು -

**ಅಜಸ್ಯ ಜನ್ಮೋತ್ಪಥನಾಶನಾಯ**
**ಕರ್ಮಾಣ್ಯಕರ್ತುರ್ಗ್ರಹಣಾಯ ಪುಂಸಾಂ ।**
**ನ ತ್ವನ್ಯಥಾ ಕೋಽರ್ಹತಿ ದೇಹಯೋಗಂ**
**ಪರೋ ಗುಣಾನಾಮುತ ಕರ್ಮತಂತ್ರಂ ॥೪೪॥**

ಅಜಸ್ಯ=ತ್ರಿಗುಣಾತ್ಮಕ ದೇಹಸಂಬಂಧರೂಪ ಉತ್ಪತ್ತಿ ಇಲ್ಲದಿರುವ ಶ್ರೀಹರಿಗೆ, ಉತ್ಪಥನಾಶನಾಯ=ಹಾದಿಯನ್ನು ಬಿಟ್ಟ ರಾಜರ ನಾಶವೆಂಬ ಪ್ರಯೋಜನ-ವಿರುವುದರಿಂದ, ಜನ್ಮ=ಅವತಾರವು ಯುಕ್ತವೇ. ಅಕರ್ತುಃ=ಫಲವಿಲ್ಲದಿರುವುದ-ರಿಂದ ಅಕರ್ತನೆನಿಸಿದವನಿಗೆ ತನಗೆ ಫಲವಿಲ್ಲದಿದ್ದರೂ, ಪುಂಸಾಂ=ಅಧಿಕಾರಿಗಳಿಗೆ, ಗ್ರಹಣಾಯ=ಕಲಿಸುವುದಕ್ಕಾಗಿ, ಕರ್ಮಾಣಿ=ವಿಹಿತವಾದ ನಿತ್ಯನೈಮಿತ್ತಿಕ ಕರ್ಮಗಳು ಉಪಪನ್ನವಾಗುವುವು. ಅನ್ಯಥಾ=ಪ್ರಾದುರ್ಭಾವರೂಪ ಜನ್ಮವನ್ನು ಬಿಟ್ಟು ಬೇರೆ ರೀತಿಯ ದೇಹಯೋಗ, ಪ್ರಾಕೃತದೇಹ ಸಂಬಂಧರೂಪ ಜನನವನ್ನಾಗಲಿ, ಉತ ಕರ್ಮತಂತ್ರಂ=ವಿಧಿಬಂಧನದಿಂದ ಕರ್ಮವಿಸ್ತಾರವನ್ನಾಗಲಿ, ಗುಣಾನಾಂ ಪರಃ= ಗುಣಾತೀತನಾದವನು, ಕಃ=ಯಾವನು, ಅರ್ಹತಿ=ಹೊಂದುವನು ? ಯಾರೂ ಹೊಂದಲಾರರು 'ನಿತ್ಯಮುಕ್ತನಾದ್ದರಿಂದ ಜೀವನಂತೆ ಜನ್ಮವಾಗಲಿ ವಿಧಿಭಯದಿಂದ ಕರ್ಮವಾಗಲಿ ಇಲ್ಲ'ವೆಂದು ಭಾವ.

ಇಲ್ಲಿ 'ಅಜಸ್ಯ ಜನ್ಮ' 'ಅಕರ್ತುಃ ಕರ್ಮಾಣಿ' ಎಂದು ವ್ಯಾಹತಿ ಇದ್ದಂತೆ ತೋರುವುದು ಕಾರಣ ತಾತ್ಪರ್ಯ ಹೇಳುವರು -

''ನ ದೇಹಯೋಗೋ ಹಿ ಜನಿರ್ವಿಷ್ಣೋರ್ವ್ಯಕ್ತಿರ್ಜನಿಃ ಸ್ಮೃತಾ''।
ಇತ್ಯಾಗ್ನೇಯೇ ।
''ಹರಿಃ ಕರ್ತಾಪ್ಯಕರ್ತೇತಿ ಫಲಾಭಾವೇನ ಭಣ್ಯತೇ'' । ಇತಿ ಚ ।

ಶ್ರೀಹರಿಗೆ ದೇಹಸಂಬಂಧರೂಪ ಜನ್ಮವಿಲ್ಲ, ಅಭಿವ್ಯಕ್ತಿರೂಪವಾದುದು ಅವನ ಜನ್ಮವು. ಎಂದು ಆಗ್ನೇಯ ಪುರಾಣದಲ್ಲಿದೆ. ಶ್ರೀಹರಿಯು ಕರ್ತೃವಾಗಿದ್ದರೂ ಫಲವಿಲ್ಲದಿರುವುದರಿಂದ ಅಕರ್ತಾ ಎಂದು ಕರೆಯಲ್ಪಡುವನು ॥೪೪॥

ದುಷ್ಟರಾಜರ ನಾಶದಿಂದ ಏನು ಫಲ ಎಂದರೆ ಅದರ ಫಲವನ್ನು ಹೇಳುತ್ತ ತನಗೆ ಬೇಕಾದ ಫಲವನ್ನು ಪ್ರಾರ್ಥಿಸುವನು -

**ತಸ್ಯ ಪ್ರಪನ್ನಾಖಿಲಲೋಕಪಾನಾಂ**
**ಅವಸ್ಥಿತಾನಾಂ ಅನುಶಾಸನೇ ಸ್ವೇ ।**
**ಅರ್ಥಾಯ ಜಾತಸ್ಯ ಯದುಷ್ವಜಸ್ಯ**
**ವಾರ್ತಾಂ ಸಖೇ ಕೀರ್ತಯ ತೀರ್ಥಕೀರ್ತೇಃ ॥೪೫॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಪ್ರಥಮೋಽಧ್ಯಾಯಃ ॥*

ಸ್ವೇ=ತನ್ನ ಅನುಶಾಸನೇ=ಶ್ರುತಿಸ್ಮೃತಿರೂಪ ಆಜ್ಞೆಯಲ್ಲಿ, ಅವಸ್ಥಿತಾನಾಂ= ಇರುವವರ ಹಾಗೂ, ಪ್ರಪನ್ನಾಖಿಲಲೋಕಪಾನಾಂ=ಅನಾದಿಕಾಲದಿಂದ ಶರಣಾಗತರಾದ ಲೋಕಪಾಲಕರಾದ ಇಂದ್ರಾದಿಗಳ ಅರ್ಥಾಯ=ಪ್ರಯೋಜನಕ್ಕಾಗಿ ಯದುಷು=ಯಾದವರಲ್ಲಿ, ಜಾತಸ್ಯ=ಅವತರಿಸಿದ, ಅಜಸ್ಯ=ಜನ್ಮರಹಿತನಾದ, ತೀರ್ಥಕೀರ್ತೇಃ=ಪುಣ್ಯಜನಕವಾದ ಕೀರ್ತಿಯುಳ್ಳ, ತಸ್ಯ=ಶ್ರೀಕೃಷ್ಣನ, ವಾರ್ತಾಂ= ಕಥಾವನ್ನು, ಸಖೇ=ಉದ್ಧವನೇ, ಕೀರ್ತಯ=ಹೇಳು. ದುಷ್ಟಶಿಕ್ಷಣ ಶಿಷ್ಟ ಪರಿಪಾಲನವೇ ಪ್ರಯೋಜನವೆಂದು ಭಾವ ॥೪೫॥

*ಇಲ್ಲಿಗೆ ಮೊದಲನೆಯ ಅಧ್ಯಾಯವು ಮುಗಿಯಿತು.*

# ಮೊದಲನೆಯ ಅಧ್ಯಾಯದ ತಾತ್ಪರ್ಯ

ಶುಕಾಚಾರ್ಯರು - ಪರೀಕ್ಷಿದ್ರಾಜ ! ನೀನು ನನ್ನನ್ನು ಪ್ರಶ್ನಿಸಿದಂತೆ ಹಿಂದೆ ವಿದುರನೂ ಇದೇ ಪ್ರಮೇಯವನ್ನೇ ತ್ರಿಕಾಲಜ್ಞಾನಿಗಳಾದ ಮೈತ್ರೇಯರನ್ನು ಪ್ರಶ್ನಿಸಿದನು. ಸಂಪತ್ಸಮೃದ್ಧವಾದ ಮನೆಯನ್ನು ಬಿಟ್ಟು ಅರಣ್ಯವನ್ನು ಸೇರಿದ್ದ ವಿದುರನು ವೈರಾಗ್ಯಶಾಲಿಯಾಗಿದ್ದುದರಿಂದ ಈ ಪ್ರಮೇಯವನ್ನು ತಿಳಿಯಲು ಅಧಿಕಾರಿಯಾಗಿದ್ದನು. ನಿಮ್ಮ ತಾತಂದಿರಿಗಾಗಿ ಸಂಧಿಮಾಡಹೊರಟಿದ್ದ ಸರ್ವನಿಯಾಮಕನಾದ ಶ್ರೀಕೃಷ್ಣನು ಸಂಧಿಯು ಕೈಗೂಡದೆ ಹೋದದ್ದರಿಂದ ಹಸ್ತಿನಾವತಿಯನ್ನು ಬಿಟ್ಟು ಪಾಂಡವರಿದ್ದ ಉಪಪ್ಲಾವ್ಯಕ್ಕೆ ಬಂದಿದ್ದನು. ಆ ಸಮಯದಲ್ಲಿ ವಿದುರನು ತೀರ್ಥಯಾತ್ರೆಗೆ ಹೊರಟನು.

ಪರೀಕ್ಷಿದ್ರಾಜ - ಶುಕಾಚಾರ್ಯರೇ; ತಾವು ಸಮರ್ಥರು. ವಿದುರರು ತ್ರಿಕಾಲಜ್ಞಾನಿಗಳಾದ ಮೈತ್ರೇಯರೊಂದಿಗೆ ಯಾವ ತೀರ್ಥವಿಶೇಷದಲ್ಲಿ ಸೇರಿದರು? ಅವರಿಬ್ಬರ ಸಂಭಾಷಣೆ ಯಾವಾಗ ನಡೆಯಿತು? ಹಸ್ತಿನಾವತಿಯನ್ನು ಬಿಟ್ಟು ವಿದುರರು. ಹೊರಡಲು ಕಾರಣವೇನು? ಭಗವದ್ಭಕ್ತರಲ್ಲಿ ಶ್ರೇಷ್ಠರಾದ ಅವರು ಮಾಡಿದ ಪ್ರಶ್ನೆಯು ಭಗವದ್ಭಕ್ತರು ತಿಳಿಯಬೇಕಾದ ತತ್ವಗಳಿಂದ ತುಂಬಿರಬೇಕು. ಶುದ್ಧಮನಸ್ಕರಾದ ಆ ವಿದುರರಿಗೆ ಅತಿಶಯವಾದ ಫಲವು ಉಂಟಾಗಿರುವುದಲ್ಲವೇ! ಆದ್ದರಿಂದ ಇವೆಲ್ಲವನ್ನೂ ವಿಸ್ತಾರವಾಗಿ ವರ್ಣಿಸಬೇಕು.

ಸೂತರು - ಶೌನಕರೇ! ಶುಕಾಚಾರ್ಯರು ಪರಿಪೂರ್ಣನಾದ ಶ್ರೀಹರಿಯನ್ನು ತಿಳಿದಿರುವರು. ಶ್ರೀಹರಿಯು ಅವರ ವಿಷಯದಲ್ಲಿ ಪ್ರಸನ್ನನಾಗಿರುವನು. ಅವರ ಮನಸ್ಸೂ ಪ್ರಸನ್ನವಾದುದದು. ಅವರು ಜ್ಞಾನಿಶ್ರೇಷ್ಠರು. ಪರೀಕ್ಷಿದ್ರಾಜರು ಕೇಳಿದ ಪ್ರಶ್ನೆ ಸಕಾರಣವೆಂದು ತಿಳಿದು ಅದಕ್ಕೆ ಉತ್ತರ ಕೊಡಲು ಪ್ರಾರಂಭಿಸಿದರು.

ಶುಕಾಚಾರ್ಯರು - ಧೃತರಾಷ್ಟ್ರನಿಗೆ ಶ್ರೀಹರಿಯ ಜ್ಞಾನವು ವಿಶೇಷವಾಗಿ ನಷ್ಟವಾಗಿತ್ತು. ಅನ್ಯಾಯಮಾರ್ಗದಲ್ಲಿ ತೊಡಗಿದ್ದ ತನ್ನ ಮಕ್ಕಳಾದ ದುರ್ಯೋಧನ ಮುಂತಾದವರನ್ನು ಅವನು ಧರ್ಮವಿರುದ್ಧವಾದ ಕೆಲಸಗಳಿಂದಲೇ ಪೋಷಿಸುತ್ತಾ ಬಂದಿದ್ದನು. ಪಾಂಡವರು ಅವನ ತಮ್ಮನ ಮಕ್ಕಳು. ಅವರಿಗೆ ಲೌಕಿಕ ಬಂಧುಗಳಿರ-ಲಿಲ್ಲ. ಅವರನ್ನು ಅರಗಿನ ಮನೆಯನ್ನು ಪ್ರವೇಶ ಮಾಡಿಸಿ ಸುಡಿಸಿದ್ದನು. ಅಲ್ಲದೆ ಕುರುವಂಶದರಸನಾದ ಧರ್ಮರಾಜನ ಪಟ್ಟದರಸಿ ದ್ರೌಪದಿಯನ್ನು ಕಣ್ಣೀರಿನಿಂದ ತನ್ನ ವಕ್ಷಸ್ಥಳದ ಕುಂಕುಮಲೇಪವನ್ನು ತೊಳೆಯುತ್ತಿರುವವಳನ್ನು ದುಃಶಾಸನನು ಸಭೆಗೆ ಎಳೆತಂದು ಕೂದಲು ಹಿಡಿದು ಎಳೆಯುತ್ತಿದ್ದರೂ ನೀಚವಾದ ಆ ಕೆಲಸವನ್ನು ಧೃತರಾಷ್ಟ್ರನು ತಡೆಯಲಿಲ್ಲ. ಅವಳಾದರೂ ಇವನ ಸೊಸೆಯಷ್ಟೆ! ಧೃತರಾಷ್ಟ್ರನಿಗೆ ಮಗನ ಮಾತೆಂಬ ಕತ್ತಲೆ ಕವಿದು ಸರಿಯಾದ ಜ್ಞಾನವೇ ಇಲ್ಲವಾಗಿತ್ತು. ಧರ್ಮರಾಜನು ಸಜ್ಜನ. ಅವನನ್ನು ಜೂಜಿನಲ್ಲಿ ಅಧರ್ಮದಿಂದ ಸೋಲಿಸಿ ದುರ್ಯೋಧನನು ಅರಣ್ಯಕ್ಕೆ ಅಟ್ಟಿದ್ದನು. ಸತ್ಯನಿಷ್ಠನಾದ ಅವನು ಪಣದಂತೆ ಅರಣ್ಯದಿಂದ ಹಿಂತಿರುಗಿ ಬಂದು ತನ್ನ ರಾಜ್ಯಭಾಗವನ್ನು ಕೊಡುವಂತೆ ಬೇಡಿದ್ದನು. ಧೃತರಾಷ್ಟ್ರನು ಇದನ್ನೂ ಕೊಡಿಸಲಿಲ್ಲ. ನಾಲ್ಕನೆಯದಾಗಿ ಕೃಷ್ಣನ ಮಾತನ್ನೂ ಅಲ್ಲಗಳೆದನು. ಧರ್ಮರಾಜನಿಂದ ಕಳುಹಿಸಿಕೊಂಡ ಸರ್ವಗುರುವಾದ ಶ್ರೀಕೃಷ್ಣನು ಕೌರವನ ಸಭೆಯಲ್ಲಿ ಎಲ್ಲ ಜೀವರಿಗೂ ಮೋಕ್ಷ ಮೊದಲಾದ ಪುರುಷಾರ್ಥಗಳನ್ನು ಕೊಡುವ ಮಾತುಗಳನ್ನಾಡಿದ್ದನು. ಅವುಗಳನ್ನೂ ಒಪ್ಪದೆ ಇದ್ದುದರಿಂದ ಧೃತರಾಷ್ಟ್ರನ ಇದ್ದ ಅಲ್ಪ ಪುಣ್ಯವೂ ನಷ್ಟವಾಯಿತು.

ಕೃಷ್ಣನು ಸಂಧಿಯನ್ನು ಆಗಗೊಳಿಸದೆ ಉಪಪ್ಲಾವ್ಯಕ್ಕೆ ಹಿಂತಿರುಗಿದನಷ್ಟೆ! ಆಗ ಧೃತರಾಷ್ಟ್ರನು ವಿದುರನನ್ನು ಬರಮಾಡಿ ತನ್ನ ಕರ್ತವ್ಯವನ್ನು ಕೇಳಿದನು. ಆಗ ಮಂತ್ರಿಶ್ರೇಷ್ಠನಾದ ವಿದುರನು ಹೇಳಿದ ನೀತಿಯನ್ನೇ ಎಲ್ಲರೂ ವಿದುರ ನೀತಿಯೆಂದು ಹೇಳುವರು.

"ಅಣ್ಣ ! ನೀನು ಸಹಿಸಲಾಗದ ಅಪರಾಧವನ್ನು ಮಾಡಿರುವೆ. ಆದರೂ ಅಜಾತಶತ್ರುವು ಅದನ್ನು ಸಹಿಸಿಕೊಂಡಿರುವನು. ಅವನಿಗೆ ಸಲ್ಲಬೇಕಾದ ಭಾಗವನ್ನು ಹಿಂದಕ್ಕೆ ಕೊಡಿಸಿಕೊಡು. ಶತ್ರುಸಂಹಾರಕನಾದ ಭೀಮನು ಅರ್ಜುನ ಸಹಿತನಾಗಿ ಧರ್ಮರಾಜನ ಇಷ್ಟಾರ್ಥವನ್ನು ಸಾಧಿಸುವುದರಲ್ಲಿ ಸಿದ್ಧನಾಗಿರುವನು. ನೀನಾದರೂ ಭೀಮನು ದುರ್ಯೋಧನಾದಿಗಳನ್ನು ಸಂಹರಿಸುವಷ್ಟು ಬಲಿಷ್ಠನೆಂದು ಅವನ ವಿಷಯದಲ್ಲಿ ಹೆದರುತ್ತಲೇ ಇರುವೆ. ಅಲ್ಲದೆ ಮೋಕ್ಷಪ್ರದನಾದ ಶ್ರೀಹರಿಯೇ ಧರ್ಮಾದಿಗಳನ್ನು ರಕ್ಷಿಸುವೆನೆಂದು ಅನುಗ್ರಹಿಸಿರುವನು. ಅವನೇನು ಸಾಮಾನ್ಯ-

ನಲ್ಲ, ಅನೇಕ ದುಷ್ಟರಾಜರನ್ನು ಈಗಾಗಲೇ ಗೆದ್ದ ಆ ಯಾದವಶ್ರೇಷ್ಠನು ಪಾಂಡವರೊಂದಿಗೆ ಉಪಪ್ಲಾವ್ಯದಲ್ಲಿಯೇ ಇರುವನು. ನೀನು ಕೊಡದಿದ್ದರೂ ಅವನು ಅವರಿಗೆ ರಾಜ್ಯವನ್ನು ಕೊಡಿಸಿಯೇ ಕೊಡಿಸುವನು. ನೀನು ನಿನ್ನ ಮಗನನ್ನು ವಂಶೋದ್ಧಾರಕನೆಂದು ಬಗೆದು ಪೋಷಿಸುತ್ತಿರುವೆ. ಅವನು ಶ್ರೀಹರಿಯ ದ್ವೇಷಿ ಶ್ರೀಹರಿಗೆ ವಿರುದ್ಧವಾಗಿ ನಡೆಯುವನು. ಶ್ರೀಹರಿಯ ಭಕ್ತರನ್ನೂ ದ್ವೇಷಿಸುವನು. ಇಂತಹ ಪಾಪಿಯು ನಿನ್ನ ಮಗನಾಗಿ ನಿನ್ನ ಮನೆಯಲ್ಲಿರುವನೆಂದು ತಿಳಿ. ನಿನ್ನ ವಂಶಕ್ಕೆ ಅನುಕೂಲವಾಗಬೇಕಾದರೆ ಈ ಕೂಡಲೆ ಅವನನ್ನು ಬಿಟ್ಟು ಬಿಡು.'' ಎಂದು ಸಜ್ಜನನಾದ ವಿದುರನು ಹೇಳುತ್ತಿರಲು ಕರ್ಣ, ದುಃಶ್ಯಾಸನ ಶಕುನಿಗಳಿಂದ ಕೂಡಿದ್ದ ದುರ್ಯೋಧನನು ಕೋಪಗೊಂಡನು. ಅವನ ತುಟಿಗಳು ನಡುಗಲಾರಂಭಿಸಿದವು. ಧೃತರಾಷ್ಟ್ರನ ಎದುರಿನಲ್ಲಿಯೇ ವಿದುರನನ್ನು ಧಿಕ್ಕರಿಸಿ ಮಾತನಾಡಿದನು. ''ಇವನು ಕಪಟ. ದಾಸಿಯ ಮಗ. ಇವನನ್ನು ಇಲ್ಲಿಗೆ ಬರಮಾಡಿದವರಾರು? ಇವನ ದೇಹವು ನಮ್ಮ ಅನ್ನದಿಂದಲೇ ಬೆಳೆದಿದೆ. ನಮಗೇ ಇವನು ವಿರೋಧಿಯಾಗಿರುವನು. ನಮ್ಮ ಶತ್ರುಗಳ ಹಿತಚಿಂತಕನಾಗಿರುವನು. ಶ್ವಾಸಮಾತ್ರಾವಶಿಷ್ಟನಾದ ಇವನನ್ನು ಹಸ್ತಿನಾವತಿಯಿಂದ ಹೊರಗೆ ಕಳುಹಿಸಿ'' ಎಂದು ಮೂದಲಿಸಿದನು.

ಅಣ್ಣನ ಎದುರಿನಲ್ಲಿಯೇ ಮರ್ಮಭೇದಕಗಳಾದ ಈ ವಾಗ್ಬಾಣಗಳಿಂದ ಹೊಡೆಸಿಕೊಂಡರೂ ವಿದುರನಿಗೆ ಮನನೋಯಲಿಲ್ಲ, ನಕ್ಕುಬಿಟ್ಟನು. ಇಂತಹ ದುಷ್ಟನಲ್ಲಿಯೂ ಮಗನೆಂಬ ಅಭಿಮಾನವನ್ನು ತಂದೊಡ್ಡಿರುವ ಶ್ರೀಹರಿಯ ಬಂಧಕ ಶಕ್ತಿಯನ್ನು ಬಹುವಾಗಿ ಗೌರವಿಸಿ ತಾನು ಹಿಡಿದಿದ್ದ ಧನುಸ್ಸನ್ನು ಬಾಗಿಲಲ್ಲಿಯೇ ಇಟ್ಟು ಅವನು ಹಸ್ತಿನಾವತಿಯಿಂದ ಹೊರಬಿದ್ದನು. ಅನಂತರೂಪಿಯಾದ ಶ್ರೀಹರಿಯು ಜನರನ್ನು ಪವಿತ್ರಗೊಳಿಸುವ ಗಂಗೆಯನ್ನು ಪಾದದಲ್ಲಿ ಹೊಂದಿರುವನು. ಅಲ್ಲಲ್ಲಿ ಪುಣ್ಯಕ್ಷೇತ್ರಗಳಲ್ಲಿ ವಿಶೇಷ ಸನ್ನಿಧಾನದಿಂದ ನೆಲಸಿ ಜನರನ್ನು ಅನುಗ್ರಹಿಸುತ್ತಿರುವನು. ಅಂತಹ ತೀರ್ಥಕ್ಷೇತ್ರ ಸಂಚಾರದಿಂದ ಪುಣ್ಯವನ್ನುಗಳಿಸಿಕೊಳ್ಳಲು ಪ್ರಯತ್ನಿಸಿದನು. ಶ್ರೀಹರಿಯ ಪ್ರತಿಮೆಗಳಿಂದ, ಪವಿತ್ರವಾದ ನೀರಿನಿಂದ, ನಿತ್ಯಪರಿಶುದ್ಧನಾದ ಶ್ರೀಹರಿಯ ಸನ್ನಿಧಾನದಿಂದ ಕೂಡಿದ ಪುಣ್ಯತಮಗಳಾದ ಉದ್ಯಾನವನಗಳಲ್ಲಿಯೂ, ಶ್ರೀಶೈಲ ಮೊದಲಾದ ಪರ್ವತಗಳಲ್ಲಿಯೂ, ಸಿಂಹಾಚಲ ಮೊದಲಾದ ಬೆಟ್ಟಗಳಲ್ಲಿಯೂ, ವೃಂದಾವನಗಳಲ್ಲಿಯೂ, ತಿಳಿನೀರಿನ ಗೋದಾವರಿ ಮೊದಲಾದ ನದಿಗಳಲ್ಲಿಯೂ, ಪುಷ್ಕರ ಮೊದಲಾದ ಸರೋವರಗಳಲ್ಲಿಯೂ ಶ್ರೀಹರಿಯನ್ನು ಕಾಣುತ್ತಾ ಸಂಚರಿಸಿದನು. ಅವನ ಜೊತೆಗೆ ಮತ್ತೆ ಯಾರೂ ಇರಲಿಲ್ಲ. ಅಲ್ಲಲ್ಲಿ ಏಕಾಂತ ಸ್ಥಳಗಳಲ್ಲಿ ವಾಸಿಸುತ್ತ, ಹಣ್ಣು ಎಲೆ

ಮುಂತಾದುವನ್ನು ತಿಂದು ಜೀವಿಸುತ್ತ, ಪವಿತ್ರ ತೀರ್ಥಗಳಲ್ಲಿ ಸ್ನಾನಮಾಡುತ್ತ, ನೆಲದಮೇಲೆ ಮಲಗುತ್ತ, ಕೆದರಿದ ಕೂದಲು ಮತ್ತು ಧೂಳು ಮೈಗಳಿಂದ ಯಾರಿಗೂ ತಿಳಿಯಲಾಗದಂತೆ ಇರುತ್ತ, ವಿದುರನು ಏನೇನು ವ್ರತಮಾಡಿದನೋ ಅದೆಲ್ಲವೂ ಶ್ರೀಹರಿಯ ಪ್ರೀತಿಯನ್ನುಗಳಿಸಿಕೊಡಲು ಸಮರ್ಥವಾಗಿದ್ದವು.

ಹೀಗೆ ಭಾರತಭೂಮಿಯನ್ನು ಸಂಚರಿಸುತ್ತಾ ಕಾಲಕ್ರಮದಲ್ಲಿ ಪ್ರಭಾಸಕ್ಷೇತ್ರಕ್ಕೆ ವಿದುರನು ಬಂದನು. ಅಲ್ಲಿಯೇ ಕೆಲಕಾಲ ವಾಸಿಸುತ್ತಿರಲು ಬಿದಿರುಗಳ ಪರಸ್ಪರ ಘರ್ಷಣೆಯಿಂದ ಹುಟ್ಟಿದ ಕಿಚ್ಚು ಕಾಡನ್ನೇ ಸುಡುವಂತೆ ಬ್ರಾಹ್ಮಣ ಶಾಪದಿಂದ ಪರಸ್ಪರ ಹೊಡೆದಾಡಿ ಯಾದವರು ನಾಶವಾಗಲಿರುವುದನ್ನು ಸಂಕ್ಷೇಪವಾಗಿ ಜನರಿಂದ ತಿಳಿದನು. ಇದನ್ನು ಕೇಳಿ ಅವನಿಗೆ ನೋವಾಯಿತು. ಮೌನವಾಗಿ ಸರಸ್ವತಿಯು ಪಶ್ಚಿಮವಾಹಿನಿಯಾಗಿರುವ ಕಡೆಗೆ ಹೊರಟನು. ಅಲ್ಲಿರುವ ತ್ರಿತ ಮೊದಲಾದ ತೀರ್ಥಗಳನ್ನು ಸೇವಿಸಿದನು. ಆ ದೇಶದಲ್ಲಿದ್ದ ಇತರ ಕ್ಷೇತ್ರಗಳನ್ನು ಸಂಚರಿಸಿದನು. ಅಲ್ಲಲ್ಲಿ ಋಷಿಗಳು, ದೇವತೆಗಳು ಶ್ರೀಹರಿಯ ಪ್ರತಿಮೆಗಳನ್ನು ಪ್ರತಿಷ್ಠಿಸಿದ್ದರು. ಅವುಗಳನ್ನು ನೋಡಿದ ಮಾತ್ರದಿಂದ ಶ್ರೀಹರಿಯ ನೆನಪು ಬಂದು ಜನರು ಪವಿತ್ರರಾಗುತ್ತಿದ್ದರು. ಹೀಗೆ ಸಂಪತ್ತಿನಿಂದ ಕೂಡಿದ ಸುರಾಷ್ಟ್ರ, ಸೌವೀರ, ಮತ್ಸ್ಯ, ಕುರು, ಜಾಂಗಲ ದೇಶಗಳನ್ನು ಸಂಚರಿಸಿ ಯಮುನಾ ತೀರಕ್ಕೆ ಬಂದನು. ಅಲ್ಲಿ ಭಗವದ್ಭಕ್ತನಾದ ಉದ್ಧವನನ್ನು ಕಂಡನು.

ಉದ್ಧವನಿಗೆ ಭಗವಂತನಲ್ಲಿ ಅತಿಶಯವಾದ ನಿಷ್ಠೆ. ಬೃಹಸ್ಪತ್ಯಾಚಾರ್ಯರಿಂದ ಅವನು ಶಾಸ್ತ್ರವನ್ನು ತಿಳಿದಿದ್ದನು. ಯಾವಾಗಲೂ ಶ್ರೀಕೃಷ್ಣನ ಅನುಚರನಾಗಿ ವಾಸುದೇವಾನುಚರನೆಂದು ಪ್ರಸಿದ್ಧನಾಗಿದ್ದನು. ಇಂತಹ ಉದ್ಧವನನ್ನು ಕಂಡಕೂಡಲೆ ವಿದುರನು ಪ್ರೀತಿಯಿಂದ ಗಾಢವಾಗಿ ಆಲಿಂಗಿಸಿ ಯಾದವರ ಕ್ಷೇಮವನ್ನು ವಿಚಾರಿಸಿದನು.

ಉದ್ಧವ ! ಶ್ರೀಹರಿಯ ನಾಭಿಕಮಲದಿಂದ ಹುಟ್ಟಿದ ಬ್ರಹ್ಮನು ಶ್ರೀಹರಿಯನ್ನು ಸ್ತೋತ್ರಮಾಡಲು ಶ್ರೀಹರಿಯು ಭೂಲೋಕದಲ್ಲಿ ಶೂರ ಯಾದವನ ಮನೆಯಲ್ಲಿ ಅವತರಿಸಿದನು. ಶ್ರೀಕೃಷ್ಣನು ಶ್ರೀಹರಿಯ ಅವತಾರ. ಶ್ರೀಹರಿಯ ಶುಕ್ಲಕೇಶಾ-ವೇಶದಿಂದ ಕೂಡಿದ ಶೇಷಾವತಾರನೇ ಬಲರಾಮ. ಇವರಿಬ್ಬರೂ ಭೂಭಾರವನ್ನು ಹರಣ ಮಾಡಿ ಪ್ರಜೆಗಳಿಗೆ ಸುಖಕರರಾಗಿರುವರೇ? ವಸುದೇವನು ಕುರುವಂಶ-ದವರಿಗೆ ಅತ್ಯಂತ ಸ್ನೇಹಿತನು. ಅವನು ಒಳ್ಳೆಯ ದಾನಶೀಲ. ತನ್ನ ಸಹೋದರಿಯ ಗಂಡಂದಿರಿಗೆ ಬೇಕಾದುದನ್ನು ಕೊಟ್ಟು ಸಂತೋಷಪಡಿಸಿ ಸಹೋದರನಂತಲ್ಲದೆ ತಂದೆಯಂತೆ ವರ್ತಿಸಿರುವನು. ಆತನು ಕ್ಷೇಮದಿಂದಿರುವನೇ ? ರುಕ್ಮಿಣೀ-

ದೇವಿಯು ಲೋಕದ ಹೆಂಗಸರಿಗೆ ಜ್ಞಾನಿಗಳ ಅನುಗ್ರಹದಿಂದ ಅಭೀಷ್ಟವನ್ನು ಪಡೆಯಬಹುದೆಂಬುದನ್ನು ಸೂಚಿಸಲು ಬ್ರಾಹ್ಮಣರನ್ನು ಆರಾಧಿಸಿ ಶ್ರೀಕೃಷ್ಣನಿಂದ ಪ್ರದ್ಯುಮ್ನನನ್ನು ಪಡೆದಳು. ಹಿಂದೆ ಮನ್ಮಥನಾಗಿದ್ದ ಈ ಪ್ರದ್ಯುಮ್ನ ಮಹಾಪರಾಕ್ರಮಿ. ಯಾದವರ ಸೈನ್ಯಾಧಿಪತಿ ಅವನಿಗೆ ಕ್ಷೇಮವೇ? ಉಗ್ರಸೇನನು ಸಾತ್ವತ, ವೃಷ್ಣಿ ಭೋಜ ಮತ್ತು ದಾಶಾರ್ಹರೆಂಬ ಯಾದವರಿಗೆ ಅಧಿಪತಿಯು. ಅವನ ಸಿಂಹಾಸನವನ್ನು ಕಂಸನು ಆಕ್ರಮಿಸಿದುದರಿಂದ ಅವನಿಗೆ ಬಹು ವ್ಯಥೆಯಾಗಿತ್ತು. ಶ್ರೀಕೃಷ್ಣನು ಈ ವ್ಯಥೆಯನ್ನು ಸಂಪೂರ್ಣವಾಗಿ ಹೋಗಲಾಡಿಸಿ ಅವನನ್ನು ಮತ್ತೆ ಸಿಂಹಾಸನದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡಿದನು. ಅಂತಹ ಉಗ್ರಸೇನನಿಗೆ ಸುಖವೇ? ಉದ್ಧವ ! ಜಾಂಬವತಿಯು ವ್ರತಗಳನ್ನು ಮಾಡಿ ಶ್ರೀಹರಿಯಿಂದ ಸಾಂಬನನ್ನು ಪಡೆದಳು. ಇವನೇ ಹಿಂದೆ ಪಾರ್ವತಿಯ ಮಗನಾದ ಸ್ಕಂದನು. ಸಮರ್ಥನಾದ ಇವನು ಶ್ರೇಷ್ಠ ರಥಿಕನೂ ಭಗವದ್ಭಕ್ತನೂ ಆಗಿರುವನು. ಇವನು ಸುಖದಿಂದಿರುವನೇ? ಅರ್ಜುನನಿಂದ ಧನುರ್ವಿದ್ಯೆಯನ್ನು ಕಲಿತವನೂ, ನಿರ್ವ್ಯಾಜ್ಯವಾಗಿ ಶ್ರೀಕೃಷ್ಣನನ್ನು ಸೇವಿಸಿ ಅವನ ಅನುಗ್ರಹವನ್ನು ಪಡೆದು ಯತಿಗಳಿಗೂ ದುಸ್ಸಾಧ್ಯವಾದ ಶ್ರೀಹರಿಯ ಸ್ಥಾನವನ್ನು ಹೊಂದಿದವನೂ ಆದ ಸಾತ್ಯಕಿಯು ಕ್ಷೇಮಿಯೇ ?

ಅಕ್ರೂರನಿಗೆ ಶ್ರೀಹರಿಯಲ್ಲಿ ಅತಿಶಯವಾದ ಭಕ್ತಿ. ಆದ್ದರಿಂದ ಅವನ ಮನಸ್ಸಿನಲ್ಲಿ ಅಹಂಕಾರವೇ ಇಲ್ಲ. ಶ್ರೀಹರಿಯ ಹೆಜ್ಜೆಗಳಿಂದ ಪವಿತ್ರವಾದ ಧೂಳಿನಲ್ಲಿ ಹೊರಳಾಡಿದವನವನು. ಅವನಲ್ಲಿ ಪಾಪವೆಲ್ಲಿಯದು? ಆ ಶ್ವಫಲ್ಕ ಪುತ್ರನು ಕ್ಷೇಮದಿಂದಿರುವನೆ? ಮೂರು ವೇದಗಳೂ ತಮ್ಮ ಗರ್ಭದಲ್ಲಿ ಶ್ರೀಹರಿಯ ವಿಭೂತಿಗಳನ್ನೂ ಅವನ ಪೂಜಾರೂಪವಾದ ಯಾಗಗಳನ್ನೂ ಅರ್ಥವಾಗಿ ಹೊಂದಿರುವಂತೆ ಅದಿತಿದೇವಿಯು ತನ್ನ ಗರ್ಭದಲ್ಲಿ ಶ್ರೀಹರಿಯನ್ನು ಧರಿಸಿದಳು. ಅವಳಂತೆಯೇ ಶ್ರೀಹರಿಯನ್ನು ಪುತ್ರನನ್ನಾಗಿ ಪಡೆದ ದೇವಕನ ಮಗಳಾದ ದೇವಕಿಯು ಕ್ಷೇಮಿಯೇ? ಅನಿರುದ್ಧನು ಯಾದವರ ಇಷ್ಟಾರ್ಥವನ್ನು ನೆರವೇರಿಸುವುದರಲ್ಲಿ ಕಾಮಧೇನುವಿನಂತಿರುವನು. ಮನೋಭಿಮಾನಿಯಾದ ಈತನನ್ನೂ ವೇದಗಳೂ ಹೇಳುತ್ತಿವೆ. ಈತನಲ್ಲಿ ಶ್ರೀಹರಿಯ ನಾಲ್ಕನೆಯ ರೂಪದಲ್ಲಿ ಅನಿರುದ್ಧನ ಆವೇಶವಿರುವುದು. ಪೂಜ್ಯನಾದ ಅವನು ಸುಖಿಯಾಗಿರುವನಷ್ಟೇ! ಶ್ರೀಹರಿಯನ್ನು ಅನನ್ಯ ಭಕ್ತಿಯಿಂದ ಸೇವಿಸುತ್ತಿರುವ ಕೃತವರ್ಮ, ಚಾರುದೇಷ್ಣ ಗದ ಮೊದಲಾದ ಇತರ ಯಾದವರೂ ಸುಖಮಯ ಜೀವನವನ್ನು ನಡೆಸುತ್ತಿರುವರೇ ?

ಧರ್ಮರಾಯನ ರಾಜಸೂಯ ಯಾಗಕಾಲದಲ್ಲಿ ಶ್ರೀಹರಿಯ ಇಚ್ಛೆಯಿಂದ ದಿಗ್ವಿಜಯ ಮಾಡಿ ತಂದ ಸಾಮ್ರಾಜ್ಯ ಸಂಪತ್ತನ್ನು ನೋಡಿ ದುರ್ಯೋಧನನು ಹೊಟ್ಟೆಕಿಚ್ಚಿನಿಂದ ಬೆಂದುಹೋದನಲ್ಲವೆ ? ಆ ಧರ್ಮರಾಜನು ಕೃಷ್ಣಾರ್ಜುನರ ಸಹಾಯದಿಂದ ಧರ್ಮವನ್ನು ರಕ್ಷಿಸಿಕೊಂಡು ಬರುತ್ತಿರುವನೆ ? ಗದಾಯುಧವನ್ನು ತಿರುಗಿಸುವಾಗ ಭೀಮನ ಹೆಜ್ಜೆಗೆ ರಣಭೂಮಿಯೂ ನಡುಗಿಹೋಗುವುದು. ಅಂತಹ ಪರಾಕ್ರಮಿಯಾದ ಭೀಮಸೇನನು ತನ್ನ ಕ್ರೋಧವನ್ನೂ ಅಡಗಿಸಿಕೊಂಡು ಅಪರಾಧಿಗಳಾದ ದುರ್ಯೋಧನಾದಿಗಳ ಅಪರಾಧವನ್ನೂ ಕ್ಷಮಿಸಿ ಸುಮ್ಮನಿರುವನೆ? ತನ್ನ ಇಚ್ಛೆಯಿಂದ ಕಿರಾತ ವೇಷವನ್ನು ಧರಿಸಿಬಂದ ಶಿವನನ್ನು ಬಾಣ ಸಮೂಹಗಳಿಂದ ಮುಚ್ಚಿದ ಅರ್ಜುನನ ನೈಪುಣ್ಯಕ್ಕೆ ಶಿವನೂ ಸಂತೋಷಪಟ್ಟನಲ್ಲವೆ? ಮಹಾರಥಿಕರ ಕೀರ್ತಿಗೆ ಕಾರಣನಾದ ಗಾಂಡೀವಧನುರ್ಧಾರಿಯಾದ ಅರ್ಜುನನು ಶತ್ರುಗಳನ್ನು ಸುಮ್ಮನಾಗಿಸಿ ಸುಖದಿಂದ ಇರುವನೇ ? ಗರುಡನು ಇಂದ್ರನ ವಶದಲ್ಲಿದ್ದ ಅಮೃತವನ್ನು ಕಸಿದು ತಂದಂತೆ ಮಾದ್ರಿಯ ಮಕ್ಕಳಾದ ನಕುಲ ಸಹದೇವರು ರೆಪ್ಪೆಗಳಿಂದ ಕಣ್ಣುಗಳು ರಕ್ಷಿತವಾಗಿರುವಂತೆ ಕುಂತಿಯ ಮಕ್ಕಳಿಂದ ರಕ್ಷಿತರಾಗಿರುವವರು ಯುದ್ಧದಲ್ಲಿ ಶತ್ರುಗಳಿಂದ ತಮ್ಮ ರಾಜ್ಯ ಭಾಗವನ್ನು ಕಸಿದುಕೊಂಡು ಸಂತೋಷಗೊಂಡಿರುವರೇ ? ಪಾಂಡುರಾಜನೇನು ಸಾಮಾನ್ಯನೇ? ಅತಿರಥರಲ್ಲಿ ಮುಖ್ಯವೆನಿಸಿ ಧನುಸ್ಸೊಂದರ ಸಹಾಯದಿಂದ ನಾಲ್ಕು ದಿಕ್ಕುಗಳನ್ನೂ ಗೆದ್ದಿದ್ದನು. ಅಂತಹ ವೀರನನ್ನು ಕಳೆದುಕೊಂಡ ಕುಂತಿಯೂ ಮಕ್ಕಳಿಗಾಗಿ ಅವರಿಂದ ಪ್ರಾರ್ಥಿತಳಾಗಿ ಪ್ರಾಣಧಾರಣೆ ಮಾಡಿಕೊಂಡಿರುವಳಲ್ಲವೆ? ಇಂತಹ ಸಹೋದರನಾದ ಪಾಂಡುವಿಗೆ ಧೃತರಾಷ್ಟ್ರನು ದ್ರೋಹವೆಸಗಿದನು. ಅವನ ಎದುರಿನಲ್ಲಿಯಲ್ಲ, ಅವನು ಸತ್ತ ಮೇಲೆ. ಮಕ್ಕಳಾದ ದುರ್ಯೋಧನ ಮೊದಲಾದವರ ಮಾತುಗಳನ್ನು ಅನುಸರಿಸಿ ಹಸ್ತಿನಾಪಟ್ಟಣದಿಂದ ಉಪಕಾರಿಯಾಗಿದ್ದ ನನ್ನನ್ನೂ ಹೊರಹೊರಡಿಸಿದನು. ಉದ್ಧವ ! ಹೀಗೆ ಅಧೋಗತಿಗಿಳಿಯುತ್ತಿರುವ ಆ ನಮ್ಮ ಅಣ್ಣ ಧೃತರಾಷ್ಟ್ರನಿಗಾಗಿ ನಾನು ಬಹಳ ದುಃಖಪಡುತ್ತಿದ್ದೇನೆ. ಸಂಸಾರಿಗಳು ಅನುಭವಿಸುತ್ತಿರುವ ಕ್ಲೇಶಗಳನ್ನು ಕಂಡ ನನಗೆ ಯಾವುದೂ ಆಶ್ಚರ್ಯಕರವಾಗಿಲ್ಲ. ಮಾನವರಂತೆ ವಿಡಂಬನ ಮಾಡುತ್ತಾ ಜನರ ಕಣ್ಣಿಗೆ ಕಾಣುವಂತೆ ವ್ಯಕ್ತನಾಗಿರುವ ಶ್ರೀಹರಿಯನ್ನು ಹೊಂದಲನುಕೂಲಿಸುವ ನಿವೃತ್ತಿ ಮಾರ್ಗದಲ್ಲಿ ತೊಡಗಿದ್ದೇನೆ. ಇದೂ ಅವನ ಅನುಗ್ರಹ.

ಕಂಸ ಮೊದಲಾದವರನ್ನು ಕೊಂದಂತೆ ಶ್ರೀಹರಿಯು ಕೌರವರನ್ನು ಜಾಗ್ರತೆ ಕೊಲ್ಲಬಹುದಾಗಿತ್ತು ಅಥವಾ ಕೊಲ್ಲಿಸಬಹುದಾಗಿತ್ತು. ಆದರೆ ವಿದ್ಯಾಧನಕುಲ-

ಮದಗಳಿಂದ ಉನ್ಮಾರ್ಗಿಗಳಾದ ಅನೇಕ ಅಕ್ಷೋಹಿಣೀಸೈನ್ಯ ಸಮೇತರಾದ ದುಷ್ಟರಾಜರನ್ನು ದೇವತೆಗಳ ದುಃಖಪರಿಹಾರಕ್ಕಾಗಿ ಮೊದಲು ಸಂಹರಿಸಬೇಕೆಂದು ಬಗೆದು ಈ ದುರ್ಯೋಧನನಾದಿಗಳ ಅಪರಾಧವನ್ನು ಉಪೇಕ್ಷಿಸಿರಬೇಕೆಂದು ನನಗೆ ಅನ್ನಿಸುತ್ತದೆ. ಭಕ್ತಾಭೀಷ್ಟಪೂರ್ಣಕ್ಕಾಗಿಯೇ ಶ್ರೀಹರಿಯು ಪ್ರವರ್ತಿಸುವನು. ಕಂಸಾದಿ ದುಷ್ಟಜನರನ್ನು ಸಂಹರಿಸಲು ಶ್ರೀಹರಿಯು ಅವತರಿಸಿದನು. ಇಲ್ಲದೆ ಹೋದಲ್ಲಿ ಜನನ ಮರಣ ರಹಿತನಾದ ಅವನು ವ್ಯಕ್ತನಾಗುವ ಕಾರಣವೇನಿತ್ತು? ಅಧಿಕಾರಚೇತನರು ಶ್ರವಣಮಾಡಿ ಮನನಮಾಡಿ ತನ್ನನ್ನು ಕಾಣಲೆಂದೇ ಅವನು ಅವತರಿಸುವುದು. ಹುಡುಗರಂತೆ ತನ್ನ ವಿನೋದಕ್ಕಾಗಿ ಜನ್ಮಧರಿಸುವನೆಂದು ಬಗೆಯಬಾರದು. ಅವನು ಪ್ರಾಕೃತಗುಣಗಳಿಂದ ದೂರನಾದ್ದರಿಂದ ಶುಕ್ರಶೋಣಿತ ಸಂಬಂಧದಿಂದ ಹುಟ್ಟುವ ದೇಹವನ್ನು ಹೊಂದುವ ಸಂಭವವೇ ಇಲ್ಲ. ವಿಧಿ ನಿಷೇಧಗಳಿಲ್ಲದ ಅವನಿಗೆ ಪ್ರಾರಬ್ಧಕರ್ಮಾನುಗುಣವಾಗಿ ದೇಹವಾದರೂ ಬರುವುದೆಂತು? ಆದ್ದರಿಂದ ತನ್ನ ಆಜ್ಞೆಯಂತೆ ನಡೆಯುತ್ತಿರುವ ಶರಣಾಗತರಾದ ಎಲ್ಲ ಲೋಕಾಧಿಪತಿಗಳ ಪ್ರಯೋಜನಕ್ಕಾಗಿಯೇ ಅವನು ಅಜನಾದರೂ ಯಾದವರಲ್ಲಿ ಜನಿಸಿರುವನು. ಅಂತಹ ಪವಿತ್ರಕರ ಕೀರ್ತಿಯುಳ್ಳ ಶ್ರೀಹರಿಯ ವಾರ್ತೆಯನ್ನು ಬಿತ್ತರಿಸು. ನೀನು ನನ್ನ ಸ್ನೇಹಿತನು.



# ಅಥ ದ್ವಿತೀಯೋऽಧ್ಯಾಯಃ

ಮುಂದಿನ ಮೂರು ಅಧ್ಯಾಯಗಳಲ್ಲಿ ವಿದುರನ ಪ್ರಶ್ನೆಗೆ ಉತ್ತರಿಸಲು ಉದ್ಧವನು ಶ್ರೀಹರಿಯ ಕೃಷ್ಣಾವತಾರ ಕಥೆಯನ್ನು ಸಂಕ್ಷೇಪವಾಗಿ ಹೇಳುತ್ತಾನೆ. ಮೊದಲಿಗೆ ಉದ್ಧವನಿಗೆ ಉಂಟಾದ ಭಗವಂತನ ಭಕ್ತಿಯ ಉದ್ರೇಕವನ್ನು ಶ್ರೀಶುಕಾಚಾರ್ಯರು ಪರೀಕ್ಷಿನ್ಮಹಾರಾಜನಿಗೆ ಹೇಳುವರೆಂದು ಸೂತರು ಶೌನಕರಿಗೆ ಹೇಳುವರು–

**ಶುಕ ಉವಾಚ –**

**ಇತಿ ಭಾಗವತಃ ಪೃಷ್ಟಃ ಕ್ಷತ್ರಾ ವಾರ್ತಾಂ ಪ್ರಿಯಾಶ್ರಯಾಮ್ ।**
**ಪ್ರತಿವಕ್ತುಂ ನ ಚೋತ್ಸೇಹೇ ಔತ್ಕಂಠ್ಯಾತ್ ಸ್ಮಾರಿತೇಶ್ವರಃ ॥೧॥**

ಭಾಗವತಃ=ಉದ್ಧವನು, ಕ್ಷತ್ರಾ=ವಿದುರನಿಂದ, ಇತಿ=ಹಿಂದೆ ಹೇಳಿದ ಪ್ರಕಾರ, ಪ್ರಿಯಾಶ್ರಯಾಂ=ಎಲ್ಲಕ್ಕಿಂತಲೂ ಅತಿಶಯಪ್ರಿಯನಾದ ಶ್ರೀಕೃಷ್ಣವಿಷಯಕವಾದ, ವಾರ್ತಾಂ=ಕಥಾವನ್ನು,ಪೃಷ್ಟಃ=ಹೇಳೆಂದು ಕೇಳಿಸಿಕೊಳ್ಳಲ್ಪಟ್ಟವನಾಗಿ, ಔತ್ಕಂಠ್ಯಾತ್= ಭಕ್ತಿಯ ಉದ್ರೇಕದಿಂದ, ಸ್ಮಾರಿತೇಶ್ವರಃ=ವಿದುರನ ಮಾತಿನ ಮೋಡಿಯಿಂದ ಅಸಂಪ್ರಜ್ಞಾತಸಮಾಧಿಯಲ್ಲಿ ಶ್ರೀಹರಿಯನ್ನು ಕಾಣುವವನಾಗಿ, ಪ್ರತಿವಕ್ತುಂ= ಉತ್ತರಿಸಲು, ನ ಉತ್ಸೇಹೇ=ಪ್ರಯತ್ನ ಮಾಡಲಿಲ್ಲ ॥೧॥

**ಯಃ ಪಂಚಹಾಯನೋ ಮಾತ್ರಾ ಪ್ರಾತರಾಶಾಯ ಯಾಚಿತಃ ।**
**ನೈಚ್ಛತ್ ತದ್ ರಚಯನ್ ಯಸ್ಯ ಸಪರ್ಯಾಂ ಬಾಲಲೀಲಯಾ ॥೨॥**

ಯಃ=ಯಾವ ಉದ್ಧವನು, ಪಂಚಹಾಯನಃ=ಐದು ವರ್ಷದವನಿದ್ದಾಗ, ಮಾತ್ರಾ=ತಾಯಿಯಿಂದ, ಪ್ರಾತರಾಶಾಯ=ಬೆಳಗಿನ ಭೋಜನಕ್ಕೆ, ಯಾಚಿತಃ=ಬಾ ಎಂದು ಕರೆಸಿಕೊಂಡರೂ, ಬಾಲಲೀಲಯಾ=ಮಕ್ಕಳ ಆಟದಿದಂಲೇ, ಯಸ್ಯ= ಶ್ರೀಕೃಷ್ಣನ, ಸಪರ್ಯಾಂ=ಮಾನಸಿಕವಾದ ಹಾಗೂ ಬಾಹ್ಯವಾದ ಪೂಜೆಯನ್ನು ರಚಯನ್=ಮಾಡುವವನಾಗಿ, ತತ್=ಬೆಳಗಿನ ಊಟವನ್ನು, ನ ಐಚ್ಛತ್= ಇಚ್ಛಿಸಲಿಲ್ಲ. ಬಾಲಕನಾಗಿರುವಾಗಲೇ ಇಷ್ಟು ಭಕ್ತಿಯುಳ್ಳ ಉದ್ಧವನಿಗೆ ಕೃಷ್ಣ ಕಥಾ ಪ್ರಶ್ನವು ಭಕ್ತ್ಯುದ್ರೇಕ ಕಾರಣವಾದುದು ಆಶ್ಚರ್ಯವೇನಲ್ಲ ॥೨॥

**ಸ ಕಥಂ ಸೇವಯಾ ತಸ್ಯ ಕಾಲೇನ ಜರಸಂ ಗತಃ ।**
**ಪೃಷ್ಟೋ ವಾರ್ತಾಂ ಪ್ರತಿಬ್ರೂಯಾತ್ ಭರ್ತುಃ ಪಾದಾವನುಸ್ಮರನ್॥೩॥**

ತಸ್ಯ=ಶ್ರೀಕೃಷ್ಣನ, ಸೇವಯಾ=ಸೇವೆಯಿಂದಲೇ, ಕಾಲೇನ=ಕಾಲಕ್ರಮದಿಂದ, ಜರಸಂ ಗತಃ=ಮುಪ್ಪನ್ನಪ್ಪಿದ,ಸಃ=ಉದ್ಧವನು, ವಾರ್ತಾಂ ಪೃಷ್ಟಃ=ಶ್ರೀಕೃಷ್ಣಕಥೆಯನ್ನು ಪ್ರಶ್ನಿಸಲ್ಪಟ್ಟು, ಭರ್ತುಃ=ಶ್ರೀಕೃಷ್ಣನ, ಪಾದೌ=ಚರಣಗಳನ್ನು, ಅನುಸ್ಮರನ್=ಸ್ಮರಿಸುತ್ತ, (ಧ್ಯಾನದಲ್ಲಿ ಕಾಣುತ್ತ)ಕಥಂ ಪ್ರತಿಬ್ರೂಯಾತ್=ಹೇಗೆ ಉತ್ತರವನ್ನಿತ್ತಾನು ? ॥೩॥

**ಸ ಮೂಹೂರ್ತಮಭೂತ್ತೂಷ್ಣೀಂ ಕೃಷ್ಣಾಂಘ್ರಿಸುಧಯಾ ಭೃಶಂ ।**
**ತೀವ್ರೇಣ ಭಕ್ತಿಯೋಗೇನ ನಿಮಗ್ನಃ ಸಾಧು ನಿರ್ವೃತಃ ॥೪॥**

ಸಃ=ಉದ್ಧವನು, ತೀವ್ರೇಣ ಭಕ್ತಿಯೋಗೇನ=ವಿಪುಲವಾದ ಭಕ್ತಿಯಿಂದ, ಕೃಷ್ಣಾಂಘ್ರಿ ಸುಧಯಾ=ಶ್ರೀಕೃಷ್ಣನ ಪಾದಸ್ಮರಣವೆಂಬ ಅಮೃತದಲ್ಲಿ, ಭೃಶಂ=ಚೆನ್ನಾಗಿ, ನಿಮಗ್ನಃ=ಮುಳುಗಿದವನಾಗಿ, ಸಾಧು ನಿರ್ವೃತಃ=ಸ್ವರೂಪಾನಂದಾವಿರ್ಭಾವವನ್ನು ಪಡೆದು,ಮುಹೂರ್ತಂ=ಮುಹೂರ್ತದವರೆಗೆ ತೂಷ್ಣೀಂ ಅಭೂತ್=ಸುಮ್ಮನಿದ್ದನು.

ಉತ್ತರವನ್ನು ಕೊಡದಿರುವುದರಿಂದ ವಿದುರನಿಗೆ ಉದ್ಧವನ ಮೇಲೆ ಸಿಟ್ಟು ಬರಲಿಲ್ಲವೆಂದು ಹೇಳುವನು -

**ಪುಲಕೋದ್ಭಿನ್ನಸರ್ವಾಂಗೋ ಮುಂಚನ್ ಮೀಲದ್‌ದೃಶಾಶ್ರು ಸಃ ।**
**ಪೂರ್ಣಾರ್ಥೋ ಲಕ್ಷಿತಸ್ತೇನ ಸ್ನೇಹಪ್ರಸರಸಂಪ್ಲುತಃ ॥೫॥**

ತೇನ=ವಿದುರನಿಂದ, ಸಃ=ಉದ್ಧವನು, ಪುಲಕೋದ್ಭಿನ್ನಸರ್ವಾಂಗಃ=ರೋಮಾಂಚಿತ-ವಾದ ಎಲ್ಲ ಅಂಗಗಳುಳ್ಳ, ಮೀಲದ್‌ದೃಶಾಶ್ರುಃ=ಮುಚ್ಚಿದ ಕಣ್ಣುಗಳಿಂದ ಆನಂದ-ಬಾಷ್ಪಬಿಂದುಗಳನ್ನು, ಮುಂಚನ್ ಯತಃ=ಬಿಡುವನಾದ್ದರಿಂದ, ಸ್ನೇಹಪ್ರಸರ-ಸಂಪ್ಲುತಃ=ಭಕ್ತಿಪ್ರವಾಹದಲ್ಲಿ ಮಗ್ನನಾದವನು ಅಂದರೆ ಅಸಂಪ್ರಜ್ಞಾತಸಮಾಧಿ ಯಲ್ಲಿರುವನು, ಪೂರ್ಣಾರ್ಥ ಇವ ಲಕ್ಷಿತಃ=ಕೃತಾರ್ಥನು ಮುಕ್ತನು ಎಂದು ತಿಳಿಯಲ್ಪಟ್ಟನು. ರೋಮಾಂಚ, ಆನಂದ ಬಾಷ್ಪ ಮುಂತಾದ ಚಿಹ್ನಗಳಿಂದ ಉದ್ಧವನು ಅಸಂಪ್ರಜ್ಞಾತಸಮಾಧಿಯಲ್ಲಿರುವನು ಎಂದು ಅನುಮಾನ ಮಾಡಿ-ಕೊಂಡು, ಪರಮಾನಂದದಲ್ಲಿರುವನು ಕಾರಣ ಮಾತನಾಡುತ್ತಿಲ್ಲವೆಂದು ತಿಳಿದನು॥

**ಶನಕೈರ್ಭಗವಲ್ಲೋಕಾನ್ನಲೋಕಂ ಪುನರಾಗತಃ ।**
**ವಿಮೃಜ್ಯ ನೇತ್ರೇ ವಿದುರಂ ಪ್ರತ್ಯಾಹೋದ್ಧವ ಉತ್ಸ್ಮಯನ್ ॥೬॥**

ಶನಕೈಃ=ನಿಧಾನವಾಗಿ, ಭಗವಲ್ಲೋಕಾತ್=ಅಸಂಪ್ರಜ್ಞಾತಸಮಾಧಿರೂಪವಾದ ಭಗವಂತನ ಪ್ರಕಾಶದಿಂದ, ನೃಲೋಕಂ ಪುನಃ ಆಗತಃ=ಮನುಷ್ಯ ದೇಹಾನು-ಸಂಧಾನವನ್ನು ಮತ್ತೆ ಪಡೆದನು. ನಂತರ ನೇತ್ರೇ ವಿಮೃಜ್ಯ=ಕಣ್ಣೊರೆಸಿಕೊಂಡು, ಉತ್ಸ್ಮಯನ್=ವಿಪ್ರಶಾಪವನ್ನು ನಿಮಿತ್ತಮಾಡಿ ಯದುಕುಲನಾಶ ಮಾಡಲು ಹೊರಟ ಶ್ರೀಕೃಷ್ಣನ ಮಹಾತ್ಮ್ಯಸ್ಮರಣದಿಂದ ಆಶ್ಚರ್ಯ ಪಡುತ್ತ, ಉದ್ಧವಃ= ಉದ್ಧವನು, ವಿದುರಂ ಪ್ರತಿ=ವಿದುರನನ್ನು ಕುರಿತು, ಆಹ=ಹೇಳಿದನು ॥೬॥

ಮುಂದೆ ಆಗುವ ಶ್ರೀಕೃಷ್ಣನೇ ಮೊದಲಾದ ಯಾದವರ ವಿಯೋಗದಿಂದ ದುಃಖಿತನಾಗಿ ಹೇಳುವನು –

**ಉದ್ಧವ ಉವಾಚ**

**ಕೃಷ್ಣದ್ಯುಮಣಿನಿಮ್ಲೋಚೇ ಗೀರ್ಣೇಷ್ವಜಗರೇಣ ಹ ।**
**ಕಿಂ ನು ನಃ ಕುಶಲಂ ಬ್ರೂಯಾಂ ಗತಶ್ರೀಷು ಯದುಷ್ವಹಂ ॥೭॥**

ಕೃಷ್ಣದ್ಯುಮಣಿನಿಮ್ಲೋಚೇ=ಶ್ರೀಕೃಷ್ಣನೆಂಬ ಸೂರ್ಯನ ಅಸ್ತಮಯವು ಸಮೀಪಿ-ಸಿರುವಾಗ, ಗತಶ್ರೀಷು=ಶೋಭೆಯನ್ನು ಕಳೆದುಕೊಂಡ, ಅಜಗರೇಣ= ವಿಪ್ರಶಾಪ-ವೆಂಬ ಹೆಬ್ಬಾವಿನಿಂದ, ಗೀರ್ಣೇಷು=ನುಂಗಲ್ಪಟ್ಟಂತಿರುವ, ನಃ=ನಮ್ಮ ಸಂಬಂಧಿಗ-ಳಾದ, ಯದುಷು=ಯಾದವರ ವಿಷಯದಲ್ಲಿ, ಅಹಂ ಕಿಂ ನು ಕುಶಲಂ ಬ್ರೂಯಾಂ=ನಾನು ಏನು ಕುಶಲವನ್ನು ಹೇಳಲಿ, ಹ=ಖೇದವು ॥೭॥

ನಿನ್ನಂತೆಯೇ ಶ್ರೀಕೃಷ್ಣನ ಸ್ಮರಣೆಯಿಂದ ಎಲ್ಲ ಜನರು, ಯಾದವರೂ ಏಕೆ ಸುಖಪಡುವುದಿಲ್ಲ ಎಂದರೆ ? ನಿಜ, ಶ್ರೀಹರಿಯೇ ಶ್ರೀಕೃಷ್ಣನೆಂಬ ಜ್ಞಾನವೇ ಅವರಿಗಿಲ್ಲವೆಂದು ಹೇಳುವರು –

**ದುರ್ಭಗೋ ಬತ ಲೋಕೋಯಂ ಯದವೋ ನಿತರಾಮಪಿ ।**
**ಯೇ ಸಂವಸಂತೋ ನ ವಿದುರ್ಹರಿಂ ಮೀನಾ ಯಥಾಂಭಸಿ**
**(ಇವೋಡುಪಂ) ॥೮॥**

ಯಥಾ=ಹೇಗೆ, ಮೀನಾಃ=ಮೀನುಗಳು, ಅಂಭಸಿ=ನೀರಿನಲ್ಲಿ, ಹರಿಂ=ಮತ್ಸ್ಯ-ರೂಪಿಯಾದವನನ್ನು ಭಗವಂತನೆಂದು ತಿಳಿಯಲಿಲ್ಲವೋ, ತಥಾ=ಹಾಗೆಯೇ, 'ಇವೋಡುಪಂ' ಎಂಬ ಪಾಠದಲ್ಲಿ ಮೀನಾಃ=ಮೀನುಗಳು, ಅಂಭಸಿ=ನೀರಿನಲ್ಲಿ ಪ್ರತಿಬಿಂಬಿತನಾದ, ಉಡುಪಂ ಇವ=ಚಂದ್ರನನ್ನು, ನ ವಿದುಃ=ಪ್ರತಿಬಿಂಬಿತವೆಂದು ಹೇಗೆ ತಿಳಿಯುವುದಿಲ್ಲವೋ ಅದರಂತೆ, ಅಯಂ ಲೋಕಃ=ಈ ಭೂಮಿಯಲ್ಲಿರುವ ಜನರು ಮತ್ತು, ಯದವಃ=ಯಾದವರು, ನಿತರಾಂ ಸಂವಸಂತೋಪಿ=ಶ್ರೀಕೃಷ್ಣನ

ಜೊತೆಗೆಯೇ ಇರುತ್ತಿದ್ದರೂ, ಹರಿಂ ನ ವಿದುಃ=ಶ್ರೀಕೃಷ್ಣನು ಹರಿ ಎಂದು ತಿಳಿಯಲಿಲ್ಲ, ಬತ=ಖೇದವು ಆದ್ದರಿಂದ ಅವರಿಗೆ ಶ್ರೀಕೃಷ್ಣ ಸ್ಮರಣದಿಂದ ಸುಖವಾಗುವದಿಲ್ಲ ॥೮॥

ದೂರವಿರುವುದರಿಂದ ಉಳಿದ ಜನರಿಗೆ ಅಜ್ಞಾನ, ವಿಪರೀತಜ್ಞಾನ ಬರಲಿ. ಶ್ರೀಕೃಷ್ಣನೊಡನೆಯೇ ಇರುವ ಚತುರರಾದ ಯಾದವರಿಗೇಕೆ ಈ ವಿಧ ಅಜ್ಞಾನ ಎಂದರೆ ಹೇಳುವರು –

**ಇಂಗಿತಜ್ಞಾ ಪು(ರ)ರು ಪ್ರೌಢಾ ಏಕಾರಾಮಾಶ್ಚ ಸಾತ್ವತಾಃ ।**
**ಸಾತ್ವತಾಮೃಷಭಂ ಸರ್ವೇ ಭೂತಾವಾಸಮಮಂಸತ ॥೯॥**

ಇಂಗಿತಜ್ಞಾಃ=ಪರರ ಅಂಗ ಚೇಷ್ಟೆಯಿಂದ ಅವರ ಮನಸ್ಸಿನ ಭಾವವನ್ನು ತಿಳಿಯುವ, ಪುರುಪ್ರೌಢಾಃ=ಬಹಳ ನಿಪುಣರಾದ, ಏಕಾರಾಮಾಃ ಚ=ಒಂದೇ ಸ್ಥಾನದಲ್ಲಿ ಇರುವವರಾದರೂ, ಸಾತ್ವತಾಃ ಸರ್ವೇ=ಎಲ್ಲ ಯಾದವರು, ಭೂತಾವಾಸಂ=ಸಮಸ್ತ ಜಗತ್ತಿಗೆ ಆಧಾರನಾದ ಶ್ರೀಕೃಷ್ಣನನ್ನು, ಸಾತ್ವತಾಂ= ಯಾದವರಿಗೆ ಮಾತ್ರ, ಋಷಭಂ=ಶ್ರೇಷ್ಠನೆಂದು, ಅಮಂಸತ=ತಿಳಿದರು. 'ಪುರಪ್ರೌಢಾಃ' ಎಂಬ ಪಾಠದಲ್ಲಿ ಪಟ್ಟಣದಲ್ಲಿ ವಾಸಮಾಡುವುದರಿಂದ ನಿಪುಣರಾದ ಎಂದರ್ಥ. ಶರೀರಾಭಿಮಾನವುಳ್ಳ ಎಂದಾಗಲೀ, ತಮ್ಮ ಮನೆಗೆ ಹಿರಿಯರಾದ ಎಂದೂ ಅರ್ಥ. ಏಕಾರಾಮಾಃ=ಕೇವಲ ಕ್ರೀಡಾಸಕ್ತರಾದ, ಸಾತ್ವತಾಂ=ಬ್ರಹ್ಮಾದಿ ಭಾಗವತರಿಗೆ, ಋಷಭಂ=ರಾಜಾದಿಗಳಂತೆ ಶ್ರೇಷ್ಠನೆಂದು, ಭೂತಾವಾಸಂ=ಕೆಲವೇ ಜನರಿಗೆ ಆವಾಸನೆಂದೂ ತಿಳಿದರು. ಹೀಗೂ ಅರ್ಥ ॥೯॥

ಈ ರೀತಿ ಜ್ಞಾನ ಇಲ್ಲದೆ ಇರಲು, ಭ್ರಮೆ ಬರಲು ಕಾರಣ ಹೇಳುವರು–

**ದೇವಸ್ಯ ಮಾಯಯಾ ಸ್ಪೃಷ್ಟಾ ಯೇ ಚಾನ್ಯೇ ಅಸದಾಶ್ರಯಾಃ ।**
**ಭ್ರಾಮ್ಯತೇ ಧೀರ್ನ ತದ್ವಾಕ್ಯೈರಾತ್ಮನ್ಯುಪ್ತಾಮಲಾತ್ಮನಾಂ ॥೧೦॥**

ದೇವಸ್ಯ=ಶ್ರೀಹರಿಯ, ಮಾಯಾಯಾ=ಬಂಧಕಶಕ್ತಿಯಿಂದ, ಸ್ಪಷ್ಟಾಃ=ಬದ್ಧರಾದ್ದ- ರಿಂದ, ಯೇ ಚ ಅಸದಾಶ್ರಯಾಃ ಅನ್ಯೇ=ಅಸತ್‌ಶಾಸ್ತ್ರಗಳನ್ನು ಅವಲಂಬಿಸಿದ ಯಾವ ಕುವಾದಿಗಳಿರುವರೋ, ತದ್ವಾಕ್ಯೈಃ=ಅವರ ಮಾತುಗಳಿಂದಲೂ, ಅಮಂಸತ= ಶ್ರೀಕೃಷ್ಣನು ಸಾಮಾನ್ಯನೆಂದು ತಿಳಿದರು. ಆತ್ಮನಿ=ಶ್ರೀಹರಿಯಲ್ಲಿ, ಉಪ್ತ=ದೃಢವಾಗಿ ಇಡಲ್ಪಟ್ಟ ಅಮಲ=ನಿರ್ದುಷ್ಟಾದ, ಆತ್ಮನಾಂ=ಮನಸ್ಸುಳ್ಳವರಿಗೆ, ಧೀಃ=ಬುದ್ಧಿಯು, ತದ್ವಾಕ್ಯೈಃ=ದುರ್ವಾದಿಗಳ ಮಾತುಗಳಿಂದ, ನ ಭ್ರಾಮ್ಯತೇ=ಚಲಿಸುವುದಿಲ್ಲ. ಯಾವಾಗಲು ಇವನು ಶ್ರೀಹರಿ ಎಂಬ ಪ್ರಮಾಣ ತಿಳಿದ ನಮಗೆ ಈ ರೀತಿ ಭ್ರಮೆ ಬರುವುದಿಲ್ಲವೆಂದು ಬಾವ ॥೧೦॥

ನೀನೇ ಶ್ರೀಕೃಷ್ಣನಿಗೆ ನಿಮ್ಲೋಚಶಬ್ದದಿಂದ ಮರಣ ಹೇಳಿದ್ದರಿಂದ ಅವನು ಶ್ರೀಹರಿ ಹೇಗಾಗುವನು ಎಂಬ ಶಂಕೆಯನ್ನು ಪರಿಹರಿಸುವನು –

**ಪ್ರದರ್ಶ್ಯಾತಪ್ತತಪಸಾಮವಿತೃಪ್ತದೃಶಾಂ ನೃಣಾಂ ।**
**ಆದಾಯಾಂತರಧಾದ್ ಯಸ್ತು ಸ್ವಬಿಂಬಂ ಲೋಕಲೋಚನಂ ॥೧೧॥**

ಅತಪ್ತತಪಸಾಂ=ಯಾವಾಗಲೂ ಶ್ರೀಹರಿಯನ್ನು ಕಾಣುವಂತೆ ತಪಸ್ಸು ಮಾಡದಿರುವ ಆದ್ದರಿಂದಲೇ, ಅವಿತೃಪ್ತದೃಶಾಂ=ವಿಶೇಷವಾಗಿ ತೃಪ್ತಿ ಪಡೆಯದಿರುವ, ನೃಣಾಂ=ಜನರಿಗೆ, ಸ್ವಬಿಂಬಂ ಪ್ರದರ್ಶ್ಯ=ತನ್ನ ಸ್ವರೂಪಭೂತದೇಹವನ್ನು ತೋರಿಸಿ, ಯಃ=ಯಾವನು, ಲೋಕಲೋಚನಂ=ಜನರ ಕಣ್ಣುಗಳು ಯಾವುದರಲ್ಲಿ ನೆಟ್ಟಿದ್ದವೋ ಅಂದರೆ ಅತಿಸುಂದರವಾದ, ಸ್ವಬಿಂಬಂ=ತನ್ನ ದೇಹವನ್ನು ಆದಾಯ=ಸ್ವೀಕರಿಸಿಯೇ ಬಿಡದಲೇ, ಅಂತರಧಾತ್=ಅಂತರ್ಧಾನನಾದನು. ಹಿಂದೆ ಹೇಳಿದ ನಿಮ್ಲೋಚ(ಅಸ್ತ) ಎಂದರೆ, ಅಂತರ್ಧಾನವೇ ಹೊರತು ದೇಹಹಾನಿರೂಪ ಮರಣವಲ್ಲವೆಂದು ಭಾವ. ಮುಂದೆ ಆಗುವುದು ನಿಶ್ಚಿತವಿದ್ದಾಗ ಆದಂತೆ ಹೇಳುವರು ಕಾರಣ ಅಂತರ್ಧಾನ ಹೊಂದುವನು ಎಂದರ್ಥ ॥೧೧॥

ಲೋಕಲೋಚನಶಬ್ದದಿಂದ ಸೂಚಿತವಾದ ಸೌಂದರ್ಯವನ್ನು ಉಪಪಾದಿಸುವರು ಮೂರು ಶ್ಲೋಕಗಳಿಂದ –

**ಯನ್ಮರ್ತ್ಯಲೀಲೌಪಯಿಕಂ ಸ್ವಯೋಗ-**
**ಮಾಯಾಬಲಂ ದರ್ಶಯತಾ ಗೃಹೀತಂ ।**
**ವಿಸ್ಮಾಪನಂ ಸ್ವಸ್ಯ ಚ ಸೌಭಗರ್ದ್ಧೇಃ**
**ಪರಂ ಪದಂ ಭೂಷಣಭೂಷಣಾಂಗಂ ॥೧೨॥**

ಯತ್=ಯಾವುದು, ಸ್ವಯೋಗಮಾಯಾಬಲಂ=ತನ್ನ ಸ್ವರೂಪಭೂತವಾದ ಮಹಾತ್ಮ್ಯಬಲಗಳನ್ನು ದರ್ಶಯತಾ=ತೋರಿಸುವ ಶ್ರೀಹರಿಯಿಂದ, ಗೃಹೀತಂ= ಪ್ರಕಟೀಕೃತವಾದ, (ಇದರಿಂದ ಜನನವೂ ಇಲ್ಲವೆಂದು ಸೂಚಿತವಾಯಿತು) ಮರ್ತ್ಯಲೀಲೌಪಯಿಕಂ=ಮನುಷ್ಯರಂತೆ ಕ್ರೀಡಿಸಲು ಉಪಯುಕ್ತವಾದ, ಸ್ವಸ್ಯ ಚ= ತನಗೂ, ವಿಸ್ಮಾಪನಂ=ಆಶ್ಚರ್ಯ ಜನಕವಾದ, ಸೌಭಗರ್ದ್ಧೇಃ ಪರಂ ಪದಂ= ಸೌಭಾಗ್ಯಾತಿಶಯಕ್ಕೆ ಮುಖ್ಯಸ್ಥಾನವಾದ, ಭೂಷಣಭೂಷಣಾಂಗಂ=ಅಲಂಕಾರಗಳಿಗೆ ಅಲಂಕಾರದಂತಿರುವ ॥೧೨॥

**ಯದ್ಧರ್ಮಸೂನೋರ್ಬತ ರಾಜಸೂಯೇ**
**ನಿರೀಕ್ಷ್ಯ ದೃಕ್‌ಸ್ವಸ್ತ್ಯಯನಂ ತ್ರಿಲೋಕಃ ।**
**ಕಾರ್ತ್ಸ್ನ್ಯೇನ ಚಾತ್ರೋಽಪಗತಂ ವಿಧಾತು-**
**ರರ್ವಾಕ್‌ಸೃತೌ ಕೌಶಲಮಿತ್ಯಮನ್ಯತ ॥೧೩॥**

ತ್ರಿಲೋಕಃ=ಮೂರುಲೋಕದ ಜನರು, ಧರ್ಮಸೂನೋಃ=ಯುಧಿಷ್ಠಿರನ, ರಾಜಸೂಯೇ=ರಾಜಸೂಯಯಾಗಕಾಲದಲ್ಲಿ, ದೃಕ್‌ಸ್ವಸ್ತ್ಯಯನಂ=ಕಣ್ಣಿಗೆ ಆನಂದ ಉಂಟುಮಾಡುವ, ಯತ್=ಯಾವ ಶ್ರೀಕೃಷ್ಣನ ಶರೀರವನ್ನು, ನಿರೀಕ್ಷ್ಯ=ನೋಡಿ, ಅರ್ವಾಕ್‌ಸೃತೌ=ಕೊನೆಯ ಸೃಷ್ಟಿಯಾದ,ಅತ್ರ=ಈ ಶರೀರದಲ್ಲಿ,ವಿಧಾತುಃ=ಬ್ರಹ್ಮನ, ಕೌಶಲಂ=ಕುಶಲತೆಯು, ಕಾರ್ತ್ಸ್ನ್ಯೇನ=ಸಂಪೂರ್ಣವಾಗಿ, ಉಪಾಗತಂ=ಬಂದಿದೆ ಇತಿ=ಈ ರೀತಿ ಅಮನ್ಯತ=ತಿಳಿದರು ಬತ=ಖೇದವು.

ಬತ ಶಬ್ದದಿಂದ ಸೂಚಿತವಾದದನ್ನು ಹೇಳುವರು ಆಚಾರ್ಯರು –

**ತ್ರಿಲೋಕಸ್ಯ ಅಜ್ಞಾನಂ ಬತ ।**
**''ಆನಂದರೂಪಂ ದೃಷ್ಟ್ವಾಪಿ ಲೋಕೋ ಭೌತಿಕಮೇವ ತು ।**
**ಮನ್ಯತೇ ವಿಷ್ಣುರೂಪಂ ಚ ಅಹೋ ಭ್ರಾಂತಿರ್ಬಹುಸ್ಥಿತಾ''॥ಇತಿ ಸ್ಕಾಂದೇ।**

ಅಜ್ಞಾನ ಶಬ್ದಕ್ಕೆ ಇಲ್ಲಿ ಭ್ರಮ ಎಂದರ್ಥ. ಚಿದಾನಂದಾತ್ಮಕವಾದ ಶ್ರೀಕೃಷ್ಣನ ಶರೀರವನ್ನು ವಿರಿಂಚಸೃಷ್ಟವೆಂದೂ, ಭೌತಿಕವೆಂದೂ ತಿಳಿಯುವುದು ಭ್ರಮವಷ್ಟೇ. ಜಗತ್ತಿನಲ್ಲಿ ಒಂದು ವಸ್ತುವನ್ನು ನೋಡಿ ಕೆಲವರಿಗೆ ಮಾತ್ರ ಭ್ರಮ ಬರುವುದು. ಇಲ್ಲಿಯಾದರೂ ಮೂರು ಲೋಕದ ಬಹು ಜನರಿಗೆ ಭ್ರಮವಿದೆ ಇದು ಆಶ್ಚರ್ಯವೆಂದು ಭಾವ.

ಆನಂದಾತ್ಮಕವಾದ ಕೃಷ್ಣ ಮುಂತಾದ ವಿಷ್ಣುವಿನ ರೂಪಗಳನ್ನು ನೋಡಿ ಇದು ಎಲ್ಲರಂತೆ ವಿಶೇಷವಾಗಿ ಪಾಂಚಭೌತಿಕವೆಂದು ತಿಳಿಯುವರು. ಬ್ರಹ್ಮ ಸೃಷ್ಟಿಯೆಂದೂ ತಿಳಿಯುವರು. ಭ್ರಾಂತಿಃ=ಭ್ರಮವು ಬಹಳ ಜನರಲ್ಲಿ ಇದೆ ಇದು ಆಶ್ಚರ್ಯವು ॥೧೩॥

**ಯಸ್ಯಾನುರಾಗಪ್ಲುತಹಾಸರಾಸ-**
**ಲೀಲಾವಲೋಕಪ್ರತಿಲಬ್ಧಮಾನಾಃ ।**
**ವ್ರಜಸ್ತ್ರಿಯೋ ದೃಗ್ಭಿರನುಪ್ರವೃತ್ತ-**
**ಧಿಯೋಽವತಸ್ಥುಃ ಕಿಲ ಕೃತ್ಯಶೇಷಾಃ ॥೧೪॥**

ಯಸ್ಯ=ಯಾವ ಶ್ರೀಕೃಷ್ಣನ, ಅನುರಾಗ=ಸ್ನೇಹದಿಂದ, ಪ್ಲುತ=ವ್ಯಾಪ್ತವಾದ, ಹಾಸ=ನಗು ಮತ್ತು, ರಾಸಲೀಲಾ=ರಾಸಕ್ರೀಡೆಯು ಮತ್ತು, ಅವಲೋಕ=ನೋಟ ಇವುಗಳಿಂದ, ಪ್ರತಿಲಬ್ಧಮಾನಾಃ=ಹೆಮ್ಮೆಯಿಂದಬೀಗಿದ, ವ್ರಜಸ್ತ್ರಿಯಃ=ಗೋಕುಲದ ಸ್ತ್ರೀಯರು, ದೃಗ್ಭಿಃ=ದೃಷ್ಟಿಗಳಿಂದ ಸಹಿತವಾಗಿ, ಅನುಪ್ರವೃತ್ತಧಿಯಃ=ಅನುಸರಿಸಿ ಹೋಗುವ ಬುದ್ಧಿಯುಳ್ಳವರಾಗಿ, ಕೃತ್ಯಶೇಷಾಃ=ಭೋಜನಾದಿಗಳನ್ನು ಪೂರ್ತಿಗೊಳಿಸದೆ, ಅವತಸ್ಥುಃ=ನಿಂತರು, ಕಿಲ=ಸಂಭಾವಿತವು. ಅಂದರೆ ಸೌಂದರ್ಯನಿಧಿಯಾದ ಶ್ರೀಕೃಷ್ಣನನ್ನು ತಮ್ಮ ಎಲ್ಲ ಕೆಲಸಗಳನ್ನೂ ಬಿಟ್ಟು ನೋಡುತ್ತಲೆ ನಿಂತರು ಎಂದು ಭಾವ ||೧೪||

ಇಲ್ಲಿಯವರೆಗೆ ನಿಮ್ಲೋಚಶಬ್ದವು ಪ್ರಸಿದ್ಧ ಮರಣ ಪರವಲ್ಲ ಅಂತರ್ಧಾನ ಪರವೆಂದು ಉಪಪಾದಿಸಿ ಈಗ ಅವನ ಜನಿಯೂ ಕೂಡ ಇತರರಂತಲ್ಲ ಎಂದು ಹೇಳುವರು –

**ಸ್ವಶಾಂತರೂಪೇಷ್ವಿತರೈಶ್ಚ ರೂಪೈ-**
**ರಭ್ಯರ್ದ್ಯಮಾನೇಷ್ವನುಕಂಪಿತಾತ್ಮಾ ।**
**ಪರಾವರೇಶೋ ಮಹದಂಶಯುಕ್ತೋ**
**ಹ್ಯಜೋಽಪಿ ಜಾತೋ ಭಗವಾನ್ ಯಥಾಗ್ನಿಃ ||೧೫||**

ಭಗವಾನ್=ಶ್ರೀಹರಿಯು, ಸ್ವಶಾಂತರೂಪೇಷು=ತನ್ನ ಪ್ರತಿಮೆಗಳಾದ ಸಾತ್ವಿಕ ಸ್ವಭಾವದವರಾದ ದೇವತೆಗಳು, ಇತರೈಃ ರೂಪೈಃ=ಅಶಾಂತರೂಪರಾದ ತಾಮಸ-ರಾದ ದೈತ್ಯರಿಂದ ಅಭ್ಯರ್ದ್ಯಮಾನೇಷು, ಸತ್ಸು=ಪೀಡಿಸಲ್ಪಡುತ್ತಿರಲು, ಅನುಕಂಪಿ-ತಾತ್ಮಾ=ದಯಾಯುಕ್ತಮನಸ್ಸಿನಿಂದ, ಪರಾವರೇಶಃ=ಬ್ರಹ್ಮಾದಿಗಳಿಗೂ ಒಡೆಯನಾದ ಶ್ರೀಹರಿಯು, ಮಹದಂಶಯುಕ್ತಃ=ಮಹಾತ್ಮರಾದ ವಾಯುಶೇಷ ಇಂದ್ರಾದಿಗಳಿಂದ ಕೂಡಿ ಅಜೋಽಪಿ=ಉತ್ಪತ್ತಿರಹಿತನಾದರೂ, ಯಥಾಽಗ್ನಿಃ=ಕಟ್ಟಿಗೆಯಲ್ಲಿರುವ ಅಗ್ನಿಯು ವ್ಯಕ್ತವಾಗುವಂತೆ, ಜಾತಃ=ಅಭಿವ್ಯಕ್ತನಾದನು ||೧೫||

ಜನ್ಮ ಮರಣಗಳಿಲ್ಲದ್ದರಿಂದ ಶ್ರೀಕೃಷ್ಣನು ಶ್ರೀಹರಿಯೇ ಆದ ಮೇಲೆ ಅವನು ಸಾಮಾನ್ಯರು ಮಾಡುವ ಕಾರ್ಯಗಳನ್ನು ಹೇಗೆ ಮಾಡಿದನು? ಎಂದರೆ ಹೇಳುವರು –

**ಮಾಂ ಖೇದಯತ್ಯೇತದಜಸ್ಯ ಜನ್ಮ**
**ವಿಡಂಬನಂ ಯದ್ವಸುದೇವಗೇಹೇ ।**
**ವ್ರಜೇ ಚ ವಾಸೋಽರಿಭಯಾದಿವ ಸ್ವಯಂ**
**ಪುರಾದ್ ವ್ಯವಾತ್ಸೀದ್ ಯದನಂತವೀರ್ಯಃ ||೧೬||**

ಅನಂತವೀರ್ಯಃ=ಅಪರಿಮಿತ ಸಾಮರ್ಥ್ಯವುಳ್ಳ ಶ್ರೀಹರಿಯು, ಅರಿಭಯಾ-ದಿವ=ಜರಾಸಂಧಾದಿಗಳ ಭಯದಿಂದ, ಪುರಾತ್=ಮಥುರಾದಿಂದ, ವ್ಯವಾತ್ಸೀತ್=ಗೋಮಂತಪರ್ವತಕ್ಕೆ, ದ್ವಾರಕೆಗೆ ಪಲಾಯನ ಮಾಡಿದನು. ವ್ರಜೇ ವಾಸಃ=ಗೋಕುಲದಲ್ಲಿ ಅಡಗಿ ವಾಸಿಸುವುದು, ಅರಿಭಯಾತ್=ಶತ್ರುಗಳ ಭಯದಿಂದ ಎನ್ನುವಂತೆ ಮತ್ತು, ಅಜಸ್ಯ=ಜನ್ಮವಿಲ್ಲದವನಿಗೆ ವಸುದೇವಗೇಹೇ=ವಸುದೇವನ ಪತ್ನಿಯಲ್ಲಿ,ಜನ್ಮ=ಜನ್ಮವು, ವಿಡಂಬನಂ=ಲೌಕಿಕ ಜನ್ಮದ ಅನುಕರಣವು, ಇತ್ಯೇತತ್=ಇವೆಲ್ಲಾ ಅಸಮರ್ಥರಂತೆ ಮಾಡುವುದು, ಮಾಂ ಖೇದಯತಿ="ಅಸುರಜನ ಮೋಹನಕ್ಕಾಗಿಯೇ ಹೊರತು ಸ್ವಾಭಾವಿಕವಲ್ಲ. ಅವನ ಸ್ವಭಾವ ಈ ರೀತಿ ಅಲ್ಲ ಎಂಬುದು ಶ್ರುತಿಸಿದ್ಧವಾದ್ದರಿಂದ' ಎಂದು ಸಮಾಧಾನದಿಂದ, ಚಿತ್ತಚಾಂಚಲ್ಯ ಪರಿಹಾರರೂಪ ಕ್ಲೇಶಯುಕ್ತನನ್ನಾಗಿ ಮಾಡುವುದು ॥೧೬॥

**ದುನೋತಿ ಚೇತಃ ಸ್ಮರತೋ ಮಮೈತದ್**
**ಯದಾಹ ಪಾದಾವಭಿವಂದ್ಯ ಪಿತ್ರೋಃ ।**
**ತಾತಾಂಬ ಕಂಸಾದುರುಕಂಪಿತಾನಾಂ**
**ಪ್ರಸೀದತಂ ನೋಽಕೃತ ನಿಷ್ಕೃತೀನಾಂ ॥೧೭॥**

(ಕಂಸನ ಸಂಹಾರವಾದ ಮೇಲೆ) ಪಿತ್ರೋಃ=ವಸುದೇವದೇವಕಿಯರ, ಪಾದೌ ಅಭಿವಂದ್ಯ=ಚರಣಗಳಿಗೆರಗಿ, ಹೇ ತಾತ ಹೇ ಅಂಬ=ಎಲೋ ತಾಯಿತಂದೆಯರೇ, ಕಂಸಾತ್=ಕಂಸನಿಂದ,ಉರುಕಂಪಿತಾನಾಂ=ಬಹಳ ಪೀಡಿತರಾದ ಭೀತರಾದ ನಿಮಗೆ ಅಕೃತನಿಷ್ಕೃತೀನಾಂ=ಕಂಸನ ಅಪರಾಧಕ್ಕೆ ಪ್ರತಿಕ್ರಿಯೆ ಮಾಡದಿರುವ, (ಅಂದರೆ ಹತ್ತಿರವಿದ್ದು ಯಾವ ರೀತಿಯಿಂದಲೂ ಸಾಂತ್ವನ ಮಾಡದಿರುವ) ನಃ=ನಮ್ಮ ಮೇಲೆ,ಪ್ರಸೀದತಂ=ಅನುಗ್ರಹ ಮಾಡಿರಿ, ಇತಿ=ಎಂದು, ಯದಾಹ=ಏನು ಹೇಳಿದನೋ, ಏತತ್=ಈ ಶ್ರೀಕೃಷ್ಣನ ವ್ಯಾಪಾರವು, ಮಮ ಚೇತಃ=ನನ್ನ ಮನಸ್ಸನ್ನು, ದುನೋತಿ=ಶ್ರೀಕೃಷ್ಣನು ಸಾಮಾನ್ಯನಲ್ಲವೆಂದು ಶ್ರುತಿಸಿದ್ಧವಾದ್ದರಿಂದ ಇದೆಲ್ಲ ಅಸುರ ಜನ ಮೋಹನಕ್ಕಾಗಿ ಮಾಡಿದ್ದು ಎಂಬ ಸಮಾಧಾನದಿಂದ ಚಿತ್ತ ಚಾಂಚಲ್ಯ ಪರಿಹಾರ ರೂಪಕ್ಲೇಶಯುಕ್ತವನ್ನಾಗಿ ಮಾಡುವುದು ॥೧೭॥

ಶ್ರೀಕೃಷ್ಣನು ಶ್ರೀಹರಿ ಅಲ್ಲವೆ ಅಲ್ಲ. ಕೇವಲ ನಿನ್ನ ಶ್ರದ್ಧೆಯಷ್ಟೇ. ಆದ್ದರಿಂದ ಅವನ ವಿರಹದಿಂದ ದುಃಖವೇಕೆ ಎಂಬ ಸಂಶಯ ಬಂದಾಗ ಶ್ರೀಕೃಷ್ಣನಿಗೆ ಈಶ್ವರತ್ವವನ್ನು ಸಾಧನ ಮಾಡುವವನಾಗಿ ಅವನ ವಿರಹ ದುಃಖದಾಯಕವೆಂದು ಹೇಳುವನು ಮೂರು ಶ್ಲೋಕಗಳಿಂದ –

**ಕೋ ವಾ ಅಮುಷ್ಯಾಂಘ್ರಿಸರೋಜರೇಣುಂ**
**ವಿಸ್ಮರ್ತುಮೀಶೇತ ಪುಮಾನ್ ವಿಜಿಘ್ರನ್ ।**
**ಯೋ ವಿಸ್ಫುರದ್‌ಭ್ರೂವಿಟಪೇನ ಭೂಮೇ-**
**ರ್ಭಾರಂ ಕೃತಾಂತೇನ ತಿರಶ್ಚಕಾರ ॥೧೮॥**

ಯಃ=ಯಾವನು, ವಿಸ್ಫುರದ್=ಚಲಿಸುವ, ಭ್ರೂವಿಟಪೇನ=ಹುಬ್ಬುಗಳ ಲೇಶವೆಂಬ, ಕೃತಾಂತೇನ=ಯಮನಿಂದ, ಭೂಮೇಃ ಭಾರಂ=ಭೂಮಿಯ ಭಾರವನ್ನು ತಿರಶ್ಚಕಾರ= ಪರಿಪರಿಸಿದನೋ ಅಮುಷ್ಯ=ಇಂಥವನ ಅಂಘ್ರಿಸರೋಜರೇಣುಂ=ಪಾದಕಮಲ-ಪರಾಗವನ್ನು ವಿಜಿಘ್ರನ್=ಆಘ್ರಾಣ ಮಾಡಿ, ಕಃ ವಾ=ಯಾವನು ತಾನೇ, ವಿಸ್ಮರ್ತುಂ ಈಶೇತ=ಮರೆಯಲು ಸಮರ್ಥನಾದಾನು ! ಅದು ಅಸಾಧ್ಯವೆಂದು ಭಾವ. ಕೇವಲ ಹುಬ್ಬು ಹಾರಿಸುವುದರಿಂದ ಭೂಭಾರವನ್ನು ಪರಿಹರಿಸಿದ್ದರಿಂದ ಇವನು ಸರ್ವೇಶ್ವರನೇ ಎಂದು ಭಾವ ॥೧೮॥

ಭಕ್ತನು ಮಾಡಿದ ಪ್ರಾಮಾದಿಕ ಅಪರಾಧವನ್ನು ಉಪೇಕ್ಷಿಸಿ ಮೋಕ್ಷ ದಾತೃವಾದ್ದರಿಂದಲೂ ಈಶ್ವರನೆಂದು ಹೇಳುವನು –

**ದೃಷ್ಟಾ ಭವದ್ಭಿರ್ನನು ರಾಜಸೂಯೇ**
**ಚೈದ್ಯಸ್ಯ ಕೃಷ್ಣಂ ದ್ವಿಷತೋಽಪಿ ಸಿದ್ಧಿಃ ।**
**ಯಾಂ ಯೋಗಿನಃ ಸಂಸ್ಪೃಹಯಂತಿ ಸಮ್ಯಗ್**
**ಯೋಗೇನ ಕಸ್ತದ್ವಿರಹಂ ಸಹೇತ ॥೧೯॥**

ಯಾಂ=ಯಾವ ಸಾಯುಜ್ಯವನ್ನು,ಯೋಗಿನಃ=ಯೋಗಿಗಳು,ಸಮ್ಯಕ್‌ಯೋಗೇನ= ಚೆನ್ನಾಗಿ ಆಚರಿಸಿದ ಉಪಾಯಗಳಿಂದ, ಸಂಸ್ಪೃಹಯಂತಿ=ಹೊಂದಲಿಚ್ಛಿಸುವರೋ ಅಂತಹ, ಸಿದ್ಧಿಃ=ಸಾಯುಜ್ಯವು, ಕೃಷ್ಣಂ ದ್ವಿಷತಃ ಅಪಿ=ಶ್ರೀಕೃಷ್ಣನನ್ನು ದ್ವೇಷಿಸಿದರೂ, ಚೈದ್ಯಸ್ಯ=ಶಿಶುಪಾಲನಿಗೆ ಆದದ್ದು, ರಾಜಸೂಯೇ=ರಾಜಸೂಯಾಯಾಗದ ಸಮಯದಲ್ಲಿ, ಭವದ್ಭಿಃ=ನಿಮ್ಮಿಂದ ದೃಷ್ಟಾ ನನು=ನೋಡಲ್ಪಟ್ಟಿದೆಯಷ್ಟೆ! ತದ್ವಿರಹಂ ಕಃ ಸಹೇತ=ಇಂಥವನ ವಿರಹವನ್ನು ಯಾರು ಸಹಿಸಬಲ್ಲರು ? ಯಾರೂ ಇಲ್ಲ ॥೧೯॥

ಶಿಶುಪಾಲನಂತೆ ಮಿಕ್ಕವರೂ ತಮಗೆ ಯೋಗ್ಯವಾದ ಸಿದ್ಧಿಯನ್ನು ಪಡೆದರೆಂದು ಹೇಳುವರು –

**ತಥೈವ ಚಾನ್ಯೇ ನರಲೋಕವೀರಾ**
**ಯ ಆಹವೇ ಕೃಷ್ಣಮುಖಾರವಿಂದಂ ।**
**ನೇತ್ರೈಃ ಪಿಬಂತೋ ನಯನಾಭಿರಾಮಂ**
**ಪಾರ್ಥಾಸ್ತ್ರಪೂತಾಃ ಪದಮಾಪುರಸ್ಯ ॥೨೦॥**

ಆಹವೇ=ಯುದ್ಧದಲ್ಲಿ, ನಯನಾಭಿರಾಮಂ=ಕಣ್ಣುಗಳಿಗೆ ಆನಂದವನ್ನೀವ, ಕೃಷ್ಣಮುಖಾರವಿಂದಂ=ಶ್ರೀಕೃಷ್ಣನ ಮುಖಕಮಲವನ್ನು, ನೇತ್ರೈಃ ಪಿಬಂತಃ= ನೋಡುತ್ತಾ, ಪಾರ್ಥಾಸ್ತ್ರಪೂತಾಃ=ಅರ್ಜುನನ ಪಾಶುಪತಾಸ್ತ್ರದಿಂದ ತಲೆಕತ್ತರಿಸಿ-ದವರಾಗಿ ಮೃತರಾದರೋ ಅಥವಾ ದ್ವೇಷವನ್ನು ಬಿಟ್ಟು ಭಕ್ತಿಯಿಂದ ಪವಿತ್ರ-ರಾದರೋ ('ಪೂಂ ಚ್ಛೇದನೇ' ಎಂದು 'ಪೂಞ ಪವನೇ' ಎಂದೂ ಧಾತುಗಳಿವೆ. ಕಾರಣ ಛಿನ್ನಶಿರಸ್ಕರಾಗಿ ಪವಿತ್ರರಾಗಿ ಎಂದು ಎರಡರ್ಥ ಮಾಡಬಹುದು) ಅಂಥ, ಅನ್ಯೇ ನರಲೋಕವೀರಾಃ=ಕರ್ಣ ಮೊದಲಾದ ವೀರರು, ಅಸ್ಯ ಪದಂ ಆಪುಃ= ಶ್ರೀಕೃಷ್ಣನ ಅನುಗ್ರಹದಿಂದ ಅವನ ಅಧೀನವಾದ ತಮಗೆ ಯೋಗ್ಯವಾದ ಸ್ಥಾನವನ್ನು ಹೊಂದಿದರು. ॥೨೦॥

ತಾನು ಈಶ್ವರನಾಗಿದ್ದರೂ ಉಗ್ರಸೇನನ ಭೃತ್ಯತ್ವ ತೋರಿಸಿದ್ದು ದುಃಖದಾಯಕ-ವೆಂದು ಹೇಳುವನು -

**ಸ್ವಯಂ ತ್ವಸಾಮ್ಯಾತಿಶಯಸ್ತ್ರ್ಯಧೀಶಃ**
**ಸ್ವರಾಜ್ಯಲಕ್ಷ್ಮ್ಯಾಪ್ತಸಮಸ್ತಕಾಮಃ ।**
**ಬಲಿಂ ಹರದ್ಭಿಃ ಸುರಲೋಕಪಾಲೈಃ**
**ಕಿರೀಟಕೋಟ್ಯೇಡಿತಪಾದಪೀಠಃ ॥೨೧॥**

**ತತ್ತಸ್ಯ ಕೈಂಕರ್ಯಮಲಂ ಭೃತಾನ್ನೋ**
**ವಿಗ್ಲಾಪಯತ್ಯಂಗ ಯದುಗ್ರಸೇನಂ ।**
**ತಿಷ್ಠನ್ ನಿಷಣ್ಣಂ ಪರಮೇಷ್ಠಿಧಿಷ್ಣ್ಯೇ**
**ನ್ಯಬೋಧಯದ್ದೇವ ನಿಧಾರಯೇತಿ ॥೨೨॥**

ಸ್ವಯಂ ತು=ತಾನೇ, ಅಸಾಮ್ಯಾತಿಶಯಃ=ಸಮಾಧಿಕರಹಿತನು, ತ್ರ್ಯಧೀಶಃ=ಮೂರು-ಲೋಕದ ಒಡೆಯನು, ಸ್ವರಾಜ್ಯಲಕ್ಷ್ಮ್ಯಾಪ್ತಸಮಸ್ತಕಾಮಃ=ತನ್ನ ಅಧೀನವಾದ ರಾಜ್ಯ-ಲಕ್ಷ್ಮಿಯಿಂದ ಎಲ್ಲ ಅಭೀಷ್ಟಗಳನ್ನು ಸರ್ವದಾ ಹೊಂದುವವನು, ಬಲಿಂ ಹರದ್ಭಿಃ= ಪೂಜೆಯನ್ನು ಸಲ್ಲಿಸುವ, ಕರವನ್ನು ಸಲ್ಲಿಸುವ ಸುರಲೋಕಪಾಲೈಃ=ದೇವತೆಗಳಿಂದ ಲೋಕಪಾಲಕರಿಂದ, ಕಿರೀಟಕೋಟ್ಯೇಡಿತಪಾದಪೀಠಃ=ಕಿರೀಟದ ತುದಿಯಿಂದ

ನಮಿತವಾದ ಪಾದ ಪೀಠವುಳ್ಳವನಾದರೂ, ಪರಮೇಷ್ಠಿಧಿಷ್ಣ್ಯೇ=ಸಿಂಹಾಸನದಲ್ಲಿ ನಿಷಣ್ಣಂ=ಕುಳಿತಿರುವ, ಉಗ್ರಸೇನಂ=ಉಗ್ರಸೇನ ಮಹಾರಾಜನನ್ನು ಕುರಿತು, ತಿಷ್ಠನ್=ತಾನು ನಿಂತುಕೊಂಡು, ಹೇ=ದೇವ ಎಲೋ ರಾಜನೇ ನಿಧಾರಯ=ನಮ್ಮ ಮಾತನ್ನು ಆಲಿಸಬೇಕು ಎಂದು ನ್ಯಬೋಧಯತ್=ವಿಜ್ಞಾಪಿಸಿದನು ಎಂದು ಹೇಳುವುದೇನಿದೆ ತತ್=ಆ, ತಸ್ಯ=ಶ್ರೀಕೃಷ್ಣನ ಕೈಂಕರ್ಯಂ=ದಾಸತ್ವವನ್ನು ಭೃತಾನ್=ಹೊಂದಿರವ ನಮ್ಮನ್ನು, ಹೇ ಅಂಗ=ವಿದುರನೇ, ಅಲಂ ವಿಗ್ಲಾಪಯತಿ=ಅಸುರಜನ-ಮೋಹನಕ್ಕಾಗಿ, ಭಕ್ತವಾತ್ಸಲ್ಯ ತೋರಿಸುವುದಕ್ಕಾಗಿ ಈ ರೀತಿ ಮಾಡುವನೆಂದು ಸಮಾಧಾನದಿಂದ ಚಿತ್ತಚಾಂಚಲ್ಯ ಪರಿಹಾರರೂಪವಾದ ತೊಂದರೆಯನ್ನುಂಟು ಮಾಡುವುದು ಎಂದು ಭಾವ ॥೨೧-೨೨॥

ಸ್ವಾಭಾವಿಕ ಭಕ್ತರ ಪ್ರಾಮಾದಿಕ ಅಪರಾಧವನ್ನು ಲೆಕ್ಕಿಸದೆ ಮೋಕ್ಷವನ್ನೇ ಕೊಡುವನು ಎಂಬದುನ್ನು ಉದಾಹರಣೆ ಇತ್ತು ತಿಳಿಸುತ್ತ ಇವನೇ ಭಜನೀಯ-ನೆಂದು ಹೇಳುವರು –

**ಅಹೋ ಬಕೀಯಂ ಸ್ತನಕಾಲಕೂಟಂ**
**ಜಿಘಾಂಸಯಾ ಪಾಯಯದಪ್ಯಸಾಧ್ವೀ ।**
**ಲೇಭೇ ಗತಿಂ ಧಾತ್ರ್ಯುಚಿತಾಂ ತತೋಽನ್ಯಂ**
**ಕಂ ವಾ ದಯಾಲುಂ ಶರಣಂ ವ್ರಜೇಮ ॥೨೩॥**

ಬಕೀಯಂ='ಬಕ ಭಕ್ಷಣೇ' ಎಂದು ಧಾತು ಇರುವುದರಿಂದ ಭಕ್ಷಣಶೀಲಳಾದ ತಾಟಕಿಯ ಸಂಬಂಧದಿಂದ ಶಿಶು ಸಂಹಾರಕಳಾದ ಆದ್ದರಿಂದಲೇ, ಅಸಾಧ್ವೀ=ದುಷ್ಟಳಾದ,ಇಯಂ=ಪೂತನೆಯಲ್ಲಿಆವಿಷ್ಟಳಾದ ಊರ್ವಶಿಯು,ಜಿಘಾಂಸಯಾ=ಶ್ರೀಕೃಷ್ಣನನ್ನು ಕೊಲ್ಲುವ ಇಚ್ಛೆಯಿಂದ, ಸ್ತನಕಾಲಕೂಟಂ=ಕುಚಗಳಲ್ಲಿ ತುಂಬಿರುವ ಕಾಲಕೂಟವಿಷವನ್ನು, ಆಪಾಯಯತ್=ಕುಡಿಸಿದಳು. ಅವಳಲ್ಲಿ ಆವಿಷ್ಟಳಾದ ಊರ್ವಶಿಯು, ಧಾತ್ರ್ಯುಚಿತಾಂ=ಪೋಷಕಳಾದ ಯಶೋದೆಗೆ, ಉಚಿತಾಂ=ಯೋಗ್ಯವಾದ, ಗತಿಂ=ಲೋಕವನ್ನು, ಲೇಭೇ=ಹೊಂದಿದಳು. ಕಾರಣ ತತೋ ಅನ್ಯಂ=ಇಂಥ ದಯಾಲುವನ್ನು ಬಿಟ್ಟು ಬೇರೆ, ಕಂ=ಯಾರನ್ನು, ಶರಣಂವ್ರಜೇಮ=ಮೊರೆಯನ್ನು ಹೊಂದುವೆವು. (ಮೋಕ್ಷಕ್ಕಾಗಿ ಭಜಿಸೋಣ) ॥೨೩॥

ಹಾಗಾದರೆ ಭಗವಂತನು ಭಾಗವತರನ್ನೇ ಅನುಗ್ರಹಿಸುವನು ಎಂದಂತಾಯಿತು. ಆಗ ಅಸುರಯೋನಿಯಲ್ಲಿ ಜನಿಸಿದ ಭಾಗವತರಲ್ಲದ ಬಲಿ ಮುಂತಾದವರಿಗೆ ಭಗವದನುಗ್ರಹವಾಗಬಾರದಲ್ಲ? ಎಂದರೆ ಭಾಗವತರಾಗುವುದಕ್ಕೆ ಸತ್ಕುಲಪ್ರಸೂತಿ

ಪ್ರಯೋಜಕವಲ್ಲ; ಭಕ್ತಿಯೇ ಪ್ರಯೋಜಕವು. ಬಲಿಮುಂತಾದವರು ಭಕ್ತಿಯುಳ್ಳ-ವರಾದ್ದರಿಂದ ಭಾಗವತರೇ ಎಂದು ಹೇಳುವರು –

ಮನ್ಯೇಽಸುರಾನ್ ಭಾಗವತಾನ್ ತ್ರ್ಯಧೀಶೇ
ಸಂರಂಭಮಾರ್ಗಾಭಿನಿವಿಷ್ಟಚಿತ್ತಾನ್ ।
ಯೇ ಸಂಯುಗೇಽಚಕ್ಷತ ತಾರ್ಕ್ಷ್ಯಪುತ್ರ-
ಸ್ಯಾಂಸೇ ಸುನಾಭಾಯುಧಮಾಪತಂತಂ ॥ ೨೪॥

ಯೇ=ಯಾರು,ಸಂಯುಗೇ=ಯುದ್ಧದಲ್ಲಿ,ತಾರ್ಕ್ಷ್ಯಪುತ್ರಸ್ಯ=ಕಶ್ಯಪನಮಗನಾದ ಗರುಡನ, ಅಂಸೇ=ಹೆಗಲಮೇಲೆ ಕುಳಿತು, ಸುನಾಭಾಯುಧಂ=ಚಕ್ರಾಯುಧವನ್ನು ಧರಿಸಿದ, ಆಪತಂತಂ=ಬರುತ್ತಿರುವ ಶ್ರೀಹರಿಯನ್ನು, ಅಚಕ್ಷತ=ಭಕ್ತಿಪೂರ್ವಕ ನೋಡಿದರೋ, ಅವರನ್ನು ತ್ರ್ಯಧೀಶೇ=ಮೂರು ಲೋಕಕ್ಕೆ ಒಡೆಯನಾದ ಶ್ರೀಹರಿಯಲ್ಲಿ, ಸಂರಂಭಮಾರ್ಗಾಭಿನಿವಿಷ್ಟಚಿತ್ತಾನ್=ಕ್ರೋಧಮಾರ್ಗದಿಂದ ಭಕ್ತಿಪೂರ್ವಕ ನೆಟ್ಟ ಮನಸುಳ್ಳ, ಅಸುರಾನ್=ಅಸುರಯೋನಿಯಲ್ಲಿ ಜನಿಸಿದರವನ್ನು ಭಾಗವತಾನ್ ಮನ್ಯೇ=ಭಾಗವತರೆಂದೆ ತಿಳಿಯುವೆನು.

ಇಲ್ಲಿ ಅಸುರಾನ್ ಎಂದು ಸಾಮಾನ್ಯವಾಗಿ ಹೇಳಿದ್ದರಿಂದ ಯುದ್ಧದಲ್ಲಿ ಭಗವಂತನನ್ನು ನೋಡುವ ಎಲ್ಲ ಅಸುರರು ಭಾಗವತರೆಂದು ಹೇಳಿದಂತೆ ತೋರುವುದು ಅದು ಸರಿಯಲ್ಲ. ದ್ವೇಷಿಗಳಿಗೂ ಮುಕ್ತಿಯೋಗ ಬರಬೇಕಾದೀತು! ಕಾರಣ ಅಸುರನಾಗಿ ಜನಿಸುವುದು ಭಾಗವತನಾಗಲು ಕಾರಣವಲ್ಲ. ಭಕ್ತಿಯೇ ಪ್ರಯೋಜಕವೆಂದು ಪ್ರಮಾಣದಿಂದಲೇ ತಿಳಿಸುವರು –

''ಅಸುರಾ ಅಪಿ ಯೇ ವಿಷ್ಣುಂ ಶಂಖಚಕ್ರಗದಾಧರಂ ।
ಭಕ್ತಿಪೂರ್ವಮವೇಕ್ಷಂತೇ ಜ್ಞೇಯಾ ಭಾಗವತಾ ಇತಿ ॥
ವಿದ್ವಿಷಂತಿ ತು ಯೇ ವಿಷ್ಣುಂ ಋಷಿಪುತ್ರಾ ಅಪಿ ಸ್ಫುಟಂ ।
ಆಸುರಾಸ್ತೇಽಪಿ ವಿಜ್ಞೇಯಾ ಗಚ್ಛಂತಿ ಚ ಸದಾ ತಮಃ ॥
ಜೀವದ್ವಯಸಮಾಯೋಗಾದ್ಧಿರಣ್ಯಕಮುಖಾಃ ಪರೇ ।
ಭಕ್ತಿದ್ವೇಷಯುತಾಶ್ಚ ಸ್ಯುರ್ಗತಿಸ್ತೇಷಾಂ ಯಥಾ ನಿಜಾ ॥
ಕಂಸಪೂತನಿಕಾದ್ಯಾಶ್ಚ ಬಾಂಧವಾದಿಯುತಾ ಯತಃ ।
ಜೀವದ್ವಯಸಮಾಯೋಗಾದ್ಗತಿದ್ವಯಜೀಗಿಷವಃ ॥
ಸರ್ವಥಾ ಭಕ್ತಿತೋ ಮುಕ್ತಿಃ ದ್ವೇಷಾತ್ತಮ ಉದೀರಿತಂ ।
ನಿಯಮಸ್ತ್ವನಯೋರ್ನಿತ್ಯಂ ಮೋಹಾಯಾನ್ಯವಚೋ ಭವೇತ್''॥

ಇತಿ ಬ್ರಾಹ್ಮೇ ।

ಅಸುರ ಯೋನಿಯಲ್ಲಿ ಜನಿಸಿದರೂ ಶಂಖಚಕ್ರಗದಾಧಾರೂದ ಶ್ರೀಹರಿಯನ್ನು ಯಾರು ಭಕ್ತಿಯಿಂದ ಕಾಣುವರೋ ಅವರನ್ನು ಭಾಗವತರೆಂದು ತಿಳಿಯಬೇಕು. ಋಷಿಕುಮಾರರಾಗಿಯೂ ಯಾರು ಶ್ರೀಹರಿಯನ್ನು ದ್ವೇಷಿಸುವರೋ ಅವರನ್ನು ಅಸುರರೆಂದೇ ತಿಳಿಯಬೇಕು. ಅಂಥವರು ತಮಸ್ಸಿಗೆ ಹೋಗುವರು.

ಇನ್ನು ಹಿರಣ್ಯಕಶಿಪು ಮುಂತಾದವರು ಜೀವದ್ವಯಾವೇಶವಿರುವುದರಿಂದ ಪರಮಾತ್ಮನಲ್ಲಿ ಭಕ್ತಿ,ದ್ವೇಷ ಎರಡನ್ನೂ ಮಾಡುವರು. ಅವರಿಗೆ ಸ್ವಾಭಾವಿಕ ಯೋಗ್ಯತಾಪ್ರಕಾರ ಅಸುರನಿಗೆ ತಮಸ್ಸು,ದೇವತೆಗೆ ಉತ್ತಮಲೋಕಪ್ರಾಪ್ತಿಯಾಗು-ವುದು. ಕಂಸ ಪೂತನಾ ಮೊದಲಾದವರು ಭಾಂಧವಾದಿಗಳಿಂದ ಕೂಡಿದವರಾದ್ದ-ರಿಂದ ಜೀವದ್ವಯಾವೇಶವಿದ್ದಪ್ರಯುಕ್ತ ಎರಡು ಗತಿಯನ್ನು ಹೊಂದುವರು. ಅಂದರೆ ದಂತವಕ್ತ್ರ ಇವನಲ್ಲಿ ಬಾಂಧವ ಎಂಬ ಭಕ್ತ, ಕಂಸನಲ್ಲಿ ಭೃಗು ಭಕ್ತ, ಪೂತನಾಳಲ್ಲಿ ಊರ್ವಶೀ ಭಕ್ತಳು. ತಾಟಕಾ ದ್ವೇಷಯುತಳು. ಹೀಗಾಗಿ ಮುಕ್ತಿ ತಮಸ್ಸುಗಳಿಗೆ ಹೋಗುವವರು. ಭಕ್ತಿಯಿಂದ ಮುಕ್ತಿಯೇ; ದ್ವೇಷದಿಂದ ತಮಸ್ಸೇ ಎಂಬ ನಿಯಮವು ನಿತ್ಯವೆಂದು ಶಾಸ್ತ್ರದಲ್ಲಿ ಹೇಳಿದೆ ಕಾರಣ ದ್ವೇಷ ಮಾಡಿದವರಿಗೆ ತಮಸ್ಸು ಭಕ್ತಿಮಾಡಿದ ಸಜ್ಜನರಿಗೆ ಮುಕ್ತಿ ಎಂದು ತಿಳಿಯಬೇಕು. 'ದ್ವೇಷಾಚ್ಚೈದ್ಯಾದಯೋ ನೃಪಾಃ' ಮುಂತಾದ ದ್ವೇಷದಿಂದ ಮುಕ್ತಿಯೆಂದು ಹೇಳುವ ವಾಕ್ಯಗಳು ಮೋಹಕಗಳು. 'ಭಯಾತ್ ಕಂಸಃ' ಎಂಬುದು 'ಅಹೋ ಬಕೀ..'ಎಂಬುದು ಅವರಲ್ಲಿ ಆವಿಷ್ಟ ಸಜ್ಜೀವವಿಷಯವೆಂದು ತಿಳಿಯಬೇಕು.॥೨೪॥

ಹಿಂದೆ ಮನುಷ್ಯರಂತೆ ಲೀಲೆಯನ್ನು ಮಾಡಲು ಮತ್ತು ತನ್ನ ಮಾಯಾ ಬಲ ಪ್ರದರ್ಶನ ಮಾಡಲು ಭಗವಂತನು ಅವತರಿಸಿದನೆಂದು ಹೇಳಿದರು ಆ ಲೀಲೆಗಳಾವುವು ಯೋಗ, ಮಾಯಾಬಲವಾವುದು ಎಂಬುದೆಲ್ಲವನ್ನೂ ಸಂಕ್ಷೇಪವಾಗಿ ಹೇಳುವರು –

**ವಸುದೇವಸ್ಯ ದೇವಕ್ಯಾಂ ಜಾತೋ ಭೋಜೇಂದ್ರಬಂಧನೇ ।**
**ಚಿಕೀರ್ಷುರ್ಭಗವಾಂಚ್ಛರ್ಮ ಅಬ್ಜಜೇನಾಭಿಯಾಚಿತಃ ॥೨೫॥**

ಅಬ್ಜಜೇನ=ಬ್ರಹ್ಮದೇವರಿಂದ, ಅಭಿಯಾಚಿತಃ=ಪ್ರಾರ್ಥಿತನಾದ ಭಗವಾನ್ ಶ್ರೀಹರಿಯು, ಶರ್ಮ ಚಿಕೀರ್ಷುಃ=ಕಂಸನನ್ನು ಕೊಂದು ವಸುದೇವದೇವಕಿಯರಿಗೆ ಸುಖವನ್ನುಂಟು ಮಾಡಲು,ಭೋಜೇಂದ್ರಬಂಧನೇ ಕೃತೇ ಸತಿ=ಕಂಸನು ವಸುದೇವ ದೇವಕಿಯರನ್ನು ಕಾರಾಗೃಹದಲ್ಲಿರಿಸಿದಾಗ, ವಸುದೇವಸ್ಯ ಸಕಾಶಾತ್=ವಸುದೇವ-ನಿಂದ, ದೇವಕ್ಯಾಂ=ದೇವಕಿಯಲ್ಲಿ, ಜಾತಃ=ಅವತರಿಸಿದನು ॥೨೫॥

**ತತೋ ನಂದವ್ರಜಮಿತಃ ಪಿತ್ರಾ ಕಂಸಾದ್ ವಿಬಿಭ್ಯತಾ ।**
**ಏಕಾದಶಸಮಾಸ್ತತ್ರ ಗೂಢಾರ್ಚಿಃ ಸಬಲೋಽವಸತ್ ॥೨೬॥**

ಕಂಸಾತ್=ಕಂಸನಿಂದ, ವಿಬಿಭ್ಯತಾ=ವಿಶೇಷವಾಗಿ ಹೆದರಿದ, ಪಿತ್ರಾ=ವಸುದೇವ-ನಿಂದ,ತತಃ=ಮಥುರೆಯಿಂದ, ನಂದವ್ರಜಂ ಇತಃ=ನಂದಗೋಕುಲಕ್ಕೆ ಕರೆದೊಯ್ಯ-ಲ್ಪಟ್ಟವನಾಗಿ, (ನಂದಗೋಕುಲವನ್ನು ಹೊಂದಿದವನಾಗಿ) ತತ್ರ=ಅಲ್ಲಿಯೂ, ಗೂಢಾರ್ಚಿಃ=ತನ್ನ ಮಾಹಾತ್ಮ್ಯವನ್ನು ತೋರಗೊಡದೆ,ಏಕಾದಶಸಮಾಃ=ಹನ್ನೊಂದು ವರ್ಷಗಳವರೆಗೆ, ಸಬಲಃ=ಬಲರಾಮ ಸಹಿತನಾಗಿ ಅವಸತ್=ವಾಸಮಾಡಿದನು. ॥೨೬॥

**ಪರೀತೋ ವತ್ಸಪೈರ್ವತ್ಸಾಂಶ್ಚಾರಯನ್ ವ್ಯಹರದ್ಧರಿಃ ।**
**ಯಮುನೋಪವನೇ ಕೂಜದ್‌ದ್ವಿಜಸಂಕುಲಿತಾಂಘ್ರಿಪೇ ॥೨೭॥**

ಕೂಜದ್=ಅವ್ಯಕ್ತ ಶಬ್ದಗಳನ್ನು ಮಾಡುವ, ದ್ವಿಜ=ಪಕ್ಷಿಗಳಿಂದ, ಸಂಕುಲಿತ=ತುಂಬಿದ, ಅಂಘ್ರಿಪೇ=ಗಿಡಗಳುಳ್ಳ, ಯಮುನೋಪವನೇ=ಯಮುನಾನದಿಯ ಸಮೀಪದ ಅಡವಿಯಲ್ಲಿ,ವತ್ಸಪೈಃ=ಕರುಗಳನ್ನು ಕಾಯುವ ಗೋಪಾಲಬಾಲಕರಿಂದ ಪರೀತಃ=ಸುತ್ತುವರೆಯಲ್ಪಟ್ಟು, ವತ್ಸಾನ್ ಚಾರಯನ್=ಕರುಗಳನ್ನು ಮೇಯಿಸುತ್ತ, ಹರಿಃ=ಶ್ರೀಕೃಷ್ಣನು, ವ್ಯಹರತ್=ಕ್ರೀಡಿಸಿದನು ॥೨೭॥

**ಕೌಮಾರಾ ದರ್ಶಯಂಶ್ಚೇಷ್ಟಾಃ ಪ್ರೇಕ್ಷಣೀಯಾ ವ್ರಜೌಕಸಾಂ ।**
**ರುದನ್ನಿವ ಹಸನ್ ಮುಗ್ಧಬಾಲಸಿಂಹಾವಲೋಕನಃ ॥೨೮॥**

ವ್ರಜೌಕಸಾಂ=ಗೋಕುಲದಲ್ಲಿ ವಾಸಿಸುವ ಜನರಿಗೆ, ಪ್ರೇಕ್ಷಣೀಯಾಃ=ನೋಡಲೇಬೇಕಾದ (ನಯನಮನೋಹರಗಳಾದ) ಕೌಮಾರಾಃ ಚೇಷ್ಟಾಃ=ಬಾಲ-ಲೀಲೆಗಳನ್ನು, ದರ್ಶಯನ್=ತೋರಿಸುವವನಾಗಿ, ರುದನ್ ಇವ=ಅಳುವವನಂತೆ, ಹಸನ್‌ಇವ=ನಗುವವನಂತೆ,ಮುಗ್ಧಬಾಲಸಿಂಹಾವಲೋಕನಃ=ಮುಗ್ಧವಾದ ಸಿಂಹದ ಮರಿಯಂತೆ ಕಾಣುವವನು. ॥೨೮॥

**ಸ ಏವ ಗೋಕುಲಂ ಲಕ್ಷ್ಮ್ಯಾ ನಿಕೇತಂ ಸಿತಗೋವೃಷಂ ।**
**ಚಾರಯನ್ನನುಗಾನ್ ಗೋಪಾನ್ ರಣದ್ವೇಣುರರೀರಮತ್ ॥೨೯॥**

ಸ ಏವ=ದೊಡ್ಡವನಾದ ಆ ಶ್ರೀಕೃಷ್ಣನೇ, ಲಕ್ಷ್ಮ್ಯಾಃ=ಶೋಭಾದಿ ಸಂಪತ್ತಿಗೆ, ನಿಕೇತಂ=ಆಶ್ರಯವಾದ, ಸಿತಗೋವೃಷಂ=ಶುಭ್ರವಾದ ಘೂಳಿಯಿಂದ ಕೂಡಿದ, ಗೋಕುಲಂ=ಆಕಳುಗಳನ್ನು ಚಾರಯನ್=ಹುಲ್ಲು ಮೇಯಿಸುತ್ತ, ರಣದ್ವೇಣುಃ=

ಕೊಳಲನ್ನೂದುತ್ತ, ಅನುಗಾನ್, ಗೋಪಾನ್=ಹಿಂಬಾಲಿಸುವ ಗೋಪಾಲರನ್ನು ಅರೀರಮತ್= ಸಂತೋಷಗೊಳಿಸಿದನು. ॥೨೯॥

**ಪ್ರಯುಕ್ತಾನ್ ಭೋಜರಾಜೇನ ಮಾಯಿನಃ ಕಾಮರೂಪಿಣಃ ।**
**ಲೀಲಯಾ ವ್ಯನುದತ್ ತಾಂಸ್ತಾನ್ ಬಾಲಃ ಕ್ರೀಡನಕಾನಿವ ॥೩೦॥**

ಭೋಜರಾಜೇನ=ಕಂಸನಿಂದ, ಪ್ರಯುಕ್ತಾನ್=ಕಳಿಸಲ್ಪಟ್ಟ, ಕಾಮರೂಪಿಣಃ=ತನ್ನ ಇಚ್ಛೆಯಂತೆ ರೂಪವನ್ನು ತೆಗೆದುಕೊಳ್ಳುವ, ಮಾಯಿನಃ=ಮಾಯೆಯಿಂದ ತಮ್ಮ ನಿಜರೂಪವನ್ನು ಮುಚ್ಚಿಕೊಳ್ಳುವ, ತಾನ್ ತಾನ್=ಆ ರಾಕ್ಷಸರನ್ನು, ಬಾಲಃ= ಹುಡುಗನು, ಕ್ರೀಡನಕಾನಿವ=ಆಟಿಗೆಗಳನ್ನು (ಹುಲ್ಲು ಮುಂತಾದವುಗಳಿಂದ ಮಾಡಿದ ಸಿಂಹ ಮುಂತಾದುವನ್ನು) ಮುರಿಯುವಂತೆ, ಲೀಲಯಾ=ಅನಾಯಾಸ-ವಾಗಿ, ವ್ಯನುದತ್=ಕೊಂದನು. ॥೩೦॥

**ವಿಪನ್ನಾನ್ ವಿಷಪಾನೇನ ನಿಗೃಹ್ಯ ಭುಜಗಾಧಿಪಂ ।**
**ಉತ್ಥಾಪ್ಯಾಪಾಯಯದ್ ಗಾವಸ್ತತ್ತೋಯಂ ಪ್ರಕೃತಿಸ್ಥಿತಂ ॥೩೧॥**

ಭುಜಗಾಧಿಪಂ=ಕಾಲಿಯಸರ್ಪವನ್ನು, ನಿಗೃಹ್ಯ=ಶಿಕ್ಷಿಸಿ, ವಿಷಪಾನೇನ=ವಿಷಮಿಶ್ರ ನೀರನ್ನು ಕುಡಿದಕಾರಣ, ವಿಪನ್ನಾನ್=ಮೃತವಾದ, ಗಾವಃ=ಆಕಳುಗಳನ್ನು, ಉತ್ಥಾಪ್ಯ= ಬದುಕಿಸಿ, ಪ್ರಕೃತಿಸ್ಥಿತಂ=ಸ್ವಾಭಾವಿಕವಾಗಿರುವ ಅಂದರೆ ವಿಷರಹಿತವಾದ, ತತ್ತೋಯಂ=ಯಮುನೆಯ ನೀರನ್ನು, ಅಪಾಯಯತ್=ಕುಡಿಸಿದನು. ॥೩೧॥

**ಅಯಾಜಯದ್ ಗೋಸವೇನ ಗೋಪರಾಜಂ ದ್ವಿಜೋತ್ತಮೈಃ ।**
**ವಿತ್ತಸ್ಯ ಚೋರುಭಾರಸ್ಯ ಚಿಕೀರ್ಷನ್ ಸದ್ವ್ಯಯಂ ವಿಭುಃ ॥೩೨॥**

ಉರುಭಾರಸ್ಯ=ಅತ್ಯಂತ ಸಮೃದ್ಧವಾದ, ವಿತ್ತಸ್ಯ=ಹಣದ ಸದ್ವ್ಯಯಂ=ಒಳ್ಳೆಯ ವಿನಿಯೋಗವನ್ನು, ಚಿಕೀರ್ಷನ್=ಮಾಡಲಿಚ್ಛಿಸಿ, ವಿಭುಃ=ಶ್ರೀಕೃಷ್ಣನು, ದ್ವಿಜೋತ್ತಮೈಃ= ಬ್ರಾಹ್ಮಣಶ್ರೇಷ್ಠರಿಂದ ಗೋಸವೇನ=ಆಕಳುಗಳು, ಪರ್ವತ, ಬ್ರಾಹ್ಮಣರಪೂಜಾ ರೂಪವಾದ ಯಜ್ಞದಿಂದ, ಗೋಪರಾಜಂ=ನಂದ ಗೋಪನಿಂದ, ಅಯಾಜಯತ್= ಯಜ್ಞಮಾಡಿಸಿದನು. ಇಂದ್ರನ ಮಾನಭಂಗ ಮಾಡುವ ಉದ್ದೇಶವೂ ಇತ್ತು ಎಂಬುದು ಚಶಬ್ದದಿಂದ ತಿಳಿಯುವುದು. ॥೩೨॥

**ವರ್ಷತೀಂದ್ರೇ ವ್ರಜಃ ಕೋಪಾದ್ ಭಗ್ನಮಾನೇಽತಿವಿಹ್ವಲೇ ।**
**ಗೋತ್ರಲೀಲಾತಪತ್ರೇಣ ತ್ರಾತೋ ಭದ್ರಾನುಗೃಹ್ಣತಾ ॥೩೩॥**

ಹೇ ಭದ್ರ=ಮಂಗಳಕರನಾದ ವಿದುರನೇ, ಭಗ್ನಮಾನೇ=ತನಗೆ ಪೂಜೆ ಮಾಡದ್ದರಿಂದ ಅವಮಾನಿತನಾದ, ಅತಿವಿಹ್ವಲೇ=ಕರ್ತವ್ಯಮೂಢನಾದ, ಇಂದ್ರೇ= ಇಂದ್ರನು, ಕೋಪಾತ್=ಸಿಟ್ಟಿನಿಂದ, ವರ್ಷತಿ ಸತಿ=ಮಳೆಗರೆಯುತ್ತಿರಲು, ಅನುಗೃಹ್ಣತಾ= ಅನುಗ್ರಹ ಮಾಡುವ ಶ್ರೀಕೃಷ್ಣನಿಂದ, ಗೋತ್ರಲೀಲಾತಪತ್ರೇಣ=ಪರ್ವತವೆಂಬ ಆಟದ ಛತ್ರಿಯಿಂದ, ವ್ರಜಃ=ಗೋಕುಲವು ತ್ರಾತಃ=ರಕ್ಷಿಸಲ್ಪಟ್ಟಿತು ॥೩೩॥

**ಶರಚ್ಛಶಿಕರೈರ್ಮೃಷ್ಟಂ ಮಾನಯನ್ ರಜನೀಮುಖಂ ।**
**ಗಾಯನ್ ಕಲಪದಂ ರೇಮೇ ಸ್ತ್ರೀಣಾಂ ಮಂಡಲಮಂಡನಃ ॥೩೪॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ದ್ವಿತೀಯೋಽಧ್ಯಾಯಃ ॥*

ಶರಚ್ಛಶಿಕರೈಃ=ಶರದೃತುವಿನಲ್ಲಿಉದಯಿಸಿದಚಂದ್ರಕಿರಣಗಳಿಂದಮೃಷ್ಟಂ= ಅಲಂಕೃತವಾದ, ರಜನೀಮುಖಂ=ಪ್ರದೋಷಕಾಲವನ್ನು, ಮಾನಯನ್=ಗೌರವಿ-ಸುವವನಾಗಿ, (ಅದರ ಉಪಯೋಗಪಡೆದು) ಕಲಪದಂ ಗಾಯನ್=ಅವ್ಯಕ್ತ ಮಧುರವಾಗಿ ಹಾಡುತ್ತ, ಸ್ತ್ರೀಣಾಂ=ಸ್ತ್ರೀಯರ, ಮಂಡಲ=ಸಮೂಹವನ್ನು, ಮಂಡನಃ= ಅಲಂಕರಿಸುವನಾಗಿ ರೇಮೇ=ಕ್ರೀಡಿಸಿದನು ॥೩೪॥

*ಇಲ್ಲಿಗೆ ಎರಡನೆಯ ಅಧ್ಯಾಯವು ಮುಗಿಯಿತು.*

## ಎರಡನೆಯ ಅಧ್ಯಾಯದ ತಾತ್ಪರ್ಯ

ಸಂಬಂಧಿಸಿದ ಎಲ್ಲ ವಸ್ತುಗಳಿಗಿಂತ ಅತ್ಯಂತ ಪ್ರಿಯತಮನಾದ ಶ್ರೀಹರಿಗೆ ಸಂಬಂಧಪಟ್ಟ ಕಥೆಯನ್ನು ಹೇಳೆಂದು ವಿದುರರಿಂದ ಕೇಳಿಸಿಕೊಂಡ ಉದ್ಧವರು ಭಕ್ತರಾದ್ದರಿಂದ ಶ್ರೀಹರಿಯನ್ನು ಸ್ಮರಿಸಿಕೊಂಡು ಗಂಟಲುಬ್ಬಿ ಉತ್ತರಕೊಡಲು ಅಸಮರ್ಥರಾದರು. ಐದು ವರ್ಷದ ಹುಡುಗರಾಗಿದ್ದಾಗ ಸಹ ಬೆಳಗಿನ ಊಟಕ್ಕೆ ತಾಯಿಯು ಪ್ರೀತಿಯಿಂದ ಕರೆಯುತ್ತಿದ್ದರೂ ಹುಡುಗರ ಆಟದಲ್ಲಿ ಶ್ರೀಹರಿಯ ಪೂಜೆಯಲ್ಲಿ ತೊಡಗಿ ಊಟವನ್ನೇ ಅಪೇಕ್ಷಿಸದಿದ್ದ ಇವರು ಕಾಲಕ್ರಮದಲ್ಲಿ ಶ್ರೀಹರಿಯ ಸೇವೆಯಿಂದಲೇ ಮುದಿತನವನ್ನು ಹೊಂದಿರುವಾಗ ಅವನನ್ನು ಸ್ಮರಿಸಿಕೊಂಡು ಸಾಮಾನ್ಯರಂತೆ ಹೇಗೆತಾನೇ ಉತ್ತರಕೊಟ್ಟಾರು? ಅತಿಶಯವಾದ ಭಕ್ತಿಯಿಂದ ಅವರು ಶ್ರೀಹರಿಯ ಪಾದಗಳೆಂಬ ಅಮೃತದಲ್ಲಿ ಮುಳುಗಿ ಪರಮಾನಂದವನ್ನು ಹೊಂದಿದ್ದರಾದ್ದರಿಂದ ಮುಹೂರ್ತಕಾಲ ಮಾತನಾಡದೆ ಸುಮ್ಮನಿದ್ದರು. ಅವರ ಎಲ್ಲ ಅವಯವಗಳೂ ರೋಮಾಂಚಿತವಾಗಿದ್ದುವು. ಅರೆಮುಚ್ಚಿದ್ದ ಕಣ್ಣುಗಳಿಂದ ನೀರು ಹನಿಯುತ್ತಿತ್ತು. ಭಕ್ತಿಯ ಪ್ರವಾಹದಲ್ಲಿ ಮಿಂದಿದ್ದ ಅವರನ್ನು ನೋಡಿ ವಿದುರರು ಇವರೇ ಧನ್ಯರು ಎಂದು ಭಾವಿಸಿದರು. ಸ್ವಲ್ಪಸ್ವಲ್ಪವಾಗಿ ಅಸಂಪ್ರಜ್ಞಾತ ಸಮಾಧಿಯಿಂದ ಎಚ್ಚೆತ್ತ ಅವರು ಕಣ್ಣುಗಳನ್ನು ಒರೆಸಿಕೊಂಡು ಮುಗುಳುನಗೆ ನಕ್ಕು ವಿದುರನಿಗೆ ಉತ್ತರ ಕೊಡಲು ಪ್ರಾರಂಭಿಸಿದರು.

ಉದ್ಧವ - ಕೃಷ್ಣನೆಂಬ ಸೂರ್ಯನು ಅಸ್ತಂಗತನಾಗಲಿರುವನು. ಯಾದವರು ಶಕ್ತಿಗುಂದಿ ಕಾಂತಿಹೀನರಾಗುತ್ತಿದ್ದಾರೆ. ಈಗಾಗಲೇ ವಿಪ್ರಶಾಪಗ್ರಸ್ತರಾಗಿ ಯಾದವರು ಕಾಲಸರ್ಪದ ದವಡೆಯಲ್ಲಿದ್ದಾರೆ. ಈ ಸ್ಥಿತಿಯಲ್ಲಿ ಕುಶಲಪ್ರಶ್ನೆಗಾದರೂ ಅವಕಾಶವೆಲ್ಲಿ? ಜನರೆಲ್ಲ ಭಾಗ್ಯಹೀನರು. ಯಾದವರಂತೂ ತುಂಬ ಭಾಗ್ಯಹೀನರು. ಶ್ರೀಹರಿಯು ಇವರ ಜೊತೆಯಲ್ಲಿಯೇ ವಾಸಿಸುತ್ತಿದ್ದರೂ ಅವನನ್ನು ದಾಟಲಾಗದ ಸಂಸಾರಸಾಗರವನ್ನು ದಾಟಿಸುವನೆಂದು ತಿಳಿಯಲಿಲ್ಲ. ನೀರಿನಲ್ಲಿ ಇರುವ ಮೀನುಗಳು ಪ್ರತಿಬಿಂಬಿಸಿರುವ ಚಂದ್ರನನ್ನು ತಿಳಿಯಬಲ್ಲವೇ! ಇವರು ಚೇಷ್ಟೆಯಿಂದ ಪರರ ಮನಸ್ಸಿನಲ್ಲಿರುವುದನ್ನು ತಿಳಿಯಬಲ್ಲರು. ದೇಹದಲ್ಲಿ ಅಭಿಮಾನಿಗಳು ಕೇವಲ ಕ್ರೀಡಾಸಕ್ತರು. ಇವರು ಬ್ರಹ್ಮಾದಿಗಳಿಗಿಂತ ಉತ್ತಮನಾದ ಶ್ರೀಹರಿಯನ್ನು ಕೆಲವರಿಗೆ ಮಾತ್ರ ಆಶ್ರಯನಾದ ಸಾಮಾನ್ಯನಾದ ಮುಖ್ಯ ಮಾನವನೆಂದು ತಿಳಿದಿರುವರಲ್ಲ ! ಎಲ್ಲರಲ್ಲಿಯೂ ವಾಸಿಸುವ ಇವನನ್ನು ಯಾದವರಲ್ಲಿ ಮಾತ್ರ ಶ್ರೇಷ್ಠನೆಂದು ಬಗೆದಿರುವರಲ್ಲವೆ! ಹರಿಭಕ್ತರಲ್ಲದವರು ಶ್ರೀಹರಿಯ ಬಂಧಕಶಕ್ತಿಗೆ ಒಳಪಟ್ಟು ಜ್ಞಾನವಿಲ್ಲದವರಾಗಿ ಅನ್ಯಥಾ ಜ್ಞಾನಿಗಳಾಗಿ ಅಸಜ್ಜನರಿಗೆ ಆಶ್ರಯರಾಗಿರುತ್ತಾರೆ. ಮೋಕ್ಷಕ್ಕೆ ಕಾರಣಗಳಲ್ಲದ ವಿಷಯಗಳಲ್ಲಿ ತೊಡಗಿರುತ್ತಾರೆ. ಇವರು ಹೇಳುವ ತಪ್ಪು ಮಾತುಗಳಿಂದ ಎಂದೂ ಭಗವದ್ಭಕ್ತರ ಬುದ್ಧಿಯು ಭ್ರಾಂತವಾಗುವುದಿಲ್ಲ. ಸಚ್ಚಿದಾನಂದಸ್ವರೂಪನಾದ ಶ್ರೀಹರಿಯಲ್ಲಿ ಅವರ ಮನಸ್ಸು ಯಾವಾಗಲೂ ದೃಢವಾಗಿ ಸೇರಿರುವುದು. ಆ ಶ್ರೀಹರಿಯೇ ಶ್ರೀಕೃಷ್ಣನಾಗಿ ಅವತರಿಸಿ ತನ್ನ ದೇಹದಿಂದ ಜನರ ಕಣ್ಣಿಗೆ ರಂಜನೆಯನ್ನುಂಟುಮಾಡಿ ಮತ್ತೆ ಕಾಣದಂತೆ ಅಡಗಿಸಿಟ್ಟುಕೊಳ್ಳುವನು. ಜ್ಞಾನಿಗಳು ಅವನ ಚಿದಾನಂದರೂಪ-ವನ್ನು ತಿಳಿಯುವರು. ಅಜ್ಞಾನಿಗಳಿಗೆ ಅವನ ಪ್ರತಿಮಾರೂಪವೇ ಕಾಣುವುದು. ಅವನಿಗೆ ಎರಡೂ ಬಗೆಯ ರೂಪಗಳುಂಟು. ಮಾನವ ಲೀಲೆಯನ್ನು ತೋರಿಸಲು ಉಪಯುಕ್ತವಾದ ದೇಹವನ್ನು ಶ್ರೀಹರಿಯು ತನ್ನ ಇಚ್ಛಾ ಶಕ್ತಿಯಿಂದ ತೆಗೆದುಕೊಳ್ಳುವನು. ಅದು ಅವನಿಗೂ ವಿಸ್ಮಯವನ್ನುಂಟುಮಾಡುವಂತಹುದು. ಸೌಂದರ್ಯದ ಮುಖ್ಯಸ್ಥಾನ. ಅವನ ಪ್ರತಿಯೊಂದು ಅವಯವವೂ ಅಲಂಕಾರಗಳಿಗೆ ಅಲಂಕಾರವಾಗಿರುವುದು. ಧರ್ಮರಾಜನ ರಾಜಸೂಯ-ಯಾಗದಲ್ಲಿ ಈ ದೇಹವನ್ನು ಕಂಡ ಸಾಮಾನ್ಯ ಜನರು ಬ್ರಹ್ಮನ ಸೃಷ್ಟಿ ಕೌಶಲ್ಯವೆಲ್ಲವೂ ಇಲ್ಲಿಯೇ ನಿಬಿಡವಾಗಿದೆ ಎಂಬ ತಿಳಿದರು. ಇದಕ್ಕಿಂತ ಆಶ್ಚರ್ಯವುಂಟೆ! ಆ ರೂಪವನ್ನು ಬ್ರಹ್ಮನು ಸೃಷ್ಟಿಸಲಾಪನೇ? ವೇದಾರ್ಥಜ್ಞರಾದ ಜ್ಞಾನಿಗಳು ಈ ರೂಪವನ್ನು ನೋಡಿ ಇದರ ಮುಂದೆ ಬ್ರಹ್ಮನ ಮಂಗಳಕರ ವಿಷಯ ನಿರ್ಮಾಣ ನೈಪುಣ್ಯವು ಬಹಳ ಹೀನವೆಂದು ಬಗೆದರು. ನಿರವಧಿಕಸುಂದರನಾದ ಇವನನ್ನು

ಜ್ಞಾನಿಗಳು ತಾನೇ ಸಾಕಲ್ಯದಿಂದ ತಿಳಿಯಬಲ್ಲರೆ ! ಇದೇ ದೇಹದಿಂದ ಶ್ರೀಕೃಷ್ಣನು ಗೋಕುಲದ ಸ್ತ್ರೀಯರನ್ನು ಮುಗ್ಧಗೊಳಿಸಿದನು. ಅವನ ಪ್ರೇಮಪೂರ್ಣ ಮಂದಹಾಸವೂ ರಾಸಕ್ರೀಡೆಯೂ ಆ ಕಾಲದ ಲೀಲಾಮಯವಾದ ಅವನ ನೋಟವೂ ಆ ಸ್ತ್ರೀಯರಲ್ಲಿ ಅಭಿಮಾನವನ್ನು ಹುಟ್ಟಿಸಿದುವು. ಅವರ ಕಣ್ಣುಗಳು ಅವನಲ್ಲಿಯೇ ಕೀಲಿಸಿದಂತೆ ಅವರ ಮನಸ್ಸೂ ಅವನನ್ನೇ ಆಶ್ರಯಿಸಿತು. ಅವರು ತಮ್ಮ ಕೆಲಸಗಳನ್ನು ಮರೆತು ಕುಳಿತರಲ್ಲವೆ ! ತನ್ನ ಭಕ್ತರಾದ ಸಾತ್ವಿಕ ಜೀವರು ಅಭಕ್ತರಾದ ಅಸುರರಿಂದ ಬಹು ತೊಂದರೆಗೀಡಾಗಿರಲು ಅದನ್ನು ಹೋಗಲಾಡಿಸಲು ಬ್ರಹ್ಮನಿಂದ ಪ್ರಾರ್ಥಿತನಾಗಿ ಶ್ರೀಹರಿಯು ವ್ಯಕ್ತನಾದನು. ಆದರೆ ಇವನ ಕಾರ್ಯಗಳು ಬ್ರಹ್ಮಾದಿಗಳನ್ನೇ ಮೋಹಗೊಳಿಸುವಾಗ ನಮ್ಮ ಪಾಡೇನು? ಹುಟ್ಟಿಲ್ಲದ ಇವನು ವಸುದೇವನ ಹೆಂಡತಿಯ ಉದರದಿಂದ ಜನಿಸಿದಂತೆ ತೋರಿದನು. ಕಂಸನಿಗೆ ಹೆದರಿದವನಂತೆ ಗೋಕುಲದಲ್ಲಿ ಬೆಳೆದನು. ಅನಂತ-ಪರಾಕ್ರಮಿಯಾದ ಇವನು ಜರಾಸಂಧನಿಗೆ ಹೆದರಿದವನಂತೆ ನಟಿಸಿ ಮಧುರೆಯನ್ನು ಬಿಟ್ಟು ದ್ವಾರಕೆಗೆ ಪ್ರವಾಸಹೊರಟನು. ಕಂಸನನ್ನು ಸಂಹರಿಸಿದಮೇಲೆ ತಂದೆತಾಯಿಗಳಿಗೆ ನಮಸ್ಕಾರಮಾಡಿ "ತಂದೆ ! ಅಮ್ಮ ! ಕಂಸನಿಂದ ನೀವು ತುಂಬ ನೊಂದಿರಿ. ಇದಕ್ಕೆ ಯಾವ ಪ್ರತೀಕಾರವನ್ನೂ ನಾವು ಮಾಡಿಲ್ಲ. ನಮ್ಮಲ್ಲಿ ಅನುಗ್ರಹಿಸಿರಿ" ಎಂದು ಹೇಳಿದ ಮಾತುಗಳು ಮನಮೋಹಕವಾಗಿವೆ. ಕೇವಲ ಹುಬ್ಬುಗಳ ಅಲ್ಪ ಚಲನೆಯಿಂದಲೇ ಕಾಲನಂತೆ ಭೂಭಾರರಾದ ದೈತ್ಯರೆಲ್ಲರನ್ನೂ ಸಂಹರಿಸಿದ ಇವನ ಪಾದಾರವಿಂದಗಳನ್ನು ಆಘ್ರಾಣಿಸುವ ಯಾವನು ತಾನೇ ಇವನನ್ನು ಮರೆಯಬಲ್ಲನು ? ವಿದುರ ! ರಾಜಸೂಯ ಕಾಲದಲ್ಲಿ ನೀವೆಲ್ಲರೂ ನೋಡುತ್ತಿದ್ದಂತೆಯೇ ದ್ವೇಷಿಯಾದ ಶಿಶುಪಾಲನ್ನೂ ತನ್ನ ಒಳಗೇ ಸೇರಿಸಿಕೊಂಡು ಮೋಕ್ಷವಿತ್ತುದನ್ನು ತಿಳಿದಿರುವಿರಲ್ಲವೆ ! ಇಂತಹ ಸಿದ್ಧಿಯನ್ನು ಪಡೆಯಲು ಅಧಿಕಾರಿ ಚೇತನರು ಉಪಕ್ರಮಾದಿಗಳನ್ನು ಅನುಸರಿಸಿ ವೇದಾರ್ಥವನ್ನು ಮಾಡಿಕೊಂಡು ಹರಿಯೇ ಸರ್ವೋತ್ತಮನೆಂದು ಅರಿತು ಅವನಲ್ಲಿ ನಿರ್ದೋಷವಾದ ಭಕ್ತಿಯನ್ನು ಮಾಡುವರಲ್ಲವೇ ? ಭಕ್ತಿಯಿಂದ ಮಾತ್ರವೇ ಸಿಗುವ ಈತನು ಭಕ್ತನು ಅಸುರಾವೇಶದಿಂದ ದ್ವೇಷಮಾಡಿದರೂ ದ್ವೇಷದ ಫಲವಾದ ತಮಸ್ಸನ್ನು ಅಸುರನಿಗೆ ಕೊಟ್ಟು ಭಕ್ತನನ್ನು ಅನುಗ್ರಹಿಸಿ ಮೋಕ್ಷ ಕೊಡುವನೆಂದಮೇಲೆ ಇವನಿಗಿಂತ ಕರುಣಾಳುಗಳುಂಟೇ ? ಇಂತಹ ಶ್ರೀಹರಿಯ ಅಗಲುವಿಕೆಯನ್ನು ಯಾವನು ತಾನೇ ಸಹಿಸಬಲ್ಲ !

ದುರ್ಯೋಧನನ ಪಕ್ಷವನ್ನು ವಹಿಸಿ ಯುದ್ಧ ಮಾಡಿದ ಸಾತ್ವಿಕ ಜೀವರಾದ ಕರ್ಣ ಮೊದಲಾದವರೂ ಶ್ರೀಹರಿಯ ಮುಖಾರವಿಂದವನ್ನು ನೋಡಿ ಪವಿತ್ರರಾಗಿ

ಶ್ರೀಹರಿಯ ಅನುಗ್ರಹವನ್ನು ಪಡೆದು ಉತ್ತಮ ಗತಿಯನ್ನು ಪಡೆದರು. ಇಂತಹ ಮಹಾಮಹಿಮೋಪೇತನಾದ ಶ್ರೀಹರಿಗೆ ಸಮರಾಗಲಿ ಅಧಿಕರಾಗಲಿ ಇಲ್ಲ. ಅವನೇ ಸರ್ವೋತ್ತಮ ನಿಯಾಮಕನು. ಸ್ವಾನುಭವಪೂರ್ಣನಾಗಿ ಆಪ್ತಕಾಮನು. ಲೋಕಪಾಲಕರು ಅವನ ಪಾದಗಳಿಗೆ ತಮ್ಮ ಕಿರೀಟಗಳಿಂದ ನಮಸ್ಕರಿಸಿ ಪೂಜೆಮಾಡುವರು. ಸರ್ವೋತ್ತಮನಾದ ಈ ಶ್ರೀಕೃಷ್ಣನು ಸಿಂಹಾಸನದಲ್ಲಿ ಉಗ್ರಸೇನನ್ನು ಕೂಡಿಸಿ ಅವನ ಎದುರಿನಲ್ಲಿ ಕೈಮುಗಿದು ನಿಂತು "ಮಹಾಸ್ವಾಮಿಯವರು ಅವಧರಿಸಬೇಕು." ಎಂದು ಹೇಳಿದುದು ಅವನ ದಾಸವರ್ಗಕ್ಕೆ ಸೇರಿದ ನಮ್ಮ ಮನಸ್ಸನ್ನೂ ಮೋಹಗೊಳಿಸುತ್ತದೆ. ಮಕ್ಕಳನ್ನು ಕೊಂದು ಜೀವಿಸುತ್ತಿದ್ದ ಪೂತನೆಯು ಶ್ರೀಕೃಷ್ಣನನ್ನು ಕೊಲ್ಲಬೇಕೆಂದು ಎತ್ತಿಕೊಂಡು ಮತ್ತೆ ಮತ್ತೆ ವಿಷಸ್ತನ್ಯವನ್ನು ಊಡಿಸಿದಳು. ಆದರೆ ಅವಳಲ್ಲಿ ಆವಿಷ್ಟಳಾಗಿದ್ದ ಊರ್ವಶಿಯ ವಿಷಯದಲ್ಲಿ ಶ್ರೀಹರಿಯು ದಯೆಯನ್ನು ತೋರಿ ಅವಳಿಗೆ ಸದ್ಗತಿಯನ್ನಿತ್ತನು. ಇವನಿಗಿಂತ ಮತ್ತೆ ಯಾವ ದಯಾಳುಗಳಾದ ರಕ್ಷಕರಿರುವರು? ಅಸುರ ಯೋನಿಯಲ್ಲಿ ಬಂದ ಮಾತ್ರದಿಂದ ಭಗವದ್ಭಕ್ತರಿಗೆ ಕುಂದಿಲ್ಲ. ದ್ವೇಷ ಬುದ್ಧಿಯಿಂದ ಪ್ರಾರಂಭವಾದ ಹರಿಸ್ಮರಣೆಯು ಭಕ್ತಿಯಲ್ಲಿ ಪರಿಣಿತವಾಗಿ ಅವರನ್ನು ಭಕ್ತರನ್ನಾಗಿಯೇ ಉಳಿಸುವುದು. ಆದ್ರಿಂದಲೇ ಶ್ರೀಹರಿಯು ಚಕ್ರಧರನಾಗಿ ಗರುಡವಾಹನನಾಗಿ ಇವರಿಗೆ ತನ್ನ ರೂಪವನ್ನು ತೋರಿ ಜ್ಞಾನವನ್ನು ಕರುಣಿಸಿರುವನು.

ವಸುದೇವ ದೇವಕಿಯರು ಕಂಸನಿಂದ ಕಾರಾಗೃಹವಾಸಕ್ಕೆ ಈಡಾಗಿದ್ದುದನ್ನು ಕಂಡು ಅವರಿಗೆ ಬಂಧನದಿಂದ ಮುಕ್ತಿಯನ್ನು ಕೊಡುವುದಕ್ಕಾಗಿಯೂ, ಭೂಭಾರ ಹರಣಕ್ಕಾಗಿ ಬ್ರಹ್ಮದೇವನು ಮಾಡಿದ ಪ್ರಾರ್ಥನೆಯನ್ನು ನಡೆಸಿಕೊಡುವುದಕ್ಕಾ-ಗಿಯೂ ಶ್ರೀಹರಿಯು ವಸುದೇವನ ಮಗನಾಗಿ ದೇವಕಿಯ ಉದರದಿಂದ ವ್ಯಕ್ತನಾದನು. ಕಂಸನಿಗೆ ಹೆದರಿದ ವಸುದೇವನು ನಂದವ್ರಜಕ್ಕೆ ಶ್ರೀಹರಿಯನ್ನು ತೆಗೆದುಕೊಂಡುಹೋಗಿ ಬಿಟ್ಟನು. ಅಲ್ಲಿ ಬಲರಾಮನೊಡನೆ ಶ್ರೀಕೃಷ್ಣನು ಹನ್ನೊಂದು ವರ್ಷಗಳ ಕಾಲ ಯಾರಿಗೂ ತಿಳಿಯದಂತೆ ಬೆಳೆದನು. ಅವ್ಯಕ್ತಧ್ವನಿಮಾಡುವ ಹಕ್ಕಿಗಳಿಂದ ನಿಬಿಡವಾದ ವೃಕ್ಷಗಳಿಂದ ಶೋಭಿಸುತ್ತಿದ್ದ ಯಮುನೆಯ ದಡದವನಗಳಲ್ಲಿ ಗೊಲ್ಲಬಾಲಕರೊಂದಿಗೆ ಹಸುಕರುಗಳನ್ನು ಮೇಯಿಸುತ್ತಾ ಸಂಚರಿಸಿದನು. ಇವನ ಬಾಲ್ಯ ಚೇಷ್ಟೆಗಳು ಗೋಕುಲ ನಿವಾಸಿಗಳಿಗೆ ತುಂಬ ಆಕರ್ಷಕವಾಗಿದ್ದುವು. ಸಾಮಾನ್ಯ ಬಾಲಕರಂತೆ ಕೆಲವು ವೇಳೆ ಅಳುತ್ತಿದ್ದನು. ಮತ್ತೊಮ್ಮೆ ನಗುತ್ತಿದ್ದನು. ಸಿಂಹದ ಮರಿಯ ಹಾಗೆ ನೋಡುತ್ತಿದ್ದ ಇವನು ಸುಂದರನಾಗಿದ್ದನು. ಇವನ ಚೇಷ್ಟೆಗಳು ಲೋಕವಿಲಕ್ಷಣವಾಗಿದ್ದುವು. ಅವನಿದ್ದ

ಗೋಕುಲದಲ್ಲಿ ಯಾವ ಸಂಪತ್ತಿಗೂ ಕೊರತೆಯಿರಲಿಲ್ಲ. ಲಕ್ಷ್ಮಿಯ ಆವಾಸಸ್ಥಾನ-ವಾಗಿತ್ತು ಗೋಕುಲ. ಮೂಗುದಾರಗಳನ್ನು ಹಾಕಿದ್ದ ಗೂಳಿಗಳನ್ನೂ ಗೋಪಾಲಕರ ಜೊತೆಯಲ್ಲಿ ತಾನೂ ಮೇಯಿಸುವವನಾಗಿ ತನ್ನ ವೇಣುನಾದದಿಂದ ಎಲ್ಲರನ್ನೂ ಸಂತೋಷಪಡಿಸಿದನು. ದೈತ್ಯರು ತಮ್ಮ ಇಷ್ಟ ಬಂದಂತೆ ರೂಪವನ್ನು ಧರಿಸಬಲ್ಲರು. ಇಂತಹವರನ್ನು ಕಂಸನು ಕೃಷ್ಣನ ಸಂಹಾರಕ್ಕಾಗಿ ಕಳುಹಿಸುತ್ತಿದ್ದನು. ಕೃಷ್ಣನಾದರೋ ಹುಡುಗರು ಆಟದ ಸಾಮಾನುಗಳನ್ನು ಹಾಳುಮಾಡುವಂತೆ ಅನಾಯಾಸವಾಗಿ ಎಲ್ಲರನ್ನೂ ಸಂಹರಿಸಿದನು. ಕಾಳಿಯನನ್ನು ನಿಗ್ರಹಿಸಿ ಯಮುನೆಯ ಮಡುವಿನಿಂದ ಹೊರಗಟ್ಟಿ ನೀರನ್ನು ನಿರ್ವಿಷವನ್ನಾಗಿ ಮಾಡಿದನು. ವಿಷಯುಕ್ತ ನೀರನ್ನು ಕುಡಿದು ಆಸನ್ನ ಮರಣರಾಗಿದ್ದ ಪ್ರಾಣಿಗಳನ್ನು ಬದುಕಿಸಿದನು. ಸಂಪಾದಿಸಿದ ಹಣವು ಉತ್ತಮ ಕಾರ್ಯಕ್ಕಾಗಿ ವಿನಿಯೋಗವಾಗಬೇಕೆಂದು ತೋರಿಸುತ್ತಾ ನಂದಗೋಪನ ಕೈಯಿಂದ ಗೋಪೂಜೆಯನ್ನು ಮಾಡಿಸಿ ಪುರೋಹಿತರಾಗಿದ್ದ ಬ್ರಾಹ್ಮಣರಿಗೆ ದಾನ ಮಾಡಿಸಿದನು.

ವಿದುರ ! ಒಮ್ಮೆ ಇಂದ್ರನು ತನ್ನ ಮರ್ಯಾದೆಯು ಹೋಯಿತೆಂದು ಕೋಪಗೊಂಡು ವಿವೇಕಶೂನ್ಯನಾಗಿ ಗೋಕುಲವನ್ನೇ ನಾಶಗೊಳಿಸಲು ಮಳೆ ಸುರಿಸಿದನು. ಆಗ ಶ್ರೀಕೃಷ್ಣನು ಅನಾಯಾಸವಾಗಿ ಗೋವರ್ಧನ ಪರ್ವತವನ್ನೇ ಕೊಡೆಯಾಗಿ ಹಿಡಿದು ಗೋಕುಲ ನಿವಾಸಿಗಳನ್ನು ರಕ್ಷಿಸಿದನು. ಶರದೃತುವಿನಲ್ಲಿ ರಾತ್ರಿಯ ಪ್ರಾರಂಭದಲ್ಲಿ ಚಂದ್ರೋದಯವಾಗಿರಲು ಕ್ರೀಡಿಸುವನಾಗಿ ಶ್ರೀಹರಿಯು ತನ್ನ ವೇಣುಗಾನದಿಂದ ಸ್ತ್ರೀಸಮೂಹವನ್ನೇ ಅಲಂಕರಿಸಿ ಅವರನ್ನು ಸಂತಸಗೊಳಿಸಿದನು.



# ಅಥ ತೃತೀಯೋಽಧ್ಯಾಯಃ

**ಉದ್ಧವ ಉವಾಚ**

**ತತಃ ಸ ಆಗತ್ಯ ಪುರೀಂ ಸ್ವಪಿತ್ರೋ-**
**ಶ್ಚಿಕೀರ್ಷಯಾಶಾಂ ಬಲದೇವಸಂಯುತಃ ।**
**ನಿಪಾತ್ಯ ತುಂಗಾದ್ ರಿಪುಯೂಥನಾಥಂ**
**ಹತಂ ವ್ಯಕರ್ಷದ್ ವ್ಯಸುಮೋಜಸೋರ್ವ್ಯಾಂ ॥೧॥**

ಸಃ=ಶ್ರೀಕೃಷ್ಣನು, ತತಃ=ವೃಂದಾವನದಿಂದ, ಸ್ವಪಿತ್ರೋಃ=ತನ್ನ ತಂದೆತಾಯಿಗಳ, ಆಶಾಂ=ಕಂಸನನ್ನು ಯಾವಾಗ ಸಂಹರಿಸುವನೋ ಎಂಬ ಮನದಾಶೆಯನ್ನು, ಚಿಕೀರ್ಷಯಾ=ಮಾಡಲು ಇಚ್ಛಿಸಿ,ಪುರೀಂ ಆಗತ್ಯ=ಮಥುರೆಗೆ ಬಂದು,ತುಂಗಾತ್= ಎತ್ತರವಾದ ರಾಜಮಂಚದಿಂದ, ಓಜಸಾ=ತನ್ನ ಸಾಮರ್ಥ್ಯದಿಂದ, ನಿಪಾತ್ಯ=ಕೆಡವಿ, ಉರ್ವ್ಯಾಂ=ಭೂಮಿಯಲ್ಲಿ ವ್ಯಸುಂ=ಪ್ರಾಣವನ್ನು ಕಳೆದುಕೊಂಡ, ಹತಂ=ಮೃತನಾದ, ರಿಪುಯೂಥನಾಥಂ=ಕಂಸನನ್ನು ವ್ಯಕರ್ಷತ್=ಸೆಳೆದನು. ॥೧॥

**ಸಾಂದೀಪಿನೇಃ ಸಕೃತ್ ಪ್ರೋಕ್ತಂ ಬ್ರಹ್ಮಾಧೀತ್ಯ ಸವಿಸ್ತರಂ ।**
**ತಸ್ಮೈ ಪ್ರಾದಾದ್ ವರಂ ಪುತ್ರಂ ಮೃತಂ ಪಂಚಜನೋದರಾತ್ ॥೨॥**

ಸಾಂದೀಪಿನೇಃ=ಸಾಂದೀಪಿನಿ ಮುನಿಗಳಿಂದ, ಸಕೃತ್ ಪ್ರೋಕ್ತಂ=ಒಂದು ಸಲ ಹೇಳಿದ, ಸವಿಸ್ತರಂ=ಷಡಂಗ ಸಹಿತವಾದ, ಬ್ರಹ್ಮ=ವೇದವನ್ನು, ಅಧೀತ್ಯ=ಅಭ್ಯಸಿಸಿ, ತಸ್ಮೈ=ಗುರುವಿಗೆ, ಪಂಚಜನೋದರಾತ್=ಪಂಚಜನನೆಂಬ ದೈತ್ಯನ ಉದರ ಪ್ರವೇಶದಿಂದ, ಮೃತಂ=ಸತ್ತಿರುವ, ಪುತ್ರಂ=ಮಗನನ್ನು, ವರಂ ಪ್ರಾದಾತ್=ಬದುಕಿಸಿ ವರವಾಗಿ (ಗುರುದಕ್ಷಿಣಾರೂಪವಾಗಿ) ಕೊಟ್ಟನು. ॥೨॥

**ಸಮಾಹುತಾ ಭೀಷ್ಮಕಕನ್ಯಯಾ ಯೇ**
**ಶ್ರಿಯಃ ಸವರ್ಣೇನ ಜಿಹೀರ್ಷಯೈಷಾಂ ।**
**ಗಾಂಧರ್ವವೃತ್ತ್ಯಾ ಮಿಷತಾಂ ಸ್ವಭಾಗಂ**
**ಜಹ್ರೇ ಪದಂ ಮೂರ್ಧ್ನಿ ದಧತ್ ಸುಪರ್ಣಃ ॥೩॥**

ಭೀಷ್ಮಕಕನ್ಯಯಾ=ಭೀಷ್ಮಕನ ಮಗಳಾದ ರುಕ್ಮಿಣಿಗಾಗಿ, ಸವರ್ಣೇನ=ಸಮಾನವಾದ ಕ್ಷತ್ರಿಯ ಜಾತಿಯೆಂಬ ಒಂದೇ ಕಾರಣದಿಂದ, (ರುಕ್ಮಿಣಿಯನ್ನು ಹೊಂದಲಯೋಗ್ಯ-ರೆಂಬ ಕಾರಣದಿಂದಲ್ಲವೆಂದರ್ಥ. ವೈಶ್ಯ ಮುಂತಾದವರನ್ನು ಆಹ್ವಾನಿಸಿರಲಿಲ್ಲ-ವೆಂದು ತಿಳಿಸಲು ಈ ವಿಶೇಷಣವೆಂದು ತಿಳಿಯಬೇಕು)ಏಷಾಂ=ರಾಜರುಗಳ,

ಶ್ರಿಯಃ=ಶೋಭೆಯನ್ನು ಜಿಹೀರ್ಷಯಾ=ಅಪಹರಿಸುವ ಇಚ್ಛೆಯಿಂದ, ಭೀಷ್ಮಕನಲ್ಲಿರುವ ಶ್ರೀಹರಿಯಿಂದ, ಆಹೂತಾಃ=ಕರೆಯಲ್ಪಟ್ಟ (ಅಂದರೆ ಭಗವಂತನಿಂದ ಆಹ್ವಾನ ಮಾಡಬೇಕೆಂಬ ಬುದ್ಧಿಯನ್ನು ಹುಟ್ಟಿಸಿದಾಗ ಭೀಷ್ಮಕನಿಂದ ಕರೆಯಲ್ಪಟ್ಟ) ಯೇ= ಯಾವ ರಾಜರು ಉಂಟೋ ಅವರು, ಮಿಷತಾಂ=ನೋಡುತ್ತಿರುವಂತೆ, ಮೂರ್ಧ್ನಿ ಪದಂ ದಧತ್=ಅವರ ತಲೆಯ ಮೇಲೆ ಕಾಲಿಟ್ಟು ಅವರನ್ನು ತುಚ್ಛೀಕರಿಸಿ, ಸುಪರ್ಣಃ=ಪರಮಾನಂದ ಪೂರ್ಣನಾದ ಶ್ರೀಕೃಷ್ಣನು, ಗಾಂಧರ್ವವೃತ್ತ್ಯಾ=ಪರಸ್ಪರ ಸಮ್ಮತಿರೂಪ ಗಾಂಧರ್ವ ವಿವಾಹ ಪದ್ಧತಿಯಿಂದ, ಸ್ವಭಾಗಂ=ತನಗೆ ಮಾತ್ರ ಯೋಗ್ಯಳಾದ ರುಕ್ಮಿಣಿಯನ್ನು ಜಹ್ರೇ=ಸ್ವೀಕರಿಸಿದನು ॥೩॥

ಇಲ್ಲಿ 'ಭೀಷ್ಮಕಕನ್ಯಯಾ ಸಮಾಹುತಾಃ' ಎಂದು ರುಕ್ಮಿಣಿಯೇ ರಾಜರನ್ನು ಆಹ್ವಾನಿಸಿದಳೆಂದು ಅರ್ಥ ತೋರುವುದು ಕಾರಣ ತಾತ್ಪರ್ಯ ಹೇಳುವರು-

**ಭೀಷ್ಮಕಕನ್ಯಾಯಾಃ ಅರ್ಥೇ ।**

ಇದರಿಂದ ಮೂಲದಲ್ಲಿ ಷಷ್ಠಿಯ ಸ್ಥಾನದಲ್ಲಿ ತೃತೀಯಾ ಬಂದಿದೆ. ಅದೂ ತಾದರ್ಥ್ಯರೂಪವಾಗಿದೆ ಎಂದಂತಾಯಿತು. ರುಕ್ಮಿಣಿಗಾಗಿ ಎಂದರ್ಥ. ಕೆಲವರು ಶ್ರಿಯಃ=ಲಕ್ಷ್ಮಿಗೆ ಸವರ್ಣೇನ=ಸಮಾನರೂಪ ಉಳ್ಳವರಾದ್ದರಿಂದ ಆಹುತಾಃ= ಕರೆಯಲ್ಪಟ್ಟ ಎಂದರ್ಥ ಮಾಡುವರು. ಅದು ಸರಿಯಲ್ಲ ಎಂದು ತಿಳಿಸಲು ಸವರ್ಣ ಎಂಬುದರ ಅಭಿಪ್ರಾಯ ಹೇಳುವರು -

**ಸವರ್ಣಮಾತ್ರತಯಾ ಆಹೂತಾಃ ।**

ಅಂದರೆ ಕೇವಲ ಕ್ಷತ್ರಿಯರೆಂಬ ಒಂದೇ ಜಾತಿಯವರು ಎಂಬ ಕಾರಣದಿಂದ ಕರೆದದ್ದೇ, ವಿನಹ ರುಕ್ಮಿಣಿಗೆ ಅನುರೂಪರಾದವರೆಂದಲ್ಲವೆಂದು ಭಾವ. ಹಾಗಾದರೆ ಶ್ರಿಯಃ ಎನ್ನುವುದರ ಅನ್ವಯ ಹೇಗೆ ಎಂದರೆ ಹೇಳುವರು-

**ಏಷಾಂ ಶ್ರಿಯಃ ಜಿಹೀರ್ಷಯಾ ಆಹ್ವಾನಬುದ್ಧಿಃ ಭಗವತಾ ಕೃತಾ ।**

ರಾಜರುಗಳ ಶೋಭೆಯನ್ನು ಹರಣಮಾಡುವುದಕ್ಕಾಗಿ ಭೀಷ್ಮಕನಿಗೆ ಅವರನ್ನು ಆಹ್ವಾನಿಸುವ ಬುದ್ಧಿಯನ್ನು ಭಗವಂತ ಹುಟ್ಟಿಸಿದನೆಂದು ಭಾವ. ಅಪವ್ಯಾಖ್ಯಾನ-ದಲ್ಲಿ ಜಿಹೀರ್ಷಯಾ ಎಂಬುದಕ್ಕೆ ಅನ್ವಯವಿರಲಾರದು ಎಂದು ಭಾವ.

ಸುಪರ್ಣಃ ಗರುಡನು ಸ್ವಭಾಗಂ ಜಹ್ರೇ ತನ್ನ ಭಾಗವನ್ನು ಸ್ವೀಕರಿಸಿದನು ಎಂದು ಅಸಂಗತ ಅರ್ಥ ತೋರುವುದು. ಇನ್ನು ಲುಪ್ತೋಪಮಾ ಎಂದು ಮಾಡಿ ಗರುಡನು ತನ್ನ ಭಾಗವಾದ ಅಮೃತವನ್ನು ಸ್ವೀಕರಿಸಿದಂತೆ ಎಂದು ಅರ್ಥ ಮಾಡಿದರೂ

ದಾರ್ಷ್ಟಾಂತಿಕವನ್ನು ಅಧ್ಯಾಹಾರ ಮಾಡಬೇಕಾಗುವುದು. ಕಾರಣ ಸುಪರ್ಣಶಬ್ದವೇ ಮಹಾಯೋಗವೃತ್ತಿಯಿಂದ ಭಗವಂತನನ್ನು ತಿಳಿಸುವುದು ಸುಪರ್ಣಶಬ್ದ ನಿರ್ವಚನವನ್ನು ಪ್ರಮಾಣದಿಂದ ತಿಳಿಸುವರು-

**ಸುಪರ್ಣಃ ಸುಪರಾನಂದಾತ್ ಕಾಕುತ್‌ಸ್ಥೋ ವಾಚಿ ಸಂಸ್ಥಿತೇಃ ।**

**ಇತಿ ಪಾದ್ಮೇ ।**

'ಣ' ಎಂಬುದು ನಿರ್ವೃತಿ=ಆನಂದವಾಚಕವಾಗಿದೆ ಕಾರಣ ಪೂರ್ಣಾನಂದ ರೂಪನಾದ್ದರಿಂದ ಸುಪರ್ಣ ಎಂದರೆ ಶ್ರೀಹರಿ ಎಂದರ್ಥವೆಂದು ಭಾವ॥೩॥

**ಕಕುದ್ಮತೋಽವಿದ್ಧನಸೋ ದಮಿತ್ವಾ**
**ಸ್ವಯಂವರೇ ನಾಗ್ನಜಿತೀಮುವಾಹ ।**
**ತಾನ್ ಭಗ್ನಮಾನಾನಭಿಗೃಧ್ಯತೋಽಜ್ಞಾನ್**
**ಜಘ್ನೇಽಕ್ಷತಃ ಶಸ್ತ್ರಭೃತಶ್ಚ ಶಸ್ತ್ರೈಃ ॥೪॥**

ಅವಿದ್ಧನಸಃ=ಮೂಗುದಾರವನ್ನು ಹಾಕದಿರುವ, ಕಕುದ್ಮತಃ=ಗೂಳಿಗಳನ್ನು ದಮಿತ್ವಾ=ನಿಗ್ರಹಿಸಿ ಹಿಡಿದು, ಸ್ವಯಂವರೇ=ಸ್ವಯಂವರದಲ್ಲಿ ನಾಗ್ನಜಿತೀಂ= ನಗ್ನಜಿತನಮಗಳಾದ ನೀಲಾಳನ್ನು ಉವಾಹ=ಮದುವೆಯಾದನು. ತದ್ಭಗ್ನ-ಮಾನಾನ್=ಆ ಗೂಳಿಗಳಿಂದ ಮಾನವನ್ನು ಕಳೆದುಕೊಂಡ, ಅಭಿಗೃಧ್ಯತಃ= ಕನ್ಯೆಯನ್ನು ಅಪೇಕ್ಷಿಸುವ, ಅಜ್ಞಾನ್=ನೀಲಾಳು ಶ್ರೀಕೃಷ್ಣನಿಗೆ ಯೋಗ್ಯಳೆಂದು ತಿಳಿಯದಿರುವ, ಶಸ್ತ್ರಭೃತಃ=ರಾಜರನ್ನು, ಶಸ್ತ್ರೈಃ=ಅವರ ಶಸ್ತ್ರಗಳಿಂದ, ಅಕ್ಷತಃ= ಗಾಯಗೊಳ್ಳದೇ ಜಘ್ನೇ=ಸಂಹರಿಸಿದನು. ॥೪॥

**ಪ್ರಿಯಂ ಪ್ರಭುರ್ಗ್ರಾಮ್ಯ ಇವ ಪ್ರಿಯಾಯಾ**
**ವಿಧಿತ್ಸುರಾರ್ಚ್ಛದ್ ದ್ಯುತರುಂ ಯದರ್ಥೇ ।**
**ವಜ್ರ್ಯಾದ್ರವತ್ ತಂ ಸಗಣೋ ರುಷಾಂಧಃ**
**ಸ್ವಾರ್ಥೇ ಪುರಾ ತೈರ್ಯಮಯಾಚತಾನತಃ ॥೫॥**

ಪ್ರಭುಃ=ಸಮರ್ಥನಾದ ಶ್ರೀಕೃಷ್ಣನು, ಗ್ರಾಮ್ಯಃ ಇವ=ವಿಷಯಾಸಕ್ತನಾದವನಂತೆ, ಪ್ರಿಯಾಯಾಃ=ಹೆಂಡತಿಯಾದ ಸತ್ಯಭಾಮೆಗೆ, ಪ್ರಿಯಂ ವಿಧಿತ್ಸುಃ=ಅಪೇಕ್ಷೆಯನ್ನು ಪೂರ್ಣ ಮಾಡಲು, ದ್ಯುತರುಂ=ಪಾರಿಜಾತವೆಂಬ ಸ್ವರ್ಗದ ಗಿಡವನ್ನು ಆರ್ಚ್ಛತ್= ತೆಗೆದುಕೊಂಡು ಬಂದನು. ಪುರಾ=ಹಿಂದೆ, ಸ್ವಾರ್ಥೇ=ನರಕಾಸುರನ ವಧವೆಂಬ ತನ್ನ ಪ್ರಯೋಜನಕ್ಕಾಗಿ, ಯಂ=ಯಾವನನ್ನು ಆನತಃ=ನಮಸ್ಕಾರ ಮಾಡಿದನೋ, ಯದರ್ಥೇ=ಯಾವ ಪಾರಿಜಾತಕ್ಕಾಗಿ, ರುಷಾಂಧಃ=ಸಿಟ್ಟಿನಿಂದ ಶ್ರೀಕೃಷ್ಣನ

ಮಹಾತ್ಮ್ಯವನ್ನರಿಯದೆ, ತಂ=ಆ ಶ್ರೀಕೃಷ್ಣನನ್ನು ಕುರಿತು, ಸಗಣಃ=ದೇವತೆಗಳಿಂದ ಕೂಡಿಕೊಂಡು, ವಜ್ರೀ=ಇಂದ್ರನು, ಆದ್ರವತ್=ಯುದ್ಧಕ್ಕಾಗಿ ಧಾವಿಸಿದನು ॥೫॥

**ಸುತಂ ಮೃಧೇ ಸ್ವಂ ವಪುಷಾ ಗ್ರಸಂತಂ**
**ದೃಷ್ಟ್ವಾ ಸುನಾಭೋನ್ಮಥಿತಂ ಧರಿತ್ರ್ಯಾ ।**
**ಆಮಂತ್ರಿತಸ್ತತ್ತನಯಾಯ ಶೇಷಂ**
**ದತ್ವಾ ತದಂತಃಪುರಮಾವಿವೇಶ ॥೬॥**

ಮೃಧೇ=ಯುದ್ಧದಲ್ಲಿವಪುಷಾ=ತನ್ನ ಪ್ರಕಾಶದಿಂದ, ಗ್ರಸಂತಂ=ನುಂಗುತ್ತಿರುವ, ಸುನಾಭೋನ್ಮಥಿತಂ=ಚಕ್ರದಿಂದ ಮೃತನಾದ, ಸುತಂ=ನರಕನೆಂಬ ತನ್ನ ಮಗನನ್ನು ದೃಷ್ಟ್ವಾ=ನೋಡಿ, ಧರಿತ್ರ್ಯಾ=ಭೂಮಿಯಿಂದ, ಆಮಂತ್ರಿತಃ=ಪ್ರಾರ್ಥಿತನಾಗಿ, ತತ್ತನಯಾಯ=ನರಕನ ಮಗನಾದ ಭಗದತ್ತನಿಗೆ, ಶೇಷಂ=ತಾನು ಸ್ವೀಕರಿಸಿ ಉಳಿದ ಕೋಶವನ್ನು, ದತ್ವಾ=ಕೊಟ್ಟು, ತದಂತಃಪುರಂ ಆವಿವೇಶ=ಭೂಮಿಯ ಅಂತಃಪುರ-ವನ್ನು ಪ್ರವೇಶಿದನು. ॥೬॥

**ತತ್ರಾಹೃತಾಸ್ತಾ ನರದೇವಕನ್ಯಾಃ**
**ಕುಜೇನ ದೃಷ್ಟ್ವಾ ಹರಿಮಾರ್ತಬಂಧುಂ ।**
**ಉತ್ಥಾಯ ಸದ್ಯೋ ಜಗೃಹುಃ ಪ್ರಹರ್ಷ-**
**ವ್ರೀಡಾನುರಾಗಪ್ರಹಿತಾವಲೋಕೈಃ ॥೭॥**

ತತ್ರ=ಆ ಅಂತಃಪುರದಲ್ಲಿ, ಕುಜೇನ=ಭೂಪುತ್ರನಾದ ನರಕಾಸುರನಿಂದ, ಆಹೃತಾಃ=ಕರೆತಲರಲ್ಪಟ್ಟ,ಯಾಃ=ಯಾವ,ನರದೇವಕನ್ಯಾಃ=ರಾಜಪುತ್ರಿಯರಿರುವರೋ, ತಾಃ=ಆ ರಾಜಕುವರಿಯರು, ಆರ್ತಬಂಧುಂ=ದುಃಖಿತರಿಗೆ ದುಃಖ ಪರಿಹಾರಕ-ನಾದ, ಹರಿಂ=ಶ್ರೀಕೃಷ್ಣನನ್ನು, ದೃಷ್ಟ್ವಾ=ನೋಡಿ, ಸದ್ಯಃ=ತಕ್ಷಣದಲ್ಲಿ, ಉತ್ಥಾಯ= ಎದ್ದು, ಪ್ರಹರ್ಷ=ಸಂತೋಷ, ವ್ರೀಡಾ=ಲಜ್ಜೆ, ಅನುರಾಗ=ಪ್ರೀತಿ ಇವುಗಳಿಂದ ಪ್ರಹಿತ=ಪ್ರೇರಿತವಾದ, ಅವಲೋಕೈಃ=ನೋಟಗಳಿಂದ, ಜಗೃಹುಃ=ಪತಿಯಾಗಿ ಸ್ವೀಕರಿಸಿದರು. ॥೭॥

**ಆಸಾಂ ಮುಹೂರ್ತ ಏಕಸ್ಮಿನ್ ನಾನಾಗಾರೇಷು ಯೋಷಿತಾಂ ।**
**ಸವಿಧಿಂ ಜಗೃಹೇ ಪಾಣೀನ್ ಪುರುರೂಪಃ ಸ್ವಮಾಯಯಾ ॥೮॥**

ಸ್ವಮಾಯಯಾ=ತನ್ನ ಸಾಮರ್ಥ್ಯದಿಂದ, ಪುರುರೂಪಃ ಸನ್=ಅನೇಕ ರೂಪವುಳ್ಳವನಾಗಿ, ಏಕಸ್ಮಿನ್ ಮುಹೂರ್ತೇ=ಒಂದೇ ಮುಹೂರ್ತದಲ್ಲಿ,

ನಾನಾಗಾರೇಷು=ಬೇರೆ ಬೇರೆ ಮನೆಗಳಲ್ಲಿ, ಸವಿಧಿಂ=ವಿಧಾನಪೂರ್ವಕವಾಗಿ, ಆಸಾಂ ಯೋಷಿತಾಂ ಪಾಣೀನ್ ಜಗೃಹೇ=ಆ ಸ್ತ್ರೀಯರ ಕೈಹಿಡಿದನು. ॥೮॥

**ತಾಸ್ವಪತ್ಯಾನ್ಯಜನಯದಾತ್ಮತುಲ್ಯಾನಿ ಸರ್ವತಃ ।**
**ಏಕೈಕಸ್ಯಾಂ ದಶ ದಶ ಪ್ರಕೃತೇರ್ವಿಬುಭೂಷಯಾ ॥೯॥**

ಪ್ರಕೃತೇಃ=ಜಡಪ್ರಕೃತಿಗೆ, ವಿಬುಭೂಷಯಾ=ನನ್ನ ಅವತಾರ ಕಾಲದಲ್ಲಿ ಪ್ರಕೃತಿಯು ನಾನಾವಿಧ ಸುಂದರ ಶರೀರಗಳಿಗೆ ಉಪಾದಾನವಾಗಿ ಅನೇಕವಾಗಲೆಂಬ ಇಚ್ಛೆಯಿಂದ, ತಾಸು=ಆ ಸ್ತ್ರೀಯರಲ್ಲಿ, ಏಕೈಕಸ್ಯಾಂ ಒಬ್ಬೊಬ್ಬರಲ್ಲಿ, ಸರ್ವತಃ= ಎಲ್ಲ ರೀತಿಯಿಂದ, ಆತ್ಮತುಲ್ಯಾನಿ=ತನಗೆ (ಕಿಂಚಿತ್) ಸದೃಶರಾದ, ದಶ ದಶ=ಹತ್ತು ಹತ್ತು, ಅಪತ್ಯಾನಿ=ಮಕ್ಕಳನ್ನು, ಅಜನಯತ್=ಹುಟ್ಟಿಸಿದನು.

ಎಲ್ಲ ರೀತಿಯಿಂದ ಕೃಷ್ಣಸಾದೃಶ್ಯ ಮಕ್ಕಳಲ್ಲಿ ಪ್ರಮಾಣ ಬಾಧಿತ ಕಾರಣ ಅಭಿಪ್ರಾಯ ಹೇಳುವರು –

**"ಉತ್ತಮೈಸ್ಸರ್ವತಃ ಸಾಮ್ಯಂ ಕಿಂಚಿತ್ಸಾಮ್ಯಮುದೀರ್ಯತೇ" ।**

**ಇತ್ಯಾಗ್ನೇಯೇ ।**

ಪುರಾಣಗಳಲ್ಲಿ ಎಲ್ಲಿಯಾದರೂ ಉತ್ತಮರಿಂದ ಸರ್ವಸಾಮ್ಯ ಹೇಳಿದರೆ, ಕಿಂಚಿತ್ ಸಾಮ್ಯ ಹೇಳಲ್ಪಡುತ್ತದೆ ಎಂದು ಅಗ್ನಿ ಪುರಾಣದಲ್ಲಿದೆ ಕಾರಣ ಸರ್ವಶಬ್ದ ಸಂಕೋಚ ಮಾಡಬೇಕು ಎಂದು ಭಾವ ॥೯॥

**ಕಾಲಮಾಗಧಸಾಲ್ವಾದೀನನೀಕೈರುಂಧತಃ ಪುರಂ ।**
**ಅಜೀಘನತ್ ಸ್ವಯಂ ದಿವ್ಯಂ ಸ್ವಪುಂಸಾಂ ತೇಜ ಆದಿಶನ್॥೧೦॥**

ಅನೀಕೈಃ=ಸೈನ್ಯಸಹಿತರಾಗಿ, ಪುರಂ=ಮಥುರಾಪಟ್ಟಣವನ್ನು,ರುಂಧತಃ=ಮುತ್ತಿಗೆ ಹಾಕುವ, ಕಾಲಮಾಗಧಸಾಲ್ವಾದೀನ್=ಕಾಲಯವನ, ಜರಾಸಂಧ, ಶಾಲ್ವ ಮುಂತಾದವರನ್ನು, ಸ್ವಯಂ=ಸಾಕ್ಷಾತ್ ತಾನೇ ಸಾಲ್ವನನ್ನು, ಸ್ವಪುಂಸಾಂ=ತನ್ನ ಭಕ್ತರಾದ ಮುಚಕುಂದ, ಭೀಮಸೇನರಿಗೆ, ದಿವ್ಯಂ ತೇಜಃ=ವಿಶೇಷಸಾಮರ್ಥ್ಯವನ್ನು ಆದಿಶನ್=ಚನ್ನಾಗಿ ಇತ್ತು ಅಜೀಘನತ್=ಕಾಲಯವನನ್ನು ಮುಚುಕುಂದನಿಂದ, ಜರಾಸಂಧನನ್ನು ಭೀಮಸೇನನಿಂದ ಸಂಹರಿಸಿಸಿದನು. ॥೧೦॥

**ಶಂಬರಂ ವಿವಿದಂ ಬಾಣಂ ಮುರಂ ಬಲ್ವಲಮೇವ ಚ ।**
**ಅನ್ಯಾಂಶ್ಚ ದಂತವಕ್ತ್ರಾದೀನವಧೀತ್ ಕಾಂಶ್ಚ ಘಾತಯನ್ ॥೧೧॥**

ಮಹಾತ್ಮ್ಯವನ್ನರಿಯದೆ, ತಂ=ಆ ಶ್ರೀಕೃಷ್ಣನನ್ನು ಕುರಿತು, ಸಗಣಃ=ದೇವತೆಗಳಿಂದ ಕೂಡಿಕೊಂಡು, ವಜ್ರೀ=ಇಂದ್ರನು, ಆದ್ರವತ್=ಯುದ್ಧಕ್ಕಾಗಿ ಧಾವಿಸಿದನು ॥೫॥

**ಸುತಂ ಮೃಧೇ ಸ್ವಂ ವಪುಷಾ ಗ್ರಸಂತಂ**
**ದೃಷ್ಟ್ವಾ ಸುನಾಭೋನ್ಮಥಿತಂ ಧರಿತ್ರ್ಯಾ ।**
**ಆಮಂತ್ರಿತಸ್ತತ್ತನಯಾಯ ಶೇಷಂ**
**ದತ್ತ್ವಾ ತದಂತಃಪುರಮಾವಿವೇಶ ॥೬॥**

ಮೃಧೇ=ಯುದ್ಧದಲ್ಲಿವಪುಷಾ=ತನ್ನ ಪ್ರಕಾಶದಿಂದ, ಗ್ರಸಂತಂ=ನುಂಗುತ್ತಿರುವ, ಸುನಾಭೋನ್ಮಥಿತಂ=ಚಕ್ರದಿಂದ ಮೃತನಾದ, ಸುತಂ=ನರಕನೆಂಬ ತನ್ನ ಮಗನನ್ನು ದೃಷ್ಟ್ವಾ=ನೋಡಿ, ಧರಿತ್ರ್ಯಾ=ಭೂಮಿಯಿಂದ, ಆಮಂತ್ರಿತಃ=ಪ್ರಾರ್ಥಿತನಾಗಿ, ತತ್ತನಯಾಯ=ನರಕನ ಮಗನಾದ ಭಗದತ್ತನಿಗೆ, ಶೇಷಂ=ತಾನು ಸ್ವೀಕರಿಸಿ ಉಳಿದ ಕೋಶವನ್ನು, ದತ್ತ್ವಾ=ಕೊಟ್ಟು, ತದಂತಃಪುರಂ ಆವಿವೇಶ=ಭೂಮಿಯ ಅಂತಃಪುರವನ್ನು ಪ್ರವೇಶಿದನು. ॥೬॥

**ತತ್ರಾಹೃತಾಸ್ತಾ ನರದೇವಕನ್ಯಾಃ**
**ಕುಜೇನ ದೃಷ್ಟ್ವಾ ಹರಿಮಾರ್ತಬಂಧುಂ ।**
**ಉತ್ಥಾಯ ಸದ್ಯೋ ಜಗೃಹುಃ ಪ್ರಹರ್ಷ-**
**ವ್ರೀಡಾನುರಾಗಪ್ರಹಿತಾವಲೋಕೈಃ ॥೭॥**

ತತ್ರ=ಆ ಅಂತಃಪುರದಲ್ಲಿ ಕುಜೇನ=ಭೂಪುತ್ರನಾದ ನರಕಾಸುರನಿಂದ, ಆಹೃತಾಃ=ಕರೆತಲರಲ್ಪಟ್ಟ,ಯಾಃ=ಯಾವ,ನರದೇವಕನ್ಯಾಃ=ರಾಜಪುತ್ರಿಯರಿರುವರೋ, ತಾಃ=ಆ ರಾಜಕುವರಿಯರು, ಆರ್ತಬಂಧುಂ=ದುಃಖಿತರಿಗೆ ದುಃಖ ಪರಿಹಾರಕನಾದ, ಹರಿಂ=ಶ್ರೀಕೃಷ್ಣನನ್ನು, ದೃಷ್ಟ್ವಾ=ನೋಡಿ, ಸದ್ಯಃ=ತಕ್ಷಣದಲ್ಲಿ, ಉತ್ಥಾಯ=ಎದ್ದು, ಪ್ರಹರ್ಷ=ಸಂತೋಷ, ವ್ರೀಡಾ=ಲಜ್ಜೆ, ಅನುರಾಗ=ಪ್ರೀತಿ ಇವುಗಳಿಂದ ಪ್ರಹಿತ=ಪ್ರೇರಿತವಾದ, ಅವಲೋಕೈಃ=ನೋಟಗಳಿಂದ, ಜಗೃಹುಃ=ಪತಿಯಾಗಿ ಸ್ವೀಕರಿಸಿದರು. ॥೭॥

**ಆಸಾಂ ಮುಹೂರ್ತ ಏಕಸ್ಮಿನ್ ನಾನಾಗಾರೇಷು ಯೋಷಿತಾಂ ।**
**ಸವಿಧಿಂ ಜಗೃಹೇ ಪಾಣೀನ್ ಪುರುರೂಪಃ ಸ್ವಮಾಯಯಾ ॥೮॥**

ಸ್ವಮಾಯಯಾ=ತನ್ನ ಸಾಮರ್ಥ್ಯದಿಂದ, ಪುರುರೂಪಃ ಸನ್=ಅನೇಕ ರೂಪವುಳ್ಳವನಾಗಿ, ಏಕಸ್ಮಿನ್ ಮುಹೂರ್ತೇ=ಒಂದೇ ಮುಹೂರ್ತದಲ್ಲಿ,

ನಾನಾಗಾರೇಷು=ಬೇರೆ ಬೇರೆ ಮನೆಗಳಲ್ಲಿ, ಸವಿಧಿಂ=ವಿಧಾನಪೂರ್ವಕವಾಗಿ, ಆಸಾಂ ಯೋಷಿತಾಂ ಪಾಣೀನ್ ಜಗೃಹೇ=ಆ ಸ್ತ್ರೀಯರ ಕೈಹಿಡಿದನು. ॥೮॥

**ತಾಸ್ವಪತ್ಯಾನ್ಯಜನಯದಾತ್ಮತುಲ್ಯಾನಿ ಸರ್ವತಃ ।**
**ಏಕೈಕಸ್ಯಾಂ ದಶ ದಶ ಪ್ರಕೃತೇರ್ವಿಬುಭೂಷಯಾ ॥೯॥**

ಪ್ರಕೃತೇಃ=ಜಡಪ್ರಕೃತಿಗೆ, ವಿಬುಭೂಷಯಾ=ನನ್ನ ಅವತಾರ ಕಾಲದಲ್ಲಿ ಪ್ರಕೃತಿಯು ನಾನಾವಿಧ ಸುಂದರ ಶರೀರಗಳಿಗೆ ಉಪಾದಾನವಾಗಿ ಅನೇಕವಾಗಲೆಂಬ ಇಚ್ಛೆಯಿಂದ, ತಾಸು=ಆ ಸ್ತ್ರೀಯರಲ್ಲಿ, ಏಕೈಕಸ್ಯಾಂ ಒಬ್ಬೊಬ್ಬರಲ್ಲಿ, ಸರ್ವತಃ= ಎಲ್ಲ ರೀತಿಯಿಂದ, ಆತ್ಮತುಲ್ಯಾನಿ=ತನಗೆ (ಕಿಂಚಿತ್) ಸದೃಶರಾದ, ದಶ ದಶ=ಹತ್ತು ಹತ್ತು, ಅಪತ್ಯಾನಿ=ಮಕ್ಕಳನ್ನು ಅಜನಯತ್=ಹುಟ್ಟಿಸಿದನು.

ಎಲ್ಲ ರೀತಿಯಿಂದ ಕೃಷ್ಣಸಾದೃಶ್ಯ ಮಕ್ಕಳಲ್ಲಿ ಪ್ರಮಾಣ ಬಾಧಿತ ಕಾರಣ ಅಭಿಪ್ರಾಯ ಹೇಳುವರು –

**''ಉತ್ತಮೈಸರ್ವತಃ ಸಾಮ್ಯಂ ಕಿಂಚಿತ್ಸಾಮ್ಯಮುದೀರ್ಯತೇ'' ।**
**ಇತ್ಯಾಗ್ನೇಯೇ ।**

ಪುರಾಣಗಳಲ್ಲಿ ಎಲ್ಲಿಯಾದರೂ ಉತ್ತಮರಿಂದ ಸರ್ವಸಾಮ್ಯ ಹೇಳಿದರೆ, ಕಿಂಚಿತ್ ಸಾಮ್ಯ ಹೇಳಲ್ಪಡುತ್ತದೆ ಎಂದು ಅಗ್ನಿ ಪುರಾಣದಲ್ಲಿದೆ ಕಾರಣ ಸರ್ವಶಬ್ದ ಸಂಕೋಚ ಮಾಡಬೇಕು ಎಂದು ಭಾವ ॥೯॥

**ಕಾಲಮಾಗಧಸಾಲ್ವಾದೀನನೀಕೈರುಂಧತಃ ಪುರಂ ।**
**ಅಜೀಘನತ್ ಸ್ವಯಂ ದಿವ್ಯಂ ಸ್ವಪುಂಸಾಂ ತೇಜ ಆದಿಶನ್॥೧೦॥**

ಅನೀಕೈಃ=ಸೈನ್ಯಸಹಿತರಾಗಿ, ಪುರಂ=ಮಥುರಾಪಟ್ಟಣವನ್ನು,ರುಂಧತಃ=ಮುತ್ತಿಗೆ ಹಾಕುವ, ಕಾಲಮಾಗಧಸಾಲ್ವಾದೀನ್=ಕಾಲಯವನ, ಜರಾಸಂಧ, ಶಾಲ್ವ ಮುಂತಾದವರನ್ನು, ಸ್ವಯಂ=ಸಾಕ್ಷಾತ್ ತಾನೇ ಸಾಲ್ವನನ್ನು, ಸ್ವಪುಂಸಾಂ=ತನ್ನ ಭಕ್ತರಾದ ಮುಚಕುಂದ, ಭೀಮಸೇನರಿಗೆ, ದಿವ್ಯಂ ತೇಜಃ=ವಿಶೇಷಸಾಮರ್ಥ್ಯವನ್ನು ಆದಿಶನ್=ಚನ್ನಾಗಿ ಇತ್ತು ಅಜೀಘನತ್=ಕಾಲಯವನನ್ನು ಮುಚುಕುಂದನಿಂದ, ಜರಾಸಂಧನನ್ನು ಭೀಮಸೇನನಿಂದ ಸಂಹರಿಸಿಸಿದನು. ॥೧೦॥

**ಶಂಬರಂ ವಿವಿದಂ ಬಾಣಂ ಮುರಂ ಬಲ್ವಲಮೇವ ಚ ।**
**ಅನ್ಯಾಂಶ್ಚ ದಂತವಕ್ತ್ರಾದೀನವಧೀತ್ ಕಾಂಶ್ಚ ಘಾತಯನ್ ॥೧೧॥**

ಶಂಬರಂ=ಶಂಬರಾಸುರನನ್ನು ಪ್ರದ್ಯುಮ್ನನಿಂದ, ವಿವಿದಂ=ವಿವಿದನನ್ನು ಬಲರಾಮನಿಂದ, ಕಾಂಶ್ಚ=ಕೆಲವರನ್ನು ಘಾತಯನ್=ಸಂಹಾರ ಮಾಡಿಸಿ, ಮುರಂ=ಮುರನನ್ನು, ಬಲ್ವಲಂ=ಬಲ್ವನನ್ನು ಅನ್ಯಾನ್ ದಂತವಕ್ತ್ರಾದೀನ್=ದಂತವಕ್ತ್ರ ಮೊದಲಾದ ಇನ್ನೂ ಬೇರೆ ಕೆಲವರನ್ನು, ಅವಧೀತ್=ಸಂಹರಿಸಿದನು. ॥೧೧॥

**ಅಥ ತೇ ಭ್ರಾತೃಪುತ್ರಾಣಾಂ ಪಕ್ಷಯೋಃ ಪತಿತಾನ್ ನೃಪಾನ್ ।**
**ಚಚಾಲ ಭೂಃ ಕುರುಕ್ಷೇತ್ರಂ ಯೇಷಾಮಾಪತತಾಂ ಬಲೈಃ ॥೧೨॥**

ಅಥ=ದಂತವಕ್ತ್ರಾದಿಗಳ ಸಂಹಾರದ ನಂತರ, ಕುರುಕ್ಷೇತ್ರಂ=ಕುರುಕ್ಷೇತ್ರಕ್ಕೆ, ಆಪತತಾಂ=ಬರುತ್ತಿರುವ, ಯೇಷಾಂ=ಯಾರ, ಬಲೈಃ=ಸೈನ್ಯದಿಂದ, ಭೂಃ=ಭೂಮಿಯು, ಚಚಾಲ=ನಡುಗಿತೋ ಅಂಥ, ತೇ=ನಿನ್ನ (ವಿದುರನ) ಭ್ರಾತೃಪುತ್ರಾಣಾಂ=ಕೌರವಪಾಂಡವರ, ಪಕ್ಷಯೋಃ=ಪಕ್ಷಗಳಲ್ಲಿ ಪತಿತಾನ್=ಸೇರಿರುವ ನೃಪಾನ್=ರಾಜರನ್ನು, ಅವಧೀತ್=ಸಂಹರಿಸಿದನು. ॥೧೨॥

**ಸಕರ್ಣದುಃಶಾಸನಸೌಬಲಾನಾಂ**
**ಕುಮಂತ್ರಪಾಕೇನ ಹತಶ್ರಿಯಾಯುಷಂ ।**
**ಸುಯೋಧನಂ ಸಾನುಚರಂ ಶಯಾನಂ**
**ಭಗ್ನೋರುಮುರ್ವ್ಯಾಂ ಸ ನನಂದ ಪಶ್ಯನ್ ॥೧೩॥**

ಸಃ=ಶ್ರೀಕೃಷ್ಣನು, ಸಕರ್ಣದುಃಶಾಸನಸೌಬಲಾನಾಂ=ಕರ್ಣಸಹಿತರಾದ ದುಃಶಾಸನ ಶಕುನಿಗಳ, ಕುಮಂತ್ರಪಾಕೇನ=ದುಷ್ಟವಿಚಾರದ ಫಲವಾಗಿ, ಹತಶ್ರಿಯಾಯುಷಂ=ಕಾಂತಿಯನ್ನು, ಆಯುಷ್ಯವನ್ನು ಕಳೆದುಕೊಂಡ, ಸಾನುಚರಂ=ತನ್ನ ಅನುಯಾಯಿಗಳಿಂದ ಸಹಿತನಾಗಿ, ಭಗ್ನೋರುಂ=ತೊಡೆಯನ್ನು ಒಡೆದುಕೊಂಡು, ಉರ್ವ್ಯಾಂ=ಭೂಮಿಯಲ್ಲಿ ಶಯಾನಂ=ಮಲಗಿರುವ, ಸುಯೋಧನಂ=ದುರ್ಯೋಧನನನ್ನು ಪಶ್ಯನ್=ನೋಡಿ, ನನಂದ=ಸಂತೋಷ ಪಟ್ಟನು. ತನ್ನ ಅವತಾರಕಾರ್ಯ ಬಹುತರ ಮುಗಿದಂತಾಯಿತು ಎಂದು ಜನಕ್ಕೆ ಸಂತೋಷ ವ್ಯಕ್ತ ಮಾಡಿದನೆಂದು ಭಾವ. ತನ್ನ ಭಕ್ತರಾದ ಪಾಂಡವರಿಗೆ ಜಯವಾಯಿತು. ಕಾರಣ ಭಕ್ತಿ ವ್ಯರ್ಥವಲ್ಲ, ಎಂಬ ಅಭಿಪ್ರಾಯದಿಂದಲೂ ಸಂತೋಷವನ್ನು ತೋರಿದನು ॥೧೩॥

ಕಲಿಯುಗದಲ್ಲಿ ದೇವಾಂಶರಾದ ಯಾದವರೂ ಸಹ ಭೂಮಿಗೆ ಭಾರರಾದ್ದರಿಂದ ಅವರ ಸಂಹಾರವೂ ಯೋಗ್ಯವೆಂದು ಆಲೋಚಿಸಿದನು ಎಂದು ಹೇಳುವರು –

**ಕಿಯಾನ್ ಭುವೋಽಯಂ ಕ್ಷಪಿತೋರುಭಾರೋ**
**ಯದ್ದ್ರೋಣಭೀಷ್ಮಾರ್ಜುನಭೀಮಶಲ್ಯೈಃ ।**

**ಅಷ್ಟಾದಶಾಕ್ಷೌಹಿಣಿಕೋ ಮದಂಶೈ-**
**ರಾಸ್ತೇ ಬಲಂ ದುರ್ವಿಷಹಂ ಯದೂನಾಮ್ ॥೧೪॥**

ಮದಂಶೈಃ=ನನ್ನವಿಶೇಷಾವೇಷವುಳ್ಳ, ದ್ರೋಣಭೀಷ್ಮಾರ್ಜುನಭೀಮಶಲ್ಯೈಃ= ದ್ರೋಣಚಾರ್ಯ, ಭೀಷ್ಮಾಚಾರ್ಯ, ಅರ್ಜುನ, ಭೀಮಸೇನ, ಶಲ್ಯರಿಂದ ಕ್ಷಪಿತಃ= ನಾಶಗೊಳಿಸಿದ, ಅಷ್ಟಾದಶಾಕ್ಷೌಹಿಣಿಕಃ=ಹದಿನೆಂಟು ಅಕ್ಷೋಹಿಣೀ ಸಂಖ್ಯಾಕವಾದ, ಯದ್=ಯಾವ, ಭುವಃ=ಭೂಮಿಯ, ಉರುಭಾರಃ=ಬಹಳ ಭಾರವು, ಸಃ=ಅದು, ಕಿಯಾನ್=ಎಷ್ಟು ಮಹಾ ? ಅತ್ಯಲ್ಪವೇ. ಏಕೆಂದರೆ ದುರ್ವಿಷಹಂ=ದೇವದಾನವ-ರಿಂದಲೂ ಸಹಿಸಲಾಗದ, ಯದೂನಾಂ=ಯಾದವರ, ಬಲಂ=ಸೈನ್ಯವು, ಆಸ್ತೇ= ಇರುವುದು ಅದೂ ಕೂಡ ಈ ಯುಗದಲ್ಲಿ ಭೂಮಿಗೆ ಬಾರವೇ, ಕಾರಣ ಭೂಭಾರಹರಣ ಮಾಡಲು ಅವತರಿಸಿದ ನಾನು ಅದನ್ನು ಸಂಹರಿಸಲೇಬೇಕೆಂದು ಆಲೋಚಿಸಿದನು ಎಂದು ಭಾವ. ॥೧೪॥

**ಮಿಥೋ ಯದೈಷಾಂ ಭವಿತಾ ವಿವಾದೋ**
**ಮಾಧ್ವ್ಯಾ ಮದಾತ್ ತಾಮ್ರವಿಲೋಚನಾನಾಂ ।**
**ನೈಷಾಂ ವಧೋಪಾಯ ಇಯಾನತೋಽನ್ಯೋ**
**ಮಯ್ಯುದ್ಯತೇಂತರ್ದಧತೇ ಸ್ವಯಂ ಸ್ಮ ॥೧೫॥**

ಯದಾ=ಯಾವಾಗ, ಮಾಧ್ವ್ಯಾಃ=ವಾರುಣಿ ಎಂಬ ಮದ್ಯಪಾನದಿಂದುಂಟಾದ, ಮದಾತ್=ಮದದಿಂದ, ತಾಮ್ರವಿಲೋಚನಾನಾಂ=ಕೆಂಪಾದ ಕಣ್ಣುಳ್ಳವರಿಗೆ, ಮಿಥಃ=ಪರಸ್ಪರವಾಗಿ, ವಿವಾದಃ=ಮರ್ಮವಚನಗಳಿಂದ ಕಲಹವು, ಭವಿತಾ= ಉಂಟಾಗುವದೋ ಅದೇ, ಏಷಾಂ=ಯಾದವರ, ವಧೋಪಾಯಃ ಇಯಾನ್= ಇಷ್ಟೇ, ಇದೊಂದೇ, ನ ಅನ್ಯಃ=ಬೇರೆ ಉಪಾಯವಿಲ್ಲ, ಮಯಿ=ನಾನು, ಉದ್ಯತೇ= ಪೃಥಿವೀಲೋಕವವನ್ನು ಬಿಡಲು ಉದ್ಯುಕ್ತನಾದಾಗ, ಸ್ವಯಂ ಅಂತರ್ದಧತೇ= ಯಾದವ ಸೈನ್ಯವು ತಾನೆ ಕಾಣದಾಗುವುದು, ಸ್ಮ=ನಿಶ್ಚಿತ. ॥೧೫॥

**ಏವಂ ಸಂಚಿಂತ್ಯ ಭಗವಾನ್ ಸ್ವರಾಜ್ಯೇ ಸ್ಥಾಪ್ಯ ಧರ್ಮಜಂ ।**
**ನಂದಯಾಮಾಸ ಸುಹೃದಃ ಸಾಧೂನಾಂ ವರ್ತ್ಮ ದರ್ಶಯನ್ ॥೧೬॥**

ಏವಂ=ಈರೀತಿ,ಸಂಚಿಂತ್ಯ=ವಿಚಾರಮಾಡಿ,ಭಗವಾನ್=ಶ್ರೀಕೃಷ್ಣನು, ಸ್ವರಾಜ್ಯೇ= ಸ್ವರ್ಗಸಮಾನವಾದ ರಾಜ್ಯದಲ್ಲಿ,ಧರ್ಮಜಂ=ಯಮಧರ್ಮಪುತ್ರನಾದ ಯುಧಿಷ್ಠಿರ-ನನ್ನು, ಸ್ಥಾಪ್ಯ=ಕೂಡಿಸಿ, ಸಾಧೂನಾಂ ವರ್ತ್ಮ ದರ್ಶಯನ್=ಸಜ್ಜನರ ಮಾರ್ಗವನ್ನು ತೋರಿಸುತ್ತ, ಸುಹೃದಃ=ಬಾಂಧವರನ್ನು ನಂದಯಾಮಾಸ=ಸಂತೋಷಗೊಳಿಸಿದನು.

**ಉತ್ತರಾಯಾಂ ಧೃತಃ ಪೂರೋರ್ವಂಶಃ ಸಾಧ್ವಭಿಮನ್ಯುನಾ ।**
**ಸ ವೈ ದ್ರೌಣ್ಯಸ್ತ್ರಸಂಭಿನ್ನಃ ಪುನರ್ಭಗವತಾ ಧೃತಃ ॥೧೭॥**

ಅಭಿಮನ್ಯುನಾ=ಅಭಿಮನ್ಯುವಿನಿಂದ, ಉತ್ತರಾಯಾಃ=ಉತ್ತರಾದೇವಿಯಲ್ಲಿ, ಪೂರೋಃ=ಪೂರುವಿನ, ವಂಶಃ=ವಂಶವು, ಸಾಧು=ಚನ್ನಾಗಿ, ಧೃತಃ=ಧರಿಸಲ್ಪಟ್ಟಿತು. ಸಃ=ಆ ಉತ್ತರಾಗರ್ಭವು, ದ್ರೌಣ್ಯಸ್ತ್ರಸಂಭಿನ್ನಃ=ಅಶ್ವತ್ಥಾಮರ ಅಸ್ತ್ರದಿಂದ ಕತ್ತರಿಸಲ್ಪಟ್ಟಿತು. ಪುನಃ=ಮತ್ತೆ ಭಗವತಾ ಶ್ರೀಕೃಷ್ಣನಿಂದ, ಧೃತಃ=ರಕ್ಷಿಸಲ್ಪಟ್ಟಿತು. ॥೧೭॥

**ಅಯಾಜಯದ್ ಧರ್ಮಸುತಮಶ್ವಮೇಧೈಸ್ತ್ರಿಭಿರ್ವಿಭುಃ ।**
**ಸೋಽಪಿ ಕ್ಷ್ಮಾಮನುಜೈ ರಕ್ಷನ್ ರೇಮೇ ಕೃಷ್ಣಮನುವ್ರತಃ ॥೧೮॥**

ವಿಭುಃ=ಶ್ರೀಕೃಷ್ಣನು, ಧರ್ಮಸುತಂ=ಯುಧಿಷ್ಠಿರನನ್ನು, ತ್ರಿಭಿಃ=ಉತ್ತಮಕಲ್ಪದಿಂದ ಮಾಡಿದ್ದರಿಂದ ತ್ರಿಗುಣ ಫಲಉಳ್ಳ ಐದು ಸಂಖ್ಯಾಕವಾದ, ಅಶ್ವಮೇಧೈಃ ಅಯಾಜಯತ್=ಅಶ್ವಮೇಧ ಯಾಗಗಳನ್ನು ಮಾಡಿಸಿದನು.ಸೋಽಪಿ=ಆ ಧರ್ಮರಾಜನು, ಅನುಜೈಃ=ತಮ್ಮಂದಿರಿಂದ ಸಹಿತನಾಗಿ, ಕ್ಷ್ಮಾಂ ರಕ್ಷನ್=ರಾಜ್ಯವಾಳುತ್ತ, ಕೃಷ್ಣಮನುವ್ರತಃ=ಶ್ರೀಕೃಷ್ಣನನ್ನು ಅನುಸರಿಸಿ, ರೇಮೇ=ಸಂತೋಷಿಸಿದನು. ॥೧೮॥

**ಭಗವಾನಪಿ ವಿಶ್ವಾತ್ಮಾ ಲೋಕವೇದಪಥಾನುಗಃ ।**
**ಕಾಮಾನ್ ಸಿಷೇವೇ ದ್ವಾರ್ವತ್ಯಾಮಸಕ್ತಃ ಸಾಂಖ್ಯಮಾಸ್ಥಿತಃ ॥೧೯॥**

ವಿಶ್ವಾತ್ಮಾ=ಸಮಸ್ತ ಪ್ರಪಂಚಾಂತರ್ಯಾಮಿಯಾದ, ಭಗವಾನಪಿ=ಶ್ರೀಕೃಷ್ಣನೂ ಸಹ, ಸಾಂಖ್ಯಂ ಆಸ್ಥಿತಃ=ಇತರ ಪದಾರ್ಥ ವಿಷಯಕವಾದ ತನ್ನ ಜ್ಞಾನ ಪಡೆದವನಾದ್ದರಿಂದ ಅಂದರೆ ಜಡ ಅಮಿಶ್ರವಾದ ಪರಮಮಂಗಲವಾದ ಸ್ವಸ್ವರೂಪದಲ್ಲೇ ರಮಮಾಣನಾದುದರಿಂದ, ಅಸಕ್ತಃ=ರಾಗವಿಲ್ಲದಲೇ, ಲೋಕವೇದಪಥಾನುಗಃ= ಲೋಕ ಮತ್ತು ವೇದಮಾರ್ಗವನ್ನು ಅನುಸರಿಸಿ, ದ್ವಾರ್ವತ್ಯಾಂ=ದ್ವಾರಕಾಪಟ್ಟಣದಲ್ಲಿ, ಕಾಮಾನ್ ಸಿಷೇವೇ=ವಿಷಯಭೋಗ ಮಾಡಿದನು. ಲೋಕ ಶಿಕ್ಷಣೆಗಾಗಿ ವೇದಾನುಸಾರವಾಗಿ ಗೃಹಸ್ಥಾಶ್ರಮಪಾಲನ ಮಾಡಿ ತೋರಿಸಿದನೆಂದು ಭಾವ.

ಮೇಲಿನ ಶ್ಲೋಕದಲ್ಲಿ 'ಸಾಂಖ್ಯಮಾಸ್ಥಿತಃ' ಎಂದರೆ ಸಾಂಖ್ಯಶಾಸ್ತ್ರದಲ್ಲಿ ಹೇಳಿದ ಪ್ರಕೃತಿ ಜೀವ ವಿವೇಕವನ್ನು ಅರಿತ ಎಂಬ ವ್ಯಾಖ್ಯಾನ ಪ್ರಕೃತ ಸಂಗತವಲ್ಲ. ತಾನು ಜೀವನಲ್ಲವಷ್ಟೇ ! ಆದ್ದರಿಂದ ಸಾಂಖ್ಯ ಶಬ್ದಾರ್ಥವನ್ನು ಪ್ರಮಾಣದಿಂದ ತಿಳಿಸುವರು.

''ಕೇವಲಂ ಭಗವದ್‌ಜ್ಞಾನಂ ಸಾಂಖ್ಯಮಿತ್ಯಭಿಧೀಯತೇ'' ।

ಇತ್ಯಧ್ಯಾತ್ಮೇ ।

ಇತರ ಪದಾರ್ಥ ವಿಷಯಕವಾಗದ ಭಗವಂತನ ಜ್ಞಾನಕ್ಕೆ ಸಾಂಖ್ಯವೆನ್ನುವರು ಎಂದು ಆಧ್ಯಾತ್ಮ ಗ್ರಂಥದಲ್ಲಿದೆ ॥೧೯॥

**ಸ್ನಿಗ್ಧಸ್ಮಿತಾವಲೋಕೇನ ವಾಚಾ ಪೀಯೂಷಕಲ್ಪಯಾ ।**
**ಚರಿತ್ರೇಣಾನವದ್ಯೇನ ಶ್ರೀನಿಕೇತೇನ ಚಾತ್ಮನಾ ॥೨೦॥**

ಸ್ನಿಗ್ಧಸ್ಮಿತಾವಲೋಕೇನ=ಸ್ನೇಹಪೂರ್ಣವಾದ ಮಂದಹಾಸ ಸಹಿತವಾದ ನೋಟ-ದಿಂದಲೂ,ಪೀಯೂಷಕಲ್ಪಯಾ ವಾಚಾ=ಅಮೃತ ಸದೃಶವಾದ ಮಾತುಗಳಿಂದಲೂ ಅನವದ್ಯೇನ=ದೋಷರಹಿತವಾದ, ಚರಿತ್ರೇಣ=ಚಾರಿತ್ರ್ಯದಿಂದಲೂ, ಶ್ರೀನಿಕೇತೇನ ಆತ್ಮನಾ ಚ=ಲಕ್ಷ್ಮೀಗೆ ಆಶ್ರಯವಾದ ದೇಹದಿಂದಲೂ ॥೨೦॥

**ಇಮಂ ಲೋಕಮಮೂಂಶ್ಚೈವ ರಮಯನ್ ಸುತರಾಂ ಯದೂನ್ ।**
**ರೇಮೇ ಕ್ಷಣದಯಾ ದತ್ತಕ್ಷಣಃ ಸ್ತ್ರೀಕ್ಷಣಸೌಹೃದಃ ॥೨೧॥**

ಇಮಂ ಲೋಕಂ=ಈ ಲೋಕವನ್ನೂ, ಅಮೂಂಶ್ಚ=ಪರಲೋಕವನ್ನೂ, ಯದೂನ್=ಯಾದವರನ್ನೂ, ಸುತರಾಂ=ಬಹಳವಾಗಿ, ರಮಯನ್=ಸಂತೋಷ-ಗೊಳಿಸುವನಾಗಿ, ಕ್ಷಣದಯಾ=ರಾತ್ರಿಯಿಂದ, ದತ್ತಕ್ಷಣಃ=ಕೊಡಲ್ಪಟ್ಟ ಅವಕಾಶ-ವುಳ್ಳವನಾಗಿ,ಸ್ತ್ರೀಕ್ಷಣಸೌಹೃದಃ=ಸ್ತ್ರೀಯರಲ್ಲಿ ಒಂದು ಕ್ಷಣಮಾತ್ರ ಸ್ನೇಹವುಳ್ಳವನಾಗಿ, ರೇಮೇ=ಕ್ರೀಡಿಸಿದನು. ರೀತ್ಯಂತರದಿಂದ ಅಸಕ್ತತೆ ಹೇಳಿದಂತಾಯಿತು.

ಸ್ತ್ರೀಕ್ಷಣಃ ಎಂದರೆ ರುದ್ರನು. ಅವನ ಸೌಹೃದವು ಯಾವನಲ್ಲಿದೆಯೋ ಅವನು ಸ್ತ್ರೀಕ್ಷಣಸೌಹೃದನು. ಹೀಗೂ ಅರ್ಥ. ಅಂದರೆ ರುದ್ರದೇವರ ಸ್ನೇಹವುಳ್ಳವನೆಂದು ಭಾವ. ಇದರಿಂದ ರುದ್ರಗಣ ಸಂಚಾರ ಮಾಡುವ ಸಮಯದಲ್ಲಿ ಸ್ತ್ರೀಯರೊಡನೆ ರಮಣ ಹೇಗೆ ಎಂಬ ಶಂಕೆಗೆ ಅವಕಾಶವಿಲ್ಲ ॥೨೧॥

**ತಸ್ಯೇತ್ಥಂ ರಮಮಾಣಸ್ಯ ಸಂವತ್ಸರಗಣಾನ್ ಬಹೂನ್ ।**
**ಗೃಹಮೇಧೇಷು ಯೋಗೇಷು ವಿರಾಗಃ ಸಮಜಾಯತ ॥೨೨॥**

ಇತ್ಥಂ=ಈ ರೀತಿಯಾಗಿ, ಬಹೂನ್ ಸಂವತ್ಸರಗಣಾನ್=ಬಹಳ ವರ್ಷಗಳ ಸಮೂಹಗಳನ್ನು, ರಮಮಾಣಸ್ಯ=ಸುಖಿಸುತ್ತಿರುವ, ತಸ್ಯ=ಶ್ರೀಕೃಷ್ಣಪರಮಾತ್ಮನಿಗೆ, ಗೃಹಮೇಧೇಷು ಯೋಗೇಷು=ಗೃಹಸ್ಥಾಶ್ರಮಕ್ಕೆ ಉಚಿತವಾದ ಧರ್ಮಗಳಲ್ಲಿ ಮತ್ತು ಕಾಮ ಭೋಗೋಪಾಯಗಳಲ್ಲಿಯೂ ವಿರಾಗಃ, ಸಮಜಾಯುತ=ವೈರಾಗ್ಯ ಉಂಟಾಯಿತು. ಅಂದರೆ ಭಗವಂತನಲ್ಲಿ ಸರ್ವದಾ ಇರುವ ವೈರಾಗ್ಯಜ್ಞಾನ ಜನರಿಗೆ ಆಯಿತು ಎಂದಭಿಪ್ರಾಯ.

ಈಗಲೇ ವೈರಾಗ್ಯ ಹುಟ್ಟಿತು ಎಂದರ್ಥ ಮಾಡಿದರೆ ಹಿಂದೆ ಅಸಕ್ತತೆ ಹೇಳಿದ್ದು ವಿರುದ್ಧವಾಗುವುದು ಕಾರಣ ಆಚಾರ್ಯರು ವಿವಕ್ಷಿತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು -

**"ಸರ್ವದಾಪಿ ವಿರಕ್ತಃಸನ್ ಭಾಸಯೀತ ವಿರಾಗಿವತ್ ।**
**ಕಾದಾಚಿತ್ಕಃ ಕುತಸ್ತಸ್ಯ ಲೋಕಶಿಕ್ಷಾರ್ಥಮಿಷ್ಯತೇ" ॥ ಇತಿ ಪಾದ್ಮೇ ।**

ಯಾವಾಗಲೂ ವಿರಕ್ತನೇ ಆಗಿದ್ದು ಈಗ ವಿರಕ್ತನಾದ ಮನುಷ್ಯನಂತೆ ಜನರಿಗೆ ತನ್ನನ್ನು ತೋರಿಸುವನು. ಶ್ರೀಹರಿಗೆ ತಾತ್ಕಾಲಿಕ ವೈರಾಗ್ಯ ಎಲ್ಲಿಯದು ? ಅದು ಪ್ರಮಾಣಬಾಧಿತ. ಲೋಕಶಿಕ್ಷಣೆಗಾಗಿ ಹಾಗೆ ತೋರಿಸುವನಷ್ಟೇ ॥೨೨॥

**ದೈವಾಧೀನೇಷು ಕಾಮೇಷು ದೈವಾಧಿನಃ ಸ್ವಯಂ ಪುಮಾನ್ ।**
**ಕೋऽವಿಶ್ರಂಭೇತ ಯೋಗೇನ ಯೋಗೇಶ್ವರಮನುವ್ರತಃ ॥೨೩॥**

ಯಾವ ಕಾರಣ ಸ್ವತಂತ್ರನಾದ, ಎಲ್ಲ ವಿಷಯಗಳು ತನ್ನ ಅಧೀನದಲ್ಲಿರುವ ಭಗವಂತನೇ ವಿಷಯಗಳಲ್ಲಿ ವೈರಾಗ್ಯ ತೋರಿಸಿದನೋ ಆ ಕಾರಣ ದೈವಾಧೀನೇಷು ಕಾಮೇಷು=ತನ್ನ ಅಧೀನವಾಗದ ಕೇವಲ ಅದೃಷ್ಟದ ಅಧೀನಗಳಾದ ವಿಷಯಗಳಲ್ಲಿ, ಸ್ವಯಂ ದೈವಾಧೀನಃ ಕಃ ಪುಮಾನ್=ತಾನು ಸಹ ಅಸ್ವತಂತ್ರನಾದ ಯಾವ ಮನುಷ್ಯನು, ಯೋಗೇನ=ನಿವೃತ್ತ ಕರ್ಮ, ಧ್ಯಾನಾದಿಗಳಿಂದ ಯೋಗೇಶ್ವರಂ= ಶ್ರೀಕೃಷ್ಣನನ್ನು ಅನುವ್ರತಃ=ಅನುಸರಿಸಿದವನು, ವಿಶ್ರಂಭೇತ=ವಿಶ್ವಾಸಮಾಡಿಯಾನು? ಯಾವನು ಮಾಡಲಾರನೆಂದರ್ಥ.

ಹಿಂದೆ ಲೋಕಶಿಕ್ಷಣಕ್ಕಾಗಿ ವೈರಾಗ್ಯ ಪ್ರದರ್ಶನವೆಂದು ಹೇಳಿತಷ್ಟೇ ಲೋಕ ಶಿಕ್ಷಣ ಹೇಗಾಯಿತು? ಎಂದು ತಿಳಿಸುವರು ಆಚಾರ್ಯರು -

**ಅತಃ ಕೋऽನ್ಯೋ ವಿಸ್ರಂಭಂ ಕುರ್ಯಾತ್ ।**
**ತೇನಾಪಿ ವಿರಾಗಃ ಪ್ರದರ್ಶಿತಃ ।**

ಎಲ್ಲ ವಿಷಯಗಳನ್ನೂ ತನ್ನ ವಶದಲ್ಲಿರಿಸಿದ ಸ್ವತಂತ್ರನಾದ ಶ್ರೀಕೃಷ್ಣನೇ ವೈರಾಗ್ಯ ಹೊಂದಿದ ಮೇಲೆ ಅಸ್ವತಂತ್ರರಾದ ಮನುಷ್ಯರು ತಮ್ಮ ವಶವಾಗದ ವಿಷಯಗಳಲ್ಲಿ ಪ್ರೀತಿಯನ್ನು ವಿಶ್ವಾಸವನ್ನೂ ಯಾರು ಮಾಡುವರು? ಯಾರೂ ಮಾಡುವುದಿಲ್ಲ. ಶ್ರೀಕೃಷ್ಣನು ತೋರಿಸಿದ ಯೋಗಮಾರ್ಗ ಅನುಸರಿಸುವವರು ವಿಷಯಾಸಕ್ತರಾಗ-ಲಾರರು. ಶ್ರೀಕೃಷ್ಣನು ತೋರಿದ ವೈರಾಗ್ಯವನ್ನು ಕಂಡು ತಾವೂ ವಿರಕ್ತರಾಗುವರು. ಮಿಕ್ಕವರು ವಿಷಯಾಸಕ್ತರಾದರೆ ಆಗಲಿ. ಅವರ ಯೋಗ್ಯತೆಯೇ ಹಾಗೇ ಎಂದು ಭಾವ ॥೨೩॥

ಯದುಕುಲನಾಶಕ್ಕೆ ಕಾರಣವಾದ ಪರಸ್ಪರ ಕಲಹಕ್ಕೆ ಮೂಲ ಕಾರಣವಾದ ವಿಪ್ರಶಾಪವನ್ನು ಹೇಳುವರು -

**ಪುರ್ಯಾಂ ಕದಾಚಿತ್ ಕ್ರೀಡದ್ಭಿರ್ಯದುಭೋಜಕುಮಾರಕೈಃ ।**
**ಕೋಪಿತಾ ಮುನಯಃ ಶೇಪುರ್ಭಗವನ್ಮತಕೋವಿದಾಃ ॥೨೪॥**

ಕದಾಚಿತ್=ಒಂದುಸಲ, ಕ್ರೀಡದ್ಭಿಃ=ಆಟವಾಡುವ, ಯದುಭೋಜಕುಮಾರಕೈಃ= ಯಾದವರ ಮಕ್ಕಳಿಂದ, ಕೋಪಿತಾಃ=ಸಿಟ್ಟಿಗೆ ತರಿಸಲ್ಪಟ್ಟ, ಮುನಯಃ=ಋಷಿಗಳು, ಭಗವನ್ಮತಕೋವಿದಾಃ=ಶ್ರೀಕೃಷ್ಣನ ಇಂಗಿತವನ್ನರಿತವರಾಗಿ ಶೇಪುಃ=ಶಾಪವನ್ನಿತ್ತರು ॥೨೪॥

**ತತಃ ಕತಿಪಯೈರ್ಮಾಸೈರ್ವೃಷ್ಣಿಭೋಜಾಂಧಕಾದಯಃ ।**
**ಯಯುಃ ಪ್ರಭಾಸಂ ಸಂಹೃಷ್ಟಾ ರಥೈರ್ದೈವವಿಮೋಹಿತಾಃ ॥೨೫॥**

ತತಃ=ಅನಂತರ, ಕತಿಪಯೈಃ=ಕೆಲವು, ಮಾಸೈಃ=(ಸುಖವಾಗಿ ಕಳೆದಿದ್ದರಿಂದ ತಿಂಗಳು ಎನಿಸಿದ) ವರ್ಷಗಳಾದ ಮೇಲೆ, ದೈವವಿಮೋಹಿತಾಃ=ಶ್ರೀಕೃಷ್ಣನಿಂದ ಮೋಹಿತರಾಗಿ, ಸಂಹೃಷ್ಟಾಃ=ಸಂತುಷ್ಟರಾದ, ವೃಷ್ಣಿ ಭೋಜಾಂಧಕಾದಯಃ=ವೃಷ್ಣಿ , ಭೋಜ, ಅಂಧಕ ಈರೀತಿ ಮೂರು ಪ್ರಭೇದವುಳ್ಳ ಯಾದವರು, ಪ್ರಭಾಸಂ ಯಯುಃ=ಪ್ರಾಭಾಸ ಕ್ಷೇತ್ರವನ್ನು ಕುರಿತು ಹೋದರು. (ಹೋಗುತ್ತಾರೆ).

ಈ ಶ್ಲೋಕದಲ್ಲಿ ಹೇಳುವ ಪ್ರಭಾಸ ಯಾತ್ರೆಯು ಮಹಾಭಾರತದಲ್ಲಿ ವಿದುರ ಮತ್ತು ಉದ್ಧವಸಂವಾದ ಆದ ನಂತರ ನಡೆದದ್ದು ಎಂದು ಹೇಳಿದೆ. ಇಲ್ಲಿಯಾದರೂ ಅದು ಹಿಂದೆಯೆ ನಡೆದಂತೆ ಹೇಳುವರು. ಕಾರಣ ವಿರೋಧ ತೋರುವುದು, ಅದಕ್ಕೆ ವಿರೋಧ ಬರದಂತೆ ಈ ಗ್ರಂಥಯೋಜನೆಯನ್ನು ಪ್ರಮಾಣದಿಂದಲೇ ಹೇಳುವರು.

**''ಏಷ್ಯಚ್ಚ ನಿಶ್ಚಿತಂ ಯತ್ ತದತೀತತ್ವೇನ ಭಣ್ಯತೇ ।**
**ಚಕ್ರವತ್ ಪರಿವೃತ್ತೇರ್ವಾ ದುಷ್ಟಾನಾಂ ಮೋಹನಾಯ ವಾ'' ॥**

**ಇತಿ ಸ್ಕಾಂದೇ ।**

ಯಾವುದು ಮುಂದೆ ನಿಶ್ಚಿತವಾಗಿ ನಡೆಯುವುದೋ ಅದು ನಡೆದು ಹೋದಂತೆ ಹೇಳುವ (ರೂಢೋಪಚಾರ) ಪದ್ಧತಿ ಇದೆ. ಕಾರಣ ಮುಂದೆ ಆಗುವ ಪ್ರಭಾಸಗಮನ ಆಯಿತು ಎಂದು ಹೇಳಿದ್ದು ಒಂದು ಸಮಾಧಾನ. ಅಥವಾ ಪ್ರತಿಕಲ್ಪದಲ್ಲಿಯೂ ಇದೇ ರೀತಿ ಕಥಾ ನಡೆಯುವುದರಿಂದ ಹಿಂದಿನ ಕಲ್ಪದ ಯಾದವರನಾಶವನ್ನು ಮುಂದಿನದಕ್ಕೆ ದೃಷ್ಟಾಂತವಾಗಿ ಹೇಳಿದ್ದಾರೆ. ಇದು ಎರಡನೇ

ಸಮಾಧಾನ. ದುಷ್ಟರಿಗೆ ಮೋಹಗೊಳಿಸುವುದಕ್ಕಾಗಿ ಎನ್ನುವರು ಮೂರನೇ ಸಮಾಧಾನ ಎಂದು ತಿಳಿಯಬೇಕು ॥೨೫॥

**ತತ್ರ ಸ್ನಾತ್ವಾ ಪಿತೄನ್ ದೇವಾನ್ ಋಷೀಂಶ್ಚೈವ ತದಂಭಸಾ ।**
**ತರ್ಪಯಿತ್ವಾಽಥ ವಿಪ್ರೇಭ್ಯೋ ಗಾವೋ ಬಹುಗುಣಾ ದದುಃ ॥೨೬॥**

ತತ್ರ=ಪ್ರಭಾಸ ತೀರ್ಥದಲ್ಲಿ, ಸ್ನಾತ್ವಾ=ಸ್ನಾನಮಾಡಿ, ತದಂಭಸಾ=ಆ ತೀರ್ಥದ ನೀರಿನಿಂದ, ದೇವಾನ್=ದೇವತೆಗಳನ್ನು, ಪಿತೄನ್=ಪಿತೃಗಳನ್ನು, ತರ್ಪಯಿತ್ವಾ= ಸಂತೋಷಗೊಳಿಸಿ, (ತರ್ಪಣವಿತ್ತು) ಅಥ=ನಂತರ, ವಿಪ್ರೇಭ್ಯಃ=ಬ್ರಾಹ್ಮಣರಿಗೆ, ಬಹುಗುಣಾಃ=ಒಳ್ಳೆಯ ಸ್ವಭಾವಮುಂತಾದ ಗುಣಗಳಿಂದ ಕೂಡಿದ, ಗಾವಃ= ಆಕಳುಗಳನ್ನು, ದದುಃ=ಕೊಡುವರು. ॥೨೬॥

**ಹಿರಣ್ಯಂ ರಜತಂ ಶಯ್ಯಾಂ ವಾಸಾಂಸ್ಯಜಿನಕಂಬಲಾನ್ ।**
**ಹಯಾನ್ ರಥಾನಿಭಾನ್ ಕನ್ಯಾಂ ಧರಾಂ ವೃತ್ತಿಕರೀಮಪಿ ॥೨೭॥**

ಹಿರಣ್ಯಂ=ಬಂಗಾರವನ್ನು, ರಜತಂ=ಬೆಳ್ಳಿಯನ್ನು, ಶಯ್ಯಾಂ=ಹಾಸಿಗೆಯನ್ನು, ವಾಸಾಂಸಿ=ಬಟ್ಟೆಗಳನ್ನು, ಅಜಿನ=ಕೃಷ್ಣಾಜಿನ, ಕಂಬಲಾನ್=ಧಾಬಳಿ, ಕಂಬಳಿಗಳನ್ನು ಹಯಾನ್=ಕುದುರೆಗಳನ್ನು,ರಥಾನ್=ರಥಗಳನ್ನು, ಇಭಾನ್=ಆನೆಗಳನ್ನು, ಕನ್ಯಾಂ= ಕನ್ಯೆಯನ್ನು, ವೃತ್ತಿಕರೀಂ=ಜೀವನೋಪಾಯವಾದ, ಧರಾಂ=ಭೂಮಿಯನ್ನು ದಾನ ಮಾಡಿದರು. ॥೨೭॥

**ಅನ್ನಂ ಚೋರುರಸಂ ತೇಭ್ಯೋ ದತ್ವಾ ಭಗವದರ್ಪಣಂ ।**
**ಗೋವಿಪ್ರಾರ್ಥಾಸವಃ ಶೂರಾಃ ಪ್ರಣೇಮುರ್ಭುವಿ ಮೂರ್ಧಭಿಃ ॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ತೃತೀಯೋಧ್ಯಾಯಃ ॥***

ತೇಭ್ಯಃ=ಬ್ರಾಹ್ಮಣರಿಗೆ, ಭಗವದರ್ಪಣಂ=ಭಗವಂತನಿಗೆ ಅರ್ಪಿತವಾಗುವಂತೆ, ಉರುರಸಂ=ಷಡ್ರಸೋಪೇತವಾದ, ಅನ್ನಂ=ಅನ್ನವನ್ನು, ದತ್ವಾ=ಇತ್ತು ಶೂರಾಃ= ಪರಾಕ್ರಮಿಗಳಾದ, ಗೋವಿಪ್ರಾರ್ಥಾಸವಃ=ಆಕಳು ಮತ್ತು ಬ್ರಾಹ್ಮಣರಿಗಾಗಿಯೇ ಪ್ರಾಣಗಳುಳ್ಳ ಯಾದವರು, ಭುವಿ=ಭೂಮಿಯಲ್ಲಿ ಮೂರ್ಧಭಿಃ=ತಲೆ ಬಾಗಿ ಪ್ರಣೇಮುಃ=ನಮಸ್ಕರಿಸಿದರು. ॥೨೮॥

*ಇಲ್ಲಿಗೆ ಮೂರನೆಯ ಅಧ್ಯಾಯವು ಮುಗಿಯಿತು.*

# ಮೂರನೆಯ ಅಧ್ಯಾಯದ ತಾತ್ಪರ್ಯ

ವೃಂದಾವನವನ್ನು ಬಿಟ್ಟು ಮಧುರೆಗೆ ಬಂದು ತಂದೆತಾಯಿಗಳ ಇಷ್ಟವನ್ನು ನಡೆಸುವವನಾಗಿ ಸಸ್ಯೈನ್ಯನಾದ ಕಂಸನನ್ನು ಸಂಹರಿಸಿದನು. ಒಂದು ಸಲ ಹೇಳಿದ ಮಾತ್ರದಿಂದಲೇ ಸಾಂದೀಪಿನಿ ಆಚಾರ್ಯನಿಂದ ಸಾಂಗ ವೇದವನ್ನು ಅಧ್ಯಯನ ಮಾಡಿದ ಶ್ರೀಕೃಷ್ಣನು ಪಂಚಜನನೆಂಬ ದೈತ್ಯನ ಉದರವನ್ನು ಸೇರಿ ಸತ್ತು ಹೋಗಿದ್ದ ಆಗುರುಗಳ ಪುತ್ರನನ್ನು ಮತ್ತೆ ಬದುಕಿಸಿ ತಂದು ಕೊಟ್ಟು ಗುರುದಕ್ಷಿಣೆಯಿತ್ತ-ನಲ್ಲವೇ? ಜಾತ್ಯಾಕ್ಷತ್ರಿಯರೆಂದು ಶಿಶುಪಾಲ ಮೊದಲಾದವರನ್ನು ರುಕ್ಮಿಣೀದೇವಿಯ ಸ್ವಯಂವರಕ್ಕಾಗಿ ಬಲಮಾಡಿದ್ದರು. ಅವರ ಅಹಂಕಾರವನ್ನು ಮುರಿಯಲು ಶ್ರೀಕೃಷ್ಣನು ಅವರು ನೋಡುತ್ತಿದ್ದಂತೆ ಅವರ ತಲೆಮೆಟ್ಟಿ ತನ್ನವಳಾದ ರುಕ್ಮಿಣಿಯನ್ನು ಅಪಹರಿಸಿ ಕೊಂಡುಹೋದನು. ಪರಮಾನಂದರೂಪನಾದ ಇವನು ಆಕೆಯನ್ನು ಗಾಂಧರ್ವ ರೀತಿಯಿಂದ ಮದುವೆಯಾದನು. ಸ್ವಯಂವರದಲ್ಲಿ ಪಣವಾಗಿಟ್ಟಿದ್ದ ಮೂಗುದಾರಹಾಕದಿರುವ ಗೂಳಿಗಳನ್ನು ನಿಗ್ರಹಿಸಿ ನೀಲಾದೇವಿಯನ್ನು ಮದುವೆ-ಯಾದನು. ಇದರಿಂದ ಅವಮಾನಗೊಂಡ ಸ್ವಯಂವರಾಹೂತರಾಗಿದ್ದ ರಾಜರು ಸಶಸ್ತ್ರರಾಗಿ ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ನಿಂತರು. ಶಸ್ತ್ರವನ್ನು ಧರಿಸದೆಯೇ ಶ್ರೀಕೃಷ್ಣನು ಅವರ ಶಸ್ತ್ರಗಳಿಂದ ಯಾವ ಗಾಯವನ್ನೂ ಹೊಂದದೆ - ಅವರನ್ನು ಸಂಹರಿಸಿದನು. ಗ್ರಾಮ್ಯರಾದ ಜನರು ಹೆಂಡತಿಯ ಇಚ್ಛೆಯನ್ನು ಪೂರೈಸುವಂತೆ ಶ್ರೀಕೃಷ್ಣನೂ ಸತ್ಯಭಾಮೆಯ ಸಂತೋಷಕ್ಕಾಗಿ ದೇವಲೋಕದ ಪಾರಿಜಾತ ವೃಕ್ಷವನ್ನು ತಂದನು. ಇದನ್ನು ಸಹಿಸದ ಶಚೀದೇವಿಯು ಇಂದ್ರನನ್ನು ಕೃಷ್ಣನ ಮೇಲೆ ಯುದ್ಧಕ್ಕೆ ಪ್ರೇರಿಸಲು, ಇಂದ್ರನು - ಮೊದಲು ತನಗಾಗಿ ಶ್ರೀಹರಿಯನ್ನು ಭಕ್ತಿಯಿಂದ ಮಣಿದು ಅವತಾರಕ್ಕಾಗಿ ಬೇಡಿದ್ದವನು ಮರುದ್ಗಣಗಳೊಂದಿಗೆ ವಿವೇಕಶೂನ್ಯನಾಗಿ ಶ್ರೀಕೃಷ್ಣನನ್ನು ಎದುರಿಸಲು, ಶ್ರೀಕೃಷ್ಣನು ಅವನನ್ನು ಪರಾಜಿತನನ್ನಾಗಿ ಮಾಡಿದನು. ನರಕಾಸುರನು ಭೂಮ್ಯಾಕಾಶಗಳನ್ನು ಮುಟ್ಟುವ ದೇಹದಿಂದ ಎದುರಿಸಿದಾಗ ಶ್ರೀಕೃಷ್ಣನು ಚಕ್ರಾಯುಧದಿಂದ ಅವನನ್ನು ನಿಗ್ರಹಿಸಿ-ದನು. ಆಗ ಭೂದೇವಿಯು ಪ್ರಾರ್ಥಿಸಲು ಆ ನರಕಾಸುರನ ಮಗನಿಗೆ ರಾಜ್ಯವನ್ನು ಕೊಟ್ಟು ಶ್ರೀಹರಿಯು ಅಂತಃಪುರವನ್ನು ಪ್ರವೇಶಿಸಿದನು. ಆಗ ನರಕಾಸುರನಿಂದ ಅಪಹೃತರಾಗಿ ಸೆರೆಯಲ್ಲಿದ್ದ ರಾಜಕನ್ಯೆಯರು ಆರ್ತಬಂಧುವಾಗಿ ಬಂದಿದ್ದ ಶ್ರೀಹರಿಯನ್ನು ಕಂಡ ತಕ್ಷಣವೇ ಸಂತೋಷ, ನಾಚಿಕೆ, ಪ್ರೇಮ ಇವುಗಳಿಂದ ಪ್ರೇರಿತರಾಗಿ ತಮ್ಮ ನೋಟಗಳಿಂದಲೇ ಪತಿಯನ್ನಾಗಿ ತಿಳಿದರು. ಇವರ ಇಚ್ಛೆಯನ್ನು ಪೂರೈಸಲು ಶ್ರೀಕೃಷ್ಣನು ಅನೇಕ ರೂಪಗಳನ್ನು ಧರಿಸಿ ಅನೇಕ ಗೃಹಗಳಲ್ಲಿ

ಶುಭಮುಹೂರ್ತದಲ್ಲಿ ವಿಧಿವತ್ತಾಗಿ ಇವರ ಪಾಣಿಗ್ರಹಣ ಮಾಡಿದನು. ಯೋಗೀಶ್ವರನಾದ ಶ್ರೀಹರಿಗೆ ಇದೇನೂ ಅಸಾಧ್ಯವಲ್ಲ. ಬಹುರೂಪ ಹೊಂದುವ ಪ್ರಕೃತಿಗನುಗುಣವಾಗಿ ಅವರೊಬ್ಬೊಬ್ಬರಲ್ಲಿಯೂ ಹತ್ತು ಹತ್ತು ಮಕ್ಕಳನ್ನು ಪಡೆದನು ಈ ಮಕ್ಕಳು ಶ್ರೀಹರಿಯ ಕಿಂಚಿತ್ಸಾಮ್ಯವನ್ನು ಹೊಂದಿದ್ದರು.

ಭೂಭಾರಹರಣಕ್ಕಾಗಿ ಅವತಾರ ಮಾಡಿದ ಶ್ರೀಕೃಷ್ಣನು ಅನೇಕ ದೈತ್ಯರನ್ನು ತಾನೇ ಸಂಹಾರಮಾಡಿದನು. ತನ್ನ ಭಕ್ತರ ಸಾಮರ್ಥ್ಯವನ್ನು ತೋರುವುದಕ್ಕಾಗಿ ಕಾಲಯವನನ್ನು ಮುಚುಕುಂದನಿಂದಲೂ, ಜರಾಸಂಧನನ್ನು ಭೀಮಸೇನಿಂದಲೂ ಸಂಹಾರ ಮಾಡಿಸಿದನು. ಹೀಗೆ ಭಕ್ತರ ಕೈಯಲ್ಲಿ ದೈತ್ಯರನ್ನು ಸಂಹಾರ ಮಾಡಿಸಿ-ದಾಗಲೂ ಭಕ್ತರಲ್ಲಿ ಇದ್ದು ತಾನೇ ದೈತ್ಯರನ್ನು ಸಂಹಾರ ಮಾಡಿದನು. ಶಂಬರ, ವಿವಿದ, ಬಾಣ, ಮುರ, ಬಲ್ವಲ, ದಂತವಕ್ತ್ರ ಮೊದಲಾದವರ ಸಂಹಾರವಾದಮೇಲೆ ಪಾಂಡವ ಕೌರವ ಪಕ್ಷವನ್ನು ವಹಿಸಿ ಕುರುಕ್ಷೇತ್ರದಲ್ಲಿ ನೆರೆದಿದ್ದ ಸೈನ್ಯಸಮೇತರಾದ ರಾಜರನ್ನು ಮಹಾಭಾರತ ಯುದ್ಧದಲ್ಲಿ ಸಂಹಾರ ಮಾಡಿಸಿದನು. ಆ ಸೈನ್ಯಗಳ ಭಾರಕ್ಕೆ ಭೂಮಿಯೇ ನಡುಗುತ್ತಿತ್ತು. ಕರ್ಣ, ದುಃಶ್ಯಾಸನ, ಶಕುನಿ ಮೊದಲಾದವರ ದುಷ್ಟಸಲಹೆಗಳಿಗೆ ಒಳಗಾಗಿ ತನ್ನ ಸಂಪತ್ತನ್ನೂ ಆಯುಸ್ಸನ್ನೂ ಕಳೆದುಕೊಂಡ ದುರ್ಯೋಧನನು ತೊಡೆ ಮುರಿದು ನಾಯಿ ನರಿಗಳ ಪಾಲಾಗಿ ರಣಭೂಮಿ-ಯಲ್ಲಿ ಮಲಗಿದುದನ್ನು ಕಂಡ ಕೃಷ್ಣನು ದುರ್ಯೋಧನನ ಸಂಹಾರಕ್ಕೆ ಕಾರಣನಾದ ಭೀಮನ ವಿಷಯದಲ್ಲಿ ಸಂತಸಗೊಂಡನು. ಆದರೂ ಅಸಂಖ್ಯಾತರಾದ ಯಾದವರು ಇನ್ನೂ ಉಳಿದೇ ಇದ್ದರು. ಸಜ್ಜನರಾದ ಇವರು ಕಲಿಯುಗದಲ್ಲಿ ಉಳಿಯುವುದು ಶ್ರೀಕೃಷ್ಣನಿಗೆ ಇಷ್ಟವಿರಲಿಲ್ಲ. ಈ ಯಾದವರ ಸಂಹಾರವಿಲ್ಲದೆ ಭೂಮಿಯ ಭಾರವು ಬಹುಭಾಗ ಉಳಿದೇ ಹೋಗಿರುವುದು. ಮಧ್ಯಪಾನ ಮತ್ತರಾಗಿ ಇವರಿವರೇ ವಿವೇಕಶೂನ್ಯರಾಗಿ ಹೊಡೆದಾಡುವಂತೆ ಮಾಡುವುದೇ ಇವರ ವಧೆಗೆ ಉಪಾಯ; ಬೇರೊಂದು ಉಪಾಯವಿಲ್ಲ. ನಾನು ಕಣ್ಮರೆಯಾದ ಮೇಲೆ ಇವರೂ ಕಣ್ಮರೆಯಾಗುವರು'' ಎಂದಾಲೋಚಿಸಿದ ಶ್ರೀಕೃಷ್ಣನು ಸ್ವರ್ಗಕ್ಕೆ ಸಮಾನವಾದ ರಾಜ್ಯದಲ್ಲಿ ಧರ್ಮರಾಜನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿ ಸಜ್ಜನರಿಗೆ ತಾನು ನಿರ್ವ್ಯಾಜ ಬಂಧುವೆಂಬುದನ್ನು ತೋರಿಸಿಕೊಟ್ಟನು ಪುರುವಂಶಾಂಕುರವು ಅಭಿಮನ್ಯುವಿನಿಂದ ಉತ್ತರೆಯ ಗರ್ಭದಲ್ಲಿ ಬೆಳೆಯುತ್ತಿತ್ತು. ದುರ್ಯೋಧನ ಪಕ್ಷಪಾತಿಯಾಗಿದ್ದ ಅಶ್ವತ್ಥಾಮನು ಕೋಪದಿಂದ ಈ ಅಂಕುರದ ನಾಶಕ್ಕೆ ಪ್ರಯತ್ನಿಸಿದನು. ಅದನ್ನು ಪರಿಹರಿಸಿ ಕೃಷ್ಣನು ಗರ್ಭವನ್ನು ರಕ್ಷಿಸಿದನು. ಧರ್ಮರಾಜನಿಂದ ಉತ್ತಮವಾದ ಮೂರು ಯಾಗಗಳನ್ನು ಮಾಡಿಸಿದನು.

ಧರ್ಮರಾಜನೂ ಶ್ರೀಹರಿಯ ಭಕ್ತನಾಗಿ ಸಹೋದರರೊಂದಿಗೆ ರಾಜ್ಯಭಾರ ಮಾಡುತ್ತಾ ಸಂತೋಷದಿಂದಿರುವನು.

ಲೌಕಿಕ ವೈದಿಕ ಮಾರ್ಗಗಳನ್ನು ಅನುಸರಿಸುವ ಶ್ರೀಕೃಷ್ಣನು ಸ್ವಾನುಭವ-ಪೂರ್ಣನಾದ್ದರಿಂದ ವಿಷಯಾಸಕ್ತಿರಹಿತನಾಗಿ ದ್ವಾರಕಿಯಲ್ಲಿ ವಿಷಯಸುಖಗಳನ್ನು ಸೇವಿಸುತ್ತಿದ್ದನು. ಅವನ ಸುಂದರವಾದ ಮುಗುಳುನಗೆ, ಮೋಹಕವಾದ ನೋಟ, ಅಮೃತಸಮವಾದ ಮಾತು, ದೋಷದೂರವಾದ ನಡತೆ, ಸರ್ವಸಂಪತ್ತಿಗಾಕರವಾದ ಲಕ್ಷ್ಮೀನಿವಾಸವೆನಿಸುವ ದೇಹ - ಇವುಗಳಿಂದ ಐಹಿಕ ಆಮುಷ್ಮಿಕ ಲೋಕಗಳನ್ನೂ, ಅತಿಶಯವಾಗಿ ಯಾದವರನ್ನೂ ಸಂತೋಷಪಡಿಸುತ್ತಾ ಶ್ರೀಕೃಷ್ಣನು ರಾತ್ರಿಯ ವೇಳೆಗಳಲ್ಲಿ ಕ್ಷಣಕಾಲ ಸ್ತ್ರೀಯರಲ್ಲಿ ಸೌಹಾರ್ದಯುತನಾಗಿ ಕ್ರೀಡಿಸಿದನು. ಗೃಹಸ್ಥ ಧರ್ಮಾಚರಣೆಯನ್ನು ಜಗತ್ತಿಗೆ ತೋರುತ್ತಿದ್ದ ಶ್ರೀಕೃಷ್ಣನು ಕಾಲಕ್ರಮದಲ್ಲಿ ಲೋಕಶಿಕ್ಷಾರ್ಥವಾಗಿ ವಿಷಯ ಸಾಧನೆಗಳಲ್ಲಿ ವೈರಾಗ್ಯವನ್ನೂ ತೋರಿಸಿದನು. ಆದ್ದರಿಂದಲೇ ಭಗವದ್ಭಕ್ತರು ಶ್ರೀಹರಿಯನ್ನೇ ಆಶ್ರಯಿಸಿದವರಾಗಿ ಶ್ರೀಹರಿಯ ಇಚ್ಛೆಯಂತೆ ಒದಗಿಬರುವ ನಶ್ವರವಾದ ವಿಷಯಸುಖಗಳಲ್ಲಿ ಆಸಕ್ತಿಯನ್ನು ಹೊಂದುವುದಿಲ್ಲ. ಅಂದಮೇಲೆ ಶ್ರೀಹರಿಗೆ ವಿಷಯಾಸಕ್ತಿಯೆಲ್ಲಿಯದು !

ದ್ವಾರಕೆಯಲ್ಲಿ ಕ್ರೀಡಾಸಕ್ತರಾಗಿದ್ದ ಯಾದವಕುಮಾರಕರು ಒಂದು ಸಲ ಋಷಿಗಳಿಗೆ ಕೋಪ ಬರುವ ಕಾರ್ಯಗಳನ್ನು ಮಾಡಿದರು. ಶ್ರೀಹರಿಯ ಇಚ್ಛೆಯನ್ನು ಬಲ್ಲ ಈ ಜ್ಞಾನಿಗಳು ಕುಪಿತರಾಗಿ ಯಾದವರು ಪರಸ್ಪರ ಹೊಡೆದಾಡಿ ಸಾಯುವಂತೆ ಶಪಿಸಿದರು. ಸುಖಿಗಳಾಗಿದ್ದ ಯಾದವರಿಗೆ ವರ್ಷಗಳು ತಿಂಗಳುಗಳಂತೆ ಕಳೆಯುವುವು. ಶಾಪಗ್ರಸ್ತರಾದ ಇವರು ಪ್ರಭಾಸ ಕ್ಷೇತ್ರಕ್ಕೆ ಹೋಗುವರು. ಅಲ್ಲಿ ಸ್ನಾನ ಮಾಡಿ ದೇವ, ಋಷಿ ಮತ್ತು ಪಿತೃಗಳಿಗೆ ತರ್ಪಣವನ್ನುಕೊಟ್ಟು ಬಹು ಗುಣಯುಕ್ತ ಗೋವುಗಳನ್ನೂ, ಬಂಗಾರ, ಬೆಳ್ಳಿ, ಹಾಸಿಗೆ, ಬಟ್ಟೆ ಕೃಷ್ಣಾಜಿನ, ಕಂಬಳಿ, ಕುದುರೆ, ರಥ, ಆನೆ, ಕನ್ಯೆ, ಜೀವನಾಧಾರವಾದ ಭೂಮಿ, ಷಡ್ರಸೋಪೇತ ಮೃಷ್ಟಾನ್ನ ಮೊದಲಾದುವನ್ನು ಶ್ರೀಹರಿಗೆ ಅರ್ಪಿತವಾಗಲೆಂಬ ಅನುಸಂಧಾನದಿಂದ ಬ್ರಾಹ್ಮಣರಿಗೆ ದಾನ ಮಾಡುವರು. ಗೋಬ್ರಾಹ್ಮಣರ ರಕ್ಷಣೆಗಾಗಿ ಜೀವಿಸಿದ್ದ ಈ ಪರಾಕ್ರಮಿಗಳು ತಲೆತಗ್ಗಿಸಿ ನಮಸ್ಕರಿಸುವರು.



# ಅಥ ಚತುರ್ಥೋಽಧ್ಯಾಯಃ

**ಉದ್ಧವ ಉವಾಚ**

**ಅಥ ತೇ ತದನುಜ್ಞಾತಾ ಭುಕ್ತ್ವಾ ಪೀತ್ವಾ ಚ ವಾರುಣೀಂ ।**
**ತಯಾ ವಿಭ್ರಂಶಿತಜ್ಞಾನಾ ದುರುಕ್ತೈರ್ಮರ್ಮ ಪಸ್ಪೃಶುಃ ॥೧॥**

ಅಥ=ಅನಂತರ, ತದನುಜ್ಞಾತಾಃ=ಬ್ರಾಹ್ಮಣರಿಂದ ಭೋಜನಕ್ಕೆ ಅಪ್ಪಣೆ ಪಡೆದ, ತೇ=ಯಾದವರು, ಭುಕ್ತ್ವಾ=ಊಟಮಾಡಿ, ವಾರುಣೀಂ ಪೀತ್ವಾ=ವಾರುಣಿ ಎಂಬ ಮದ್ಯವನ್ನು ಪಾನಮಾಡಿ, ತಯಾ=ಅದರಿಂದ, ವಿಭ್ರಂಶಿತಜ್ಞಾನಾಃ=ಸ್ವಕೀಯರು ಪರಕೀಯರು ಎಂಬ ಜ್ಞಾನವನ್ನು ಕಳೆದುಕೊಂಡವರಾಗಿ, ದುರುಕ್ತೈಃ=ದುಷ್ಟ ಮಾತುಗಳಿಂದ, ಮರ್ಮಪಸ್ಪೃಶುಃ=ಮರ್ಮಸ್ಥಳಕ್ಕೆ ಮುಟ್ಟಿದರು.'ಸ್ಪಶ ಉಪತಾಪೇ' ಎಂದಿರುವದರಿಂದ ಮನಸ್ಸಿಗೆ ತಾಪಕೊಡುವ ದುಷ್ಟಮಾತುಗಳನ್ನಾಡಿದರು ಎಂದರ್ಥ. ॥೧॥

**ತೇಷಾಂ ಮೈರೇಯದೋಷೇಣ ವಿಷಮೀಕೃತಚೇತಸಾಂ ।**
**ನಿಮ್ಲೋಚತಿ ರವಾವಾಸೀದ್ ವೇಣೂನಾಮಿವ ಮರ್ದನಂ ॥೨॥**

ಮೈರೇಯದೋಷೇಣ=ವಾರುಣಿ ಎಂಬ ಮದ್ಯಪಾನ ಮಾಡಿದ ದೋಷದಿಂದ, ವಿಷಮೀಕೃತಚೇತಸಾಂ=ಬುದ್ಧಿಭ್ರಮಣವುಳ್ಳ, ತೇಷಾಂ=ಯಾದವರಿಗೆ, ರವೌ=ಸೂರ್ಯನು, ನಿಮ್ಲೋಚತಿ ಸತಿ=ಅಸ್ತಂಗತನಾಗಲು, ವೇಣೂನಾಂ ಇವ=ಬಿದುರುಗಳಂತೆ,ಮರ್ದನಂ ಆಸೀತ್=ಯುದ್ಧವೆಂಬ ಸಂಘರ್ಷವಾಗುವುದು. ॥೨॥

**ಭಗವಾನಾತ್ಮಮಾಯಾಯಾ ಗತಿಂ ತಾಮವಲೋಕ್ಯ ಸಃ ।**
**ಸರಸ್ವತೀಮುಪಸ್ಪೃಶ್ಯ ವೃಕ್ಷಮೂಲಮುಪಾವಿಶತ್ ॥೩॥**

ಭಗವಾನ್=ಶ್ರೀಕೃಷ್ಣನು,ಆತ್ಮಮಾಯಾಯಾಃ=ಯದುಕುಲಸಂಹಾರ ಮಾಡುವ ತನ್ನ ಸಾಮರ್ಥ್ಯದ, ತಾಂ ಗತಿಂ=ಮುಂದೆ ಆಗುವ ಸ್ಥಿತಿಯನ್ನು, ಅವಲೋಕ್ಯ=ಸ್ವರ್ಗಾರೋಹಣಕ್ಕೂ ಇಪ್ಪತ್ತಾರು ವರ್ಷ ಮುಂಚೆಯೇ ತಿಳಿದು ಪ್ರಭಾಸಕ್ಕೆ ಹೋಗಿ,ಅಲ್ಲಿ ಸರಸ್ವತೀಂ ಉಪಸ್ಪೃಶ್ಯ=ಸರಸ್ವತೀನದಿಯಲ್ಲಿ ಸ್ನಾನಾಚಮನಾದಿಗಳನ್ನು ಮಾಡಿ, ವೃಕ್ಷಮೂಲಂ ಉಪಾವಿಶತ್=ಗಿಡದ ಕೆಳಗೆ ಕುಳಿತನು.

ಇಲ್ಲಿ 'ಯದುಕುಲ ಸಂಹಾರದ ಸ್ಥಿತಿಯನ್ನು ನೋಡಿ' ಎಂದು ಹೇಳುವುದು 'ಸಂಜಿಹೀರ್ಷುಣಾ' ಎಂದು ಮುಂದೆ ಹೇಳುವ ಮಾತಿನಿಂದ ವಿರುದ್ಧವಾಗುವುದು. ಸಂಹಾರವಾದ ಮೇಲೆ ಸಂಹಾರ ಮಾಡುವ ಇಚ್ಛೆ ಬರಲಾರದು ಮತ್ತು

ಆತ್ಮಮಾಯಾ ಎಂಬುದಕ್ಕೆ ಅನಿರ್ವಚನೀಯ ಅವಿದ್ಯಾ ಎಂಬರ್ಥವೂ ಆಗುವುದು ಕಾರಣ ವಾಖ್ಯಾನಿಸುವರು –

**ಆತ್ಮಮಾಯಾಯಾಃ ಆತ್ಮಸಾಮರ್ಥ್ಯಸ್ಯ ಗತಿಂ ಪೂರ್ವಮೇವ ಅವಲೋಕ್ಯ।**
**"ಜ್ಞಾತ್ವಾ ಕತಿಪಯೈರ್ವರ್ಷೈಃ ಪೂರ್ವಮೇವ ಜನಾರ್ದನಃ।**
**ಮೌಸಲಂ ಜ್ಞಾನಸಂತತ್ಯಾ ಉದ್ಧವಂ ಬದರೀಂ ನಯತ್ ।**
**ಸ ಜ್ಞಾನಂ ತತ್ರ ವಿಸ್ತೀರ್ಯ ಪುನರ್ದ್ವಾರವತೀಂ ಯಯೌ" ॥**

ಶ್ರೀಕೃಷ್ಣನು ಒನಕೆಯ ಕಾರ್ಯವಾದ ಯಾದವರ ನಾಶವನ್ನು ಕೆಲವು ದಿನಗಳ(೨೬ ವರ್ಷ) ಮುಂಚೆಯೇ ತಿಳಿದು ತಾನು ಉದ್ಧವನಿಗೆ ಉಪದೇಶ ಮಾಡಿ, ಮುನಿಗಳಿಗೆ ಉಪದೇಶ ಮಾಡಿ ಜ್ಞಾನವಿಸ್ತಾರ ಮಾಡಲು ಉದ್ಧವನನ್ನು ಬದರಿಗೆ ಕಳಿಸಿದನು. ಅವನು ಅಲ್ಲಿ ಜ್ಞಾನೋಪದೇಶ ಮಾಡಿ ಮತ್ತೆ ದ್ವಾರಕೆಗೆ ಬಂದನು.

ಇಲ್ಲಿ ಒಂದು ಸಂದೇಹ; ಉದ್ಧವನಿಗೆ ಉಪದೇಶಮಾಡಿದ್ದು ಮತ್ತು ಅವನು ಬದರಿಗೆ ಹೋದದ್ದು ಯದುಕುಲನಾಶಕ್ಕಿಂತ ಮೊದಲು ಎಂದು ಹೇಳಿದರೆ 'ಸಂಹೃತ್ಯ ಸ್ವಕುಲಂ ನೂನಂ' ಎಂಬ ೨೯ನೇ ಶ್ಲೋಕದಲ್ಲಿ ಯದುಕುಲ ಸಂಹಾರವಾದ ಮೇಲೆ ಉದ್ಧವನಿಗೆ ಜ್ಞಾನೋಪದೇಶ, ಅವನ ಬದರಿ ಪ್ರವಾಸ ಹೇಳುವುದರಿಂದ ವಿರುದ್ಧವಾಗುವುದು ಎಂದರೆ? ಹೇಳುವರು– ವಿರುದ್ಧವಲ್ಲ. ಅದೂ ನಿಜವೇ ಇದೂ ನಿಜವೇ. ಉದ್ಧವನಿಗೆ ಜ್ಞಾನೋಪದೇಶ, ಬದರೀ ಪ್ರವಾಸ ಕೊನೆಗೂ ಆಗಿವೆ (ಅಂದರೆ ಎರಡು ಸಲ) ಎಂಬ ಅಭಿಪ್ರಾಯದಿಂದ ಪ್ರಮಾಣಶೇಷ ಹೇಳುವರು –

**"ಪೂರ್ವಮೇವೋಪದಿಷ್ಟೋಽಪಿ ಹರಿಣಾ ಜ್ಞಾನಮುದ್ಧವಃ।**
**ಸ್ವರ್ಗಾರೋಹಣಕಾಲೇ ತು ಪುನಃ ಪಪ್ರಚ್ಛ ಕೇಶವಂ ॥**
**ಪುನಃ ಶ್ರುತ್ವಾ ಬದರ್ಯಾಂ ತು ವರ್ಷತ್ರಯಮುವಾಸ ಹ।**
**ಜ್ಞಾನಂ ಸಂಸ್ಥಾಪ್ಯ ಪಶ್ಚಾಚ್ಚ ಸ್ವೇಚ್ಛಯಾ ಸ್ವರ್ಗತಃ ಪ್ರಭುಃ ॥"ಇತಿ ಗಾರುಡೇ।**

ಯಾದವಸಂಹಾರದ ಮೊದಲೇ ಶ್ರೀಕೃಷ್ಣನಿಂದ ಜ್ಞಾನೋಪದೇಶ ಪಡೆದಿದ್ದರೂ ಉದ್ಧವನು,ಯಾದವಸಂಹಾರಾನಂತರವೂ ಸ್ವರ್ಗಾರೋಹಣಕಾಲದಲ್ಲಿ ಮತ್ತೆ ಶ್ರೀಹರಿಯನ್ನು ಪ್ರಶ್ನಿಸಿದನು. ಉತ್ತರವನ್ನು ಪಡೆದು ಬದರಿಯಲ್ಲಿ ಮೂರುವರ್ಷ ವಾಸಮಾಡಿ, ಜ್ಞಾನಪ್ರಚಾರಮಾಡಿ ನಂತರ ಸ್ವರ್ಗಕ್ಕೆ ಹೋದನು ಎಂದು ಗರುಡಪುರಾಣದಲ್ಲಿದೆ ॥೩॥

**ಅಹಂ ಚೋಕ್ತೋ ಭಗವತಾ ಪ್ರಪನ್ನಾರ್ತಿಹರೇಣ ಹ।**
**ಬದರೀಂ ತ್ವಂ ಪ್ರಯಾಹೀತಿ ಸ್ವಕುಲಂ ಸಂಜಿಹೀರ್ಷುಣಾ ॥೪॥**

ಸ್ವಕುಲಂ=ತನ್ನಯಾದವಕುಲವನ್ನು, ಸಂಜಿಹೀರ್ಷುಣಾ=ಸಂಹರಿಸಲಿಚ್ಛಿಸುವ, ಪ್ರಪನ್ನಾರ್ತಿಹರೇಣ=ಶರಣಾಗತರಾದ ಬದರೀನಿವಾಸಿಗಳ ದುಃಖನಾಶ ಮಾಡುವ, ಭಗವತಾ=ಶ್ರೀಕೃಷ್ಣನಿಂದ, ತ್ವಂ ಬದರೀಂ ಪ್ರಯಾಹಿ=ನೀನು ಬದರಿಗೆ ಹೋಗು, ಇತಿ=ಎಂದು, ಅಹಂ ಉಕ್ತಃ=ನಾನು ಅಜ್ಞಾಪಿಸಿಲ್ಪಟ್ಟೆನು. ಹ=ಈ ಉಪದೇಶವು ಯದುಕುಲನಾಶಕ್ಕಿಂತ ಮೊದಲಿನದು ಎಂಬುದು ಪ್ರಮಾಣಸಿದ್ಧ. ಇದರ ಪ್ರಕಾರ ಉದ್ಧವನ ಮೊದಲನೇ ಉಪದೇಶ ಪ್ರಭಾಸದಲ್ಲಿ ಸರಸ್ವತೀತೀರದಲ್ಲಿ ಗಿಡದ ಕೆಳಗೆ ನಡೆಯಿತು ಎಂದು ತಿಳಿಯುವುದು ॥೪॥

**ಅಥಾಪಿ ತದಭಿಪ್ರೇತಂ ಜಾನನ್ನಹಮರಿಂದಮ ।**
**ಪೃಷ್ಠತೋಽನ್ವಗಮಂ ಭರ್ತುಃ ಪಾದವಿಶ್ಲೇಷಣಾಕ್ಷಮಃ ॥೫॥**

ಹೇ ಅರಿಂದಮ=ಕಾಮಾದಿ ವೈರಿಗಳನ್ನು ನಿಗ್ರಹಿಸಿದ ವಿದುರನೇ, ಅಥಾಪಿ= ಬದರಿಗೆ ಹೋಗು ಎಂದು ಹೇಳಿದರೂ, ತದಭಿಪ್ರೇತಂ ಜಾನನ್=ಶ್ರೀಕೃಷ್ಣನ, ಜ್ಞಾನೋಪದೇಶ ಮಾಡಬೇಕೆಂಬ ಅಭಿಪ್ರಾಯವನ್ನು ತಿಳಿದು, ಭರ್ತುಃ=ಶ್ರೀಕೃಷ್ಣನ, ಪಾದವಿಶ್ಲೇಷಣಾಕ್ಷಮಃ=ಪಾದಾರವಿಂದಗಳ ವಿಯೋಗವನ್ನು ಸಹಿಸಲಾಗದ ನಾನು ಪೃಷ್ಠತಃ ಅನ್ವಗಮಂ=ಶ್ರೀ ಕೃಷ್ಣನನ್ನು ಹಿಂಬಾಲಿಸಿ ನಡೆದೆನು. ॥೫॥

**ಅದ್ರಾಕ್ಷಮೇಕಮಾಸೀನಂ ವಿಚಿನ್ವನ್ ದಯಿತಂ ಪತಿಂ ।**
**ಶ್ರೀನಿಕೇತಂ ಸರಸ್ವತ್ಯಾಂ ಕೃತಕೇತಮಕೇತನಮ್ ॥೬॥**

ದಯಿತಂ=ಪ್ರಿಯತಮನಾದ, ಪತಿಂ=ತನ್ನ ಜ್ಞಾನವನ್ನು ಕೊಟ್ಟು ರಕ್ಷಿಸುವ ಶ್ರೀಕೃಷ್ಣನನ್ನು, ವಿಚಿನ್ವನ್=ಹುಡುಕುತ್ತ, ಶ್ರೀನಿಕೇತಂ=ಲಕ್ಷ್ಮೀದೇವಿಗೆ ಆವಾಸ ಸ್ಥಾನನಾದ,ಅಕೇತನಂ=ಬೇರೆ ಆಧಾರರಹಿತನಾದ, ಸರಸ್ವತ್ಯಾಂ=ಸರಸ್ವತೀ ತೀರದಲ್ಲಿ, ಕೃತಕೇತಂ=ವಾಸಮಾಡಿದ, ಏಕಂ ಆಸೀನಂ=ಒಬ್ಬನೇ ಕುಳಿತದ್ದನ್ನೂ, ಅದ್ರಾಕ್ಷಂ= ನೋಡಿದೆನು ॥೬॥

**ಶ್ಯಾಮಾವದಾತಂ ವಿರಜಂ ಪ್ರಶಾಂತಾರುಣಲೋಚನಂ ।**
**ದೋರ್ಭಿಶ್ಚತುರ್ಭಿರ್ವಿದಿತಂ ಪೀತಕೌಶಾಂಬರೇಣ ಚ ॥೭॥**

ಶ್ಯಾಮಾವದಾತಂ=ಇಂದ್ರನೀಲದಂತೆ ವರ್ಣದಿಂದ ನಿರ್ಮಲನಾದ ಅಥವಾ ಪ್ರಕಾಶಮಾನನಾದ, ವಿರಜಂ=ದೋಷರಹಿತನಾದ ಪ್ರಶಾಂತಾರುಣಲೋಚನಂ= ಸ್ತಿಮಿತವಾದ ಕೆಂಪಾದ ಕಣ್ಣುಗಳುಳ್ಳ,ಚತುರ್ಭಿಃ ದೋರ್ಭಿಃ=ನಾಲ್ಕು ಕೈಗಳಿಂದಲೂ, ಪೀತಕೌಶಾಂಬರೇಣ ಚ ವಿದಿತಂ=ಬಂಗಾರ ಬಣ್ಣದ ರೇಷ್ಮೆಯ ವಸ್ತ್ರದಿಂದಲೂ ತಿಳಿಯಲ್ಪಡುವ ॥೭॥

**ವಾಮ ಊರಾವಧಿಶ್ರಿತ್ಯ ದಕ್ಷಿಣಾಂಘ್ರಿಸರೋರುಹಂ ।**
**ಅಪಾಶ್ರಿತಾರ್ಭಕಾ(ವಸ್ಥಂ)ಶ್ವತ್ಥಮಕೃಶಂ ತ್ಯಕ್ತಪಿಪ್ಪಲಂ ॥೮॥**

ವಾಮಊರೌ=ಎಡತೊಡೆಯಮೇಲೆ, ದಕ್ಷಿಣಾಂಘ್ರಿಸರೋರುಹಂ=ಬಲಪಾದ-ಕಮಲವನ್ನು, ಅಧಿಶ್ರಿತ್ಯ=ಇಟ್ಟುಕೊಂಡು, ಅಪಾಶ್ರಿತಾರ್ಭಕಾಶ್ವತ್ಥಂ=ಕೋಮಲ-ವಾದ ಅರಳೆ ಮರಕ್ಕೆ ಆತುಕೊಂಡು ಕುಳಿತಿರುವ 'ಅರ್ಭಕಾವಸ್ಥಂ' ಎಂಬ ಪಾಠದಲ್ಲಿ ಅವತಾರಕಾಲದಲ್ಲಿಯ ಬಾಲ್ಯಾವಸ್ಥೆಯನ್ನಾಶ್ರಯಿಸಿದ, ತ್ಯಕ್ತಪಿಪ್ಪಲಂ=ಕರ್ಮಫಲ-ವನ್ನು ದೂರೀಕರಿಸಿದ, ಅಕೃಶಂ=ಪರಿಪೂರ್ಣಾಂಗಗಳುಳ್ಳ ಶ್ರೀಕೃಷ್ಣನನ್ನು ನೋಡಿದೆನು ಎಂದನ್ವಯ ॥೮॥

**ತಸ್ಮಿನ್ ಮಹಾಭಾಗವತೋ ದ್ವೈಪಾಯನಸುಹೃತ್ ಸಖಾ ।**
**ಲೋಕಾನನುಚರನ್ ಸಿದ್ಧ ಆಸಸಾದ ಯದೃಚ್ಛಯಾ ॥೯॥**

ತಸ್ಮಿನ್=ಆಕಾಲ ಆದೇಶದಲ್ಲಿ, ಮಹಾಭಾಗವತಃ=ಮಹಾಭಗವದ್ಭಕ್ತರಾದ, ದ್ವೈಪಾಯನಸುಹೃತ್ ಸಖಾ=ವೇದವ್ಯಾಸದೇವರಿಗೆ ಪ್ರಿಯಮಿತ್ರರಾದ (ಪರಾಶರ ಶಿಷ್ಯರಾದ್ದರಿಂದ) ಸಿದ್ಧಃ=ಜ್ಞಾನಿಗಳಾದ ಮೈತ್ರೇಯರು, ಲೋಕಾನ್ ಅನುಸಂಚರನ್=ದೇಶಸಂಚಾರ ಮಾಡುತ್ತ, ಯದೃಚ್ಛಯಾ=ಶ್ರೀ ಹರಿಯ ಇಚ್ಛೆಯಿಂದ, ಆಸಸಾದ=ಬಂದರು ॥೯॥

**ತಸ್ಯಾನುರಕ್ತಸ್ಯ ಮುನೇರ್ಮುಕುಂದಃ**
**ಪ್ರಮೋದಭಾರಾನತಕಂಧರಸ್ಯ ।**
**ಆಶೃಣ್ವತೋ ಮಾಮನುರಾಗಹಾಸ-**
**ಸಮೀಕ್ಷಯಾ ವಿಶ್ರಮಯನ್ನುವಾಚ ॥೧೦॥**

ಮುಕುಂದಃ=ಶ್ರೀಕೃಷ್ಣನು, ಪ್ರಮೋದಭಾರಾನತಕಂಧರಸ್ಯ=ಸಂತೋಷಾತಿಶಯದ ಭಾರದಿಂದ ಬಾಗಿದ (ಕುತ್ತಿಗೆ) ಶಿರಸ್ಸುಳ್ಳ, ಅನುರಕ್ತಸ್ಯ=ಭಕ್ತನಾದ, ಮುನೇಃ ತಸ್ಯ=ಆ ಮೈತ್ರೇಯರು, ಆಶೃಣ್ವತಃ ಸತಃ=ಕೇಳುತ್ತಿರುವಾಗಲೇ, ಮಾಂ=ನನ್ನನ್ನು ಕುರಿತು, ಅನುರಾಗಹಾಸಸಮೀಕ್ಷಯಾ=ಸ್ನೇಹ ಮುಗುಳ್ನಗೆಗಳಿಂದ ಕೂಡಿದ ನೋಟದಿಂದ, ವಿಶ್ರಮಯನ್=ಶ್ರಮಪರಿಹರಿಸುವನಾಗಿ ಸಂಸಾರದುಃಖವನ್ನೇ ಕಳೆದು ಆನಂದ-ಗೊಳಿಸುವನಾಗಿ ಉವಾಚ=ಮಾತನಾಡಿದನು. ॥೧೦॥

ಶ್ರೀ ಭಗವಾನುವಾಚ

**ವೇದಾಹಮಂತರ್ಮನಸೀಪ್ಸಿತಂ ತೇ**
**ದದಾಮಿ ಯತ್ ತದ್ ದುರವಾಪಮನ್ಯೈಃ ।**
**ಸತ್ರೇ ಪುರಾ ವಿಶ್ವಸೃಜಾಂ ಮನೂನಾಂ**
**ಮತ್ಸಿದ್ಧಿಕಾಮೇನ ವಸೋ ತ್ವಯೇಷ್ಟಃ ॥೧೧॥**

ಹೇ ವಸೋ=(ವಸತೀತಿ ವಸುಃ ತತ್ಸಂಬುದ್ಧಿಃ) ಯಜ್ಞದ ಯಜಮಾನರಾದ ದೇವತೆಗಳ ಮಧ್ಯದಲ್ಲಿ, ಬೃಹಸ್ಪತಿರೂಪದೇವತೆಯಾಗಿ ವಾಸಿಸಿದವನೇ, ತ್ವಯಾ= ನಿನ್ನಿಂದ, ಪುರಾ=ಹಿಂದೆ, ವಿಶ್ವಸೃಜಾಂ=ಪ್ರಜಾಪತಿಗಳಾದ ಮನೂನಾಂ=ಜ್ಞಾನಿಗಳಾದ ದೇವತೆಗಳ, ಸತ್ರೇ=ಯಾಗದಲ್ಲಿ, ಮತ್ಸಿದ್ಧಿಕಾಮೇನ=ನನ್ನಿಂದ ಜ್ಞಾನ ಪಡೆಯುವ ಇಚ್ಛೆಯಿಂದ, ಅಹಂ=ನಾನು, ಇಷ್ಟಃ=ಪೂಜಿತನಾಗಿದ್ದೇನೆ. ಕಾರಣ ತೇ=ನಿನ್ನ ಅಂತರ್ಮನಸಿ=ಮನಸ್ಸಿನಲ್ಲಿ, ಈಪ್ಸಿತಂ ಯತ್=ಅಪೇಕ್ಷಿಸಿದ್ದನ್ನು, ಅಹಂ ವೇದ= ನಾನು ತಿಳಿದಿರುವೆನು, ಅನ್ಯೈಃ=ನನ್ನ ಭಕ್ತರಲ್ಲದವರಿಗೆ, ದುರವಾಪಂ= ಹೊಂದಲಾಗದ, ತದ್=ಆ ಜ್ಞಾನವನ್ನು ತೇ ದದಾಮಿ=ನಿನಗೆ ಕೊಡುವೆನು. ॥೧೧॥

**ಸ ಏಷ ಸಾಧೋ ಚರಮೋ ಭವಾನಾ-**
**ಮಾಸಾದಿತಸ್ತೇ ಮದನುಗ್ರಹೋಽಯಂ ।**
**ಯನ್ಮಾಂ ನೃಲೋಕಂ ರಹ ಉತ್ಸೃಜಂತಂ**
**ದಿಷ್ಟ್ಯಾ ದದೃಶ್ವಾನ್ ವಿಶದಾನುವೃತ್ತ್ಯಾ ॥೧೨॥**

ಯತ್=ಯಾವ ಕಾರಣ, ನೃಲೋಕಂ=(ನೃಲೋಕಾನ್) ಭೂ(ರಾದಿ) ಲೋಕವನ್ನು ಉತ್ಸೃಜಂತಂ=ಬಿಡಲು ಇಚ್ಛಿಸುವ, ಮಾಂ=ನನ್ನನ್ನು ರಹಃ= ಏಕಾಂತದಲ್ಲಿ, ದಿಷ್ಟ್ಯಾ=ಅದೃಷ್ಟವಶಾತ್, ವಿಶದಾನುವೃತ್ತ್ಯಾ=ಬಹುಕಾಲ ಮಾಡಿದ ನಿರ್ಮಲಸೇವೆಯಿಂದ, ದದೃಶ್ವಾನ್=ನೋಡಿರುವಿ. ಆದ್ದರಿಂದ ಅಯಂ ಮದನುಗ್ರಹಃ=ಇದು ಮೋಕ್ಷಕಾರಣವಾದ ನನ್ನ ಆತ್ಯಂತಿಕಪ್ರಸಾದವು. ತೇ=ನಿನ್ನಿಂದ ಆಸಾದಿತಃ=ಸಂಪಾದಿಸಲ್ಪಟ್ಟಿದೆ. ಹೇ ಸಾಧೋ=ಎಲೋ ಉದ್ಧವನೇ, ಭವಾನಾಂ= ಜನ್ಮಗಳ ಮಧ್ಯದಲ್ಲಿ ನಿನ್ನ ಮೂಲರೂಪವಾದ ಬೃಹಸ್ಪತಿಯ, ಸಃ=ಬ್ರಹ್ಮಾಂಡದ ಹೊರಗಿರುವ, ಏಷಃ=ಬ್ರಹ್ಮಾಂಡದೊಳಗಿರುವ, ಭವಃ=ಜನ್ಮವು, ಚರಮಃ= ಕೊನೆಯದು. ಹೊರತು ಉದ್ಧವನಾಮಕ ದೇಹದಿಂದ ಸಂಸಾರ ಜನ್ಮ ಕೊನೆಯಲ್ಲ, ಲಯವಾಗುವ ವರೆಗೆ ಪ್ರತಿದಿನ ಉದ್ಧವದೇಹ ಹುಟ್ಟುತ್ತಿರುವುದು ॥೧೨॥

ಶ್ರದ್ಧಾತಿಶಯ ಹುಟ್ಟಿಸಲು ಜ್ಞಾನವನ್ನು ಸ್ತುತಿಸುವನು -

**ಪುರಾ ಮಯಾ ಪ್ರೋಕ್ತಮಜಾಯನಾಭ್ಯೇ**
**ಪದ್ಮೇ ನಿಷಣ್ಣಾಯ ಮಮಾದಿಸರ್ಗೇ ।**
**ಜ್ಞಾನಂ ಪರಂ ಮನ್ಮಮಹಿಮಾವಭಾಸಂ**
**ಯತ್ಸೂರಯೋ ಭಾಗವತಂ ವದಂತಿ ॥೧೩॥**

ಪುರಾ=ಈ ಪಾದ್ಮಕಲ್ಪದಲ್ಲಿ, ಆದಿಸರ್ಗೇ=ಸೃಷ್ಟಿಯ ಆದಿಯಲ್ಲಿ, ಮಮ=ನನ್ನ ನಾಭ್ಯೇ=ನಾಭಿಯಲ್ಲಿ ಜನಿಸಿದ, ಪದ್ಮೇ=ಕಮಲದಲ್ಲಿ, ನಿಷಣ್ಣಾಯ=ಕುಳಿತಿರುವ, ಅಜಾಯ=ಬ್ರಹ್ಮನಿಗೆ, ಮಯಾ=ನನ್ನಿಂದ, ಪ್ರೋಕ್ತಂ=ಹೇಳಲ್ಪಟ್ಟ, ಮನ್ಮಹಿಮಾವ-ಭಾಸಂ=ನನ್ನ ಮಾಹಾತ್ಮ್ಯಗಳನ್ನು ತಿಳಿಸುವ, ಯತ್=ಯಾವುದನ್ನು, ಸೂರಯಃ=ಜ್ಞಾನಿಗಳು, ಭಾಗವತಂ ವದಂತಿ=ಕೇವಲ ಭಗವತ್ಪ್ರತಿಪಾದಕವಾದ್ದರಿಂದ 'ಭಾಗವತ'ವೆಂದು ಹೇಳುವರೋ, ಅಂಥಹ ಪರಂ=ಉತ್ತಮವಾದ ಜ್ಞಾನವಿದೆಯೋ ತತ್=ಅದನ್ನು, ತೇ=ನಿನಗೆ, ದದಾಮಿ=ಕೊಡುವೆನು.(ಹೇಳುವೆನು) ॥೧೩॥

**ಇತ್ಯಾದರೋಕ್ತಃ ಪರಮಸ್ಯ ಪುಂಸಃ**
**ಪ್ರತೀಕ್ಷಣಾನುಗ್ರಹಭಾಜನೋಽಹಂ ।**
**ಸ್ನೇಹೋತ್ಥರೋಮಾ ಸ್ಖಲಿತಾಕ್ಷರಸ್ತಂ**
**ಮುಂಚನ್ ಶುಚಃ ಪ್ರಾಂಜಲಿರಾಬಭಾಷೇ ॥೧೪॥**

ಇತಿ=ಈ ರೀತಿಯಾಗಿ, ಆದರೋಕ್ತಃ=ಆದರದಿಂದ ಹೇಳಲ್ಪಟ್ಟ ಪರಮಸ್ಯ ಪುಂಸಃ=ಸರ್ವೋತ್ತಮನಾದ ಶ್ರೀಹರಿಯ, ಪ್ರತೀಕ್ಷಣಾನುಗ್ರಹಭಾಜನಃ=ಚೆನ್ನಾಗಿ ನನ್ನನ್ನು ನೋಡುವುದೆಂಬ ಅನುಗ್ರಹಕ್ಕೆ ಪಾತ್ರನಾದ, ಅಹಂ=ನಾನು ಸ್ನೇಹೋತ್ಥ-ರೋಮಾ=ಭಕ್ತಿಯಿಂದ ರೋಮಾಂಚಿತನಾಗಿ, ಸ್ಖಲಿತಾಕ್ಷರಃ=ತೊದಲುವ ಅಕ್ಷರ-ಗಳುಳ್ಳವನಾಗಿ, ಶುಚಃ ಮುಂಚನ್=ಕಣ್ಣೀರುಡುತ್ತ, ಪ್ರಾಂಜಲಿಃ=ಕೈ ಜೋಡಿಸಿ, ಆಬಭಾಷೇ=ಮಾತನಾಡಿದೆನು. 'ಆಬಭಾಷೇ' ಎಂದು ಪರೋಕ್ಷವಾಗಿ ಹೇಳಿದ್ದರಿಂದ ತನಗೆ ಆಗ ಬಾಹ್ಯಜ್ಞಾನ ಇರಲಿಲ್ಲ ಎಂದು ಸೂಚಿಸುವನು. ॥೧೪॥

**ಕೋನ್ವೀಶ ತೇ ಪಾದಸರೋಜಭಾಜಾಂ**
**ಸುದುರ್ಲಭೋಽರ್ಥೇಷು ಚತುರ್ಷ್ವಪೀಹ ।**
**ತಥಾಪಿ ನಾಹಂ ಪ್ರವೃಣೋಮಿ ಭೂಮನ್**
**ಭವತ್ಪದಾಂಭೋಜನಿಷೇವಣೋತ್ಸುಕಃ ॥೧೫॥**

ಹೇ ಈಶ=ಎಲೋ ಸ್ವಾಮಿಯೇ, ತೇ=ನಿನ್ನ ಪಾದಸರೋಜಭಾಜಾಂ=ಪಾದಕಮಲಗಳ ಶ್ರವಣಾದಿರೂಪ ಸೇವೆ ಮಾಡುವವರಿಗೆ, ಚತುರ್ಷು ಅಪಿ ಅರ್ಥೇಷು=ಧರ್ಮಾರ್ಥಕಾಮಮೋಕ್ಷಗಳಲ್ಲಿ, ಕಃ ನು ಸುದುರ್ಲಭಃ=ಯಾವುದು ತಾನೇ ದೊರಕದಿರುವುದು ? ಎಲ್ಲವೂ ದೊರಕುವವೆ. ತಥಾಪಿ=ಆದರೂ, ಭೂಮನ್=ಪೂರ್ಣನೇ ಭವತ್ಪಾದಾಂಭೋಜನಿಷೇವಣೋತ್ಸುಕಃ=ನಿನ್ನ ಪಾದ-ಕಮಲಗಳ ಶ್ರವಣಾದಿ ರೂಪಸೇವೆಯನ್ನು ಸರ್ವದಾ ಇಚ್ಛಿಸುವ, ಅಹಂ=ನಾನು, ನ ಪ್ರವೃಣೋಮಿ=ಯಾವ ಪುರುಷಾರ್ಥವನ್ನೂ ಇಚ್ಛಿಸುವುದಿಲ್ಲ. ॥೧೫॥

ತತ್ವನಿಶ್ಚಯವುಳ್ಳ ನಿನಗೇಕೆ ಶ್ರವಣಾದಿಗಳಲ್ಲಿ ಉತ್ಸಾಹ ಎಂದರೆ ಹೇಳುವನು-

**ಕರ್ಮಾಣ್ಯನೀಹಸ್ಯ ಭವೋಽಭವಸ್ಯ ತೇ**
**ದುರ್ಗಾಶ್ರಯೋಽಥಾರಿಭಯಾತ್ ಪಲಾಯನಂ ।**
**ಕಾಲಾತ್ಮನೋ ಯತ್ ಪ್ರಮದಾಯುತಾಶ್ರಯಃ**
**ಸ್ವಾತ್ಮನ್‌ರತೇಃ ಖಿದ್ಯತಿ ದುರ್ವಿದಾಮಪಿ ॥೧೬॥**

ಅನೀಹಸ್ಯ=ವಿಹಿತ ನಿಷಿದ್ಧವಾದ ಕ್ರಿಯಾರಹಿತನಾದ, ತೇ=ನಿನಗೆ, ಕರ್ಮಾಣಿ=ವಿಧಿಬಂಧ ಉಳ್ಳವನಂತೆ ಸ್ನಾನದಾನಾದಿಗಳನ್ನು ಮಾಡುವುದು, ಅಭವಸ್ಯ=ಉತ್ಪತ್ತಿರಹಿತನಾದವನಿಗೆ, ಭವಃ=ಉತ್ಪತ್ತಿಯು ಕಾಲಾತ್ಮನಃ=ಸರ್ವಸಂಹಾರಕ-ನಾದವನಿಗೆ, ಅರಿಭಯಾತ್=ಜರಾಸಂಧಾದಿಗಳ ಭಯದಿಂದ, ದುರ್ಗಾಶ್ರಯಃ=ದ್ವಾರಕಾಮುಂತಾದ ದುರ್ಗವನ್ನಾಶ್ರಯಿಸುವುದು, ಪಲಾಯನಂ=ಗೋಮಂತ-ಪರ್ವತಕ್ಕೆ ಓಡುವುದು, ಸ್ವಾತ್ಮನ್‌ರತೇಃ=ಸ್ವರಮಣನಾದವಗೆ ಪ್ರಮದಾ-ಯುತಾಶ್ರಯಃ=ಬಹುಸ್ತ್ರೀ ಪರಿಗ್ರಹವು ಇವೇ ಮೊದಲಾದ ವಿಷಯಗಳಲ್ಲಿ, ವಿದಾಂ ಅಪಿ ಧೀಃ=ಜ್ಞಾನಿಗಳ ಬುದ್ಧಿಯೂ ಸಹ, ಖಿದ್ಯತಿ=ಅಲಂ ಬುದ್ಧಿಯನ್ನು ಹೊಂದುವುದಿಲ್ಲ, ಚಂಚಲವಾಗುವುದು. ಇದೆಲ್ಲ ಲೋಕ ವಿಡಂಬನ. ॥೧೬॥

**ಮಂತ್ರೇಷು ಮಾಂ ವಾ ಉಪಹೂಯ ಯತ್ ತ್ವ-**
**ಮಕುಂಠಿತಾಖಂಡಸದಾತ್ಮಬೋಧಃ ॥**
**ಪೃಚ್ಛೇಃ ಪ್ರಭೋ ಮುಗ್ಧ ಇವಾಪ್ರಮತ್ತ-**
**ಸ್ತನ್ನೋ ಮನೋ ಮೋಹಯತೀವ ದೇವ ॥೧೭॥**

ಮಂತ್ರೇಷು=ವಿಚಾರಗಳು ಪ್ರಸಕ್ತವಾದಾಗ, ಮಾಂ=ನನ್ನನ್ನು ಉಪಹೂಯ=ಕರೆದು, ಅಕುಂಠಿತ=ಸರ್ವತ್ರ ಅಪ್ರತಿಬದ್ಧವಾದ, ಅಖಂಡ=ಅಪರಿಚ್ಛಿನ್ನವಾದ, ಸತ್=ನಿರ್ದುಷ್ಟವಾದ, ಆತ್ಮಬೋಧಃ=ಸ್ವರೂಪಜ್ಞಾನವುಳ್ಳ, ತ್ವಂ=ನೀನು, ಮುಗ್ಧಃ ಇವ=

ಅಜ್ಞನಂತೆ, ಅಪ್ರಮತ್ತಃ=ಅವಹಿತನಾಗಿ, ಪೃಚ್ಛೇಃ=ಕೇಳುವಿ, ಇತಿ ಯತ್= ಎಂಬುವುದೇನಿದೆಯೋ, ತತ್=ಅದು, ನಃ=ನಮ್ಮ ಮನಃ ಮೋಹಯತಿ ಇವ= ಮೋಹಗೊಳಿಸುವಂತಿದೆ. ದೇವ=ಪ್ರಭೋ ಸ್ವಾಮಿಯಾದ ದೇವನೆ ಈ ವಿಧವಾದ ಬುದ್ಧಿಚಾಚಂಲ್ಯ ಪ್ರಸಕ್ತಿ ಪರಿಹಾರಕ್ಕಾಗಿ ಮತ್ತೆ ಜ್ಞಾನೋಪದೇಶಶ್ರವಣಕ್ಕೆ ಉತ್ಸುಕ-ನಾಗಿರುವೆನು ಎಂದು ಭಾವ ॥೧೭॥

ಹಿಂದೆ ಬ್ರಹ್ಮದೇವರಿಗೆ ಹೇಳಿದ್ದನ್ನೆ ನಿನಗೆ ಹೇಳುವೆ ಎಂದಾಗ ಅದರಲ್ಲಿ ಅನಧಿಕಾರಿಯಾದ ಉದ್ಧವನು ವಿಜ್ಞಾಪಿಸುವನು –

**ಜ್ಞಾನಂ ಪರಂ ಸ್ವಾತ್ಮರಹಃ ಪ್ರಕಾಶಂ**
**ಪ್ರೋವಾಚ ಕಸ್ಮೈ ಭಗವಾನ್ ಸಮಗ್ರಂ ।**
**ಅಪಿ ಕ್ಷಮಂ ನೋ ಗ್ರಹಣಾಯ ಭರ್ತ-**
**ರ್ವೇದಾಂಜಸಾ ಯದ್ ವೃಜಿನಂ ತರೇಮ ॥೧೮॥**

ಸ್ವಾತ್ಮರಹಃಪ್ರಕಾಶಂ=ನಿನ್ನ ಮಹಿಮೆಯನ್ನು ತಿಳಿಸುವ, ಯತ್ ಸಮಗ್ರಂ ಅಪಿ= ಸಂಪೂರ್ಣವಾದ, ಪರಂ=ಶ್ರೇಷ್ಠವಾದ, ಜ್ಞಾನಂ=ಜ್ಞಾನಸಾಧನವಾದ ವೇದಾದಿ ಶಾಸ್ತ್ರವನ್ನು,ಕಸ್ಮೈ=ಬ್ರಹ್ಮದೇವರಿಗೆ,ಪ್ರೋವಾಚ=ಹೇಳಿದೆಯೋ ಅದರಲ್ಲಿ, ನಃ=ನಮಗೆ ಗ್ರಹಣಾಯ ಕ್ಷಮಂ=ತಿಳಿಯಲು ಯೋಗ್ಯವಾದುದನ್ನು, ಹೇ ಭರ್ತಃ=ಸ್ವಾಮಿಯೇ ಭವಾನ್=ತಾವು, ವೇದ=ತಿಳಿದಿರುವಿ. ಯೇನ=ಯಾವುದರಿಂದ ವೃಜಿನಂ= ಸಾಂಸಾರಿಕ ದುಃಖವನ್ನು, ಅಂಜಸಾ ತರೇಮ=ಚೆನ್ನಾಗಿ ದಾಟುವೆವೋ ಅಷ್ಟನ್ನೇ ನನಗೆ ಉಪದೇಶಿಸು ಎಂದು ಭಾವ. ॥೧೮॥

**ಇತ್ಯಾವೇದಿತಹಾರ್ದಾಯ ಮಹ್ಯಂ ಸ ಭಗವಾನ್ ಪರಃ ।**
**ಆದಿದೇಶಾರವಿಂದಾಕ್ಷ ಆತ್ಮನಃ ಪರಮಾಂ ಸ್ಥಿತಿಮ್ ॥೧೯॥**

ಇತಿ=ಈ ರೀತಿಯಾಗಿ, ಆವೇದಿತಹಾರ್ದಾಯ=ವಿಜ್ಞಾಪಿತವಾದ ಮನಸ್ಸಿನ ಅಭಿಪ್ರಾಯವುಳ್ಳ, ಸಃ ಪರಃ ಭಗವಾನ್, ಅರವಿಂದಾಕ್ಷಃ=ಆ ಸರ್ವೋತ್ತಮನಾದ, ಷಡ್ಗುಣಸಂಪನ್ನನಾದ, ಕಮಲದಂತೆ ಕಣ್ಣುಳ್ಳ ಶ್ರೀಕೃಷ್ಣನು, ಆತ್ಮನಃ=ತನ್ನ ಪರಮಾಂ ಸ್ಥಿತಿಂ=ಉತ್ಕೃಷ್ಟವಾದ ಮಾಹಾತ್ಮ್ಯವನ್ನು ,ಆದಿದೇಶ=ಉಪದೇಶಿಸಿದನು. ॥೧೯॥

**ಸ ಏವಮಾರಾಧಿತಪಾದತೀರ್ಥಾ-**
**ದಧೀತತತ್ವಾತ್ಮವಿಬೋಧಮಾರ್ಗಃ ।**
**ಪ್ರಣಮ್ಯ ಪಾದೌ ಪರಿವೃತ್ಯ ದೇವ-**
**ಮಿಹಾಗತೋಽಹಂ ವಿರಹಾತುರಾತ್ಮಾ ॥೨೦॥**

ಆರಾಧಿತಪಾದತೀರ್ಥಾತ್=ಸರ್ವರಿಂದಲೂ ಪೂಜಿತವಾದ ಪಾದೋದಕವುಳ್ಳ ಶ್ರೀಕೃಷ್ಣನಿಂದ, ಅಧೀತ=ತಿಳಿಯಲ್ಪಟ್ಟ ತತ್ವ=ಅವ್ಯಕ್ತಾದಿ ತತ್ವಗಳು, ಆತ್ಮಾ= ಪರಮಾತ್ಮನು ಮತ್ತು ಜೀವ ಇವರುಗಳ, ವಿಬೋಧಮಾರ್ಗಃ=ಸಮೀಚೀನ ಜ್ಞಾನ ಮಾರ್ಗವುಳ್ಳ, ಅಹಂ=ನಾನು, ವಿರಹಾತುರಾತ್ಮಾ=ವಿಯೋಗದಿಂದ ದುಃಖಿತವಾದ ಮನಸ್ಸುಳ್ಳವನಾಗಿ, ದೇವಂ=ಶ್ರೀಕೃಷ್ಣನನ್ನು, ಪರಿವೃತ್ಯ=ಪ್ರದಕ್ಷಿಣೆ ಮಾಡಿ, ಪಾದೌ ಪ್ರಣಮ್ಯ=ಪಾದಗಳಿಗೆ ನಮಸ್ಕರಿಸಿ, ಇಹ ಆಗತಃ=ಇಲ್ಲಿಗೆ ಬಂದಿರುವೆನು. ॥೨೦॥

**ಸೋಽಹಂ ತ್ವದ್ದರ್ಶನಾಹ್ಲಾದವಿಯೋಗಾರ್ತಿಯುತಃ ಪ್ರಭೋ ।**
**ಗಮಿಷ್ಯೇ ದಯಿತಂ ತಸ್ಯ ಬದರ್ಯಾಶ್ರಮಮಂಡಲಂ ॥೨೧॥**

ಸಃ ಅಹಂ=ಅಂಥಹ ನಾನು,ತ್ವದ್ದರ್ಶನಾಹ್ಲಾದ=ನಿಮ್ಮದರ್ಶನದಿಂದ ಸಂತೋಷ ಮತ್ತು,ವಿಯೋಗಾರ್ತಿಯುತಃ=ಶ್ರೀಕೃಷ್ಣನವಿರಹದಿಂದಾದ ದುಃಖದಿಂದ ಕೂಡಿದ - ವನಾಗಿ, ತಸ್ಯ=ಶ್ರೀಕೃಷ್ಣನಿಗೆ,ದಯಿತಂ=ಪ್ರಿಯವಾದ ಬದರ್ಯಾಶ್ರಮಮಂಡಲಂ= ಬದರಿಕಾಶ್ರಮಪ್ರಾಂತದಲ್ಲಿರುವ ಕಲಾಪಗ್ರಾಮಕ್ಕೆ,ಗಮಿಷ್ಯೇ=ಹೋಗುವೆನು ॥೨೧॥

**ಯತ್ರ ನಾರಾಯಣೋ ದೇವೋ ನರಶ್ಚ ಭಗವಾನ್ ಋಷಿಃ ।**
**ಮೃದು ತೀವ್ರಂ ತಪೋ ದೀರ್ಘಂ ತೇಪಾತೇ ಲೋಕಭಾವನೌ ॥೨೨॥**

ಯತ್ರ=ಯಾವ ಬದರಿಯಲ್ಲಿ, ನಾರಾಯಣಃ ದೇವಃ=ಶ್ರೀಮನ್ನಾರಾಯಣ ದೇವರು,ಚ=ಮತ್ತು ನರಃ ಋಷಿಃ=ಶೇಷಾಂಶರಾದ ಋಷಿಯು, ಲೋಕಭಾವನೌ= ಲೋಕಶಿಕ್ಷಣ ಮಾಡುವವರಾಗಿ, ಮೃದು=ಪರರಿಗೆ, ಉಪದ್ರವವಾಗದಂತೆ,ತೀವ್ರಂ= ಕಠಿಣವಾದ ದೀರ್ಘಂ=ಕಲ್ಪಸಮಾಪ್ತಿವರೆಗೆ ತಪಃ ತೇಪಾತೇ=ತಪಸ್ಸು ಮಾಡುವವರು.

**ಶುಕ ಉವಾಚ**

**ಇತ್ಯುದ್ಧವಾದುಪಾಕರ್ಣ್ಯ ಸುಹೃದಾಂ ದುಃಸಹಂ ವಧಂ ।**
**ಜ್ಞಾನೇನಾಶಮಯತ್ ಕ್ಷತ್ತಾ ಶೋಕಮುತ್ಪತಿತಂ ಬುಧಃ ॥೨೩॥**

ಇತಿ=ಈ ರೀತಿಯಾಗಿ, ಉದ್ಧವಾತ್=ಉದ್ಧವನಿಂದ, ದುಃಸಹಂ=ತಡೆಯಲಾಗದ, ಸುಹೃದಾಂ=ಯಾದವರ, ವಧಂ=ಮುಂದೆ ಆಗುವ ಸಂಹಾರವನ್ನು, ಉಪಾಕರ್ಣ್ಯ= ಕೇಳಿ, ಉತ್ಪತಿತಂ ಶೋಕಂ=ಬಂದೊದಗಿದ ದುಃಖವನ್ನು, ಬುಧಃ= ಜ್ಞಾನಿಯಾದ, ಕ್ಷತ್ತಾ=ವಿದುರನು, ಜ್ಞಾನೇನ ಜೀವ-ಪರಮಾತ್ಮರ ಪಾರತಂತ್ರ್ಯ-ಸ್ವಾತಂತ್ರ್ಯ ಜ್ಞಾನದಿಂದ, ಅಶಮಯತ್=ಕಳೆದುಕೊಂಡನು.(ಶಮನ ಮಾಡಿದನು)

**ಸ ತಂ ಮಹಾಭಾಗವತಂ ವ್ರಜಂತಂ ಕೌರವರ್ಷಭಃ ।**
**ವಿಶ್ರಂಭಾದಭ್ಯಧತ್ತೇದಂ ಮುಖ್ಯಂ ಕೃಷ್ಣಪರಿಗ್ರಹೇ ॥೨೪॥**

ಸಃ=ವಿದುರನು, ಮಹಾಭಾಗವತಂ=ಮಹಾಭಗವದ್ಭಕ್ತನಾದ, ವ್ರಜಂತಂ= ಹೊರಡುತ್ತಿರುವ, ಕೃಷ್ಣಪರಿಗ್ರಹೇ ಮುಖ್ಯಂ=ಶ್ರೀಕೃಷ್ಣನ ಪರಿಚಾರಕರಲ್ಲಿ ಪ್ರಧಾನ-ನಾದ ಉದ್ಧವನನ್ನು ಕುರಿತು, ವಿಶ್ರಂಭಾತ್=ನನಗಿಷ್ಟವಾದುದನ್ನು ಇವನು ಹೇಳುವನು ಎಂಬ ವಿಶ್ವಾಸದಿಂದ, ಇದಂ=ಮುಂದೆ ಹೇಳುವುದನ್ನು ಅಭ್ಯಧತ್ತ= ಹೇಳಿದನು. ॥೨೪॥

**ಜ್ಞಾನಂ ಪರಂ ಸ್ವಾತ್ಮರಹಃಪ್ರಕಾಶಂ**
**ಯದಾಹ ಯೋಗೇಶ್ವರ ಈಶ್ವರಸ್ತೇ ।**
**ವಕ್ತುಂ ಭವಾನ್ ನೋಽರ್ಹತಿ ಯದ್ಧಿ ವಿಷ್ಣೋ-**
**ರ್ಭೃತ್ಯಾಃ ಸ್ವಭೃತ್ಯಾರ್ಥಕೃತಶ್ಚರಂತಿ ॥೨೫॥**

ಯತ್=ಯಾವ ಕಾರಣ, ವಿಷ್ಣೋಃ ಭೃತ್ಯಾಃ=ಶ್ರೀಹರಿಯ ದಾಸರು, ಸ್ವಭೃತ್ಯಾರ್ಥಕೃತಃ=ತಮ್ಮ ದಾಸರ ಪ್ರಯೋಜನವನ್ನು ಸಾಧಿಸಲೆಂದೇ, ಚರಂತಿ= ಸಂಚರಿಸುವರು, ಹಿ=ಪ್ರಸಿದ್ಧವು, ತತ್=ಆದ್ದರಿಂದ, ಯೋಗೇಶ್ವರಃ=ಸರ್ವ ಉಪಾಯ ನಿಯಾಮಕನಾದ, ಈಶ್ವರಃ=ಶ್ರೀಕೃಷ್ಣನು, ತೇ=ನಿನಗೆ, ಸ್ವಾತ್ಮರಹಃ-ಪ್ರಕಾಶಂ=ತನ್ನ ಮಾಹಾತ್ಮ್ಯವನ್ನು ತಿಳಿಸುವ, ಯತ್ ಪರಂ ಜ್ಞಾನಂ ಆಹ= ಮುಖ್ಯಜ್ಞಾನ ಸಾಧನವನ್ನು ಹೇಳಿದನೋ, ತತ್=ಅದನ್ನು ಭವಾನ್=ತಾವು, ನಃ ವಕ್ತುಂ ಅರ್ಹತಿ=ನನಗೆ ಹೇಳಲು ಯೋಗ್ಯರಾಗಿದ್ದೀರಿ. ॥೨೫॥

**ಉದ್ಧವ ಉವಾಚ**

**ನನು ತೇ ತತ್ವಸಂರಾದ್ಧ ಋಷಿಃ ಕೌಷಾರವೋಽಂತಿ ಮೇ ।**
**ಸಾಕ್ಷಾದ್ಭಗವತಾಽಽದಿಷ್ಟೋ ಮರ್ತ್ಯಲೋಕಂ ಜಿಹಾಸತಾ ॥೨೬॥**

ಮರ್ತ್ಯಲೋಕಂ ಜಿಹಾಸತಾ=ಭೂಲೋಕವನ್ನು ಬಿಡಲು ಇಚ್ಛಿಸುವ, ಭಗವತಾ= ಶ್ರೀಕೃಷ್ಣನಿಂದ, ಸಾಕ್ಷಾತ್=ತನ್ನ ಮುಖದಿಂದಲೇ, ಮೇ=ನನ್ನ, ಅಂತಿ=ಸಮೀಪದಲ್ಲಿ ತತ್ವಸಂರಾದ್ಧಃ= ತತ್ವಜ್ಞಾನ ಪಡೆದ, ಋಷಿಃ ಕೌಷಾರವಃ=ಮೈತ್ರೇಯಋಷಿಗಳು, ತೇ ಆದಿಷ್ಟಃ=ನಿನಗೆ ತತ್ವೋಪದೇಶ ಮಾಡಲು ಆಜ್ಞಾಪಿಸಲ್ಪಟ್ಟಿರುವರು. ಆದ್ದರಿಂದ ನಾನು ಪ್ರತ್ಯೇಕ ಹೇಳಬೇಕಾದ್ದೇನಿಲ್ಲ ॥೨೬॥

**ಸೂತ ಉವಾಚ**

**ಇತಿ ಸಹ ವಿದುರೇಣ ವಿಶ್ವಮೂರ್ತೇ-**
**ರ್ಗುಣಕಥಯಾ ಸುಧಯಾ ಪ್ಲುತೋರುತಾಪಃ ।**
**ಕ್ಷಣಮಿವ ಪುಲಿನೇ ಯಮಸ್ವಸುಸ್ತಾಂ**
**ಸಮುಷಿತ ಔಪಗವಿರ್ನಿಶಾಂ ತತೋಽಗಾತ್ ॥೨೭॥**

ಔಪಗವಿಃ=ಉದ್ಧವನು, ಇತಿ=ಈ ರೀತಿಯಾಗಿ, ವಿದುರೇಣ ಸಹ=ವಿದುರನ ಜೊತೆಗೆ ವಿಶ್ವಮೂರ್ತೇಃ=ಶ್ರೀಕೃಷ್ಣನ, ಗುಣಕಥಯಾ ಸುಧಯಾ=ಗುಣಗಾನವೆಂಬ ಅಮೃತದಿಂದ, ಪ್ಲುತೋರುತಾಪಃ=ಹೋಗಲ್ಪಟ್ಟ ಸಂತಾಪವುಳ್ಳವನಾಗಿ, ಯಮಸ್ವಸುಃ= ಯಮನ ತಂಗಿಯಾದ ಯಮುನೆಯ, ಪುಲಿನೇ=ಉಸುಕಿನಲ್ಲಿ, ತಾಂ ನಿಶಾಂ= ಯಾವ ಸಂಜೆ ವಿದುರದರ್ಶನವಾಯಿತೋ ಆ ರಾತ್ರಿಯನ್ನು, ಕ್ಷಣಮಿವ=ಒಂದು ಕ್ಷಣದಂತೆ, ಸಮುಷಿತಃ=ಸುಖವಾಗಿ ವಾಸಮಾಡಿದವನಾಗಿ, ತತಃ=ಯಮುನಾ ಪ್ರದೇಶದಿಂದ ಅಗಾತ್=ಹೊರಟನು. ॥೨೭॥

**ರಾಜೋವಾಚ**

**ನಿಧನಮುಪಗತೇಷು ವೃಷ್ಣಿಭೋಜೇ-**
**ಷ್ವಧಿರಥಯೂಥಪಯೂಥಪೇಷು ಮುಖ್ಯಃ ।**
**ಸ ತು ಕಥಮವಶಿಷ್ಟ ಉದ್ಧವೋ ಯತ್-**
**ಹರಿರಪಿ ತತ್ಯಜ ಆಕೃತಿಂ ತ್ರ್ಯಧೀಶಃ ॥೨೮॥**

ವೃಷ್ಣಿಭೋಜೇಷು=ಯಾದವರೆಲ್ಲರು, ನಿಧನಂ=ಸಾವನ್ನು ಉಪಗತೇಷು= ಹೊಂದಿರುವಾಗ, ಅಧಿರಥಯೂಥಪಯೂಥಪೇಷು ಮುಖ್ಯಃ=ರಥಿಕರ ಸಮೂಹ-ವನ್ನು ರಕ್ಷಿಸುವ ಸೇನಾಪತಿಗಳ ಸಮೂಹವನ್ನೇ ರಕ್ಷಿಸುವಲ್ಲಿ ಪ್ರಧಾನನಾದ, (ಇದರಿಂದ ಯುದ್ಧಮಾಡದಿರುವುದರಿಂದ ಉಳಿದನೆಂದು ಹೇಳಲಾಗದು ಎಂದು ಸೂಚಿತ) ಸಃ ಉದ್ಧವಃ ಕಥಂ ಅವಶಿಷ್ಟಃ=ಆ ಉದ್ಧವನು ಹೇಗೆ ಉಳಿದ. ಮಹಾಸಮರ್ಥನಾದ್ದರಿಂದ ಎಂದೂ ಹೇಳಲಾಗದು ಯತ್=ಯಾವ ಕಾರಣ ತ್ರ್ಯಧೀಶಃ=ಮೂರು ಲೋಕಗಳಿಗೂ ಮುಖ್ಯನಿಯಾಮಕನಾದ ಹರಿಃ ಅಪಿ= ಶ್ರೀಕೃಷ್ಣನೂ ಸಹ ಆಕೃತಿಂ=ಪೃಥಿವೀಲೋಕವನ್ನು ತತ್ಯಜೇ=ಬಿಟ್ಟನು.

ಸರ್ವದೇವೋತ್ತಮನಾದ ಶ್ರೀಹರಿಯೇ ವಿಪ್ರಶಾಪವನ್ನು ಮೀರದಿರುವಾಗ, ಮನುಷ್ಯ ವಿಶೇಷನಾದ ಉದ್ಧವನ ಸಾಮರ್ಥ್ಯ ವಿಪ್ರಶಾಪವನ್ನು ತಿರಸ್ಕರಿಸು-ವಂಥದ್ದಲ್ಲವೆಂದು ಬೇರೆ ಹೇಳಬೇಕಿಲ್ಲ ಎಂದು ಭಾವ.

ಈ ಶ್ಲೋಕದಲ್ಲಿ 'ಆಕೃತಿಂ ತತ್ಯಜೇ' ಎಂಬುದರಿಂದ ಶ್ರೀಹರಿಗೆ ದೇಹತ್ಯಾಗ ಹೇಳಿದಂತೆ ತೋರುವುದು. ಕಾರಣ ವಿವಕ್ಷಿತವಾದ ಆಕೃತಿ ಶಬ್ದಾರ್ಥವನ್ನು ಹೇಳುವರು-

**ಆಕೃತಿಂ ಪೃಥಿವೀಂ। ''ಶರೀರಂ ಆಕೃತಿರ್ದೇಹಃ ಕುಃ ಪೃಥ್ವೀ ಚ ಮಹೀ ತಥಾ''। ಇತ್ಯಭಿಧಾನಂ । ''ಪೃಥಿವೀಲೋಕಸಂತ್ಯಾಗೋ ದೇಹತ್ಯಾಗೋ ಹರೇಃ ಸ್ಮೃತಃ । ನಿತ್ಯಾನಂದಸ್ವರೂಪತ್ವಾತ್ ಅನ್ಯನ್ನೈವೋಪಲಭ್ಯತೇ ॥ ದರ್ಶಯೇಜ್ಜನಮೋಹಾಯ ಸದೃಶೀಂ ಮೃತಕಾಕೃತಿಂ। ನಟವದ್ ಭಗವಾನ್ ವಿಷ್ಣುಃ ಪರಜ್ಞಾನಾಕೃತಿಃ ಸ್ವಯಂ'' ॥ ಇತಿಸ್ಕಾಂದೇ। ''ರಾಜನ್ ಪರಸ್ಯ ತನುಭೃಜ್ಜನನಾಪ್ಯಯೇಹಾ ಮಾಯಾ ವಿಡಂಬನ-ಮವೈಹಿ ಯಥಾ ನಟಸ್ಯ''। ಇತಿ ಚ।**

ಶರೀರ, ಆಕೃತಿ, ದೇಹ, ಕು, ಪೃಥ್ವಿ, ಮಹೀ, ಮುಂತಾಗಿ ಭೂಮಿಯ ನಾಮಗಳೆಂದು ಹೇಳುವ ಅಭಿಧಾನವೆಂಬ ಕೋಶವಿರುವುದರಿಂದ ಆಕೃತಿಯೆಂದರೆ ಪೃಥಿವೀ ಎಂದು ಅರ್ಥಮಾಡಬಹುದು. ಆಕೃತಿಶಬ್ದಕ್ಕೆ ಪೃಥಿವೀ ಎಂದರ್ಥವಿರಲಿ, ಆದರೆ ಇಲ್ಲಿ ದೇಹತ್ಯಾಗ ಎಂದೇ ಏಕೆ ಅರ್ಥ ಮಾಡಬಾರದು? ಪೃಥಿವೀ ಎಂದೆ ಏಕೆ ಮಾಡಬೇಕು? ಎಂದರೆ, 'ಶ್ರೀಹರಿಯು ನಿತ್ಯಾನಂದ ಸ್ವರೂಪನಾದ್ದರಿಂದ ಅವನ ದೇಹತ್ಯಾಗವೆಂದರೆ ಪೃಥಿವೀ ತ್ಯಾಗವೇ ಹೊರತು ಬೇರೆ ಹೇಳಲಾಗದು' ಎಂದು ಸ್ಮೃತಿಗಳಲ್ಲಿ ಹೇಳಿದೆ. ಯೋಗಿಗಳು ಹೀಗೆಯೇ ಕಂಡಿದ್ದಾರೆ. ಆದ್ದರಿಂದ ಶರೀರತ್ಯಾಗ ಎಂದು ಅರ್ಥ ಮಾಡುವುದು ಯೋಗಿಪ್ರತ್ಯಕ್ಷಾನುಗ್ರಹೀತ ಅನುಮಾನ ವಿರುದ್ಧವೆಂದು ಭಾವ. ಇನ್ನು ಆಗಿನ ಅಲ್ಲಿನ ಜನರು ಶವವನ್ನು ಕಂಡಿದ್ದಾರೆ ಎಂದರೆ ಅದು ಭ್ರಮೆ ಎಂದು ಹೇಳುವರು. 'ಶ್ರೇಷ್ಠವಾದ ಜ್ಞಾನಾತ್ಮಕ ದೇಹವುಳ್ಳ ವಿಷ್ಣುವು ತಾನೇ ನಟನಂತೆ ಜನರನ್ನು ಮೋಹಗೊಳಿಸಲು ತನ್ನದೇಹದಂತೆ ಕಾಣುವ ಮೃತಶರೀರವನ್ನು ಸೃಷ್ಟಿಸಿ ತೋರಿಸುವನು' ಎಂದು ಸ್ಕಂದ ಪುರಾಣದಲ್ಲಿದೆ. ಇಲ್ಲಿಯೇ ೧೧ನೇ ಸ್ಕಂಧದಲ್ಲಿ 'ರಾಜನೇ ಶ್ರೀಹರಿಯೇ ಜೀವರಂತೆ ಶರೀರ ತೆಗೆದುಕೊಂಡಂತೆ, ಬಿಟ್ಟಂತೆ, ಹುಟ್ಟಿದಂತೆ, ಸತ್ತಂತೆ ತನ್ನ ಇಚ್ಛೆಯಿಂದ ತೋರಿಸುವನು ಇದನ್ನು ಲೋಕಾನುಕರಣವೆಂದು ತಿಳಿ'. ದೇಹತ್ಯಾಗ ಪ್ರಸಕ್ತಿ ಇಲ್ಲವೆಂದು ಹೇಳುವುದಕ್ಕಾಗಿಯೇ ಹೇಳಿದ ಮಾತು ನಿರವಕಾಶವಾದುದು. ಇದೇ ಸ್ಕಂಧದಲ್ಲಿರುವ 'ಪ್ರದರ್ಶ್ಯಾತಪ್ತತಪಸಾಮವಿತೃಪ್ತದೃಶಾನ್ನೃಣಾಂ। ಆದಾಯಾಂತರ-ಧಾದ್ದೇವಃ ಸ್ವಬಿಂಬಂ ಲೋಕಲೋಚನಂ' ॥ ಎಂಬ ವಾಕ್ಯವನ್ನೂ ಬಾಧಕವನ್ನಾಗಿ ಹೇಳಬಹುದು ॥೨೮॥

**ಶುಕ ಉವಾಚ**

**ಬ್ರಹ್ಮಶಾಪಾಪದೇಶೇನ ಕಾಲೇನಾಮೋಘವಾಂಛಿತಃ ।**
**ಸಂಹೃತ್ಯ ಸ್ವಕುಲಂ ನೂನಂ ತ್ಯಕ್ಷನ್ ದೇಹಮಚಿಂತಯತ್ ॥೨೯॥**

ಅಮೋಘವಾಂಛಿತಃ=ಸತ್ಯಸಂಕಲ್ಪನಾದ ಶ್ರೀಕೃಷ್ಣನು, ಬ್ರಹ್ಮಶಾಪಾಪದೇಶೇನ=ಬ್ರಾಹ್ಮಣರ ಶಾಪವೆಂಬ ಹೆಸರಿನ, ಕಾಲೇನ=ಮೃತ್ಯುವಿನಿಂದ, ಸ್ವಕುಲಂ=ಯಾದವ ಕುಲವನ್ನು, ಸಂಹೃತ್ಯ=ಸಂಹರಿಸಲು ನಿಶ್ಚಯಿಸಿ, ದೇಹಂ ತ್ಯಕ್ಷನ್=ಪೃಥಿವಿಯನ್ನು ಬಿಡುವಾಗ, ಅಚಿಂತಯತ್=ವಿಚಾರ ಮಾಡಿದನು. ಇದರಿಂದ ಭಗವಂತನ ಇಚ್ಛೆಯಿಂದಲೇ ಉದ್ಧವ ಉಳಿದನೆಂದು ಉತ್ತರ ತಿಳಿಯಬೇಕು. ಇಲ್ಲಿ ಯದುಕುಲ ಸಂಹಾರವಾದ ಮೇಲೆ ಉದ್ಧವ ಉಪದೇಶ ಬದರೀವಾಸ ಹೇಳಲ್ಪಟ್ಟಿವೆ. ೧೧ನೇ ಸ್ಕಂಧದಲ್ಲಿ "ತತೋ ಮಹಾಭಾಗವತೇ ಉದ್ಧವೇ ನಿರ್ಗತೇ ವನಂ । ದ್ವಾರವತ್ಯಾಂ ಕಿಮಕರೋದ್ಭಗವಾನ್ ಭೂತಭಾವನಃ" ಎಂದು ಯದುಕುಲ ಸಂಹಾರದ ಮೊದಲು ಉಪದೇಶ, ಬದರೀಗಮನಗಳು ಹೇಳಲ್ಪಡುವವು. ಕಾರಣ ವಿರೋಧ ಬರುವುದು ಆದ್ದರಿಂದ ಇಲ್ಲಿ ಸಂಹೃತ್ಯ ಎಂಬುದಕ್ಕೆ ಸಂಹರಿಸಲು ನಿಶ್ಚಯಿಸಿ ಎಂದು ಅರ್ಥ ಮಾಡಿದೆ ಕಾರಣ ವಿರೋಧವಿಲ್ಲ ॥೨೯॥

ಭಗವಂತನ ಅಭೀಷ್ಟವೇನೆಂದು ಹೇಳುವರು –

**ಅಸ್ಮಾಲ್ಲೋಕಾದುಪರತೇ ಮಯಿ ಜ್ಞಾನಂ ಮದಾಶ್ರಯಂ ।**
**ಅರ್ಹತ್ಯುದ್ಧವ ಏವಾದ್ಧಾ ಸಂಪ್ರತ್ಯಾತ್ಮವತಾಂ ಪರಃ ॥೩೦॥**

ಮಯಿ=ನಾನು,ಅಸ್ಮಾತ್ ಲೋಕಾತ್=ಪೃಥಿವೀಲೋಕದಿಂದ, ಉಪರತೇ=ಸ್ವತಃ ತೆರಳುತ್ತಿರಲು, ಮದಾಶ್ರಯಂ ಜ್ಞಾನಂ=ನಾನೇ ಆಶ್ರಯವಾಗಿವುಳ್ಳ, (ನನ್ನಲ್ಲಿರುವ) ಜ್ಞಾನಂ=ಜ್ಞಾನವನ್ನು, ಸಂಪ್ರತಿ=ಈಗ, ಆತ್ಮವತಾಂ=ಬ್ರಹ್ಮಜ್ಞಾನಿಗಳಲ್ಲಿ ಪರಃ=ಶ್ರೇಷ್ಠನಾದ, ಉದ್ಧವಃ=ಉದ್ಧವನು, ಅದ್ಧಾ=ಚನ್ನಾಗಿ, ಅರ್ಹತಿ=ಉಪದೇಶ ಮಾಡಲು ಯೋಗ್ಯನು. ॥೩೦॥

**ನೋದ್ಧವೋಽಣ್ವಪಿ ಮನ್ನ್ಯೂನೋ ಯದ್ಗುಣೈರ್ನಿರ್ಜಿತಪ್ರಭುಃ ।**
**ಅತೋ ಮದ್ವಯ್ ಪುನರ್ಲೋಕಂ ಗ್ರಾಹಯನ್ನಿವ ತಿಷ್ಠತು ॥೩೧॥**

ಯದ್ಗುಣೈಃ=ಯಾವನ ಭಕ್ತ್ಯಾದಿಗುಣಗಳಿಂದ, ಪ್ರಭುಃ=ಸ್ವಾಮಿಯಾದ ನಾನು, ನಿರ್ಜಿತಃ=ವಶವಾಗಿರುವೆನೋ ಅಂಥ, ಉದ್ಧವಃ=ಉದ್ಧವನು, ಅಣ್ವಪಿ=ಸ್ವಲ್ಪವೂ, ಮನ್ನ್ಯೂನೋ ನ=ನನಗಿಂತ ಕಡಿಮೆ ಏನಲ್ಲ, ಅತಃ=ಆದ್ದರಿಂದ, ಮದ್ವತ್=ನನ್ನಂತೆ,

ಲೋಕಂ=ಸಜ್ಜನರನ್ನು, ಪುನಃ=ಮತ್ತೆ, ಗ್ರಾಹಯನ್=ಉಪದೇಶಮಾಡುತ್ತ, ಇಹ= ಭೂಲೋಕದಲ್ಲಿ, ತಿಷ್ಠತು=ಇರಲಿ ಎಂದು ಇಚ್ಛಿಸಿದನು. ಕಾರಣ ಉಳಿದನು.

ಇಲ್ಲಿ 'ಉದ್ಧವನು ನನಗಿಂತ ಕಡಿಮೆಯಲ್ಲ' ಎಂದರೆ ಶ್ರೀಕೃಷ್ಣ ಸಮ ಎಂದರ್ಥವಾಗುವುದು ಕಾರಣ ಅಭಿಪ್ರಾಯವನ್ನು ಪ್ರಮಾಣದಿಂದಲೇ ಹೇಳುವರು-

**ಉತ್ತಮೈರಧಿಕತ್ವಂ ವಾ ಸಾಮ್ಯಂ ವಾ ವಿಜಯೋऽಪಿ ವಾ ।**
**ಉಚ್ಯತೇऽಪಿ ತು ನೀಚಾನಾಂ ಮೋಹಾರ್ಥಂ ವಾಪ್ಯುಪೇಕ್ಷಯಾ ।**
**ಮೂಢದೃಷ್ಟ್ಯನುಸಾರಾದ್ವಾ ಕಿಂಚಿತ್ ಸಾಮ್ಯೇನ ವಾ ಕ್ವಚಿತ್" ॥**

**ಇತಿ ಬ್ರಹ್ಮತರ್ಕೇ ।**

ಅಧಮರಿಗೆ ಉತ್ತಮರಗಿಂತ ಆಧಿಕ್ಯವನ್ನೋ, ಸಾಮ್ಯವನ್ನೋ, ವಿಜಯ- ವನ್ನೋ ಹೇಳುವುದು ಅಜ್ಞಜನರಿಗೆ ಮೋಹಮಾಡಲು ಅಥವಾ ಅವರಲ್ಲಿರುವ ನೀಚತೆಯನ್ನು ಪರಿಗಣಿಸದೇ ಆಗಲಿ, ಮೂಢರಿಗೆ ಉದ್ಧವನಲ್ಲಿ ಕಾಣುವ ಕೃಷ್ಣಸಾಮ್ಯವನ್ನು ಅನುವಾದರೂಪದಿಂದಾಗಲೀ, ಕೆಲವುಸ್ಥಳದಲ್ಲಿ ಸ್ವಲ್ಪ ಸಾಮ್ಯ- ವಿರುವುದರಿಂದಲೂ ಹೇಳುವುದುಂಟು. ಎಂದು ಬ್ರಹ್ಮತರ್ಕದಲ್ಲಿದೆ ॥೩೧॥

**ಏವಂ ತ್ರಿಲೋಕಗುರುಣಾ ಸಂದಿಷ್ಟಃ ಶಬ್ದಯೋನಿನಾ ।**
**ಬದರ್ಯಾಶ್ರಮಮಾಸಾದ್ಯ ಹರಿಮೀಜೇ ಸಮಾಧಿನಾ ॥೩೨॥**

ಏವಂ=ಈರೀತಿಯಾಗಿ,ತ್ರಿಲೋಕಗುರುಣಾ=ಮೂರು ಲೋಕಕ್ಕೂ ಗುರುವಾದ, ಶಬ್ದಯೋನಿನಾ=ಸಕಲಶಾಸ್ತ್ರಪ್ರತಿಪಾದ್ಯನಾದ ಶ್ರೀಕೃಷ್ಣನಿಂದ, ಸಂದಿಷ್ಟಃ=ಆಜ್ಞಪ್ತನಾಗಿ, ಬದರ್ಯ್ಯಾಶ್ರಮಂ ಅಸಾದ್ಯ=ಬದರಿಕಾಶ್ರಮಕ್ಕೆ ಬಂದು, ಸಮಾಧಿನಾ=ದೃಢವಾದ ಧ್ಯಾನದಿಂದ, ಹರಿಂ ಈಜೇ= ಶ್ರೀಹರಿಯನ್ನು ಪೂಜಿಸಿದನು. ॥೩೨॥

**ವಿದುರೋಪ್ಯುದ್ಧವಾತ್ ಶ್ರುತ್ವಾ ಕೃಷ್ಣಸ್ಯ ಪರಮಾತ್ಮನಃ ।**
**ಕ್ರೀಡಯೋಪಾತ್ತದೇಹಸ್ಯ ಕರ್ಮಾಣಿ ಶ್ಲಾಘಿತಾನಿ ಚ ॥೩೩॥**

ವಿದುರಃ ಅಪಿ=ವಿದುರನಾದರೂ, ಉದ್ಧವಾತ್=ಉದ್ಧವನಿಂದ, ಶ್ಲಾಘಿತಾನಿ= ವರ್ಣಿಸಲ್ಪಟ್ಟ ಕ್ರೀಡಯಾ ಉಪಾತ್ತದೇಹಸ್ಯ=ಲೀಲೆಯಿಂದ ಪ್ರಕಟಿಸಿದ ದೇಹವುಳ್ಳ, ಪರಮಾತ್ಮನಃ ಕೃಷ್ಣಸ್ಯ=ಶ್ರೀಕೃಷ್ಣಪರಮಾತ್ಮನ, ಕರ್ಮಾಣಿ=ಕಾರ್ಯಗಳನ್ನು ಶ್ರುತ್ವಾ= ಕೇಳಿ ॥೩೩॥

**ದೇಹನ್ಯಾಸಂ ಚ ತಸ್ಯೈವಂ ಧೀರಾಣಾಂ ಧೈರ್ಯವರ್ಧನಂ ।**
**ಅನ್ಯೇಷಾಂ ದುಷ್ಕರತರಂ ಪಶೂನಾಂ ವಿಕ್ಲವಾತ್ಮನಾಂ ॥೩೪॥**

ವಿಕ್ಲವಾತ್ಮನಾಂ=ಅಧೀರವಾದ ಮನಸ್ಸುಳ್ಳ, ಪಶೂನಾಂ=ಪಶುವಿನಂತಿರುವ ಅನ್ಯೇಷಾಂ=ಅಜ್ಞಾನಿಗಳಿಗೆ, ದುಷ್ಕರತರಂ=ಅಂತ್ಯಂತ ದುಃಖದಾಯಕವಾದ, ಧೀರಾಣಾಂ=ಜ್ಞಾನಿಗಳಿಗೆ, ಧೈರ್ಯವರ್ಧನಂ=ವೈರಾಗ್ಯಾದಿಗುಣಸಂಪಾದಕವಾದ, ತಸ್ಯ=ಶ್ರೀಕೃಷ್ಣನ, ದೇಹನ್ಯಾಸಂ=ಪೃಥಿವೀ ಲೋಕ ಪರಿತ್ಯಾಗವನ್ನು ಕೇಳಿ ||೩೪||

**ಆತ್ಮಾನಂ ಚ ಕುರುಶ್ರೇಷ್ಠ ಕೃಷ್ಣೇನ ಮನಸೇಕ್ಷಿತಂ |**
**ಧ್ಯಾಯನ್ ಗತೇ ಭಾಗವತೇ ರುರೋದ ಪ್ರೇಮವಿಹ್ವಲಃ ||೩೫||**

ಹೇ ಕುರಶ್ರೇಷ್ಠ=ಪರೀಕ್ಷಿತನೇ, ಆತ್ಮಾನಂ=ತನ್ನನ್ನು, ಕೃಷ್ಣೇನ=ಶ್ರೀಕೃಷ್ಣನು,(ನಿಂದ) ಮನಸೇಕ್ಷಿತಂ=ಸ್ಮರಿಸಿದ್ದನ್ನು, ಶ್ರುತ್ವಾ=ಕೇಳಿ, ಧ್ಯಾಯನ್=ಮನಸ್ಸಿನಲ್ಲಿ ಧ್ಯಾನಿಸುತ್ತ, ಭಾಗವತೇ=ಉದ್ಧವನು, ಗತೇ ಸತಿ=ಹೋಗುತ್ತಿರಲು, ಪ್ರೇಮವಿಹ್ವಲಃ=ಸ್ನೇಹದಿಂದ ಕಾತರನಾಗಿ, ರುರೋದ=ಅತ್ತನು. ||೩೫||

**ಕಾಲಿಂದ್ಯಾಃ ಕತಿಭಿರ್ವಿದ್ವಾನಹೋಭಿರ್ಭರತರ್ಷಭ |**
**ಪ್ರಾಪದ್ಯತ ದ್ಯುಸರಿತಂ ಯತ್ರ ಮಿತ್ರಾಸುತೋ ಮುನಿಃ ||೩೬||**

*|| ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಚತುರ್ಥೋಽಧ್ಯಾಯಃ ||*

ಹೇ ಭರತವರ್ಷಭ=ಪರೀಕ್ಷಿತನೇ, ಕಾಲಿಂದ್ಯಾಃ=ಯಮುನೆಯಿಂದ ಹೊರಟು, ಕತಿಭಿಃ ಅಹೋಭಿಃ=ಕೆಲವು ದಿನಗಳಾದಮೇಲೆ, ಯತ್ರ=ಯಾವ ಸ್ಥಳದಲ್ಲಿ, ವಿದ್ವಾನ್=ಜ್ಞಾನಿಯಾದ, ಮಿತ್ರಾಸುತಃ ಮುನಿಃ=ಮೈತ್ರೇಯ ಋಷಿಗಳಿದ್ದರೋ ಅಂಥ ದ್ಯುಸರಿತಂ=ಭಾಗೀರಥೀ ತೀರವನ್ನು, ಪ್ರಾಪದ್ಯತ=ತಲುಪಿದನು. ||೩೬||

*ಇಲ್ಲಿಗೆ ನಾಲ್ಕನೆಯ ಅಧ್ಯಾಯವು ಮುಗಿಯಿತು.*

# ನಾಲ್ಕನೆಯ ಅಧ್ಯಾಯದ ತಾತ್ಪರ್ಯ

ಬ್ರಾಹ್ಮಣರಿಂದ ಅಪ್ಪಣೆ ಪಡೆದ ಅವರು ಭೋಜನಮಾಡಿ ಮದ್ಯಪಾನಮಾಡುವರು. ಇದರಿಂದ ವಿವೇಕಶೂನ್ಯರಾಗಿ ಕೆಟ್ಟ ಮಾತುಗಳನ್ನಾಡಿಕೊಳ್ಳುತ್ತಾ ಪರಸ್ಪರ ಹೊಡೆದಾಡುವರು. ಸಾಯಂಕಾಲದ ವೇಳೆಯಲ್ಲಿ ಮದ್ಯಪಾನದಿಂದ ಅವರ ಮನಸ್ಸೇ ಕದಡಿಹೋಗುವುದು. ಬಿದಿರು ಒಂದಕ್ಕೊಂದು ಉಜ್ಜಿಕೊಂಡು ಹುಟ್ಟಿದ ಬೆಂಕಿಯಿಂದ ಎರಡು ಬಿದಿರುಗಳೂ ಸುಟ್ಟುಹೋಗುವಂತೆ ಮತ್ತರಾದ ಯಾದವರು ಪರಸ್ಪರ ಕಲಹದಲ್ಲಿ ವಿನಾಶ ಹೊಂದುವರು.

ಶ್ರೀಕೃಷ್ಣನು ತಾನು ಸ್ವರ್ಗಲೋಕಕ್ಕೆ ಹೋಗುವ ಮುನ್ನ ಇಪ್ಪತ್ತಾರು ವರ್ಷಗಳಿಗೆ ಮೊದಲೇ ಇದೆಲ್ಲವನ್ನೂ ಆಲೋಚಿಸಿ ತನ್ನ ಶಕ್ತಿಯು ಮುಂದೆ ಏನು ಮಾಡಲಿದೆಯೆಂದು ತಿಳಿದು ಸರಸ್ವತೀ ನದೀತೀರದ ಮರದ ಬುಡದಲ್ಲಿ ಬಂದು ಕುಳಿತಿದ್ದನು. ಯಾದವವ ವಂಶವನ್ನೇ ನಾಶಪಡಿಸಲಿಚ್ಛಿಸಿದ ಶ್ರೀಕೃಷ್ಣನು ಶರಣುಹೊಂದಿದವರ ದುಃಖವನ್ನು ಹೋಗಲಾಡಿಸುವನಾದ್ದರಿಂದ ನನ್ನನ್ನು ಕರೆದು,ನೀನು ಬದರಿಕಾಶ್ರಮಕ್ಕೆ ಹೋಗೆಂದು ಅಪ್ಪಣೆ ಮಾಡಿದನು. ಇದು ಮೊದಲನೆಯ ಸಲ ಅವನು ನನ್ನನ್ನು ಬದರಿಗೆ ಕಳುಹಿಸಿದ್ದು. ಶ್ರೀಹರಿಯ ಮನಸ್ಸಿನಲ್ಲಿ ಮತ್ತೊಮ್ಮೆ ನನಗೆ ಜ್ಞಾನೋಪದೇಶ ಮಾಡಬೇಕೆಂದಿರುವುದನ್ನು ಅರಿತ ನಾನು ಬದರಿಯಿಂದ ಮತ್ತೆ ದ್ವಾರಕೆಗೆ ಬಂದು ಕೃಷ್ಣನು ಈ ಲೋಕವನ್ನು ಬಿಡುವ ಸಮಯದಲ್ಲಿ ಅವನನ್ನು ಅನುಸರಿಸಿ ಹೋಗುವೆನು. ನನಗೆ ಕೃಷ್ಣನನ್ನು ಬಿಟ್ಟಿರುವುದೆಂದರೆ ಅಸಾಧ್ಯ. ಈ ಸಲ ನಾನು ನನ್ನ ಪ್ರಿಯನಾದ ಶ್ರೀಕೃಷ್ಣನನ್ನು ಹುಡುಕುತ್ತ ಬಂದೆನು. ನನಗೆ ಜ್ಞಾನೋಪದೇಶ ಮಾಡಿ ರಕ್ಷಿಸುವ, ಸ್ವಯಂ ಯಾವ ಆಧಾರವನ್ನೂ ಅಪೇಕ್ಷಿಸದ, ಲಕ್ಷ್ಮೀದೇವಿಗೆ ಆಶ್ರಯನಾದ ಶ್ರೀಕೃಷ್ಣನನ್ನು ಸರಸ್ವತೀ ನದೀ ತೀರದಲ್ಲಿ ಕಂಡೆನು. ಅವನು ಅಲ್ಲಿಯೇ ಬಿಡಾರ ಮಾಡಿದ್ದನು. ಅವನೊಬ್ಬನೇ ಕುಳಿತಿದ್ದನು. ಅವರವರ ಯೋಗ್ಯತೆಗೆ ತಕ್ಕಂತೆ ಕಪ್ಪಗೂ ಕೆಂಪಗೂ ಕಾಣುವ ಪರಿಶುದ್ಧನಾದ ಅವನ ಕಣ್ಣುಗಳು ಕೆಂಪಗಿದ್ದರೂ ಪ್ರಶಾಂತವಾಗಿದ್ದುವು. ಪೀತಾಂಬರನೂ, ನಾಲ್ಕು ತೋಳುಗಳುಳ್ಳವನೂ ಆದ ಅವನನ್ನು ಕೃಷ್ಣನೆಂದು ತಿಳಿದೆನು. ಪರಿಪೂರ್ಣನಾದ ಅವನಿಗೆ ಕರ್ಮಫಲವೆಲ್ಲಿಯದು ? ಅಶ್ವತ್ಥವೃಕ್ಷವನ್ನು ಬಿಟ್ಟು ಹೊರಗೆ ಎಡದೊಡೆಯ ಮೇಲೆ ಬಲಗಾಲನ್ನಿಟ್ಟು ಕೊಂಡಿದ್ದನು. ಅವನು ಅವತರಿಸಿದಾಗ ಹೊಂದಿದ್ದರೂಪವನ್ನೇ ಮತ್ತೆ ತೆಗೆದುಕೊಂಡಿದ್ದನು. ಆ ಕಾಲಕ್ಕೆ ಸರಿಯಾಗಿ ಅಲ್ಲಿಗೆ ವೇದವ್ಯಾಸರ ಮಿತ್ರರಾದ ಮೈತ್ರೇಯರೂ ಬಂದರು. ಅವರು ಸಿದ್ಧಪುರುಷರು; ಭಗವದ್ಭಕ್ತರಲ್ಲಿ ಉತ್ತಮರು.

ಲೋಕಸಂಚಾರಿಗಳಾಗಿದ್ದ ಅವರು ಶ್ರೀಹರಿಯ ಇಚ್ಛೆಯಂತೆ ಶ್ರೀಕೃಷ್ಣನ ಬಳಿಗೆ ಬಂದರು. ಬಂದವರೇ ಮೋಕ್ಷಪ್ರದನಾದ ಶ್ರೀಹರಿಯನ್ನು ಕಂಡು ಸಂತೋಷ-ಗೊಂಡು ವಿನಯದಿಂದ ತಲೆ ತಗ್ಗಿಸಿ ನಮಸ್ಕರಿಸಿದರು. ಶ್ರೀಹರಿಯಲ್ಲಿಯೇ ಅನುರಕ್ತರವರು. ಅವರು ಕೇಳುತ್ತಿದ್ದಂತೆಯೇ ಶ್ರೀಕೃಷ್ಣನು ನನ್ನ ಕಡೆ ನೋಡಿದನು. ಅವನ ಆ ದಯಾಪೂರ್ಣವೂ ನಸುನಗೆ ಯುಕ್ತವೂ ಆದ ನೋಟದಿಂದ ನನ್ನ ಸಾಂಸಾರಿಕ ತಾಪವೆಲ್ಲ ಪರಿಹಾರವಾಯಿತು. ಸಂತಸಗೊಂಡೆನು. ಆಗ ಶ್ರೀಕೃಷ್ಣನು ''ಭಕ್ತೋತ್ತಮ, ಉದ್ಧವ ! ನಿನ್ನ ಮನಸ್ಸಿನಲ್ಲಿರುವುದನ್ನು ನಾನು ಬಲ್ಲೆ. ನೀನು ಅಪೇಕ್ಷಿಸುತ್ತಿರುವ ಈ ವಿಷಯವು ನನ್ನ ಭಕ್ತರಲ್ಲದವರಿಗೆ ಎಂದೂ ದೊರೆಯುವು-ದಿಲ್ಲ. ನೀನು ಹಿಂದೆ ದೇವತೆಗಳು ಮಾಡುತ್ತಿದ್ದ ಜ್ಞಾನಸತ್ರದಲ್ಲಿ ನನ್ನನ್ನು ಪೂಜಿಸಿರುವೆ. ನನ್ನ ಮೂಲಕ ಜ್ಞಾನವನ್ನು ಉಪದೇಶ ಹೊಂದಬೇಕೆಂಬುದು ನಿನ್ನ ಆಶೆಯಾಗಿತ್ತು. ಈಗ ಆ ಜ್ಞಾನವನ್ನೇ ದಾನಮಾಡುತ್ತೇನೆ. ಈ ಕಲ್ಪದಲ್ಲಿ ನಿನ್ನ ಈ ಹುಟ್ಟೇ ಕೊನೆಯದು. ನೀನು ವಿಶುದ್ಧವಾದ ಮನಸ್ಸಿನಿಂದ ನನ್ನನ್ನು ಅರ್ಚಿಸಿದೆಯಾದ್ದರಿಂದ ಯಾರಿಗೂ ತಿಳಿಯದಂತೆ ರಹಸ್ಯವಾಗಿ ಈ ಲೋಕವನ್ನು ಬಿಟ್ಟು ಸ್ವರ್ಗವನ್ನು ಏರಲಿರುವ ನನ್ನನ್ನು ಕಂಡೆ. ಇದೇ ನಾನು ನಿನ್ನಲ್ಲಿ ಮಾಡಿರುವ ಅನುಗ್ರಹ. ಇದರಿಂದ ನಿನಗೆ ಒಳ್ಳೆಯದಾಗುವುದು. ನಾನು ಉಪದೇಶಿಸಲಿರುವ ಈ ಜ್ಞಾನವನ್ನೇ ಹಿಂದೆ ಅಂದರೆ ಸೃಷ್ಟಿಯ ಮೊದಲಿನಲ್ಲಿ ನನ್ನ ನಾಭಿಕಮಲದಿಂದ ಹುಟ್ಟಿದ ಬ್ರಹ್ಮನಿಗೆ ನಾನೇ ಉಪದೇಶಿಸಿದೆನು. ಇದರಿಂದ ನನ್ನ ಸರ್ವೋತ್ತಮ ಮಹಿಮೆಯು ಪ್ರಕಾಶಿತ-ವಾಗಿರುವುದು. ಇದನ್ನೇ ಜ್ಞಾನಿಗಳು ''ಭಾಗವತ''ವೆಂದು ಕರೆಯುವರು. ಇದನ್ನೇ ನಿನಗೆ ಉಪದೇಶಮಾಡುವೆನು'' ಇಷ್ಟು ಆದರದಿಂದ ಶ್ರೀಕೃಷ್ಣನು ಹೇಳಿದುದು ನನ್ನ ಮನಸ್ಸಿನಲ್ಲಿ ಭಕ್ತಿಯನ್ನು ಇಮ್ಮಡಿ ಮಾಡಿತು. ಅವನ ನೋಟಕ್ಕೂ ಅನುಗ್ರಹಕ್ಕೂ ಪಾತ್ರನಾಗಿದ್ದ ನನ್ನ ಶರೀರದಲ್ಲಿ ರೋಮಾಂಚ ಉಂಟಾಯಿತು. ಎಲ್ಲ ದುಃಖವೂ ಬಿಟ್ಟು ಹೋಯಿತು. ಕೈಮುಗಿದು ಮಾತನಾಡಹೊರಟ ನನ್ನ ಮುಖದಿಂದ ಮಾತೇ ಸರಿಯಾಗಿ ಹೊರಡದಾಯಿತು. ನಾನು ಏನು ಮಾತನಾಡಿದೆನೆಂಬುದು ನನಗೆ ತಿಳಿಯಲಿಲ್ಲ. 'ಜಗನ್ನಿಯಾಮಕನೆ' ನಿನ್ನ ಪಾದಾರವಿಂದವನ್ನು ಆಶ್ರಯಿಸಿದ ಭಕ್ತರಿಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳಲ್ಲಿ ಯಾವುದು ತಾನೇ ದೊರೆಯುವುದು ಅಸಾಧ್ಯವಾದೀತು? ಎಲ್ಲವೂ ಸುಲಭವಾಗಿ ದೊರೆಯುವುವು. ಆದರೂ ಯಾವಾಗಲೂ ನಿನ್ನ ಪಾದಾರವಿಂದ ಸೇವೆಯನ್ನೇ ಅಪೇಕ್ಷಿಸುವ ಸ್ವಭಾವದವನಾದ ನಾನು ಅದರ ಹೊರತು ಬೇರೊಂದನ್ನು ಅಪೇಕ್ಷಿಸುವುದಿಲ್ಲ. ನಿನ್ನ ಕೆಲಸಗಳು ಭಕ್ತರಾದ ನಮ್ಮ ಬುದ್ಧಿಯನ್ನೂ ಮೋಹಗೊಳಿಸುವುವು. ಯಾವ ಆಸೆಯೂ ಇಲ್ಲದ ನೀನು ಕರ್ಮಮಾಡುತ್ತಿರುವುದೂ, ಹುಟ್ಟಿಲ್ಲದ ನೀನು ಅವತರಿಸಿದುದೂ,

ಸರ್ವದಾ ಸಮೀಪದಲ್ಲಿರುವ ನೀನು ದ್ವಾರಕೆ ಮೊದಲಾದ ಜಲದುರ್ಗಗಳನ್ನು ನಿರ್ಮಿಸಿಕೊಂಡುದೂ, ಸರ್ವರಿಗೂ ಮೃತ್ಯುವೆನಿಸಿದ ನೀನು ಜರಾಸಂಧ ಮೊದಲಾದ ಶತ್ರುಗಳಿಗೆ ಹೆದರಿ ಓಡಿಹೋದುದೂ, ನಿನ್ನಲ್ಲಿಯೇ ಆನಂದಿಸುವ ನೀನು ಹತ್ತಾರುಸಾವಿರ ಸ್ತ್ರೀಯರನ್ನು ಮದುವೆಯಾದುದೂ - ಇವೆಲ್ಲವೂ ಲೋಕವಿಡಂಬನೆಯಲ್ಲದೆ ಮತ್ತೇನು? ನೀನು ಯಾವಾಗಲೂ ಶುದ್ಧ ಜ್ಞಾನಪರಿಪೂರ್ಣನು. ನಿನಗೆ ಪ್ರಮಾದ ಮೊದಲಾದ ದೋಷಗಳಿಲ್ಲ. ಇಂತಹ ನೀನು ಸಾಮಾನ್ಯರಾಜರಂತೆ ಮಂತ್ರಾಲೋಚನೆಗೆ ನನ್ನನ್ನು ಕರೆಸಿ ಕರ್ತವ್ಯಮೂಢ-ನಂತೆ ಪ್ರಶ್ನೆಮಾಡಿದುದು ಯಾವ ಭಕ್ತನನ್ನು ತಾನೇ ಮೋಹಗೊಳಿಸುವುದಿಲ್ಲ! ನಿನ್ನ ಜ್ಞಾನವು ಅವ್ಯಾಕೃತಾಕಾಶದಂತೆ ಕೊನೆಮೊದಲಿಲ್ಲದುದು. ಬ್ರಹ್ಮಾದಿ ದೇವತೆಗಳಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಉಪದೇಶಿಸಿದೆ. ಅವರಿಗೆ ಉಪದೇಶಿಸಿದಷ್ಟನ್ನೂ ನಾನು ಗ್ರಹಿಸಬಲ್ಲೆನೇ ? ನಮ್ಮಂತಹ ಮಂದಾಧಿಕಾರಿಗಳ ಯೋಗ್ಯತೆಯನ್ನು ನೀನು ಬಲ್ಲೆಯಾದ್ದರಿಂದ ನಮ್ಮನ್ನು ಸಂಸಾರಭಯದಿಂದ ಮುಕ್ತರನ್ನಾಗಿ ಮಾಡುವುದಕ್ಕೆ ಅವಶ್ಯಕವಾದ ಜ್ಞಾನವನ್ನು ಉಪದೇಶಿಸು.'' ಎಂದು ನನ್ನ ಅಭಿಪ್ರಾಯವನ್ನು ನಿವೇದಿಸಿಕೊಂಡೆನು. ಆಗ ಆ ಸರ್ವೇಶ್ವರನು ತಾನು ಸರ್ವೋತ್ತಮನೆಂಬುದನ್ನೂ, ಜೀವರು ತಾರತಮ್ಯ ವಿಶಿಷ್ಟರಾಗಿದ್ದು ಅವನ ಅಧೀನರೆಂಬುದನ್ನೂ ನನಗೆ ಉಪದೇಶಿಸಿದನು. ಅವನ ಆ ಉಪದೇಶದಿಂದ ನನಗೆ ಶ್ರೀಹರಿಯು ಅನಾರೋಪಿತವೂ ಸಮಾಧಿಕಶೂನ್ಯವೂ ಆದ ಜ್ಞಾನಾನಂದಾದಿಗುಣಗಳ ಸ್ವರೂಪನೆಂದು ತಿಳಿಯಿತು. ಅವನ ಜ್ಞಾನದ ವಿಶಿಷ್ಟಮಾರ್ಗವನ್ನರಿತ ನಾನು ಅವನಿಗೆ ಬಲ ಬಂದು ನಮಸ್ಕರಿಸಿ ಅವನ ಅಪ್ಪಣೆಯಂತೆ ಹೊರಟುಬಂದೆನು. ಅವನ ಅಗಲುವಿಕೆಯಿಂದ ನನ್ನ ಮನಸ್ಸು ಕಾತುರಗೊಂಡಿದೆ. ಈ ಮಧ್ಯದಲ್ಲಿ ವಿದುರ ! ನಿನ್ನ ದರ್ಶನವು ನನಗೆ ಸ್ವಲ್ಪ ಸಂತೋಷವನ್ನು ತಂದುಕೊಟ್ಟಿತು. ನಾನೀಗ ಬದರಿಕಾಶ್ರಮಕ್ಕೆ ಹೋಗುತ್ತೇನೆ. ಅಲ್ಲಿ ಶ್ರೀಹರಿಯ ಅವತಾರನಾದ ಯಮಧರ್ಮನ ಮಗ ನಾರಯಣನೂ, ಶೇಷಾಂಶನಾದ ಅವನ ತಮ್ಮ ನರನೂ ಲೋಕಸಂಗ್ರಹಕ್ಕಾಗಿ ತಪಸ್ಸು ಮಾಡುತ್ತಿರುವರು. ಆ ಬಗೆಯ ದೀರ್ಘವೂ ಕಠಿಣವೂ ಆದ ತಪಸ್ಸನ್ನು ಮತ್ತೊಬ್ಬರು ಮಾಡಲಾರರು. ಅವರ ಆ ತಪಸ್ಸು ಲೋಕಕಲ್ಯಾಣಕ್ಕಾಗಿ. ಇಂತಹ ತಪಸ್ವಿಗಳಿರುವ ಆ ಆಶ್ರಮವು ಶ್ರೀಹರಿಗೆ ಅತ್ಯಂತ ಪ್ರಿಯವಾದುದು.

ಶುಕಾಚಾರ್ಯರು - ಹೀಗೆ ಉದ್ಧವರಿಂದ ಆಗಲಿರುವ ಯದುವಂಶದ ನಾಶವನ್ನು ಅರಿತ ವಿದುರರು ತಮ್ಮ ದುಃಖವನ್ನು ಶ್ರೀಹರಿಯು ಸ್ವತಂತ್ರ-ನೆಂಬುದನ್ನೂ ಜೀವರು ಅಸ್ವತಂತ್ರರೆಂಬುದನ್ನೂ ಮನಸ್ಸಿಗೆ ತಂದುಕೊಂಡು

ಉಪಶಮಮಾಡಿಕೊಂಡರು. ಮಹಾಭಗವದ್ಭಕ್ತರಾದ ಉದ್ಧವರು ಹೊರಡುವರಿದ್ದ-ರಷ್ಟೆ. ಶ್ರೀಕೃಷ್ಣನ ಪರಿವಾರದಲ್ಲಿ ಮುಖ್ಯರಾದ ಇವರನ್ನು ಕೇಳಿದರೆ ತಮಗೂ ಆ ಜ್ಞಾನವನ್ನು ಉಪದೇಶಿಸುವರು ಎಂದು ಬಗೆದು ವಿದುರರು 'ಸ್ವಾಮಿ, ಭಗವದ್ಭಕ್ತರು ಶ್ರೀಹರಿಯ ಭಕ್ತರಾದ ಯೋಗ್ಯ ಜೀವರನ್ನು ರಕ್ಷಿಸುವುದಕ್ಕಾಗಿಯೇ ಸಂಚರಿಸುವರು. ಆ ಸರ್ವನಿಯಾಮಕನು ತನ್ನ ಸ್ವರೂಪದ ರಹಸ್ಯವನ್ನು ಪ್ರಕಾಶಪಡಿಸುವ ಜ್ಞಾನವನ್ನು ತಮಗೆ ಉಪದೇಶಿಸಿರುವನಲ್ಲವೇ ! ಅದನ್ನು ತಿಳಿಯಬೇಕೆಂಬ ಆಸೆ ನನಗೂ ಇದೆ. ದಯವಿಟ್ಟು ತಾವು ಅದನ್ನು ನನಗೆ ಉಪದೇಶಿಸಬೇಕು' ಎಂದರು. ಅದಕ್ಕಾಗಿ ಉದ್ಧವರು "ವಿದುರ ! ನನಗೆ ಜ್ಞಾನೋಪದೇಶಮಾಡಿದ ಕಾಲದಲ್ಲಿ ತ್ರಿಕಾಲಜ್ಞಾನಿ-ಗಳಾದ ಮೈತ್ರೇಯರೂ ಅಲ್ಲಿದ್ದರೆಂದು ಹೇಳಿದೆನಲ್ಲವೆ ! ಶ್ರೀಹರಿಯು ಅವರನ್ನು ಕರೆದು "ಮುಂದೆ ವಿದುರನಿಗೆ ಈ ಜ್ಞಾನವನ್ನು ನೀನೇ ಉಪದೇಶಿಸು" ಎಂದು ಆಜ್ಞೆ ಮಾಡಿರುವನು. ನೀನು ಅವರನ್ನು ಆಶ್ರಯಿಸಿದರೆ ನಿನ್ನ ಬಯಕೆಯು ಈಡೇರುವುದು. ಶ್ರೀಹರಿಯ ಆಜ್ಞೆಯಿಲ್ಲದ್ದರಿಂದ ನಾನು ಹೇಳುವಂತಿಲ್ಲ" ಎಂದುತ್ತರಕೊಟ್ಟರು.

ಸೂತರು – ಶೌನಕರೆ ! ವಿದುರರೊಂದಿಗೆ ಮಾತನಾಡುತ್ತ ಉದ್ಧವರು ಸರ್ವತ್ರ ವ್ಯಾಪ್ತನಾದ ಶ್ರೀಹರಿಯ ಗುಣಗಳನ್ನು ಹೇಳುತ್ತಾ ಅಮೃತಮಯವಾದ ಆ ಸನ್ನಿವೇಶದಿಂದ ತಮ್ಮ ಬಹುದುಃಖವನ್ನು ಹೋಗಲಾಡಿಸಿಕೊಂಡರು. ಅಲ್ಲಿಯೇ ಆ ರಾತ್ರಿಯನ್ನು ಆನಂದದಿಂದ ಕಳೆದು ಬೆಳಿಗ್ಗೆ ಬದರಿಕಾಶ್ರಮದತ್ತ ನಡೆದರು.

ಪರೀಕ್ಷಿದ್ರಾಜರು – ಯಾದವರೆಲ್ಲರೂ ನಾಶಹೊಂದುವಾಗ ಮಹಾರಥಿಕರನ್ನು ಕಾಪಾಡುವ ಮಹಾ ಮಹಾರಥಿಕರಾದ ಉದ್ಧವರಾದರೂ ಉಳಿದುದು ಏಕೆ? ಮೂರು ಲೋಕಗಳಿಗೂ ಒಡೆಯನಾದ ಶ್ರೀಕೃಷ್ಣನೂ ಈ ಲೋಕವನ್ನು ತ್ಯಾಗಮಾಡುವುದರಿಂದ ಅವನ ಪರಿಚರ್ಯೆಗಾಗಿ ಉಳಿದರು ಎಂದು ಸಹ ತಿಳಿಯುವಂತಿಲ್ಲ.

ಶುಕಾಚಾರ್ಯರು – ಶ್ರೀಹರಿಯ ಇಚ್ಛೆಯು ಎಂದೂ ವ್ಯರ್ಥವಾಗುವುದಲ್ಲ. ಬ್ರಾಹ್ಮಣ ಶಾಪವೆಂಬ ನೆಪದಿಂದ ಅವನೇ ಯಾದವರ ಸಂಹಾರವನ್ನು ಆಲೋಚಿಸಿದ್ದನು. ಅವನು ಈ ಲೋಕದಿಂದ ಅದೃಶ್ಯನಾಗುವ ಸಂದರ್ಭದಲ್ಲಿ "ನಾನು ಇಲ್ಲಿಂದ ಸ್ವರ್ಗವನ್ನು ಸೇರಿದಮೇಲೆ ನನ್ನ ಜ್ಞಾನವನ್ನು ಲೋಕದಲ್ಲಿ ಪ್ರಸಾರಮಾಡಬೇಕಾದರೆ ಉದ್ಧವನೇ ಸರಿ. ಅವನು ಈಗ ಇಲ್ಲಿರುವ ಜ್ಞಾನಿಗಳಲ್ಲಿ ಉತ್ತಮನಾಗಿದ್ದಾನೆ. ಅವನ ಗುಣಗಳಿಂದ ನನ್ನನ್ನು ವಶಪಡಿಸಿಕೊಂಡಿದ್ದಾನೆ. ನನಗಿಂತ ಯಾವ ವಿಧದಲ್ಲಿಯೂ ಈ ವಿಷಯದಲ್ಲಿ ಕಡಿಮೆಯಿಲ್ಲ. ಆದ್ದರಿಂದ

ಇವನೇ ಜನರಿಗೆ ಉಪದೇಶ ಮಾಡುತ್ತ ಈ ಲೋಕದಲ್ಲಿ ಉಳಿದಿರಲಿ'' ಎಂದಾಲೋಚಿಸಿ ಅವನನ್ನು ಉಳಿಸಿದನು. ವೇದಪ್ರತಿಪಾದ್ಯನಾದ ಶ್ರೀಹರಿಯಿಂದ ಹೀಗೆ ಆಜ್ಞಪ್ತರಾದ ಉದ್ಧವರು ಬದರಿಯನ್ನು ಸೇರಿ ಸಮಾಧಿಯಿಂದ ಶ್ರೀಹರಿಯನ್ನು ಪೂಜಿಸಿದರು.

ಇತ್ತ ವಿದುರರು ಪರಮಾತ್ಮನಾದ ಶ್ರೀಕೃಷ್ಣನ ಚರಿತ್ರೆಯನ್ನು ಉದ್ಧವರಿಂದ ತಿಳಿದರು. ಶ್ರೀಹರಿಯು ಕ್ರೀಡೆಗಾಗಿ ದೇಹವನ್ನು ಧರಿಸಿದ್ದನು. ಅವನು ಒಂದೊಂದು ಕರ್ಮವೂ ಶ್ಲಾಘನೀಯವಾದುದೇ. ಅವನು ತನ್ನ ದೇಹಕ್ಕೆ ಸದೃಶವಾದ ಭೌತಿಕ ದೇಹವನ್ನು ಸೃಷ್ಟಿಮಾಡಿ ಇಲ್ಲಿ ಬಿಟ್ಟು ತನ್ನ ಚಿದಾನಂದ ದೇಹದಿಂದ ಸ್ವರ್ಗಕ್ಕೆ ಹೋದುದು ಜ್ಞಾನಿಗಳಿಗೆ ಜ್ಞಾನವನ್ನು ಹೆಚ್ಚು ಮಾಡುವುದು. ಅಜ್ಞಾನಿಗಳಿಗೆ ಇದರ ರಹಸ್ಯವನ್ನು ಹಿಡಿಯಲಾಗುವುದಿಲ್ಲ. ಇಂತಹ ಪರಮಾತ್ಮನು ತನ್ನಲ್ಲಿ ಅನುಗ್ರಹಮಾಡಿದನೆಂದು ಅವರು ಆಲೋಚಿಸುತ್ತಿದ್ದಂತೆಯೇ ಪ್ರೇಮವು ಉಕ್ಕಿ ಮನಸ್ಸು ಹಿಡಿಯಲಾಗದಾಯಿತು. ಉದ್ಧವರು ಹೋದಮೇಲೆ ಅವರು ಗಳಗಳನೆ ಅತ್ತರು. ಹೀಗೆ ಪರವಶರಾಗಿದ್ದ ವಿದುರರು ಯಮುನೆಯಿಂದ ಹೊರಟು ಕೆಲವು ದಿನಗಳಲ್ಲಿ ಮೈತ್ರೇಯರು ವಾಸಿಸುತ್ತಿದ್ದ ಗಂಗಾತೀರಕ್ಕೆ ಬಂದು ಸೇರಿದರು.



# ಅಥ ಪಂಚಮೋऽಧ್ಯಾಯಃ

ದ್ವಾರಿ ದ್ಯುನದ್ಯಾ ಋಷಭಃ ಕುರೂಣಾಂ
ಮೈತ್ರೇಯಮಾಸೀನಮಗಾಧಬೋಧಂ ।
ಕ್ಷತ್ತಾऽಭಿಸೃತ್ಯಾಚ್ಯುತಭಾವಶುದ್ಧಃ (ತೃಪ್ತಃ)
ಪಪ್ರಚ್ಛ ಸೌಶೀಲ್ಯಗುಣಾತಿತೃಪ್ತಂ ॥೧॥

ಅಚ್ಯುತಭಾವಶುದ್ಧಃ=ಭಗವದ್ಭಕ್ತಿಯಿಂದ ನಿರ್ಮಲನಾದ, ('ತೃಪ್ತಃ' ಎಂಬ ಪಾಠದಲ್ಲಿ ಭಗವದ್ಭಕ್ತಿಯಿಂದ ವಿಷಯಾಲಂಬುದ್ಧಿವುಳ್ಳವನು) ಕುರೂಣಾಂ ಋಷಭಃ=ಕುರುಕುಲೋತ್ಪನ್ನರಲ್ಲಿ ಶ್ರೇಷ್ಠನಾದ ಕ್ಷತ್ತಾ=ವಿದುರನು ದ್ಯುನದ್ಯಾಃ ದ್ವಾರಿ=ಹರಿದ್ವಾರದಲ್ಲಿ ಆಸೀನಂ=ಕುಳಿತಿರುವ ಅಗಾಧಬೋಧಂ=ಗಾಢವಾದ ಜ್ಞಾನವುಳ್ಳ ಸೌಶೀಲ್ಯಗುಣಾತಿತೃಪ್ತಂ=ವಿದುರನ ಸಚ್ಚಾರಿತ್ರ್ಯಮೊದಲಾದ ಗುಣಗಳಿಂದ ಸಂತುಷ್ಟನಾದ ಮೈತ್ರೇಯಂ=ಮೈತ್ರೇಯರನ್ನು ಅಭಿಸೃತ್ಯ=ಗುರೂಪಸತ್ತಿವಿಧಿ ಪೂರ್ವಕವಾಗಿ ಹೊಂದಿ ಪಪ್ರಚ್ಛ=ಪ್ರಶ್ನಿಸಿದನು.

ಇಲ್ಲಿ 'ಕುರೂಣಾಂ ಋಷಭಃ' ಎಂದು ಸತ್ಕುಲಪ್ರಸೂತನಾದ್ದರಿಂದ ತತ್ತ್ವಜ್ಞಾನಯೋಗ್ಯತೆಯನ್ನು 'ಸೌಶೀಲ್ಯಗುಣಾತಿತೃಪ್ತಃ' ಎಂದದ್ದರಿಂದ ವಕ್ತೃಪ್ರೇಮಾ-ಸ್ಪದತ್ವರೂಪವಾದ ಶ್ರೋತ್ರಾನುಕುಲ್ಯವನ್ನೂ 'ಅಗಾಧಬೋಧಂ' ಎಂಬುದರಿಂದ ವಿವಕ್ಷಿತಾರ್ಥತತ್ತ್ವಜ್ಞಾನವನ್ನು 'ಆಸೀನಂ' ಎಂಬುದರಿಂದ ಪ್ರಸಂಗಾನುಕೂಲ್ಯವನ್ನು ವಕ್ತ್ರಾನುಕೂಲ್ಯಗಳನ್ನೂ ತಿಳಿಸಿದಂತಾಗುವುದು. ಶ್ರೋತ್ರಾನುಕೂಲ್ಯದಿಂದ ಅವಿಪ್ರ-ಲಿಪ್ಸಾವನ್ನೂ ಹೇಳಬಹುದು ॥೧॥

ವಿದುರ ಉವಾಚ

ಸುಖಾಯ ಕರ್ಮಾಣಿ ಕರೋತಿ ಲೋಕೋ
ನ ತೈಃ ಸುಖಂ ನಾನ್ಯದುಪಾರಮಂ ವಾ ।
ವಿಂದೇತ ಭೂಯಸ್ತತ ಏವ ದುಃಖಂ
ಯದತ್ರ ಯುಕ್ತಂ ಭಗವಾನ್ ವದೇನ್ನಃ ॥೨॥

ಲೋಕಃ=ಜನರು ಸುಖಾಯ=ಸುಖವನ್ನು ಪಡೆಯಲು ಕರ್ಮಾಣಿ=ಯಜ್ಞಾದಿಗಳನ್ನು ಕರೋತಿ=ಮಾಡುವರು ತೈಃ=ಕರ್ಮಗಳಿಂದ ಸುಖಂ ನ= ಸುಖವಾಗುವುದಿಲ್ಲ ಅನ್ಯದುಪಾರಮಂ ವಾ ನ=ದುಃಖನಾಶವೂ ಆಗುವುದಿಲ್ಲ. ತತಃ=ಕರ್ಮಗಳಿಂದ ಭೂಯಃ=ಬಹಳ ದುಃಖಂ ವಿಂದೇತ=ದುಃಖವನ್ನೇ ಹೊಂದುವರು. ಅತ್ರ=ಸುಖಪ್ರಾಪ್ತಿ, ಅತ್ಯಂತಿಕ ದುಃಖನಿವೃತ್ತಿಗೆ ಯುಕ್ತಂ= ಮಾಡಲು ಯೋಗ್ಯವಾದುದನ್ನು ಭಗವಾನ್=ಪೂಜ್ಯರಾದ ತಾವು ಪುನಃ=ನಮಗೆ ವದೇತ್=ಹೇಳಿರಿ (ಹೇಳೋಣವಾಗಲಿ)

ಜನಸ್ಯ ಕೃಷ್ಣಾದ್ ವಿಮುಖಸ್ಯ ದೈವಾತ್
ಅಧರ್ಮಶೀಲಸ್ಯ ಸುದುಃಖಿತಸ್ಯ ।
ಅನುಗ್ರಹಾಯೇಹ ಚರಂತಿ ನೂನಂ
ಭೂತಾನಿ ಭವ್ಯಾನಿ ಜನಾರ್ದನಸ್ಯ ॥೩॥

ದೈವಾತ್=ಪ್ರಾಚೀನ ಕರ್ಮಪ್ರೇರಕದೈವದಿಂದ, ಸದ್ಗುರುಗಳ ಉಪದೇಶವೂ ಇಲ್ಲದುದರಿಂದ ಕೃಷ್ಣಾದ್ವಿಮುಖಸ್ಯ=ಶ್ರೀಕೃಷ್ಣನಿಂದ ಪರಾಙ್ಮುಖರಾದ (ದೇವರ ಕಡೆಗೆ ಗಮನವಿಲ್ಲದ) ಜನಸ್ಯ=ಸಜ್ಜನರಿಗೆ ಅಧರ್ಮಶೀಲಸ್ಯ=ದೈವವಿಮುಖರಾದ್ದರಿಂದ ಅಧರ್ಮವನ್ನಾಚರಿಸುವ ಅದರಿಂದ ಸುದುಃಖಿತಸ್ಯ=ಬಹಳ ದುಃಖದಲ್ಲಿರುವ ಜನರಿಗೆ ಅನುಗ್ರಹಾಯ=ಉಪದೇಶ ಮಾಡಿ ದುಃಖ ಕಳೆದು ಸುಖ ಸಿಗುವಂತೆ ಮಾಡಲು ಇಹ=ಕರ್ಮಭೂಮಿಯಾದ ಭಾರತದಲ್ಲಿ ಜನಾರ್ದನಸ್ಯ= ಭಗವಂತನ ಭವ್ಯಾನಿ=ಮಂಗಲವಾದ ಭೂತಾನಿ=ಭೃತ್ಯರಾದ ತಮ್ಮಂಥವರು ಚರಂತಿ= ಸಂಚರಿಸುವರು. ಸಜ್ಜನರ ದುಃಖನಾಶ ಮಾಡುವುದು ನಿಮ್ಮಂಥವರ ಸ್ವಭಾವವಾದ್ದರಿಂದ ನಾನೇನು ಬಹಳ ನಿರ್ಬಂಧ ಮಾಡುವ ಕಾರಣವಿಲ್ಲವೆಂದು ಭಾವ ॥೩॥

ತತ್ ಸಾಧುವರ್ಯಾದಿಶ ಶರ್ಮ ವರ್ತ್ಮ
ಸಂರಾಧಿತೋ ಭಗವಾನ್ ಯೇನ ಪುಂಸಾಂ ।
ಹೃದಿ ಸ್ಥಿತೋ ಯಚ್ಛತಿ ಭಕ್ತಿಪೂತೇ
ಜ್ಞಾನಂ ಸ್ವಸತ್ತ್ವಾಧಿಗಮಂ ಪುರಾಣಂ ॥೪॥

ಹೇ ಸಾಧುವರ್ಯ=ಸಜ್ಜನಶ್ರೇಷ್ಠರಾದ ಮೈತ್ರೇಯರೆ, ಯೇನ=ಯಾವ ಕರ್ಮದಿಂದ ಸಂರಾಧಿತಃ=ಆರಾಧಿಸಲ್ಪಟ್ಟ ಭಗವಾನ್=ಶ್ರೀಹರಿಯು ಪುಂಸಾಂ= ಅಧಿಕಾರಿಗಳ ಭಕ್ತಿಪೂತೇ=ವೈರಾಗ್ಯದ್ವಾರಾ ಭಕ್ತಿಯಿಂದ ಪವಿತ್ರವಾದ ಹೃದಿ= ಹೃದಯದಲ್ಲಿ ಸ್ಥಿತಃ=ಶ್ರವಣಾದಿಗಳಿಂದ ಧ್ಯಾನಿಸಲ್ಪಟ್ಟವನಾನಾಗಿ ಸ್ವಸತ್ತಾಧಿ-ಗಮಂ=ತನ್ನ ಮಾಹಾತ್ಮ್ಯವಿಷಯಕವಾದ ಪುರಾಣಂ=ಗುರುಸಂಪ್ರದಾಯಾಗತ-ವಾದ ಜ್ಞಾನಂ=ಪರೋಕ್ಷಜ್ಞಾನವನ್ನು ಯಚ್ಛತಿ=ಕೊಡುವನೋ ತತ್=ಅಂಥ ಶರ್ಮವರ್ತ್ಮ=ಸುಖಸಾಧನ ಮಾರ್ಗವನ್ನು ಆದಿಶ=ಉಪದೇಶಿಸು ॥೪॥

**ಕರೋತಿ ಕರ್ಮಾಣಿ ಕೃತಾವತಾರೋ**
**ಯಾನ್ಯಾತ್ಮತಂತ್ರೋ ಭಗವಾಂಸ್ತ್ರ್ಯಧೀಶಃ ।**
**ಯಥಾ ಸಸರ್ಜಾಗ್ರ ಇದಂ ನಿರೀಹಃ**
**ಸಂಸ್ಥಾಪ್ಯ ವೃತ್ತಿಂ ಜಗತೋ ವಿಧತ್ತೇ ॥೫॥**

ತ್ರ್ಯಧೀಶಃ=ಮೂರುಲೋಕಕ್ಕೊಡೆಯನಾದ, ಆತ್ಮತಂತ್ರಃ=ಸ್ವತಂತ್ರನಾದ ಭಗವಾನ್=ಶ್ರೀಹರಿಯು ಕೃತಾವತಾರಃ=ಪುರುಷಾದಿ ಅವತಾರಗಳನ್ನು ಮಾಡಿದವ-ನಾಗಿ ಯಾನಿ ಕರ್ಮಾಣಿ ಕರೋತಿ=ಯಾವ ಕಾರ್ಯಗಳನ್ನು ಮಾಡುವನು, ಅಗ್ರೇ= ಆದಿಕಾಲದಲ್ಲಿ ನಿರೀಹಃ=ತನಗೆ ಏನೂ ಪ್ರಯೋಜವಿಲ್ಲದೆ ಇದಂ= ಪ್ರಪಂಚವನ್ನು ಯಥಾ ಸಸರ್ಜ=ಯಾವ ರೀತಿ ಸೃಷ್ಟಿಸಿದನು ಸಂಸ್ಥಾಪ್ಯ=ಚೆನ್ನಾಗಿ ಇರಿಸಿ ಜಗತಃ= ಜಗತ್ತಿಗೆ ವೃತ್ತಿಂ=ಜೀವನೋಪಾಯವನ್ನು ಯಥಾ ವಿಧತ್ತೇ=ಹೇಗೆ ಮಾಡುವನು ಎಂಬುದನ್ನು 'ವರ್ಣಯ' ಹೇಳು ಎಂದು ಮುಂದಿನ ೯ನೆಯ ಶ್ಲೋಕದಲ್ಲಿಯ ಕ್ರಿಯಾಪದಿಂದ ಅನ್ವಯ ॥೫॥

**ಯಥಾ ಪುನಃ ಸ್ವೇ ಖ ಇದಂ ನಿವೇಶ್ಯ**
**ಶೇತೇ ಗುಹಾಯಾಂ ಸ ನಿವೃತ್ತವೃತ್ತಿಃ ।**
**ಯೋಗೇಶ್ವರಾಧೀಶ್ವರ ಏಕ ಏತತ್**
**ಅನುಪ್ರವಿಷ್ಟೋ ಬಹುಧಾ ಯಥಾಽಽಸೀತ್ ॥೬॥**

ಪುನಃ=ಮತ್ತೆ ಪ್ರಲಯಕಾಲದಲ್ಲಿ ಸ್ವೇ=ತನ್ನ ಖೇ=ಉದರಾಕಾಶದಲ್ಲಿ ಇದಂ= ಜಗತ್ತನ್ನು ನಿವೇಶ್ಯ=ಇಟ್ಟುಕೊಂಡು ಗುಹಾಯಾಂ=ಜಗದಾಚ್ಛಾದಕವಾದ ತಮೋ-ರೂಪಚೇತನಪ್ರಕೃತಿಯಲ್ಲಿ ನಿವೃತ್ತವೃತ್ತಿಃ=ಜಗತ್ಸೃಷ್ಟ್ಯಾದಿ ವ್ಯಾಪಾರವಿಲ್ಲದವನಾಗಿ ಯಥಾಶೇತೆ=ಯಾವರೀತಿ ಮಲಗುವನು. ಮತ್ತು ಯೋಗೇಶ್ವರಾಧೀಶ್ವರಃ= ಮೋಕ್ಷೋಪಾಯಾಭಿಜ್ಞರಾದ ಬ್ರಹ್ಮಾದಿಗಳಿಗೂ ನಿಯಾಮಕನಾದ ಹರಿಯು ಏಕಃ=

ಒಬ್ಬನೇ ಏತದನುಪ್ರವಿಷ್ಟಃ=ಪುನಃ ಸೃಷ್ಟಿಕಾಲದಲ್ಲಿ ಈ ಬ್ರಹ್ಮಾಂಡ ಪ್ರವೇಶ ಮಾಡಿ ಬಹುಧಾ=ಮತ್ಸ್ಯಾದಿನಾನಾರೂಪವುಳ್ಳನು ಯಥಾಸೀತ್=ಹೇಗಾದನು ॥೬॥

**ಕ್ರೀಡನ್ ವಿಧತ್ತೇ ದ್ವಿಜಗೋಸುರಾಣಾಂ**
**ಕ್ಷೇಮಾಯ ಕರ್ಮಾಣ್ಯವತಾರಭೇದೈಃ ।**
**ಮನೋ ನ ತೃಪ್ಯತ್ಯಪಿ ಶೃಣ್ವತಾಂ ನಃ**
**ಸುಶ್ಲೋಕಮೌಲೇಶ್ಚರಿತಾಮೃತಾನಿ ॥೭॥**

ಅವತಾರಭೇದೈಃ=ಆ ಮತ್ಸ್ಯಾದಿ ಅವತಾರಗಳಿಂದ ದ್ವಿಜಗೋಸುರಾಣಾಂ= ಬ್ರಾಹ್ಮಣರು, ಗೋವುಗಳು, ದೇವತೆಗಳು ಇವರುಗಳ ಕ್ಷೇಮಾಯ=ಕಲ್ಯಾಣಕ್ಕಾಗಿ ಕರ್ಮಾಣಿ=ಕಾರ್ಯಗಳನ್ನು ಕ್ರೀಡನ್=ಅನಾಯಾಸವಾಗಿ ವಿಧತ್ತೇ=ಮಾಡುವನು ತಾನಿ=ಅವುಗಳನ್ನು ವರ್ಣಯ=ಹೇಳು. ಸುಶ್ಲೋಕಮೌಲೇಃ=ಉತ್ತಮಕೀರ್ತಿ-ಶಾಲಿಗಳ ಶಿರೋಮಣಿಯಂತಿರುವ ಶ್ರೀಹರಿಯ ಚರಿತಾಮೃತಾನಿ=ಚರಿತಾಮೃತ-ವನ್ನು ಶೃಣ್ವತಾಂ=ಕೇಳುವ ನಃ=ನಮ್ಮ ಮನಃ=ಮನಸ್ಸು ನ ತೃಪ್ಯತಿ=ಅಲಂಬುದ್ಧಿ-ಯನ್ನು ಹೊಂದುವುದಿಲ್ಲ ॥೭॥

**ಯಸ್ತತ್ವಭೇದೈರಧಿಲೋಕನಾಥೋ**
**ಲೋಕಾನಲೋಕಾನ್ ಸಹ ಲೋಕಪಾಲಾನ್ ।**
**ಅಚೀಕ್ಲೃಪದ್ಯತ್ರ ಹಿ ಸರ್ವಸತ್ವ-**
**ನಿಕಾಯಭೇದೋಽಧಿಕೃತಃ ಪ್ರತೀತಃ ॥೮॥**

ಅಧಿಲೋಕನಾಥಃ=ಲೋಕನಾಥರಿಗೂ ಅಧಿಪತಿಯಾದ ಪರಮಾತ್ಮನು ಸಹಲೋಕಪಾಲಾನ್=ಲೋಕಪಾಲಕರಿಂದ ಸಹಿತವಾದ ಲೋಕಾನ್=ಭೂರಾದಿ ಲೋಕಗಳನ್ನು ಅಲೋಕಾನ್=ಪೃಥಿವ್ಯಾದಿಬಾಹ್ಯಾವರಣ ವಿಶೇಷಗಳನ್ನು ಅಥವಾ ಲೋಕಾಲೋಕಪರ್ವತದ ಹೊರಗಿರುವ ಭಾಗವನ್ನು ಯತ್ರ=ಯಾವ ಲೋಕಗಳಲ್ಲಿ ಸರ್ವಸತ್ವನಿಕಾಯಭೇದಃ=ಎಲ್ಲ ಪ್ರಾಣಿಗಳ ಸಮೂಹಗಳ ಪ್ರಭೇದವು ಅಧಿಕೃತಃ= ತಮಗೆ ಯೋಗ್ಯವಾದ ಕಾರ್ಯ ಮಾಡಲು ನಿಯಮಿಸಲ್ಪಟ್ಟಿದೆ ಎಂದು ಪ್ರತೀತಃ= ಆಗಮಾದಿಗಳಿಂದ ತಿಳಿಯುವರೋ ಅಂಥಲೋಕಗಳನ್ನು ಯೈಃ ತತ್ವಭೇದೈಃ= ಯಾವ ಮಹದಾದಿ ತತ್ವವಿಶೇಷಗಳಿಂದ ಅಚೀಕ್ಲೃಪತ್=ನಿರ್ಮಿಸಿದನು ಇದನ್ನೂ ವರ್ಣಯ=ಹೇಳು ॥೮॥

**ಯೇನ ಪ್ರಜಾನಾಮುತ ಆತ್ಮಕರ್ಮ-**
**ರೂಪಾಭಿಧಾನೇನ ಭಿದಾಂ ವ್ಯಧತ್ತ ।**
**ನಾರಾಯಣೋ ವಿಶ್ವಸೃಗಾತ್ಮಯೋನಿ-**
**ರೇತಚ್ಚ ನೋ ವರ್ಣಯ ವಿಪ್ರವರ್ಯ ॥೯॥**

ಆತ್ಮಯೋನಿಃ=ತಾನೆ ತನಗೆ ಕಾರಣನಾದ ಅಂದರೆ ಕಾರಣಾಂತರ ರಹಿತನಾದ ವಿಶ್ವಸೃಕ್=ಜಗತ್ತನ್ನು ಸೃಷ್ಟಿಸುವ ನಾರಾಯಣಃ=ಶ್ರೀಹರಿಯು ಪ್ರಜಾನಾಂ=ಪ್ರಜೆ-ಗಳಿಗೆ ಯೇನ=ಯಾವ ರೀತಿಯಾಗಿ ಆತ್ಮ=ಸ್ವಭಾವಕ್ಕೆ ಅನುಸಾರವಾದ ಕರ್ಮ=ಪುಣ್ಯಪಾಪಗಳು ಅದಕ್ಕನುಗುಣವಾದ ರೂಪ=ಶರೀರವನ್ನು ಅದರನುಸಾರವಾದ ಅಭಿಧಾನೇನ=ಹೆಸರುಗಳಿಂದ ಭಿದಾಂ=ಪರಸ್ಪರ ಭೇದವನ್ನು ವ್ಯಧತ್ತ=ಮಾಡಿದನು ಏತಚ್ಚ=ಎಂಬುದನ್ನು ಕೂಡ ವರ್ಣಯ=ಹೇಳು. ಆತ್ಮಯೋನಿಃ=ಚತುರ್ಮುಖನಿಗೆ ಕಾರಣನಾದ ಹೀಗೂ ಅರ್ಥ. ಇದರಿಂದ ಚತುರ್ಮುಖದ್ವಾರಾ ಹೇಗೆ ಇದನ್ನೆಲ್ಲ ಮಾಡಿದನು ಎಂದು ಪ್ರಶ್ನಾಭಿಪ್ರಾಯ. ॥೯॥

**ಪರಾವರೇಷಾಂ ಭಗವಾನ್ ಕೃತಾನಿ-**
**ಶ್ರುತಾನಿ ಮೇ ವ್ಯಾಸಮುಖಾದಭೀಕ್ಷ್ಣಂ ।**
**ನ ತೃಪ್ನುಮಃ ಕರ್ಣಸುಖಾವಹಾನಾಂ**
**ತೇಷಾಮೃತೇ ಕೃಷ್ಣಕಥಾಮೃತೌಘಾತ್ ॥೧೦॥**

ಹೇ ಭಗವನ್=ಪೂಜ್ಯರಾದ ಮೈತ್ರೇಯರೇ ಯದ್ಯಪಿ ವ್ಯಾಸಮುಖಾತ್=ವೇದವ್ಯಾಸರ ಮುಖದಿಂದ ಮಹಾಭಾರತದ ರೂಪದಿಂದ ಪರಾವರೇಷಾಂ=ಪರೇ=ತ್ರೈವರ್ಣಿಕರು ಅವರೇ=ಶೂದ್ರಾದಿಗಳು ಇವರ ಕೃತಾನಿ=ಅವರಿಗೆ ಯೋಗ್ಯ-ವಾದ ಕಾರ್ಯಗಳು ಅಥವಾ ಪರೇ=ದೇವಋಷಿಗಳು ಅವರೇ=ಕ್ಷಿತಿಪಮನುಷ್ಯ-ರುಗಳ ಕೃತಾನಿ=ಚರಿತ್ರೆಗಳು ಮೇ=ನನ್ನಿಂದ ಅಭೀಕ್ಷ್ಣಂ ಶ್ರುತಾನಿ=ಪುನಃಪುನಃ ಕೇಳಲ್ಪಟ್ಟಿವೆ ಕರ್ಣಸುಖಾವಹಾನಾಂ=ಕಿವಿಗೆಆಪ್ಯಾಯಮಾನವಾದ ತೇಷಾಂ=ಪರಾವರರ ಕಥೆಗಳ ಋತೇ= ಮೇಲ್ನೋಟಕ್ಕೆ ಪರಾವರರ ಕಥೆಯಂತೆ ಕಂಡರೂ ಉಪಕ್ರಮಾದಿಗಳಿಂದ ಅವುಗಳ ತಾತ್ಪರ್ಯವನ್ನು ತಿಳಿದರೆ ಕೃಷ್ಣಕಥಾಮೃತೌಘಾತ್=ಉತ್ತಮಾಧಿಕಾರಿಗಳಿಗೆ ಕೃಷ್ಣಕಥಾಮೃತವೆಂದೆ ತಿಳಿಯುವುದು.ಆದರೆ ಎಲ್ಲರಿಗೂ ತಿಳಿಯುವುದಿಲ್ಲ. ಭಾಷಾತ್ರಯದಿಂದ ಹೊರಟಿದೆ ಭಾರತ. ಆದ್ದರಿಂದ ನ ತೃಪ್ನುಮಃ=ತೃಪ್ತಿಪಡುವುದಿಲ್ಲ. ಕಾರಣ ಮಂದಾಧಿಕಾರಿಗಳಿಗೂ ತಿಳಿಯುವಂತೆ ಸಮಾಧಿಭಾಷೆಯಿಂದ ಹೇಳಿರಿ ಎಂದು ಅಭಿಪ್ರಾಯ. ಅಥವಾ ವ್ಯಾಸಮುಖದಿಂದ ಕೇಳಿದ ಪರಾವರೇಷಾಂ=ಬ್ರಹ್ಮಾದಿಗಳ ಕೃತಾನಿ=ಚರಿತ್ರೆಗಳು ಋತೇ=ತಾತ್ಪರ್ಯ-

ವನ್ನು ತಿಳಿದಾಗ, ಕೃಷ್ಣಕಥಾಮೃತೌಘಾತ್=ಭಗವನ್ಮಹಿಮಾ ವಿಷಯಕವೇ ಆಗಿವೆ ಆದ್ದರಿಂದ ನ ತೃಪ್ನುಮಃ=ಅದನ್ನು ಎಷ್ಟು ಕೇಳಿದರೂ ತೃಪ್ತಿ ಇಲ್ಲ. ತಾತ್ಪರ್ಯ ತಿಳಿದಾಗಲೂ ಕೃಷ್ಣಕಥಾಮೃತ ಹೇಗೆ ಅಂದರೆ 'ಕರ್ಣಸುಖಾವಹಾನಾಂ' ಎಂದಿದ್ದಾರೆ ಶ್ರೀಕೃಷ್ಣ ಕಥಾಮೃತವೆ ಕರ್ಣಸುಖಜನಕವಾಗಿದೆ. ಬೇರೆಯದು ಕರ್ಣಕರ್ಕಶ-ವಾಗುವುದು ಇದರಿಂದ ಶ್ರೀಕೃಷ್ಣ ಕಥಾ ಎಂದು ಸಿದ್ಧವಾಗುವುದು.

ಈ ಶ್ಲೋಕದಲ್ಲಿ ಮೇಲ್ನೋಟಕ್ಕೆ 'ಕೃಷ್ಣಕಥಾಮೃತೌಘಾತ್ ಋತೇ ತಾನಿ ಭವಂತಿ ಅತಃ ನ ತೃಪ್ನುಮಃ' ಭಾರತದಲ್ಲಿ ಕೇವಲ ರಾಜರ ಕಥೆಗಳೇ ಇವೆ ಕೃಷ್ಣಕಥಾ ಇಲ್ಲದಕಾರಣ ತೃಪ್ತಿ ಇಲ್ಲ. ಎಂದು ಭಾರತದಲ್ಲಿ ಹರಿಕಥಾ ಇಲ್ಲ ಎಂದು ಹೇಳಿದಂತೆ ತೋರುವುದು. ಕಾರಣ ತಾತ್ಪರ್ಯ ಹೇಳುವರು.

**ಋತೇ ಅವಗಮೇ । ಋಗತೌ ಇತಿ ಧಾತೋಃ । ತೇಷಾಂ ತಾತ್ಪರ್ಯಾವಗಮೇ ಕೃಷ್ಣಕಥಾಮೃತೌಘ ಏವಾಸೌ ಯತಃ ॥**

ಇಲ್ಲಿ ಋತೇ ಎಂಬುದು ವಿನಾರ್ಥಕ ಅವ್ಯಯವಲ್ಲ. 'ಋಗತೌ' ಧಾತುವಿನ ನಿಷ್ಠಾಂತವಾದ ಸಪ್ತಮ್ಯಂತಪದ.

ಆದ್ದರಿಂದ ತೇಷಾಂ ಆ ಎಲ್ಲ ಕಥಾಗಳ ತಾತ್ಪರ್ಯ ತಿಳಿದಾಗ ಕೃಷ್ಣಕಥಾ-ಮೃತವೆಂದೆ ಸಿದ್ಧವಾಗುವುದರಿಂದ ಅದನ್ನು ಕೇಳುವುದರಿಂದ ತೃಪ್ತಿ ಇಲ್ಲವೆಂದು ಭಾವ ॥೧೦॥

**ಕಸ್ತೃಪ್ನುಯಾತ್ ತೀರ್ಥಪದೋಽಭಿಧಾನಾತ್**
**ಸತ್ರೇಷು ವಃ ಸೂರೀಭಿರೀಡ್ಯಮಾನಾತ್ ।**
**ಯಃ ಕರ್ಣನಾಡೀಂ ಪುರುಷಸ್ಯ ಯಾತೋ**
**ಭಯಪ್ರದಾಂ ಗೇಹರತಿಂ ಛಿನತ್ತಿ ॥೧೧॥**

ಯಃ=ಯಾವ ಶ್ರೀಹರಿಯು ಪುರುಷಸ್ಯ=ಉತ್ತಮಾಧಿಕಾರಿಯ ಕರ್ಣನಾಡೀಂ ಯಾತಃ=ಕಿವಿಯಿಂದ ಹೃದಯವನ್ನು ಪ್ರವೇಶಿಸಿದ ಅಂದರೆ ಪುನಃ ಪುನಃ ಕೇಳಲ್ಪಟ್ಟವನಾಗಿ ಭಯಪ್ರದಾಂ=ಭಯವನ್ನುಂಟು ಮಾಡುವ ಗೇಹರತಿಂ=ಮಡದಿ ಮಕ್ಕಳು ಮನೆಗಳಲ್ಲಿಯ ಆಸಕ್ತಿಯನ್ನು ಛಿನತ್ತಿ=ಕತ್ತರಿಸುವನೋ ತಸ್ಯ=ಅಂಥ ವಃ ಸತ್ರೇಷು=ನಿಮ್ಮ ಯಜ್ಞಗಳಲ್ಲಿ, ನಿಮ್ಮಗಳ ಮಧ್ಯದಲ್ಲಿ ಸೂರಿಭಿಃ=ನಾರದಾದಿಗಳಿಂದ, ಸೂತಾದಿಜ್ಞಾನಿಗಳಿಂದ ಈಡ್ಯಮಾನಾತ್=ಸ್ತುತಿಸಲ್ಪಡುವ ತೀರ್ಥಪದಃ=ಶ್ರೀಹರಿಯ ಅಭಿಧಾನಾತ್=(ಭಾರತವೆಂಬ) ಕಥಾಮೃತದಿಂದ ಕಃ ತೃಪ್ನುಯಾತ್=ಯಾವ ರಸಜ್ಞನು ತೃಪ್ತಿಪಡುವನು ? ಉತ್ತಮಾಧಿಕಾರಿಯಾದ್ದರಿಂದ ನಿನಗೆ ನಾನು ಹರಿಕಥಾ

ಹೇಳುವುದು ವ್ಯರ್ಥ ಎನ್ನಬೇಡಿರಿ. ಉತ್ತಮಾಧಿಕಾರಿಗಳೂ ಸಹ ವೈರಾಗ್ಯವೃದ್ಧಿಗಾಗಿ ಹರಿಕಥಾವನ್ನು ಪುನಃ ಪುನಃ ಕೇಳಲೇಬೇಕು ಎಂದು ಭಾವ ॥೧೧॥

**ಮುನಿರ್ವಿವಿಕ್ಷುರ್ಭಗವದ್ಗುಣಾನಾಂ**
**ಸಖಾಪಿ ತೇ ಭಾರತಮಾಹ ಕೃಷ್ಣಃ ।**
**ಯಸ್ಮಿನ್ ನೃಣಾಂ ಗ್ರಾಮ್ಯಸುಖಾನುವಾದ್ಯೈ-**
**ರ್ಮತಿಗೃಹೀತಾ ನ ಹರೇಃ ಕಥಾಯಾಂ ॥೧೨॥**

ಭಗವದ್ಗುಣಾನಾಂ=ಭಗವದ್ಗುಣಗಳನ್ನು ವಿವಕ್ಷುಃ=ಹೇಳಲಿಚ್ಛಿಸಿ ತೇ ಸಖಾ=ನಿನ್ನ ಮಿತ್ರನಾದ ಕೃಷ್ಣಃ=ವೇದವ್ಯಾಸರು, ಯಸ್ಮಿನ್=ಯಾವ ಭಾರತದಲ್ಲಿ ಚೆನ್ನಾಗಿ ಅಭ್ಯಾಸ ಮಾಡಿದರೆ, ನೃಣಾಂ=ಉತ್ತಮಾಧಿಕಾರಿಗಳ ಮತಿಃ=ಬುದ್ಧಿಯು ಗ್ರಾಮ್ಯಸುಖಾನು-ವಾದ್ಯೈಃ ನ ಗೃಹೀತಾ=ಪ್ರಾಪಂಚಿಕಸುಖಾದಿರೂಪ ಆಪಾತಪ್ರತೀತವಾದ ಅರ್ಥಗಳನ್ನು ಗ್ರಹಿಸುವುದಿಲ್ಲ. ಹರೇಃ ಕಥಾಯಾಮೇವ ಗೃಹೀತಾ=ಉಪಕ್ರಮಾದಿ ಲಿಂಗಗಳಿಂದ ಶ್ರೀಹರಿಯ ಕಥೆಯನ್ನೇ ಗ್ರಹಿಸುವುದೋ, ಅಂಥ ಭಾರತಂ ಆಹ= ಭಾರತವನ್ನು ಹೇಳಿರುವರು.

ಈ ಶ್ಲೋಕದಲ್ಲಿ ಯತ್ ಶಬ್ದವು ಶ್ರೀಕೃಷ್ಣನನ್ನು ಹೇಳುವುದು ಎಂದು ತೋರುವುದು ಅದನ್ನು ನಿವಾರಿಸಿ ಅರ್ಥ ಮತ್ತು ಅನ್ವಯ ಹೇಳುವರು –

**ಯಸ್ಮಿನ್ ಭಾರತೇ । ಹರೇಃ ಕಥಾಯಾಂ ಗ್ರಾಮ್ಯಸುಖಾನುವಾದ್ಯೈಃ ಮತಿಃ ನ ಗೃಹೀತಾ । "ಭಾರತಾನ್ನಾಧಿಕಂ ವಿಷ್ಣೋಃ ಮಹಿಮಾವಾಚಕಂ ಕ್ವಚಿತ್ । ಭಾರತಾನ್ನ ವಿರಾಗಾಯ ಭಾರತಾನ್ನ ವಿಮುಕ್ತಯೇ" ॥ ಇತಿ ಪಾದ್ಮೇ।**

ಉತ್ತಮಾಧಿಕಾರಿಗಳಿಗೆ, ಭಾರತವು ಉಪಕ್ರಮಾದಿಗಳಿಂದ ವಿಚಾರಮಾಡಲಾಗಿ ಶ್ರೀಹರಿಪ್ರತಿಪಾದಕವೆಂದು ತಿಳಿಯುತ್ತಿರಲು, ಗ್ರಾಮ್ಯಸುಖಾನುವಾದಕವಾಗಿದೆ ಭಾರತ ಎಂಬ ಬುದ್ಧಿ ಬರಲಿಲ್ಲ, ವಿಷ್ಣುಮಹಾತ್ಮ್ಯ ಹೇಳುವ ಗ್ರಂಥಗಳಲ್ಲಿ ಭಾರತಕ್ಕಿಂತ ಹೆಚ್ಚಿನದಾವುದೂ ಇಲ್ಲ, ವೈರಾಗ್ಯ ಹುಟ್ಟಿಸಲಾಗಲಿ ಮುಕ್ತಿಯನ್ನು ಸಂಪಾದಿಸಿ ಕೊಡುವಲ್ಲಾಗಲಿ ಭಾರತಕ್ಕಿಂತ ಶ್ರೇಷ್ಠ ಗ್ರಂಥ ಇನ್ನೊಂದಿಲ್ಲ ॥೧೨॥

**ಸಾ ಶ್ರದ್ದಧಾನಸ್ಯ ವಿವರ್ಧಮಾನಾ ವಿರಕ್ತಿಮನ್ಯತ್ರ ಕರೋತಿ ಪುಂಸಃ ।**
**ಹರೇಃ ಸದಾನುಸ್ಮೃತಿನಿರ್ವೃತಸ್ಯ ಸಮಸ್ತದುಃಖಾಪ್ಯಯಮಾಶು ಧತ್ತೇ ॥**

ಶ್ರದ್ದಧಾನಸ್ಯ=ಆಸ್ತಿಕ್ಯ ಬುದ್ಧಿಯುಳ್ಳ ಪುಂಸಃ=ಅಧಿಕಾರಿಗೆ ಸಾ=ಭಾರತದ ತಾತ್ಪರ್ಯವನ್ನು ತಿಳಿದಾಗ ಅದು ಗ್ರಾಮ್ಯಸುಖಾನುವಾದಕವೆಂದು ತಿಳಿಯದಿರುವ

ಬುದ್ಧಿಯು ವಿವರ್ಧಮಾನಾ=ಶ್ರೀಹರಿಕಥಾದಲ್ಲಿ ವಿಶೇಷವಾಗಿ ಅಭಿವೃದ್ಧಿಯನ್ನು ಪಡೆದುದಾಗಿ ಅನ್ಯತ್ರ=ವಿಷಯದಲ್ಲಿ ವಿರಕ್ತಿಂ ಕರೋತಿ=ವೈರಾಗ್ಯ ಹುಟ್ಟಿಸುವುದು. ನಂತರ ಸದಾ=ಯಾವಾಗಲು ಹರೇಃ=ಪರಮಾತ್ಮನ ಅನುಸ್ಮೃತಿನಿರ್ವೃತಸ್ಯ=ಧ್ಯಾನಾದಿಗಳಿಂದ ಅಸಂಪ್ರಜ್ಞಾತ ಸಮಾಧಿಯಲ್ಲಿ ಸ್ವರೂಪಾನಂದವನ್ನು ಪಡೆದವಗೆ ಸಮಸ್ತ-ದುಃಖಾಪ್ಯಯಂ=ಎಲ್ಲ ದುಃಖಗಳ ನಾಶವನ್ನು ಧತ್ತೇ=ಉಂಟುಮಾಡುವುದು.

ಮಂದಾಧಿಕಾರಿಗಳು ನನ್ನ ಕೃಪಾವಿಷಯರಾದ್ದರಿಂದ ಅವರಿಗೆ ಭಗವನ್ಮಾಹಾತ್ಮ್ಯ ಹೇಳಿರಿ ಎಂದು ಪ್ರಾರ್ಥಿಸುವನು –

**ತಾನ್ ಶೋಚ್ಯಶೋಚ್ಯಾನವಿದೋಽನುಶೋಚೇ**
**ಹರೇಃ ಕಥಾಯಾಂ ವಿಮುಖಾನಘೇನ ।**
**ಕ್ಷಿಣೋತಿ ದೇವೋಽನಿಮಿಷಸ್ತು ತೇಷಾ-**
**ಮಾಯುರ್ವೃಥಾವಾದಗತಿಸ್ಮೃತೀನಾಮ್ ॥೧೪॥**

ಅವಿದಃ=ಭಾರತದ ತಾತ್ಪರ್ಯವನ್ನು ತಿಳಿಯದ ಆದ್ದರಿಂದಲೇ ಅಘೇನ=ಪಾಪಜನಕವಾದ ಅನೇಕ ವ್ಯಸನಗಳಿಂದ ಹರೇಃ ಕಥಾಯಾಂ=ಶ್ರೀಹರಿಯ ಮಾಹಾತ್ಮ್ಯದಲ್ಲಿ ವಿಮುಖಾನ್=ಅಸಕ್ತರಾಗದಿರುವ ವೃಥಾವಾದಗತಿಸ್ಮೃತೀನಾಂ=ಪ್ರಯೋಜನವಿಲ್ಲದ ಮನ,ಮಾತು,ದೇಹಗಳ ವ್ಯಾಪಾರವುಳ್ಳ (ಹಾಳು ಹರಟೆ, ಅಗಮ್ಯ ಸ್ಥಳಗಮನ, ವಿಷಯ ಸ್ಮರಣ ಮಾಡವವರು) ತೇಷಾಂ=ಅಂಥವರ ಆಯುಃ=ಆಯುಷ್ಯವನ್ನು ತು=ವಿಶೇಷವಾಗಿ ಅನಿಮಿಷೋ ದೇವಃ=ಕಾಲನಾಮಕ ಶ್ರೀಹರಿಯು ಕ್ಷಿಣೋತಿ=ವ್ಯರ್ಥವಾಗಿ ನಾಶಮಾಡುವನು. ಆದ್ದರಿಂದ ಶೋಚ್ಯ-ಶೋಚ್ಯಾನ್ ತಾನ್=ಅತ್ಯಂತ ಶೋಚನೀಯರಾದ ಮಂದಾಧಿಕಾರಿಗಳನ್ನು ಕುರಿತು ಅನುಶೋಚೇ=ದುಃಖಿಸುವೆನು ॥೧೪॥

**ತದಸ್ಯ ಕೌಷಾರವ ಶರ್ಮದಾತು-**
**ರ್ಹರೇಃ ಕಥಾಮೇವ ಕಥಾಸು ಸಾರಂ ।**
**ಉದ್ಧೃತ್ಯ ಪುಷ್ಪೇಭ್ಯ ಇವಾರ್ತಬಂಧೋ**
**ಶಿವಾಯ ನಃ ಕೀರ್ತಯ ತೀರ್ಥಕೀರ್ತೇಃ ॥೧೫॥**

ಹೇ ಕೌಷಾರವ=ಮೈತ್ರೇಯರೇ ಆರ್ತಬಂಧೋ=ದುಃಖಿತರಿಗೆ ಬಂಧುವೇ ಅಸ್ಯ=ಅಧಿಕಾರಿಗಳಿಗೆ ತತ್=ನನ್ನ ಕೃಪಾವಿಷಯರಾದ್ದರಿಂದ ತೀರ್ಥಕೀರ್ತೇಃ=ಪಾವಿತ್ರ್ಯಜನಕವಾದ ಕೀರ್ತಿಯುಳ್ಳ ಶರ್ಮದಾತುಃ=ಮೋಕ್ಷಾದಿ ಪುರುಷಾರ್ಥ ಪ್ರದನಾದ ಹರೇಃ=ಪರಮಾತ್ಮನ ಕಥಾಸು=ಕಥಾಗಳಲ್ಲಿ ಸಾರಂ=ಶ್ರೇಷ್ಠವಾದ ಕಥಾಂ=

ಕಥಾವನ್ನು ನಃ ಶಿವಾಯ=ನಮ್ಮ ಕಲ್ಯಾಣಕ್ಕಾಗಿ ಪುಷ್ಪೇಭ್ಯಃ ಇವ=ಮಧುಕರವು ಹೂಗಳಿಂದ ಸಾರವನ್ನು ತೆಗೆಯುವಂತೆ ಉದ್ಧೃತ್ಯ=ಶಾಸ್ತ್ರಗಳಲ್ಲಿಯ ಸಾರವನ್ನುತೆಗೆದು ಕೀರ್ತಯ=ಹೇಳಿರಿ. ಇತರ ಸಕಲ ಕಥಾಗಳಿಗಿಂತ ಶ್ರೇಷ್ಠವಾದ ಶ್ರೀಹರಿಕಥಾವನ್ನೇ ಹೇಳಿರಿ ಎಂದು ಭಾವ ॥೧೫॥

**ಸ ವಿಶ್ವಜನ್ಮಸ್ಥಿತಿಸಂಯಮಾರ್ಥೇ**
**ಕೃತಾವತಾರಃ ಪ್ರಗೃಹೀತಶಕ್ತಿಃ ।**
**ಚಕಾರ ಕರ್ಮಾಣ್ಯತಿಪೌರುಷಾಣಿ**
**ಯಾನೀಶ್ವರಃ ಕೀರ್ತಯ ತಾನಿ ಮಹ್ಯಂ ॥೧೬॥**

ವಿಶ್ವಜನ್ಮಸ್ಥಿತಿಸಂಯಮಾರ್ಥೇ=ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರಗಳಿಗಾಗಿ ಕೃತಾವತಾರಃ=ವಾಸುದೇವಾದಿ ಅವತಾರಗಳನ್ನು ಸ್ವೀಕರಿಸಿದ ಪ್ರಗೃಹೀತಶಕ್ತಿಃ= ಇಚ್ಛಾಶಕ್ತಿಯನ್ನು ಸ್ವೀಕರಿಸಿದ ಪ್ರಕೃತಿ ಶಕ್ತಿಯನ್ನು ವಶಪಡಿಸಿಕೊಂಡ ಸಃ ಈಶ್ವರಃ=ಆ ಶ್ರೀಹರಿಯು ಅತಿಪೌರುಷಾಣಿ=ಬ್ರಹ್ಮಾದಿಗಳಿಗೂ ಮಾಡಲಾಗದ ಯಾನಿ ಕರ್ಮಾಣಿ=ಯಾವ ಕಾರ್ಯಗಳನ್ನು ಚಕಾರ=ಮಾಡಿದನೋ ತಾನಿ=ಅವುಗಳನ್ನು ಮಹ್ಯಂ=ನನಗೆ ಕೀರ್ತಯ=ಹೇಳು ॥೧೬॥

**ಶುಕ ಉವಾಚ**

**ಸ ಏವಂ ಭಗವಾನ್ ಪೃಷ್ಟಃ ಕ್ಷತ್ರಾ ಕೌಷಾರವಿರ್ಮುನಿಃ ।**
**ಪುಂಸಾಂ ನಿಃಶ್ರೇಯಸಾರ್ಥಾಯ ತಮಾಹ ಬಹುಮಾನಯನ್ ॥೧೭॥**

ಏವಂ=ಈ ರೀತಿಯಾಗಿ ಕ್ಷತ್ರಾ=ವಿದುರನಿಂದ ಪೃಷ್ಟಃ=ಪ್ರಶ್ನಿಸಲ್ಪಟ್ಟ ಭಗವಾನ್= ಪೂಜ್ಯರಾದ ಕೌಷಾರವಿಃ ಮುನಿಃ=ಮೈತ್ರೇಯ ಮಹರ್ಷಿಗಳು ಪುಂಸಾಂ=ಜನರಿಗೆ ನಿಃಶ್ರೇಯಸಾರ್ಥಾಯ=ಮೋಕ್ಷವನ್ನು ಸಾಧಿಸಲು ತಂ=ವಿದುರನನ್ನು ಬಹುಮಾನ- ಯನ್=ಗೌರವಿಸುವವರಾಗಿ (ವಿದುರನನ್ನು ಕುರಿತು) ಆಹ=ಹೇಳಿದರು ॥೧೭॥

**ಮೈತ್ರೇಯ ಉವಾಚ**

**ಸಾಧು ಪೃಷ್ಟಂ ತ್ವಯಾ ಸಾಧೋ ಲೋಕಾನ್ ಸಾಧ್ವನುಗೃಹ್ಣತಾ ।**
**ಕೀರ್ತಿಂ ವಿತನ್ವತಾ ಲೋಕೇ ಆತ್ಮನೋಽಧೋಕ್ಷಜಾತ್ಮನಃ ॥೧೮॥**

ಹೇ ಸಾಧೋ=ಸಜ್ಜನನಾದ ವಿದುರನೇ ಲೋಕಾನ್=ಮಂದಾಧಿಕಾರಿಗಳನ್ನು ಸಾಧು=ಚೆನ್ನಾಗಿ ಅನುಗೃಹ್ಣತಾ=ಅನುಗ್ರಹಿಸುವ ಲೋಕೇ=ಜಗತ್ತಿನಲ್ಲಿ ಅಧೋಕ್ಷ- ಜಾತ್ಮನಃ=ಶ್ರೀಹರಿಯಲ್ಲಿ ಮನಸಿಟ್ಟ ಆತ್ಮನಃ=ನನ್ನ ಕೀರ್ತಿಂ=ಕೀರ್ತಿಯನ್ನು

ವಿತನ್ವತಾ=ವಿಸ್ತಾರಗೊಳಿಸುವ ತ್ವಯಾ=ನಿನ್ನಿಂದ ಸಾಧು ಪೃಷ್ಟಂ=ಒಳ್ಳೇ ಪ್ರಶ್ನೆಯೇ ಮಾಡಲ್ಪಟ್ಟಿದೆ. ಅಥವಾ ಅಧೋಕ್ಷಜಾತ್ಮನಃ=ಇಂದ್ರಿಯಅಗೋಚರಸ್ವಭಾವವುಳ್ಳ ಆತ್ಮನಃ=ಸ್ವಾಮಿಯಾದಪರಮಾತ್ಮನ ಕೀರ್ತಿಂ=ಕೀರ್ತಿಯನ್ನು ವಿತನ್ವತಾ= ವಿಸ್ತಾರಗೊಳಿಸುವ ಎಂದೂ ಅನ್ವಯವನ್ನು ಮಾಡಬಹುದು ॥೧೮॥

**ನೈತಚ್ಚಿತ್ರಂ ತ್ವಯಿ ಕ್ಷತ್ತರ್ಬಾದರಾಯಣವೀರ್ಯಜೇ ।**
**ಗೃಹಿತೋಽನನ್ಯಭಾವೇನ ಯತ್ ತ್ವಯಾ ಹರಿರೀಶ್ವರಃ ॥೧೯॥**

ಯತ್=ಯಾವ ಕಾರಣ ತ್ವಯಾ=ನಿನ್ನಿಂದ ಈಶ್ವರಃ=ಸರ್ವನಿಯಾಮಕನಾದ ಹರಿಃ=ಶ್ರೀಹರಿಯು ಅನನ್ಯಭಾವೇನ=ಅಸಾಧಾರಣ ಭಕ್ತಿಯಿಂದ ಗೃಹೀತಃ= ತಿಳಿಯಲ್ಪಟ್ಟಿದ್ದಾನೆಯೋ ಅತಃ=ಆದ್ದರಿಂದ ಬಾದಾರಾಯಣವೀರ್ಯಜೇ=ವ್ಯಾಸ ಪುತ್ರನಾದ (ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಜನಿಸಿದ) ತ್ವಯಿ=ನಿನ್ನಲ್ಲಿ ಹೇ ಕ್ಷತ್ತಃ= ವಿದುರನೇ ಏತತ್=ಈವಿಧ ಪ್ರಶ್ನೆ ಮಾಡುವುದು ನ ಚಿತ್ರಂ=ಆಶ್ಚರ್ಯವಲ್ಲ ॥೧೯॥

**ಮಾಂಡವ್ಯಶಾಪಾದ್ಭಗವಾನ್ ಪ್ರಜಾಸಂಯಮನೋ ಯಮಃ ।**
**ಭ್ರಾತುಃ ಕ್ಷೇತ್ರೇ ಭುಜಿಷ್ಯಾಯಾಂ ಜಾತಃ ಸತ್ಯವತೀಸುತಾತ್ ॥೨೦॥**

ಭಗವಾನ್=ಪೂಜ್ಯನಾದ ಪ್ರಜಾಸಂಯಮನಃ=ಪ್ರಜೆಗಳಿಗೆ ಅವರ ಕರ್ಮಾನು- ಸಾರ ದಂಡಮಾಡುವ ಯಮಃ=ಯಮದೇವನು ಮಾಂಡವ್ಯಶಾಪಾತ್= ಮಾಂಡವ್ಯಋಷಿಯ ಶಾಪದಿಂದ ಭ್ರಾತುಃ=ತಮ್ಮನಾದ ವಿಚಿತ್ರವೀರ್ಯನ ಕ್ಷೇತ್ರೇ ಭುಜಿಷ್ಯಾಯಾಂ=ಹೆಂಡತಿಯಾಗಿ ಸ್ವೀಕರಿಸಿದ ದಾಸಿಯಲ್ಲಿ ಸತ್ಯವತೀಸುತಾತ್= ವ್ಯಾಸರಿಂದ ಜಾತಃ=ಹುಟ್ಟಿದವನು. ಈ ಕಾರಣದಿಂದಲೂ ದೇವತೆಯಾದ್ದರಿಂದ ಈ ವಿಧ ಪ್ರಶ್ನೆ ಆಶ್ಚರ್ಯಕರವಲ್ಲ. ॥೨೦॥

**ಭವಾನ್ ಭಾಗವತೋ ನಿತ್ಯಂ ಸಮ್ಮತಃ ಸಾನುಗಸ್ಯ ಹಿ ।**
**ಜ್ಞಾನೋಪದೇಶಾಯ ಚ ಮಾಮಾದಿಶದ್ ಭಗವಾನ್ ವ್ರಜನ್ ॥**

ವ್ರಜನ್=ಪರಂಧಾಮಕ್ಕೆ ಹೊರಟ ಭಗವಾನ್=ಶ್ರೀಕೃಷ್ಣನು ಜ್ಞಾನೋಪ- ದೇಶಾಯ=ನಿನಗೆ ತತ್ವೋಪದೇಶ ಮಾಡಲು ಮಾಂ=ನನ್ನನ್ನು ಆದಿಶತ್=ಆಜ್ಞಾಪಿಸಿ- ರುವನು. ಆದ್ದರಿಂದ ಭವಾನ್=ನೀನು ಸಾನುಗಸ್ಯ ಭಗವತಃ=ಪರಿವಾರ ಸಹಿತನಾದ ಶ್ರೀಹರಿಗೆ ನಿತ್ಯಂ ಸಮ್ಮತಃ=ಸರ್ವದಾ ಪ್ರಿಯನೆಂದು ಸಮ್ಮತನು. ಆದ್ದರಿಂದಲೂ ಯುಕ್ತವೇ ॥೨೧॥

**ಅಥ ತೇ ಭಗವಲ್ಲೀಲಾ ಯೋಗಮಾಯೋಪಬೃಂಹಿತಾಃ ।**
**ವಿಶ್ವಸ್ಥಿತ್ಯುದ್ಭವಾಂತಾರ್ಥಾ ವರ್ಣಯಾಮ್ಯಾನುಪೂರ್ವಶಃ ॥೨೨॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಪಂಚಮೋಽಧ್ಯಾಯಃ ॥*

ಅಥ=ಪ್ರಶ್ನೆ ಮಾಡುವ ನೀನು ಈ ರೀತಿ ಇರುವುದರಿಂದ ತೇ=ನಿನಗೆ ಯೋಗಮಾಯೋಪಬೃಂಹಿತಾಃ=ಸ್ವರೂಪಸಾಮರ್ಥ್ಯ ಮತ್ತು ಪ್ರಕೃತಿಗಳಿಂದ ವರ್ಧಿತವಾದ ವಿಶ್ವಸ್ಥಿತ್ಯುದ್ಭವಾಂತಾರ್ಥಾಃ=ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳೆ ವಿಷಯವಾಗಿವುಳ್ಳ ಭಗವಲ್ಲೀಲಾಃ=ಭಗವನ್ಮಾಹಾತ್ಮ್ಯವನ್ನು ಅನುಪೂರ್ವಶಃ ವರ್ಣಯಾಮಿ=ಕ್ರಮವಾಗಿ ಹೇಳುವೆನು ॥೨೨॥

*ಇಲ್ಲಿಗೆ ಐದನೆಯ ಅಧ್ಯಾಯವು ಮುಗಿಯಿತು.*

# ಐದನೆಯ ಅಧ್ಯಾಯದ ತಾತ್ಪರ್ಯ

ಶುಕಾಚಾರ್ಯರು - ಮೈತ್ರೇಯರು ಹರಿದ್ವಾರದಲ್ಲಿ ನೆಲಸಿದ್ದರು. ಅವರ ಜ್ಞಾನವು ಅಳತೆಯನ್ನು ಮೀರಿತ್ತು. ಅವರ ಬಳಿಗೆ ಕುರುವಂಶದವರಲ್ಲಿ ಉತ್ತಮರೆನಿಸಿದ ವಿದುರರು ಬಂದರು. ಶ್ರೀಹರಿಯ ಸ್ಮರಣೆಯಿಂದ ಅವರ ಮನಸ್ಸು ಶುದ್ಧವಾಗಿತ್ತು. ತಮ್ಮ ಸೌಶೀಲ್ಯ ಮೊದಲಾದ ಗುಣಗಳಿಂದ ಮೈತ್ರೇಯರನ್ನು ಸೇವಿಸಿ ಪ್ರಸನ್ನೀಕರಿಸಿಕೊಂಡರು. ಪ್ರಸನ್ನರಾಗಿದ್ದ ಮೈತ್ರೇಯರನ್ನು ಕುರಿತು "ಜನರು ಸುಖವನ್ನು ಪಡೆಯಬೇಕೆಂದು ಕರ್ಮಗಳನ್ನು ಮಾಡುವರು ಆದರೆ ಅದರಿಂದ ಸುಖವನ್ನೂ ಪಡೆಯುವುದಿಲ್ಲ. ದುಃಖದ ನಿವೃತ್ತಿಯನ್ನೂ ಪಡೆಯುವುದಿಲ್ಲ. ಅದಕ್ಕೆ ಬದಲು ಮತ್ತೆ ಮತ್ತೆ ದುಃಖಕ್ಕೆ ಈಡಾಗುವರು. ಆದ್ದರಿಂದ ಕರ್ಮಗಳನ್ನು ಯಾವ ರೀತಿಯಲ್ಲಿ ಮಾಡಿದರೆ ಅವರು ದುಃರಹಿತಸುಖಸ್ವರೂಪವಾದ ಮೋಕ್ಷವನ್ನು ಪಡೆಯುವರು ? ಮತ್ತೆ ದುಃಖರೂಪವಾದ ಸಂಸಾರಕ್ಕೆ ಬಾರದಿರುವರು ? ಮುಕ್ತಿಯೋಗ್ಯರಾದ ಜನರು ಸ್ವತಃ ಜ್ಞಾನವಿಲ್ಲದ್ದರಿಂದಲೂ,ಸರಿಯಾದ ಉಪದೇಶಕರು ದೊರೆಯದ್ದರಿಂದಲೂ ಶ್ರೀಹರಿಯನ್ನು ಮರೆತು ಅಧರ್ಮಕಾರ್ಯಗಳನ್ನೇ ಮಾಡುವರಾಗಿ ದುಃಖಿತರಾಗಿರುವರು. ಇವರನ್ನು ಅನುಗ್ರಹಿಸುವ ಸಲುವಾಗಿಯೇ ಶ್ರೀಹರಿಯ ಚಲಪ್ರತಿಮೆಗಳೆನಿಸಿದ ಅಪರೋಕ್ಷಜ್ಞಾನಿಗಳು ಸಂಚರಿಸುವರಲ್ಲವೇ !

ಸಾಧುವರ್ಯ ! ಸಜ್ಜನರಲ್ಲಿ ಅನುಗ್ರಹಮಾಡುವುದೇ ತಮ್ಮ ಧ್ಯೇಯವು. ಯಾವ ರೀತಿಯಲ್ಲಿ ಶ್ರೀಹರಿಯನ್ನು ಆರಾಧಿಸಿದರೆ ಅವನು ಭಕ್ತಿಶುದ್ಧವಾದ ಭಕ್ತರ ಹೃದಯದಲ್ಲಿ ನೆಲಸುವನು? ಅವನ ಜಗದ್ವ್ಯಾಪ್ತತೆಯನ್ನು ತಿಳಿಸುವ ಸಾಂಪ್ರದಾಯಿಕ ಜ್ಞಾನವನ್ನು ಕರುಣಿಸವನು ? ಆ ಜ್ಞಾನವೇ ಸುಖಾನುಭವರೂಪವಾದ ಮೋಕ್ಷಕ್ಕೆ ಮಾರ್ಗವಾದ್ದರಿಂದ ಅದನ್ನು ಉಪದೇಶಿಸಿ ಅನುಗ್ರಹಿಸಿರಿ. ಶ್ರೀಹರಿಯು ಸ್ವತಂತ್ರನು. ಮೂರು ಲೋಕಗಳಿಗೂ ಮುಖ್ಯಾಧಿಪತಿಯು. ಅವನು ಅವತಾರ-ಗಳಲ್ಲಿ ಮಾಡಿದ ಕಾರ್ಯಗಳನ್ನು ವರ್ಣಿಸಿರಿ. ಪರಿಪೂರ್ಣನೂ ನಿರಾಕಾಂಕ್ಷನೂ ಆದ ಶ್ರೀಹರಿಯು ಈ ಜಗತ್ತನ್ನು ಮೊದಲು ಹೇಗೆ ಸೃಷ್ಟಿಸಿದನು ? ಧರ್ಮವನ್ನು ಸ್ಥಾಪಿಸಿ ಹೇಗೆ ಅದನ್ನು ಪಾಲನೆ ಮಾಡುತ್ತಿರುವನು? ಮತ್ತೆ ಪ್ರಳಯಕಾಲದಲ್ಲಿ ಹೇಗೆ ಎಲ್ಲವನ್ನೂ ತನ್ನ ಉದರದಲ್ಲಿಟ್ಟುಕೊಂಡವನಾಗಿ ಸೃಷ್ಟಿ ಮೊದಲಾದ ವ್ಯಾಪಾರಗಳಿಂದ ನಿವೃತ್ತನಾಗಿ ಮಲಗುವನು ? ತಾನೊಬ್ಬನೇ ಈ ವಿವಿಧ ಜಗತ್ತಿನಲ್ಲಿ ಅಂತರ್ಯಾಮಿಯಾಗಿ ಪ್ರವೇಶಿಸಿ ಹೇಗೆ ಅನೇಕ ರೂಪಗಳಿಂದ ಅನಾಯಾಸವಾಗಿ ಎಲ್ಲವನ್ನೂ ನಿಯಮಿಸುತ್ತಿರುವನು ? ಬೇರೆ ಬೇರೆ ಅವತಾರಗಳಲ್ಲಿ ಶ್ರೀಹರಿಯು ದೇವ ಬ್ರಾಹ್ಮಣ ಗೋವುಗಳ ರಕ್ಷಣೆಗಾಗಿ ಏನೇನು ಕಾರ್ಯಗಳನ್ನು ಮಾಡಿದನು ? ಅವನ ಕೀರ್ತಿಯು ಕಳಂಕವಿಲ್ಲದುದು. ಅವನ ಚರಿತೆ ಅಮೃತದಂತೆ ರುಚಿಕರ-ವಾದುದು. ಅದನ್ನು ಎಷ್ಟು ಕೇಳಿದರೂ ಸಾಕೆನ್ನಿಸುವುದಿಲ್ಲ.

ಲೋಕಪಾಲಕರಿಗೂ ಪಾಲಕನಾದ ಶ್ರೀಹರಿಯು ಮಹತ್ತತ್ತ್ವ ಮೊದಲಾದ ಬೇರೆ ಬೇರೆ ತತ್ತ್ವಗಳಿಂದ ಬ್ರಹ್ಮಾಂಡದ ಹೊರಗಣ ಆವರಣಗಳನ್ನೂ, ಬ್ರಹ್ಮಾಂಡದ ಒಳಗಣ ಲೋಕಗಳನ್ನೂ ಅವುಗಳ ಪಾಲಕರಾದ ದೇವತೆಗಳನ್ನೂ ಹೇಗೆ ಸೃಷ್ಟಿಸಿದನು? ಆ ಲೋಕಗಳಲ್ಲಿ ದೇವತೆಗಳು ಮನುಷ್ಯರು ಇತ್ಯಾದಿ ಪ್ರಾಣಿಗಳನ್ನು ಅವರವರ ಸಾಧನೆಗಾಗಿ ನಿಯಮನಗೊಳಿಸಿರುವನೆಂದು ಪ್ರಮಾಣಗಳಿಂದ ತಿಳಿದು ಬಂದಿರುವ ರೀತಿಯನ್ನೂ ದಯಮಾಡಿ ತಿಳಿಸಿರಿ. ಶ್ರೀಹರಿಗೆ ಕಾರಣರು ಮತ್ತೊಬ್ಬರಿಲ್ಲ. ಅವನೇ ಬ್ರಹ್ಮನನ್ನು ಸೃಷ್ಟಿಸಿದನು. ಆ ಶ್ರೀಹರಿಯು ದೇಹ, ಸ್ವಭಾವ, ಅದೃಷ್ಟ ಆಕಾರ ಮತ್ತು ಹೆಸರುಗಳಿಂದ ಒಂದಕ್ಕಿಂತ ಒಂದು ಭಿನ್ನವೆಂದು ಹೇಗೆ ಸ್ಥಿರಪಡಿಸಿರುವನೆಂಬುದನ್ನೂ ನಮಗಾಗಿ ಬಣ್ಣಿಸುವ ಕೃಪೆಮಾಡಬೇಕು. ಬ್ರಹ್ಮಾದಿದೇವತೆಗಳ, ಮನುಷ್ಯರ ಚರಿತ್ರೆಗಳನ್ನು ವೇದವ್ಯಾಸರ ಮುಖದಿಂದಲೇ ಅನೇಕಸಲ ಕೇಳಿರುವೆನು. ಅವರ ಮಹಿಮೆಗಳೆಲ್ಲವೂ ಶ್ರೀಹರಿಯ ಮಹಿಮೆಯನ್ನೇ ಅವಲಂಬಿಸಿರುವುದರಿಂದ ಅವೂ ಭಗವನ್ಮಹಿಮೆಯನ್ನೇ ಪ್ರತಿಪಾದಿಸುತ್ತವೆ. ಹೀಗೆ ಅವುಗಳ ತಾತ್ಪರ್ಯವನ್ನು ಅರಿತಾಗಲೇ ಅವು ನಮ್ಮ ಕಿವಿಗಳಿಗೆ ಆನಂದವನ್ನುಂಟುಮಾಡುವುವು. ಆ ಚರಿತಾಮೃತವನ್ನು ಎಷ್ಟು ಪಾನಮಾಡಿದರೂ ತೃಪ್ತಿಯಿಲ್ಲ. ಇಂತಹ ಉತ್ತಮ-ಗ್ರಂಥವೇ ಭಾರತ. ಇದನ್ನು ಸತ್ರಯಾಗಗಳಲ್ಲಿ ಸೂತರು ಮೊದಲಾದ ಜ್ಞಾನಿಗಳು. ಪ್ರಶಂಸಿರುವರು ಇದನ್ನು ಕೇಳುವುದರಿಂದ ಶ್ರೀಹರಿಯು ಭಕ್ತರ ಮನಸ್ಸಿನಲ್ಲಿ ನೆಲಸಿ ಸಂಸಾರಭಯಕ್ಕೆ ಕಾರಣವಾದ ಲೌಕಿಕ ವಿಷಯಾಭಿಮಾನವನ್ನೇ ಹೋಗಲಾಡಿಸುವನು. ಶ್ರೀಹರಿಯ ಮಹಿಮಾ ಪ್ರತಿಪಾದಕವಾದ ಭಾರತವನ್ನು ಕೇಳಿ ಯಾವ ಭಕ್ತನ ಮನಸ್ಸುತಾನೇ ತೃಪ್ತಿಯನ್ನು ಹೊಂದೀತು ? ನಿಮ್ಮ ಸ್ನೇಹಿತರೂ ಸರ್ವಜ್ಞರೂ ಆದ ವೇದವ್ಯಾಸರು ಶ್ರೀಹರಿಯ ಗುಣಗಳನ್ನು ಹೇಳಬಯಸಿ ಭಾರತವನ್ನು ಬರೆದರು. ಅದರ ಅಭ್ಯಾಸದಿಂದ ಯೋಗ್ಯಜೀವರ ಬುದ್ಧಿಯು ಗ್ರಾಮ್ಯಸುಖಾನುವಾದಗಳನ್ನು ಬಿಟ್ಟು ಶ್ರೀಹರಿಯ ಮಹಿಮೆಯನ್ನು ತಿಳಿಯುವುದರಲ್ಲಿಯೇ ಆಸಕ್ತವಾಗುವುದು. ಇಂತಹ ಶ್ರದ್ಧಾವಂತರ ಮನಸ್ಸು ಶ್ರೀಹರಿಯ ಕಥೆಯಲ್ಲಿಯೇ ಹೆಚ್ಚು ಹೆಚ್ಚು ಆಸಕ್ತವಾಗುತ್ತ ಬಂದು ಲೌಕಿಕ ವಿಷಯಗಳನ್ನು ನಶ್ವರವಾದ್ದರಿಂದ ಹೇಯವೆಂದು ತಿಳಿದು ಅವುಗಳಲ್ಲಿ ವಿರಕ್ತವಾಗುವುದು. ಇದರಿಂದ ಭಕ್ತಿಮೂಡುವುದು. ಭಕ್ತಿಯಿಂದ ಮಾಡಿದ ಉಪಾಸನೆಯಿಂದ ಶ್ರೀಹರಿಯ ಅಪರೋಕ್ಷವಾಗುವುದು. ಶ್ರೀಹರಿಯ ದರ್ಶನದಿಂದ ಸಮಸ್ತ ದುಃಖಗಳೂ ನಿವೃತ್ತವಾಗಿ ಸ್ವರೂಪಾನಂದಾನು-ಭವರೂಪವಾದ ಮೋಕ್ಷವು ದೊರೆಯುವುದು.

ವಿಷಯಾಸಕ್ತರಿಗೆ ಶ್ರೀಹರಿಯ ಕಥೆಯಲ್ಲಿ ಆದರವಿರುವುದಿಲ್ಲ. ಅವರನ್ನು ನೋಡಿದರೆ ನನಗೆ ಕನಿಕರವೆನಿಸುತ್ತದೆ. ಅವರ ವಾದಗಳು ಶ್ರೀಹರಿಗೆ ಸಮ್ಮತಗಳಲ್ಲ. ಅವರ ಜ್ಞಾನವು ಮೋಕ್ಷಕ್ಕೆ ಕಾರಣವಲ್ಲ. ಅವರು ಸ್ಮರಿಸುವ ವಿಷಯಗಳು ಅವರನ್ನು

ಸಂಸಾರದಿಂದ ಕಡೆಹಾಯಿಸುವುದಿಲ್ಲ. ಅವರ ಸಂಪೂರ್ಣ ಜೀವಿತವೇ ವ್ಯರ್ಥ. ಆದ್ದರಿಂದ ಶ್ರೀಹರಿಯಲ್ಲಿ ಆಸಕ್ತನಾಗಿ ಆಯುಸ್ಸನ್ನು ಸಾರ್ಥಕಪಡಿಸಿಕೊಳ್ಳಬೇಕು. ಆದ್ದರಿಂದ ಮೈತ್ರೇಯರೆ, ಕಥೆಗಳಲ್ಲೆಲ್ಲ ಸಾರವಾದ ಶ್ರೀಹರಿಯ ಕಥೆಯನ್ನೇ ಹೇಳಿರಿ. ಅವನೇ ಮೋಕ್ಷದಾತನು. ಹೂಗಳಿಂದ ರಸವನ್ನು ಸಂಗ್ರಹಿಸಿ ಕೊಡುವ ದುಂಬಿಯಂತೆ ತಾವು ಭಾರತಾದಿ ಶಾಸ್ತ್ರಗಳಿಂದ ಶ್ರೀಹರಿಯ ಪವಿತ್ರಕೀರ್ತಿಯನ್ನು ಸಂಗ್ರಹಿಸಿ ತಿಳಿಸಿರಿ. ನೀವು ದುಃಖಿತರ ಅನಿಮಿತ್ತ ಬಂಧುಗಳು. ದುಃಖಿತರಾದ ನಮ್ಮ ಕ್ಷೇಮಕ್ಕಾಗಿ ಶ್ರೀಹರಿಯ ಚರಿತ್ರೆಯನ್ನು ತಿಳಿಸಿರಿ. ಶ್ರೀಹರಿಯು ತನ್ನ ಸೃಷ್ಟಿಮಾಡ-ಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿ ಪ್ರಕೃತಿಯ ಸಾಮರ್ಥ್ಯವನ್ನು ಕಾರ್ಯಕಾರಿ-ಯಾಗುವಂತೆ ಮಾಡಿ ಜಗತ್ತಿನ ಸೃಷ್ಟಿ ಸ್ಥಿತಿ, ಸಂಹಾರಗಳಿಗಾಗಿ ವಾಸುದೇವ ಮೊದಲಾದ ರೂಪಗಳಿಂದ ವ್ಯಕ್ತನಾದನು. ಬ್ರಹ್ಮರುದ್ರಾದಿ ದೇವತೆಗಳಿಗೆ ನಿಯಾಮಕನಾದ ಅವನು ಆ ದೇವತೆಗಳಿಂದ ಮಾಡಲಾಗದ ಕಾರ್ಯಗಳನ್ನು ಮಾಡಿರುವನು. ಅಂತಹ ಕಾರ್ಯಗಳನ್ನು ನನಗೆ ತಿಳಿಯಹೇಳಿರಿ.

ಶುಕಾಚಾರ್ಯರು - ಪರೀಕ್ಷಿದ್ರಾಜ ! ಯೋಗ್ಯಜೀವರ ಶ್ರೇಯಸ್ಸಿಗಾಗಿ ವಿದುರರು ಮಾಡಿದ ಪ್ರಶ್ನೆಯನ್ನು ಕೇಳಿ ಮೈತ್ರೇಯರು ಮೆಚ್ಚಿ ಹೇಳಲಾರಂಭಿಸಿದರು.

ಮೈತ್ರೇಯರು - ವಿದುರ ! ನೀನು ಸಾಧುವು. ಜನರನ್ನು ಅನುಗ್ರಹಿಸಲೆಂದೇ ನೀನು ಹೀಗೆ ಪ್ರಶ್ನಿಸಿರುವೆ. ಇದರಿಂದ ಶ್ರೀಹರಿಯನ್ನೇ ನೆನೆಯುವ ನಿನ್ನ ಮತ್ತು ನನ್ನ ಕೀರ್ತಿಯು ಲೋಕದಲ್ಲಿ ಶಾಶ್ವತವಾಗುವುದು. ಶ್ರೀಹರಿಯಲ್ಲಿ ನಿನಗಿರುವ ಈ ಅನನ್ಯಭಕ್ತಿಯು ಆಶ್ಚರ್ಯವೇನಲ್ಲ. ನೀನು ವೇದವ್ಯಾಸರ ಅನುಗ್ರಹದಿಂದ ಜನಿಸಿದವನು. ಪ್ರಜೆಗಳನ್ನು ಧರ್ಮಾಧರ್ಮಗಳಿಂದ ನಿಯಮಿಸುವ ಯಮಧರ್ಮ-ನೆಂಬ ದೇವತೆಯೇ ನೀನು. ಮಾಂಡವ್ಯರ ಶಾಪದಿಂದ ನೀನು ಶೂದ್ರಯೋನಿ-ಯಲ್ಲಿ ಜನಿಸಿರುವೆ. ವಿಚಿತ್ರವೀರ್ಯನ ಉಪಭೋಗಾರ್ಹಳಾದ ಶೂದ್ರಸ್ತ್ರೀಯಲ್ಲಿ ವೇದವ್ಯಾಸರ ಅನುಗ್ರಹದಿಂದ ಬಂದಿರುವೆ. ನೀನು ಭಗವದ್ಭಕ್ತರಿಗೂ ಭಗವಂತನಿಗೂ ಯಾವಾಗಲೂ ಪ್ರಿಯನು. ಆದ್ದರಿಂದಲೇ ಈ ಲೋಕದಿಂದ ಅವ್ಯಕ್ತನಾಗಲಿದ್ದ ಶ್ರೀಕೃಷ್ಣನು ನಿನಗೆ ಜ್ಞಾನೋಪದೇಶ ಮಾಡುವಂತೆ ನನಗೆ ಆಜ್ಞೆಮಾಡಿರುವನು. ಇನ್ನು ಮುಂದೆ ಕ್ರಮವಾಗಿ ನಿನಗೆ ಶ್ರೀಹರಿಯ ಲೀಲೆಗಳನ್ನೇ ಹೇಳುತ್ತೇನೆ. ಇವುಗಳು ಶ್ರೀಹರಿಯ ಸಾಮರ್ಥ್ಯವನ್ನು ತಿಳಿಸುವುವು. ಜಗತ್ತಿನ ಸೃಷ್ಟಿ ಸ್ಥಿತಿ, ಲಯಗಳೇ ಇವುಗಳಿಗೆ ಪ್ರಯೋಜನ.



## ಅಥ ಷಷ್ಠೋಽಧ್ಯಾಯಃ

ಶ್ರೀ ಹರಿಯ ಸೃಷ್ಟಿವಿಷಯಕ ಲೀಲೆಯನ್ನು ವರ್ಣಿಸಲು ಸೃಷ್ಟಿಯ ಮೊದಲಿನ ಸ್ಥಿತಿಯನ್ನು ಹೇಳುವರು

**ಮೈತ್ರೇಯ ಉವಾಚ**

**ಭಗವಾನೇಕ ಆಸೇದಮಗ್ರ ಆತ್ಮಾಽಽತ್ಮನಾಂ ವಿಭುಃ ।**
**ಆತ್ಮೇಚ್ಛಾನುಗತೋ ಹ್ಯಾತ್ಮಾ ನಾನಾಶಕ್ತ್ಯು (ಮತ್ತ್ಯು)ಪಲಕ್ಷಿತಃ ॥೧॥**

ಇದಮಗ್ರೇ=ಪ್ರಪಂಚದ ಮೊದಲು ಪ್ರಳಯಕಾಲದಲ್ಲಿ ಆತ್ಮಾ=ಜೀವ ಸಮೂಹವು ಯತಃ ಆತ್ಮೇಚ್ಛಾನುಗತಃ=ಪರಮಾತ್ಮನ ಇಚ್ಛಾನುಸಾರ ವರ್ತಿಸುವುದರಿಂದ ಅಸ್ವತಂತ್ರವಾದ ಕಾರಣ ಆತ್ಮನಾಂ=ಜೀವರುಗಳಿಗೆ ವಿಭುಃ=ಅಧಿಪತಿಯಾದ ಆತ್ಮಾ= ಆದಾನಾದಿಸಂಹಾರ ಕರ್ತೃವಾದ,ಭಗವಾನ್=ಶ್ರೀಹರಿಯು, ನಾನಾಶಕ್ತ್ಯುಪಲಕ್ಷಿತಃ= ಅನೇಕವಿಧವಾದ ಪ್ರಕೃತಿ ಮುಂತಾದ ಉಪಾದಾನಕಾರಣ ಮತ್ತು ಕಾಲ, ಅದೃಷ್ಟ ಮೊದಲಾದ ನಿಮಿತ್ತ ಕಾರಣಗಳ ನಿಯಾಮಕಶಕ್ತಿಯಿಂದ ಯುಕ್ತನಾಗಿ ಏಕಃ= ಸ್ವತಂತ್ರನಾಗಿ ಒಬ್ಬನೇ ಆಸ=ಇದ್ದನು.

ಈ ರೀತಿ ಅರ್ಥ ಮಾಡಿದ್ದರಿಂದ ಜೀವಾದಿಗಳೂ ಇರುವುದರಿಂದ ಆ ಕಾಲದಲ್ಲಿ ಒಬ್ಬನೇ ಇದ್ದನೆಂದು ಹೇಳಿದುದು ಸರಿಯಲ್ಲ ಎಂಬ ಶಂಕೆಗೂ ಮತ್ತು ಉಪಾದಾನ ನಿಮಿತ್ತಗಳಿಲ್ಲದೆ ಶ್ರೀಹರಿಯಿಂದ ಜಗತ್ಸೃಷ್ಟಿ ಹೇಗೆ? ಅವುಗಳಿದ್ದರೆ, ಅವುಗಳ ಅಪೇಕ್ಷೆಯಿರುವುದರಿಂದ ಇವನು ಸ್ವತಂತ್ರನು ಹೇಗೆ ? ಎಂಬ ಶಂಕೆಗೂ ಅವಕಾಶವಿಲ್ಲ. ಸ್ವತಂತ್ರನಾದವನು ಒಬ್ಬನೇ ಇದ್ದನು. ಅವನ ಅಧೀನವಾದ

ಉಪಾದಾನಾದಿಗಳೂ ಇದ್ದವು. ಸ್ವೇಚ್ಛೆಯಿಂದ ಅವನ್ನು ಸ್ವೀಕರಿಸುವುದರಿಂದ ಸ್ವಾತಂತ್ರ್ಯ ಹಾನಿಯಿಲ್ಲ (ಅವುಗಳಿಲ್ಲದೆ ಮಾಡಲಾಗುವುದಿಲ್ಲವೆಂದಲ್ಲ) ಎಂದು ಉತ್ತರಿಸಿದಂತಯಿತು. 'ಆತ್ಮೇಚ್ಛಾನುಗತಃ' ಸೃಷ್ಟಿಸುವೆನು ಎಂಬ ಸ್ವರೂಪ ಇಚ್ಛೆಯಿಂದ ಕೂಡಿದವನು ಹೀಗೂ ಅರ್ಥ. 'ನಾನಾಮತ್ಯುಪಲಕ್ಷಿತಃ' ಎಂಬ ಪಾಠವಿರುವಾಗ 'ಸದೇವ ಸೋಮ್ಯ ಇದಮಗ್ರ ಆಸೀತ್' ಮುಂತಾದ ಶ್ರುತಿಗಳ ತಾತ್ಪರ್ಯಾರ್ಥ ತಿಳಿಯದ ಅಜ್ಞಾನಿಗಳ ಅನೇಕವಾದಗಳಿಂದ ಕೂಡಿದ ಎಂದರ್ಥ. ಇಲ್ಲಿ 'ಆತ್ಮನಾಂಆತ್ಮಾ' ಜೀವರ ಸ್ವರೂಪನು ಎಂಬ ಅನ್ಯಥಾ ಪ್ರತೀತಿಯನ್ನು ನಿರಾಕರಿಸಲು ವಿವಕ್ಷಿತ ಅನ್ವಯ ತೋರಿಸಿ,ಎರಡೂ ಪದಗಳ ಅರ್ಥ ಹೇಳುವರು -

**ಆತ್ಮನಾಂ ವಿಭುಃ ಜೀವಾಧಿಪತಿಃ ।**

ಇದರಿಂದ ಆತ್ಮನಾಂ=ಜೀವರಿಗೆ, ವಿಭುಃ=ಅಧಿಪತಿ ಎಂದರ್ಥಮಾಡಿ-ದಂತಾಯಿತು. ॥೧॥

**ಸ ವಾ ಏಷ ತದಾ ದ್ರಷ್ಟಾ ನಾಪಶ್ಯದ್ ವಿಶ್ವಮೇಕರಾಟ್ ।**
**ಮೇನೇಽಸಂತಮಿವಾತ್ಮನಂ ಸುಪ್ತಶಕ್ತಿರಸುಪ್ತದೃಕ್ ॥೨॥**

ತದಾ=ಪ್ರಲಯಕಾಲದಲ್ಲಿ ಯಃ=ಯಾವನು ಏಕರಾಟ್=ಸ್ವತಂತ್ರನು ಚಕ್ರವರ್ತಿಯೋ ದ್ರಷ್ಟಾ=ಸ್ವತಂತ್ರವಾಗಿ ಸರ್ವದಾ ಸರ್ವವನ್ನೂ ನೋಡುವ ಸುಪ್ತಶಕ್ತಿಃ=ಜಗದ್ವ್ಯಾಪರದಲ್ಲಿ ಆಸಕ್ತಿಯಿಲ್ಲದಿರುವ ಅತ್ಯಂತ ಭಗವದ್ರತಿಯುಳ್ಳ ಲಕ್ಷ್ಮೀದೇವಿ ಹಾಗೂ ಪರಿಣಾಮರಹಿತವಾದ ಜಡಪ್ರಕೃತಿಯುಳ್ಳ ಅಸುಪ್ತದೃಕ್=ನಿದ್ರಾರಹಿತನಾದ ಕೇವಲ ಕಣ್ಣು ಮುಚ್ಚಿದ ಸಃ ಏಷಃ=ಅಂಥ ಶ್ರೀಹರಿಯು ವಿಶ್ವಂ=ತನ್ನಿಂದ ಭಿನ್ನವಾದ ಪ್ರಪಂಚವನ್ನು ನ ಅಪಶ್ಯತ್=ಕಾಣಲಿಲ್ಲ. ಆತ್ಮಾನಂ=ಜೀವರನ್ನು ಅಸಂತಂ ಇವ ಮೇನೇ=ಅಶಕ್ತರಾದ್ದರಿಂದ ಇದ್ದರೂ ಇಲ್ಲದಂತೆ ಎಂದೇ ತಿಳಿದನು.

ಶ್ರೀಹರಿಯು ನೋಡಲು ಸಾಮರ್ಥ್ಯ ಇಲ್ಲದಿರುವುದರಿಂದ ಜಗತ್ತನ್ನು ನೋಡಲಿಲ್ಲವೆಂದಲ್ಲ ಎಂದು ತಿಳಿಸಲು 'ದ್ರಷ್ಟಾ' ಎಂಬ ವಿಶೇಷಣವಿತ್ತಿದ್ದಾರೆ. 'ಮೇನೇಽಸಂತಮಿವಾತ್ಮನಂ'ಎನ್ನುವ ವಾಕ್ಯಕ್ಕೆ ತನ್ನನ್ನು ಅಸತ್ ಎಂದು ತಿಳಿದನು ಎಂಬ ಅರ್ಥವಾಗದಿರಲು ಪ್ರಮಾಣದಿಂದಲೇ ಅರ್ಥ ಹೇಳುವರು–

**''ಪರಮಾತ್ಮಾ ಯತೋ ಜೀವಂ ಮೇನೇಽಸಂತಮಶಕ್ತಿತಃ ।**
**ಅಸನ್ನಸಾವತೋ ನಿತ್ಯಂ ಸತ್ಯಜ್ಞಾನೋ ಯತೋ ಹರಿಃ'' ॥**

**ಇತ್ಯಾಗ್ನೇಯೇ।**

ಪರಮಾತ್ಮನು ಜೀವನನ್ನು ಅಶಕ್ತನಾದ್ದರಿಂದ ಅಸತ್ತೆಂದು ತಿಳಿದನು, ಹೊರತು ಇಲ್ಲದಿರುವುದರಿಂದಲ್ಲ. ಜೀವನನ್ನು ಅಸತ್ತೆಂದು ತಿಳಿಯಲು ಜೀವನ ಅಶಕ್ತಿಯೊಂದೇ ಕಾರಣವಲ್ಲ, 'ನಾನ್ಯತ್ ಕಿಂಚನ ಮಿಷತ್' ಎಂದು ಶ್ರುತಿಯಲ್ಲಿ ಅಸತ್ವ ಹೇಳಿದ್ದು ಸಹ ಕಾರಣ, ಎಂದು ಉತ್ತರಾರ್ಧದಲ್ಲಿ ಹೇಳುವರು- ಅತಃ=ಅಶಕ್ತತ್ವ ಇರುವುದರಿಂದ ಅಸೌ=ಜೀವನು ನಿತ್ಯಂ ಸರ್ವದಾ ಅಸತ್ ಎಂದು ಶ್ರುತಿಯಲ್ಲಿ ಹೇಳಿದೆ ಎಂದು ಭಾವ. ಹಾಗಾದರೆ ಪ್ರಳಯಕಾಲದಂತೆ ಸ್ಥಿತಿಕಾಲದಲ್ಲಿಯೂ ಜೀವನು ಅಶಕ್ತನಾದ್ದರಿಂದ ಅಸತ್ ಎನ್ನಬೇಕಲ್ಲ? ಎಂಬ ಆಪಾದನೆಯು ಇಷ್ಟಾಪಾದನ-ವಾದ್ದರಿಂದ ಅದು ದೋಷವಾಗಲಾರದು.ಅಂದರೆ ಜೀವನನ್ನು'ಅಶಕ್ತನಾದ್ದರಿಂದ ಅಸತ್' ಎಂಬ ಅಭಿಪ್ರಾಯದಿಂದ ಸ್ಥಿತಿಕಾಲದಲ್ಲಿಯೂ 'ಅಸತ್'ಎಂದು ಕರೆಯ-ಬಹುದು. ಈ ರೀತಿ ವ್ಯಾಖ್ಯಾನ ಮಾಡದಿದ್ದರೆ ಸತ್ಯರೆಂದು ಶ್ರುತಿ ಪ್ರಸಿದ್ಧರಾದ ಜೀವರನ್ನು ಅಸತ್ ಎಂದು ತಿಳಿದರೆ ಶ್ರೀಹರಿಯು ಮಿಥ್ಯಾಜ್ಞಾನಿ ಎನ್ನಬೇಕಾ-ಗುವುದು ಎಂಬ ಬಾಧಕ ತೋರಿಸಲು 'ಶ್ರೀಹರಿಯು ಸರ್ವದಾ ಯಥಾರ್ಥಜ್ಞಾನಿ-ಯಾಗಿರುವನಾದ ಕಾರಣ' ಎಂದು ಆಗ್ನೇಯದಲ್ಲಿ ಹೇಳಿದೆ.

ಪ್ರಳಯಕಾಲದಲ್ಲಿ ಚೇತನಾಚೇತನ ಪ್ರಕೃತಿಗಳಿರುವಾಗ ಬೇರೆ ಯಾವುದನ್ನೂ ನೋಡಲಿಲ್ಲವೆಂಬುದು ಹೇಗೆ ? ಎನ್ನುವುದಕ್ಕೆ ಉತ್ತರ ರೂಪವಾಗಿ ಮೂಲದಲ್ಲಿ 'ಸುಪ್ತಶಕ್ತಿಃ' ಎಂದಿದ್ದಾರೆ ಅದರ ಅಭಿಪ್ರಾಯ ಹೇಳುವರು–

**''ಶಕ್ಯತ್ವಾತ್ ಶಕ್ತಯೋ ಭಾರ್ಯಾಃ ಶಕ್ತಿಃ ಸಾಮರ್ಥ್ಯಮುಚ್ಯತೇ''।**

**ಇತಿ ಬ್ರಹ್ಮತರ್ಕೇ॥**

ಕರ್ಮವ್ಯುತ್ಪತ್ತಿಯಿಂದ ಶಕ್ತಿಶಬ್ದಕ್ಕೆ ಭಾರ್ಯಾ ಎಂದರ್ಥ.ಮತ್ತು ರಮಾಭಿಮನ್ಯ-ಮಾನಜಡಪ್ರಕೃತಿ ಎಂದೂ ಅರ್ಥ. ಕೆಲವೆಡೆ ಭಾವವ್ಯುತ್ಪತ್ತಿಯಿಂದ ಸಾಮರ್ಥ್ಯವೂ ಶಕ್ತಿ ಎಂದು ಕರೆಯಿಸಿಕೊಳ್ಳುವುದು. ಹಾಗಾದರೆ ಭಗವದ್ಭಾರ್ಯೆಯಾದ ರಮಗೆಲ್ಲಿ ನಿದ್ರೆ ? ಯಾವಾಗಲೂ ವ್ಯಕ್ತವಾದ ಜ್ಞಾನವುಳ್ಳವಳಷ್ಟೇ ? ಎಂದರೆ ಅವಳಿಗೆ ಇರುವ ಸುಪ್ತಿಯನ್ನು ಪ್ರಮಾಣದಿಂದ ತಿಳಿಸುವರು–

**''ಸುಪ್ತಿಸ್ತು ಪ್ರಕೃತೇಃ ಪ್ರೋಕ್ತಾ ಅತೀವಭಗವದ್ರತಿಃ ।**
**ಅನಾಸ್ವಾದೋऽನ್ಯತ್ರ ಚ ಪ್ರೋಕ್ತಾ ವಿಷ್ಣೋಶ್ಚಕ್ಷುರ್ನಿಮೀಲನಂ'' ॥**

**ಇತಿ ವ್ಯೋಮಸಂಹಿತಾಯಾಂ ।**

ರಮಗೆ ಸುಪ್ತಿ ಎಂದರೆ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರದಲ್ಲಿ ಆಸಕ್ತಿ ಇಲ್ಲದಿರುವುದು ಮತ್ತು ಭಗವಂತನಲ್ಲಿ ವಿಶೇಷ ಆಸಕ್ತಿ ಇರುವುದು, ಹೊರತು ನಮ್ಮಂತೆ ನಿದ್ರೆಯಲ್ಲ.

ಅದರಂತೆ ಜಡ ಪ್ರಕೃತಿಗೆ ಪರಿಣಾಮವಾಗದಿರುವುದು ನಿದ್ರೆ. ಇನ್ನು ಕೆಲವೆಡೆ ಶ್ರೀಹರಿಗೆ ನಿದ್ರೆ ಹೇಳುವರು ಆ ಸ್ಥಳದಲ್ಲಿ ಚಕ್ಷುರಿಂದ್ರಿಯವು ಉಪರತವಾಗದಿದ್ದರೂ ರೆಪ್ಪೆಮುಚ್ಚಿರುವುದು ನಿದ್ರೆ ಎಂದು ತಿಳಿಯಬೇಕು. ಆದ್ದರಿಂದ ಜಡಪ್ರಕೃತಿಹಾಗೂ ಲಕ್ಷ್ಮೀದೇವಿಯು ಪರಿಣಾಮೋನ್ಮುಖಜಗದ್ವ್ಯಾಪಾರದಲ್ಲಿ ಅನಾಸಕ್ತಳಾದ್ದರಿಂದ ಇದ್ದರೂ 'ಇಲ್ಲವೆಂದುತಿಳಿದನು' ಎಂದುವ್ಯವಹರಿಸಲ್ಪಡುತ್ತದೆ ॥೨॥

ಶಕ್ತಿಶಬ್ದದಿಂದ ಹೇಳಲ್ಪಟ್ಟ ಚೇತನಾಚೇತನಪ್ರಕೃತಿಗಳ ಸ್ವರೂಪ ಹಾಗೂ ನಾಮಗಳನ್ನು ಹೇಳುವರು –

**ಸಾ ವಾ ಏತಸ್ಯ ಸಂದ್ರಷ್ಟುಃ ಶಕ್ತಿಃ ಸದಸದಾತ್ಮಿಕಾ ।**
**ಮಾಯಾ ನಾಮ ಮಹಾಭಾಗ ಯಯೇದಂ ನಿರ್ಮಮೇ ವಿಭುಃ ॥೩॥**

ಹೇ ಮಹಾಭಾಗ=ಮಹಾಭಾಗ್ಯವಂತನಾದ ವಿದುರನೇ. ಸಂದ್ರಷ್ಟುಃ ಏತಸ್ಯ= ಸಮಸ್ತವನ್ನೂ ಸ್ವತಂತ್ರವಾಗಿ ನೋಡುವ ಶ್ರೀಮನ್ನಾರಾಯಣನ ಸಾ ವೈ= ಯಾವಳು ಜಗದ್ವ್ಯಾಪಾರವನ್ನು ಬಿಟ್ಟು (ಸಾಯುಜ್ಯವನ್ನು ಹೊಂದಿದ) ಭಗವಂತನ ಸಮೀಪದಲ್ಲಿಯೇ ರಮಿಸಿವಳೋ,ಸದಸದಾತ್ಮಿಕಾ=ಕಾರ್ಯಕಾರಣಾತ್ಮಕಜಡಪ್ರಕೃತಿಗೆ ಅಭಿಮಾನಿನಿಯು ಯಯಾ=ಯಾವಳಿಂದ ಇದಂ ನಿರ್ಮಮೇ=ಈ ಪ್ರಪಂಚವನ್ನು ಸೃಷ್ಟಿಸಿದನೋ ಶಕ್ತಿಃ=ಹೆಂಡತಿಯೋ, ಅವಳಿಗೆ ಮಾಯಾ ನಾಮ=ಮಾಯಾ ಎಂಬ ಹೆಸರು. ಮತ್ತು ಸಾ=ಪರಿಣಾಮ ಶೂನ್ಯವಾದುದೋ ಸದಸದಾತ್ಮಿಕಾ=ಕಾರ್ಯ ಕಾರಣಾತ್ಮಕವೋ ಯಯಾ=ಯಾವುದರಿಂದ ಇದಂ ನಿರ್ಮಮೇ=ಈಪ್ರಪಂಚವನ್ನು ಸೃಷ್ಟಿಸಿದನೋ ಶಕ್ತಿಃ=ಭಗವದಧೀನವೋ ಆ ಜಡಪ್ರಕೃತಿಗೂ ಮಾಯಾ ನಾಮ= ಮಾಯಾ ಎಂಬ ಹೆಸರು. ॥೩॥

**ಕಾಲವೃತ್ತ್ಯಾಂ ತು ಮಾಯಾಯಾಂ ಗುಣಮಯ್ಯಾಮಧೋಕ್ಷಜಃ ।**
**ಪುರುಷೇಣಾತ್ಮಭೂತೇನ ವೀರ್ಯಮಾಧತ್ತ ವೀರ್ಯವಾನ್ ॥೪॥**

ಕಾಲವೃತ್ತ್ಯಾಂ=ಸೃಷ್ಟಿಕಾಲಪ್ರೇರಕನಾದ ಕಾಲನಾಮಕ ಶ್ರೀಹರಿಯಿಂದ ಹೊಂದ-ಲ್ಪಟ್ಟ ಸೃಷ್ಟಿ ಮಾಡಬೇಕೆಂಬ ಇಚ್ಛೆಯುಳ್ಳ ಚೇತನಪ್ರಕೃತಿಯಲ್ಲಿ ಮತ್ತು ಪರಿಣಾಮೋ-ನ್ಮುಖವಾದ ಜಡಪ್ರಕೃತಿಯಲ್ಲಿ ಗುಣಮಯ್ಯಾಃ=ಸತ್ವರಜಸ್ತಮೋರೂಪ ಗುಣಗಳಿಗೆ ಅಬಿಮಾನಿನಿಯಾದ ಮತ್ತು ಸತ್ವರಜಸ್ತಮೋಗುಣಾತ್ಮಕವಾದ ಮಾಯಾಯಾಂ ತು=ಹೇಳಿದ ವಿಶೇಷಯುತವಾದ ಚೇತನನಾಚೇತನ ಪ್ರಕೃತಿಗಳಲ್ಲಿ ವೀರ್ಯವಾನ್= ಜಗತ್ತನ್ನು ಸೃಷ್ಟಿಸುವ ಸಮಾರ್ಥ್ಯವುಳ್ಳ ಅಧೋಕ್ಷಜಃ=ಅತೀಂದ್ರಿಯನಾದ ಪ್ರಲಯ-ದಲ್ಲಿರುವ ಪರಮಾತ್ಮನು ಆತ್ಮಭೂತೇನ=ಮೊದಲಿಗೆ ಆವಿರ್ಭೂತವಾದ

ಸ್ವರೂಪಾಂಶವಾದ ಪುರುಷೇಣ=ಪುರುಷನಾಮಕನಾದ ವಾಸುದೇವರೂಪದಿಂದ ವೀರ್ಯಂ ಆಧತ್ತ=ಚೇತನಪ್ರಕೃತಿಯಾದ ಮಾಯಾ- ನಾಮಕಳಾದ ರಮೆಯಲ್ಲಿ ರೇತಸ್ಸನ್ನು ಆಧಾನಮಾಡಿದನು (ಇಟ್ಟನು) ಜಡಪ್ರಕೃತಿಯಲ್ಲಿ ಪಣಾಮಶಕ್ತಿಯನ್ನು ಉದ್ಬೋಧಗೊಳಿಸಿದನು. 'ವೀರ್ಯವಾನ್' ಎಂಬುದರಿಂದ ಹರಿಗೆ ನಪುಂಸಕ-ರೂಪವಿಲ್ಲವೆಂದು ಸೂಚಿಸುವರು. ಅಥವಾ ಮತುಪ್‌ಪ್ರತ್ಯಯ್ಯಕ್ಕೆ ಅತಿಶಯ-ವೆಂದರ್ಥವಿರುವುದರಿಂದ, ಭಗವಂತನ ವೀರ್ಯಕ್ಕೆ ಅಮೋಘತ್ವರೂಪ ಅತಿಶಯ-ವನ್ನು ಸೂಚಿಸುವರು. ಅಂದರೆ ತನ್ನಿಂದ ಆಹಿತವಾದ ವೀರ್ಯಕ್ಕೆ ಜನಕತ್ವವಿದ್ದೇಇದೆ ಎಂದು ಭಾವ. ॥೪॥

**ತತೋಽಭವನ್ಮಹತತ್ವಮವ್ಯಕ್ತಾತ್ ಕಾಲ ಚೋದಿತಾತ್ ।**
**ವಿಜ್ಞಾನಾತ್ಮಾತ್ಮದೇಹಸ್ಥಂ ವಿಶ್ವಂ ವ್ಯಂಜನ್ ತಮೋ ನುದನ್ ॥೫॥**

ತತಃ=ವಾಸುದೇವನಿಂದ ಕಾಲಚೋದಿತಾತ್=ಕಾಲನಾಮಕ ಹರಿಯಿಂದ ಪ್ರೇರಿತವಾದ ಅವ್ಯಕ್ತಾತ್=ತ್ರಿಗುಣಾತ್ಮಕ ಪ್ರಧಾನದಿಂದ ಮಹತ್ತತ್ವಂ=ಜಡವಾದ ಮಹತ್ತತ್ವವು ಮತ್ತು ಮಾಯಾರೂಪಳಾದ ರಮೆಯಲ್ಲಿ ರೇತೋರೂಪದಿಂದ ಪರಿಣತವಾದ ಅವ್ಯಕ್ತತತ್ವದಿಂದ ಮಹತ್ತತ್ವಾಭಿಮಾನಿಯಾದ ಪುಂನ್ನಾಮಕ ಬ್ರಹ್ಮದೇವರ ದೇಹವು ಅಭವತ್=ಉತ್ಪನ್ನವಾಯಿತು (ಇಲ್ಲಿ ಸೂಕ್ಷ್ಮರೂಪದಿಂದ ಉತ್ಪತ್ತಿ ಹೇಳುವರು. ಸ್ಥೂಲವಾಗಿ ಉತ್ಪತ್ತಿಯನ್ನು ಅನಿರುದ್ಧನಿಂದ ಬೇರೆಡೆ ಹೇಳಿರುವರು. ಕಾರಣ ವಿರೋಧವಿಲ್ಲ) ತತ್ವತದಭಿಮಾನಿದೇಹೋತ್ಪತ್ತಿಯನ್ನು ಹೇಳಿ ಅಭಿಮಾನಿಚೇತನಕ್ಕೂ ಉತ್ಪತ್ತಿ ಹೇಳುವರು - ವಿಜ್ಞಾನಾತ್ಮಾ=ಪ್ರಲಯದಲ್ಲಿಯೂ ಲೋಪವಾಗದ ವೃತ್ತಿಜ್ಞಾನವುಳ್ಳವನಾದ್ದರಿಂದ ವಿಜ್ಞಾನಸ್ವರೂಪನಾದ ಪುರುಷ-ನಾಮಕ ಬ್ರಹ್ಮನು ಆತ್ಮದೇಹಸ್ಥಂ=ತನ್ನಿಂದ ಅಭಿಮನ್ಯಮಾನವಾದುದರಿಂದ, ತನಗೆ ದೇಹಸ್ಥಾನೀಯವಾದ ಮಹತ್ತತ್ವದಲ್ಲಿ ಕಾರಣರೂಪದಿಂದಿರುವ ವಿಶ್ವಂ=ಜಗತ್ತನ್ನು ವ್ಯಂಜಯನ್=ವ್ಯಕ್ತಗೊಳಿಸುವವನಾಗಿ (ಹುಟ್ಟಿಸುವವನಾಗಿ) ತಮಃ=ಆಕಾಲದಲ್ಲಿ-ರುವ ಕತ್ತಲೆಯನ್ನು ನುದನ್=ಸೂರ್ಯನಂತೆ ಪರಿಹರಿಸುತ್ತ ಅಥವಾ ತನ್ನಿಂದ ಹುಟ್ಟುವ ಶೇಷಾದಿಗಳಿಗೆ ಅಜ್ಞಾನವನ್ನು ಪರಿಹರಿಸುತ್ತ ಅಭವತ್=ಮಹತ್ತತ್ವ-ದಲ್ಲಿಯೂ, ದೇಹದಲ್ಲಿಯೂ ಅಭಿಮಾನವುಳ್ಳವನಾದನು, ಅದೇ ಅವರ ಉತ್ಪತ್ತಿ. ಅಂತು ಅಹಂಕಾರತತ್ವಾದಿ ಸರ್ವಜಗತ್ತನ್ನು ಸೃಷ್ಟಿಸಲು, ಜಗತ್ತಿಗೆ ಉಭಯವಿಧಕತ್ತಲೆ ಕಳೆಯಲು ಬಹ್ಮದೇವರು ಜನಿಸಿದರು ಎಂದು ಭಾವ. ॥೫॥

**ಸೋಪ್ಯಂಶಗುಣಕಾಲಾತ್ಮಾ ಭಗವದ್ದೃಷ್ಟಿಗೋಚರಃ ।**
**ಆತ್ಮಾನಂ ವ್ಯಕರೋದಾತ್ಮಾ ವಿಶ್ವಸ್ಯಾಸ್ಯ ಸಿಸೃಕ್ಷಯಾ ॥೬॥**

ಸಃ ಆತ್ಮಾ=ಆ ಮಹತ್ತತ್ತ್ವಾಭಿಮಾನಿಯಾದ ವಿರಿಂಚಿಯು ಅಂಶ=ಜೀವ, ಗುಣ= ಸತ್ವಾದಿಗಳು ಕಾಲ=ಸೃಷ್ಟಿಕಾಲ ಇವುಗಳಿಗೆ ಆತ್ಮಾ=ಅಭಿಮಾನಿಯು ಭಗವದ್ ದೃಷ್ಟಿಗೋಚರಃ=ಶ್ರೀಹರಿಕೃಪಾದೃಷ್ಟಿಗೆ ಪಾತ್ರನಾಗಿ ಅಸ್ಯ ವಿಶ್ವಸ್ಯ ಸಿಸೃಕ್ಷಯಾ=ಈ ಜಗತ್ತನ್ನು ಸೃಷ್ಟಿಸುವ ಇಚ್ಛೆಯಿಂದ ಆತ್ಮಾನಂ=ತನ್ನಿಂದ ಅಬಿಮನ್ಯಮಾನವಾದ ಮಹತ್ತತ್ತ್ವವನ್ನು ವ್ಯಕರೋತ್=ವಿಕಾರೋನ್ಮುಖವನ್ನಾಗಿ ಮಾಡಿದನು ||೬||

**ಮಹತ್ತತ್ತ್ವಾದ್ ವಿಕುರ್ವಾಣಾದಹಂತತ್ತ್ವಮಜಾಯತ |**
**ಕಾರ್ಯಕಾರಣಕರ್ತ್ರಾತ್ಮಾ ಭೂತೇಂದ್ರಿಯಮನೋಭವಃ ||೭||**

ವಿಕುರ್ವಾಣಾತ್=ವಿಕಾರಹೊಂದುವ ಮಹತ್ತತ್ತ್ವಾತ್=ಮಹತ್ತತ್ತ್ವದಿಂದ ಕಾರ್ಯಕಾರಣಕರ್ತ್ರಾತ್ಮಾ=ಪಂಚಭೂತಗಳು, ಇಂದ್ರಿಯಗಳು, ಇಂದ್ರಿಯಾಭಿ-ಮಾನಿಗಳು ಮತ್ತು ಮನಸ್ಸು ಇವುಗಳಿಗೆ ಕಾರಣವಾದ ಇದರ ವಿವರಣೆ 'ಭೂತೇಂದ್ರಿಯಮನೋಭವಃ' ಎಂಬುದು ಭೂತೇಂದ್ರಿಯ, ಮನಸ್ಸು, ದೇವತೆ-ಗಳಿಗೆ ಜನಕವಾದ ಅಹಂತತ್ತ್ವಂ=ಅಹಂಕಾರತತ್ತ್ವವು ಅದರ ಅಭಿಮಾನಿಯು, ಅಭಿಮಾನಿದೇಹವು, ಅಂತರ್ನಿಯಾಮಕ ಭಗವದ್ರೂಪಗಳು ಅಜಾಯತ= ಜನಿಸಿದವು. ("ಭೂತಂ ಭೂತಾಭಿಮಾನೀ ಚ ತದ್ದೇಹೋಽಂತರ್ನಿಯಾಮಕಃ" ಎಂದು ಹೇಳಿದಂತೆ) ||೭||

**ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧಾ |**
**ಅಹಂತತ್ತ್ವಾದ್ ವಿಕುರ್ವಾಣಾನ್ಮನೋ ವೈಕಾರಿಕಾದಭೂತ್ ||೮||**

ಅಹಂ=ಅಹಂಕಾರತತ್ತ್ವವು ವೈಕಾರಿಕಃ=ವೈಕಾರಿಕವು, ತೈಜಸಃ=ತೈಜಸವು ತಾಮಸಃ= ತಾಮಸವು ಇತಿ=ಹೀಗೆ ತ್ರಿಧಾ=ಮೂರು ಪ್ರಕಾರವುಳ್ಳದ್ದು. ವಿಕುರ್ವಾಣಾತ್= ವಿಕಾರಹೊಂದುವ ಅಹಂತತ್ತ್ವಾತ್ ವೈಕಾರಿಕಾತ್=ವೈಕಾರಿಕ ಅಹಂಕಾರದಿಂದ ಮನಃ= ಮನಸ್ತತ್ತ್ವವು ಅಭೂತ್=ಉತ್ಪನ್ನವಾಯಿತು ('ಅಹಂ' ಎಂಬುದು ಮಕಾರಾಂತವಾದ ಅವ್ಯಯವು ತತ್ತ್ವವಾಚಕವಾಗಿದೆ) ||೮||

**ವೈಕಾರಿಕಾಶ್ಚ ಯೇ ದೇವಾ ಅರ್ಥಾಭಿವ್ಯಂಜನಂ ಯತಃ |**
**ತೈಜಸಾನೀಂದ್ರಿಯಾಣ್ಯೇವ ಜ್ಞಾನಕರ್ಮಮಯಾನಿ ಚ ||೯||**

ಯತಃ=ಯಾವಇಂದ್ರಿಯಾಭಿಮಾನಿಗಳಿಂದ ಅರ್ಥಾಭಿವ್ಯಂಜನಂ=ಶಬ್ದಾದಿ-ವಿಷಯಗಳ ಜ್ಞಾನವಾಗುವುದೋ ವೈಕಾರಿಕಾಃ=ವೈಕಾರಿಕವೆಂಬ ಹೆಸರುಳ್ಳ ದೇವಾಃ ಚ=ದೇವತೆಗಳೂ ಸಹ ವೈಕಾರಿಕ ಅಹಂಕಾರದಿಂದ ಜನಿಸಿದರು. (ವೈಕಾರಿಕ ಅಹಂಕಾರದಿಂದ ಇಂದ್ರಿಯಾಭಿಮಾನಿಗಳು ಜನಿಸಿದರು) ಜ್ಞಾನಕರ್ಮಮಯಾನಿ

ಸ್ವರೂಪಾಂಶವಾದ ಪುರುಷೇಣ=ಪುರುಷನಾಮಕನಾದ ವಾಸುದೇವರೂಪದಿಂದ ವೀರ್ಯಂ ಆಧತ್ತ=ಚೇತನಪ್ರಕೃತಿಯಾದ ಮಾಯಾ- ನಾಮಕಳಾದ ರಮೆಯಲ್ಲಿ ರೇತಸ್ಸನ್ನು ಆಧಾನಮಾಡಿದನು (ಇಟ್ಟನು) ಜಡಪ್ರಕೃತಿಯಲ್ಲಿ ಪಣಾಮಶಕ್ತಿಯನ್ನು ಉದ್ಬೋಧಗೊಳಿಸಿದನು. 'ವೀರ್ಯವಾನ್' ಎಂಬುದರಿಂದ ಹರಿಗೆ ನಪುಂಸಕ-ರೂಪವಿಲ್ಲವೆಂದು ಸೂಚಿಸುವರು. ಅಥವಾ ಮತುಪ್‌ಪ್ರತ್ಯಯ್ಯಕ್ಕೆ ಅತಿಶಯ-ವೆಂದರ್ಥವಿರುವುದರಿಂದ, ಭಗವಂತನ ವೀರ್ಯಕ್ಕೆ ಅಮೋಘತ್ವರೂಪ ಅತಿಶಯ-ವನ್ನು ಸೂಚಿಸುವರು. ಅಂದರೆ ತನ್ನಿಂದ ಆಹಿತವಾದ ವೀರ್ಯಕ್ಕೆ ಜನಕತ್ವವಿದ್ದೇಇದೆ ಎಂದು ಭಾವ. ||೪||

**ತತೋಽಭವನ್ಮಹತತ್ತ್ವಮವ್ಯಕ್ತಾತ್ ಕಾಲ ಚೋದಿತಾತ್ ।**
**ವಿಜ್ಞಾನಾತ್ಮಾತ್ಮದೇಹಸ್ಥಂ ವಿಶ್ವಂ ವ್ಯಂಜನ್ ತಮೋ ನುದನ್ ||೫||**

ತತಃ=ವಾಸುದೇವನಿಂದ ಕಾಲಚೋದಿತಾತ್=ಕಾಲನಾಮಕ ಹರಿಯಿಂದ ಪ್ರೇರಿತವಾದ ಅವ್ಯಕ್ತಾತ್=ತ್ರಿಗುಣಾತ್ಮಕ ಪ್ರಧಾನದಿಂದ ಮಹತ್ತತ್ತ್ವಂ=ಜಡವಾದ ಮಹತ್ತತ್ತ್ವವು ಮತ್ತು ಮಾಯಾರೂಪಳಾದ ರಮೆಯಲ್ಲಿ ರೇತೋರೂಪದಿಂದ ಪರಿಣತವಾದ ಅವ್ಯಕ್ತತತ್ತ್ವದಿಂದ ಮಹತ್ತತ್ತ್ವಾಭಿಮಾನಿಯಾದ ಪುಂನ್ನಾಮಕ ಬ್ರಹ್ಮದೇವರ ದೇಹವು ಅಭವತ್=ಉತ್ಪನ್ನವಾಯಿತು (ಇಲ್ಲಿ ಸೂಕ್ಷ್ಮರೂಪದಿಂದ ಉತ್ಪತ್ತಿ ಹೇಳುವರು. ಸ್ಥೂಲವಾಗಿ ಉತ್ಪತ್ತಿಯನ್ನು ಅನಿರುದ್ಧನಿಂದ ಬೇರೆಡೆ ಹೇಳಿರುವರು. ಕಾರಣ ವಿರೋಧವಿಲ್ಲ) ತತ್ತ್ವತದಭಿಮಾನಿದೇಹೋತ್ಪತ್ತಿಯನ್ನು ಹೇಳಿ ಅಭಿಮಾನಿಚೇತನಕ್ಕೂ ಉತ್ಪತ್ತಿ ಹೇಳುವರು – ವಿಜ್ಞಾನಾತ್ಮಾ=ಪ್ರಲಯದಲ್ಲಿಯೂ ಲೋಪವಾಗದ ವೃತ್ತಿಜ್ಞಾನವುಳ್ಳವನಾದ್ದರಿಂದ ವಿಜ್ಞಾನಸ್ವರೂಪನಾದ ಪುರುಷ-ನಾಮಕ ಬ್ರಹ್ಮನು ಆತ್ಮದೇಹಸ್ಥಂ=ತನ್ನಿಂದ ಅಭಿಮನ್ಯಮಾನವಾದುದರಿಂದ, ತನಗೆ ದೇಹಸ್ಥಾನೀಯವಾದ ಮಹತ್ತತ್ತ್ವದಲ್ಲಿ ಕಾರಣರೂಪದಿಂದಿರುವ ವಿಶ್ವಂ=ಜಗತ್ತನ್ನು ವ್ಯಂಜಯನ್=ವ್ಯಕ್ತಗೊಳಿಸುವವನಾಗಿ (ಹುಟ್ಟಿಸುವವನಾಗಿ) ತಮಃ=ಆಕಾಲದಲ್ಲಿ-ರುವ ಕತ್ತಲೆಯನ್ನು ನುದನ್=ಸೂರ್ಯನಂತೆ ಪರಿಹರಿಸುತ್ತ ಅಥವಾ ತನ್ನಿಂದ ಹುಟ್ಟುವ ಶೇಷಾದಿಗಳಿಗೆ ಅಜ್ಞಾನವನ್ನು ಪರಿಹರಿಸುತ್ತ ಅಭವತ್=ಮಹತ್ತತ್ತ್ವ-ದಲ್ಲಿಯೂ, ದೇಹದಲ್ಲಿಯೂ ಅಭಿಮಾನವುಳ್ಳವನಾದನು, ಅದೇ ಅವರ ಉತ್ಪತ್ತಿ. ಅಂತು ಅಹಂಕಾರತತ್ತ್ವಾದಿ ಸರ್ವಜಗತ್ತನ್ನು ಸೃಷ್ಟಿಸಲು, ಜಗತ್ತಿಗೆ ಉಭಯವಿಧಕತ್ತಲೆ ಕಳೆಯಲು ಬಹ್ಮದೇವರು ಜನಿಸಿದರು ಎಂದು ಭಾವ. ||೫||

**ಸೋಽಪ್ಯಂಶಗುಣಕಾಲಾತ್ಮಾ ಭಗವದ್ದೃಷ್ಟಿಗೋಚರಃ ।**
**ಆತ್ಮಾನಂ ವ್ಯಕರೋದಾತ್ಮಾ ವಿಶ್ವಸ್ಯಾಸ್ಯ ಸಿಸೃಕ್ಷಯಾ ||೬||**

ಸಃ ಆತ್ಮಾ=ಆ ಮಹತ್ತತ್ವಾಭಿಮಾನಿಯಾದ ವಿರಿಂಚಿಯು ಅಂಶ=ಜೀವ, ಗುಣ=ಸತ್ವಾದಿಗಳು ಕಾಲ=ಸೃಷ್ಟಿಕಾಲ ಇವುಗಳಿಗೆ ಆತ್ಮಾ=ಅಭಿಮಾನಿಯು ಭಗವದ್ ದೃಷ್ಟಿಗೋಚರಃ=ಶ್ರೀಹರಿಕೃಪಾದೃಷ್ಟಿಗೆ ಪಾತ್ರನಾಗಿ ಅಸ್ಯ ವಿಶ್ವಸ್ಯ ಸಿಸೃಕ್ಷಯಾ=ಈ ಜಗತ್ತನ್ನು ಸೃಷ್ಟಿಸುವ ಇಚ್ಛೆಯಿಂದ ಆತ್ಮಾನಂ=ತನ್ನಿಂದ ಅಭಿಮನ್ಯಮಾನವಾದ ಮಹತ್ತತ್ವವನ್ನು ವ್ಯಕರೋತ್=ವಿಕಾರೋನ್ಮುಖವನ್ನಾಗಿ ಮಾಡಿದನು ॥೬॥

**ಮಹತ್ತತ್ವಾದ್ ವಿಕುರ್ವಾಣಾದಹಂತತ್ವಮಜಾಯತ ।**
**ಕಾರ್ಯಕಾರಣಕರ್ತ್ರಾತ್ಮಾ ಭೂತೇಂದ್ರಿಯಮನೋಭವಃ ॥೭॥**

ವಿಕುರ್ವಾಣಾತ್=ವಿಕಾರಹೊಂದುವ ಮಹತ್ತತ್ವಾತ್=ಮಹತ್ತತ್ವದಿಂದ ಕಾರ್ಯಕಾರಣಕರ್ತ್ರಾತ್ಮಾ=ಪಂಚಭೂತಗಳು, ಇಂದ್ರಿಯಗಳು, ಇಂದ್ರಿಯಾಭಿಮಾನಿಗಳು ಮತ್ತು ಮನಸ್ಸು ಇವುಗಳಿಗೆ ಕಾರಣವಾದ ಇದರ ವಿವರಣೆ 'ಭೂತೇಂದ್ರಿಯಮನೋಭವಃ' ಎಂಬುದು ಭೂತೇಂದ್ರಿಯ, ಮನಸ್ಸು, ದೇವತೆಗಳಿಗೆ ಜನಕವಾದ ಅಹಂತತ್ವಂ=ಅಹಂಕಾರತತ್ವವು ಆದರ ಅಭಿಮಾನಿಯು, ಅಭಿಮಾನಿದೇಹವು, ಅಂತರ್ನಿಯಾಮಕ 'ಭಗವದ್ರೂಪಗಳು ಅಜಾಯತ=ಜನಿಸಿದವು. ("ಭೂತಂ ಭೂತಾಭಿಮಾನೀ ಚ ತದ್ದೇಹೋಽಂತರ್ನಿಯಾಮಕಃ" ಎಂದು ಹೇಳಿದಂತೆ) ॥೭॥

**ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧಾ ।**
**ಅಹಂತತ್ವಾದ್ ವಿಕುರ್ವಾಣಾನ್ಮನೋ ವೈಕಾರಿಕಾದಭೂತ್ ॥೮॥**

ಅಹಂ=ಅಹಂಕಾರತತ್ವವು ವೈಕಾರಿಕಃ=ವೈಕಾರಿಕವು, ತೈಜಸಃ=ತೈಜಸವು ತಾಮಸಃ=ತಾಮಸವು ಇತಿ=ಹೀಗೆ ತ್ರಿಧಾ=ಮೂರು ಪ್ರಕಾರವುಳ್ಳದ್ದು. ವಿಕುರ್ವಾಣಾತ್=ವಿಕಾರಹೊಂದುವ ಅಹಂತತ್ವಾತ್‌ವೈಕಾರಿಕಾತ್=ವೈಕಾರಿಕ ಆಹಂಕಾರದಿಂದ ಮನಃ=ಮನಸ್ತತ್ವವು ಅಭೂತ್=ಉತ್ಪನ್ನವಾಯಿತು ('ಅಹಂ'ಎಂಬುದು ಮಕಾರಾಂತವಾದ ಅವ್ಯಯವು ತತ್ವವಾಚಕವಾಗಿದೆ) ॥೮॥

**ವೈಕಾರಿಕಾಶ್ಚ ಯೇ ದೇವಾ ಅರ್ಥಾಭಿವ್ಯಂಜನಂ ಯತಃ ।**
**ತೈಜಸಾನೀಂದ್ರಿಯಾಣ್ಯೇವ ಜ್ಞಾನಕರ್ಮಮಯಾನಿ ಚ ॥೯॥**

ಯತಃ=ಯಾವಇಂದ್ರಿಯಾಭಿಮಾನಿಗಳಿಂದ ಅರ್ಥಾಭಿವ್ಯಂಜನಂ=ಶಬ್ದಾದಿ-ವಿಷಯಗಳ ಜ್ಞಾನವಾಗುವುದೋ ವೈಕಾರಿಕಾಃ=ವೈಕಾರಿಕವೆಂಬ ಹೆಸರುಳ್ಳ ದೇವಾಃ ಚ=ದೇವತೆಗಳೂ ಸಹ ವೈಕಾರಿಕ ಅಹಂಕಾರದಿಂದ ಜನಿಸಿದರು. (ವೈಕಾರಿಕ ಅಹಂಕಾರದಿಂದ ಇಂದ್ರಿಯಾಭಿಮಾನಿಗಳು ಜನಿಸಿದರು) ಜ್ಞಾನಕರ್ಮಮಯಾನಿ

ಇಂದ್ರಿಯಾಣಿ ಏವ=ಜ್ಞಾನ ಪ್ರಧಾನಕವಾದ ಶ್ರೋತ್ರಾದಿಗಳು, ಕರ್ಮ ಪ್ರಧಾನಕ-ಗಳಾದ ವಾಗಾದಿಗಳು ಇವು ಮಾತ್ರ ತೈಜಸಾನಿ=ತೈಜಸ ಅಹಂಕಾರದ ಕಾರ್ಯಗಳು. ಇಂದ್ರಿಯಾಭಿಮಾನಿಗಳಲ್ಲ ಎಂದು ಭಾವ ॥೯॥

**ತಾಮಸೋ ಭೂತಸೂಕ್ಷ್ಮಾದಿರ್ಯತಃ ಖಂ ಲಿಂಗಮಾತ್ಮನಃ ॥೧೦॥**

ಯತಃ=ಯಾವ ಆಕಾಶಸೂಕ್ಷ್ಮಕ್ಕೆ ಉಪಚಾಯಕವಾದ ಶಬ್ದತನ್ಮಾತ್ರಾದಿಂದ ಆತ್ಮನಃ=ಪರಮಾತ್ಮನಿಗೆ ಲಿಂಗಂ=ಸರ್ವಗತತ್ವನಿತ್ಯತ್ವಗಳಲ್ಲಿದೃಷ್ಟಾಂತವಾಗಿ ಜ್ಞಾಪಕ-ವಾಗಿದೆಯೋ ಅಂಥ ಖಂ=ಭೂತಾಕಾಶವು ಜನಿಸುವುದೋ ತಸ್ಯ=ಅಂಥ ಭೂತಸೂಕ್ಷ್ಮಾದಿಃ=ಭೂತಸೂಕ್ಷ್ಮೋಪಚಾಯಕಶಬ್ದಕ್ಕೆ ಕಾರಣವಾದ ತಾಮಸಃ= ತಾಮಸಾಹಂಕಾರವು. ತಾಮಸಾಹಂಕಾರದಿಂದ ಶಬ್ದಸೂಕ್ಷ್ಮವು ಉಪಚಿತವಾಗಿ ಶಬ್ದವಾಗಿ, ಆ ಶಬ್ದದಿಂದ ಉಪಚಿತವಾದ ಆಕಾಶಸೂಕ್ಷ್ಮವು ಆಕಾಶವಾಗುವುದು. ಆಕಾಶಸೂಕ್ಷ್ಮವೇ ಆಕಾಶಕ್ಕೆ ಉಪಾದಾನಕಾರಣವು. ತಾಮಸ ಅಹಂಕಾರ ಮತ್ತು ಶಬ್ದಗಳು ಉಪಚಾಯಕ ಮಾತ್ರ. ॥೧೦॥

**ಕಾಲಮಾಯಾಂಶಯೋಗೇನ ಭಗವದ್ವೀಕ್ಷಿತಂ ನಭಃ ।**
**ತಾಮಸಾನುಸೃತಃ ಸ್ಪರ್ಶಂ ವಿಕುರ್ವನ್ ನಿರ್ಮಮೇಽನಿಲಂ ॥೧೧॥**

ಕಾಲ=ಪರಿಣಾಮಜನಕವಾದ ಕಾಲ, ಮಾಯಾ=ಚಿತ್‌ಪ್ರಕೃತಿ ಅಂಶಃ=ಸರ್ವ ಜೀವಾಭಿಮಾನಿಯಾದ ಹಿರಣ್ಯಗರ್ಭನು ಇವರುಗಳ ಯೋಗೇನ=ಪರಸ್ಪರ ಸಹಾಕರಿಗಳಾಗಿ ಮೇಲನವಾಗುವುದೆಂಬ ಸಂಬಂಧದಿಂದ ಭಗವದ್ವೀಕ್ಷಿತಂ= ಭಗವಂತನಿಂದ ಕೃಪೆಯಿಂದ ನೋಡಲ್ಪಟ್ಟ ತಾಮಸಾನುಸೃತಂ=ತಾಮಸ ಅಹಂಕಾರದಿಂದ ಅನುಸ್ಯೂತವಾದ ನಭಃ=ಆಕಾಶವು ಸ್ಪರ್ಶಂ ವಿಕುರ್ವನ್= ಸ್ಪರ್ಶಾಕಾರೇಣ ಪರಿಣತವಾಗಿ ಅನಿಲಂ=ವಾಯುವನ್ನು ನಿರ್ಮಮೇ=ಹುಟ್ಟಿಸಿತು.

ಭೂತಾಕಾಶದಲ್ಲಿ ಅನುಸ್ಯೂತವಾದ ತಾಮಸಾಹಂಕಾರ ಮತ್ತು ಭೂತಾಕಾಶಗಳು ಸ್ಪರ್ಶಸೂಕ್ಷ್ಮವನ್ನು ಉಪಚಯಗೊಳಿಸಿ ಸ್ಪರ್ಶತನ್ಮಾತ್ರಾವನ್ನಾಗಿಸುವುವು, ಆ ಸ್ಪರ್ಶಮಾತ್ರಾದಿಂದ ಉಪಚಿತವಾದ ವಾಯುಸೂಕ್ಷ್ಮವು ವಾಯುವಾಗಿ ಪರಿಣಮಿಸುವುದು. ಎಂದು ತಿಳಿಯಬೇಕು. 'ಕಾಲಮಾಯಾಂಶಯೋಗೇನ' ಎಂಬುದರ ವಿವಕ್ಷಿತ ಅರ್ಥವನ್ನು ತಿಳಿಸುವರು

**''ಕಾಲಮಾಯಾಂಶಯೋಗತಃ । ಕಾಲಾತ್ ಪರಿಣಾಮಾತ್ ।**
**ಪ್ರಕೃತೇಃ ಹಿರಣ್ಯಗರ್ಭಾಚ್ಚ''**

ಇಲ್ಲಿ 'ಕಾಲಮಾಯಾಂಶಯೋಗೇನ' ಎಂದೇ ಅನುವಾದ ಮಾಡಬೇಕಿತ್ತು ಆದರೂ ಮುಂದೆ ೧೩ನೇ ಶ್ಲೋಕದಲ್ಲಿ ಹೇಳುವ 'ಕಾಲಮಾಯಾಂಶಯೋಗತಃ' ಇತ್ಯಾದಿಗಳಲ್ಲಿಯೂ ಇಲ್ಲಿ ಹೇಳಿದ ಅರ್ಥವನ್ನೇ ಹೇಳಬೇಕು ಎನ್ನುವುದಕ್ಕಾಗಿ ಕಾಲಮಾಯಾಂಶಯೋಗತಃ ಎಂದು ಅನುವಾದ ಮಾಡಿರುವರು. 'ಕಾಲಾತ್ ಪರಿಣಾಮಾತ್' ಎಂದರೆ ಪರಿಣಾಮ ಜನಕವಾದ ಕಾಲ ಎಂದರ್ಥ. 'ಮಾಯಾ' ಪದವ್ಯಾಖ್ಯಾನವೇ 'ಪ್ರಕೃತೇಃ' ಎಂಬುದು. ಚೇತನಪ್ರಕೃತಿ ಎಂದರ್ಥ. 'ಅಂಶ' ಶಬ್ದಾರ್ಥವೇ 'ಹಿರಣ್ಯಗರ್ಭಾತ್' ಎಂಬುದು.ಬ್ರಹ್ಮ ಎಂದರ್ಥ. 'ಯೋಗ' ಶಬ್ದಾರ್ಥ ಹೇಳಲು ಇತರೇತರಯೋಗವಾಚಕ 'ಚ'ಶಬ್ದ ಪ್ರಯೋಗಿಸಿರುವರು. ಅಂದರೆ ಇವರೆಲ್ಲರ ಪರಸ್ಪರ ಸಹಕಾರಿತ್ವರೂಪಮೇಲನದಿಂದ. ಎಂದು ಭಾವ ||೧೧||

**ಅನಿಲೋಽಪಿ ವಿಕುರ್ವಾಣೋ ನಭಸೋರುಬಲಾನ್ವಿತಃ ।**
**ಸಸರ್ಜ ರೂಪತನ್ಮಾತ್ರಾಂ ಜ್ಯೋತಿರ್ಲೋಕಸ್ಯ ಲೋಚನಂ ||೧೨||**

ವಿಕುರ್ವಾಣಃ=ವಿಕಾರವಾಗುವ ಅನಿಲಃ ಅಪಿ=ವಾಯುವೂ ಕೂಡ ನಭಸಾ= ತನ್ನಲ್ಲಿ ಅನುಸ್ಯೂತವಾದ ಆಕಾಶದಿಂದ ಉರುಬಲಾನ್ವಿತಃ=ಬಹಳಬಲವುಳ್ಳದ್ದಾಗಿ ರೂಪತನ್ಮಾತ್ರಾಂ ಸಸರ್ಜ=ರೂಪಸೂಕ್ಷ್ಮವನ್ನು ಉಪಚಯಗೊಳಿಸಿ ರೂಪಮಾತ್ರಾ-ವನ್ನು ಸೃಷ್ಟಿಸಿತು, ಲೋಕಸ್ಯ ಲೋಚನಂ=ಪ್ರಪಂಚಪ್ರಕಾಶಕವಾದ ಜ್ಯೋತಿಃ= ತೇಜಸ್ಸನ್ನು ಸಸರ್ಜ=ಹುಟ್ಟಿಸಿತು.ಅಂದರೆ ಆಕಾಶದಿಂದ ಸೇರಿದ ವಾಯುವಿನಿಂದ ಉಪಚಿತವಾದ ರೂಪಸೂಕ್ಷ್ಮವು ರೂಪವಾಗಿ, ರೂಪದಿಂದ ಉಪಚಿತಗಳಾದ ತೇಜಃ ಸೂಕ್ಷ್ಮಗಳು ತೇಜಸ್ಸಾಗಿ ಪರಿಣಮಿಸಿದವು. ಎಂದು ಭಾವ. || ೧೨ ||

**ಅನಿಲೇನಾನ್ವಿತಂ ಜ್ಯೋತಿರ್ವಿಕುರ್ವತ್ ಪರವೀಕ್ಷಿತಂ ।**
**ಆಧತ್ತಾಂಭೋ ರಸಮಯಂ ಕಾಲಮಾಯಂಶಯೋಗತಃ ||೧೩||**

ಕಾಲಮಾಯಾಂಶಯೋಗತಃ=ಪರಿಣಾಮಕಾಲ, ಚಿತ್‌ಪ್ರಕೃತಿ, ಹಿರಣ್ಯಗರ್ಭರ ಮೇಲನದಿಂದ, ಪರವೀಕ್ಷಿತಂ=ಪರಮಾತ್ಮನ ಕೃಪಾದೃಷ್ಟಿಯಿಂದ ನೋಡಲ್ಪಟ್ಟ ಅನಿಲೇನ ಅನ್ವಿತಂ=ವಾಯುವಿನಿಂದ ಅನೂಸ್ಯೂತವಾದ ಜ್ಯೋತಿಃ=ಅಗ್ನಿಯು ರಸಮಯಂ=ರಸಕಾರ್ಯವಾದ ಅಂಭಃ=ನೀರನ್ನು ಆಧತ್ತ=ಹುಟ್ಟಿಸಿತು. ಅಂದರೆ ವಾಯುವಿನಿಂದ ಸೇರಿದ ಅಗ್ನಿಯಿಂದ ಉಪಚಿತವಾದ ರಸಸೂಕ್ಷ್ಮವು ರಸವಾಗಿ, ರಸದಿಂದ ಉಪಚಿತಗಳಾದ ಜಲಸೂಕ್ಷ್ಮಗಳು ಜಲವಾಗಿ ಪರಿಣಮಿಸಿದವು ಎಂದು ಭಾವ. ||೧೩||

**ಜ್ಯೋತಿಷಾಂಭೋಽನುಸಂಸೃಷ್ಟಂ ವಿಕುರ್ವತ್ಪರವೀಕ್ಷಿತಂ ।**
**ಮಹೀಂ ಗಂಧಗುಣಾಮಾಧಾತ್ ಕಾಲಮಾಯಾಂಶಯೋಗತಃ ॥೧೪॥**

ಪರವೀಕ್ಷಿತಂ=ಶ್ರೀಹರಿಯ ಅನುಗ್ರಹದೃಷ್ಟಿವಿಷಯವಾದ ಕಾಲಮಾಯಾಂಶ-ಯೋಗತಃ=ಪರಿಣಾಮಕಾಲ, ಚಿತ್‌ಪ್ರಕೃತಿ, ಹಿರಣ್ಯಗರ್ಭ ಇವರುಗಳ ಪರಸ್ಪರ ಸಹಕಾರರೂಪಮೇಲನದಿಂದ ಜ್ಯೋತಿಷಾ=ಅಗ್ನಿಯಿಂದ ಅನುಸಂಸೃಷ್ಟಂ= ಅನುಸ್ಯೂತವಾದ ಅಂಭಃ=ನೀರು ಗಂಧಗುಣಾಂ=ಗಂಧಮಾತ್ರಾವೇ ಕಾರಣವಾಗಿ-ವುಳ್ಳ ಮಹೀಂ= ಭೂಮಿಯನ್ನು ಆಧಾತ್=ಸೃಷ್ಟಿಸಿತು. ಜಲದಿಂದ ಗಂಧಸೂಕ್ಷ್ಮಗಳು ಉಪಚಿತವಾಗಿ ಗಂಧವಾಗಿ, ಗಂಧದಿಂದ ಉಪಚಿತವಾದ ಪೃಥಿವೀ ಸೂಕ್ಷ್ಮಗಳು ಪೃಥಿವೀತತ್ತ್ವವಾಯಿತು ಎಂದು ಭಾವ. ॥೧೪॥

**ಭೂತಾನಾಂ ನಭಆದೀನಾಂ ಯದ್ಯದ್ ಭಾವ್ಯಂ ಪರಾತ್ ಪರಂ ।**
**ತೇಷಾಂ ಪರಾನುಸಂಸರ್ಗಾದ್ ಯಥಾಸಂಖ್ಯಂ ಗುಣಾನ್ ವಿದುಃ ॥**

ಶಬ್ದಾದಿಗಳು ಆಕಾಶಾದಿಗಳ ಅಸಾಧಾರಣ ಗುಣವೆಂಬ ಭ್ರಮ ಪರಿಹರಿಸುವರು. ನಭಆದೀನಾಂ ಭೂತಾನಾಂ=ಅಕಾಶಾದಿ ಭೂತಗಳಲ್ಲಿ ಯದ್ಯತ್=ಯಾವುದಾವುದು ಪರಾತ್=ಹಿಂದಿನತತ್ತ್ವಗಳಿಗಿಂತ ಪರಂ=ನಂತರ ಭಾವ್ಯಂ=ಹುಟ್ಟುವದೋ ತೇಷಾಂ= ಅವುಗಳಿಗೆ ಪರಾನುಸಂಸರ್ಗಾತ್=ಹಿಂದಿನ ಕಾರಣಗಳ ಸಂಬಂಧದಿಂದ ಯಥಾ-ಸಂಖ್ಯಂ=ಕ್ರಮವಾಗಿ ಗುಣಾನ್=ಶಬ್ದಾದಿಗಳನ್ನು ಅಧಿಕ ಸಂಖ್ಯಾವುಳ್ಳವುಗಳೆಂದು ವಿದುಃ=ಜ್ಞಾನಿಗಳು ತಿಳಿಯುವರು.

ಅಂದರೆ ಆಕಾಶದಲ್ಲಿ ಶಬ್ದವು; ವಾಯುವಿನಲ್ಲಿ ಶಬ್ದ ಸ್ಪರ್ಶಗಳು; ತೇಜಸ್ಸಿನಲ್ಲಿ ಶಬ್ದ, ಸ್ಪರ್ಶ, ರೂಪಗಳು; ನೀರಿನಲ್ಲಿ ಶಬ್ದ ಸ್ಪರ್ಶ, ರೂಪ, ರಸಗಳು; ಪೃಥಿವಿಯಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಇವೆ ಎಂದು ತಿಳಿಯುವರು. ಮಹತ್ತತ್ತ್ವ, ಅಹಂಕಾರತತ್ತ್ವ ಮೊದಲಾದುವುಗಳಿಗೆ, ಪಂಚಭೂತಗಳಿಗೂ ಪ್ರಕೃತಿ ಎಂಬ ಹೆಸರಿನ ಆ ಆ ತತ್ತ್ವಗಳ ಸೂಕ್ಷ್ಮರೂಪಗಳೇ ಉಪಾದಾನ ಕಾರಣಗಳಾಗಿವೆ. ಅವ್ಯಕ್ತತತ್ತ್ವ, ಗುಣತ್ರಯಗಳಾಗಲಿ, ಮಹದಾದಿಗಳು ಉಪಚಾಯಕಗಳಷ್ಟೇ ಎಂದು ಸಂಪ್ರಾದಾಯ. ಅಂದರೆ ಮಹತ್ತತ್ತ್ವಕ್ಕೆ ಮಹತ್ತತ್ತ್ವಸೂಕ್ಷ್ಮ ಉಪಾದಾನ. ಮುಂತಾಗಿ ತಿಳಿಯಬೇಕು. ಭೂತಸೂಕ್ಷ್ಮಗಳಿಂದ ಭೂತಗಳು; ಮಾತ್ರಾಸೂಕ್ಷ್ಮಗಳಿಂದ ಮಾತ್ರಾಗಳು ಉಂಟಾಗುವುವು. ಶಬ್ದಸ್ಪರ್ಶರೂಪರಸಗಂಧ ಎಂಬ ಮಾತ್ರಾಗಳು ದ್ರವ್ಯಗಳು, ಇವುಗಳಿಗೆ ಗುಣಗಳು ಎಂಬ ವ್ಯವಹಾರ ಸತ್ತ್ವಾದಿಗಳಿಗೆ ಕರೆದಂತೆ ಅಪ್ರಧಾನ ಎಂಬರ್ಥದಲ್ಲಿ ಇದೆ. ಇವುಗಳಿಂದ ಉಪಚಿತವಾದ ಭೂತಸೂಕ್ಷ್ಮಗಳು

ಭೂತವಾಗುವುವು. ಇದೇ ಹೆಸರಿನ ಇಂದ್ರಿಯಗ್ರಾಹ್ಯ ಗುಣಗಳು ಬೇರೆ ಇವೆ. ದ್ರವ್ಯಾತ್ಮಕಶಬ್ದಾದಿಗಳು ಆಕಾಶಾದಿಗಳಿಗೆ ಕಾರಣಗಳು (ಉಪಚಾಯಕಗಳು). ಗುಣಾತ್ಮಕವಾದ ಶಬ್ದಾದಿಗಳು ಇಂದ್ರಿಯಗೋಚರವಾದವುಗಳು. ಇವು ಭೂತ-ಧರ್ಮಗಳು. ಆದ್ದರಿಂದ ಮೇಲೆ ಹೇಳಿದಂತೆ ಹಿಂದಿನ ಹಿಂದಿನ ಕಾರಣಗಳು ಮುಂದಿನ ಮುಂದಿನ ಕಾರ್ಯದಲ್ಲಿ ಅನುಸ್ಯೂತವಾಗಿ ಬರುವುದರಿಂದ, ಹಿಂದಿನ ಹಿಂದಿನ ಕಾರಣಗಳ ಗುಣಗಳೂ ಕ್ರಮವಾಗಿ ಮುಂದಿನ ಮುಂದಿನ ಕಾರ್ಯದಲ್ಲಿ ಹೆಚ್ಚುಹೆಚ್ಚಾಗಿ ಇವೆ ಎಂದು ತಿಳಿಯಬೇಕು. ||೧೫||

**ಏತೇ ದೇವಾಃ ಕಲಾ ವಿಷ್ಣೋಃ ಕಾಲಮಾಯಾಂಶಲಿಂಗಿನಃ ।**
**ನಾನಾತ್ವಾತ್ ಸ್ವಕ್ರಿಯಾನೀಶಾಃ ಪ್ರೋಚುಃ ಪ್ರಾಂಜಲಯೋ ವಿಭುಂ ॥**

ಕಾಲಮಾಯಾಂಶಲಿಂಗಿನಃ=ಕಾಲಾಭಿಮಾನಿ ಹಿರಣ್ಯಗರ್ಭ, ಚಿತ್‌ಪ್ರಕೃತಿ, ಜೀವಾಭಿಮಾನಿಹಿರಣ್ಯಗರ್ಭರುಗಳಿಂದ ನಿರ್ಮಿತವಾದ ಶರೀರವುಳ್ಳ ಏತೇ ದೇವಾಃ=ತತ್ವಾಭಿಮಾನಿಗಳಾದ ಈ ದೇವತೆಗಳು ವಿಷ್ಣೋಃ=ಶ್ರೀಹರಿಯ ಕಲಾಃ= ಭಿನ್ನಾಂಶರು ನಾನಾತ್ವಾತ್=ತತ್ವಗಳು ಬೇರೆ ಭೇರೆಯಾಗಿರುವುದರಿಂದ ಸ್ವಕ್ರಿಯಾ-ನೀಶಾಃ=ಬ್ರಹ್ಮಾಂಡವನ್ನು ಸೃಷ್ಟಿಸಲು ಅಸಮರ್ಥರಾಗಿ ವಿಭುಂ=ಪರಮಾತ್ಮನನ್ನು ಕುರಿತು ಪ್ರಾಂಜಲಯಃ=ಕೈಜೋಡಿಸಿ ಪ್ರೋಚುಃ=ಪ್ರಾರ್ಥಿಸಿದರು.

'ಕಾಲಮಾಯಾಂಶಲಿಂಗಿನಃ' ಎಂಬುದರ ಅರ್ಥ ತಿಳಿಯುವುದಿಲ್ಲ ಕಾರಣ ವ್ಯಾಖ್ಯಾನಿಸುವರು.

**ಕಾಲಮಾಯಾಂಶಲಿಂಗಿನಃ ತನ್ನಿಮಿತ್ತಶರೀರಾಃ**

ಕಾಲ,ಮಾಯಾ, ಅಂಶಗಳಿಂದ ನಿರ್ಮಿತವಾದದೇಹವುಳ್ಳವರು ಎಂದು ಅರ್ಥ. ದೇವತೆಗಳ ಶರೀರಗಳಿಗೆ ಜೀವಾಭಿಮಾನಿಯಾದ್ದರಿಂದ ಅಂಶಶಬ್ದವಾಚ್ಯರಾದ ಹಿರಣ್ಯಗರ್ಭರು ಕರ್ತೃಗಳಾಗಬಹುದು, ಮಾಯಾಶಬ್ದವಾಚ್ಯಚಿತ್‌ಪ್ರಕೃತಿಯೂ ಕರ್ತೃವಾಗಬಹುದು. ಆದರೆ ಜಡವಾದ ಕಾಲ ಹೇಗೆ ಕರ್ತೃವಾಗುವುದು? ಎಂಬ ಶಂಕೆಗೆ ಉತ್ತರಿಸುವರು.

**ಹಿರಣ್ಯಗರ್ಭಸ್ಯೈವ ಕಾಲಾಭಿಮಾನೀ ಜೀವಾಭಿಮಾನೀತಿ ದ್ವಿವಿಧಂ ರೂಪಂ ।**
**"ಕಾಲಜೀವಾಭಿಮಾನೇನ ರೂಪದ್ವಂದ್ವೀ ಚತುರ್ಮುಖಃ" । ಇತಿ ಪಾದ್ಮೇ ।**

ಇಲ್ಲಿ ಜಡವಾದ ಕಾಲ ಶರೀರಕರ್ತೃವಲ್ಲ. ಕಾಲಾಭಿಮಾನೀ ಕಾಲನಾಮಕ ಬ್ರಹ್ಮದೇವರೇ ಕರ್ತೃಗಳು ಎಂದು ಭಾವ. 'ಕಾಲಾಭಿಮಾನಿಯಾದ ಕಾಲ ಎಂಬ

ಮತ್ತು ಜೀವಾಭಿಮಾನಿ ಅಂಶ ಎಂಬ ಎರಡುರೂಪ ಉಳ್ಳವನು ಚತುರ್ಮುಖನು' ಎಂದು ಪದ್ಮಪುರಾಣದಲ್ಲಿದೆ ॥೧೬॥

**ದೇವಾ ಊಚುಃ**

**ನತಾಃ ಸ್ಮ ತೇ ದೇವ ಪದಾರವಿಂದಂ**
**ಪ್ರಪನ್ನತಾಪೋಪಶಮಾತಪತ್ರಂ ।**
**ಯನ್ಮೂಲಕೇತಾ ಯತಯೋಽಂಜಸೋರು-**
**ಸಂಸಾರದುಃಖಂ ಬಹಿರುತ್ಕ್ಷಿಪಂತಿ ॥೧೭॥**

ಹೇ ದೇವ=ಸ್ವಾಮಿಯಾದ ಶ್ರೀಹರಿಯೇ ಯನ್ಮೂಲಕೇತಾಃ=ಯಾವ ಪಾದಾರವಿಂದತಲವೇ ಆಶ್ರಯವಾಗಿವುಳ್ಳ (ಪಾದಾರವಿಂದಜ್ಞಾನಿಗಳಾದ) ಅಂಜಸಾ ಯತಯಃ=ಚೆನ್ನಾಗಿ ಇಂದ್ರಿಯಜಯವುಳ್ಳವರು ಉರುಸಂಸಾರದುಃಖಂ= ಬಹಳವಾದ ಸಂಸಾರದುಃಖವನ್ನು ಬಹಿಃ=ದೂರದಿಂದಲೇ ಉತ್ಕ್ಷಿಪಂತಿ= ತ್ಯಜಿಸುವರೋ ಅಂಥ ತೇ=ನಿನ್ನ ಪ್ರಪನ್ನತಾಪೋಪಶಮಾತಪತ್ರಂ=ಶರಣಾಗತರ ತಾಪತ್ರಯಕಳೆಯಲು ಛತ್ರದಂತಿರುವ ಪಾದಾರವಿಂದಂ ನತಾಃಸ್ಮ=ಪಾದಕಮಲ-ವನ್ನು ನಮಸ್ಕರಿಸುವೆವು ॥೧೭॥

**ಋತೇ ಯದಸ್ಮಿನ್ ಭವ ಈಶಜೀವಾ-**
**ಸ್ತಾಪತ್ರಯೇಣಾಭಿಹತಾ ನ ಶರ್ಮ ।**
**ಆತ್ಮಂಲ್ಲಭಂತೇ ಭಗವಂಸ್ತವಾಂಘ್ರಿ-**
**ಚ್ಛಾಯಾಂಶವಿದ್ಯಾಮತ ಆಶ್ರಯೇಮ ॥೧೮॥**

ಹೇ ಈಶ=ಶ್ರೀಪರಮಾತ್ಮನೇ ತಾಪತ್ರಯೇಣ ಅಭಿಹತಾಃ=ತ್ರಿವಿಧತಾಪಗಳಿಂದ ಪೀಡಿತರಾಗಿ ಜೀವಾಃ=ಜೀವರುಗಳು ಯದ್ ಋತೇ=ಯಾವ ನಿನ್ನ ಜ್ಞಾನವಿಲ್ಲದೇ ಅಸ್ಮಿನ್‌ಭವೇ=ಈ ಸಂಸಾರದಲ್ಲಿ ಆತ್ಮನ್=ತನ್ನಲ್ಲಿ ಶರ್ಮ=ಸುಖವನ್ನು ನ ಲಭಂತೇ=ಹೊಂದುವುದಿಲ್ಲ, ಯಾವ ನಿನ್ನ ಜ್ಞಾನವಿದ್ದರೆ ಸುಖ ಪಡೆಯುವರೋ ಅತಃ=ಆದ ಕಾರಣ ಹೇ ಭಗವನ್=ಸ್ವಾಮಿಯೇ ತವಾಂಘ್ರಿಚ್ಛಾಯಾಂಶವಿದ್ಯಾಂ ಆಶ್ರಯೇಮ=ನಿನ್ನ ಸ್ವರೂಪಭೂತವಿದ್ಯೆಗೆ ಸಾಕ್ಷಾತ್ ಪ್ರತಿಬಿಂಬವಾದ ಲಕ್ಷ್ಮಿದೇವಿ-ಯಲ್ಲಿರುವ ನಿನ್ನ ವಿಷಯಕ ವಿದ್ಯೆಯ ಪ್ರತಿಬಿಂಬವಾದ, ಚತುರ್ಮುಖನಲ್ಲಿರುವ ನಿನ್ನ ವಿಷಯಕ ವಿದ್ಯೆಯ ಪ್ರತಿಬಿಂಬಗಳಾದ, ದೇವತೆಗಳಲ್ಲಿ ತಾರತಮ್ಯದಿಂದಿರುವ ಬ್ರಹ್ಮವಿದ್ಯಾವನ್ನು ನಮ್ಮ ಮೋಕ್ಷಕ್ಕಾಗಿ ಆಶ್ರಯಿಸುವೆವು.

ಅಂಘ್ರಿಚ್ಛಾಯಾಂಶವಿದ್ಯಾಂ ಎಂಬುದರ ಅರ್ಥ ಹೇಳುವರು –

**"ಬ್ರಹ್ಮ ವಿದ್ಯಾ ಹರೇಶ್ಛಾಯಾ ತದಂಶೋ ಹಿ ಸುರೇಷ್ವಪಿ ।**
**ಸರ್ವವಿದ್ಯಾ ಶ್ರಿಯಃ ಪ್ರೋಕ್ತಾಃ ಪ್ರಧಾನಾಂಶಶ್ಚತುರ್ಮುಖಃ"॥ಇತಿಬ್ರಾಹ್ಮೇ**

ಹರೇಃ=ಹರಿಯ ಸ್ವರೂಪವಿದ್ಯೆಯ ಛಾಯಾ=ಸಾಕ್ಷಾತ್‌ಪ್ರತಿಬಿಂಬಭೂತವಾದ ಬ್ರಹ್ಮವಿಷಯಕವಿದ್ಯೆಯ ಅಂಶ=ಪ್ರತಿಬಿಂಬಗಳಾದ ವಿದ್ಯೆಗಳು ದೇವತೆಗಳಲ್ಲಿ ಋಷಿಗಳಲ್ಲಿ ಇದೆ. ಸರ್ವವಿದ್ಯಾಃ=ದೇವತೆಗಳವಿದ್ಯೆಗಳಿಗೆ ಬಿಂಬಭೂತವಾದ ಎಲ್ಲ ವಿದ್ಯೆಗಳು ಲಕ್ಷ್ಮೀದೇವಿಯಲ್ಲಿ ಇವೆ. ಎಂದು ಆಗಮಗಳಲ್ಲಿ ಹೇಳಿರುವುದು. ದೇವತೆಗಳ ಮಧ್ಯದಲ್ಲಿಯೂ ಲಕ್ಷ್ಮೀದೇವಿಯವಿದ್ಯೆಯ ಪ್ರತಿಬಿಂಬವಾದ ಪ್ರಧಾನವಿದ್ಯೆ ಚತುರ್ಮುಖನಲ್ಲಿ ಇದೆ.ಇತರರಲ್ಲಿ ತಾರತಮ್ಯಾನುಸಾರವಿದೆ ಎಂದು ಭಾವ. ॥೧೮॥

ಭಗವಂತನ ಪಾದಾರವಿಂದಜ್ಞಾನ ಮೋಕ್ಷಸಾಧನವೆಂದು ಹೇಳುವರು–

**ಮಾರ್ಗಂತಿ ಯತ್ ತೇ ಮುಖಪದ್ಮನೀಡೈ-**
**ಶ್ಛಂದಃ ಸುಪರ್ಣೈರ್ಋಷಯೋ ವಿವಿಕ್ತೇ ।**
**ಯಚ್ಚಾಘಮರ್ಷೋ ದ್ಯುಸರಿದ್ಧರಾಯಾಃ**
**ಪರಂ ಪದಂ ತೀರ್ಥಪದಃ ಪ್ರಪನ್ನಾಃ ॥೧೯॥**

ಋಷಯಃ=ಜ್ಞಾನಿಗಳು ವಿವಿಕ್ತೇ=ಏಕಾಂತದಲ್ಲಿದ್ದು ತೇ=ನಿನ್ನ ಮುಖಪದ್ಮ-ನೀಡೈಃ=ಮುಖಕಮಲವೆಂಬ ಗೂಡಿನಿಂದ ಹೊರಬಂದ ಛಂದಃಸುಪರ್ಣೈಃ= ವೇದಗಳೆಂಬ ಪಕ್ಷಿಗಳಿಂದ ಯತ್ಪದಂ=ಯಾವ ನಿನ್ನ ಸ್ವರೂಪವನ್ನು ಮಾರ್ಗಯಂತಿ= ವಿಚಾರಮಾಡುವರೋ ಯಚ್ಚ=ಯಾವುದರಿಂದ ಅಘಮರ್ಷಃ=ಪಾಪನಾಶವಾಗು-ವುದೋ ಯಚ್ಚ=ಯಾವುದು ದ್ಯುಸರಿದ್ಧರಾಯಾಃ=ಗಂಗಾನದಿಯಿಂದ ಸಹಿತವಾದ ಭೂಮಿಗೆ ಪರಂ ಪದಂ=ಉತ್ಪತ್ತಿಸ್ಥಾನವೋ ಅಂಥ ತೀರ್ಥಪದಃ ತೇ=ತೀರ್ಥಪದ-ವೆಂಬ ಶಬ್ದವಾಚ್ಯನಾದ ನಿನ್ನ ಪದಂ=ಪಾದವನ್ನು ಪ್ರಪನ್ನಾಃ=ಶರಣುಬಂದಿರುವೆವು. ಮನಸಿನಿಂದ ಧ್ಯಾನಮಾಡುವುರೆಂದರ್ಥ. ದ್ಯುಸರಿದ್ಧರಾಯಾಃ ಎಂಬಲ್ಲಿ ಷಷ್ಠೀತತ್ಪುರುಷ ಪ್ರತೀತಿಯನ್ನು ನಿವಾರಿಸಲು ವಿವಕ್ಷಿತತಾತ್ಪರ್ಯ ಹೇಳುವರು–

**"ದ್ಯುಸರಿತಃ ಧರಾಯಾಶ್ಚ"**

ಇದರಿಂದ'ದ್ಯುಸರಿತ್ ಸಹಿತಾ ಧರಾ ದ್ಯುಸರಿದ್ಧರಾ' ಎಂದು ಮಧ್ಯಮಪದ-ಲೋಪಿಸಮಾಸ ಎಂದು ತಿಳಿಯುವುದು. ಗಂಗಾನದಿಗೂ ಭೂಮಿಗೂ ಎಂದರ್ಥ.

ಇದರಿಂದ ಶ್ರವಣಾದಿಗಳು ಜ್ಞಾನಸಾಧನವೆಂದಂತಾಯಿತು. ಮೇಲಿನ ಶ್ಲೋಕದಲ್ಲಿ, ಒಂದುಗೂಡಿನಿಂದ ಪಕ್ಷಿ ಹಾರಿಬಂದಾಗ ಅದು ಬಂದ ಹಾದಿ ಹಿಡಿದು ಹೋದರೆ ಅದರ ಗೂಡು ಸಿಗುವಂತೆ, ಹರಿಯ ಮುಖದಿಂದ ಬಂದ ವೇದಮಾರ್ಗದಿಂದ ಹೋದಾಗ ವೇದಾವಾಸವಾದ ಶ್ರೀಹರಿಯ ಮುಖಕಮಲದ ದರ್ಶನವಾಗುವುದು ಎಂಬ ಭಾವ ತಿಳಿಯುವುದು. ವೇದಗಳು ಪ್ರಮಾಣವೆಂದೂ ಸೂಚಿತವಾಗುವುದು. ॥೧೯॥

ಮೋಕ್ಷಸಾಧಕ ಇತರಸಹಕಾರಿಗಳನ್ನು ತಿಳಿಸುವರು ಮುಂದಿನ ಶ್ಲೋಕದಿಂದ-

**ಯಚ್ಛ್ರದ್ಧಯಾ ಶ್ರುತವತ್ಯಾ ಚ ಭಕ್ತ್ಯಾ**
**ಸಂಮೃಜ್ಯಮಾನೇ ಹೃದಯೇಽವಧಾರ್ಯ ।**
**ಜ್ಞಾನೇನ ವೈರಾಗ್ಯಬಲೇನ ಧೀರಾ**
**ವ್ರಜಂತಿ ಯತ್ ತೇಽಂಘ್ರಿಸರೋಜಪೀಠಮ್ ॥೨೦॥**

ಯತ್=ಯಾವುದು ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ ಶ್ರುತವತ್ಯಾ=ಶ್ರವಣಪೂರ್ವಕವಾದ ಭಕ್ತ್ಯಾ=ಭಕ್ತಿಯಿಂದ ಸಂಮೃಜ್ಯಮಾನೇ=ಚೆನ್ನಾಗಿ ಶೋಧಿಸಲ್ಪಟ್ಟ (ಶುದ್ಧವಾದ) ಹೃದಯೇ=ಮನಸ್ಸಿನಲ್ಲಿ ಅವಧಾರ್ಯ=ಸನ್ನಿಹಿತವಾಗಿ ವೈರಾಗ್ಯಬಲೇನ=ವೈರಾಗ್ಯವೇಬಲವಾಗಿವುಳ್ಳ ಜ್ಞಾನೇನ=ಜ್ಞಾನದಿಂದ ಧೀರಾಃ=ಜ್ಞಾನಿಗಳು ತೇ=ನಿನ್ನ ಅಂಘ್ರಿಸರೋಜಪೀಠಂ=ಪಾದಕಮಲವೆಂಬ ಪೀಠವನ್ನು ವ್ರಜಂತಿ=ಹೊಂದುವರು. ॥೨೦॥

**ವಿಶ್ವಸ್ಯ ಜನ್ಮಸ್ಥಿತಿಸಂಯಮಾರ್ಥೇ**
**ಕೃತಾವತಾರಸ್ಯ ಪದಾಂಬುಜಂ ತೇ ।**
**ವ್ರಜೇಮ ಸರ್ವೇ ಶರಣಂ ಯದೀಶ**
**ಸ್ಮೃತಂ ಪ್ರಯಚ್ಛತ್ಯಭಯಂ ಸ್ವಪುಂಸಾಂ ॥೨೧॥**

ಹೇ ಈಶ=ಸ್ವಾಮಿಯೇ, ವಿಶ್ವಸ್ಯ=ಪ್ರಪಂಚದ, ಜನ್ಮಸ್ಥಿತಿಸಂಯಮಾರ್ಥೇ=ಉತ್ಪತ್ತಿ, ಸ್ಥಿತಿ, ಸಂಹಾರ ಮಾಡುವುದಕ್ಕಾಗಿ ಕೃತಾವತಾರಸ್ಯ=ಅವತಾರಮಾಡಿದ, ತೇ=ನಿನ್ನ ಪದಾಂಬುಜಂ=ಪಾದಕಮಲವು ಸ್ಮೃತಂ=ಸ್ಮರಿಸಲ್ಪಟ್ಟು ಸ್ವಪುಂಸಾಂ=ಭಕ್ತರಿಗೆ ಅಭಯಂ ಪ್ರಯಚ್ಛತಿ=ಭಯಪರಿಹರಿಸುವುದು ಯತ್ ತತ್=ಆದ್ದರಿಂದ ಸರ್ವೇ ವಯಂ=ನಾವೆಲ್ಲರೂ, ಶರಣಂ ವ್ರಜೇಮ=ಮೊರೆ ಹೋಗುವೆವು. ಐಹಿಕಭಯಪರಿಹಾರವೂ ಆಗುವುದು ಎಂದುಭಾವ ॥೨೧॥

ಭಗವಂತನ ಜ್ಞಾನವೇ ಮೋಕ್ಷಸಾಧನವಾದಮೇಲೆ ಎಲ್ಲರೂ ಏಕೆ ಜ್ಞಾನ ಪಡೆಯುವುದಿಲ್ಲ ಎಂದರೆ ಹೇಳುವರು

**ಯತ್ ಸಾನುಬಂಧೇಽಸತಿ ದೇಹಗೇಹೇ**
**ಮಮಾಹಮಿತ್ಯೂಢದುರಾಗ್ರಹಾಣಾಂ ।**
**ಪುಂಸಾಂ ಸುದೂರಂ ವಸತೋಽಪಿ ಪುರ್ಯಾಂ**
**ಭಜೇಮ ತತ್ ತೇ ಭಗವನ್ ಪದಾಬ್ಜಂ ॥೨೨॥**

ಯತ್=ಯಾವುದು ಸಾನುಬಂಧೇ=ಮಡದಿ ಮಕ್ಕಳೇ ಮೊದಲಾದ ಪರಿಕರ ಸಹಿತವಾದ ಅಸತಿ=ಅಮಂಗಲವಾದ ದೇಹಗೇಹೇ=ದೇಹಸಹಿತವಾದ ಮನೆಯಲ್ಲಿ ಮಮಾಹಂ ಇತಿ=ದೇಹದಲ್ಲಿ ನಾನೆಂದು, ಗೇಹದಲ್ಲಿ ನನ್ನದೆಂದು ಊಢದುರಾ-ಗ್ರಹಾಣಾಂ=ನಿರೂಢವಾದ ದುಷ್ಟವಾದ ಜ್ಞಾನವುಳ್ಳ (ಭ್ರಮವುಳ್ಳ) ಪುಂಸಾಂ=ಜನರ ಪುರ್ಯಾಂ=ದೇಹದಲ್ಲಿ ವಸತೋಽಪಿ=ಇರುವಂಥ ತೇ=ನಿನ್ನ ಪದಾಬ್ಜಂ= ಪಾದಕಮಲವು ಸೂದೂರಂ=ಸಾಕ್ಷಾತ್ಕಾರ ಮಾಡಿಕೊಳ್ಳಲು ಅತ್ಯಶಕ್ಯವೋ ತತ್= ಅಂಥ ಪಾದಕಮಲವನ್ನು ಭಜೇಮ=ಸೇವಿಸುವೆವು. ॥೨೨॥

ವೈರಾಗ್ಯವಿಲ್ಲದಿರುವುದರಿಂದ ಎಲ್ಲರೂ ಜ್ಞಾನ ಸಂಪಾದಿಸುವುದಿಲ್ಲವೆಂದಂತಾ-ಯಿತು. ಸಮೀಪದಲ್ಲಿರುವ ಭಗವಂತನ ದರ್ಶನಕ್ಕೆ ವೈರಾಗ್ಯವೇಕೆ ಎಂದರೆ ಹೇಳುವರು –

**ತಂ ತ್ವಾಮಸದ್‌ವೃತ್ತಿಭಿರಕ್ಷಭಿರ್ಯೇ**
**ಪರಾಹೃತಾಂತರ್ಮನಸಃ ಪರೇಶ ।**
**ಅತೋ ನ ಪಶ್ಯಂತ್ಯುರುಗಾಯ ನೂನಂ**
**ಯತ್ ತೇ ಪದನ್ಯಾಸವಿಲಾಸಲಕ್ಷ್ಮ್ಯಾಃ ॥೨೩॥**

ಹೇಉರುಗಾಯ=ಶ್ರೇಷ್ಠರಾದ ಬ್ರಹ್ಮಾದಿಗಳಿಂದ ಸ್ತುತನೇ ಪರೇಶ= ಸರ್ವೋತ್ತಮನೇ ಅಸದ್ವೃತ್ತಿಭಿಃ=ಅಮಂಗಲವಾದ ವಿಷಯಗಳಲ್ಲಿ ಗಮನವುಳ್ಳ ಬಹಿರ್ಮುಖಗಳಾದ ಅಕ್ಷಿಭಿಃ=ಇಂದ್ರಿಯಗಳಿಂದ ತೇ=ನಿನ್ನ ಪದನ್ಯಾಸ=ಗಮನದ ವಿಲಾಸವಿಭ್ರಮದ ಲಕ್ಷ್ಮ್ಯಾಃ=ಶೋಭೆಯಿಂದ ಪರಾಹೃತ=ಬಹಿಃಕೃತವಾದ (ದೂರವಾದ) ಅಂತಃ=ಒಳಗಿರುವ ವಸ್ತುವನ್ನು ಗ್ರಹಣ ಮಾಡಲು ಯೋಗ್ಯವಾದ ಮನಸಃ=ಮನಸ್ಸುಳ್ಳವರು ಅತಃ=ಆದ್ದರಿಂದ ನೂನಂ=ನಿಶ್ಚಯವಾಗಿ ತಂ ತ್ವಾ= ಒಳಗಿರುವ ನಿನ್ನನ್ನು ನ ಪಶ್ಯಂತಿ=ನೋಡಲಾರರು. ವೈರಾಗ್ಯವಿಲ್ಲದಿದ್ದರೆ ಬಾಹ್ಯೇಂದ್ರಿ-

ಯಗಳು ಮನಸ್ಸನ್ನು ತಮ್ಮ ವಿಷಯಗಳ ಕಡೆ ಸೆಳೆದೊಯ್ಯುವವು. ಕಾರಣ ಒಳಗೆ ನೀನು ಇದ್ದರೂ ಮನಸ್ಸಿನಿಂದ ನಿನ್ನನ್ನು ಕಾಣುವುದಿಲ್ಲ ಎಂದು ಭಾವ. ॥೨೩॥

ಹಿಂದಿನ ಶ್ಲೋಕಗಳಲ್ಲಿ ಶ್ರವಣಾದಿರೂಪ ವಿಚಾರ, ಭಕ್ತಿ,ವೈರಾಗ್ಯಗಳು ಜ್ಞಾನಕ್ಕೆ ಪ್ರಧಾನ ಸಾಧನವೆಂದು ಹೇಳಿದ್ದು ಎಲ್ಲ ಅಧಿಕಾರಿಗಳಿಗೆ ಆವಶ್ಯಕವಲ್ಲ. ವಾಯುಜಯ ಮುಂತಾದ ಯೋಗಪ್ರಧಾನರಾದವರಿಗೆ ಶ್ರವಣಾದಿಗಳು ಕಡಿಮೆಯಾದರೂ, ಆವಶ್ಯಕವಾದ ವಾಯುಜಯದಿಂದಲೇ ಶೀಘ್ರಮುಕ್ತಿ-ಯಾಗುವುದು ಪ್ರಮಾಣಸಿದ್ಧವಾಗಿದೆಯಲ್ಲ? ಎಂಬ ಶಂಕೆಗೆ, ಅವರಿಗಾಗುವ ಮುಕ್ತಿ ಸಂಪೂರ್ಣವಾದುದಲ್ಲ, ಅಲ್ಪವಾದುದು ಎಂಬ ಅಭಿಪ್ರಾಯದಿಂದ ಹೇಳುವರು. ಶ್ರೀ ಹರಿಯ ಅಪರೋಕ್ಷಜ್ಞಾನಸಾಧನವಾದ ಉಪಾಸನಾ ಎರಡು ವಿಧ. ಒಂದು ಧ್ಯಾನರೂಪವಾದುದು. ಶಾಸ್ತ್ರಶ್ರವಣರೂಪವಾದುದು ಮತ್ತೊಂದು. ಮೊದಲನೆಯದು ಕಷ್ಟಸಾಧ್ಯವಾದುದು, ಎರಡನೆಯದು ಸುಲಭಸಾಧ್ಯವಾದುದು ಎಂದು ಹೇಳುವರು.

**ಪಾನೇನ ತೇ ದೇವ ಕಥಾಸುಧಾಯಾಃ**
**ಪ್ರವೃದ್ಧಭಕ್ತ್ಯಾ ವಿಶದಾಶಯಾ ಯೇ ।**
**ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ**
**ಯಥಾಂಜಸಾ ತ್ವಾಽಽಪುರಕುಂಠಧಿಷ್ಣ್ಯಂ ॥೨೪॥**

ಹೇ ದೇವ=ಶ್ರೀಹರಿಯೇ ತೇ=ನಿನ್ನ ಕಥಾಸುಧಾಯಾಃ=ಕಥಾಮೃತದ ಪಾನೇನ=ಶ್ರವಣಾದಿಗಳನ್ನು ಮಾಡುವುದರಿಂದ ಪ್ರವೃದ್ಧ=ಅಭಿವೃದ್ಧವಾದ ಭಕ್ತ್ಯಾ=ಭಕ್ತಿಯಿಂದ ವಿಶದಾಶಯಾಃ=ನಿರ್ಮಲವಾದ ಅಂತಃಕರಣವುಳ್ಳವರು ಯೇ ತೇ=ಯಾರೋ ಅವರು ವೈರಾಗ್ಯಸಾರಂ=ವೈರಾಗ್ಯದ ಫಲವಾದ ಯಥಾ=ಯಥಾರ್ಥವಾದ ಬೋಧಂ=ಅಪರೋಕ್ಷಜ್ಞಾನವನ್ನು ಪ್ರತಿಲಭ್ಯ=ಹೊಂದಿ ಅಂಜಸಾ=ಬಹಳವಾಗಿ ಅಥವಾ ಋಜುಮಾರ್ಗದಿಂದ ಅಕುಂಠಧಿಷ್ಣ್ಯಂ=ಅಪ್ರತಿಹತನಾದ, ಮಂದಿರಸ್ಥಾನೀಯನಾದ ಅಥವಾ ಅಪರಿಚ್ಛಿನ್ನ ಸ್ವರೂಪನಾದ ತ್ವಾ=ನಿನ್ನನ್ನು ಆಪುಃ=ಹೇಗೆ ಹೊಂದುವರೋ ॥೨೪॥

**ತಥಾ ಪರೇ ತ್ವಾತ್ಮಸಮಾಧಿಯೋಗ-**
**ಬಲೇನ ಜಿತ್ವಾ ಪ್ರಕೃತಿಂ ಬಲಿಷ್ಠಾಂ ।**
**ತ್ವಾಮೇವ ಧೀರಾಃ ಪುರುಷಂ ವಿಶಂತಿ**
**ತೇಷಾಂ ಶ್ರಮಃ ಸ್ಯಾನ್ನತು ಸೇವಯಾ ತೇ ॥೨೫॥**

ತಥಾ=ಹಾಗೆ ಪರೇ ತು=ಬೇರೆಯವರಾದರೂ ಆತ್ಮಸಮಾಧಿಯೋಗಬಲೇನ= ಪರಮಾತ್ಮನಲ್ಲಿ ಚಿತ್ತೈಕಾಗ್ರ್ಯ ಮತ್ತು ವಾಯುಜಯಾದಿಗಳ ಸಾಮರ್ಥ್ಯದಿಂದ ಬಲಿಷ್ಠಾಂ=ಅನ್ಯರಿಂದ ಜಯಿಸಲಾಗದ ಪ್ರಕೃತಿಂ=ದುರ್ಗಾಳನ್ನು ಜಿತ್ವಾ=ಭಕ್ತಿಯಿಂದ ವಶಮಾಡಿಕೊಂಡು ಧೀರಾಃ=ಅಪರೋಕ್ಷಜ್ಞಾನಿಗಳು ಪುರುಷಂ=ಪೂರ್ಣಷಡ್ಗುಣ-ನಾದ ತ್ವಾಂ=ನಿನ್ನನ್ನು ವಿಶಂತಿ=ಪ್ರವೇಶಿಸುವರು ಹಿಂದಿನವರಂತೆ ಚೆನ್ನಾಗಿ ಅಲ್ಲ. ಅಷ್ಟೇ ಅಲ್ಲ, ತೇಷಾಂ=ಇವರಿಗೆ ಶ್ರಮಃ ಸ್ಯಾತ್=ವಾಯುಜಯಾದಿಗಳಿಂದ ಶ್ರಮವಾಗುವುದು, ತೇ ಸೇವಯಾ ನ ತು=ಶ್ರವಣಾದಿರೂಪ ನಿನ್ನ ಸೇವೆಯಿಂದ ನಿನ್ನನ್ನು ಪಡೆಯುವವರಿಗೆ ಶ್ರಮವಿಲ್ಲ. ಆದ್ದರಿಂದ ಶ್ರವಣಾದಿಪ್ರಧಾನರಿಗೆ ಉತ್ತಮ ಮುಕ್ತಿಯಾದ ಕಾರಣ ಪ್ರಧಾನವಾಗಿ ಶ್ರವಣಾದಿಗಳನ್ನು ಮಾಡಬೇಕು.

ಇಲ್ಲಿ ಪ್ರಕೃತಿಜಯ, ವಾಯುಜಯಗಳು ಹೇಳಲ್ಪಟ್ಟಿವೆ. ಪ್ರಸಿದ್ಧ ಜಯವಾಗಲು ಸಾಧ್ಯವಿಲ್ಲ. ಕಾರಣ ಅದರರ್ಥವನ್ನು ಪ್ರಮಾಣದಿಂದ ಹೇಳುವರು.

**''ವಾಯೋಶ್ಚ ಪ್ರಕೃತೇರ್ವಿಷ್ಣೋರ್ಜಯೋ ಭಕ್ತ್ಯೈವ ನಾನ್ಯಥಾ'' ।**
**ಇತಿ ದತ್ತಾತ್ರೇಯಯೋಗೇ ।**

ವಾಯು, ಪ್ರಕೃತಿ, ವಿಷ್ಣು ಇವರನ್ನು ಗೆಲ್ಲುವುದು ಎಂದರೆ, ಭಕ್ತಿಯನ್ನು ಮಾಡಿ ಅವರ ಪ್ರಸಾದದಿಂದ ವಶಮಾಡಿಕೊಳ್ಳುವುದು. ಹೊರತು ಅವರನ್ನು ಗೆಲ್ಲುವುದು ಎಂದಲ್ಲ॥೨೫॥

ಇನ್ನು ನಾಲ್ಕು ಶ್ಲೋಕಗಳಿಂದ ತಮ್ಮ ಅಭೀಷ್ಟವನ್ನು ಕೇಳುವರು.

**ತತ್ತೇ ವಯಂ ಲೋಕಸಿಸೃಕ್ಷಯಾಽದ್ಯ**
**ತ್ವಯಾ ವಿಸೃಷ್ಟಾಸ್ತ್ರಿಭಿರಾತ್ಮಭಿರ್ಯೇ ।**
**ಸರ್ವೇ ವಿಯುಕ್ತಾ ಸ್ವವಿಹಾರತಂತ್ರಂ**
**ನ ಶಕ್ನುಮಸ್ತತ್ ಪ್ರತಿಕರ್ತವೇ ತೇ ॥೨೬॥**

**''ತ್ರಿಭಿರಾತ್ಮಭಿಃ ಕಾಲಮಾಯಾಂಶೈಃ''। ಸತ್ಪ್ರಮುಖಾಃ ಮಹದಾದಯಃ**

ಹಿಂದೆ ಕಾಲಾಭಿಮಾನಿಬ್ರಹ್ಮ, ಚಿತ್‌ಪ್ರಕೃತಿ, ಜೀವಾಭಿಮಾನಿಬ್ರಹ್ಮ ಇವರೆ ನಿಮಿತ್ತ ಕಾರಣರಾಗಿ ಪ್ರಕೃತರಾಗಿರುವರು. ಕಾರಣ ಅವರನ್ನೇ ಸ್ವೀಕರಿಸಬೇಕು. ಸತ್‌ಶಬ್ದಕ್ಕೆ ಕಾರ್ಯವೆಂದರ್ಥವಿರುವುದರಿಂದ, ಮಹತ್ತತ್ವವು ಆದಿಕಾರ್ಯವಾದ್ದರಿಂದ ಅದೇ ಇಲ್ಲಿ ಮುಖ್ಯವಾಗಿ ವಿವಕ್ಷಿತವಾಗಿದೆ. ಮಹದಾದಿ ಅಭಿಮಾನಿಗಳೆಂದರ್ಥ.

ಶ್ಲೋಕಾರ್ಥ-ಯಾವ ಕಾರಣ ನೀನು ಈ ರೀತಿ ಮೋಕ್ಷಾದಿ ಸರ್ವಪುರುಷಾರ್ಥ-ಪ್ರದನೋ ತತ್=ಆ ಕಾರಣ ತ್ವಯಾ=ನಿನ್ನಿಂದ ಲೋಕಸಿಸೃಕ್ಷಯಾ=ಜಗತ್ತನ್ನು ಸೃಷ್ಟಿಮಾಡುವ ಇಚ್ಛೆಯಿಂದ ತ್ರಿಭಿಃ ಆತ್ಮಭಿಃ=ಕಾಲ, ಮಾಯಾ, ಅಂಶ ಎಂಬ ಚೇತನರಿಂದ ಯೇ ವಿಸೃಷ್ಟಾಃ=ಸೃಷ್ಟಿಸಲ್ಪಟ್ಟವರಾರೋ ತೇ ವಯಂ=ಅಂಥ ನಾವು ಅದ್ಯ=ಈಗ ಸರ್ವೇ ವಿಯುಕ್ತಾಃ=ಎಲ್ಲರೂ ಬೇರೆ ಬೇರೆಯಾಗಿದ್ದೇವೆ. ಆದ್ದರಿಂದ ಸ್ವವಿಹಾರತಂತ್ರಂ=ನಿನಗೆ ಕ್ರೀಡಾಸಾಧನವಾದ ಬ್ರಹ್ಮಾಂಡವನ್ನು ಪ್ರತಿಕರ್ತವೇ ನ ಶಕ್ನುಮಃ=ಮಾಡಲಾರೆವು ಆದ್ದರಿಂದ "ನಃ ಚಕ್ಷುಃ ಪರಿದೇಹಿ" ಎಂದು ಮುಂದೆ ಅನ್ವಯ. ಜ್ಞಾನವನ್ನು ಕೊಡು ಎಂದರ್ಥ. ॥೨೬॥

ಬ್ರಹ್ಮಾಂಡನಿರ್ಮಾಣವಾದ ಮೇಲೆ ಮಾಡಬೇಕಾದದ್ದನ್ನು ತಿಳಿಸು ಎಂದು ಪ್ರಾರ್ಥಿಸುವರು-

**ಯಾವದ್ ಬಲಿಂ ತೇಽಜ ಹರಾಮ ಕಾಲೇ**
**ಯಥಾ ವಯಂಚಾನ್ನಮದಾಮ ಯತ್ರ ।**
**ತಥೋಭಯೇಷಾಂ ತ ಇಮೇಹ ಲೋಕಾ**
**ಬಲಿಂ ಹರಂತೋಽನ್ನ ಮದಂತ್ಯನೀಶಾಃ ॥೨೭॥**

ಹೇ ಅಜ=ವಿಷ್ಣುವೇ ಯಾವತ್=ಎಷ್ಟು ಜ್ಞಾನವನ್ನು ಕೊಡುವದರಿಂದ ವಯಂ=ನಾವು ಕಾಲೇ=ಸರಿಯಾದ ಕಾಲದಲ್ಲಿ ಯತ್ರ=ಯಾವದೇಶದಲ್ಲಿ ಯಥಾ=ಯಾವ ರೀತಿಯಾಗಿ ಅನ್ನಂ ಅದಾಮ=ಅನ್ನ ಉಣ್ಣುವೆವೋ ಮತ್ತು ತೇ=ನಿನಗೆ ಬಲಿಂ ಹರಾಮ=ಪೂಜೆಮಾಡುವೆವೋ ತಥಾ=ಅದರಂತೆ ಅನೀಶಾಃ=ನಮ್ಮ ಪ್ರೇರಣೆ ಇಲ್ಲದೇ ಪ್ರವೃತ್ತರಾಗಲು ಅಸಮರ್ಥರಾದ ಲೋಕಾಃ=ಜನರು ಯಥಾ=ಯಾವ ರೀತಿಯಾಗಿ ಉಭಯೇಷಾಂ=ನಮಗೂ ನಿನಗೂ ಬಲಿಂ ಹರಂತಃ=ಪೂಜೆ ಮಾಡುತ್ತ ಅನ್ನಂ ಅದಂತಿ=ಅನ್ನವನ್ನು ಭಕ್ಷಿಸುವರೋ ಜ್ಞಾನಕರ್ಮಗಳನ್ನು ಮಾಡುವರೋ ತಾವತ್ ಚಕ್ಷುಃಪರಿದೇಹಿ=ಅಷ್ಟು ಜ್ಞಾನವನ್ನು ಕೊಡು ॥೨೭॥

**ತ್ವಂ ನಃ ಸುರಾಣಾಮಸಿ ಸಾನ್ವಯಾನಾಂ**
**ಕೂಟಸ್ಥ ಆದ್ಯಃ ಪುರುಷಃ ಪುರಾಣಃ ।**
**ತ್ವಂ ದೇವ ಶಕ್ತ್ಯಾಂ ಗುಣಕರ್ಮಯೋನೌ**
**ರೇತಸ್ತ್ವಜಾಯಾಂ ಕವಿರಾದಧೇಽಜಃ ॥೨೮॥**

ಹೇ ದೇವ=ಸ್ವಾಮಿಯೇ ಪುರಾಣಃ=ಪುರಾತನನಾದ ಪುರುಷಃ=ಪೂರ್ಣ ಷಡ್ಗುಣನಾದ ತ್ವಂ=ನೀನು ಸಾನ್ವಯಾನಾಂ=ಸಂತತಿಯಿಂದ ಕೂಡಿದ ಸುರಾಣಾಂ

ನಃ=ದೇವತೆಗಳಾದ ನಮಗೆ ಆದ್ಯಃ=ಜನಕನು ಕೂಟಸ್ಥಃ=ನಿರ್ವಿಕಾರನಾದ ಕವಿಃ= ಸರ್ವಜ್ಞನಾದ ತ್ವಂ=ನೀನು ಗುಣಕರ್ಮಯೋನೌ=ಸತ್ವಾದಿಗುಣಗಳು, ಅದೃಷ್ಟ-ಗಳೆಂಬ ಜಗತ್ಕಾರಣಗಳು ಸಹಕಾರಿಯಾಗಿವುಳ್ಳ ಅಜಾಯಾಂ=ಪ್ರಕೃತಿಶಬ್ದ ವಾಚ್ಯಳಾದ ಶಕ್ತ್ಯಾಂ=ಭಾರ್ಯೆಯಾದ ಚಿತ್ಪ್ರಕೃತಿಯಲ್ಲಿ ರೇತಃ=ಆದಧೇ ಗರ್ಭಾಧಾನಮಾಡಿದೆ. ತಂದೆಯಂತೆ ನಿಮಿತ್ತ ಕಾರಣನು ನೀನು, ಆದ್ದರಿಂದ ನಿನ್ನನ್ನು ಪ್ರಾರ್ಥಿಸುವೆವು ಎಂದು ಭಾವ ॥೨೮॥

**ತತೋ ವಯಂ ಸತ್ಪ್ರಮುಖಾ ಯದರ್ಥೇ**
**ಬಭೂವಿಮಾತ್ಮನ್ ಕರವಾಮ ಕಿಂ ತೇ ।**
**ತ್ವಂ ನಃ ಸ ಚಕ್ಷುಃ ಪರಿದೇಹಿ ಶಕ್ತ್ಯಾ**
**ದೇವಕ್ರಿಯಾರ್ಥೇ ಯದನುಗ್ರಹೇಣ ॥೨೯॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಷಷ್ಠೋಽಧ್ಯಾಯಃ ॥*

ತತಃ=ರೇತಸ್ಸಿನಿಂದ ಸತ್ಪ್ರಮುಖಾಃ ವಯಂ=ಮಹದಾದಿತತ್ವಾಭಿಮಾನಿಗಳಾದ ನಾವು ಯದರ್ಥೇ ಬಭೂವಿಮ=ಯಾವಕಾರ್ಯಮಾಡಲು ಹುಟ್ಟಿರುವೆವೋ ಹೇ ಆತ್ಮನ್=ಎಲೋ ಸ್ವಾಮಿಯೇ ತೇ ಕಿಂ ಕರವಾಮ=ನಿನ್ನ ಕಾರ್ಯವನ್ನೇನು ಮಾಡಬಲ್ಲೆವು! ಜ್ಞಾನವಿಲ್ಲದಿರುವುದರಿಂದ ಏನೂ ಮಾಡಲಾರೆವು. ಕಾರಣ ಯದನುಗ್ರಹೇಣ=ಯಾವ ನಿನ್ನ ಅನುಗ್ರಹದಿಂದ ಕ್ರಿಯಾರ್ಥೇ=ಬ್ರಹ್ಮಾಂಡ ನಿರ್ಮಾಣ ಮಾಡಲು ಶಕ್ತಾಃ ಸ್ಯಾಮ=ಸಮರ್ಥರಾಗುವೆವೋ ಸಃ ತ್ವಂ=ಅಂಥ ನೀನು ನಃ=ನಮಗೆ ಚಕ್ಷುಃ=ಅದಕ್ಕೆ ಉಪಯುಕ್ತವಾದ ಜ್ಞಾನವನ್ನು ಪರಿದೇಹಿ= ಕೊಡು ॥೨೯॥

*ಇಲ್ಲಿಗೆ ಆರನೆಯ ಅಧ್ಯಾಯವು ಮುಗಿಯಿತು.*

## ಆರನೆಯ ಅಧ್ಯಾಯದ ತಾತ್ಪರ್ಯ

ಶ್ರೀಹರಿಯೇ ಎಲ್ಲ ಜೀವರಿಗೂ ಅಧಿಪತಿಯು. ಎಲ್ಲರ ಕರ್ಮಗಳಿಗೂ ಫಲಕೊಡುವವನು. ಜೀವರ ಪ್ರಯೋಜನಕ್ಕಾಗಿ ಸೃಷ್ಟಿಸಬೇಕೆಂಬ ತನ್ನ ಇಚ್ಛೆಯನ್ನು ಅನುಸರಿಸಿ ತನ್ನ ಅಧೀನವಾದ ನಾನಾ ಸಾಮಗ್ರಿಗಳನ್ನು ಉಪಯೋಗಿಸಿ ಸೃಷ್ಟ್ಯಾದಿ-ಗಳನ್ನು ಮಾಡುವನು. ಸಮಾಧಿಕರಹಿತನಾದ ಇವನು ಸ್ವತಂತ್ರನು. ಪ್ರಳಯಕಾಲ-ದಲ್ಲಿ ಇದ್ದನು. ಇವನನ್ನೇ ಅಜ್ಞಾನಿಗಳು ತಮಗೆ ತೋರಿದಂತೆ ಹೇಳಿರುವರು. ಶ್ರೀಹರಿಯ ಹೆಂಡತಿಯಾದ ಲಕ್ಷ್ಮಿಯು ಆ ಪ್ರಳಯಕಾಲದಲ್ಲಿ ಅತ್ಯಂತ ರತಿಯುಳ್ಳವಳಾಗಿ ಹೊರಗೆ ಕಾಣಿಸದೆ ಇದ್ದಳು. ಶ್ರೀಹರಿಯು ಕಣ್ಣುಮುಚ್ಚಿರಲಿಲ್ಲ. ತನ್ನನ್ನು ಉಳಿದು ಮತ್ತೆ ಯಾವುದರಲ್ಲಿಯೂ ಆಸ್ಥೆಯುಳ್ಳವನಾಗಿ ಇರಲಿಲ್ಲ. ಎಲ್ಲವನ್ನೂ ಕಾಣುವ ಸರ್ವಸ್ವಾಮಿಯಾದ ಇವನು ಎಲ್ಲಕಾರ್ಯಗಳೂ ಕಾರಣ-ಗಳಲ್ಲಿ ಲೀನವಾಗಿದ್ದುದರಿಂದ ವಿಶ್ವವು ಕಾರ್ಯರೂಪದಲ್ಲಿಲ್ಲವೆಂದು ತಿಳಿದನು. ಮತ್ತು ಇದ್ದ ಜೀವರಾಶಿಗಳು ಶಕ್ತಿಯಿಲ್ಲದವರಾಗಿದ್ದರಿಂದ ಇದ್ದರೂ ಇಲ್ಲದಂತೆಯೇ ಸರಿ ಎಂದು ತಿಳಿದನು. ವಿದುರ ! ನೀನು ಭಾಗ್ಯಶಾಲಿ ಮುಕ್ತಿಯೋಗ್ಯನು. ಶ್ರೀಹರಿಯ ಜಡಪ್ರಕೃತಿಯನ್ನೂ ಅದಕ್ಕೆ ಅಭಿಮಾನಿಯಾದ ಚೇತನಪ್ರಕೃತಿ ಲಕ್ಷ್ಮಿಯನ್ನೂ ಉಪಯೋಗಿಸಿಕೊಂಡು ಈ ಸತ್ಯವಾದ ಜಗತ್ತನ್ನು ನಿರ್ಮಿಸಿದನು. ಕಾರ್ಯಕಾರಣ-ಗಳಲ್ಲಿ ವ್ಯಾಪ್ತಳಾದ, ಶ್ರೀಹರಿಯ ಭಿನ್ನಶಕ್ತಿಯೆನಿಸಿದ ಲಕ್ಷ್ಮಿಯೂ, ಮಹತ್ತತ್ವ ಮೊದಲಾದ ಕಾರ್ಯಕಾರಣಗಳೆನಿಸುವ ಜಡಪ್ರಕೃತಿಯೂ ಮಾಯೆಯೆಂದು ಕರೆಸಿಕೊಳ್ಳುವುವು. ಸರ್ವಪ್ರಧಾನನಾದ ಶ್ರೀಹರಿಗೆ ಮಯನೆಂದು ಹೆಸರು. ಅವನ ಸಂಬಂಧಿಯಾದ್ದರಿಂದ ಮಾಯೆಯೆಂಬ ಹೆಸರು ಅನ್ವರ್ಥವಾದುದು.

ಶ್ರೀಹರಿಗೆ ನಪುಂಸಕರೂಪವಿಲ್ಲ. ಅವನ ವೀರ್ಯವು ಜಗತ್ತನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿರುವುದು. ಇಂತಹ ಮೂಲರೂಪಿಯಾದ ನಾರಾಯಣನು ತನ್ನಿಂದ ಪುರುಷನೆಂದು ಕರೆಸಿಕೊಳ್ಳುವ ವಾಸುದೇವ ರೂಪವನ್ನು ವ್ಯಕ್ತಗೊಳಿಸಿದನು. ತ್ರಿಗುಣಾಭಿಮಾನಿಯೂ ಜೀವರ ಅದೃಷ್ಟಫಲವನ್ನು ಕೊಡುವ ಕಾಲರೂಪದಿಂದ ಪ್ರೇರಿತಳಾಗಿ ಸೃಷ್ಟಿಮಾಡ್ಬಬೇಕೆಂಬ ಇಚ್ಛೆಯುಳ್ಳವಳೂ ಆದ ಲಕ್ಷ್ಮಿಯಲ್ಲಿ ವೀರ್ಯವನ್ನಿಟ್ಟನು ಶ್ರೀಹರಿ. ಅಂತೆಯೇ ಸತ್ವರಜಸ್ತಮೋಗುಣಾತ್ಮಕವಾದ ಜಡಪ್ರಕೃತಿಯಲ್ಲಿ ಪರಿಣಾಮ ಹೊಂದುವ ಸಾಮರ್ಥ್ಯವನ್ನು ವ್ಯಕ್ತಗೊಳಿಸಿದನು. ಪುರುಷನಾಮಕ ಶ್ರೀಹರಿಯು ಸಕಲ ಜೀವರಾಶಿಗಳ ಅದೃಷ್ಟಸಾಕ್ಷಿಯೆನಿಸುವನು. ಇವನಿಂದ ಪ್ರೇರಿತವಾಗಿ ಪರಿಣಾಮವನ್ನು ಹೊಂದುವ ಶಕ್ತಿಯನ್ನು ವ್ಯಕ್ತಪಡಿಸಿ-ಕೊಂಡ ಜಡ ಪ್ರಕೃತಿಯಿಂದ ಮಹತ್ತತ್ವವೆಂಬ ಜಡವು ಹುಟ್ಟಿತು. ಇದೇ ಬ್ರಹ್ಮದೇವರ

ಶರೀರ. ಅವ್ಯಕ್ತ ತತ್ವಾಭಿಮಾನಿಯಾದ ರಮಾದೇವಿಯಿಂದ ಬ್ರಹ್ಮದೇವರು ಸೃಷ್ಟರಾದರು. ಇವರು ತಮ್ಮ ದೇಹವೆನಿಸಿದ ಮಹತ್ತತ್ವದಲ್ಲಿ ಅಡಗಿರುವ ಪ್ರಪಂಚವನ್ನು ವ್ಯಕ್ತಗೊಳಿಸುವರು. ಇವರು ವಿಜ್ಞಾನ ಸ್ವರೂಪರು. ಅಜ್ಞಾನವನ್ನೂ ಕತ್ತಲೆಯನ್ನೂ ಹೋಗಲಾಡಿಸುವರು. ಇವರಿಗೆ ಸೃಷ್ಟಿಗೆ ಮೊದಲೂ ಜ್ಞಾನವು ನಷ್ಟವಾಗಿರಲಿಲ್ಲ. ಇವರೇ ಜೀವಾಭಿಮಾನಿಗಳು. ಸತ್ವ ಮೊದಲಾದ ಗುಣಗಳನ್ನೂ ನಿಯಮಿಸಬಲ್ಲರು. ಕರ್ಮಫಲಕ್ಕೆ ಕಾರಣವಾದ ಕಾಲಕ್ಕೆ ಅಭಿಮಾನಿಗಳು ಶ್ರೀಹರಿಯ ಕಟಾಕ್ಷಕ್ಕೆ ವಿಷಯರಾದ ಇವರು ಪ್ರಪಂಚವನ್ನು ಸೃಷ್ಟಿಸಬೇಕೆಂಬ ಇಚ್ಛೆಯಿಂದ ಮಹತ್ತತ್ವವನ್ನು ಪರಿಣಾಮ ಹೊಂದುವಂತೆ ಮಾಡಿದರು. ಹೀಗೆ ವಿಕಾರಕ್ಕೆ ವಿಷಯವಾದ ಮಹತ್ತತ್ವದಿಂದ ಅಹಂಕಾರ ತತ್ವವು ಉತ್ಪನ್ನವಾಯಿತು. ಇದೇ ಶರೀರ ಇಂದ್ರಿಯ ಮತ್ತು ಮನಸ್ಸುಗಳಿಗೆ ಮೂಲಕಾರಣ. ಇದರಿಂದಲೇ ಪಂಚಭೂತಗಳೂ ಉತ್ಪನ್ನವಾದುವು. ಬ್ರಹ್ಮದೇವರಿಂದ ಅಹಂಕಾರತತ್ವಕ್ಕೆ ಅಭಿಮಾನಿಗಳಾದ ಗರುಡ, ಶೇಷ ಮತ್ತು ರುದ್ರರು ಸೃಷ್ಟರಾದರು. ಮುಂದೆಯೂ ಹೀಗೆ ಜಡದಿಂದ ಜಡ, ಅಭಿಮಾನಿಗಳಿಂದ ಅಭಿಮಾನಿಚೇತನರು ಸೃಷ್ಟರಾದರೆಂದು ತಿಳಿಯಬೇಕು. ಈ ಅಹಂಕಾರತತ್ವವು ವೈಕಾರಿಕ, ತೈಜಸ ಮತ್ತು ತಾಮಸವೆಂದು ಮೂರು ಬಗೆ. ವೈಕಾರಿಕಾಹಂಕಾರದಿಂದ ಮನಸ್ತತ್ವವೂ ಅಭಿಮಾನಿಗಳಾದ ಇಂದ್ರ-ಕಾಮರೂ ಸೃಷ್ಟರಾದರು. ಅಷ್ಟೇ ಅಲ್ಲ, ಇಂದ್ರಿಯಾಭಿಮಾನಿಗಳೆನಿಸಿದ ವೈಕಾರಿಕ ದೇವತೆಗಳು ಸೃಷ್ಟರಾದರು. ತೈಜಸಾಹಂಕಾರದಿಂದ ವಾಕ್ ಮೊದಲಾದ ಕರ್ಮೇಂದ್ರಿಯಗಳೂ ಶ್ರೋತ್ರ ಮೊದಲಾದ ಜ್ಞಾನೇಂದ್ರಿಯಗಳೂ ಉಂಟಾದವು. ತಾಮಸಾಹಂಕಾರದಿಂದ ಶಬ್ದ ಮೊದಲಾದ ತನ್ಮಾತ್ರೆಗಳು ಹುಟ್ಟಿದವು. ಶಬ್ದದಿಂದ ಆಕಾಶವು ಹುಟ್ಟಿತು. ಇದು ಶ್ರೀಹರಿಯನ್ನು ತೋರಿಸಿಕೊಡುವ ಪ್ರಮಾಣವು. ಕಾಲ, ಪ್ರಕೃತಿ, ಬ್ರಹ್ಮದೇವರ ಸಂಬಂಧದಿಂದಲೂ ಶ್ರೀಹರಿಯಿಂದ ವೀಕ್ಷಿತವಾದ್ದ-ರಿಂದಲೂ ತಾಮಸಾಹಂಕಾರದಿಂದ ಕೂಡಿದ ಆಕಾಶವು ಸ್ಪರ್ಶತನ್ಮಾತ್ರೆಯನ್ನು ಹುಟ್ಟಿಸಿತು. ಆ ಸ್ಪರ್ಶದಿಂದ ವಾಯುವೂ ಸೃಷ್ಟವಾಯಿತು. ಮೇಲೆ ಹೇಳಿದ ಕಾರಣಗಳಿಂದ ವಿಕಾರ ಹೊಂದಿದ ವಾಯುವು ರೂಪತನ್ಮಾತ್ರೆಯನ್ನೂ ಅದರಿಂದ ತೇಜಸ್ತತ್ವವನ್ನೂ ಸೃಷ್ಟಿಸಿತು. ಅಂತೆಯೇ ತೇಜಸ್ತತ್ವವು ರಸತನ್ಮಾತ್ರೆಯನ್ನೂ ಅದರ ಕಾರ್ಯವಾದ ನೀರನ್ನೂ ಸೃಷ್ಟಿಸಿತು. ಹಾಗೆಯೇ ನೀರು ಗಂಧತನ್ಮಾತ್ರೆಯನ್ನೂ ಅದರ ಕಾರ್ಯವಾದ ಭೂಮಿಯನ್ನೂ ಸೃಷ್ಟಿಸಿತು. ಆಕಾಶವೇ ಮೊದಲಾದ ಭೂತಗಳಲ್ಲಿ ಮುಂದೆ ಮುಂದೆ ಸೃಷ್ಟವಾದದ್ದರಲ್ಲಿ ಹಿಂದಿನ ತನ್ಮಾತ್ರೆಗಳೂ ಸೇರಿಬಂದುವು. ಹೀಗೆ ಸೃಷ್ಟವಾದ ತತ್ವಗಳಿಗೆ ಅಭಿಮಾನಿಗಳಾದ ದೇವತೆಗಳೆಲ್ಲರೂ ಶ್ರೀಹರಿಯ ವಿಭಿನ್ನಾಂಶರು. ಕಾಲ, ಪ್ರಕೃತಿ ಮತ್ತು ಜೀವಾಭಿಮಾನಿ ಬ್ರಹ್ಮದೇವರ

ನಿಮಿತ್ತದಿಂದ ದೇಹವನ್ನು ಹೊಂದಿದವರು. ಪರಸ್ಪರ ವಿಭಿನ್ನರು. ತಾವೇ ಸ್ವತಂತ್ರವಾಗಿ ಬ್ರಹ್ಮಾಂಡವನ್ನು ಸೃಷ್ಟಿಸಲು ಸಮರ್ಥರಾಗಲಿಲ್ಲ. ಆಗವರು ಅಂಜಲಿಬದ್ಧರಾಗಿ ಭಕ್ತಿಯಿಂದ ಶ್ರೀಹರಿಯನ್ನು ಸ್ತೋತ್ರ ಮಾಡಲಾರಂಭಿಸಿದರು.

"ಹೇ ದೇವ ನಿನ್ನ ಪಾದಾರವಿಂದಗಳನ್ನು ಆಶ್ರಯಿಸಿದವರಿಗೆ ತಾಪತ್ರಯಗಳ ಪೀಡೆಯಿರುವುದಿಲ್ಲ. ಬಿಸಿಲ ತಾಪವನ್ನು ಕಳೆಯುವ ಛತ್ರಿಯು ಆ ಕಾಲದ ತಾಪವನ್ನು ಮಾತ್ರ ತಡೆಯಬಲ್ಲುದು. ಆದರೆ ನಿನ್ನ ಪಾದಾರವಿಂದಗಳು ಸಂಸಾರ ದುಃಖವನ್ನು ಎಲ್ಲ ಕಾಲದಲ್ಲಿಯೂ ಇಲ್ಲದಂತೆ ಮಾಡುವುವು. ಆದ್ದರಿಂದಲೇ ಜ್ಞಾನಿಗಳು ನಿನ್ನ ಪಾದಗಳನ್ನೇ ಆಶ್ರಯಿಸಿ ಜನನಮರಣಗಳನ್ನು ಹೋಗಲಾಡಿಸಿ-ಕೊಂಡು ಮೋಕ್ಷವನ್ನು ಹೊಂದಿರುವರು. ನಿಯಾಮಕನೇ, ಜೀವಿಗಳು ಸಂಸಾರ ಬಂಧದಿಂದ ಮುಕ್ತರಾಗಬೇಕಾದರೆ ನಿನ್ನ ಪಾದಾರವಿಂದಗಳೇ ಉಪಾಯವು. ಅವುಗಳನ್ನು ಬಿಟ್ಟರೆ ಮೋಕ್ಷವಿಲ್ಲ. ಆದ್ದರಿಂದ ನಮ್ಮ ನಮ್ಮ ಯೋಗ್ಯತೆಗೆ ತಕ್ಕಂತೆ ನಿನ್ನ ವಿದ್ಯೆಯನ್ನು ಆಶ್ರಯಿಸಿರುವೆವು. ಜ್ಞಾನಿಗಳು ತಮ್ಮ ಮುಖಕಮಲಗಳಿಂದ ಹೊರಡುವ ವೇದವಾಕ್ಯಗಳಿಂದ ಏಕಾಂತದಲ್ಲಿದ್ದುಕೊಂಡು ನಿನ್ನನ್ನು ಹುಡುಕುತ್ತಿರು-ವರು. ನಿನ್ನ ಜ್ಞಾನವು ಸಮಸ್ತ ಪಾಪಗಳನ್ನೂ ಹೋಗಲಾಡಿಸುವುದು. ನಿನ್ನ ಪಾದಗಳನ್ನು ಹೊಂದಬೇಕಾದರೆ ಶ್ರದ್ಧೆಬೇಕು. ಶಾಸ್ತ್ರಶ್ರವಣ ಮಾಡಿರಬೇಕು. ವೈರಾಗ್ಯದಿಂದ ಬಲಿಷ್ಠವಾದ ಜ್ಞಾನವಿರಬೇಕು. ಇಂತಹ ಜ್ಞಾನಪೂರ್ವಕ ಭಕ್ತಿಯಿಂದ ಮನಸ್ಸು ನಿರ್ಮಲವಾಗುವುದು. ಆಗ ಮನಸ್ಸಿನಲ್ಲಿ ನಿನ್ನ ರೂಪವನ್ನಿರಿಸಿಕೊಂಡು ನಿನ್ನನ್ನು ಕಾಣಲಾಗುವುದು. ನಿನ್ನ ಅವತಾರವಾದರೋ ಸ್ವಾರ್ಥಕ್ಕಲ್ಲ. ಜಗತ್ತಿನ ಸೃಷ್ಟಿಸ್ಥಿತಿ ಲಯಗಳಿಗಾಗಿ. ನಿನ್ನ ಸ್ಮರಣೆ ಮಾತ್ರದಿಂದ ಅಧಿಕಾರಿ ಚೇತನರು ಸಂಸಾರ ಭಯದಿಂದ ಮುಕ್ತರಾಗಿ ಮೋಕ್ಷವನ್ನು ಹೊಂದುವರು. ಲೌಕಿಕ ಪರಿಕರದಿಂದ ತುಂಬಿದ ಶರೀರ ಮತ್ತು ಮನೆಗಳಲ್ಲಿ ನಾನು ನನ್ನದು ಎಂಬ ದುರಾಗ್ರಹವಿರುವ ಜೀವರು ದೇಹದಲ್ಲಿಯೇ ವಾಸಿಸುವ ನಿನ್ನನ್ನು ಎಂದೂ ತಿಳಿಯಲಾರರು. ಅವರ ಇಂದ್ರಿಯಗಳು ಲೌಕಿಕ ವಿಷಯಗಳಲ್ಲಿ ತೊಡಗಿ ನಿನ್ನನ್ನು ಕಾಣುವ ಸಾಮರ್ಥ್ಯವುಳ್ಳ ಅಂತರಿಂದ್ರಿಯವಾದ ಮನಸ್ಸನ್ನೇ ಕುಗ್ಗಿಸಿಬಿಡುವುವು. ಆದ್ದರಿಂದಲೇ ಲಕ್ಷ್ಮೀಬ್ರಹ್ಮಾದಿ-ಗಳಿಂದ ಸ್ತೋತ್ರ ಮಾಡಿಸಿಕೊಳ್ಳುವ, ಸರ್ವೋತ್ತಮನಿಯಾಮಕನಾದ ನಿನ್ನನ್ನು ಸಮೀಪದಲ್ಲಿದ್ದರೂ ನೋಡಲಾರರು. ಎಲ್ಲವನ್ನೂ ಭಗವದರ್ಪಣಬುದ್ಧಿಯಿಂದ ಮಾಡುವ ವೈರಾಗ್ಯನಿಧಿಗಳಾದ ಸನ್ಯಾಸಿಗಳು ಮಾತ್ರ ಕಾಣಬಲ್ಲರು. ಹೇ ದೇವ ! ನಿನ್ನ ಕಥೆಯೆಂಬ ಅಮೃತವನ್ನು ಪಾನಮಾಡುವುದರಿಂದ ಭಕ್ತಿಯು ಹೆಚ್ಚುವುದು. ಇದರಿಂದ ಅಂತಃಕರಣವು ಶುದ್ಧವಾಗುವುದು. ಇದರಿಂದ ವೈರಾಗ್ಯವು ದೃಢವಾಗಿ ನಿನ್ನ ಅಪರೋಕ್ಷವಾಗುವುದು. ಅದರ ಫಲವಾಗಿ ದೋಷರಹಿತವಾದ ನಿನ್ನ ವೈಕುಂಠ

ಸ್ಥಾನವನ್ನು ಸೇರಿ ನಿನ್ನನ್ನು ಹೊಂದುವರು. ಮತ್ತೆ ಕೆಲವರು ಯಮನಿಯಮ ಮೊದಲಾದ ಯೋಗಾಭ್ಯಾಸದಲ್ಲಿ ಆಸಕ್ತರಾಗಿ ನಿನ್ನಲ್ಲಿಯೇ ಏಕಾಗ್ರತೆಯಿಂದ ಚಿತ್ತವನ್ನಿಟ್ಟು ನಿನ್ನ ಅನುಗ್ರಹದಿಂದ ಬಂಧಕಶಕ್ತ್ಯಭಿಮಾನಿಯಾದ ಪ್ರಕೃತಿಯನ್ನು ಗೆಲ್ಲುವರು. ಇದು ಮತ್ತೊಂದು ಸಾಧನದಿಂದ ಸಾಧ್ಯವಲ್ಲವು. ಇಂತಹ ಅಪರೋಕ್ಷ ಜ್ಞಾನಿಗಳು ನಿನ್ನನ್ನು ಪ್ರವೇಶಿಸುವರು. ಆದರೆ ಅವರಿಗೆ ಹೆಚ್ಚು ಶ್ರಮವಾಗುವುದು. ನಿನ್ನ ಕಥಾಶ್ರವಣ ಮಾಡುವವರಿಗೆ ಶ್ರಮವಿಲ್ಲವು. ನೀನು ಪ್ರಪಂಚವನ್ನು ಸೃಷ್ಟಿಸಬೇಕೆಂಬ ಇಚ್ಛೆಯಿಂದ ಕಾಲ, ಮಾಯೆ ಮತ್ತು ಅಂಶಗಳಿಂದ ನಮ್ಮನ್ನು ವಿಶೇಷವಾಗಿ ಸೃಷ್ಟಿಸಿರುವೆ. ಈಗ ನಾವು ಪರಸ್ಪರ ಸಂಬಂಧವಿಲ್ಲದೆ ಇದ್ದೇವೆ. ಆದ್ದರಿಂದ ನಿನ್ನ ಕ್ರೀಡಾಸ್ಥಾನವಾದ ಬ್ರಹ್ಮಾಂಡವನ್ನು ಸೃಷ್ಟಿಸಲಾರದೆ ಹೋಗಿರುವೆವು. ನಾವಾದರೂ ನಿನ್ನ ಪೂಜೆಯನ್ನು ಭಕ್ತಿಯಿಂದ ಮಾಡಬಯಸುವೆವು. ಬ್ರಹ್ಮಾಂಡವನ್ನು ನಿರ್ಮಿಸಿ ಅದರಲ್ಲಿದ್ದು ನಿನ್ನ ವಿಷಯಕವಾದ ಜ್ಞಾನ, ನಿನ್ನ ಉದ್ದೇಶದಿಂದ ಮಾಡುವ ಕರ್ಮ ಇವುಗಳೇ ನಾವು ಕೊಡಲಿರುವ ಕಾಣಿಕೆಗಳು. ಆದ್ದರಿಂದ ನಾವು ನಮ್ಮ ನಮ್ಮ ಕಾರ್ಯಗಳಲ್ಲಿ ತೊಡಗುವಂತೆ ನೀನು ನಮ್ಮನ್ನು ಅನುಗ್ರಹಿಸು. ನಮ್ಮ ಪ್ರೇರಣೆಯಿಲ್ಲದೆ ಪ್ರವೃತ್ತರಾಗಲು ಸಮರ್ಥರಲ್ಲದ ಈ ಜನರೂ ಸಹ ಈ ಬ್ರಹ್ಮಾಂಡದಲ್ಲಿ ತಮ್ಮ ಸಾಧನೆಯನ್ನು ಮಾಡಿಕೊಳ್ಳುವಂತೆ ಅನುಗ್ರಹಿಸು. ಇದಕ್ಕಾಗಿ ಬ್ರಹ್ಮಾಂಡವನ್ನು ಸೃಷ್ಟಿಸು. ದೇವತೆಗಳಾದ ನಮಗೆಲ್ಲರಿಗೂ ನೀನೇ ತಂದೆಯು. ನೀನು ವಿಕಾರವಿಲ್ಲದ ಪುರಾಣ ಪುರುಷನು. ನಿನಗೆ ತಿಳಿಯದ ವಿಷಯವಿಲ್ಲ. ನಿನಗೆ ಜನನ ಮೊದಲಾದುವಿಲ್ಲ. ಇಂತಹ ನೀನು ಸತ್ವಾದಿ ಗುಣ, ಕರ್ಮಗಳಿಗೆ ಕಾರಣವಾದ ನಿನ್ನ ಚಿತ್ಪ್ರಕೃತಿಯಲ್ಲಿ (ಹೆಂಡತಿಯಲ್ಲಿ) ವೀರ್ಯವನ್ನು ಸ್ಥಾಪಿಸಿರುವೆ. ಆ ಪ್ರಕೃತಿಯಿಂದಲೇ ತತ್ವಗಳ ಅಭಿಮಾನಿಗಳಾದ ನಾವು ಬ್ರಹ್ಮಾಂಡದ ನಿರ್ಮಾಣಕ್ಕಾಗಿ ಸೃಷ್ಟರಾದೆವು. ಇದಕ್ಕಾಗಿ ನಾವೀಗ ಮಾಡಬೇಕಾದುದೇನು ? ಸ್ವತಂತ್ರನೂ ಸರ್ವಶಕ್ತನೂ ಆದ ನೀನು ಅಸ್ವತಂತ್ರರೂ ಅಶಕ್ತರೂ ಆದ ನಮಗೆ ಮಾರ್ಗವನ್ನು ತೋರು. ನೀನು ತೋರಿದ ಅನುಗ್ರಹದಿಂದಲೇ ನಾವು ಬ್ರಹ್ಮಾಂಡ-ವನ್ನು ನಿರ್ಮಿಸಲು ಸಮರ್ಥರಾಗುವೆವು''



# ಅಥ ಸಪ್ತಮೋऽಧ್ಯಾಯಃ

ಈ ಅಧ್ಯಾಯದಲ್ಲಿ 'ತದನನ್ಯತ್ವಾಧಿಕರಣದ' ಅರ್ಥವನ್ನು ವಿವರಿಸುವರು ಎಂಬ ಅಭಿಪ್ರಾಯದಿಂದ ಸ್ತುತಿಯಿಂದ ಪ್ರಸನ್ನನಾದ ಶ್ರೀಹರಿಯು ತತ್ವಗಳನ್ನು ಪ್ರವೇಶಿಸಿ-ದನೆಂದು ಹೇಳುವರು –

**ಋಷಿರುವಾಚ**

**ಇತಿ ತಾಸಾಂ ಸ್ವಶಕ್ತೀನಾಮಸತೀನಾಂ ಸಮೇತ್ಯ ಸಃ ।**
**ಪ್ರಸುಪ್ತಲೋಕತಂತ್ರಾಣಾಂ ನಿಶಮ್ಯ ಗಿರಮೀಶ್ವರಃ ॥೧॥**

ಇತಿ=ಈ ರೀತಿಯಾಗಿ ತಾಸಾಂ=ಹಿಂದೆ ಹೇಳಿದ ಪ್ರಸುಪ್ತಲೋಕತಂತ್ರಾಣಾಂ= ವ್ಯಕ್ತವಾಗದ, ಲೋಕವನ್ನು ಸೃಷ್ಟಿಸುವ ಶಕ್ತಿಯುಳ್ಳ ಸಮೇತ್ಯಅಸತೀನಾಂ=ಬೇರೆ ಬೇರೆಯಾಗಿರುವ ಸ್ವಶಕ್ತೀನಾಂ=ಪರಮಾತ್ಮ ಶಕ್ತಿವಿಷಯರಾದ್ದರಿಂದ ಶಕ್ತಿಶಬ್ದವಾಚ್ಯ-ರಾದ ಮಹದಾದ್ಯಭಿಮಾನಿಗಳು ಹಾಗೂ ಲಕ್ಷ್ಮೀದೇವಿಯರ ಗಿರಂ ನಿಶಮ್ಯ= ಮಾತುಗಳನ್ನು ಕೇಳಿ ಸಃ ಈಶ್ವರಃ=ಶ್ರೀಹರಿಯು ತತ್ವಗಳನ್ನು ಪ್ರವೇಶಿಸಿದನು ಎಂದನ್ವಯ.

ಮೇಲಿನ ಶ್ಲೋಕದಲ್ಲಿ ಶಕ್ತಿಶಬ್ದವು ಮಹದಾದಿವಾಚಕವೆ ಆಗಿದೆ. ಇಲ್ಲವಾದರೆ ಅಸಂಗತವಾಗುವುದು. ಕಾರಣ ಶಕ್ತಿಶಬ್ದಪ್ರವೃತ್ತಿನಿಮಿತ್ತ ಹೇಳುವರು–

**ಶಕ್ಯತ್ವಾಚ್ಛಕ್ತಯೋ ವಿಷ್ಣೋರ್ಮಹದಾದ್ಯಾ ರಮಾ ತಥಾ ।**
**ಸ್ವರೂಪಶಕ್ತಿಃ ಶಕ್ತಿತ್ವಾತ್ ಮುಖ್ಯಶಕ್ತಿರ್ಹಿ ಸಾ ಯತಃ ॥ ಇತಿ ಬ್ರಹ್ಮತರ್ಕೇ ।**

'ಮಹದಾದಿಗಳು ಹಾಗೂ ರಮಾದೇವಿಯು ವಿಷ್ಣುವಶರಾದ್ದರಿಂದ(ಶಕ್ಯತ್ವಾತ್= ಶಕ್ತಿವಿಷಯರಾದ್ದರಿಂದ) ಶಕ್ತಿಶಬ್ದವಾಚ್ಯರು.ಆದರೆ ಶ್ರೀಹರಿಯ ಸ್ವರೂಪಶಕ್ತಿಯು ಶಕ್ತಿತ್ವ ಇರುವುದರಿಂದ ಶಕ್ತಿ ಎನಿಸುತ್ತದೆ.ಹೊರತು ಶಕ್ಯತ್ವಾತ್ ಶಕ್ತಿ ಎನಿಸುವುದಿಲ್ಲ. ಯಾವ ಕಾರಣ ಅದು ಪ್ರಧಾನಶಕ್ತಿಯಾಗಿದೆಯೋ ಆದ್ದರಿಂದ ಬೇರೆಯವರ ಶಕ್ತಿವಿಷಯವಾಗಲು ಸಾಧ್ಯವಿಲ್ಲ.' ಎಂದು ಬ್ರಹ್ಮ ತರ್ಕದಲ್ಲಿ ಹೇಳಿದೆ.

ಅಸತೀನಾಂ ಸಮೇತ್ಯ ಎಂಬುದುಕ್ಕೆ ಅನ್ವಯಾರ್ಥ ಹೇಳುವರು –

**ಸಮೇತ್ಯ ಅಸತೀನಾಂ ಅಸಮೇತಾನಾಂ ।**

ಕೂಡಿ ಇರದಿರುವ ವಿಶ್ಲಿಷ್ಟವಾದ ಎಂದರ್ಥ.

ಪ್ರಸುಪ್ತಲೋಕತಂತ್ರಾಣಾಂ ಎಂಬುದಕ್ಕೆ ಪ್ರಕೃತೋಪಯುಕ್ತ ಅರ್ಥ ಹೇಳುವರು -

**ಪ್ರಸುಪ್ತಲೋಕತಂತ್ರಾಣಾಂ ಅನಾವಿರ್ಭೂತಲೋಕಸೃಷ್ಟಿಶಕ್ತೀನಾಂ ।**

ಪ್ರಸುಪ್ತಪದದ ಅರ್ಥ ಅನಾವಿರ್ಭೂತ ಎಂದು. ಲೋಕಪದವು ಸೃಷ್ಟಿಗೆ ಉಪಲಕ್ಷಕ. ತಂತ್ರಶಬ್ದಾರ್ಥವೇ ಶಕ್ತಿ ಎಂಬುದು. ವ್ಯಕ್ತವಾಗದ ಲೋಕವನ್ನು ಸೃಷ್ಟಿಸುವ ಶಕ್ತಿಯುಳ್ಳವರೆಂದು ತಾತ್ಪರ್ಯ.

ತಂತ್ರಶಬ್ದಕ್ಕೆ ಶಕ್ತಿ ಎನ್ನಲು ಕಾರಣವನ್ನು ಪ್ರಮಾಣದಿಂದಲೇ ಹೇಳುವರು–

**ತನುತೇ ಯೇನ ಕಾರ್ಯಂ ಯತ್ ತಂತ್ರಂ ಸಾಧನಮುಚ್ಯತೇ ।**
**ಕಾರಣಾನಾಂ ಸ್ವಶಕ್ತಿರ್ವಾ ಪ್ರಧಾನಂ ಸಾಧನಂ ಯತಃ ॥ಇತಿ ಬ್ರಹ್ಮತರ್ಕೇ ।**

ಯಾವುದರಿಂದ ಕಾರ್ಯಮಾಡಲ್ಪಡುವುದೋ ಅದಕ್ಕೆ ಅಂದರೆ ಸಾಧನಗಳಿಗೆ ತಂತ್ರ ಎನ್ನುವರು. ಸಾಧನಗಳಲ್ಲಿರುವ ಶಕ್ತಿಗೆ ತಂತ್ರ ಎನ್ನುವರು. ದಂಡಾದಿ ಸಾಧನಗಳಿಗೆ ಘಟಜನಕಶಕ್ತಿ ಇರುವುದರಿಂದಲ್ಲವೇ ಸಾಧನವೆನ್ನುವುದು. ಶಕ್ತಿ ಇಲ್ಲದಿರುವುದರಿಂದ ರಾಸಭಾದಿಗಳು ಸಾಧನವಲ್ಲ. ಹೀಗೆ ಶಕ್ತಿಯು ಉಪಜೀವ್ಯ-ವಾದುದರಿಂದ ಮುಖ್ಯ ಸಾಧನವಾಗಿದೆ ಆದ್ದರಿಂದ ತಂತ್ರಶಬ್ದದಿಂದ ಶಕ್ತಿಯನ್ನೇ ಸ್ವೀಕರಿಸಬೇಕು ಎಂದು ಬ್ರಹ್ಮತರ್ಕದಲ್ಲಿದೆ. ॥೧॥

**ಕಾಲಸಂಜ್ಞಾಂ ತತೋ ಮಾಯಾಂ ಬಿಭ್ರಚ್ಛಕ್ತಿಮುರುಕ್ರಮಃ ।**
**ತ್ರಯೋವಿಂಶತಿತತ್ವಾನಾಂ ಗಣಂ ಯುಗಪದಾವಿಶತ್ ॥೨॥**

ಉರುಕ್ರಮಃ=ಶ್ರೀಹರಿಯು ಕಾಲಸಂಜ್ಞಾಂ=ಕಾಲನಾಮಕಳಾದ ಶಕ್ತಿಂ=ಶಕ್ತಿ-ಶಬ್ದವಾಚ್ಯಳಾದ ಮಾಯಾಂ=ರಮೆಯನ್ನು ಬಿಭ್ರತ್‌ಸನ್=ಭರಣ ಮಾಡುವವನಾಗಿ ಅಂದರೆ ರಮೆಯೊಡನೆ ತ್ರಯೋವಿಂಶತಿತತ್ವಾನಾಂ ಗಣಂ=ಇಪ್ಪತ್ಮೂರು ತತ್ವಗಳ ಸಮೂಹವನ್ನು ಯುಗಪತ್=ಏಕಕಾಲದಲ್ಲಿ ಆವಿಶತ್=ಪ್ರವೇಶಿಸಿದನು ॥೨॥

ಇಪ್ಪತ್ಮೂರು ತತ್ವಗಳನ್ನು ಪ್ರಮಾಣದಿಂದ ತಿಳಿಸುವರು –

**ಶಬ್ದಾದ್ಯಾ ನಭಆದ್ಯಾಶ್ಚ ಮನೋಯುಕ್ತೇಂದ್ರಿಯಾಣಿ ಚ ।**
**ಅಹಂಕಾರೋ ಮಹಾಂಶ್ಚೈವ ತ್ರಯೋವಿಂಶತಿಕೋ ಗಣಃ ॥**

**ದೇವತೇಂದ್ರಿಯಯೋರೈಕ್ಯಾನ್ನ ಪೃಥಗ್ಗಣನಂ ತಯೋಃ ।**
**ಪ್ರಕೃತಿಸ್ತು ಚತುರ್ವಿಂಶಾ ಪಂಚವಿಂಶೋ ಹರಿಃ ಸ್ವಯಂ ।**
**ಯದಾ ಜಡಾಂಶಸ್ವೀಕಾರೋ ಜೀವಸ್ತತ್ವಂಚವಿಂಶಕಃ'' ॥ಇತಿ ತತ್ವನಿರ್ಣಯೇ**

ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಜಲ, ಪೃಥಿವೀ, ಮನಸ್ಸಿನಿಂದ ಸಹಿತವಾದ ಹತ್ತು ಇಂದ್ರಿಯಗಳು (ಶ್ರೋತ್ರ,ತ್ವಕ್ ಚಕ್ಷು, ರಸನ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ) ಅಹಂಕಾರ, ಮಹತ್ತತ್ವ, ಹೀಗೆ ಇಪ್ಪತ್ಮೂರು ತತ್ವಗಳ ಸಮೂಹವು. ದೇವತೆಗಳಿಗೂ ಇಂದ್ರಿಯಗಳಿಗೂ ಐಕ್ಯಾತ್ ಎಂದರೆ ಏಕಶಬ್ದವಾಚ್ಯತ್ವವಿರುವದರಿಂದ ಇಂದ್ರಿಯಗಳನ್ನು ಹೇಳುವುದರಿಂದಲೇ ದೇವತೆಗಳನ್ನೂ ಹೇಳಿದಂತೆ ಆಗುವುದು ಎಂಬ ಅಭಿಪ್ರಾಯದಿಂದ ದೇವತೆಗಳನ್ನು ಪ್ರತ್ಯೇಕವಾಗಿ ಹೇಳಿಲ್ಲ. (ಎರಡು ಸ್ಥಳದಲ್ಲಿಯೂ ಅಭಿಮಾನಿ ಅಭಿಮನ್ಯಮಾನಗಳಿಗೆ ಐಕ್ಯವಿವಕ್ಷಾ) ಅದೇ ರೀತಿ ಮಹದಾದಿಗಳನ್ನು ಹೇಳುವುದರಿಂದ ಅವುಗಳ ಅಭಿಮಾನಿಗಳನ್ನು ಹೇಳಿದೆ ಎಂದು ತಿಳಿಯಬೇಕು. ಪ್ರಕೃತಿಯು ಸಕಲಕಾರ್ಯ-ಜನಕತ್ವರೂಪ ವಿಶೇಷವುಳ್ಳ ಚೇತನಾಚೇತನರೂಪವಾದುದು ಇಪ್ಪತ್ನಾಲ್ಕನೆಯದು. ಇಪ್ಪತ್ತೈದನೆಯವನು ಶ್ರೀಹರಿಯೇ. (ಇಲ್ಲಿ ಅಭಿಮನ್ಯಮಾನ ತತ್ವವಿಲ್ಲ) ಮೂಲಭಾಗವತದಲ್ಲಿ ಉರಕ್ರಮಶಬ್ದದಿಂದ ಪ್ರವೇಶಕರ್ತೃವಾಗಿ ಹರಿಯನ್ನು ಮಾಯಾಶಬ್ದದಿಂದ ಸಹಕಾರಿಯಾಗಿ ಉಭಯವಿಧ ಪ್ರಕೃತಿಯನ್ನು ಬೇರೆ ಹೇಳಿದ್ದರಿಂದ, ಪ್ರವೇಶ ಕರ್ಮಗಳಾದ(ಪ್ರವೇಶಿಸಲ್ಪಡುವ) ತತ್ವಗಳ ಸಮೂಹದಲ್ಲಿ ಇವರು ಸೇರದಿರುವದರಿಂದ ಇಪ್ಪತ್ಮೂರು ಎಂದು ಹೇಳಿದ್ದಾರೆ ಎಂದು ಭಾವ.

ಇನ್ನು ಕೆಲವೆಡೆ ಇಪ್ಪತ್ತಾರು, ಇಪ್ಪತ್ತೇಳು, ಎಂದು ತತ್ವಗಳ ಸಂಖ್ಯೆ ಹೇಳಿದ್ದರ ಅಭಿಪ್ರಾಯವೇನೆಂದು ಹೇಳುವರು. 'ಯದಾ' ಮುಂತಾಗಿ. ಅಭಿಮಾನಿಗಳ ವಿವಕ್ಷೆಮಾಡದೇ ಪ್ರಕೃತ್ಯಾದಿಜಡಗಳನ್ನು ಮಾತ್ರ ತೆಗೆದುಕೊಂಡರೆ, ಶಬ್ದಾದಿ ಇಪ್ಪತ್ಮೂರು, ಜಡಪ್ರಕೃತಿ ಇಪ್ಪತ್ನಾಲ್ಕು, ಅಭಿಮಾನಿಚೇತನಗಳ ಸಮೂಹ ಇಪ್ಪತ್ತೈದನೇ ತತ್ವ, ಮಹಾವಿಷ್ಣು ಇಪ್ಪತ್ತಾರನೆಯವನಾಗುವನು. ಇಪ್ಪತ್ತೈದನೇ ತತ್ವವಾದ ಜೀವ ಎಂಬಲ್ಲಿ ಅಭಿಮಾನಿಚೇತನ ಎಂಬ ವಿವಕ್ಷೆಮಾಡದೇ, ಕೇವಲ ಜೀವರನ್ನು (ದುಃಖಸ್ಪೃಷ್ಟರನ್ನು) ಸ್ವೀಕರಿಸಿದರೆ, ಪ್ರಕೃತ್ಯಭಿಮಾನಿನೀಲಕ್ಷ್ಮೀಯನ್ನು ಪ್ರತ್ಯೇಕ ವಿವಕ್ಷಾಮಾಡಿದಾಗ ಇಪ್ಪತ್ತೇಳಾಗುವುವು. ಇಪ್ಪತ್ನಾಲ್ಕು ಜಡಪ್ರಕೃತಿ, ಇಪ್ಪತ್ತೈದು ಅಭಿಮಾನಿಜೀವ (ದೇವತೆಗಳು), ಇಪ್ಪತ್ತಾರು ಲಕ್ಷ್ಮೀದೇವಿ. ಇಪ್ಪತ್ತೇಳು ವಿಷ್ಣು.

'ಕಾಲಸಂಜ್ಞಾಂ' ಎಂಬ ಸಮಗ್ರ ಶ್ಲೋಕಾಭಿಪ್ರಾಯ ಹೇಳುವರು–

**ತ್ರಯೋವಿಂಶತಿ ತತ್ವಾನಿ ಪ್ರಾವಿಶದ್ರಮಯಾ ಸಹ ।**
**ಕಾಲಾಖ್ಯಯಾ ಸ್ವಯಂ ವಿಷ್ಣುಃ ಶಕ್ಯತ್ವಾತ್ ಶಕ್ತಿರೂಪಯಾ ॥**

ವಿಷ್ಣುವಿನಶಕ್ತಿ ವಿಷಯಳಾದ್ದರಿಂದ ಶಕ್ತಿರೂಪಳಾದ ಕಾಲನಾಮಕಳಾದ ರಮೆಯಿಂದ ಸಹಿತನಾಗಿ ಇಪ್ಪತ್ಮೂರು ತತ್ವಗಳನ್ನು ಶ್ರೀವಿಷ್ಣುವು ಪ್ರವೇಶ ಮಾಡಿದನು ಎಂದು ಭಾವ. ॥೨॥

**ಸೋಽನುಪ್ರವಿಷ್ಟೋ ಭಗವಾನ್ ಚೇಷ್ಟಾರೂಪೇಣ ತಂ ಗಣಂ ।**
**ಭಿನ್ನಂ ಸಂಯೋಜಯಾಮಾಸ ಸುಪ್ತಂ ಕರ್ಮ ಪ್ರಬೋಧಯನ್॥೩॥**

ಚೇಷ್ಟಾರೂಪೇಣ=ಚೇಷ್ಟಾಪ್ರದರೂಪದಿಂದ ಅನುಪ್ರವಿಷ್ಟಃ ಸಃ ಭಗವಾನ್= ತತ್ವಗಳನ್ನು ಪ್ರವೇಶಿಸಿದ ಆ ಭಗವಂತನು ಬಿನ್ನಂ ತಂ ಗಣಂ=ವಿಶ್ಲಿಷ್ಟವಾದ ಆ ತತ್ವಗಳ ಸಮೂಹವನ್ನು ಸುಪ್ತಂ ಕರ್ಮ ಪ್ರಬೋಧಯನ್=ಕಾರ್ಯೋನ್ಮುಖ-ವಾಗದಿರುವ ಅವುಗಳ ಕ್ರಿಯಾಶಕ್ತಿಯನ್ನು, ಅದೃಷ್ಟವನ್ನೂ ಕಾರ್ಯೋನ್ಮುಖ ಮಾಡಿ, ಒಂದೊಂದು ಅಂಶಗಳನ್ನು ತೆಗೆದು ಸಂಯೋಜಯಾಮಾಸ=ಮೇಲನ ಮಾಡಿದನು.

ಶ್ಲೋಕತಾತ್ಪರ್ಯ ಹೇಳುವರು –

**ಸರ್ವಚೇಷ್ಟಕರೂಪೇಣ ಸ್ವಸಾಮರ್ಥ್ಯೇನ ಕೇಶವಃ ।**
**ತಾನಿ ಭಿನ್ನಾನಿ ತತ್ವಾನಿ ಯೋಜಯಾಮಾಸ ಚಾಂಶತಃ ॥ ಇತಿ ಚ ।**

ಭಗವಾನ್ ಎಂಬುದರ ಅರ್ಥ ಸ್ವಸಾಮರ್ಥ್ಯೇನ ಎಂಬುದು. ಸರ್ವರಿಗೂ ಚೇಷ್ಟಾಪ್ರದನಾದ ಕೇಶವನು ತನ್ನ ಸಾಮರ್ಥ್ಯದಿಂದ, ಬೇರೆ ಬೇರೆಯಾಗಿರುವ ತತ್ವಗಳನ್ನು ಸ್ವಲ್ಪ ಸ್ವಲ್ಪ ಭಾಗ ತೆಗೆದು ಮೇಲನಮಾಡಿದನು ॥೩॥

**ಪ್ರಬುದ್ಧಕರ್ಮಾ ದೈವೇನ ತ್ರಯೋವಿಂಶತಿಕೋ ಗಣಃ ।**
**ಪ್ರೇರಿತೋಽಜನಯತ್ ಸ್ವಾಭಿರ್ಮಾತ್ರಾಭಿರಧಿಪೂರುಷಂ ॥೪॥**

ದೈವೇನ=ಶ್ರೀಹರಿಯಿಂದ ಪ್ರೇರಿತಃ=ಪ್ರೇರಿಸಲ್ಪಟ್ಟು ಪ್ರಬುದ್ಧಕರ್ಮಾ=ಕಾರ್ಯೋ-ನ್ಮುಖವಾಗಿ ಮಾಡಲ್ಪಟ್ಟ ಕ್ರಿಯಾಶಕ್ತಿ,ಅದೃಷ್ಟಗಳುಳ್ಳ ತ್ರಯೋವಿಂಶತಿಕೋಗಣಃ= ಇಪ್ಪತ್ಮೂರು ತತ್ವಗಳ ಸಮೂಹವು ಸ್ವಾಭಿಃ ಮಾತ್ರಾಭಿಃ=ತಮ್ಮ ಅಂಶಗಳಿಂದ ಅಧಿ ಪೂರುಷಂ=ಪುರುಷನಾಮಕ ಬ್ರಹ್ಮನಶರೀರಸ್ಥಾನೀಯವಾದದ್ದರಿಂದ ಪುರುಷಶಬ್ದ-ವಾಚ್ಯವಾದ ಬ್ರಹ್ಮಾಂಡವನ್ನು ಅಜನಯತ್=ಹುಟ್ಟಿಸಿತು. ॥೪॥

**ಪರೇಣ ವಿಶತಾ ಸ್ವಸ್ಮಿನ್ ಮಾತ್ರಯಾ ವಿಶ್ವಸೃಗ್ಗಣಃ ।**
**ಚುಕ್ಷೋಭಾನ್ಯೋನ್ಯಮಾಸಾದ್ಯ ಯಸ್ಮಿನ್ ಲೋಕಶ್ಚರಾಚರಃ ॥೫॥**

ಸ್ವಸ್ಮಿನ್=ತನ್ನಲ್ಲಿ ವಿಶತಾ=ಪ್ರವೇಶ ಮಾಡಿದ ಪರೇಣ=ಪರಮಾತ್ಮನಿಂದ ವಿಶ್ವಸೃಗ್ಗಣಃ=ಜಗತ್ತಿಗೆ ಕಾರಣವಾದ ತತ್ವಗಳ ಸಮೂಹವು ಮಾತ್ರಯಾ=ಅಂಶದಿಂದ ಅನ್ಯೋನ್ಯಂ ಆಸಾದ್ಯ=ಪರಸ್ಪರ ಮಿಲಿತವಾಗಿ ವಿಷ್ಣುವಿನ ವೀರ್ಯರೂಪದಿಂದ ಪರಿಣಾಮ ಹೊಂದಿ ಚುಕ್ಷೋಭ=ಬ್ರಹ್ಮಾಂಡಾಕಾರವಾಗಿ ಪರಿಣಿತವಾಯಿತು. ಯಸ್ಮಿನ್=ಯಾವ ಬ್ರಹ್ಮಾಂಡದಲ್ಲಿ ಚರಾಚರಃ ಲೋಕಃ ಉತ್ಪನ್ನಃ=ಸ್ಥಾವರ ಜಂಗಮ ಪ್ರಪಂಚವು ಹುಟ್ಟಿತು. ॥೫॥

**ಹಿರಣ್ಮಯಃ ಸ ಪುರುಷಃ ಸಹಸ್ರಪರಿವತ್ಸರಾನ್ ।**
**ಆಂಡಕೋಶ ಉವಾಸಾಪ್ಸು ಸರ್ವಸತ್ವೋಪಬೃಂಹಿತಃ ॥೬॥**

ಸಃ=ಯಾವನ ಪ್ರೇರಣೆಯಿಂದ ತತ್ವಸಮೂಹವು ಬ್ರಹ್ಮಾಂಡವನ್ನು ಹುಟ್ಟಿಸಿತೋ ಆ ಹಿರಣ್ಮಯಃ=ಜ್ಞಾನಾನಂದಾತ್ಮಕದೇಹವುಳ್ಳ ಪುರುಷಃ=ಪುರುಷನಾಮಕನಾದ ಶ್ರೀಹರಿಯು ಸರ್ವಸತ್ವೋಪಬೃಂಹಿತಃ=ಎಲ್ಲ ಜೀವರಿಂದ ಸಹಿತನಾಗಿ ಆಂಡ-ಕೋಶೇ=ಬ್ರಹ್ಮಾಂಡದ ಒಳಗಿರುವ ಅಪ್ಸು=ನೀರಿನಲ್ಲಿ ಶೇಷಪರ್ಯಂಕದಲ್ಲಿ ಸಹಸ್ರ-ಪರಿವತ್ಸರಾನ್=ಸಾವಿರವರ್ಷಪರ್ಯಂತ ಉವಾಸ=ಮಲಗಿದನು. ಇದರಿಂದ ಪ್ರಳಯಕಾಲದಲ್ಲಿ ಎಲ್ಲರೂ ಪರಮಾತ್ಮನಿಂದ ಐಕ್ಯ ಹೊಂದುವರು ಎಂಬ ಶಂಕಾ ಮತ್ತು ದೇಹವಿಲ್ಲದೆ ಚೇತನರು ಪ್ರಲಯದಲ್ಲಿ ಹೇಗಿರುವರು ಎಂಬ ಶಂಕಾಗಳೆರಡನ್ನೂ ನಿವಾರಿಸಿದಂತಾಯಿತು. ಸರ್ವಸತ್ವೈಃ ಉಪಬೃಂಹಿತಃ=ಸಹಿತನೇ ಹೊರತು ಐಕ್ಯಹೊಂದಿದವನಲ್ಲ. ದೇಹರಹಿತರಾದವರು ಪರಮಾತ್ಮನ ಉದರದಲ್ಲಿ ಇರುವುದು ಉಪಪನ್ನವೇ ಎಂದು ಭಾವ ॥೬॥

**ಸ ವೈ ವಿಶ್ವಸೃಜಾಂ ಗರ್ಭೋ ದೈವಕರ್ಮಾತ್ಮಶಕ್ತಿಮಾನ್ ।**
**ವಿಬಭಾಜಾತ್ಮನಾತ್ಮಾನಮೇಕಧಾ ದಶಧಾ ತ್ರಿಧಾ ॥೭॥**

ಸಃ=ಬ್ರಹ್ಮಾಂಡದಲ್ಲಿ ವಾಸಮಾಡಿರುವ ಶ್ರೀಹರಿಯು ವಿಶ್ವಸೃಜಾಂ ಗರ್ಭಃ= ಜಗತ್ಸೃಷ್ಟಿಕಾರಣವಾದ ತತ್ವಗಳಿಗೆ ಗರ್ಭನು. ಅಂದರೆ ತನ್ನ ಉದರದಲ್ಲಿ ಮಹದಾದಿ ತತ್ವಗಳ ಅಂಶವನ್ನಿರಿಸಿಕೊಂಡವನು ಎಂದರ್ಥ. ದೈವಕರ್ಮಾತ್ಮಶಕ್ತಿಮಾನ್= ದೈವಶಕ್ತಿ ಎಂದರೆ ಪ್ರಭುತ್ವವು ಕರ್ಮಶಕ್ತಿ=ಕ್ರಿಯಾಶಕ್ತಿಯು ಆತ್ಮಶಕ್ತಿಃ=ತನ್ನ ಹೆಂಡತಿಯಾದ ಚೇತನಪ್ರಕೃತಿ ಈ ಮೂರರಿಂದ ಕೂಡಿದವನು ಆತ್ಮನಾ=ತನ್ನ ಇಚ್ಛೆಯಿಂದ ಆತ್ಮಾನಂ=ತನ್ನನ್ನು ಏಕಧಾ=ಬ್ರಹ್ಮದೇವರ ದೇಹದಲ್ಲಿ, ಅವರ ದೇಹ, ಹೃದಯಗಳ ನಿಯಮನಕ್ಕಾಗಿ ಹೃದಯಸ್ಥರೂಪದಿಂದ ಒಂದು ವಿಧವಾಗಿ ದಶಧಾ= ದಶವಿಧ ಪ್ರಾಣನಿಯಾಮಕವಾಗಿ ಹತ್ತು ರೀತಿಯಾಗಿ ತ್ರಿಧಾ=ಅಧ್ಯಾತ್ಮ, ಅಧಿಭೂತ, ಅಧಿದೈವ ಹೀಗೆ ಮೂರಾಗಿ ವಿಬಭಾಜ=ವಿಭಾಗ ಮಾಡಿದನು.

ಆಚಾರ್ಯರು 'ದೈವಕರ್ಮಾತ್ಮಶಕ್ತಿಮಾನ್' ಎಂಬಲ್ಲಿ ದೈವಶಬ್ದಾರ್ಥವನ್ನು ಪ್ರಮಾಣದಿಂದ ತೋರಿಸುವರು-

**''ಈಶ್ವರೋ ದೈವಮುದ್ದಿಷ್ಟಂ ಸರ್ವಸ್ಯಾಪಿ ಪ್ರಭುತ್ವತಃ'' । ಇತಿ ಚ ।**
**ಆತ್ಮಶಕ್ತಿಃ ಪ್ರಕೃತಿಃ ।**

ಎಲ್ಲಕ್ಕೂ ಪ್ರಭುತ್ವ ಇರುವುದರಿಂದ ಈಶ್ವರ ದೈವ ಎನಿಸುವನು ಎಂದು ಪ್ರಮಾಣದಲ್ಲಿದೆ. ಆತ್ಮಶಕ್ತಿ ಎಂಬುದು ಪುನರುಕ್ತವೆಂದರೆ ಹೇಳಿರುವರು. ಆತ್ಮಶಕ್ತಿ ಎಂದರೆ ಪ್ರಕೃತಿ ಎಂದು ॥೭॥

**ಏಷ ಹ್ಯಶೇಷಸತ್ವಾನಾಮಾತ್ಮಾಂಶಃ ಪರಮಾತ್ಮನಃ ।**
**ಆದ್ಯೋಽವತಾರೋ ಯತ್ರಾಸೌ ಭೂತಗ್ರಾಮೋ ವಿಭಾವ್ಯತೇ ॥**

ಯಃ=ಯಾವನು ಅಶೇಷಸತ್ವಾನಾಂ=ಬ್ರಹ್ಮಾದಿ ಸರ್ವಪ್ರಾಣಿಗಳಿಗೂ ಆತ್ಮಾ=ನಿಯಾಮಕನು (ಆದಾನಾದಿಕರ್ತಾ) ಪರಮಾತ್ಮನಃ ಅಂಶಃ=ಶ್ರೀಹರಿಯ ಸ್ವರೂಪಾಂಶನು ಆದ್ಯೋ ಅವತಾರಃ=ಮೊದಲನೇ ಅವತಾರನು (ಆರನೇ ಅಧ್ಯಾಯ ನಾಲ್ಕನೇ ಶ್ಲೋಕದಲ್ಲಿ 'ಪುರುಷೇಣಾತ್ಮಭೂತೇನ ವೀರ್ಯಮಾಧತ್ತ' ಎಂದು ಹೇಳಲ್ಪಟ್ಟಿರುವನೋ) ಯತ್ರ=ಯಾವನಿಂದ ಭೂತಗ್ರಾಮಃ=ಮಹತ್ತತ್ವ ಆರಂಭಮಾಡಿ ಬ್ರಹ್ಮಾಂಡಪರ್ಯಂತತತ್ವಸಮೂಹವು ವಿಭಾವ್ಯತೇ=ಉತ್ಪಾದಿಸಲ್ಪಡುವದೋ ಅವನೇ ಏಷಃ=''ಹಿರಣ್ಮಯಃ ಸ ಪುರುಷಃ'' ಎಂಬ ಇಲ್ಲಿಯ ಆರನೇ ಶ್ಲೋಕದಲ್ಲಿ ಹೇಳಲ್ಪಟ್ಟವನು ಹೊರತು ಬ್ರಹ್ಮಾಂಡವಲ್ಲ ಹಿ=ಪ್ರಮಾಣಸಿದ್ಧ.

'ಹಿರಣ್ಮಯಃ ಸ ಪುರುಷ' ಎಂದು ಬ್ರಹ್ಮಾಂಡದಲ್ಲಿ ಆವಿರ್ಭೂತನಾದ ಪುರುಷನಿಗೆ, ಹಿಂದೆ 'ಪುರುಷೇಣಾತ್ಮಭೂತೇನ' ಎಂದು ಮಹತ್ತತ್ವಜನಕವಾದ ಪುರುಷನು ಹೇಳಲ್ಪಟ್ಟನೋ ಅವನಿಂದ, ಸ್ಥಾನಬೇಧ ಮತ್ತು ಕಾರ್ಯಭೇದ ವಿರುವುದರಿಂದ ಭೇದವಿದೆಯೇ ? ಎಂಬ ಶಂಕೆಗೆ ಉತ್ತರಿಸಲು 'ಏಷಹಿ' ಎಂಬ ಮೂಲ ಹೊರಟಿದೆ. ಹೀಗೆ ಅವತಾರಿಕೆ. ಅಥವಾ ಸರ್ವಪ್ರಾಣಿಗಳ ಆಧಾರವೆಂದು ಹೇಳುತ್ತಿರುವುದರಿಂದ ಅದಕ್ಕಾಗಿಯೇ ಸೃಷ್ಟಿಯಾದ ಬ್ರಹ್ಮಾಂಡವೇ ಇಲ್ಲಿ 'ವಿಶ್ವಸೃಜಾಂ ಗರ್ಭಃ' ಎಂದು ಹೇಳಲ್ಪಟ್ಟಿದೆ ಎಂದೂ ಶಂಕೆ ಬರುವುದು. ಅದನ್ನೂ ಪರಿಹರಿಸಲು ಈ ಶ್ಲೋಕ. ಹೀಗೆ ಹೇಳಬಹುದು - ಇಲ್ಲಿ ಪರಾಮರ್ಶೆ ಮಾಡಿದ್ದು ಬ್ರಹ್ಮಾಂಡವೆಂದು ಹೇಳಲಾಗದು. ಪರಮಾತ್ಮನ ಅಂಶವೆಂದೂ, ಮೊದಲನೇ ಅವತಾರವೆಂದೂ ಹೇಳಿದ್ದರಿಂದ ಬ್ರಹ್ಮಾಂಡವು ಪರಮಾತ್ಮನ ಅವತಾರವಾಗದಿದ್ದುದರಿಂದ ಅದನ್ನು ಪರಾಮರ್ಶೆ ಮಾಡಲಾಗದು. ಕಾರಣ, 'ಪುರುಷೇಣಾತ್ಮಭೂತೇನ'

ಎಂದು ಹೇಳಿದ ಶ್ರೀಹರಿಯನ್ನೇ 'ಸಃ' ಎಂದು 'ಏಷಃ' ಎಂದೂ ಪರಾಮರ್ಶೆ ಮಾಡಿರುವರು.

ಈ ಶ್ಲೋಕದಿಂದ ಇಬ್ಬರೂ ಬೇರೆ ಎಂಬ ಶಂಕೆ ಹೇಗೆ ಪರಿಹೃತವಾಯಿತು ಎಂದು ತಿಳಿಸುವರು ಆಚಾರ್ಯರು–

**ಪುರುಷೇಣಾತ್ಮಭೂತೇನೇತಿ ಯೋಽಂಡಮಸೃಜತ್ ಸಃ ಏಷಃ ಇತ್ಯುಕ್ತಃ ।**

ಪೂರ್ವಾಧ್ಯಾಯದಲ್ಲಿ ಪುರುಷಶಬ್ದವಾಚ್ಯನೆಂದು, ವಾಸುದೇವನೆಂದು, ಮಹದಾದಿ ಸೃಷ್ಟಿದ್ವಾರಾ ಬ್ರಹ್ಮಾಂಡಸೃಷ್ಟಿಮಾಡಿದವನೆಂದು ಹೇಳಲ್ಪಟ್ಟವನೇ 'ಏಷಃ' ಎಂದು ಪರಾಮರ್ಶೆ ಮಾಡಲ್ಪಟ್ಟಿರುವನು. 'ಹಿರಣ್ಮಯಃ ಸ ಪುರುಷಃ' ಎಂಬಲ್ಲಿ ಹೇಳಲ್ಪಟ್ಟವನು ಬ್ರಹ್ಮಾಂಡದಲ್ಲಿ ಆವಿರ್ಭೂತನು. ಆದ್ದರಿಂದ ಅವರಿಗೆ ಭೇದ ಶಂಕೆ ಕೂಡದು. ಸ್ಥಾನಭೇದ, ಕಾರ್ಯಭೇದಗಳನ್ನು ವಿಶೇಷ ಬಲದಿಂದ ಉಪಪಾದಿಸಬೇಕು.

'ಹಿ' ಶಬ್ದಸೂಚಿತಪ್ರಮಾಣ ಹೇಳುವರು –

**ಆದ್ಯೋಽವತಾರೋ ವಿಷ್ಣೋಸ್ತು ಪುರುಷೋ ನಾಮ ಕೀರ್ತಿತಃ ।**
**ಅಸೃಜತ್ ಸಮಹತ್ತತ್ತ್ವಂ ಸ ಏವಾಂಡಂ ಸಮಾವಿಶತ್ ।**
**ಸ ಬ್ರಹ್ಮಣೋ ಹೃದಿಸ್ಥತ್ವಾತ್ ಹೃದಯಂ ಚೇತಿ ಕೀರ್ತ್ಯತೇ ॥ ಇತಿ ಚ**

ವಿಷ್ಣುವಿನ ಮೊದಲನೇ ಅವತಾರ, ಪುರುಷನೆಂದು ಹೇಳಲ್ಪಟ್ಟಿದೆ. ಅವನೇ ಮಹತ್ತತ್ವ ಸೃಷ್ಟಿ ಮಾಡಿದವನು. ಅವನೇ ಬ್ರಹ್ಮಾಂಡ ಪ್ರವೇಶ ಮಾಡಿದವನು. ಅವನೇ ಬ್ರಹ್ಮನ ಹೃದಯದಲ್ಲಿ ಇರುವುದರಿಂದ ಹೃದಯನೆನಿಸುವನು. ಮಹತ್ತತ್ವ ಜನಕವಾದ ಅವತಾರ ಮೊದಲನೆಯದು ಪುರುಷ ಎಂದು ಹೆಸರು. ಬ್ರಹ್ಮಾಂಡದಲ್ಲಿ ಪ್ರವೇಶ ಮಾಡಿದ್ದು ಎರಡನೆಯ ಪುರುಷರೂಪ.ಬ್ರಹ್ಮಾಂಡದ ಒಳಗೆ ವಿರಾಟ್ ದೇಹವನ್ನು ಸೃಷ್ಟಿ ಮಾಡಿ ಅದನ್ನು ಪ್ರೇರಿಸಲು, ಅದರಲ್ಲಿ ಆವಿರ್ಭೂತವಾದುದು ಹೃದಯ ಮತ್ತು ಪುರುಷ ಎಂದು ಕರೆಸಿಕೊಳ್ಳುವುದು ಮೂರನೆಯ ರೂಪ.ಎಂದು ತಿಳಿಯಬೇಕು. ಇದನ್ನೇ ಬೇರೆ ಸ್ಥಳದಲ್ಲಿ ಹೀಗೆ ಹೇಳಿದೆ

**'ಪ್ರಥಮಂ ಮಹತಃ ಸ್ರಷ್ಟೃ ದ್ವಿತೀಯಂ ತ್ವಂಡಸಂಸ್ಥಿತಂ ।**
**ತೃತೀಯಂ ದೇಹಿನಾಂ ದೇಹೇ' । ಇತಿ ।**

ಯಾರು ಮಹದಾದಿ ತತ್ವಗಳನ್ನು ಸೃಷ್ಟಿಮಾಡಿ, ಅವುಗಳಿಗೆ ಅಂಡ ಸೃಷ್ಟಿ ಮಾಡಲು ಅಸ್ವಾತಂತ್ರ್ಯವನ್ನು ಪ್ರಕಟಿಸಿ, ಅವುಗಳ ಅಭಿಮಾನಿಗಳಿಂದ ತನ್ನನ್ನು

ಸ್ತೋತ್ರ ಮಾಡಿಸಿಕೊಂಡು, ಅವರಲ್ಲಿ ಅನುಗ್ರಹಕ್ಕಾಗಿ ಸರ್ವಚೇಷ್ಟಕರೂಪದಿಂದ ರಮೆಯೊಡನೆ ಪ್ರವೇಶ ಮಾಡಿ, ಅವುಗಳನ್ನು ಸಂಯೋಜಿಸಿ, ಕಾರ್ಯೋನ್ಮುಖ-ವನ್ನಾಗಿ ಮಾಡಿ, ಅವುಗಳ ಅಂಶದಿಂದ ಬ್ರಹ್ಮಾಂಡ ನಿರ್ಮಾಣ ಮಾಡಿ, ಅದರಲ್ಲಿ ಪ್ರವೇಶ ಮಾಡಿ, ಅಲ್ಲಿರುವ ನೀರಲ್ಲಿ ಸಾವಿರವರ್ಷ ಇದ್ದು ಕೊನೆಗೆ ಬ್ರಹ್ಮದೇವರ ವಿರಾಟ್ ಶರೀರವನ್ನು ಸೃಷ್ಟಿಸಿ, ಅವರ ದೇಹೇಂದ್ರಿಯ ನಿಯಾಮಕನಾಗಿ ಆವಿರ್ಭಾವ ಪಡೆದನೋ ಅವನೇ'ಏಷಃ ಎಂದು ಪರಾಮರ್ಶಿಸಲ್ಪಟ್ಟವನು ಎಂದು ಭಾವ. ||೮||

'ಏಕಧಾ ದಶಧಾ ತ್ರಿಧಾ' ಎಂದು ಹೇಳಿದ್ದನ್ನೇ ವಿವರಿಸುವರು –

**ಸಾಧ್ಯಾತ್ಮಂ ಸಾಧಿದೈವಂ ಚ ಸಾಧಿಭೂತಮಿತಿ ತ್ರಿಧಾ ।**
**ವಿರಾಟ್ ಪ್ರಾಣೋ ದಶವಿಧ ಏಕಧಾ ಹೃದಯೇನ ಚ ॥೯॥**

ವಿರಾಟ್=ವಿಶೇಷವಾಗಿ ಪ್ರಕಾಶಮಾನನಾದ ಬ್ರಹ್ಮದೇವರ ದೇಹದಲ್ಲಿರುವ ಪುರುಷನಾಮಕ ಪರಮಾತ್ಮನು ಸಾಧ್ಯಾತ್ಮಂ=ಅಧ್ಯಾತ್ಮ (ದೇಹದಲ್ಲಿರುವ) ದೇವತೆ-ಗಳಿಂದ ಸಹಿತನಾಗಿ ಅಂದರೆ ಅವರ ನಿಯಾಮಕರೂಪವು ಒಂದನೆಯದು ಸಾಧಿ ದೈವಂ=ಅಧಿದೈವನಿಯಾಮಕರೂಪವುಎರಡನೆಯದು ಸಾಧಿಭೂತಂ=ಅಧಿಭೂತ-ದೇವತಾನಿಯಾಮಕರೂಪ ಮೂರನೆಯದು ಈ ಅಭಿಪ್ರಾಯದಿಂದ ತ್ರಿಧಾ ಎಂದು ಹೇಳಿದ್ದು ಪ್ರಾಣಃ ದಶವಿಧಃ=ಪ್ರಾಣನಿಯಾಮಕ ರೂಪಗಳು ದಶವಿಧಃ=ಹತ್ತು ವಿಧ ಎಂದು ಹೇಳಲ್ಪಟ್ಟಿವೆ ಹೃದಯೇನ=ಹೃದಯದಲ್ಲಿರುವ ಹೃದಯನಿಯಾಮಕರೂಪ ವಿವಕ್ಷೆಯಿಂದ ಏಕಧಾ=ಒಂದು ವಿಧವಾದುದು ಎಂದು ಹೇಳಲ್ಪಟ್ಟಿದೆ ಎಂದರ್ಥ.

(ಎಲ್ಲ ದೇವತೆಗಳಲ್ಲಿರುವ ಪರಮಾತ್ಮನು ಮೂರು ವಿಧ, ಮುಖ್ಯಪ್ರಾಣ-ತತ್ಪುತ್ರರಲ್ಲಿರುವವನು ಹತ್ತು ವಿಧ, ತನಗೆ ಮಾತ್ರ ಏಕವಿಧತೆ ಹೀಗೆ ಸಂಖ್ಯಾ ತಾರತಮ್ಯಾನುಸಾರ ಹಿಂದೆ ಹೇಳಿದ್ದಕ್ಕೆ ವಿಪರೀತ ಕ್ರಮದಿಂದ ವಿವರಣೆ ಮಾಡಿದ್ದಾರೆ. ಹಿಂದೆ ಒಂದು, ಹತ್ತು, ಮೂರು, ಎಂದು ಹೇಳಿದ್ದು ಸ್ವರೂಪತಾರತಮ್ಯಾನು-ಸಾರವೆಂದು ತಿಳಿಯಬೇಕು. ಇಲ್ಲಿ ಏಕಧಾ ಹೃದಯೇನ ತು ಎಂಬುದಕ್ಕೆ ಹಿಂದಿನ ಶ್ಲೋಕದ ತಾತ್ಪರ್ಯದಲ್ಲಿ ಉದಾಹರಿಸಿದ ಪ್ರಮಾಣದಿಂದಲೇ ಅರ್ಥ ಹೇಳಿದ್ದರಿಂದ ಅದನ್ನು ಬಿಟ್ಟು 'ಪ್ರಾಣೋ ದಶವಿಧಃ' ಎಂಬುದಕ್ಕೂ ಪೂರ್ವಾರ್ಧಕ್ಕೂ ವ್ಯಾಖ್ಯಾನಿಸುವ ಪ್ರಮಾಣ ಹೇಳುವರು–)

''ಪ್ರಾಣಾದಿಪಂಚಕಂ ಚೈವ ತಥಾ ನಾಗಾದಿಪಂಚಕಂ ।
ಸನಾಗಕೂರ್ಮಕೃಕಲದೇವದತ್ತಧನಂಜಯಾಃ ।

**ಏವಂ ತು ದಶಧಾ ಪ್ರಾಣಾ ಅಧ್ಯಾತ್ಮಾದಿತ್ರಿಧಾಽಖಿಲಾಃ ॥''**
**ಇತಿ ಚ ವ್ಯೋಮಸಂಹಿತಾಯಾಂ ।**

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು. ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ ಈ ಹೆಸರಿನ ಐದು ಹೀಗೆ ಮುಖ್ಯ ಪ್ರಾಣನ ರೂಪಗಳು ಎರಡುವರ್ಗ . ಪ್ರಾಣಶಬ್ದವಾಚ್ಯಮುಖ್ಯತ್ವವನ್ನು ಸೂಚಿಸುವುದು 'ತು' ಶಬ್ದ. ಇಲ್ಲಿ ಅಧ್ಯಾತ್ಮಾದಿ ಭೇದದಿಂದ ಹೇಳಿದ ಮೂರುವಿಧರಾದವರೆಲ್ಲರೂ ತತ್ತ್ವಾಭಿಮಾನಿಗಳು ಎಂದು ತಿಳಿಯಬೇಕು ॥೯॥

ಅಧ್ಯಾತ್ಮಾದಿಭೇದವನ್ನು ವಿವರಿಸಲು ಹೇಳುವರು–

**ಸ್ಮರನ್ ವಿಶ್ವಸೃಜಾಮೀಶೋ ವಿಜ್ಞಾಪಿತಮಧೋಕ್ಷಜಃ ।**
**ವಿರಾಜಮತಪತ್ ಸ್ವೇನ ತೇಜಸೈಷಾಂ ವಿವೃದ್ಧಯೇ ॥೧೦॥**

ಅಧೋಕ್ಷಜಃ=ಇಂದ್ರಿಯಗೋಚರನಾಗದ ಈಶಃ=ಶ್ರೀಹರಿಯು ವಿಶ್ವಸೃಜಾಂ= ತತ್ತ್ವಾಭಿಮಾನಿದೇವತೆಗಳ ವಿಜ್ಞಾಪಿತಂ=ನಮಗೆ ಬ್ರಹ್ಮಾಂಡ ನಿರ್ಮಾಣ ಮಾಡುವ ಶಕ್ತಿಯನ್ನು ಕೊಡು ಎಂದು ಪ್ರಾರ್ಥಿಸಿದ್ದನ್ನು ಸ್ಮರನ್=ಮನಸ್ಸಿಗೆ ತಂದು ಕೊಂಡು ಸ್ವೇನ ತೇಜಸಾ=ತನ್ನ ಸಾಮರ್ಥ್ಯದಿಂದ ಏಷಾಂ=ಅಗ್ನ್ಯಾದಿದೇವತೆಗಳಿಗೆ ವಿವೃದ್ಧಯೇ=ಬೆಳೆಸಲು,ವಿಶೇಷವಾಗಿ ವ್ಯಾಪಾರ ಮಾಡಲು ಅವರಿಗೊಂದು ಆಶ್ರಯ ಸಿಗುವಂತೆ ವಿರಾಜಂ=ಬ್ರಹ್ಮದೇಹವನ್ನು ಅತಪತ್=ಹೀಗೆ ಮಾಡಬೇಕೆಂದು ಆಲೋಚಿಸಿದನು ॥೧೦॥

**ಅಥ ತಸ್ಯಾಭಿತಪ್ತಸ್ಯ ಕತಿಚಾಯತನಾನಿ ಹ ।**
**ನಿರಭಿದ್ಯಂತ ದೇವಾನಾಂ ತಾನಿ ಮೇ ಗದತಃ ಶೃಣು ॥೧೧॥**

ಅಥ=ಅನಂತರ ಅಭಿತಪ್ತಸ್ಯ=ಆಲೋಚಿತವಾದ ತಸ್ಯ=ಆ ಬ್ರಹ್ಮ ಶರೀರದಿಂದ ದೇವಾನಾಂ=ದೇವತೆಗಳಿಗೆ ಆಯತನಾನಿ=ಆಶ್ರಯಗಳಾದ ಇಂದ್ರಿಯಗೋಲಕಗಳು ಕತಿ ಚ=ಕೆಲವು ನಿರಭಿದ್ಯಂತ=ಉತ್ಪನ್ನವಾದವು. ತಾನಿ=ಅವುಗಳನ್ನು ಗದತಃ=ಹೇಳುವ ಮೇ=ನನ್ನಿಂದ ಶೃಣು=ಕೇಳು ॥೧೧॥

**ತಸ್ಯಾಗ್ನಿರಾಸ್ಯಂ ನಿರ್ಭಿಣ್ಣಂ ಲೋಕಪಾಲೋಽವಿಶತ್ ಪದಂ ।**
**ವಾಚಾ ಸ್ವಾಂಶೇನ ವಕ್ತವ್ಯಂ ಯಯಾಽಸೌ ಪ್ರತಿಪದ್ಯತೇ ॥೧೨॥**

ತಸ್ಯ=ಮಾತನಾಡಬೇಕೆಂಬ ಇಚ್ಛೆಯುಳ್ಳ ಬ್ರಹ್ಮಾಂತರ್ಯಾಮಿ ಹರಿಯಿಂದ ಆ ಬ್ರಹ್ಮದೇಹಕ್ಕೆ ಆಸ್ಯಂ=ಮುಖವೆಂಬ ಸ್ಥಾನವು ನಿರ್ಭಿಣ್ಣಂ=ಉತ್ಪನ್ನವಾಯಿತು

ತತ್‌ಪದಂ=ಆ ಸ್ಥಾನವನ್ನು ಲೋಕಪಾಲಃ=ಲೋಕಪಾಲಕನಾದ ದೇವತೆಗಳಲ್ಲಿ ಸೇರಿದ ಅಗ್ನಿಃ=ಅಗ್ನಿ ಎಂಬ ದೇವತೆಯು ವಾಚಾ=ವಾಗಿಂದ್ರಿಯದ ಜೊತೆಗೆ ವಾಚಾ=ವಾಜ್‌ನಾಮಕವಾದ ಸ್ವಾಂಶೇನ=ತನ್ನ ಸ್ವರೂಪಭೂತ ಅಂಶದಿಂದ ಅವಿಶತ್=ಪ್ರವೇಶಮಾಡಿದನು ಯಯಾ=ಯಾವ, (ಅಧ್ಯಾತ್ಮದಲ್ಲಿ ಸೇರಿದ) ವಾಗಿಂದ್ರಿಯದಿಂದ ಅಸೌ=ವಿರಾಟ್‌ಪುರುಷನು ವಕ್ತವ್ಯಂ=ವ್ಯವ್ಯಹಾರ ಮಾಡಲು ಯೋಗ್ಯವಾದ ಶಬ್ದವನ್ನು ಪ್ರತಿಪದ್ಯತೇ=ಹೊಂದುವನು ವ್ಯವಹರಿಸುವನೆಂದರ್ಥ. ಶಬ್ದದಲ್ಲಿರುವರೂಪವೇ ಅಧಿಭೂತವೆನಿಸುವುದು ॥೧೨॥

**ನಿರ್ಭಿಣ್ಣಂ ತಾಲು ವರುಣೋ ಲೋಕಪಾಲೋಽವಿಶದ್ಧರೇಃ ।**
**ಜಿಹ್ವಯಾಽಂಶೇನ ಚ ರಸಾನ್ ಯಯಾಽಸೌ ಪ್ರತಿಪದ್ಯತೇ ॥೧೩॥**

ಹರೇಃ=ರಸಗ್ರಹಣಮಾಡಬೇಕೆಂಬ ಇಚ್ಛೆಯುಳ್ಳ ಬ್ರಹ್ಮಾಂತರ್ಯಾಮಿ ಹರಿಯಿಂದ, ಆ ಬ್ರಹ್ಮದೇಹಕ್ಕೆ ತಾಲು=ನಾಲಗೆಯ ಬುಡವು (ರಸನೇಂದ್ರಿಯ ಗೋಲಕವು) ನಿರ್ಭಿಣ್ಣಂ=ಉತ್ಪನ್ನವಾಯಿತು. ಲೋಕಪಾಲಃ ವರುಣಃ=ಲೋಕ-ಪಾಲಕನಾದ ವರುಣನು ಜಿಹ್ವಯಾ=ರಸನೇಂದ್ರಿಯದಿಂದ ಕೂಡಿಕೊಂಡು ಅಂಶೇನ ಚ=ತನ್ನ ಒಂದು ಅಂಶದಿಂದಲೂ ಅವಿಶತ್=ಪ್ರವೇಶಿಸಿದನು ಅಸೌ= ಬ್ರಹ್ಮಾಂತರ್ಯಾಮಿ ಶ್ರೀಹರಿಯು ಯಯಾ=ಯಾವುದರಿಂದ ರಸಾನ್=ರಸಗಳನ್ನು ಪ್ರತಿಪದ್ಯತೇ=ತಿಳಿಯುವನು. ॥೧೩॥

**ನಿರ್ಭಿಣ್ಣೇ ಅಶ್ವಿನೌ ನಾಸೇ ವಿಷ್ಣೋರಾವಿಶತಾಂ ಪದಂ ।**
**ಘ್ರಾಣೇನಾಂಶೇನ ಗಂಧಸ್ಯ ಪ್ರತಿಪತ್ತಿರ್ಯತೋ ಭವೇತ್ ॥೧೪॥**

ವಿಷ್ಣೋಃ=ವಾಸನೆನೋಡಬೇಕೆಂಬ ಇಚ್ಛೆಯುಳ್ಳ ಬ್ರಹ್ಮಾಂತರ್ಯಾಮಿ ಹರಿಯಿಂದ, ಆ ಬ್ರಹ್ಮದೇಹಕ್ಕೆ ನಾಸೇ ನಿರ್ಭಿಣ್ಣೇ=ನಾಸಿಕೆಗಳು (ಘ್ರಾಣೇಂದ್ರಿಯ ಗೋಲಕಗಳು) ಜನಿಸಿದವು ಪದಂ=ಆ ಸ್ಥಾನವನ್ನು ಅಶ್ವಿನೌ=ಅಶ್ವಿನೀದೇವತೆಗಳು ಘ್ರಾಣೇನ=ಘ್ರಾಣೇಂದ್ರಿಯಸಹಿತರಾಗಿ ಅಂಶೇನ=ತನ್ನ ಒಂದು ಅಂಶದಿಂದ ಆವಿಶತಾಂ=ಪ್ರವೇಶಿಸಿದರು ಯತಃ=ಯಾವುದರಿಂದ ಗಂಧಸ್ಯ=ಗಂಧದ ಪ್ರತಿಪತ್ತಿಃ= ಜ್ಞಾನವು ಭವೇತ್=ಆಗುವುದು ॥೧೪॥

**ನಿರ್ಭಿಣ್ಣೇ ಅಕ್ಷಿಣೀ ತ್ವಷ್ಟಾ ಲೋಕಪಾಲೋಽವಿಶತ್ ಪ್ರಭೋಃ ।**
**ಚಕ್ಷುಷಾಽಂಶೇನ ರೂಪಾಣಾಂ ಪ್ರತಿಪತ್ತಿರ್ಯತೋ ಭವೇತ್ ॥೧೫॥**

ಪ್ರಭೋಃ=ನೋಡಬೇಕೆಂಬ ಇಚ್ಛೆಯುಳ್ಳ ಬ್ರಹ್ಮಾಂತರ್ಯಾಮಿ ಹರಿಯಿಂದ, ಆ ಬ್ರಹ್ಮದೇಹಕ್ಕೆ ಅಕ್ಷಿಣೀ=ಚಕ್ಷುರಿಂದ್ರಿಯಗೋಲಕಗಳು ನಿರ್ಭಿಣ್ಣೇ=ಜನಿಸಿದವು

ಲೋಕಪಾಲಃ=ಲೋಕಪಾಲಕನಾದ ತ್ವಷ್ಟಾ=ತ್ವಷ್ಟ್ರ ಎಂಬ ಸೂರ್ಯದೇವತೆಯು ಚಕ್ಷುಷಾ=ಚಕ್ಷುರಿಂದ್ರಿಯಸಹಿತನಾಗಿ ಅಂಶೇನ=ತನ್ನ ಒಂದು ಅಂಶದಿಂದ ಆವಿಶತ್= ಪ್ರವೇಶಿದನು. ಯತಃ=ಯಾವ ಚಕ್ಷುರಿಂದ್ರಿಯಗಳಿಂದ ರೂಪಾಣಾಂ=ರೂಪಗಳ ಪ್ರತಿಪತ್ತಿಃ=ಜ್ಞಾನವು ಭವೇತ್=ಆಗುವುದು ॥೧೫॥

**ನಿರ್ಭಿಣ್ಣಾನ್ಯಥ ಚರ್ಮಾಣಿ ಲೋಕಪಾಲೋಽನಿಲೋಽವಿಶತ್ ।**
**ಪ್ರಾಣೇನಾಂಶೇನ ಸಂಸ್ಪರ್ಶಂ ಯೇನಾಸೌ ಪ್ರತಿಪದ್ಯತೇ ॥೧೬॥**

ಅಥ=ನಂತರ ಚರ್ಮಾಣಿ=ತ್ವಗಿಂದ್ರಿಯಗೋಲಕವಾದ ಚರ್ಮಗಳು ನಿರ್ಭಿಣ್ಣಾನಿ=ಉತ್ಪನ್ನವಾದವು ಅನಿಲಃ=ಪ್ರಧಾನವಾಯುಪುತ್ರನಾದ ವಾಯುವು ಪ್ರಾಣೇನ=ತ್ವಗಿಂದ್ರಿಯಸಹಿತನಾಗಿ ಅಂಶೇನ=ಪ್ರಾಣನಾಮಕವಾದ ತನ್ನ ಅಂಶದಿಂದ (ಇಂದ್ರಿಯಾಭಿಮಾನಿರೂಪದಿಂದ) ಆವಿಶತ್=ಪ್ರವೇಶಿಸಿದನು ಯೇನ=ಯಾವ ತ್ವಗಿಂದ್ರಿಯದಿಂದ ಅಸೌ=ಬ್ರಹ್ಮಶರೀರದಲ್ಲಿರುವ ಶ್ರೀಹರಿಯು ಸ್ಪರ್ಶಂ ಪ್ರತಿಪದ್ಯತೇ=ಸ್ಪರ್ಶಜ್ಞಾನ ಮಾಡಿಕೊಳ್ಳುವನು.

ಇಲ್ಲಿ ತ್ವಗಭಿಮಾನಿಯೆಂದು ಹೇಳಿದವನು ಮತ್ತು ಹಿಂದೆ ಹತ್ತು ವಿಧವೆಂದು ಹೇಳಿದ ಪ್ರಾಣನೂ ಒಂದೇ ಎಂಬ ತಿಳುವಳಿಕೆಯನ್ನು ಪ್ರಮಾಣದಿಂದ ಪರಿಹರಿಸುವರು–

**ಪ್ರಾಣಃ ಪ್ರಥಮಜೋ ಯಸ್ತು ಪ್ರಧಾನೋ ವಾಯುರೀರಿತಃ ।**
**ತ್ವಗಾತ್ಮಾದ್ಯಾಸ್ತು ತತ್ಪುತ್ರಾ ದ್ವಿಧಾ ಭೂತಮುದಾಹೃತಂ ॥**
**ಇತಿ ತತ್ವನಿರ್ಣಯೇ ।**

'ಯಃ=ಯಾವನು ದೇಹದ ಹೊರಗೆ ಭೂತವಾಯುವಿಗೆ ಮುಖ್ಯ ಅಭಿಮಾನಿ-ಯಾದ ಮುಖ್ಯವಾಯುವೋ, ಪ್ರಥಮಜಃ ಪ್ರಾಣಃ=ಮೊದಲಿಗೆ ದಶವಿಧವೆಂದು ಹೇಳಲ್ಪಟ್ಟವನು. ಯಾವನು ಅಮುಖ್ಯವಾಗಿ ವಾಯ್ವಭಿಮಾನಿಯೋ ಮತ್ತು ಪ್ರಧಾನವಾಯುಪುತ್ರನೋ ಅವನು ತ್ವಗಾದ್ಯಾತ್ಮಾ=ತ್ವಗಭಿಮಾನಿ ಪ್ರಾಣನು. ಆದಿಪದದಿಂದ ಸ್ಪರ್ಶಾದಿಗಳಿಗೆ ಅಭಿಮಾನಿಗಳಾದ ಅಪಾನಾದಿಗಳು. ಹೀಗೆ ಭೂತಂ=ಭೂತವಾಯ್ವಭಿಮಾನಿಯ ರೂಪವು ದ್ವಿಧಾ ಉದಾಹೃತಂ=ಪ್ರಧಾನ, ಅಪ್ರಧಾನವೆಂದು ಎರಡು ವಿಧವಾಗಿ ಪುರಾಣಗಳಲ್ಲಿ ಹೇಳಲ್ಪಟ್ಟಿದೆ' ಎಂದು ತತ್ವನಿರ್ಣಯದಲ್ಲಿ ಹೇಳಿದೆ. ॥೧೬॥

**ಕರ್ಣಾವಸ್ಯ ವಿನಿರ್ಭಿಣ್ಣೌ ಧಿಷ್ಣ್ಯಂ ಸ್ವಂ ವಿವಿಶುರ್ದಿಶಃ ।**
**ಶ್ರೋತ್ರೇಣಾಂಶೇನ ಶಬ್ದಸ್ಯ ಸಿದ್ಧಿಂ ಯೇನ ಪ್ರಪದ್ಯತೇ ॥೧೭॥**

ಅಸ್ಯ=ಕೇಳಬೇಕೆಂಬ ಇಚ್ಛೆಯುಳ್ಳ ಬ್ರಹ್ಮಾಂತರ್ಯಾಮಿಹರಿಯಿಂದ,ಆ ವಿರಾಟ್ ದೇಹಕ್ಕೆ ಕರ್ಣೌ=ಶ್ರೋತ್ರೇಂದ್ರಿಯಗೋಲಕಗಳು ನಿರ್ಭಿಣ್ಣೌ=ಉತ್ಪನ್ನವಾದವು ಸ್ವಂ ಧಿಷ್ಣ್ಯಂ=ಆ ತಮ್ಮ ಸ್ಥಾನವನ್ನು ದಿಶಃ=ದಿಗಭಿಮಾನಿಗಳಾದ ಯಮ, ಮಿತ್ರಾವರುಣ, ಕುಬೇರರು ಶ್ರೋತ್ರೇಣ=ಶ್ರವಣೇಂದ್ರಿಯಸಹಿತರಾಗಿ ಅಂಶೇನ=ತಮ್ಮ ನಿಯಾಮಕ ರೂಪದಿಂದ ವಿವಿಶುಃ=ಪ್ರವೇಶಿಸಿದರು ಯೇನ=ಯಾವುದರಿಂದ ಶಬ್ದಸ್ಯ ಸಿದ್ಧಿಂ ಪ್ರಪದ್ಯತೇ=ಶಬ್ದಜ್ಞಾನ ಮಾಡಿಕೊಳ್ಳುವನು. 'ಯಮಶ್ಚ ಮಿತ್ರಾ ವರುಣಾ ಕುಬೇರಶ್ಚ ದಿಗೀಶ್ವರಾಃ' ಎಂದು ಐತರೇಯದಲ್ಲಿದೆ. ॥೧೭॥

ತ್ವಗಿಂದ್ರಿಯಕ್ಕೆ ಬೇರೆ ವಿಷಯ ಮತ್ತು ಅಭಿಮಾನಿಗಳನ್ನು ತಿಳಿಸುವರು.

**ತ್ವಚಮಸ್ಯ ವಿನಿರ್ಭಿಣ್ಣಾಂ ವಿವಿಶುರ್ಧಿಷ್ಣ್ಯಮೋಷಧೀಃ ।**
**ಅಂಶೇನ ರೋಮಭಿಃ ಕಂಡೂಂ ಯೈರಸೌ ಪ್ರತಿಪದ್ಯತೇ ॥೧೮॥**

ಅಸ್ಯ=ವಿರಾಟ್‌ದೇಹಕ್ಕೆ ವಿನಿರ್ಭಿಣ್ಣಾಂ=ಉತ್ಪನ್ನವಾದ ತ್ವಚಂ=ಚರ್ಮವೆಂಬ ಧಿಷ್ಣ್ಯಂ=ಸ್ಥಾನವನ್ನು ಓಷಧೀಃ=ಓಷಧಿಗಳು, ಓಷಧಿದೇವತೆಗಳಾದ ಪಾರಿಜಾತಾದಿ ದೇವತೆಗಳು ರೋಮಭಿಃ=ರೋಮನಾಮಕತ್ವಗಿಂದ್ರಿಯದಿಂದ ಅಂಶೇನ=ರೋಮ ನಾಮಕ ತ್ವಗಿಂದ್ರಿಯಾಭಿಮಾನಿ ದೇವತಾರೂಪದಿಂದ ವಿವಿಶುಃ=ಪ್ರವೇಶಿಸಿದರು ಯೈಃ=ರೋಮಗಳಿಂದ ಅಸೌ=ಇವನು ಕಂಡೂಂ=ನವೆಯನ್ನು (ತುರಿಕೆಯನ್ನು) ಪ್ರತಿಪದ್ಯತೇ=ತಿಳಿಯುವನು ॥೧೮॥

**ಮೇಢ್ರಂ ತಸ್ಯ ವಿನಿರ್ಭಿಣ್ಣಂ ಸ್ವಧಿಷ್ಣ್ಯಂ ಕ ಉಪಾವಿಶತ್ ।**
**ರೇತಸಾಽಂಶೇನ ಯೇನಾಸಾವಾನಂದಂ ಪ್ರತಿಪದ್ಯತೇ ॥೧೯॥**

ತಸ್ಯ=ವಿರಾಟ್‌ದೇಹಕ್ಕೆ ಮೇಢ್ರಂ=ಗುಹ್ಯೇಂದ್ರಿಯಗೋಲಕವು ವಿನಿರ್ಭಿಣ್ಣಂ= ಹುಟ್ಟಿತು ಸ್ವಧಿಷ್ಣ್ಯಂ=ತನ್ನ ಸ್ಥಾನವನ್ನು ಕಃ=ದಕ್ಷಪ್ರಜಾಪತಿಯು ರೇತಸಾ= ಗುಹ್ಯೇಂದ್ರಿಯಸಹಿತನಾಗಿ ಅಂಶೇನ=ತನ್ನ ಒಂದು ಅಂಶದಿಂದ ಉಪಾವಿಶತ್= ಪ್ರವೇಶಿಸಿದನು. ಯೇನ=ಯಾವುದರಿಂದ ಆನಂದಂ=ರತಿಸುಖವನ್ನು (ಮೈಥುನ ಸುಖವನ್ನು) ಪ್ರತಿಪದ್ಯತೇ=ಹೊಂದುವನು. ॥೧೯॥

**ಗುದಂ ಪುಂಸೋ ವಿನಿರ್ಭಿಣ್ಣಂ ಮಿತ್ರೋ ಲೋಕೇಶ ಆವಿಶತ್ ।**
**ಪಾಯುನಾಽಂಶೇನ ಯೇನಾಸೌ ವಿಸರ್ಗಂ ಪ್ರತಿಪದ್ಯತೇ ॥೨೦॥**

ಪುಂಸಃ=ಪುರುಷನಾಮಕ ಆ ದೇಹಕ್ಕೆ ಗುದಂ=ಮಲದ್ವಾರವು ವಿನಿರ್ಭಿಣ್ಣಂ= ಉತ್ಪನ್ನವಾಯಿತು ಲೋಕೇಶಃ ಮಿತ್ರಃ=ಲೋಕಪಾಲಕನಾದ ಮಿತ್ರನೆಂಬ

ದೇವತೆಯು ಪಾಯುನಾ=ಪಾಯು ಎಂಬ ಇಂದ್ರಿಯ ಸಹಿತನಾಗಿ ಅಂಶೇನ=ತನ್ನ ಅಭಿಮಾನಿರೂಪದಿಂದ ಆವಿಶತ್=ಪ್ರವೇಶಿಸಿದನು. ಯೇನ=ಯಾವುದರಿಂದ ವಿಸರ್ಗಂ ಪ್ರತಿಪದ್ಯತೇ=ಮಲೋತ್ಸರ್ಜನಾದಿ ಕ್ರಿಯೆಗಳನ್ನು ಹೊಂದುವನು ॥೨೦॥

**ಹಸ್ತಾವಸ್ಯ ವಿನಿರ್ಭಿಣ್ಣಾವಿಂದ್ರಃ ಸ್ವರ್ಪತಿರಾವಿಶತ್ ।**
**ವಾರ್ತಯಾಽಂಶೇನ ಪುರುಷೋ ಯಯಾ ವೃತ್ತಿಂ ಪ್ರಪದ್ಯತೇ ॥೨೧॥**

ಅಸ್ಯ=ಈ ದೇಹಕ್ಕೆ ಹಸ್ತೌ=ಕೈಗಳು ವಿನಿರ್ಭಿಣ್ಣೌ=ಹುಟ್ಟಿದವು ಸ್ವರ್ಪತಿಃ= ಸ್ವರ್ಗಾಧಿಪತಿಯಾದ ಇಂದ್ರಃ=ಪುರಂದರನು ವಾರ್ತಯಾ=ಹಸ್ತೇಂದ್ರಿಯದಿಂದ ಸಹಿತನಾಗಿ ಅಂಶೇನ=ಹಸ್ತಾಭಿಮಾನಿರೂಪದಿಂದ ಆವಿಶತ್=ಪ್ರವೇಶಿಸಿದನು. ಪುರುಷಃ=ವಿರಾಟ್‌ಪುರುಷನು ಯಾಯಾ=ಹಸ್ತೇಂದ್ರಿಯದಿಂದ ವೃತ್ತಿಂ= ಕೊಡುವುದು, ತೆಗೆದುಕೊಳ್ಳುವುದೇ ಮೊದಲಾದ ಕ್ರಿಯೆಗಳನ್ನು ಪ್ರಪದ್ಯತೇ= ಮಾಡುವನು ॥೨೧॥

**ಪಾದಾವಸ್ಯ ವಿನಿರ್ಭಿಣ್ಣೌ ಲೋಕೇಶೋ ವಿಷ್ಣುರಾವಿಶತ್ ।**
**ಗತ್ಯಾ ಸ್ವಾಂಶೇನ ಪುರುಷೋ ಯಯಾ ಪ್ರಾಪ್ಯಂ ಪ್ರಪದ್ಯತೇ ॥೨೨॥**

ಅಸ್ಯ=ವಿರಾಟ್‌ದೇಹಕ್ಕೆ ಪಾದೌ=ಕಾಲುಗಳು ವಿನಿರ್ಭಿಣ್ಣೌ=ಹುಟ್ಟಿದವು ಲೋಕೇಶಃ=ಸರ್ವಜಗದೊಡೆಯನಾದ ವಿಷ್ಣುಃ=ವಾಮನನು, ಪಾದಗಳಿಗೆ ಅಭಿಮಾನಿಯಾದ ಜಯಂತನಿಗೆ ಆಶ್ರಯನಾಗಿ ಗತ್ಯಾ=ಗಮನಸಾಧನವಾದ ಪಾದವೆಂಬ ಇಂದ್ರಿಯದಿಂದ ಸಹಿತನಾಗಿ ಸ್ವಾಂಶೇನ=ತನ್ನ ಒಂದು ಸ್ವರೂಪಾಂಶ-ದಿಂದಲೂ,ಭಿನ್ನಾಂಶನಾದ ಜಯಂತನಿಂದಲೂ ಸೇರಿ ಆವಿಶ್=ಪ್ರವೇಶ ಮಾಡಿದನು ಯಯಾ=ಯಾವ ಪಾದದಿಂದ ಪ್ರಾಪ್ಯಂ=ಗಮ್ಯಸ್ಥಾನವನ್ನು ಪ್ರಪದ್ಯತೇ=ತಲುಪುವನು. ನಡೆಯುವನೆಂದರ್ಥ. ॥೨೨॥

**ಹೃದಯಂ ಚಾಸ್ಯ ನಿರ್ಭಿಣ್ಣಂ ಚಂದ್ರಮಾ ಧಿಷ್ಣ್ಯಮಾವಿಶತ್ ।**
**ಮನಸಾಽಂಶೇನ ಯೇನಾಸೌ ವಿಕ್ರಿಯಾಂ ಪ್ರತಿಪದ್ಯತೇ ॥೨೩॥**

ಅಸ್ಯ=ಈ ದೇಹಕ್ಕೆ ಹೃದಯಂ ಚ=ಮನಸ್ಸಿಗೆ ನಿವಾಸಸ್ಥಾನವಾದ ಗೋಲಕವು ನಿರ್ಭಿಣ್ಣಂ=ಹುಟ್ಟಿತು. ಚಂದ್ರಮಾಃ=ಚಂದ್ರದೇವನು ಧಿಷ್ಣ್ಯಂ= ಹೃದಯಸ್ಥಾನವನ್ನು ಮನಸಾ=ಮನೋರೂಪಇಂದ್ರಿಯದಿಂದ ಸಹಿತನಾಗಿ ಅಂಶೇನ=ಮನೋಭಿ-ಮಾನಿಯಾದ ತನ್ನ ಒಂದುರೂಪದಿಂದಲೂ ಆವಿಶತ್=ಪ್ರವೇಶ ಮಾಡಿದನು. ಅಸೌ=ಈ ಪುರುಷನು ವಿಕ್ರಿಯಾಂ=ಸಂಕಲ್ಪ (ಹೀಗೆ ಮಾಡಬೇಕು) ವಿಕಲ್ಪ

(ಮಾಡಬಾರದು) ರೂಪವಾದ ವಿಕಾರವನ್ನು (ನಿಶ್ಚಯವನ್ನು) ಯೇನ=ಯಾವ ಮನಸ್ಸಿನಿಂದ ಪ್ರತಿಪದ್ಯತೇ=ಪಡೆಯುವನು ॥೨೩॥

**ಆತ್ಮಾನಂ ಚಾಸ್ಯ ನಿರ್ಭಿಣ್ಣಂ ವಾಚಸ್ಪತಿರುಪಾವಿಶತ್ ।**
**ಬುಧ್ಯಾ ಸ್ವಾಂಶೇನ ಯೇನಾಸೌ ನಿಶ್ಚಯಂ ಪ್ರತಿಪದ್ಯತೇ ॥೨೪॥**

**ಅಹಂ ಚಾಸ್ಯ ವಿನಿರ್ಭಿಣ್ಣಮಭಿಮಾನೋಽವಿಶತ್ ಪದಂ ।**
**ಕರ್ತ್ರಾ ಸ್ವಾಂಶೇನ ಯೇನಾಸೌ ಕರ್ತವ್ಯಂ ಪ್ರತಿಪದ್ಯತೇ ॥೨೫॥**

**ಸತ್ವಂ ಚಾಸ್ಯ ವಿನಿರ್ಭಿಣ್ಣಂ ಮಹಾನ್ ಧಿಷ್ಣ್ಯಮುಪಾವಿಶತ್ ।**
**ಚಿತ್ತೇನಾಂಶೇನ ಯೇನಾಸೌ ವಿಜ್ಞಾನಂ ಪ್ರತಿಪದ್ಯತೇ ॥೨೬॥**

ಅಸ್ಯ=ಈ ವಿರಾಟ್‌ದೇಹಕ್ಕೆ ನಿರ್ಭಿಣ್ಣಂ ಆತ್ಮಾನಂ=ಉತ್ಪನ್ನವಾದ ಆತ್ಮಾ ಎಂಬ ನಾಡಿಯನ್ನು ವಾಚಸ್ಪತಿಃ=ಬೃಹಸ್ಪತಿ ಎಂಬ ದೇವತೆಯು ಬುಧ್ಯಾ=ಮನಃಪ್ರಭೇದ-ವಾದ ಬುದ್ಧಿ ಎಂಬ ಇಂದ್ರಿಯಸಹಿತನಾಗಿ ಸ್ವಾಂಶೇನ=ತನ್ನ ಒಂದು ಅಭಿಮಾನಿ-ರೂಪದಿಂದ ಆವಿಶತ್=ಪ್ರವೇಶಿಸಿದನು. ಯೇನ=ಯಾವ ಬುದ್ಧೀಂದ್ರಿಯದಿಂದ ಅಸೌ=ಶ್ರೀಹರಿಯಿಂದ ನಿಯಮಿಸಲ್ಪಟ್ಟ ಬ್ರಹ್ಮದೇವನು ನಿಶ್ಚಯಂ=ಇದು ಹೀಗೆಯೇ(ಇದಂ ಇತ್ಥಮೇವ)ಎಂಬ ಅವಧಾರಣಾತ್ಮಕ ಜ್ಞಾನವನ್ನು ಪ್ರತಿಪದ್ಯತೇ= ಹೊಂದುವನು. ॥೨೪॥

ಅಸ್ಯ=ಈ ದೇಹಕ್ಕೆ ಅಹಂ ಚ=ಅಹಂ ಎಂಬ ನಾಡಿಯು ವಿನಿರ್ಭಿಣ್ಣಂ=ಜನಿಸಿತು ಅಭಿಮಾನಃ=ಅಹಂಕಾರಶಬ್ದವಾಚ್ಯನಾದ ರುದ್ರದೇವನು ಕರ್ತ್ರಾ=ಅಹಂಕಾರ-ನಾಮಕ ಮನಃಪ್ರಭೇದರೂಪಇಂದ್ರಿಯಸಹಿತನಾಗಿ, ಸ್ವಾಂಶೇನ=ನಾನು ಕರ್ತಾ ಎಂಬ ಅಭಿಮಾನಜನಕವಾದ ತನ್ನ ಒಂದು ರೂಪದಿಂದ ಪದಂ=ತನ್ನ ಸ್ಥಾನವನ್ನು ಆವಿಶತ್=ಪ್ರವೇಶಿಸಿದನು. ಅಸೌ=ವಿರಾಟ್‌ಪುರುಷನು ಯೇನ=ಯಾವುದರಿಂದ ಕರ್ತವ್ಯಂ ಪ್ರತಿಪದ್ಯತೇ=ಇದನ್ನು ಮಾಡಬೇಕೆಂದು ತಿಳಿಯುವನು ॥೨೫॥

ಅಸ್ಯ=ಈ ದೇಹಕ್ಕೆ ಸತ್ವಂ=ಸತ್ವವೆಂಬ ನಾಡಿಯು ವಿನಿರ್ಭಿಣ್ಣಂ=ಉಂಟಾಯಿತು ಮಹಾನ್=ಮಹತ್ತತ್ವಾಭಿಮಾನಿಯಾದ ಬ್ರಹ್ಮದೇವನು ಧಿಷ್ಣ್ಯಂ=ಆ ತನ್ನ ಸ್ಥಾನವನ್ನು ಚಿತ್ತೇನ=ಚಿತ್ತವೆಂಬ ಮನಃಪ್ರಭೇದರೂಪ ಇಂದ್ರಿಯಸಹಿತನಾಗಿ ಅಂಶೇನ= ಅಭಿಮಾನಿರೂಪದಿಂದ ಉಪಾವಿಶತ್=ಪ್ರವೇಶಿಸಿದನು.ಯೇನ=ಯಾವ ಚಿತ್ತದಿಂದ ಅಸೌ=ಪುರುಷನು ವಿಜ್ಞಾನಂ=ವಿಶೇಷಜ್ಞಾನವನ್ನು ಪ್ರತಿಪದ್ಯತೇ=ಪಡೆಯುವನು ॥೨೬॥

ಮೇಲಿನ ಮೂರು ಶ್ಲೋಕಗಳಲ್ಲಿ ಹೇಳಿದ ಗೋಲಕಗಳು, ಇಂದ್ರಿಯಗಳು ಮತ್ತು ಅಭಿಮಾನಿಗಳು ಇವರ ಸ್ವರೂಪವನ್ನು ಆಚಾರ್ಯರು ಪ್ರಮಾಣದಿಂದಲೇ ತೋರಿಸುವರು.

**ಅಹಂ ಸತ್ವಮಿತಿ ದ್ವೇಧಾ ಬ್ರಹ್ಮನಾಡ್ಯಾ ಅವಾಂತರಂ ।**
**ಕರ್ತೃನಾಮಾ ಹ್ಯಹಂಕಾರಸ್ತ್ವಹಂನಾಡ್ಯಾಂ ವ್ಯವಸ್ಥಿತಃ ॥**

**ಸತ್ವನಾಡ್ಯಾಂ ತಥಾ ಚಿತ್ತಮಭಿಮಾನೋ ಹರಸ್ತಥಾ ।**
**ಅಹಂನಾಡ್ಯಾಂ ಸತ್ವನಾಡ್ಯಾಂ ಬ್ರಹ್ಮಾ ಚೈವ ವ್ಯವಸ್ಥಿತಃ ।**
**ಆತ್ಮನಾಡ್ಯಾಂ ತಥಾ ಬುಧ್ದಿಸ್ತತ್ರಸ್ಥಶ್ಚ ಬೃಹಸ್ಪತಿಃ ॥ ಇತಿ**

ಬ್ರಹ್ಮನಾಡಿಯ ಅವಾಂತರ ವಿಭಾಗಗಳೇ ಅಹಂನಾಡಿ, ಸತ್ವನಾಡಿ ಎಂದು ಎರಡು ಗೋಲಕಗಳಾಗಿ ವಿವಕ್ಷಿತವಾಗಿವೆ. ಕರ್ತೃತ್ವಾಭಿಮಾನವನ್ನು ಹುಟ್ಟಿಸುವುದ-ರಿಂದ ಕರ್ತೃ ಎನಿಸಿಕೊಳ್ಳುವ ಅಹಂಕಾರಶಬ್ದವಾಚ್ಯವಾದ ಇಂದ್ರಿಯವು (ಪ್ರಸಿದ್ಧ ಅಹಂಕಾರತತ್ವದಿಂದ ಭಿನ್ನವಾದುದು ಈ ಮನಃಪ್ರಭೇದರೂಪ ಇಂದ್ರಿಯವು) ಅಹಂನಾಡಿಯಲ್ಲಿದೆ. ಸತ್ವನಾಡಿಯಲ್ಲಿ ಚಿತ್ತವೆಂಬ ಮನಃಪ್ರಭೇದರೂಪ ಇಂದ್ರಿಯವು ಇರುವುದು. ಅಹಂಕಾರ ಎಂಬ ಇಂದ್ರಿಯಾಭಿಮಾನಿಯಾದ್ದರಿಂದ ಅಭಿಮಾನನೆನಿಸುವ ಹರನು ಅಹಂನಾಡಿಯಲ್ಲಿರುವನು. ಸತ್ವನಾಡಿಯಲ್ಲಿ ಚಿತ್ತಾಭಿಮಾನಿಯಾದ ಬ್ರಹ್ಮದೇವರು ಇರುವರು. ಆತ್ಮನಾಡಿಯಲ್ಲಿ ಬುದ್ಧಿ ಎಂಬ ಇಂದ್ರಿಯವು ಅದರಲ್ಲಿ ಬೃಹಸ್ಪತಿಯು ಅಭಿಮಾನಿಯಾಗಿರುವನು ॥೨೪,೨೫,೨೬

ಈಗ ಈ ವಿರಾಟ್‌ಪುರುಷನ ದೇಹದಿಂದ ಲೋಕಗಳ ಉತ್ಪತ್ತಿ ಹೇಳುವರು –

**ಶೀರ್ಷ್ಣೋಽಸ್ಯ ದ್ಯೌರ್ಧರಾ ಪದ್ಭ್ಯಾಂ ಖಂ ನಾಭೇರುದಪದ್ಯತ ।**
**ಗುಣಾನಾಂ ವೃತ್ತಯೋ ಯೇಷು ಪ್ರತೀಯಂತೇ ಸುರಾದಯಃ ॥೨೭॥**

ಅಸ್ಯ=ವಿರಾಟ್‌ಪುರುಷನ ಶೀರ್ಷ್ಣಃ=ಶಿರಸ್ಸಿನಿಂದ ದ್ಯೌಃ=ಸ್ವರ್ಗಲೋಕವು (ಅಂತರಿಕ್ಷ) ಪದ್ಭ್ಯಾಂ=ಪಾದಗಳಿಂದ ಧರಾ=ಭೂಮಿಯು ನಾಭೇಃ= ಹೊಕ್ಕಳಿನಿಂದ ಖಂ=ಆಕಾಶವು ಉದಪದ್ಯತ=ಹುಟ್ಟಿತು. ಯೇಷು=ಯಾವಲೋಕಗಳಲ್ಲಿ ಸುರಾದಯಃ=ದೇವತೆಗಳೆ ಮೊದಲಾದವರು ವಸಂತಿ=ವಾಸಮಾಡುವರು ಮತ್ತು ಯೇಷು=ಯಾವ ಪ್ರಾಣಿಗಳಲ್ಲಿ ಗುಣಾನಾಂ ವೃತ್ತಯಃ=ಸತ್ವರಜಸ್ತಮೋಗುಣದ ಕಾರ್ಯವಾದ ಧರ್ಮಗಳು ಪ್ರತೀಯಂತೇ=ತೋರುವುವು. ಅಥವಾ ಗುಣವೃತ್ತಯಃ= ಸತ್ವಾದಿಗುಣಕಾರ್ಯಧರ್ಮಗಳುಳ್ಳ ಸುರಾದಯಃ=ದೇವತೆಗಳೇ ಮೊದಲಾದ-ವರು ತೋರುವರು ಹೀಗೂ ಅನ್ವಯ ॥೨೭॥

**ಔತ್ಪತ್ತಿಕೇನ ಸತ್ವೇನ ದಿವಂ ದೇವಾಃ ಪ್ರಪೇದಿರೇ ।**
**ಧರಾಂ ರಜಃಸ್ವಭಾವೇನ ಪಣಯೋ ಯೇ ಚ ತಾನನು ॥೨೮॥**

ಔತ್ಪತ್ತಿಕೇನ=ಹುಟ್ಟಿದಾಗಿನಿಂದಿರುವ(ಸ್ವಾಭಾವಿಕವಾದ)ಸತ್ವೇನ=ಸಾತ್ವಿಕಧರ್ಮ-ದಿಂದ ದೇವಾಃ=ದೇವತೆಗಳು ದಿವಂ ಪ್ರಪೇದಿರೇ=ಸ್ವರ್ಗವನ್ನು ಹೊಂದಿದರು. ರಜಃಸ್ವಭಾವೇನ=ರಾಜಸಧರ್ಮದಿಂದ ಪಣಯಃ=ಮನುಷ್ಯರು(ಪಣಂತೇ ವಾಗಾ-ದಿನಾ ವ್ಯವಹರಂತೀತಿ ಪಣಯಃ) ತಾನ್ ಅನು ಚ ಯೇ=ಅವರಿಗೆ ಉಪಕರಣ-ಗಳಾದ ವಾಗಾದಿಗಳು ಧರಾಂ ಪ್ರಪೇದಿರೇ=ಭೂಮಿಯನ್ನು ಹೊಂದಿದರು. ॥೨೮॥

**ತಾರ್ತೀಯೇನ ಸ್ವಭಾವೇನ ಭಗವನ್ನಾಭಿಮಾಶ್ರಿತಾಃ ।**
**ಉಭಯೋರಂತರಂ ವ್ಯೋಮ ಯೇ ರುದ್ರಪಾರ್ಷದಾ ಗಣಾಃ ॥೨೯॥**

ತಾರ್ತೀಯೇನ=ಮೂರನೆಯದಾದ ತಾಮಸವಾದ ಸ್ವಭಾವೇನ=ತಮ್ಮ ಧರ್ಮದಿಂದ ಉಭಯೋಃ=ದ್ಯಾವಾಪೃಥಿವಿಗಳ ಅಂತರಂ=ಮಧ್ಯದಲ್ಲಿರುವ ಭಗವನ್ನಾಭಿಂ=ಭಗವಂತನ ನಾಭಿಯಿಂದ ಜನಿಸಿದ್ದರಿಂದ ನಾಭಿಯೆನಿಸುವ ವ್ಯೋಮ=ಆಕಾಶವನ್ನು ರುದ್ರಾಪಾರ್ಷದಾಃ ಗಣಾಃ=ಶಿವನ ಸೇವಕರಾದ ಭೂತಗಳ ಸಮೂಹಗಳು ಪ್ರಪೇದಿರೇ=ಹೊಂದಿದರು. ॥೨೯॥

**ಮುಖತೋಽವರ್ತತ ಬ್ರಹ್ಮ ಪುರುಷಸ್ಯ ಕುರೂದ್ವಹ ।**
**ಯತ್ರೋನ್ಮುಖತ್ವಾದ್ ವರ್ಣಾನಾಂ ಮುಖ್ಯೋಽಭೂದ್**
**ಬ್ರಾಹ್ಮಣೋ ಗುರುಃ ॥೩೦॥**

ಹೇ ಕುರೂದ್ವಹ=ಪರೀಕ್ಷಿತನೇ ಪುರುಷಸ್ಯ=ಬ್ರಹ್ಮದೇವರ ದೇಹದಲ್ಲಿರುವ ಪುರುಷನಾಮಕ ಶ್ರೀಹರಿಯ ಮುಖತಃ=ಮುಖದಿಂದ ಬ್ರಹ್ಮ=ಬ್ರಾಹ್ಮಣಜಾತಿಗೆ ಅಭಿಮಾನಿಯಾದ ಭೃಗುವು ಮತ್ತು ವೇದವೂ ಅವರ್ತತ=ಹುಟ್ಟಿದವು, ಹೊರ ಹೊರಟಿತು. ಯತ್ರ=ಯಾವ ವೇದವಿಷಯದಲ್ಲಿ ಉನ್ಮುಖತ್ವಾತ್=ಇವನು ಮುಖದಿಂದ ಹುಟ್ಟಿದವನಾದ್ದರಿಂದ ವೇದವೂ ಮುಖದಿಂದ ಉದ್ಭೂತವಾದ್ದರಿಂದ ಬ್ರಾಹ್ಮಣಃ=ಬ್ರಾಹ್ಮಣನು ವರ್ಣಾನಾಂ=ಎಲ್ಲ ಜಾತಿಯವರಿಗೆ ಮುಖ್ಯಃ ಗುರುಃ ಅಭೂತ್=ಮುಖ್ಯಗುರುವಾದನು. ಮುಖದಿಂದ ಹುಟ್ಟಿದವನಿಗೆ ಮುಖ್ಯ ವ್ಯಾಪಾರವನ್ನೇ ವೃತ್ತಿಯಾಗಿ ಮಾಡಿದನು. ಮುಖ್ಯಗುರು ಎಂದದ್ದರಿಂದ ಆಪತ್ತಿನಲ್ಲಿ (ಬ್ರಾಹ್ಮಣ ಇಲ್ಲದ ಸ್ಥಳದಲ್ಲಿ) ಕ್ಷತ್ರಿಯಾದಿಗಳು ಅಮುಖ್ಯಗುರುಗಳಾಗಬಹುದು ಎಂದು ಸೂಚಿತವಾಗುವುದು 'ಬ್ರಹ್ಮ ಅಣತೀತಿ ಬ್ರಾಹ್ಮಣಃ' ಎಂದು ವ್ಯುತ್ಪತ್ತಿಯನ್ನು ತೋರಿಸಿದಂತಾಯಿತು. ವೇದದಿಂದ ಶ್ರೀಹರಿಯನ್ನು ತಿಳಿದವನೆಂದರ್ಥ ॥೩೦॥

**ಬಾಹುಭ್ಯೋಽವರ್ತತ ಕ್ಷತ್ರಂ ಕ್ಷತ್ರಿಯಸ್ತದನುವ್ರತಃ ।**
**ಯೋ ಜಾತಸ್ತ್ರಾಯತೇ ವರ್ಣಾನ್ ಪುರುಷಾನ್ ಕಂಟಕಕ್ಷತಾತ್ ॥**

ಬಾಹುಭ್ಯಃ=ಪುರುಷನಾಮಕ ಶ್ರೀಹರಿಯ ಬಾಹುಗಳಿಂದ ಕ್ಷತ್ರಂ=ಕ್ಷತ್ರಿಯ ಜಾತಿಗೆ ಅಭಿಮಾನಿಯಾದ ಮನುವು, ಗಾಯಗಳಿಂದ ರಕ್ಷಿಸುವುದೆಂಬ ಅವರ ವೃತ್ತಿಯೂ ಅವರ್ತತ=ಹುಟ್ಟಿತು. ಕ್ಷತ್ರಿಯಃ=ಕ್ಷತ್ರಿಯನು ತತ್=ಪಾಲನವನ್ನು ಅನುವ್ರತಃ=ಅನುಸರಿಸಿದನು. (ಇದರಿಂದ 'ಕ್ಷತ್ರಂ ಅನುಸೃತ್ಯ ವರ್ತತೇ ಇತಿ ಕ್ಷತ್ರಿಯಃ' ಎಂದು ನಿರ್ವಚನ ತಿಳಿಸಿದಂತಾಯಿತು) ಜಾತಃ=ಬಾಹುಗಳಿಂದ ಹುಟ್ಟಿದನು. ಯಃ=ಯಾವ ಕ್ಷತ್ರಿಯನು ಕಂಟಕಕ್ಷತಾತ್=ಶತ್ರುಗಳಿಂದ ಆಗುವ ಗಾಯದಿಂದ ವರ್ಣಾನ್=ಜಾತಿಗಳನ್ನು ಪುರುಷಾನ್=ಜನರನ್ನು ತ್ರಾಯತೇ= ರಕ್ಷಿಸುವನು. ಬಾಹುವಿನಿಂದ ಹುಟ್ಟಿದ್ದರಿಂದ ಬಾಹುವ್ಯಾಪಾರ ಅವರ ವೃತ್ತಿಯಾಯಿತು ॥೩೧॥

**ವಿಶೋಽವರ್ತಂತ ತಸ್ಯೋರ್ವೋರ್ಲೋಕವೃತ್ತಿಕರೀರ್ವಿಭೋಃ ।**
**ವೈಶ್ಯಸ್ತದುದ್ಭವೋ ವಾರ್ತಾಂ ನೃಣಾಂ ಯಃ ಸಮವರ್ತಯತ್ ॥೩೨॥**

ತಸ್ಯ=ಶ್ರೀಹರಿಯ ಊರ್ವೋಃ=ತೊಡೆಗಳಿಂದ ವಿಶಃ=ವೈಶ್ಯಜಾತಿಗೆ ಅಭಿಮಾನಿಯಾದ 'ವಾಸ್ತು' ಎಂಬುವನು ಮತ್ತು ಲೋಕಸ್ಯವೃತ್ತಿಕರೀಃ=ಜನರಜೀವನೋಪಾಯಗಳಾದ ಕೃಷಿ ಮೊದಲಾದ ವ್ಯಾಪಾರಗಳು ಅವರ್ತಂತ= ಹುಟ್ಟಿದವು. ತದುದ್ಭವಃ=ತೊಡೆಯಿಂದ ಹುಟ್ಟಿದ ವೈಶ್ಯಃ=ವೈಶ್ಯನು ನೃಣಾಂ=ಜನರಿಗೆ ವಾರ್ತಾಂ= ಒಕ್ಕಲುತನ ಮೊದಲಾದ ಜೀವನೋಪಾಯಗಳನ್ನು ಸಮವರ್ತಯತ್= ನಡೆಸಿದನು. ಕೈಗಳಿಗೆ ತೊಡೆಯ ಸಾಮಿಪ್ಯವಿರುವುದರಿಂದ ಕೈಯಿಂದ ನಡೆಯುವ ವ್ಯಾಪಾರವನ್ನು ಊರುವಿನಿಂದ ಹುಟ್ಟಿದ ವೈಶ್ಯನಿಗೆ ವೃತ್ತಿಯನ್ನಾಗಿ ಮಾಡಿದನು ಎಂದು ಭಾವ ॥೩೨॥

**ಪದ್ಭ್ಯಾಂ ಭಗವತೋ ಜಜ್ಞೇ ಶುಶ್ರೂಷಾಕರ್ಮಸಿದ್ಧಯೇ ।**
**ತಸ್ಯಾಂ ಜಾತಃ ಪುರಾ ಶೂದ್ರೋ ಯದ್‌ವೃತ್ತ್ಯಾ ತುಷ್ಯತೇ ಹರಿಃ ॥೩೩॥**

ಭಗವತಃ=ಪರಮಾತ್ಮನ ಪದ್ಭ್ಯಾಂ=ಪಾದಗಳಿಂದ ಶೂದ್ರಃ=ಶೂದ್ರಜಾತಿಗೆ ಅಭಿಮಾನಿಯಾದ 'ಕೃತಿ' ಎಂಬುವನು ಹುಟ್ಟಿದನು. ಮತ್ತು ಶುಶ್ರೂಷಾ= ತ್ರಿವರ್ಣೀಯರ ಸೇವಾರೂಪವೃತ್ತಿಯು ಕರ್ಮಸಿದ್ಧಯೇ=ಶೂದ್ರಜನ್ಮ ಬರುವುದಕ್ಕೆ ಕಾರಣವಾದ ಅದೃಷ್ಟದ ಸಫಲತೆಗಾಗಿ ಜಜ್ಞೇ=ಹುಟ್ಟಿತು. ಪುರಾ=ಪೂರ್ವದಲ್ಲಿ ತಸ್ಯಾಂ=ಸೇವಾಮಾಡುವುದಕ್ಕಾಗಿಯೇ ಶೂದ್ರನು ಜನಿಸಿದನು. ಯದ್ವೃತ್ತ್ಯಾ=

ಶೂದ್ರನು ಮಾಡುವ ಭಗವದನುಸಂಧಾನಪೂರ್ವಕ ಶೂಶ್ರೂಷೆಯಿಂದ ಹರಿಃ= ಶ್ರೀಹರಿಯು ತುಷ್ಯತೇ=ಸಂತೋಷಪಡುವನು. ಶ್ರೀಹರಿ ಪ್ರೀತಿಯಾಗುವುದೇ ಕರ್ಮಗಳ ಸಫಲತೆ ಎಂದು ಭಾವ.

ಇದರಿಂದ 'ಶುಚಾ ದ್ರವತೀತಿ ಶೂದ್ರಃ' ಎಂದು ವ್ಯತ್ಪತ್ತಿ ತೋರಿಸಿದಂತಾಯಿತು. ಶೂದ್ರಜನ್ಮ ಹೊಂದಿರುವೆನು ಎಂಬ ದುಃಖದಿಂದ ಸೇವಾ ಮಾಡುವನಾದ್ದರಿಂದ ಎಂದರ್ಥ.

ಮೇಲಿನ ನಾಲ್ಕು ಶ್ಲೋಕಗಳಲ್ಲಿ ಬ್ರಾಹ್ಮಣಾದಿ ನಾಲ್ಕುವರ್ಣಗಳ ಉತ್ಪತ್ತಿ ಹೇಳಿದೆ. ಈ ಬ್ರಾಹ್ಮಣಾದಿಗಳು ಇಂಥವರೇ ಎಂದು ನಿಶ್ಚಯಿಸಲು ಬೇಕಾದ ಯುಕ್ತಿ ಇಲ್ಲದ್ದರಿಂದ ಯಾರನ್ನು ಸ್ವೀಕರಿಸಬೇಕೆಂಬುದು ತಿಳಿಯುವುದಿಲ್ಲ, ಕಾರಣ ಪ್ರಮಾಣದಿಂದ ತಿಳಿಸುವರು–

**ಬ್ರಹ್ಮಾಭಿಮಾನೀ ತು ಭೃಗುರಜನಿ ಬ್ರಹ್ಮಣೋ ಮುಖಾತ್ ।**
**ಕ್ಷತ್ರಾಭಿಮಾನೀ ತು ಮನುರ್ಬ್ರಹ್ಮ ಬಾಹ್ವೋರಜಾಯತ ॥**

**ಊರ್ವೋರ್ವಿಡಭಿಮಾನೀ ಚ ವಾಸ್ತುಃ ಪಾದಾತ್ ಕೃತಿಸ್ತಥಾ ।**
**ಏತೇ ಪೂರ್ವಂ ಹರೇರ್ಜಾತಾ ಬ್ರಹ್ಮಣಸ್ತದನಂತರಮ್ ।**
**ಏವಂ ರುದ್ರಾಚ್ಚ ವಾಯೋಶ್ಚ ತದಂತಸ್ಥಹರೇರ್ಯತಃ ॥ ಇತಿ ಷಾಡ್ಗುಣ್ಯೇ**

ಬ್ರಾಹ್ಮಣಜಾತಿಗೆ ಅಭಿಮಾನಿಯಾದ ಭೃಗುವು ಬ್ರಹ್ಮನ ಮುಖದಿಂದ ಮೊದಲಿಗೆ ಜನಿಸಿದನು. ಕ್ಷತ್ರಿಯಜಾತಿಗೆ ಅಭಿಮಾನಿಯಾದ ಮನುವು ಹರಿಯ ಬಾಹುಗಳಿಂದ ಜನಿಸಿದನು. ವೈಶ್ಯಜಾತಿಗೆ ಅಭಿಮಾನಿಯಾದ ವಾಸ್ತುವು ತೊಡೆಯಿಂದ ಜನಿಸಿದನು. ಪಾದದಿಂದ ಶೂದ್ರಜಾತಿಗೆ ಅಭಿಮಾನಿಯಾದ ಕೃತಿಯು ಜನಿಸಿದನು. ಮೂಲದಲ್ಲಿ 'ಭಗವತಃ' ಎಂಬ ಶಬ್ದವಿರುವುದರಿಂದ ಶ್ರೀಹರಿಯಿಂದ ವರ್ಣಗಳ ಉತ್ಪತ್ತಿ ಹೇಳಲ್ಪಡುವುದು. ಈ ಪ್ರಮಾಣದಲ್ಲಿ ಬ್ರಹ್ಮನಿಂದ ವರ್ಣಗಳ ಉತ್ಪತ್ತಿ ಹೇಳುತ್ತಿದ್ದಾರೆ. ಕಾರಣ ವಿರೋಧ ಬರುವುದಲ್ಲ? ಎಂದರೆ ಉತ್ತರಿಸುವರು– 'ಏತೇ' ಮುಂತಾಗಿ. ಅಂದರೆ, ಮೂಲದಲ್ಲಿ ಮೊದಲಿಗೆ ಶ್ರೀಹರಿಯಿಂದ ಹುಟ್ಟಿದರೆಂದು ಹೇಳಿದೆ. ನಂತರ ಬ್ರಹ್ಮದೇವರಿಂದ ಮತ್ತೆ ಹುಟ್ಟಿದರು ಎಂಬ ಅಭಿಪ್ರಾಯದಿಂದ ಬ್ರಹ್ಮನ ಮುಖದಿಂದ ಎಂದು ಹೇಳಿದ್ದು. ಇನ್ನು ಕೆಲವು ಸ್ಥಳದಲ್ಲಿ ರುದ್ರನಿಂದ ವಾಯುವಿನಿಂದ ಎಂದೂ ಹೇಳಿದ್ದುಂಟು. ಅದೂ ಸಹ ಅನಂತರದ ಉತ್ಪತ್ತಿಯೇ ಹೊರತು ಪ್ರಾಥಮಿಕವಲ್ಲ. ಎಂದು ಒಂದು ಸಮಾಧಾನ. ಯಾರಿಂದ ಎಂದು ಹೇಳಿದರೂ ಅವರ ಒಳಗಿರುವ ಶ್ರೀಹರಿಯಿಂದಲೇ ಹುಟ್ಟಿದವರಾದ್ದರಿಂದ

ಮೂಲಕ್ಕೂ ಪ್ರಮಾಣಕ್ಕೂ ಯಾವವಿರೋಧವೂ ಇಲ್ಲ ಎಂದು ಇನ್ನೊಂದು ಪರಿಹಾರ. ॥ ೩೦-೩೨॥

ಶೂದ್ರನು ಮಾಡುವ ತ್ರೈವರ್ಣಿಕರಸೇವೆಯಿಂದ ಶ್ರೀಹರಿಯು ಸಂತುಷ್ಟ-ನಾಗುವನು ಎಂದು ಹೇಳಿದ್ದು ಉಪಲಕ್ಷಣ. ಎಲ್ಲ ವರ್ಣದವರು ಮಾಡುವ ಅವರವರ ವೃತ್ತಿಗಳಿಂದ ಶ್ರೀಹರಿಯೇ ಪೂಜ್ಯನು ಎಂದು ಸೂಚಿತವಾಗಿದೆ. ಅದು ಏಕೆ (ಕಾರಣವೇನು) ಪ್ರಯೋಜನವೇನು ಎಂದು ಹೇಳುವರು –

**ಏತೇ ವರ್ಣಾಃ ಸ್ವಧರ್ಮೇಣ ಯಜಂತೇ ಸ್ವಗುರುಂ ಹರಿಂ ।**
**ಶ್ರದ್ಧಯಾऽऽತ್ಮವಿಶುದ್ಧ್ಯರ್ಥಂ ಯಜ್ಜಾತಾ ಸಹ ವೃತ್ತಿಭಿಃ ॥೩೪॥**

ಯತ್=ಯಾವಕಾರಣ ವೃತ್ತಿಭಿಃ ಸಹ=ಜೀವಿಕಾಗಳಿಂದ ಸಹಿತರಾಗಿ ಜಾತಾಃ= ಶ್ರೀಹರಿಯಿಂದ ಜನಿಸಿದರೋ ತತ್=ಆದ ಕಾರಣ ತಂದೆಯಾದುದರಿಂದ, ಶ್ರದ್ಧಯಾ=ಭಕ್ತಿಯಿಂದ ಆತ್ಮವಿಶುದ್ಧ್ಯರ್ಥಂ=ಅಂತಃಕರಣ ಶುದ್ಧಿಗಾಗಿ ಸ್ವಗುರುಂ= ತಮಗೆ ಗುರುವಾದ ಹರಿಂ=ಶ್ರೀಹರಿಯನ್ನು ಸ್ವಧರ್ಮೇಣ=ತಮ್ಮ ತಮ್ಮ ವೃತ್ತಿಗಳಿಂದ ಏತೇ ವರ್ಣಾಃ=ಈ ಎಲ್ಲ ಜಾತಿಯವರು ಯಜಂತೇ=ಪೂಜಿಸುವರು. ಪೂಜ್ಯತೆಗೆ ಗುರುತ್ವ,ಪಿತೃತ್ವ ಎರಡು ಕಾರಣಗಳು ಎಂದು ಹೇಳಿದಂತಾಯಿತು. ಅಂತಕರಣ ಶುದ್ಧಿ ಅವಾಂತರ ಫಲವೆಂದು ಹೇಳಿರುವರು. ॥೩೪॥

ಈ ವಿಧನಾದ ಶ್ರೀಹರಿಯ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ವರ್ಣಿಸಲು ಇಚ್ಛೆ ಮಾಡಲೂ ಸಾಧ್ಯವಿಲ್ಲ ಎಂದು ಹೇಳುವರು –

**ಏತತ್ ಕ್ಷತ್ತರ್ಭಗವತೋ ದೈವಕರ್ಮಾತ್ಮರೂಪಿಣಃ ।**
**ಕಃ ಶ್ರದ್ಧಧ್ಯಾದುದಾಹರ್ತುಂ ಯೋಗಮಾಯಾಬಲೋದಯಂ ॥**

ಭೋ ಕ್ಷತ್ತಃ=ಎಲೋ ವಿದುರನೇ! ದೈವಕರ್ಮಾತ್ಮರೂಪಿಣಃ=ದೈವ= ಸರ್ವದೇವಾಧಿಕವಾದ ಕರ್ಮ=ಮೂಲಕರ್ತೃವಾದ ಆತ್ಮ=ವ್ಯಾಪ್ತವಾದ ರೂಪಿಣಃ= ರೂಪವುಳ್ಳ ಭಗವತಃ=ಪರಮಾತ್ಮನ ಏತತ್=ಈ, ಯೋಗಮಾಯಾಬಲೋದಯಂ= ಜಗುದುತ್ಪಾದನರೂಪವಾದ ಇಚ್ಛೆಯ ಸಾಮರ್ಥ್ಯವಿಸ್ತಾರವನ್ನು ಕಃ ಪುಮಾನ್= ಯಾವ ಮನುಷ್ಯನು ಉದಾಹರ್ತುಂ=ಸಂಪೂರ್ಣವಾಗಿ ಹೇಳಲು ಶ್ರದ್ಧಧ್ಯಾತ್= ಇಚ್ಛೆ ಮಾಡಿಯಾನು? ಯಾರೂ ಮಾಡಲಾರರೆಂದರ್ಥ. ತಿಳಿಯಲಾಗದ ಅನಂತವಾದ ಮಹಿಮೆಯನ್ನು ಹೇಳುವುದಂತೂ ದೂರ ಉಳಿಯಿತು.

ಇಲ್ಲಿ 'ದೈವಕರ್ಮಾತ್ಮರೂಪಿಣಃ' ಎಂದು ದೇವತೆ ಮುಂತಾದವರಿಂದ ಅಭೇದ ತೋರುವುದು ಕಾರಣ ವಿವಕ್ಷಿತವಾದ ದೈವಾದಿಪದಗಳ ಅರ್ಥವನ್ನು ಪ್ರಮಾಣದಿಂದ ತಿಳಿಸುವರು -

**ಅಧಿಕತ್ವಾತ್ ದೇವಶಬ್ದೋ ದೈವತೇಷ್ವಧಿಕೋ ಯತಃ ।**
**(ಅಧಿಕತ್ವಾತ್ ದೇವಶಬ್ದಾಃ ದೇವಾಃ ತೇಷ್ವಧಿಕೋ ಯತಃ) ॥**

**ದೈವಂ ಹರಿಃ ಕರ್ಮಮೂಲಂ ಕೃತಿರಿತ್ಯೇವ ಭಣ್ಯತೇ ।**
**ವ್ಯಾಪ್ತತ್ವಾದಾತ್ಮಶಬ್ದಶ್ಚ ಶ್ರೀಪತಿತ್ವಾಚ್ಚ ಮಾಧವಃ ॥ ಇತಿ ಚ ।**

'ರಾಜಾ ಭಟ್ಟಾರಕೋ ದೇವಃ' ಎಂದು ಅಭಿಧಾನವಿರುವುದರಿಂದ ನರದೇವಃ ಮುಂತಾಗಿ ಪ್ರಯೋಗವಿರುವುದರಿಂದ,ದೇವಶಬ್ದದ ಮೇಲೆ ಅಧಿಕ ಎಂಬರ್ಥದಲ್ಲಿ 'ಇಣ್'ಪ್ರತ್ಯಯ ಮಾಡಿದಾಗ ಆದಿವೃದ್ಧಿಯಾಗಿ ದೈವ ಎಂದಾಗುವುದು.

ದೇವಶಬ್ದವು ಅಧಿಕ ಎಂಬ ಅರ್ಥದಲ್ಲಿರುವುದರಿಂದ ದೇವತೆಗಳಲ್ಲಿ ಭಗವಂತನೇ ಅತ್ಯಧಿಕನಾದುದರಿಂದ ದೈವಶಬ್ದವಾಚ್ಯನಾದವನು. ಶ್ರೀಹರಿಯು ಮೂಲಕರ್ತೃವಾದ್ದರಿಂದ ಕರ್ಮನೆನಿಸಿಕೊಳ್ಳುವನು. ವ್ಯಾಪ್ತನಾದ್ದರಿಂದ ಆತ್ಮಾ ಎಂದು, ಲಕ್ಷ್ಮೀಪತಿಯಾದ್ದರಿಂದ ಮಾಧವನೆಂದೂ ಕರೆಸಿಕೊಳ್ಳುವನು.॥೩೫॥

**ಅಥಾಪಿ ಕೀರ್ತಯಾಮ್ಯಂಗ ಯಥಾಮತಿ ಯಥಾಶ್ರುತಂ ।**
**ಕೀರ್ತಿಂ ಹರೇಃ ಸ್ವಾಂ ಸಂಸ್ಕರ್ತುಂ ಗಿರಮನ್ಯಾಭಿಧಾಂ ಸತೀಂ ॥೩೬॥**

ಹೇ ಅಂಗ=ವಿದುರನೇ ! ಅಥಾಪಿ=ಸಂಪೂರ್ಣ ಹೇಳುವ ಶಕ್ತಿ ಇಲ್ಲದಿದ್ದರೂ ಯಥಾಮತಿ=ನಾನು ತಿಳಿದಷ್ಟು ಯಥಾಶ್ರುತಂ=ಕೇಳಿದಷ್ಟು ಹರೇಃ ಕೀರ್ತಿಂ= ಶ್ರೀಹರಿಯ ಮಾಹಾತ್ಮ್ಯವನ್ನು ಅನ್ಯಾಭಿಧಾಂ ಸತೀಂ=ಶ್ರೀಹರಿಯಿಂದ ಭಿನ್ನರಾದವ- ರನ್ನು ವರ್ಣಿಸುತ್ತಿರುವ ಸ್ವಾಂ ಗಿರಂ=ನನ್ನ ಮಾತನ್ನು ಸಂಸ್ಕರ್ತುಂ=ಶುದ್ಧಗೊಳಿಸಲು ಕೀರ್ತಯಾಮಿ=ಹೇಳುವೆನು. ಬೇರೆಯವರನ್ನು ಹೇಳಿ ದುಷ್ಟವಾದ ಮಾತುಗಳನ್ನು ಶುದ್ಧಮಾಡಲೆಂದರ್ಥ. ಕೆಲವೆಡೆ ''ಅನ್ಯಾಭಿಧಾಸತೀಂ'' ಎಂದೆ ಪಾಠವಿದೆ. ಆಗ 'ಅನ್ಯಾಭಿಧಾ ಚಾಸೌ ಅಸತೀ ಚ ಅನ್ಯಾಭಿಧಾಸತೀ' ಎಂದು ವಿಗ್ರಹ ತಿಳಿಯಬೇಕು.

ನಮ್ಮ ಬುದ್ಧ್ಯನುಸಾರವಾಗಿಯೂ ಶ್ರವಣಕೀರ್ತನೆಗಳನ್ನು ಮಾಡದಿದ್ದರೆ ಬಾಧಕವನ್ನು ಸೂಚಿಸುತ್ತ ಹೇಳುವರು -

**ಏಕಾಂತಲಾಭಂ ವಚಸೋ ನು ಪುಂಸಃ**
**ಸುಶ್ಲೋಕಮೌಲೇರ್ಗುಣವಾದಮಾಹುಃ ।**

**ಶ್ರುತೇಶ್ಚ ವಿದ್ವದ್ಭಿರುಪಾಕೃತಾಯಾಃ**
**ಕಥಾಸುಧಾಯಾ ಉತ ಸಂಪ್ರಯೋಗಂ ॥೩೭॥**

ಪುಂಸಃ=ಜನರ ವಚಸಃ=ಮಾತುಗಳಿಗೆ ಸುಶ್ಲೋಕಮೌಲೇಃ=ಒಳ್ಳೆ ಕೀರ್ತಿವುಳ್ಳವರಲ್ಲಿ ಶ್ರೇಷ್ಠನಾದ ಶ್ರೀಹರಿಯ ಗುಣಾನುವಾದಂ=ಗುಣಗಳನ್ನು ಹೇಳುವುದು ಏಕಾಂತಲಾಭಂ ಆಹುಃ=ಅವ್ಯಭಿಚರಿತ ಪುರುಷಾರ್ಥಸಾಧನವೆಂದು ಜ್ಞಾನಿಗಳು ಹೇಳುವರು. ಉತ=ಮತ್ತು ಶ್ರುತೇಃ=ಶ್ರವಣೇಂದ್ರಿಯಕ್ಕೆ ವಿದ್ವದ್ಭಿಃ=ಜ್ಞಾನಿಗಳಿಂದ ಉಪಾಕೃತಾಯಾಃ=ನಿರೂಪಿತವಾದ (ಹೇಳಲ್ಪಟ್ಟ) ಕಥಾಸುಧಾಯಾಃ ಸಂಪ್ರಯೋಗಂ=ಚೆನ್ನಾಗಿ ಸಂಬಂಧವಾಗುವುದು ಏಕಾಂತಲಾಭಂ ಆಹುಃ=ಪುರುಷಾರ್ಥಸಾಧನವೆಂದು ಹೇಳುವರು. ಅಂದಮೇಲೆ ಯಥಾಶಕ್ತಿ ಶ್ರವಣಕೀರ್ತನೆಗಳನ್ನು ಮಾಡದಿದ್ದರೆ ವಾಕ್‌ಶ್ರವಣಗಳು ವ್ಯರ್ಥವೆಂದು ಭಾಧಕ ಹೇಳಿದಂತಾಯಿತು.

ಸಂಪೂರ್ಣವಾಗಿ ಶ್ರೀಹರಿಯ ಜ್ಞಾನ ಯಾರಿಗೂ ಇಲ್ಲವೆಂಬುದನ್ನು ಕೈಮುತ್ಯದಿಂದ ಹೇಳುವರು –

**ಆತ್ಮನೋಽವಸಿತೋ ವತ್ಸ ಮಹಿಮಾ ಕವಿನಾಽದಿನಾ ।**
**ಸಂವತ್ಸರಸಹಸ್ರಾಂತೇ ಧಿಯಾ ಯೋಗವಿಪಕ್ವಯಾ ॥೩೮॥**

ಹೇ ವತ್ಸ=ವಿದುರನೇ ! ಆದಿನಾ ಕವಿನಾ=ಬ್ರಹ್ಮದೇವರಿಂದ ಸಂವತ್ಸರ ಸಹಸ್ರಾಂತೇ=ಸಾವಿರವರ್ಷಗಳಾದ ಮೇಲೆ ಯೋಗವಿಪಕ್ವಯಾ=ಭಕ್ತಿಧ್ಯಾನಾದಿಗಳಿಂದ ಪರಿಪಾಕ ಹೊಂದಿದ ಧಿಯಾ=ಎಲ್ಲ ಸದಾಗಮಗಳ ಅರ್ಥವಾದ ಗುಣ, ಕ್ರಿಯಾ, ರೂಪಗಳನ್ನು ವಿಷಯೀಕರಿಸುವ ಶಕ್ತಿಯುಳ್ಳ ಬುದ್ಧಿಯಿಂದ ಆತ್ಮನಃ=ಪರಮಾತ್ಮನ ಮಹಿಮಾ=ಮಹಿಮೆಯು ಸಾಕಲ್ಯೇನ ಅವಸ್ಥಿತಃ ಕಿಂ=ಸಂಪೂರ್ಣವಾಗಿ ತಿಳಿಯಲ್ಪಟ್ಟಿತೇನು? ಇಲ್ಲವೆಂದರ್ಥ ॥೩೮॥

ಬಹುಪ್ರಯತ್ನದಿಂದ ಜ್ಞಾನಿಗಳು ಸಂಪೂರ್ಣವಾಗಿ ತಿಳಿಯಲು ಸಾಧ್ಯವಾದೀತು ? ಎಂಬ ಮಂದರ ಶಂಕೆಯನ್ನು ಪರಿಹರಿಸುವರು –

**ಅತೋ ಭಗವತೋ ಮಾಯಾಂ ಮಾಯಿನಾಮಪಿ ಮೋಹಿನೀಂ ।**
**ಯತ್ ಸ್ವಯಂ ಚಾತ್ಮವರ್ತ್ಮಾಽಽತ್ಮಾ ನ ವೇದ ಕಿಮುತಾಪರೇ ॥೩೯॥**

ಯತ್=ಯಾವ ಕಾರಣ ಆತ್ಮಾಚ=ಸ್ವಯೋಗ್ಯಗುಣಪೂರ್ಣನಾದ ಬ್ರಹ್ಮದೇವನೂ ಸಹ, ಸ್ವಯಂ=ಇತರ ಅಧಿಕಾರಿಗಳಿಗಿಂತ ಮುಖ್ಯವಾಗಿ ಆತ್ಮವರ್ತ್ಮಾಪಿ=ಭಗವಂತನ ಜ್ಞಾನವುಳ್ಳವನಾದರೂ ಮಾಯಿನಾಂ ಅಪಿ=ಜ್ಞಾನಿಗಳಿಗೂ ಮೋಹಿನೀಂ=ತಮ್ಮ

ಯೋಗ್ಯತೆಗಿಂತ ಹೆಚ್ಚಾಗಿ ತಿಳಿಯಲು ಪ್ರಯತ್ನಿಸಿದರೆ ಬುದ್ಧಿಭ್ರಂಶಕರವಾದ ಭಗವತಃ ಮಾಯಾಂ=ಪರಮಾತ್ಮನ ಮಹಿಮೆಯನ್ನು ನ ವೇದ=ಸಾಕಲ್ಯೇನ ತಿಳಿದಿಲ್ಲ. ಅಂದಮೇಲೆ ಅಪರೇ ಕಿಮುತ=ರುದ್ರಾದಿಗಳು ತಿಳಿದಿಲ್ಲವೆಂದೇನು ಹೇಳುವುದು ಎಂದರ್ಥ.

ಈ ಶ್ಲೋಕದಲ್ಲಿ 'ಆತ್ಮಾ ನ ವೇದ' ಎಂಬಲ್ಲಿರುವ ಆತ್ಮಶಬ್ದದಿಂದ ವಿವಕ್ಷಿತ ಅರ್ಥ ತಿಳಿಸುವರು.

**ಆತ್ಮಾ ಬ್ರಹ್ಮಾ ನ ವೇದ ।**

ಬ್ರಹ್ಮದೇವರು ತಿಳಿದಿಲ್ಲ. ಇಲ್ಲಿ 'ಆತ್ಮಾ ಬ್ರಹ್ಮಾ'ಎಂದಿಷ್ಟೆ ಹೇಳಿದ್ದರೂ ಆತ್ಮಶಬ್ದದಿಂದ ವಿವಕ್ಷಿತ ಅರ್ಥ ತಿಳಿಸಿದಂತಾಗುತ್ತಿತ್ತು. 'ನ ವೇದ' ಎಂದು ಅನುವಾದ ಮಾಡಿದ್ದು ಇಲ್ಲಿರುವ ಆತ್ಮ ಶಬ್ದ ಭಗವಂತನನ್ನು ತಿಳಿಸಲಾರದು. ಅವನು ಸರ್ವಜ್ಞನಾದುದರಿಂದ 'ನ ವೇದ' ಎಂಬುವುದು ಬಾಧಿತವಾಗುವುದು ಎಂದು ತಿಳಿಸಲು ಎಂದು ತಿಳಿಯಬೇಕು.

ಮುಂದಿನ ಶ್ಲೋಕದಲ್ಲಿ 'ಅಹಂ'ಶಬ್ದವು ಅಸ್ಮದ್‌ಶಬ್ದದರೂಪವೆಂದು ತಿಳಿದು, ಅಹಂ=ನಾನು ಅಂದರೆ ಮೈತ್ರೇಯರು ಎಂದು ಅರ್ಥ ತೋರುವುದು. ಕಾರಣ ಅರ್ಥ ಬರೆಯುವರು-

**ಅಹಂ ರುದ್ರಃ ।**

ಅಂದರೆ ಈ ಅಹಂಶಬ್ದವು ಮಕಾರಾಂತವಾದ ಅವ್ಯಯವು. ಅಹಂಕಾರ ತತ್ವವಾಚಕವಾದುದು. ಅದಕ್ಕೆ ಅಭಿಮಾನಿಯಾದ ರುದ್ರವಾಚಕವೆಂದು ಬಾವ.

ಆತ್ಮಶಬ್ದ ಅಹಂಶಬ್ದಗಳು ಬ್ರಹ್ಮರುದ್ರವಾಚಕವಾಗಲು ನಿಮಿತ್ತವನ್ನೂ, ಅವರಿಬ್ಬರಿಂದ ಭಗವಂತ ಅಜ್ಞೇಯ ಎಂಬ ವಿಷಯವನ್ನೂ ಪ್ರಮಾಣದಿಂದ ತಿಳಿಸುವರು-

**ಗುಣಪೂರ್ತೇರಾತ್ಮಶಬ್ದೋ ಬ್ರಹ್ಮಾऽಹೀನತ್ವತೋ ಹರಃ ।**
**ಅಹಂಶಬ್ದಸ್ತಥಾಪ್ಯೇತೌ ನ ಜಾನೀತೋ ಹರಿಂ ಪರಂ ॥ ಇತಿ ಬ್ರಾಹ್ಮೇ ।**

ಸ್ವಯೋಗ್ಯಗುಣಪೂರ್ಣನಾದ್ದರಿಂದ ಬ್ರಹ್ಮದೇವನು ಆತ್ಮಶಬ್ದವಾಚ್ಯನು ರುದ್ರನು ಅಹೇಯನಾದುದರಿಂದ ಅಹಂಶಬ್ದವಾಚ್ಯನು (ಓಹಾಕ್‌ತ್ಯಾಗೇ ಎಂಬ ಧಾತುವಿನರೂಪವಿದು). ಗುಣಪೂರ್ತಿ, ಅಹೇಯತೆಗಳಿದ್ದರೂ ಇವರು ಭಗವಂತನನ್ನು ಪೂರ್ಣವಾಗಿ ತಿಳಿದಿಲ್ಲ.

'ಭಗವತೋಮಾಯಾಂ' ಎಂಬಲ್ಲಿ ಮಾಯಾಶಬ್ದ ಅನಿರ್ವಾಚ್ಯ ಅವಿದ್ಯಾಪರ-ವಲ್ಲ ಎಂದು ತಿಳಿಸಲು ಅರ್ಥ ಹೇಳುವರು–

**ಭಗವತೋಮಾಯಾಂ ಭಗವತೋ ಮಹಿಮಾನಂ ।**

ಈ ವಿಷಯದಲ್ಲಿ ಪ್ರಮಾಣ ಹೇಳುವರು–

**"ಮಾಯಾ ತು ಮಹಿಮಾ ಪ್ರೋಕ್ತಾ ಪ್ರಾಚುರ್ಯೇ ತು ಮಯಡ್ಯತಃ"**
**ಇತಿ ಪಾದ್ಮೇ ।**

ಮಾಯಾಶಬ್ದಕ್ಕೆ 'ಮಹಿಮೆ' ಎಂದರ್ಥ. ಏಕೆಂದರೆ ಮಯಟ್‌ಪ್ರತ್ಯಯವು ಪ್ರಾಚುರ್ಯ ಎಂಬರ್ಥದಲ್ಲಿದೆ. 'ತು'ಶಬ್ದವು ಗುಣಸಂಬಂಧರೂಪವಿಶೇಷವನ್ನು ಪ್ರಾಚುರ್ಯಕ್ಕೆ ಹೇಳುವುದು.ಆದ್ದರಿಂದ ಮಯಟ್‌ಶಬ್ದಕ್ಕೆ ಗುಣಪ್ರಾಚುರ್ಯ ಎಂದರ್ಥ. ಗುಣಪ್ರಾಚುರ್ಯವೇ ಮಹಿಮಾ. ಇಲ್ಲಿರುವುದು ಮಯಶಬ್ದವೆ ಹೊರತು ಮಯಟ್ ಅಲ್ಲ. ಪ್ರಕೃತಿಯೇ ಇಲ್ಲ. ಆದರೂ ಮಯಟ್ ಸಮಾನಾರ್ಥಕವಾದ ಮಯಶಬ್ದದ ಮೇಲೆ ಸ್ವಾರ್ಥೇ ಅಣ್ ಪ್ರತ್ಯಯ ಮಾಡಿ ಮಾಯಾ ಎಂದಾಗಿದೆ.

'ಆತ್ಮವರ್ತ್ಮಾ'ಎನ್ನುವಲ್ಲಿ 'ವರ್ತ್ಮಾ' ಎಂದರೆ ಮಾರ್ಗ ಎಂದರ್ಥವಾಗದಿರ-ಲೆಂದು ಅರ್ಥ ಹೇಳುವರು–

**ಆತ್ಮವರ್ತ್ಮಾ ಪರಮಾತ್ಮಾವಗತಿಃ ।**

ಸ್ವಯೋಗ್ಯತಾನುಸಾರ ಆತ್ಮ=ಪರಮಾತ್ಮನ ವರ್ತ್ಮಾ=ಜ್ಞಾನವುಳ್ಳವನು ಎಂದರ್ಥ.

ಇಲ್ಲಿ ಆಚಾರ್ಯರು ಅನ್ವಯ ತೋರಿಸಲು ಕರ್ತೃವಾಚಿಯಾದ ಆತ್ಮಪದವನ್ನು ಮೊದಲಿಗೆ ವ್ಯಾಖ್ಯಾನ ಮಾಡಿ ನಂತರ ಅಹಂಶಬ್ದವನ್ನು, ಆತ್ಮಶಬ್ದವನ್ನು ಒಂದೇ ಪ್ರಮಾಣದಲ್ಲಿ ವ್ಯಾಖ್ಯಾನಿಸಿದ್ದರಿಂದ, ಲಾಘವಕ್ಕಾಗಿ ಮುಂದಿನ ಶ್ಲೋಕದಲ್ಲಿಯ ಅಹಂಶಬ್ದವನ್ನು ವ್ಯಾಖ್ಯಾನಿಸಿ, ನಂತರ ಕರ್ಮವಾಚಕವಾದ ಭಗವತೋ ಮಾಯಾಂ ಎಂಬುದನ್ನು ವ್ಯಾಖ್ಯಾನಿಸಿರುವರು. ಇನ್ನು ಮಾಯಾಂ ಎಂಬುದು ಕರ್ಮವಾಚಕ ಪದವಲ್ಲ. ಉತ್ತರಾರ್ಧದಲ್ಲಿ ಆತ್ಮವರ್ತ್ಮ ಎಂಬ ದ್ವಿತೀಯಾಂತ ಕರ್ಮವಾಚಕಪದ ಬೇರೆ ಇದೆ ಎಂಬ ಶಂಕಾಪರಿಹಾರಕ್ಕಾಗಿ 'ಆತ್ಮವರ್ತ್ಮಾ' ಎಂಬುದನ್ನು ಪ್ರಥಮಾಂತವಾಗಿ ವಿಭಾಗಿಸಿ ಕೊನೆಗೆ ವ್ಯಾಖ್ಯಾನಿಸಿರುವರು ಎಂದು ತಿಳಿಯಬೇಕು. ॥೨.೯॥

ಮೇಲೆ ಹೇಳಿದ ವಿಷಯದಲ್ಲಿ 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು ಪ್ರಮಾಣವು ಎಂಬ ಅಭಿಪ್ರಾಯದಿಂದ ಅದನ್ನು ಅರ್ಥತಃ ಅನುವಾದ ಮಾಡಿ, ಸಾಕಲ್ಯೇನ ಅಜ್ಞೇಯನಾದ ಭಗವಂತನನ್ನು ಅಧ್ಯಾಯದ ಕೊನೆಗೆ ಭಕ್ತಿಯಿಂದ ನಮಿಸುವರು –

**ಯತೋಽಪ್ರಾಪ್ಯ ನಿವರ್ತಂತೇ ವಾಚಶ್ಚ ಮನಸಾ ಸಹ ।**
**ಅಹಂ ಚಾನ್ಯ ಇಮೇ ದೇವಾಸ್ತಸ್ಮೈ ಭಗವತೇ ನಮಃ ॥೪೦॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಸಪ್ತಮೋಽಧ್ಯಾಯಃ ॥***

ವಾಚಃ=ವೇದಾಭಿಮಾನಿಗಳಾದ ದೇವತೆಗಳು ಮನಸಾ ಸಹ=ಚಿತ್ತರೂಪ ಮನೋಭಿಮಾನಿಯಾದ ಬ್ರಹ್ಮದೇವರ ಜೊತೆಗೆ ಅಪ್ರಾಪ್ಯ=ಕೊನೆಯನ್ನು ತಲುಪದೇ ಯತಃ=ಯಾವ ಭಗವದ್ಗುಣಗಳ ವರ್ಣನೆಯಿಂದ ನಿವರ್ತಂತೇ= ತಿರುಗುವರೋ ಅಹಂ ಚ=ಅಹಂಕಾರಾಭಿಮಾನಿಯಾದ ರುದ್ರನು ಅನ್ಯೇ ಇಮೇ ದೇವಾಃ=ಇನ್ನುಳಿದ ತತ್ವಾಭಿಮಾನಿದೇವತೆಗಳು ಅಪ್ರಾಪ್ಯ ನಿವರ್ತಂತೇ=ಗುಣಗಳ ಕೊನೆಗಾಣದೆ ಹಿಂದಿರುಗುವರೋ ತಸ್ಮೈ=ಅಂಥ ಭಗವತೇ=ಶ್ರೀಹರಿಗೆ ನಮಃ=ನಮಸ್ಕಾರವು. ॥೪೦॥

***ಇಲ್ಲಿಗೆ ಏಳನೆಯ ಅಧ್ಯಾಯವು ಮುಗಿಯಿತು.***

# ಏಳನೆಯ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ವಿದುರ ! ಶ್ರೀಹರಿಯು ಸರ್ವನಿಯಾಮಕನು. ಸರ್ವಶಕ್ತನು. ಅವನ ಅಧೀನವಾದ ಶಕ್ತಿಯುಳ್ಳವರು ಈ ತತ್ವಾಭಿಮಾನಿಗಳು. ಅಸಂಯುಕ್ತರಾದ ಇವರು ಮಾಡಿದ ಮೇಲಿನ ಸ್ತೋತ್ರವನ್ನು ಕೇಳಿ ಶ್ರೀಹರಿಯು ತತ್ವಗಳಲ್ಲಿ ತಾನು ಪ್ರವೇಶಿಸಲು ಬಯಸಿದವನು. ಕಾಲನಾಮಕಳಾದ ತನ್ನ ವಿಭಿನ್ನಶಕ್ತಿಯೆನಿಸಿದ ಲಕ್ಷ್ಮಿಯೊಂದಿಗೆ ಮಹತ್ತತ್ವ ಮೊದಲಾದ ಇಪ್ಪತ್ತುಮೂರು ತತ್ವಗಳಲ್ಲಿಯೂ ಪ್ರವೇಶ ಮಾಡಿದನು. ಅವುಗಳ ಶಕ್ತಿಯನ್ನು ವ್ಯಕ್ತಮಾಡುವುದೇ ಇವನ ಪ್ರವೇಶದ ಪ್ರಯೋಜನ. ಪ್ರಳಯಕಾಲದಲ್ಲಿ ಸುಪ್ತವಾಗಿದ್ದ ಸೃಷ್ಟಿಗೆ ಕಾರಣವಾದ ಅದೃಷ್ಟವನ್ನು ಕಾರ್ಯದಲ್ಲಿ ತೊಡಗುವಂತೆ ಮಾಡಿದನು. ವಿಶ್ಲಿಷ್ಟವಾಗಿದ್ದ ಆ ತತ್ವಗಳ ಸಮೂಹವನ್ನು ಅಂಶಗಳಿಂದ ಒಂದುಗೂಡಿಸಿದನು. ಹೀಗೆ ಶ್ರೀಹರಿಯು ಪ್ರವೇಶಿಸಿ ಪ್ರೇರಿಸಿದ್ದರಿಂದ ಈ ತತ್ವಸಮೂಹವು ಕಾರ್ಯದಲ್ಲಿ ತೊಡಗಿತು. ತಮ್ಮ ಅಂಶಗಳಿಂದ ಬ್ರಹ್ಮದೇವರ ಶರೀರವಾದ್ದರಿಂದ 'ಪುರುಷ' ಎಂದು ಕರೆಸಿಕೊಳ್ಳುವ ಬ್ರಹ್ಮಾಂಡವನ್ನು ಸೃಷ್ಟಿಸಿತು. ಹೀಗೆ ತತ್ವಗಳು ವಿಕಾರವನ್ನು ಹೊಂದಿ ಬ್ರಹ್ಮಾಂಡವಾದ ಮೇಲೆ ಆ ಬ್ರಹ್ಮಾಂಡದಲ್ಲಿ ಚರಾಚರ ಜಗತ್ತು ಹುಟ್ಟಿತು. ಜ್ಞಾನಾನಂದರೂಪಿಯಾದ ಶ್ರೀಹರಿಯು ಎಲ್ಲ ಜೀವರಿಂದ ಕೂಡಿದವನಾಗಿ ಆ ಬ್ರಹ್ಮಾಂಡದಲ್ಲಿ ಪ್ರವೇಶಿಸಿದನು. ಇವನಿಗೆ ಪುರುಷನೆಂದು ಹೆಸರು. ಬ್ರಹ್ಮಾಂಡದೊಳಗಿನ ನೀರಿನಲ್ಲಿ ದೇವಮಾನದಿಂದ ಒಂದು ಸಾವಿರ ವರ್ಷ ಕಾಲ ಶೇಷಶಾಯಿಯಾಗಿ ವಾಸಿಸಿದನು. ಶ್ರೀಹರಿಯು ಯಾವಾಗಲೂ ಬ್ರಹ್ಮಾದಿದೇವತೆಗಳಿಗಿಂತ ಅತ್ಯಧಿಕ ಶಕ್ತನು. ಜೀವರಾಶಿಗಳ ಭೋಗಸಾಧನವಾದ ಅಧೃಷ್ಟವು ಯಾವಾಗಲೂ ಇವನನ್ನು ಅನುಸರಿಸಿರುವುದು. ಪ್ರಕೃತಿಯು ಇವನ ಶಕ್ತಿ. ಇವನೇ ತತ್ವಗಳ ಅಂತರ್ಯಾಮಿಯು. ಶೇಷಶಾಯಿ-ಯಾಗಿದ್ದ ಇವನು ತನ್ನ ಇಚ್ಛೆಯಿಂದ ಬ್ರಹ್ಮದೇವರ ದೇಹ (ವಿರಾಟೆನಿಸುವ)ವನ್ನು ಸೃಷ್ಟಿಸಿ ಅದರಲ್ಲಿ ಪ್ರವೇಶಿಸಿ ಅದರ ಅವಯವಗಳಿಗೆ ನಿಯಾಮಕನಾಗಿ ಒಂದು, ಮೂರು, ಹತ್ತು ಬಗೆಯಾಗಿ ತನ್ನನ್ನು ವಿಭಾಗಿಸಿಕೊಂಡನು. ಈ ಶ್ರೀಹರಿಯೇ ಎಲ್ಲ ಪ್ರಾಣಿಗಳಿಗೂ ನಿಯಾಮಕನು. ಈ ಪುರುಷರೂಪವು ಅವನ ಸ್ವರೂಪಾಂಶವು.

ಇದೇ ಶ್ರೀಹರಿಯ ಮೊದಲನೆಯ ಅವತಾರ. ಇವನನ್ನು ಆಶ್ರಯಿಸಿಯೇ ಎಲ್ಲ ಪ್ರಾಣಿಗಳು ತಮ್ಮ ಇರುವಿಕೆಯನ್ನು ಪಡೆದು ಪ್ರಕಾಶಿಸುವುವು. ವಿಶೇಷ ಪ್ರಕಾಶವುಳ್ಳ ಇವನನ್ನು ವಿರಾಟೆಂದು ಕರೆಯುವರು. ಮುಖ್ಯಚೇಷ್ಟಕನಾದ ಇವನಿಗೆ ಪ್ರಾಣನೆಂದು ಹೆಸರು. ಬ್ರಹ್ಮಾಂತರ್ಯಾಮಿಯಾದ ಶ್ರೀಹರಿಯು ಅಧ್ಯಾತ್ಮ ಅಧಿದೈವ ಅಧಿಭೂತ ರೂಪಗಳಿಂದ ಕೂಡಿ ಮೂರುವಿಧನೆನಿಸಿದನು. ಹತ್ತುರೂಪಗಳುಳ್ಳವನಾದನು. ಬ್ರಹ್ಮದೇವರ ಹೃದಯದಲ್ಲಿದ್ದು ಏಕರೂಪಿಯೆನಿಸಿದನು.

ಶ್ರೀಹರಿಯು ಇಂದ್ರಿಯ ಗೋಚರನಲ್ಲ. ತತ್ವಾಭಿಮಾನಿಗಳ ಬಿನ್ನಹದಂತೆ, ಇವರ ಅಭಿವೃದ್ಧಿಗಾಗಿ ಅವರವರ ಆಶ್ರಯಸ್ಥಾನವಾಗುವಂತೆ ಬ್ರಹ್ಮದೇವರ ದೇಹದಲ್ಲಿ ಅವಕಾಶವನ್ನು ಕಲ್ಪಿಸುತ್ತಾ ಬಂದನು. ಮುಂದೆ ಹೇಳುವ ಸ್ಥಾನಗಳೇ ದೇವತೆಗಳ ಆಶ್ರಯಸ್ಥಾನಗಳಾಗಿ ಹೊರಹೊಮ್ಮಿದುವು. ಶರೀರದ ಅವಯವಗಳಲ್ಲಿ ಪ್ರಧಾನವಾದ ಮುಖವು ಹೊರಹೊಮ್ಮಿತು. ಲೋಕಪಾಲಕನಾದ ಅಗ್ನಿಯು ತನ್ನ ಅಂಶದಿಂದ ವಾಗಿಂದ್ರಿಯದೊಂದಿಗೆ ಆ ಮುಖವನ್ನು ಆಶ್ರಯಿಸಿದನು. ಆದರಿಂದ ಬ್ರಹ್ಮದೇವರ ಶರೀರದಲ್ಲಿದ್ದ ಶ್ರೀಹರಿಯು ಮಾತನಾಡಹತ್ತಿದನು. ಹೊರಹೊಮ್ಮಿದ ಜಿಹ್ವೆಯ ಮೂಲವನ್ನು ವರುಣನು ತನ್ನ ಅಂಶದಿಂದ ಜಿಹ್ವೇಂದ್ರಿಯದೊಂದಿಗೆ ಪ್ರವೇಶಿಸಿದನು. ಇದರಿಂದ ರಸಗಳನ್ನು ತಿಳುಯುತ್ತ ಬಂದನು. ವ್ಯಕ್ತವಾದ ಮೂಗಿನ ಹೊಳ್ಳೆಗಳನ್ನು ಅಶ್ವಿನೀದೇವತೆಗಳು ತಮ್ಮ ಅಂಶದಿಂದ ಘ್ರಾಣೇಂದ್ರಿಯ-ದೊಂದಿಗೆ ಆಶ್ರಯಿಸಿದರು. ಇದರಿಂದ ಗಂಧವನ್ನು ಶ್ರೀಹರಿಯು ತಿಳಿದನು. ವ್ಯಕ್ತವಾದ ಕಣ್ಣುಗಳನ್ನು ತ್ವಷ್ಟನು (ಸೂರ್ಯ)ತನ್ನ ಅಂಶವಾದ ಚಕ್ಷುರಿಂದ್ರಿಯ-ದೊಂದಿಗೆ ಆಸ್ರಯಿಸಿದನು. ಇದರಿಂದ ರೂಪಗಳನ್ನು ತಿಳಿಯಲಾರಂಭಿಸಿದನು. ಕೋಣಾಧಿಪತಿಯಾದ ವಾಯುವು ಹೊರಹೊಮ್ಮಿದ ತ್ವಗಿಂದ್ರಿಯಸ್ಥಾನಗಳನ್ನು ತನ್ನ ಅಂಶವಾದ ಪ್ರಾಣದಿಂದ ಕೂಡಿ ಪ್ರವೇಶಿಸಿದನು. ಇದರಿಂದ ಸ್ಪರ್ಶಜ್ಞಾನವು ಬರುವಂತಾಯಿತು. ಕಿವಿಗಳನ್ನು ದಿಗ್ದೇವತೆಗಳು ತಮ್ಮ ಶ್ರೋತ್ರೇಂದ್ರಿಯಾಂಶದಿಂದ ಕೂಡಿ ಆಶ್ರಯಿಸಿದರು. ಇದರಿಂದ ಶಬ್ದಜ್ಞಾನವನ್ನು ಹೊಂದಿದನು. ವ್ಯಕ್ತವಾದ ತ್ವಗಿಂದ್ರಿಯಸ್ಥಾನವನ್ನು ಓಷಧ್ಯಭಿಮಾನಿದೇವತೆಗಳು ತಮ್ಮ ಅಂಶಗಳಾದ ರೋಮ-ಗಳೊಂದಿಗೆ ಪ್ರವೇಶಿದರು. ಇದರಿಂದ ಮೈನವೆಯನ್ನು ಹೊಂದುವುದಾಯಿತು. ಗುಹ್ಯೇಂದ್ರಿಯವು ಆ ದೇಹದಲ್ಲಿ ವ್ಯಕ್ತವಾಯಿತು. ತನ್ನ ಆಶ್ರಯಸ್ಥಾನವಾದ ಅದನ್ನು ದಕ್ಷಪ್ರಜೇಶ್ವರನು ಗುಹ್ಯೇಂದ್ರಿಯದ ಅಂಶದೊಂದಿಗೆ ಪ್ರವೇಶಿಸಿದನು. ಇದರಿಂದ ಸಂಭೋಗದಿಂದಾಗುವ ಆನಂದವನ್ನು ಅನುಭವಿಸುವಂತಾಯಿತು. ವ್ಯಕ್ತವಾದ ಗುದೇಂದ್ರಿಯವನ್ನು ಲೋಕಪಾಲಕನಾದ ಮಿತ್ರನು ಪಾಯು ಇಂದ್ರಿಯದ

ಅಂಶದೊಡನೆ ಪ್ರವೇಶಿಸಿದನು. ಇದರಿಂದ ಮಲವಿಸರ್ಜನೆಗೆ ಮಾರ್ಗವಾಯಿತು. ಆ ದೇಹದಿಂದ ವ್ಯಕ್ತವಾದ ಕೈಗಳನ್ನು ಸ್ವರ್ಗದ ರಾಜನಾದ ಇಂದ್ರದೇವನು ಹಸ್ತೇಂದ್ರಿಯದೊಂದಿಗೆ ಪ್ರವೇಶಿಸಿದನು. ಇದರಿಂದ ಆ ದೇಹಂತರ್ಯಾಮಿಯಾದ ಶ್ರೀಹರಿಯು ತೆಗೆದುಕೊಳ್ಳುವುದೇ ಮೊದಲಾದ ವ್ಯಾಪಾರವನ್ನು ಪ್ರಾರಂಭಿಸಿದನು. ಹೀಗೆಯೇ ಪಾದಗಳು ವ್ಯಕ್ತವಾಗಲು ಅವುಗಳನ್ನು ಲೋಕಪಾಲಕನಾದ ವಿಷ್ಣುವು (ಜಯಂತನು) ಪಾದೇಂದ್ರಿಯದ ಅಂಶದೊಂದಿಗೆ ಪ್ರವೇಶಿಸಿದನು. ಇದರಿಂದ ಗಮನಕ್ರಿಯೆಗೆ ಅನುಕೂಲವಾಯಿತು. ಚಂದ್ರನು ಮನಸ್ಸಿನ ಅಂಶದೊಂದಿಗೆ ಹೃದಯವನ್ನು ಪ್ರವೇಶಿಸಿದನು. ಈ ಮನಸ್ಸಿನಿಂದಲೇ ವಿಕಾರವನ್ನು ಹೊಂದಲು ಅನುಕೂಲವಾಯಿತು. ಈ ದೇಹದಲ್ಲಿ ಮನೋವಾಹಕನಾಡಿಯು ವ್ಯಕ್ತವಾಯಿತು. ಅದನ್ನು ಬೃಹಸ್ಪತಿಯು ಬುದ್ಧಿಯ ಅಂಶದೊಂದಿಗೆ ಪ್ರವೇಶಿಸಿದನು. ಈ ಬುದ್ಧಿಯ ಮೂಲಕ ನಿಶ್ಚಯಜ್ಞಾನವನ್ನು ಪಡೆಯುವುದಾಯಿತು. ಈ ಶರೀರದಲ್ಲಿ ವ್ಯಕ್ತವಾದ ಅಹಂಕಾರವೆಂಬ ನಾಡಿಯನ್ನು ರುದ್ರದೇವನು ಅಭಿಮಾನದೊಂದಿಗೆ ಪ್ರವೇಶಿಸಿದನು. ಇದರಿಂದ ಇದು ನನ್ನ ಕರ್ತವ್ಯವೆಂಬ ಭಾವನೆಯನ್ನು ಹೊಂದಲಾಯಿತು. ಹೀಗೆಯೇ ವ್ಯಕ್ತವಾದ ಸತ್ವವೆಂಬ ನಾಡಿಯನ್ನು ಬ್ರಹ್ಮದೇವರು ಚಿತ್ತದ ಅಂಶದೊಂದಿಗೆ ಪ್ರವೇಶಿಸಿದರು. ಇದರಿಂದ ವಿಜ್ಞಾನವನ್ನು ಹೊಂದುವಂತಾಯಿತು.

ಈ ವಿರಾಡ್ದೇಹದ ತಲೆಯಿಂದ ದ್ಯುಲೋಕವೂ, ಪಾದದಿಂದ ಭೂಮಿಯೂ, ನಾಭಿಯಿಂದ ಆಕಾಶವೂ ಹುಟ್ಟಿದುವು. ಈ ಲೋಕಗಳಲ್ಲಿ ಪ್ರಾಕೃತಗುಣಗಳ ಕಾರ್ಯಗಳಾದ ಸುಖ, ಕರ್ಮ ಪ್ರಮಾದಗಳು ತೋರುತ್ತಾ ಬಂದವು. ಈ ಲೋಕಗಳಲ್ಲಿ ದೇವತೆಗಳೂ, ಅಸುರರೂ, ಮನುಷ್ಯರೂ ರುದ್ರಪಾರ್ಷದ ಮೊದಲಾದ ಎಲ್ಲ ಜೀವರಾಶಿಗಳೂ ವಾಸಿಸಿದರು. ಸತ್ವಗುಣದಿಂದ ದೇವತೆಗಳು ಸ್ವರ್ಗವನ್ನೂ, ರಜೋಗುಣದಿಂದ ಮನುಷ್ಯರು ಮತ್ತು ಅವರ ಅನುಯಾಯಿಗಳೂ ಭೂಮಿಯನ್ನೂ, ತಮೋಗುಣದಿಂದ ಭೂತ ಮೊದಲಾದ ಗಣಗಳು ಅಂತರಿಕ್ಷವನ್ನೂ ಆಶ್ರಯಿಸಿದರು. ಮುಖದಿಂದ ಬ್ರಾಹ್ಮಣಜಾತಿಯೂ ಅದರ ಅಭಿಮಾನಿಗಳೂ ಹುಟ್ಟಿದರು. ಶ್ರೀಹರಿಯಲ್ಲಿ ಆಸಕ್ತರಾದ್ದರಿಂದ ಈ ಬ್ರಾಹ್ಮಣರು ಮಿಕ್ಕ ಮೂರು ವರ್ಣದವರಿಗೂ ಗುರುಗಳೆನಿಸಿದರು. ಬಾಹುಗಳಿಂದ ಬ್ರಾಹ್ಮಣರ ಅನುಯಾಯಿಗಳಾದ ಕ್ಷತ್ರಿಯರು ಜನಿಸಿದರು. ಇವರು ತಮ್ಮ ಪರಾಕ್ರಮದಿಂದ ಮಿಕ್ಕ ಜನರನ್ನು ಶತ್ರುಗಳಿಂದ ಕಾಪಾಡುವವರಾದರು. ತೊಡೆಗಳಿಂದ ಹುಟ್ಟಿದ ವೈಶ್ಯರು ಜನಜೀವನಕ್ಕೆ ಅವಶ್ಯಕವಾದ ವ್ಯವಸಾಯ, ಪಶುಪಾಲನೆ ಮೊದಲಾದ ಮಾರ್ಗಗಳಲ್ಲಿ ತೊಡಗಿದರು. ಆ ದೇಹದ ಅಂತರ್ಯಾಮಿಯಾದ ಶ್ರೀಹರಿಯ

ಪಾದಗಳಿಂದ ಶೂದ್ರರು ಜನಿಸಿದರು. ಸೇವಾಕರ್ಮವೇ ಇವರಿಗೆ ಸಾಧನೆಯು. ಬ್ರಾಹ್ಮಣಜಾತಿಗೆ ಅಭಿಮಾನಿ ಭೃಗು, ಕ್ಷತ್ರಿಯಜಾತಿಗೆ ಮನು. ವೈಶ್ಯಜಾತಿಗೆ ವಾಸ್ತುದೇವತೆ. ಶೂದ್ರಜಾತಿಗೆ ಕೃತಿ. ಇವುರುಗಳೂ ಶ್ರೀಹರಿಯಿಂದ ಜನಿಸಿ ಆಯಾಯಾ ವರ್ಣವನ್ನು ರಕ್ಷಿಸತೊಡಗಿದರು. ಯಾವ ಯಾವ ವೃತ್ತಿಗಳೊಂದಿಗೆ ಆಯಾಯಾ ವರ್ಣದವರು ಹುಟ್ಟಿದರೋ ಆ ವೃತ್ತಿಗಳಿಂದಲೇ ಅವರು ಶ್ರೀಹರಿಯನ್ನು ಪೂಜಿಸುವರಾದರು. ಇದರಿಂದಲೇ ಶ್ರೀಹರಿಯು ಪ್ರೀತನಾಗುವನು.

ವಿದುರ ! ಶ್ರೀಹರಿಯು ಸರ್ವದೇವತೆಗಳಿಗಿಂತ ಅಧಿಕನು. ಎಲ್ಲಕ್ಕೂ ಮೂಲ ಕಾರಣನು, ಸರ್ವತ್ರ ವ್ಯಾಪ್ತನು. ಆದ್ದರಿಂದ ಇವನನ್ನು ದೈವ, ಕರ್ಮ, ಆತ್ಮನೆಂದು ಕರೆಯುವರು. ಇವನು ಹಿಂದಿನ, ಇಂದಿನ ಮತ್ತು ಮುಂದಿನ ಬ್ರಹ್ಮಾಂಡಗಳನ್ನು ಸೃಷ್ಟಿಸುವ ಸಾಮರ್ಥ್ಯವುಳ್ಳವನು. ಇವನ ನಿರವಧಿಕ ಸಾಮರ್ಥ್ಯವನ್ನು ಯಾವನೂ ತನ್ನ ಪೂರ್ಣ ಆಯುಸ್ಸಿನಲ್ಲಿ ಹೇಳಿ ಮುಗಿಸಲಾರ. ಆದರೂ ನನಗೆ ತಿಳಿದಮಟ್ಟಿಗೆ ನಾನು ಕೇಳಿರುವಂತೆ ನಿನಗೆ ಹೇಳುತ್ತೇನೆ. ಶ್ರೀಹರಿಯ ಕೀರ್ತಿಯನ್ನು ಹೇಳಿದರೆ ವಾಗಿಂದ್ರಿಯವು ಶುದ್ಧವಾಗಿ ಸಾರ್ಥಕವಾಗುವುದು. ಶ್ರೀಹರಿಯ ಗುಣಗಳನ್ನು ಹೇಳುವುದೇ ವಾಗಿಂದ್ರಿಯಕ್ಕೆ ಮುಖ್ಯ ಪ್ರಯೋಜನ. ಕಿವಿಗಳಿದ್ದುದಕ್ಕೆ ಅವನ ಕಥೆಯೆಂಬ ಅಮೃತವನ್ನು ಭಕ್ತಿಯಿಂದ ಕೇಳುವುದೇ ಪ್ರಯೋಜನ. ಜೀವೋತ್ತಮರಾದ ಬ್ರಹ್ಮದೇವರು ಶಮದಮಾದಿಸಾಧನಗಳಿಂದ ಪರಿಪಕ್ವವಾದ ಶಾಸ್ತ್ರಾರ್ಥಜ್ಞಾನಪೂರ್ಣವಾದ ಬುದ್ಧಿಯಿಂದ ಒಂದುಸಾವಿರ ವರ್ಷಗಳ ಮೇಲೆ ತಮ್ಮ ಯೋಗ್ಯತೆಗೆ ತಕ್ಕಂತೆ ಹರಿಯ ಮಾಹಾತ್ಮ್ಯವನ್ನು ಅರಿತರು. ಆದ್ದರಿಂದ ಶ್ರೀಹರಿಯ ಮಹಿಮೆಯನ್ನು ಎಂತಹ ಜ್ಞಾನಿಯೂ ಸಂಪೂರ್ಣವಾಗಿ ತಿಳಿಯಲಾರ. ಮಿಕ್ಕೆಲ್ಲರಿಗೂ ಶ್ರೀಹರಿಯ ತತ್ವವನ್ನು ಉಪದೇಶಿಸುವ ಬ್ರಹ್ಮದೇವರೇ ಸಂಪೂರ್ಣವಾಗಿ ತಿಳಿಯದಿರುವಾಗ ಮಿಕ್ಕಾದವರ ಪಾಡೇನು ? ಸಮಸ್ತ ವೇದಗಳಿಗೂ ಅಭಿಮಾನಿಗಳಾದ ರಮಾದೇವಿಯ ರೂಪಗಳೂ ಸಹ ನಿರಂತರವೂ ಶ್ರೀಹರಿಯ ಗುಣಗಳನ್ನು ಎಣಿಸುತ್ತಿದ್ದರೂ ಕೊನೆಗಾಣದೆ ಚಿರಪರಿಚಿತವಾದ ಗುಣಗಳನ್ನೇ ಹೇಳಿಕೊಳ್ಳುತ್ತಾ ಇರುವುವೆಂದಮೇಲೆ ರುದ್ರ, ಶೇಷ, ಗರುಡ ಮತ್ತು ಇತರ ದೇವತೆಗಳಿಗೆ ಹೇಳಿ ಮುಗಿಸಲು. ಸಾಧ್ಯವೇ ! ಅಂತಹ ನಿರವಧಿಕಪೂರ್ಣಮಹಿಮನಾದ ಶ್ರೀಹರಿಗೆ ನಮಸ್ಕಾರವು.



## ಅಥ ಅಷ್ಟಮೋಽಧ್ಯಾಯಃ

**ಶ್ರೀಶುಕ ಉವಾಚ**

**ಏವಂ ಬ್ರುವಾಣಂ ಮೈತ್ರೇಯಂ ದ್ವೈಪಾಯನಸುತೋ ಬುಧಃ ।**
**ಪ್ರೀಣಯನ್ನಿವ ಭಾರತ್ಯಾ ವಿದುರಃ ಪ್ರತ್ಯಭಾಷತ ॥೧॥**

ಏವಂ=ಈ ರೀತಿಯಾಗಿ, ಬ್ರುವಾಣಂ=ಹೇಳುವ, ಮೈತ್ರೇಯಂ=ಮೈತ್ರೇಯ ಋಷಿಗಳನ್ನು, ಪ್ರೀಣಯನ್ನಿವ=ಪ್ರೀತಿಗೊಳಿಸುವನಂತೆ, ಭಾರತ್ಯಾ=ಮಾತುಗಳಿಂದ, ದ್ವೈಪಾಯನಸುತಃ=ವೇದವ್ಯಾಸರಿಂದ ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಜನಿಸಿದ ಮಗನಾದ, ವಿದುರಃ=ವಿದುರನು, ಪ್ರತ್ಯಭಾಷತ=ಉತ್ತರಿಸಿದನು. ತನ್ನ ಜ್ಞಾನಕ್ಕಾಗಿ ಪ್ರಶ್ನೆ ಮಾಡಿದ್ದರೂ ಉತ್ತರ ಹೇಳುವರಿಗೆ ಪ್ರೀತಿಯೂ ಉಂಟಾಗುವುದು, ಹೊರತು ಅವರ ಪ್ರೀತಿಯೇ ಉದ್ದೇಶವಾಗಿರಲಿಲ್ಲ ಎಂದು ತಿಳಿಸಲು 'ಪ್ರೀಣಯನ್ ಇವ' ಎಂದು 'ಇವ'ಶಬ್ದ ಪ್ರಯೋಗಿಸಿರುವರು ॥೧॥

ಆರನೇ ಅಧ್ಯಾಯದ ನಾಲ್ಕನೇ ಶ್ಲೋಕದಲ್ಲಿ 'ಕಾಲವೃತ್ತ್ಯಾಂ ತು ಮಾಯಾಯಾಂ' ಮುಂತಾಗಿ ಸತ್ತ್ವಾದಿಗುಣಾತ್ಮಕಪ್ರಕೃತಿಯನ್ನು ಉಪಾದಾನ ಕಾರಣವನ್ನಾಗಿ ಮಾಡಿಕೊಂಡು ಶ್ರೀಹರಿಯು ಜಗತ್ತನ್ನು ಸೃಷ್ಟಿಸುವನು, ಎಂದು ಹೇಳಿದೆ. ಆ ವಿಷಯದಲ್ಲಿ ವಿದುರನು ಪ್ರಶ್ನಿಸುವನು–

**ವಿದುರ ಉವಾಚ**

**ಬ್ರಹ್ಮನ್ ಕಥಂ ಭಗವತಶ್ಚಿನ್ಮಾತ್ರಸ್ಯಾವಿಕಾರಿಣಃ ।**
**ಲೀಲಯಾ ಚಾಪಿ ಯುಜ್ಯೇರನ್ ನಿರ್ಗುಣಸ್ಯ ಗುಣಾಃ ಕ್ರಿಯಾಃ ॥೨॥**

ಬ್ರಹ್ಮನ್=ಶಮದಮಾದಿಗುಣಸಂಪನ್ನರಾದ ಮೈತ್ರೇಯರೇ, ಚಿನ್ಮಾತ್ರಸ್ಯ=ಕೇವಲ ಜ್ಞಾನರೂಪನಾದ ಜಡಾಮಿಶ್ರನಾದ ಆದ್ದರಿಂದಲೇ, ಅವಿಕಾರಿಣಃ=ವಿಕಾರರಹಿತ-ನಾದವಗೆ, ಕ್ರಿಯಾಃ=ಕ್ರಿಯೆಗಳು, ನಿರ್ಗುಣಸ್ಯ=ಸತ್ವಾದಿಗುಣಾತ್ಮಕಪ್ರಕೃತಿಬಂಧ ಇಲ್ಲದಿರುವ, ಭಗವತಃ=ಐಶ್ವರ್ಯಾದಿಗುಣನಿಧಿಯಾದ ಶ್ರೀಹರಿಗೆ, ಗುಣಾಃ= ಸತ್ವಾದಿಗುಣಾತ್ಮಕಪ್ರಕೃತಿಬಂಧಗಳು, ಲೀಲಯಾ ಅಪಿ=ಕ್ರೀಡೆಯಿಂದಲಾದರೂ, ಕಥಂ ಯುಜ್ಯೇರನ್=ಹೇಗೆ ಯುಕ್ತವಾಗುವವು ? ಯಾವ ಬುದ್ಧಿವಂತನೂ ಲೀಲೆಯಿಂದ ತನಗೆ ದುಃಖದಾಯಕವಾದವುಗಳನ್ನು ಸ್ವೀಕರಿಸುವುದಿಲ್ಲ. ಯಾರಾದರೂ ಮುಳ್ಳಿನ ಮೇಲೆ ಲೀಲೆಗೆಂದು ಕಾಲಿಡುವರೇ ? ಎಂದು ಪ್ರಶ್ನಾಭಿಪ್ರಾಯವು. ॥೨॥

ಲೋಕದಲ್ಲಿ ಸುಖಕ್ಕಾಗಿ ಕ್ರೀಡಿಸುವುದು ಕಂಡಿದೆ. ಅದರಂತೆ ಶ್ರೀಹರಿಯೂ ಸುಖಪ್ರಾಪ್ತಿಗಾಗಿ ಕ್ರೀಡೆಯಿಂದ ಸೃಷ್ಟಿ ಮಾಡುವನು ಎಂಬ ಶಂಕೆಗೆ ಉತ್ತರಿಸುವರು-

**ಕ್ರೀಡಾಯಾ ಮುದ್ ಯತೋಽರ್ಹಸ್ಯ ಕಾಮಂ ಚಿಕ್ರೀಡಿಷಾಽನ್ಯತಃ ।**
**ಸ್ವತಸ್ತೃಪ್ತಸ್ಯ ತು ಕಥಂ ನಿರ್ವೃತಸ್ಯ ಸದಾತ್ಮನಃ ॥೩॥**

ಯತಃ=ಯಾವ ಕಾರಣ, ಕ್ರೀಡಾಯಾಃ ಸಕಾಶಾತ್=ಕ್ರೀಡೆಯಿಂದ, ಮುತ್= ಸುಖವು, ಅರ್ಹಸ್ಯ=ಕ್ರೀಡೆಯಿಂದ ಜನ್ಯವಾದ ಸುಖಕ್ಕೆ ಯೋಗ್ಯನಾದವನಿಗೆ. ಅರ್ಥಾತ್ ಅಪೂರ್ಣ ಸುಖವುಳ್ಳವನಿಗೆ, ಭವತಿ=ಆಗುವುದು. ಸ್ವತಃ=ಕ್ರೀಡಾದಿ ಸಾಧನಗಳಿಲ್ಲದೇ, ತು=ವಿಶೇಷವಾಗಿ, ತೃಪ್ತಸ್ಯ=ತೃಪ್ತನಾದವನಿಗೆ ಪೂರ್ಣಸುಖ-ವುಳ್ಳವನಿಗೆ, ಕಥಂ=ಕ್ರೀಡೆಯಿಂದ ಬರುವ ಸುಖವು ಹೇಗೆ ಸಾಧ್ಯ? ಬರಲಾರ-ದೆಂದರ್ಥ. ಅವನಿಗೆ ಕ್ರೀಡೆಯೆ ಕೂಡುವುದಿಲ್ಲವೆಂದಮೇಲೆ ಕ್ರೀಡಾಜನ್ಯಸುಖ ದೂರಉಳಿಯಿತು ಎಂದು ಹೇಳುವರು -

ಕಾಮಂ=ಯಥೇಚ್ಛವಾಗಿ, ಚಿಕ್ರೀಡಿಷಾ=ಕ್ರೀಡಿಸುವ ಇಚ್ಛೆಯು, ಅನ್ಯತಃ= ದುಃಖದಿಂದ ಬರುವುದು.ಸದಾ ನಿರ್ವೃತಸ್ಯ ಆತ್ಮನಃ=ಯಾವಾಗಲೂ ಸುಖಿಯಾದ, ದುಃಖರಹಿತನಾದವನಿಗೆ, ಕಥಂ ಚಿಕ್ರೀಡಿಷಾ=ಕ್ರೀಡಿಸುವ ಇಚ್ಛೆಯಾದರೂ ಹೇಗೆ ಬರುವುದು ? ಬರಲಾರದು ಎಂದರ್ಥ. ಅಥವಾ ಅನ್ಯತಃ=ಇನ್ನೊಬ್ಬರ ಜೊತೆಗೆ, ಚಿಕ್ರೀಡಿಷಾ=ಆಡಬೇಕೆಂಬ ಇಚ್ಛೆ ಬರುವದು. ಇವನಾದರೂ 'ಸದೇವ ಸೌಮ್ಯ ಇದಮೇಕ ಏವಾಗ್ರ ಆಸೀತ್' ಎಂದು ಶೃತಿ ಇರುವುದರಿಂದ ಇನ್ನೊಬ್ಬ ಪುರುಷರೇ ಇಲ್ಲದಿರುವವನು. ಆದ್ದರಿಂದಲೂ ಆಡಬೇಕೆಂಬ ಇಚ್ಛೆ ಕೂಡುವುದಿಲ್ಲ ಹೀಗೂ ಅರ್ಥ.

ಈ ಶ್ಲೋಕದಲ್ಲಿ ಪದವಿಭಾಗ ಮಾಡಿ ಪ್ರಕೃತೋಪಯುಕ್ತ ಅರ್ಥಹೇಳುವರು –

**ಕ್ರೀಡಾಯಾಃ ಮುತ್ । ಅರ್ಹಸ್ಯ ಅಪೂರ್ಣಸುಖಸ್ಯ । ಅನ್ಯತಃ ಅರತೇಃ ।**

'ಕ್ರೀಡಾಯಾಮುದ್ಯತಃ' ಎಂದು ಪದವಿಭಾಗ ಮಾಡಿದರೆ 'ಅರ್ಹಸ್ಯ' ಎಂಬುದು ಅನನ್ವಿತವಾಗುವುದು. ಕಾರಣ 'ಕ್ರೀಡಾಯಾಃ' 'ಮುತ್' 'ಯತಃ' ಎಂದು ಮೂರು ಪದಗಳು. 'ಅನ್ಯತಃ' ಎಂದರೆ ಮುತ್(ಸುಖ)ವಿರುದ್ಧ ದುಃಖ ಎಂದರ್ಥವೆಂದು ತಿಳಿಸಿದಂತಾಯಿತು ||೩||

ನಿರ್ಗುಣನಾದವನಿಗೆ ಗುಣಗಳು, ಅವಿಕಾರಿಯಾದವನಿಗೆ ಕ್ರಿಯೆಯು ಇಲ್ಲವೇ ಇಲ್ಲ, ಭ್ರಾಂತಿಕಲ್ಪಿತವು. ನಿಜವಾದುದಲ್ಲ ಆದ್ದರಿಂದ ವಿರೋಧವೇನು, ಸಂಶಯವೇನು ? ಎಂದರೆ ಹೇಳುವರು –

**ಅಸ್ರಾಕ್ಷೀತ್ ಭಗವಾನ್ ವಿಶ್ವಂ ಗುಣಮಯ್ಯಾऽऽತ್ಮಮಾಯಯಾ ।**
**ತಥಾ ಸಂಸ್ಥಾಪಯತ್ಯೇತದ್ ಭೂಯಃ ಪ್ರತ್ಯಭಿಧಾಸ್ಯತಿ ||೪||**

ಗುಣಮಯ್ಯಾ=ಸತ್ವರಜಸ್ತಮೋಗುಣಾತ್ಮಕವಾದ, ಆತ್ಮಮಾಯಯಾ=ತನ್ನ ಅಧೀನವಾದ ಪ್ರಕೃತಿಯಿಂದ, ಭಗವಾನ್=ಶ್ರೀಹರಿಯು, ವಿಶ್ವಂ ಅಸ್ರಾಕ್ಷೀತ್= ರಜೋರೂಪಪ್ರಕೃತಿಯಿಂದ ಪ್ರಪಂಚವನ್ನು ಸೃಷ್ಟಿಸಿದನು. ತಥಾ=ಹಾಗೂ, ಸಂಸ್ಥಾಪಯೇತ್=ಸತ್ವರೂಪಪ್ರಕೃತಿಯಿಂದ ರಕ್ಷಿಸುವನು, ಭೂಯಃ=ಮತ್ತೆ, ಏತತ್= ಪ್ರಪಂಚವನ್ನು ಪ್ರತ್ಯಭಿಧಾಸ್ಯತಿ=ತಮೋರೂಪವಾದಪ್ರಕೃತಿಯಿಂದ ಸಂಹರಿಸುವನು, ಎಂಬುದು ಶ್ರುತಿಸಿದ್ಧವಾಗಿದೆ. ಕಾರಣ ಭ್ರಾಂತಿಕಲ್ಪಿತವಲ್ಲ, ಆದ್ದರಿಂದ ಭಗವಂತನಿಗೆ ಗುಣಕ್ರಿಯೆಗಳ ಸಂಬಂಧ ಕಂಡುಬರುವುದರಿಂದ, 'ನಿರ್ಗುಣನಾದವನಿಗೆ ಗುಣಗಳು, ಅವಿಕಾರಿಯಾದವನಿಗೆ ಕ್ರಿಯೆಯು ಹೇಗೆ' ಎಂದು ನನಗೆ ಸಂಶಯ ಬಂದಿದೆ ಎಂದರ್ಥ ||೪||

'ಭಗವಂತನು ಯಾವಾಗಲೂ ಪ್ರಕೃತಿ ಬಂಧಕ್ಕೆ ಅರ್ಹನಲ್ಲ' (ಪ್ರತಿಜ್ಞಾ) 'ಯಾವಾಗಲೂ ಅದಕ್ಕೆ ವಿರೋಧಿಯಾದ ತನ್ನ ಸಾಕ್ಷಾತ್ಕಾರ ಉಳ್ಳವನಾದ್ದರಿಂದ' (ಹೇತು) ಎಂಬ ಯುಕ್ತಿಯಿಂದಲೂ ಪ್ರಕೃತಿಬಂಧ ಶ್ರೀಹರಿಗೆ ಕೂಡುವುದಿಲ್ಲ ಎಂದು ಹೇಳುವರು –

**ದೇಶತಃ ಕಾಲತೋ ಯೋऽಸಾವವಸ್ಥಾತಃ ಸ್ವತೋऽನ್ಯತಃ ।**
**ಅವಿಲುಪ್ತಾವಬೋಧಾತ್ಮಾ ಸ ಯುಜ್ಯೇತಾಜಯಾ ಕಥಮ್ ||೫||**

ದೇಶತಃ=ದೇಶವ್ಯವಧಾನದಿಂದಾಗಲಿ, ಕಾಲತಃ=ಕಾಲವ್ಯವಧಾನದಿಂದಾಗಲಿ, ಅವಸ್ಥಾತಃ=ಸ್ವಪ್ನ, ಸುಷುಪ್ತಿ, ವೃದ್ಧಾಪ್ಯ ಮುಂತಾದ ಅವಸ್ಥಾ ನಿಮಿತ್ತದಿಂದಾಗಲಿ, ಸ್ವತಃ=ತಾನಾಗಿಯೇ, ಅನ್ಯತಃ=ಬೇರೆ ಕಾರಣಗಳಿಂದಾಗಲಿ, ಅವಿಲುಪ್ತಾವ-ಬೋಧಾತ್ಮಾ=ನಮ್ಮಂತೆ ನಾಶವಾಗದಿರುವ ನಿತ್ಯಜ್ಞಾನಸ್ವರೂಪನು, ಯೋಽಸೌ= ಯಾವನೋ, ಸಃ=ಅವನು ಅಜಯಾ=ಪ್ರಕೃತಿಯಿಂದ, ಯುಜ್ಯತೇ ಕಥಂ=ಹೇಗೆ ಸಂಬದ್ಧನಾಗುವನು? ಆಗಲಾರನೆಂದರ್ಥ. 'ತುಚ್ಛೇನಾಭ್ವಪಿಹಿತಂ' ಎಂಬ ಶ್ರುತಿಯಲ್ಲಿಯಾದರೂ 'ಪ್ರಕೃತಿಯಿಂದ ಆವೃತ'ಎಂದು ಹೇಳಿದೆ. ಕಾರಣ ಸಂಶಯ.

ಮತ್ತೆ ಶಂಕಿಸುವನು –

**ಭಗವಾನೇಷ ಏವೈಕಃ ಸರ್ವಕ್ಷೇತ್ರೇಷ್ವವಸ್ಥಿತಃ ।**
**ಅಮುಷ್ಯ ದುರ್ಭಗತ್ವಂ ವಾ ಕ್ಲೇಶೋ ವಾ ಕರ್ಮಭಿಃ ಕುತಃ ॥೬॥**

ಯತಃ=ಯಾವ ಕಾರಣ, ಏಷಃ=ಇಚ್ಛಾರೂಪನಾದ, ಏಕಃ=ಮುಖ್ಯನಾದ, ಭಗವಾನ್=ಶ್ರೀಹರಿಯು,ಸರ್ವಕ್ಷೇತ್ರೇಷು=ಎಲ್ಲರಶರೀರಗಳಲ್ಲಿ ನಿಯಾಮಕನಾಗಿ, ವ್ಯವಸ್ಥಿತಃ=ಇರುವನು. ಶರೀರಗಳಾದರೂ ಕರ್ಮದಿಂದ ನಿರ್ಮಿತವಾದವುಗಳು. ತನ್ನಲ್ಲಿರುವರಿಗೆ ದೌರ್ಭಾಗ್ಯವನ್ನು ತಂದು ಕೊಡುವುವು. ಇಂಥ ಶರೀರದಲ್ಲಿದ್ದ ಮೇಲೆ ಶ್ರೀಹರಿಗೂ ದೇವದತ್ತಾದಿಗಳಂತೆ ದೌರ್ಭಾಗ್ಯಾದಿಗಳು ಬರಬೇಕು. ಆದರೆ, ಅಮುಷ್ಯ=ಭಗವಂತನಿಗೆ, ಕರ್ಮಭಿಃ=ಪಾಪಗಳಿಂದ, ದುರ್ಭಗತ್ವಂ ವಾ= ದೌರ್ಭಾಗ್ಯವಾಗಲಿ, ಕ್ಲೇಶೋ ವಾ=ಕಷ್ಟವಾಗಲಿ, ಕುತಃ=ಹೇಗೆ ಬಂದೀತು? ಬರಲು ಸಾಧ್ಯವಿಲ್ಲ, 'ನಿರನಿಷ್ಟಃ ನಿರವದ್ಯಃ' ಮುಂತಾದ ಶ್ರುತಿವಿರೋಧ ಬರುವುದು. ಆದ್ದರಿಂದ, 'ಭಗವಂತ ದುಃಖಿಯೋ, ಸುಖಿಯೋ'ಎಂದು ನನಗೆ ಸಂಶಯವೆಂದು ಭಾವ.

ಈ ಶ್ಲೋಕದಲ್ಲಿ ಪೂರ್ವಾರ್ಧದಲ್ಲಿ ಪ್ರಸಕ್ತವಾಗದಿರುವ ದುರ್ಭಗತ್ವಾದಿ-ಗಳನ್ನು ಉತ್ತರಾರ್ಧದಲ್ಲಿ ಹೇಗೆ ಆಕ್ಷೇಪಿಸುವರು? ಎಂಬ ಶಂಕೆಗೆ ಪೂರ್ವಾರ್ಧದಲ್ಲಿ ದುರ್ಭಗತ್ವದ ಪ್ರಸಕ್ತಿಯನ್ನು ತೋರಿಸುವರು –

**ದುರ್ಭಗಕ್ಲೇಶಶರೀರಸ್ಥತ್ವಾತ್ ತಸ್ಯಾಪಿ ಭಾವ್ಯಂ । ನ ಚ ತದ್ಯುಜ್ಯತೇ ।**

ಇದರಿಂದ ಪೂರ್ವಾರ್ಧದಲ್ಲಿ 'ಯತಃ' ಎಂದು ಅಧ್ಯಾಹಾರ ಮಾಡಿ ಯೋಜಿಸಬೇಕು ಎಂದು ಸೂಚಿತವಾಯಿತು.

ಕರ್ಮನಿರ್ಮಿತವಾದ, ಕ್ಲೇಶಾದಿಗಳನ್ನು ತಂದುಕೊಡುವ ಶರೀರದಲ್ಲಿರುವುದರಿಂದ ಎಲ್ಲರಂತೆ ಅವನಿಗೂ ದುರ್ಭಗತ್ವ ಬರಬೇಕಾಗುವುದು. ಶ್ರುತಿ ವಿರುದ್ಧವಾದ್ದರಿಂದ ಅದು ಸರಿಯಲ್ಲವೆಂದು ಭಾವ. ॥೬॥

**ಏತಸ್ಮಿನ್ ಮೇ ಮನೋ ವಿದ್ವನ್ ಖಿದ್ಯತೇಽಜ್ಞಾನಸಂಕಟೇ ।**
**ತನ್ನಃ ಪರಾಣುದ ವಿಭೋ ಕಶ್ಮಲಂ ಮಾನಸಂ ಮಹತ್ ॥೭॥**

ಏತಸ್ಮಿನ್=ಈ, ಅಜ್ಞಾನಸಂಕಟೇ ಸತಿ=ತತ್ವನಿಶ್ಚಯವಿಲ್ಲದ ಮೂಲಕ ಸಂಶಯ ಬರುತ್ತಿರಲು, ಮೇ=ನನ್ನ, ಮನಃ ಖಿದ್ಯತೇ=ಮನಸ್ಸು ಕಲುಷಿತವಾಗುವುದು. ವಿಭೋ=ಸಮರ್ಥರಾದ ಮೈತ್ರೇಯರೇ, ಮಹತ್=ದೊಡ್ಡದಾದ, ಮಾನಸಂ= ಬಾಹ್ಯಮನಸ್ಸಿನಲ್ಲಿರುವ, ನಃ=ನಮ್ಮ, ತತ್=ಸಂಶಯಕ್ಕೆ ನಿಮಿತ್ತವಾದ, ಕಶ್ಮಲಂ= ದೋಷವನ್ನು ಪರಾಣುದ=ನಿರಾಕರಿಸು. ॥೭॥

ಸಜ್ಜನರು ತಮ್ಮಲ್ಲಿರುವ ಸಣ್ಣ ದೋಷವನ್ನೂ ದೊಡ್ಡದಾಗಿ ಭಾವಿಸುವರು ಎಂಬ ಅಭಿಪ್ರಾಯದಿಂದ ಮಹತ್ ಎಂದಿದ್ದಾರೆ. ವಸ್ತುತಃ ದೊಡ್ಡದಲ್ಲ, ಆದ್ದರಿಂದಲೇ 'ಮಾನಸಂ' ಎಂದಿರುವರು ಹೊರತು ಬುದ್ಧಿಸ್ಥವೆಂದಿಲ್ಲ.

**ಶ್ರೀಶುಕ ಉವಾಚ**

**ಸ ಇತ್ಥಂ ಚೋದಿತಃ ಕ್ಷತ್ರಾ ತತ್ವಜಿಜ್ಞಾಸುನಾ ಮುನಿಃ ।**
**ಪ್ರತ್ಯಾಹ ಭಗವಚ್ಚಿತ್ತಃ ಸ್ಮಯನ್ನಿವ ಗತಸ್ಮಯಃ ॥೮॥**

ತತ್ವಜಿಜ್ಞಾಸುನಾ=ತತ್ವವನ್ನು ತಿಳಿಯಲಿಚ್ಛಿಸುವ, ಕ್ಷತ್ರಾ=ವಿದುರನಿಂದ, ಇತ್ಥಂ= ಈ ರೀತಿಯಾಗಿ, ಚೋದಿತಃ=ಪ್ರಶ್ನಿಸಲ್ಪಟ್ಟ, ಭಗವಚ್ಚಿತ್ತಃ=ಭಗವಂತನಲ್ಲಿ ಮನಸ್ಸಿಟ್ಟ ಗತಸ್ಮಯಃ=ಅಹಂಕಾರರಹಿತರಾದ ಸಃ ಮುನಿಃ=ಆ ಮೈತ್ರೇಯರು, ಸ್ಮಯನ್ನಿವ= ಅಪರೋಕ್ಷಜ್ಞಾನಿಯಾದ, ತತ್ವನಿಶ್ಚಯವುಳ್ಳ ಇವನು ನನ್ನನ್ನು ಪ್ರಶ್ನಿಸುವನಲ್ಲ ! ಎಂದು ಮುಗುಳು ನಗುತ್ತ ಪ್ರತ್ಯಾಹ=ಉತ್ತರಿಸಿದರು. ॥೮॥

ದುರ್ಭಗಶರೀರದಲ್ಲಿದ್ದರೂ ದುರ್ಭಗತ್ವಾದಿಗಳು ಬರದಿರುವುದು ಅವನ ಮಾಹಾತ್ಮ್ಯಾತಿಶಯದಿಂದ ಎಂದು ಹೇಳುವರು -

**ಮೈತ್ರೇಯ ಉವಾಚ**

**ಸೇಯಂ ಭಗವತೋ ಮಾಯಾ ನ್ಯಾಯ್ಯಂ ಯೇನ ವಿರುಧ್ಯತೇ ।**
**ಈಶ್ವರಸ್ಯ ವಿಮುಕ್ತಸ್ಯ ಕಾರ್ಪಣ್ಯಮುತ ಬಂಧನಮ್ ॥೯॥**

ಈಶ್ವರಸ್ಯ=ಸರ್ವನಿಯಾಮಕನಿಗೆ, ಕಾರ್ಪಣ್ಯಂ=ದುರ್ಭಗತ್ವವು, ವಿಮುಕ್ತಸ್ಯ=ನಿತ್ಯಮುಕ್ತನಿಗೆ,ಬಂಧನಂ=ಕರ್ಮಲೇಪವು, ಉತ=ಕ್ಲೇಶಾದಿಗಳು, ಯೇನ=ಯಾವ ಕಾರಣ, ವಿರುಧ್ಯತೇ=ಪ್ರಮಾಣದಿಂದ ವಿರುದ್ಧವಾಗಿವೆಯೋ, ತೇನ=ಆದ್ದರಿಂದ, ತತ್=ಆ ಬಂಧನಾದಿಗಳು, ನ ಯುಜ್ಯತೇ=ಯುಕ್ತವಲ್ಲ, ಇತಿ=ಎಂದು, ಯತ್ ತ್ವಯಾ ಉಕ್ತಂ=ನಿನ್ನಿಂದ ಹೇಳಲ್ಪಟ್ಟಿತೋ, ತತ್ ನ್ಯಾಯ್ಯಂ=ಯುಕ್ತವೇ. ಅದು ಹೇಗೆ ಯುಕ್ತವು, ಶರೀರಸ್ಥತ್ವಯುಕ್ತಿವಿರುದ್ಧವಾಗಿದೆಯಲ್ಲ? ಎಂದರೆ ಹೇಳುವರು–

ಸಾ=ದುರ್ಭಗತ್ವಾದಿಶರೀರದಲ್ಲಿದ್ದರೂ ಅದರ, ದೋಷಲೇಪವಾಗದಿರುವು-ದೇನಿದೆಯೋ ಅದು, ಭಗವತಃ=ಪರಮಾತ್ಮನ ಮಾಯಾ ಮಹಿಮೆಯು. ಹೇಗೆ ಸುಡುತ್ತಿರುವ ಮನೆಯಲ್ಲಿದ್ದರೂ ಅಗ್ನಿಸ್ತಂಭನವಿದ್ಯೆ ತಿಳಿದವನು ಸುಡುವುದಿಲ್ಲವೋ, ಹಾಗೆ ಮಹಾಸಮರ್ಥನಾದ್ದರಿಂದ ಶರೀರದಲ್ಲಿದ್ದರೂ ತತ್ಪ್ರಯುಕ್ತ ದೋಷಲೇಪ-ವಾಗದು. 'ಮಹಾತ್ಮ್ಯವಿಲ್ಲದಿರುವುದು' ದೋಷಸಂಬಂಧಕ್ಕೆ ಪ್ರಯೋಜಕವೇ ಹೊರತು ಕೇವಲ ಶರೀರದಲ್ಲಿರುವುದಲ್ಲ. ಕಾರಣ ಅನುಮಾನವು ಉಪಾಧಿ ಗ್ರಸ್ತವೆಂದು ಭಾವ. ('ಈಶ್ವರಃ ದುರ್ಭಗತ್ವಾದಿದೋಷವಾನ್ ಶರೀರಸ್ಥತ್ವಾತ್ ದೇವದತ್ತಾದಿವತ್' ಎಂಬ ಅನುಮಾನವು 'ವಿವಕ್ಷಿತಮಾಹಾತ್ಮ್ಯಾಭಾವ' ಎಂಬ ಉಪಾಧಿಗ್ರಸ್ತವಾಗಿದೆ.)

ಆಚಾರ್ಯರು ಯತಃ, ಉಕ್ತಂ, ತತ್, ಎಂಬ ಮೂರು ಪದ ಅಧ್ಯಾಹಾರಮಾಡಿ ಉಳಿದ ಪದಗಳ ಅರ್ಥ ಹೇಳುವರು–

**ಸೇಯಂ ಭಗವತೋ ಮಾಯಾ । ಅಯಂ ಹಿ ಭಗವನ್ಮಹಿಮಾ । ಕಾರ್ಪಣ್ಯಂ ಬಂಧನಾದಿ ನ ಯುಜ್ಯತೇ ಇತಿ ಯದುಕ್ತಂ ತನ್ನ್ಯಾಯ್ಯಮೇವ । ತಸ್ಯ ದುರ್ಭಗಾದಿಶರೀರಸ್ಥಸ್ಯಾಪಿ ತದ್ದೋಷಾಸ್ಪರ್ಶಃ ಏವ ತನ್ಮಹಿಮಾ ಇತ್ಯರ್ಥಃ ।**

ಮಾಯಾ ಎಂದರೆ ಭಗವನ್ಮಹಿಮೆಯು. ತಸ್ಯ=ಈಶ್ವರನಿಗೆ ವಿಮುಕ್ತನಿಗೆ ದುರ್ಭಗತ್ವ, ಕರ್ಮಲೇಪ, ಕ್ಲೇಶ ಇವು ಯುಕ್ತವಲ್ಲ ಎಂದು ನೀನು ಹೇಳಿದ್ದು ಯುಕ್ತವೇ. ದೋಷಾಪಾದಕಶರೀರದಲ್ಲಿದ್ದರೂ ದೋಷಸ್ಪರ್ಶವಾಗದಿರುವುದೇ ಅವನ ಮಹಿಮೆ ಎಂದು ಭಾವ. ॥೯॥

ದೇಹದಲ್ಲಿರುವ ಈಶ್ವರನಿಗೆ ಕ್ಲೇಶರೂಪ ಸಂಸಾರವಿಲ್ಲವೆಂದಾದರೆ, ಅದು ಯಾರಿಗೆ ಬರುವುದು? ಜೀವನಿಗೆ ಎನ್ನುವುದಾದರೆ, ಅವನೂ ಸಹ ಈಶ್ವರ ಪ್ರತಿಬಿಂಬನಾದುದರಿಂದ ಜ್ಞಾನರೂಪನಾದವನಿಗೆ ಈ ವಿಧವಾದ ದುಃಖಾನುಭವ-ರೂಪ ಸಂಸಾರ ಬರಲು ಕಾರಣವಿಲ್ಲ, ಎಂಬ ಶಂಕೆಗೆ ಜೀವನಿಗೆ ಈ ವಿಧ

ಸಂಸಾರಬರಲು ಕಾರಣವಾದ ಭ್ರಾಂತಿಯನ್ನು ದೃಷ್ಟಾಂತಕೊಟ್ಟು ತಿಳಿಸುವರು–

**ಯಥಾಽರ್ಥೇನ ವಿನಾಽಮುಷ್ಯ ಪುಂಸ ಆತ್ಮವಿಪರ್ಯಯಃ ।**
**ಪ್ರತೀಯತ ಉಪದ್ರಷ್ಟುಃ ಸ್ವಶಿರಶ್ಛೇದನಾದಿಕಃ ॥೧೦॥**

ಯಥಾ=ಹೇಗೆ, ಅರ್ಥೇನ ವಿನಾ ಅಪಿ=ಹೊರಗಿನ ತಲೆ ಕತ್ತರಿಸದಿದ್ದರೂ, ಉಪದ್ರಷ್ಟುಃ=ಸಮೀಪದಲ್ಲಿ ನೋಡುವವನು ಅಂದರೆ ಕನಸು ಕಾಣುವವನಿಗೆ ('ಹೃದಯಸ್ಥಾತ್ ಪರಾತ್ ಜೀವಃ ದೂರಸ್ಥೋ ಜಾಗ್ರದೇಕ್ಷತಿ । ಸಮೀಪಸ್ಥಃ ತಥಾ ಸ್ವಪ್ನಂ' ಎಂದಿದೆ.) ಸ್ವಶಿರಶ್ಛೇದನಾದಿಕಃ=ತನ್ನ ಹೊರಗಿನ ತಲೆ ಕತ್ತರಿಸುವುದೆಂಬ ಅರ್ಥವು, ಪ್ರತೀಯತೇ=ನನ್ನ ತಲೆ ಕತ್ತರಿಸಲ್ಪಟ್ಟಿದೆ ಎಂದು ತೋರುವುದು. ತಥಾ=ಅದರಂತೆ, ಅಮುಷ್ಯ=ಚಿನ್ಮಾತ್ರನಾದ, ಪುಂಸಃ=ಜೀವನಿಗೆ, ಆತ್ಮನಃ= ಅಸ್ವತಂತ್ರನಾದ ತನ್ನ, ವಿಪರ್ಯಯಃ=ದೇಹಾದಿಗಳಲ್ಲಿ ನಾನು ನನ್ನದು ಎಂಬ ಸ್ವಾತಂತ್ರ್ಯ ಸ್ವಾಮಿತ್ವಗಳು, ಪ್ರತೀಯತೇ=ಭ್ರಾಂತಿಯಿಂದ ತೋರುತ್ತದೆ. ಈ ಸ್ವಾತಂತ್ರ್ಯಭ್ರಮವೇ ಸಂಸಾರಕಾರಣವೆಂದು ಭಾವ. ॥೧೦॥

ಹಾಗಾದರೆ ಸ್ವಾತಂತ್ರ್ಯವು ಹೇಗೆ ಮಿಥ್ಯಾಭೂತ (ಅಸತ್)ವಾದುದು ತೋರುವುದೋ ಹಾಗೆ ದುಃಖಾದ್ಯನರ್ಥವೂ ಜೀವನಿಗೆ ಮಿಥ್ಯಾ ಭೂತವಾದುದೇ ಕಾಣಿಸುವುದೇ? ಎಂಬ ಶಂಕೆಯನ್ನು ದೃಷ್ಟಾಂತದಿಂದ ನಿರಾಕರಿಸುವರು –

**ಯಥಾ ಜಲೇ ಚಂದ್ರಮಸಃ ಕಂಪಾದಿಸ್ತತ್ಕೃತೋ ಗುಣಃ ।**
**ದೃಶ್ಯತೇ ಸನ್ನಪಿ ದ್ರಷ್ಟುಃ ಆತ್ಮನೋಽನಾತ್ಮನೋ ಗುಣಃ ॥೧೧॥**

ದ್ರಷ್ಟುಃ=ನೋಡುವ ಜೀವನಿಗೆ,ಯಥಾ=ಹೇಗೆ, ಜಲೇ=ನೀರಿನಲ್ಲಿ ಪ್ರತಿಬಿಂಬಿತ- ನಾದ, ಚಂದ್ರಮಸಃ=ಚಂದ್ರನಿಗೆ, ತತ್ಕೃತಃ=ಜಲರೂಪ ಉಪಾಧಿಯಿಂದ ಮಾಡಲ್ಪಟ್ಟ ಕಂಪಾದಿಗುಣಃ=ಚಲನ ಮುಂತಾದ ಗುಣವು, ಸನ್ನಪಿ=ಸತ್ಯವಾದುದೇ, ದೃಶ್ಯತೇ= ಕಾಣಿಸುವುದು ಹೊರತು ಮಿಥ್ಯಾ ಅಲ್ಲ, ತಥಾ=ಹಾಗೆ ಅನಾತ್ಮನಃ=ಜಡವಾದ ಅಂತಃಕರಣದ, ಗುಣಃ=ದುಃಖಾದಿಗಳು, ದ್ರಷ್ಟುಃ=ಅವುಗಳನ್ನು ಅನುಭವಿಸುವ, ಆತ್ಮನಃ=ಜೀವನಿಗೆ, ಸನ್ನಪಿ ದೃಶ್ಯತೇ=ಸತ್ಯವಾದುದೇ ತೋರುವವು. ಇದು ಯಾದವಾರ್ಯರ ಪ್ರಕಾರ ಅರ್ಥ.

ವಿಜಯಧ್ವಜರ ಪ್ರಕಾರ :– ನೀರಿನಲ್ಲಿರುವ ಚಂದ್ರಪ್ರತಿಬಿಂಬಕ್ಕೆ ನೀರಿನ ಚಲನದಿಂದ ಚಲನವಿರುವುದನ್ನು ಕಂಡು, ಅಜ್ಞಾನಿಯು ಬಿಂಬಭೂತನಾದ ಚಂದ್ರನಿಗೂ ಚಲನವಿದೆ ಎಂದು ಅಸತ್ ಆದ ಚಲನವನ್ನು ತಿಳಿಯುವುದು ಹೇಗೆ ಭ್ರಾಂತಿಯೋ, ಹಾಗೆಯೇ, ಆತ್ಮನಃ=ಜೀವನಿಗೆ ತನ್ನನಿಜಸ್ವರೂಪಜ್ಞಾನ (ತತ್ವಜ್ಞಾನ)

ವಿಲ್ಲದ್ದರಿಂದ, ಅನಾತ್ಮನಃ ಗುಣಃ=ದೇಹಧರ್ಮವಾದ ಜನನ ಮರಣಗಳು, "ಜಾತೋಽಹಂ ಮೃತೋಹಂ" ಮುಂತಾಗಿ ಜೀವನಲ್ಲಿ ತೋರುವವು.

ದ್ರಷ್ಟುಃ=ಸ್ವತಃ ಜ್ಞಾನಾದಿರೂಪನಾದ ಜೀವನಿಗೆ ಈಶೇಚ್ಛೆಯಿಂದ, ಭಗವಂತನ ಸ್ವಾತಂತ್ರ್ಯ, ತನ್ನ ಪಾರತಂತ್ರ್ಯದ ಜ್ಞಾನವಿಲ್ಲದ್ದರಿಂದ ಉಂಟಾದ, ಭ್ರಾಂತ್ಯಾ=ಅಂದರೆ ಸ್ವಾತಂತ್ರ್ಯಭ್ರಮನಿಮಿತ್ತಕವಾಗಿ, ಜಪಾಕುಸುಮಸಂಪರ್ಕದಿಂದ ಸ್ಫಟಿಕದಲ್ಲಿ ಪ್ರತಿಫಲಿತವಾಗಿ ಸತ್ಯವಾಗಿಯೇ ಲೌಹಿತ್ಯವು ಕಾಣುವಂತೆ, ಪ್ರಕೃತಿಸಂಬಂಧದಿಂದ ಬಂದ ಸಂಸಾರವು ಸತ್ಯವೇ ಆಗಿದೆ. ಹೊರತು ಅನಿರ್ವಾಚ್ಯ ಅವಿದ್ಯಾಜನ್ಯ ಭ್ರಾಂತಿಯಲ್ಲ. ಸ್ವಪ್ನವು ವಾಸನಾಮಯವಾದ್ದರಿಂದ ಅಸ್ಪಷ್ಟವಾದ ಕಾರಣ ಎರಡನೇ ದೃಷ್ಟಾಂತ ಎಂದು ತಿಳಿಯಬೇಕು.

ಮುದ್ರಿತವಾದ ವಿಜಯಧ್ವಜೆಯು ಇಲ್ಲಿ ಅಸ್ಪಷ್ಟವಾಗಿದ್ದರೂ ೭ನೇ ಸ್ಕಂಧದ ೨೩ನೇ ಶ್ಲೋಕವಾದ 'ಯಥಾಂಭಸಾ ಪ್ರಚಲತಾ ತರವೋಽಪಿ ಚಲಾ ಇಮೇ' ಎಂಬುದರ ಇವರದೇ ವ್ಯಾಖ್ಯಾನ ಹಾಗು ಇತರ ವ್ಯಾಖ್ಯಾನಾನುಗುಣವಾಗಿ ಸಾರಾಂಶ ಬರೆದಿದೆ. ॥೧೧॥

ಸಂಸಾರವು ಸತ್ಯವಾದರೆ ಸತ್ಯಕ್ಕೆ ನಿವೃತ್ತಿ ಇಲ್ಲದಿರುವುದರಿಂದ ಸಂಸಾರ ನಿವೃತ್ತಿರೂಪಮೋಕ್ಷ ಆಗುವುದು ಹೇಗೆ? ಎಂದರೆ ಹೇಳುವರು–

**ಸ ವೈ ನಿವೃತ್ತಿಧರ್ಮೇಣ ವಾಸುದೇವಾನುಕಂಪಯಾ ।**
**ಭಗವದ್ಭಕ್ತಿಯೋಗೇನ ತಿರೋಧತ್ತೇ ಶನೈರಿಹ ॥೧೨॥**

ಇಹ=ಜೀವನಲ್ಲಿ, ಶನೈಃ=ಸಾಧನವು ಹೆಚ್ಚು ಹೆಚ್ಚಾದಂತೆ, ಸಃ=ದುಃಖಾದಿರೂಪ-ಸಂಸಾರವು, ನಿವೃತ್ತಿಧರ್ಮೇಣ=ನಿಷ್ಕಾಮಕರ್ಮದಿಂದುಂಟಾದ ಭಕ್ತಿಯೋಗದಿಂದ ಅಪರೋಕ್ಷಜ್ಞಾನವಾಗಿ ಅದರಿಂದುಂಟಾದ,ವಾಸುದೇವಾನುಕಂಪಯಾ=ಶ್ರೀಹರಿಯ ಪ್ರಸಾದಿಂದ, ತಿರೋಧತ್ತೇ=ನಾಶವುಗುವುದು. ಸತ್ಯವಾದರೂ ಸೇವೆಯಿಂದ ಸಂತುಷ್ಟನಾದ ರಾಜನ ಪ್ರಸಾದಿಂದ ಜೈಲಿನಿಂದ ಬಿಡುಗಡೆಯಾಗುವುದು ಕಂಡಿದೆಯಷ್ಟೇ ! ಎಂದು ಭಾವ.

'ಬ್ರಹ್ಮನ್ ಕಥಂ ಭಗವತಃ' ಎಂಬ ೨ನೇ ಶ್ಲೋಕದಿಂದ 'ತಿರೋಧತ್ತೇ ಶನೈರಿಹ' ಎಂಬಲ್ಲಿವರೆಗಿನ ೧೧ ಶ್ಲೋಕಗಳ ತಾತ್ಪರ್ಯವನ್ನು ಶ್ರುತಿ ಸ್ಮೃತಿಗಳಿಂದ ತಿಳಿಸುವರು.

**ಕಥಂ ದೇಹೇ ಪರೋ ದೇವೋ ನ ಲಿಪ್ಯೇತೇಹ ಬಂಧನೈಃ ।**
**ಕಥಂ ನ ದುಃಖೀ ಸ ಭವೇತ್ ದುಃಖೀ ಚೇದೀಶ್ವರಃ ಕುತಃ ॥**

ಈ ದೇಹದಲ್ಲಿ ಇರುವ ಪರಮಾತ್ಮನು ಕರ್ಮಬಂಧನದ ಲೇಪವಿಲ್ಲದೇ ಹೇಗೆ ಇರುವನು ? ಲೇಪ ಉಳ್ಳವನಾಗಲೇಬೇಕು. ಒಂದು ವೇಳೆ ಜೀವನಂತೆ ಲೇಪವುಳ್ಳವನಾದರೆ ದುಃಖಿ ಆಗದೇ ಇರಲು ಹೇಗೆ ಸಾಧ್ಯ? ದುಃಖಿ ಆಗೇ ಆಗುವನು. ದುಃಖಿ ಆದದ್ದೇ ಆದರೆ ಅವನು ಈಶ್ವರನು ಹೇಗಾದಾನು? ಆಗಲಾರನು. ಈಶ್ವರನಂತೂ (ಸರ್ವಸಮರ್ಥ) ಆಗಿರುವನು ಆದ್ದರಿಂದ ದುಃಖವು ಕೂಡದಿರುವುದರಿಂದ ಅವನಿಗೆ ಕರ್ಮಬಂಧನವಿಲ್ಲವೆಂದು ಹೇಳಬೇಕು. ದುಃಖಾಪಾದಕದೇಹದಲ್ಲಿರುವುದರಿಂದ ಜೀವನಂತೆ ಕರ್ಮ ಬಂಧನ ಬರಲಿ ಎಂದು ಸಂಶಯ ಬರುವುದಷ್ಟೇ ಎಂದು "ಭಗವಾನೇಷ ಏವೈಕಃ ಎಂಬ ೬ನೇ ಶ್ಲೋಕದ ತಾತ್ಪರ್ಯ ಹೇಳಿದಂತಾಯಿತು.

"ಸೇಯಂ ಭಗವತೋ ಮಾಯಾ" ಎಂಬ ೯ನೇ ಶ್ಲೋಕದ ಭಾವ

**ಮಹಿಮಾ ಪರಮಸ್ಯೈಷ ಯದ್ದೇಹಸ್ಥೋ ನ ಬಾಧ್ಯತೇ ।**

ದೇಹದಲ್ಲಿದ್ದರೂ ಅವನಿಗೆ ಯಾವ ಬಾಧೆಯೂ ಆಗುವುದಿಲ್ಲವೆಂಬುದು ಅವನ ಮಹಿಮೆ. ಇದರಿಂದ ದೇಹಸ್ಥತ್ವಯುಕ್ತಿಯು ಮಹಿಮಾಭಾವ ಉಪಾಧಿಗ್ರಸ್ತವೆಂದು ಹೇಳಿದಂತಾಯಿತು."ಈಶ್ವರನು ಕರ್ಮಬಂಧವುಳ್ಳವನಲ್ಲ ಮಹಿಮಾತಿಶಯವುಳ್ಳ-ವನಾದ್ದರಿಂದ' ಎಂದು ಉಪಾಧಿಯ ಅಭಾವದಿಂದ ಸಾಧ್ಯಾಭಾವವನ್ನು ಅನುಮಾನಿಸಬೇಕು.

'ಮಹಿಮಾತಿಶಯ ಇದ್ದರೂ ಕರ್ಮಬಂಧವೂ ಇರಲಿ'ಎಂದು ಅಪ್ರಯೋಜ-ಕತ್ವಶಂಕೆಯನ್ನು ಮಾಡಿದರೆ, ವಿಪಕ್ಷೇ ಬಾಧಕ ತರ್ಕವನ್ನು ಸೂಚಿಸಿ, ವಿಪರ್ಯಯ ಪರ್ಯವಸಾನವನ್ನು ತೋರಿಸುವರು-

**ಯದದುಃಖೀ ಸ ಈಶಾನೋ ಮಾಯೇತಿ ಮಹಿಮೋಚ್ಯತೇ ॥**

ಪರಮಾತ್ಮನು ದುಃಖರಹಿತನು ಸರ್ವಪ್ರೇರಕನು ಎಂದು ಶ್ರುತಿಗಳು ಸಾರುತ್ತಿರುವುದರಿಂದ ಬಂಧಉಳ್ಳವನಲ್ಲ, ಇದರಿಂದ ಈಶ್ವರನು ಬಂಧವುಳ್ಳವನಾ-ದರೆ ದುಃಖವುಳ್ಳವನಾಗಬೇಕು. ದುಃಖಿಯಾದರೆ ಸರ್ವನಿಯಾಮಕನಾಗಲಾರ. ಶ್ರೀಹರಿಯಾದರೂ ಸರ್ವನಿಯಾಮಕನೂ, ದುಃಖರಹಿತನೂ ಆಗಿರುವನು ಆದ್ದರಿಂದ ಬಂಧವುಳ್ಳವನಲ್ಲ ಎಂದು ತರ್ಕಮಾಡಿದಂತಾಯಿತು. ಬಂಧ ಬರದಿರಲು ಮಹಿಮೆ ಪ್ರಯೋಜಕವಾದ ಮೇಲೆ ಮೂಲದಲ್ಲಿ 'ಸೇಯಂ ಭಗವತೋ ಮಾಯಾ' ಎಂದು ಮಾಯೆಗೆ ಪ್ರಯೋಜಕತ್ವ ಹೇಳಿದ್ದು ಹೇಗೆ? ಎಂದರೆ ಹೇಳುವರು'ಮಾಯೇತಿ ಮಹಿಮೋಚ್ಯತೇ' ಇಲ್ಲಿ ಮಾಯಾ ಎಂದರೆ

ಅನಿರ್ವಚನೀಯ ಅವಿದ್ಯೆ ಆಗಲಿ ಐಂದ್ರಜಾಲಿಕಮಾಯೆಯಾಗಲಿ ಅಲ್ಲ. ಮಾಯೆ ಎಂದು ಭಗವನ್ಮಹಿಮೆಯೇ ಕರೆಯಲ್ಪಡುವುದು.

ಹಾಗಾದರೆ ಭಗವಂತನಿಗೆ ಮಾಯಾಮಯನೆಂದು ಶ್ರುತಿಯಲ್ಲಿ ಪ್ರಯೋಗಿಸುವುದಕ್ಕೇನರ್ಥ ? ಎಂದರೆ ಹೇಳುವರು–

**ಪ್ರಧಾನಂ ಮಯ ಇತ್ಯಾಹುಃ ಪ್ರಾಧಾನ್ಯಾನ್ಮಯತಾ ಭವೇತ್ ।**
**ಅತೋ ಮಾಯಾಮಯಂ ಪ್ರಾಹುರ್ಮಹಾಮಾಯಮನಾಮಯಂ ॥**
**ಇತಿ ಭಾಲ್ಲವೇಯಶ್ರುತಿಃ**

ಮಯಶಬ್ದಕ್ಕೆ ಪ್ರಧಾನವೆಂದು ಅರ್ಥವಿರುವುದರಿಂದ, ಪ್ರಧಾನವಾದದ್ದು ಮಯಶಬ್ದವಾಚ್ಯವಾಗುವುದು. ಈ ರೀತಿಯಾಗಿ ಮಾಯಾಶಬ್ದಕ್ಕೆ ಮಹಿಮೆ ಎಂದು, ಮಯಶಬ್ದಕ್ಕೆ ಪ್ರಧಾನವೆಂದೂ ಅರ್ಥವಿರುವುದರಿಂದ, ಅವಿದ್ಯಾದಿ ದೋಷರಹಿತನಾದ ಪ್ರಧಾನಮಹಿಮೆಯುಳ್ಳ ಭಗವಂತನನ್ನು 'ಮಾಯಾಮಯ' ನೆಂದು ಕರೆಯುವರು. (ಮಯಾ ಪ್ರಧಾನಭೂತಾ ಮಾಯಾ ಮಹಿಮಾ ಯಸ್ಯ ಸಃ ಎಂದು ವಿಗ್ರಹ. ಅಗ್ನ್ಯಾಹಿತಾದಿಗಳಂತೆ ಮಯಶಬ್ದ ಪರನಿಪಾತವಾಗಿ ಮಾಯಾಮಯ ಎಂದಾಗಿರುವುದು) ಎಂದು ಭಾಲ್ಲವೇಯಶ್ರುತಿಯಲ್ಲಿ ಹೇಳಿದೆ.

ಭಗವಂತನು ಪ್ರಾಕೃತದೇಹರಹಿತನೆನ್ನಲು ಯುಕ್ತ್ಯಂತರ ಹೇಳುವರು–

**ಅಲುಪ್ತಬೋಧರೂಪತ್ವಾತ್ ನಾಸೌ ಪ್ರಾಕೃತದೇಹವಾನ್ ।**
**ನ ಚ ಸೃಷ್ಟ್ಯಾದಿಕಂ ಭ್ರಾಂತಿಃ ಭ್ರಾಂತಿವಾದಾ ಹಿ ದಾನವಾಃ ॥**

**ಅತೋ ಭ್ರಾಂತ್ಯಾದಿಸಂಬಂಧೋ ನಾಸ್ಯ ಕ್ವಚನ ಯುಜ್ಯತೇ ।**
**ಭ್ರಾಂತ್ಯಾ ಜೀವಸ್ಯ ಸಂಸಾರಃ ಈಶಜ್ಞಾನಾದ್ವಿಲೀಯತೇ ।**
**ಭ್ರಾಂತಿರ್ದೇಹಾದ್ಯಭಿಮತಿರೀಶಜ್ಞಾನಾದ್ವಿನಶ್ಯತಿ ॥ ಇತಿ ಬ್ರಹ್ಮಾಂಡೇ ।**

ಬಂಧಕ್ಕೆ ವಿರೋಧಿಯಾದ ತನ್ನ ಸಾಕ್ಷಾತ್ಕಾರ ಸರ್ವದಾ ಇರುವುದರಿಂದಲೂ ಪ್ರಾಕೃತದೇಹ ಅವನಿಗಿಲ್ಲ. ನಿರ್ಗುಣನಿಗೆ ಗುಣಗಳಾಗಲಿ ಅವಿಕಾರಿಗೆ ಕ್ರಿಯೆಗಳಾಗಲಿ ಭ್ರಾಂತಿಯಿಂದ, ಎಂದೇಕೆ ಉತ್ತರಿಸಬಾರದು? ಎಂದರೆ ಹೇಳುವರು 'ನಚ ಸೃಷ್ಟ್ಯಾದಿಕಂ'ಮುಂತಾಗಿ. ಸೃಷ್ಟ್ಯಾದಿಕ್ರಿಯೆಗಳು ಭ್ರಾಂತಿಕಲ್ಪಿತಗಳಲ್ಲ. ಭ್ರಾಂತಿಕಲ್ಪಿತ-ವೆಂದು ಹೇಳುವವರು ದಾನವರು. ಅಥವಾ ಅವಿದ್ಯಾಕಲ್ಪಿತವೂ ಅಲ್ಲ. ಹಾಗೆ ಹೇಳುವವರೂ ದಾನವರೇ. ಆದ್ದರಿಂದ ಸರ್ವಜ್ಞನಾದ ಈಶ್ವರನಿಗೆ ಅವಿದ್ಯಾಸಂಬಂಧ ಯಾವಕಾಲದಲ್ಲಿಯೂ ಇರುವುದಿಲ್ಲ. ಪ್ರಕೃತಿಬಂಧ ಈಶ್ವರನಿಗೆ ಇಲ್ಲವಾದರೆ ಯಾರಿಗೆ ಬಂಧ? ಜೀವನಿಗಾದರೂ ಬರಲು ಕಾರಣವೇನು? ಎಂದರೆ,

ಸ್ವಾತಂತ್ರ್ಯಭ್ರಮದಿಂದ ಜೀವನಿಗೆ ಸಂಸಾರ ಬರುವುದು. ಭಗವಂತನ ಸಾಕ್ಷಾತ್ಕಾರ-ದಿಂದ ನಾಶವಾಗುವುದು. ಭ್ರಾಂತಿ ಎಂದರೆ ದೇಹಾದಿಗಳಲ್ಲಿ ನಾನು, ನನ್ನದು ಎಂಬ ಸ್ವಾತಂತ್ರ್ಯಾಭಿಮಾನವು. ಅದು ಪ್ರಕೃತವಾದ ಈಶಜ್ಞಾನದಿಂದ ನಿವೃತ್ತವಾಗುವುದು. ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ. ಭ್ರಾಂತಿನಾಶವಾದರೆ ಅದರ ಕಾರ್ಯವಾದ ಸಂಸಾರವೂ ನಾಶವಾಗುವುದು ಎಂದು ಭಾವ. ॥೧೨॥

ಎಲ್ಲ ಕಷ್ಟಗಳು ಯಾವಾಗ ಹೋಗುವವು ಎಂದರೆ ಹೇಳುವರು –

**ಯದೇಂದ್ರಿಯೋಪರಾಮಾರ್ಥೋ ದೃಷ್ಟಾತ್ಮನಿ ಪರೇ ಹರೌ ।**
**ವಿಲೀಯಂತೇ ತದಾ ಕ್ಲೇಶಾಃ ಸಂಸುಪ್ತಸ್ಯೇವ ಕೃತ್ಸ್ನಶಃ ॥೧೩॥**

ಪರೇ=ಸರ್ವೋತ್ತಮನಾದ, ಹರೌ=ಪರಮಾತ್ಮನು, ದೃಷ್ಟಾತ್ಮನಿ ಸತಿ=ಜೀವನಿಂದ ಅಪರೋಕ್ಷೀಕರಿಸಲ್ಪಟ್ಟ ಸ್ವರೂಪವುಳ್ಳವನಾಗಲು, (ಅಪರೋಕ್ಷ ನಾದಗ) ಯದಾ= ಯಾವಾಗ, ಇಂದ್ರಿಯೋಪರಾಮಾರ್ಥಃ=ಜಡೇಂದ್ರಿಯಗಳ ನಾಶವೆಂಬ ಅಥವಾ ಸ್ವರೂಪೇಂದ್ರಿಯಗಳು ಭಗವಂತನ ಸಮೀಪದಲ್ಲಿ ರಮಣ ಮಾಡುವುದೆಂಬ ಮುಕ್ತಿಯಾಗುವುದೋ,ತದಾ=ಆಗ ಸಂಸುಪ್ತಸ್ಯ ಇವ=ಗಾಢ ನಿದ್ರೆಮಾಡುವವನಂತೆ, ಕೃತ್ಸ್ನಶಃ ಕ್ಲೇಶಾಃ ವಿಲೀಯಂತೇ=ಎಲ್ಲ ಕಷ್ಟಗಳೂ ನಾಶವಾಗುವವು.

ಈ ಶ್ಲೋಕದಲ್ಲಿ ಇಂದ್ರಿಯ ಉಪರಾಮವೆಂದರೆ ನೈಶ್ಚಲ್ಯವೆಂದರ್ಥ ತೋರುವುದು. ಕಾರಣ ಪ್ರಕೃತಕ್ಕೆ ಉಪಯುಕ್ತ ಅರ್ಥವನ್ನು ಹೇಳುವರು–

**ಇಂದ್ರಿಯೋಪರಾಮಾಖ್ಯಃ ಪುರುಷಾರ್ಥಃ ಮುಕ್ತಿಃ ।**

ಧರ್ಮಾದಿಪುರುಷಾರ್ಥತ್ರಯಗಳು ಇಂದ್ರಿಯೋಪರಮರೂಪವಾಗಿಲ್ಲವಲ್ಲ? ಕಾರಣ ಈ ವ್ಯಾಖ್ಯಾನ ಹೇಗೆ? ಎಂದರೆ ನಾಲ್ಕನೆಯ 'ಮುಕ್ತಿ' ಎಂಬ ಪುರುಷಾರ್ಥ ಇಂದ್ರಿಯ ಉಪರಾಮರೂಪವಾಗಿದೆ ಎಂದು ತಿಳಿಸಲು 'ಪುರುಷಾರ್ಥಃ ಮುಕ್ತಿಃ' ಎಂದು ಹೇಳಿರುವರು. ॥೧೩॥

ಮೋಕ್ಷಸಾಧನವನ್ನು ಹೇಳುವ "ಸ ವೈ ನಿವೃತ್ತಿಧರ್ಮೇಣ" ಎಂಬ ಶ್ಲೋಕ (೧೨)ದಲ್ಲಿ ಶ್ರವಣಾದಿಗಳನ್ನು ಹೇಳದಿರುವುದರಿಂದ, ಅವುಗಳನ್ನು ಈಗ ಹೇಳುತ್ತ ಪ್ರೇಮಸಹಿತಧ್ಯಾನಕ್ಕೆ ಉತ್ತಮತ್ವವನ್ನು ಕಿಂಪುನರ್ನ್ಯಾಯದಿಂದ ತಿಳಿಸುವರು–

**ಅಶೇಷಸಂಕ್ಲೇಶಶಮಂ ವಿಧತ್ತೇಗುಣಾನುವಾದಶ್ರವಣಂ ಮುರಾರೇಃ ।**
**ಕಿಂ ವಾ ಪುನಸ್ತಚ್ಚರಣಾರವಿಂದಪರಾಗಸೇವಾರತಿರಾತ್ಮಲಬ್ಧಾ ॥೧೪॥**

ಮುರಾರೇಃ=ಶ್ರೀಹರಿಯ, ಗುಣಾನುವಾದಶ್ರವಣಂ=ಗುಣಗಳ ಪ್ರವಚನ ಮನನದಿಂದ ಸಹಿತವಾದ ಶ್ರವಣವು, ಅಶೇಷಸಂಕ್ಲೇಶಶಮಂ ವಿಧತ್ತೇ= ಎಲ್ಲದುಃಖಗಳ ಉಪಶಮ ಮಾಡುವುದು. ಆತ್ಮಲಬ್ಧಾ=ಮನಸ್ಸಿನಲ್ಲಿ ಪ್ರಾಪ್ತವಾದ ತಚ್ಚರಣಾರವಿಂದಪರಾಗಸೇವಾರತಿಃ=ಭಗವಂತನ ಪಾದಾರವಿಂದಗಳ ಸೇವಾದಲ್ಲಿ ಆಸಕ್ತಿಯು(ಭಗವದ್ಧ್ಯಾನವು) ಅಶೇಷಸಂಕ್ಲೇಶಶಮಂ ವಿಧತ್ತೇ ಇತಿ ಕಿಂಪುನಃ=ಎಲ್ಲ ಕ್ಲೇಶಗಳನ್ನು ಕಳೆಯುವುದೆಂದು ಬೇರೆ ಹೇಳಬೇಕೇ? ಹೇಳಬೇಕಿಲ್ಲ ! ಸ್ವತಃ ಸಿದ್ಧವೆಂದು ಭಾವ. ॥೧೪॥

ವಿದುರನು ತಾನು ಕೇಳಿದ ಎಲ್ಲ ಪ್ರಶ್ನೆಗಳಿಗೆ ಉತ್ತರವನ್ನು ಪಡೆಯಲು, ಮೈತ್ರೇಯರನ್ನು ಅಭಿನಂದಿಸುತ್ತ ಅವರು ಮಾಡಿದ ಉಪಕಾರವನ್ನು ಹೇಳುವನು -

**ವಿದುರ ಉವಾಚ**

**ಸಂಭಿನ್ನಃ ಸಂಶಯೋ ಮಹ್ಯಂ ತವ ಸೂಕ್ತಾಸಿನಾ ವಿಭೋ ।**
**ಉಭಯತ್ರಾಪಿ ಭಗವನ್ಮನೋ ಮೇ ಸಂಪ್ರಧಾವತಿ ॥೧೫॥**

ವಿಭೋ=ಮೈತ್ರೇಯರೇ,ತವ=ನಿಮ್ಮ,ಸೂಕ್ತಾಸಿನಾ=ಸಮೀಚೀನ ಮಾತುಗಳೆಂಬ ಖಡ್ಗದಿಂದ, ಮಹ್ಯಂ=ನನ್ನ ಸಂಶಯಃ='ದುರ್ಭಗಶರೀರದಲ್ಲಿರುವುದರಿಂದ ಶ್ರೀಹರಿಗೆ ದುಃಖಾದಿಗಳು ಬರಲಿ'ಎಂಬ ಅನುಮಾನ ಮೂಲಕವಾದ ಸಂಶಯವು, ಸಂಭಿನ್ನಃ= ಯದ್ಯಪಿ ಕತ್ತರಿಸಲ್ಪಟ್ಟಿದೆ. (ಹೋಗಿದೆ) ತಥಾಪಿ=ಆದರೂ, ಮೇ ಮನಃ=ನನ್ನ ಮನಸ್ಸು ಉಭಯತ್ರ=ಎರಡು ಕಡೆಗೆ, ಸಂಪ್ರಧಾವತಿ=ಓಡುವುದು ಅಂದರೆ ಎರಡು ಕೋಟಿಗಳುಳ್ಳ ಸಂಶಯಜ್ಞಾನರೂಪವಾಗುವುದು. ಮತ್ತೆ ಸಂಶಯ ಬರುವುದು ಎಂದು ಭಾವ. ॥೧೫॥

ಉಭಯತ್ರ ಎಂದು ಹೇಳಿದ್ದನ್ನೇ ತಿಳಿಸಲು ಹೇಳುವರು -

**ಸಾಧು ತದ್ ವ್ಯಾಹೃತಂ ವಿದ್ವನ್ನಾತ್ಮಮಾಯಾಯನಂ ಹರೇಃ ।**
**ಆಭಾತ್ಯಪಾರ್ಥಂ ನಿರ್ಮೂಲಂ ವಿಶ್ವಮೂಲಂ ನ ಯದ್ ಬಹಿಃ ॥**

ವಿದ್ವನ್=ಜ್ಞಾನಿಗಳಾದ ಮೈತ್ರೇಯರೇ, ಹರೇಃ ಆತ್ಮಮಾಯಾಯನಂ ಇತಿ ಯದ್ ವ್ಯಾಹೃತಂ=ದುರ್ಭಗಶರೀರದಲ್ಲಿದ್ದರೂ ಆದರಿಂದಾಗಿ ದುಃಖಾದಿಗಳು ಭಗವಂತನಿಗೆ ಆಗದಿರುವುದು ಸ್ವರೂಪಸಾಮರ್ಥ್ಯದಿಂದ ಎಂದು (ಸೇಯಂ ಭಗವತೋ ಮಾಯಾ ಎನ್ನುವಲ್ಲಿ ) ಏನು ಹೇಳಿದಿರೋ, ತತ್=ಅದು ಸಾಧು= ಸಮೀಚೀನವೇ ಅದರಿಂದ ಅನುಮಾನಮೂಲಕಸಂಶಯವು ಪರಿಹೃತವಾಗಿದೆ.

ಆದರೂ ಶ್ರೀಹರಿಗೆ ಅವತಾರಗಳಲ್ಲಿ ಜಡದೇಹ ಇರುವುದು, ಅದರಿಂದ ದುಃಖ ಆಗುವುದು ಪ್ರತ್ಯಕ್ಷದಿಂದ ಕಂಡು ಬರುವುದು. ಯದ್ಯಪಿ ಆ ಜಡದೇಹವು, ಅಪಾರ್ಥಂ=ಜೀವನಂತೆ ಈಶ್ವರನಿಗೆ ಪುರುಷಾರ್ಥಸಾಧನವಲ್ಲ (ಈಶ್ವರನು ಆಪ್ತಕಾಮನಷ್ಟೆ) ಮತ್ತು ನಿರ್ಮೂಲಂ=ಜೀವನದೇಹದಂತೆ ಸ್ವಾತಂತ್ರ್ಯಭ್ರಮರೂಪ ಕಾರಣವುಳ್ಳದ್ದಲ್ಲ. ತಥಾಪಿ=ಪ್ರಯೋಜನಕಾರಣರಹಿತವಾದರೂ ಆಭಾತಿ= ಸ್ಪಷ್ಟವಾಗಿ ಪ್ರತ್ಯಕ್ಷದಿಂದ ಕಾಣುವುದು. ಕಾರಣ ಜಡದೇಹವನ್ನು ಒಪ್ಪದಿರಲು ಸಾಧ್ಯವಿಲ್ಲ. ಪ್ರತ್ಯಕ್ಷವು ಜಾತ್ಯಾಪ್ರಬಲವಾಗಿದೆ. ಜಡದೇಹ ಇನ್ನು ವಿಶ್ವಮೂಲಂ ಬ್ರಹ್ಮ ಯತ್ ನ ಬಹಿಃ=ಎಲ್ಲ ಜಗತ್ತಿನ ಜನ್ಮಾದಿಗಳಿಗೆ ಕಾರಣನಾದ ಪರಮಾತ್ಮನು, ನನ್ನ ಜ್ಞಾನದ ಹೊರಗಿಲ್ಲ. ಅಂದರೆ ನನ್ನ ಜ್ಞಾನವಿಷಯನೇ ಆಗಿರುವನು. ಅಂದರೆ ಜಡದೇಹಶೂನ್ಯನು, ಕ್ಲೇಶರಹಿತನು ಎಂದು ತಿಳಿಯಲ್ಪಟ್ಟಿರುವನು. ಸರ್ವಕಾರಣ-ನಾದವನಿಗೆ ಉತ್ಪಾದಕರೇ ಇಲ್ಲದಿರುವುದರಿಂದ ಜಡದೇಹರಹಿತನು, ದುಃಖರಹಿತನು ಎಂದು ತಿಳಿಯಲ್ಪಟ್ಟಿರುವನು. ಯತ್=ಯಾವ ಕಾರಣ ಈ ರೀತಿ ಎರಡು ಕಡೆಗೆ ಮನಸ್ಸು ಹೋಗುವುದು. ಪ್ರತ್ಯಕ್ಷ ಮೂಲಕವಾಗಿ ಪರಮಾತ್ಮನಿಗೆ ಜಡದೇಹವಿದೆ ಎಂಬ ಸಂಶಯ ಬರುವುದು. ಕಾರಣ ತಟಸ್ಥ (ಮಧ್ಯಸ್ಥ) ನಾಗಿರುವೆನು. ॥೧೬॥

ಈ ಶ್ಲೋಕದಲ್ಲಿಯ ಆತ್ಮಮಾಯಾಯನ ಎಂಬ ಪದದ ವಿವಕ್ಷಿತ ಅರ್ಥ ಹೇಳುವರು–

**"ಸ್ವರೂಪಸಾಮರ್ಥ್ಯಾಶ್ರಯಮ್" ।**

'ಸ್ವರೂಪ' ಎಂಬುದು 'ಆತ್ಮ'ಶಬ್ದಾರ್ಥವು. 'ಮಾಯಾ'ಶಬ್ದಾರ್ಥವೇ 'ಸಾಮರ್ಥ್ಯ' ಎಂಬುದು. 'ಆಶ್ರಯ' ಎಂಬುದು 'ಅಯನ' ಶಬ್ದಾರ್ಥವೆಂದು ತಿಳಿಯಬೇಕು.

**'ಯದ್ವ್ಯಾಹೃತಂ'।**

ವ್ಯಾಹೃತಂ ಎಂಬುದು ವಿಧೇಯವಲ್ಲವೆಂದು ತಿಳಿಸಲು 'ಯದ್ವ್ಯಾಹೃತಂ' ಎಂದಿರುವರು ಆಚಾರ್ಯರು. ಇದರಿಂದ 'ತತ್ ಸಾಧು' ಎಂದು ಸಾಧುತ್ವವೇ ವಿಧೇಯವೆಂದು ಭಾವ.

ಅಪಾರ್ಥಂ ನಿರ್ಮೂಲಂ ವಿಶ್ವಮೂಲಂ ಎಂಬ ಮೂರೂ ಒಂದಕ್ಕೇ ವಿಶೇಷಣಗಳೆಂದು ತಿಳಿಯುವುದು. ಕಾರಣ ಅಪೇಕ್ಷಿತವಾದಪದ ಅಧ್ಯಾಹಾರ ಮಾಡಿ ಬೇರೆ ಬೇರೆ ವಾಕ್ಯವಾಗಿ ಯೋಜಿಸಿ,ಅರ್ಥವನ್ನು ಹೇಳುವರು–

**"ಅಪಾರ್ಥಂ ನಿರ್ಮೂಲಂ ಚ ದೇಹಸಂಬಂಧಿತ್ವಾದಿ ಆಭಾತಿ ।**
**ವಿಶ್ವಮೂಲಂ ಬ್ರಹ್ಮ ಚ ಯನ್ಮಮ ಜ್ಞಾನಾದ್ಬಹಿರ್ನಭವತಿ ॥**

**ತಸ್ಮಾತ್ ಉಭಯತ್ರ ಧಾವತಿ । ತಸ್ಮಾದಂತರಿತೋಽಸ್ಮಿ । ತಥಾಪಿ ತಾಂ ಪ್ರತೀತಿಂ ಪರಾಣುದೇ ।**

ಜೀವರಂತೆ ಪುರುಷಾರ್ಥ ಹೊಂದಿಸದಿರುವ, ಸ್ವಾತಂತ್ರ್ಯಭ್ರಮ ಮುಂತಾದ ಕಾರಣವಿಲ್ಲದ ಜಡದೇಹ, ಅದರಿಂದಾಗುವ ಕ್ಲೇಶಗಳು ಅವತಾರಗಳಲ್ಲಿ ಕಾಣಿಸು-ವವು. ಮತ್ತು ಸರ್ವಜಗತ್ತಿನ ಜನ್ಮಾದಿಗಳಿಗೆ ಕಾರಣನಾದ ಬ್ರಹ್ಮನು ನನ್ನ ಜ್ಞಾನಕ್ಕೆ ವಿಷಯನಾಗಿರುವನು. (ಅಂದರೆ ಜಡದೇಹವಿಲ್ಲವೆಂದೂ, ಕ್ಲೇಶಾದಿಗಳಿಲ್ಲವೆಂದೂ ತಿಳಿದಿರುವೆನು) ಆದ ಕಾರಣ ಶ್ರೀಹರಿಗೆ ಜಡದೇಹವಿದೆ ಎಂಬಲ್ಲಿಯೂ, ಇಲ್ಲವೆಂಬಲ್ಲಿಯೂ ಮನಸ್ಸು ಓಡುವುದು. ಆದ್ದರಿಂದ ಸಂಶಯಗ್ರಸ್ತನಾಗಿದ್ದೇನೆ. ಆದರೂ ಆ ಸಂಶಯವನ್ನು ಕಳೆದುಕೊಳ್ಳುತ್ತೇನೆ. ನಿಮ್ಮ ಉಪದೇಶ ಅನುಗ್ರಹ-ಗಳಿಂದ, ಎಂದು ಭಾವ.

(ಇದರಿಂದ 'ಅಪಾರ್ಥಂ ನಿರ್ಮೂಲಂ'ಎನ್ನುವುದು ಅಧ್ಯಾಹೃತವಾದ 'ದೇಹಸಂಬಂಧಿತ್ವಾದಿ' ಎನ್ನುವುದಕ್ಕೆ ವಿಶೇಷಣ, 'ವಿಶ್ವಮೂಲಂ' ಎನ್ನುವುದು ಅಧ್ಯಾಹೃತವಾದ 'ಬ್ರಹ್ಮ'ಎನ್ನುವುದಕ್ಕೆ ವಿಶೇಷಣ ಎಂದು ಹೇಳಿದಂತಾಯಿತು.)

ಮಧ್ಯಸ್ಥನಾದರೆ ಆಗಲಿ ಮುಂದೇನು ಎಂದರೆ ಹೇಳುವರು–

**ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇಃ ಪರಂ ಗತಃ ।**
**ತಾವುಭೌ ಸುಖಮೇಧೇತೇ ಕ್ಲಿಶ್ಯತ್ಯಂತರಿತೋ ಜನಃ ॥೧೭॥**

ಯಃ=ಯಾವನು, ಮೂಢತಮಃ=ಸರ್ವಥಾ ಬ್ರಹ್ಮಜ್ಞಾನವಿಲ್ಲದವನೋ, ಚ= ಮತ್ತು ಯಃ=ಯಾವನು ಬುದ್ಧೇಃ ಪರಂಗತಃ=ಶಾಸ್ತ್ರಜನ್ಯವಾದ ಜ್ಞಾನದ ತುದಿಯನ್ನು ಹೊಂದಿರುವನೋ, ಅಂದರೆ ಬ್ರಹ್ಮವಿಷಯಕ ನಿಶ್ಚಯವುಳ್ಳವನೋ ತೌ ಉಭೌ=ಅವರಿಬ್ಬರೂ ಸುಖಂ ಏಧೇತೆ=ಸುಖವಾಗಿ ಬೆಳೆಯುವರು. ಅಂತರಿತಃ ಜನಃ ಕ್ಲಿಶ್ಯತಿ=ಮಧ್ಯದಲ್ಲಿರುವವನು, ಅಂದರೆ ಬ್ರಹ್ಮವಿಷಯಕ ಸಂಶಯವುಳ್ಳವನು ಕಷ್ಟಪಡುವನು. ನಾನೂ ಸಹ ಮಧ್ಯಸ್ಥನಾದುದರಿಂದ ದುಃಖಿತನಾಗಿದ್ದೇನೆ ಎಂದು ಭಾವ. ॥೧೭॥

ಈ ಸಂಶಯನಿವಾರಣೆಗೆ ,ನನಗೆ ಮತ್ತೆ ನಿಮ್ಮ ಉಪದೇಶದ ಅಪೇಕ್ಷೆ ಇಲ್ಲ. 'ಸೇಯಂ ಭಗವತೋ ಮಾಯಾ' ಎಂದು ಹಿಂದೆ ಹೇಳಿದ ನಿಮ್ಮ ಉಪದೇಶದ ವಿಮರ್ಶೆಯಿಂದ ನಾನೇ ಪರಿಹರಿಸಿಕೊಳ್ಳುವೆನೆಂದು ಹೇಳುವನು-

**ಅರ್ಥಾಭಾವಂ ವಿನಿಶ್ಚಿತ್ಯ ಪ್ರತೀತಸ್ಯಾಪ್ಯನಾತ್ಮನಃ ।**
**ತಾಂ ಚಾಪಿ ಯುಷ್ಮಚ್ಚರಣಸೇವಯಾಽಹಂ ಪರಾಣುದೇ ॥೧೮॥**

ಅಪಿ ಯದ್ಯಪಿ=ಈ ರೀತಿ ಸಂಶಯ ಬಂದಿದೆ, ತಥಾಪಿ=ಆದರೂ ಪ್ರತೀತಸ್ಯ= ಅವತಾರಗಳಲ್ಲಿ ಪ್ರತ್ಯಕ್ಷ ಕಾಣಿಸಿದ ಅನಾತ್ಮನಃ=ಜಡದೇಹದಿಂದ ಅರ್ಥಾಭಾವಂ= ಪುರುಷಾರ್ಥವಿಲ್ಲವೆಂಬುದನ್ನು ಮತ್ತು ಭ್ರಾಂತಿ ಮೊದಲಾದ ಸಂಸಾರಕಾರಣವಿಲ್ಲ-ವೆಂದೂ ಯುಷ್ಮಚ್ಚರಣಸೇವಯಾ=ನಿಮ್ಮ ಪಾದಸೇವೆಯಿಂದ ಪ್ರಸನ್ನರಾದ ನಿಮ್ಮ ಉಪದೇಶದ ವಿಷಯವನ್ನು ಆಲೋಚಿಸಿ ವಿನಿಶ್ಚಿತ್ಯ=ಇದು ಹೀಗೆಯೇ ಎಂದು ನಿಶ್ಚಯಿಸಿಕೊಂಡು ತಾಂ ಚ=ಜಾತ್ಯಾ ಪ್ರಬಲವಾದ ಪ್ರತ್ಯಕ್ಷ ಪ್ರತೀತಿಯನ್ನೂ ಅಹಂ= ನಾನು ಪರಾಣುದೇ=ದುರ್ಬಲವಾದುದರಿಂದ ಸ್ವಾರ್ಥಸಾಧನ ಮಾಡದಂತೆ ಮಾಡುವೆನು. ಸಂಶಯವನ್ನು ಹುಟ್ಟಿಸದೇ ಇದ್ದಂತೆ ಮಾಡುವೆನು ಎಂದು ಭಾವ.

ಇದರ ಅಭಿಪ್ರಾಯ ಹೀಗೆ- ಭಗವದವತಾರಗಳಲ್ಲಿ ಜನರಿಗೆ ಪ್ರತ್ಯಕ್ಷದಿಂದ ಜಡದೇಹಾದಿಗಳು ಕಾಣುವುದು ನಿಜ, ಆದರೆ ಅದು ಉಪಜೀವ್ಯವಾದ ಆಗಮಾರ್ಥಸಂಗ್ರಹರೂಪ ನಿಮ್ಮ ವಾಕ್ಯಕ್ಕೆ ವಿರುದ್ಧವಾಗಿದೆ. ಅಂದರೆ ''ದೇವಕ್ಯಾಂ ದೇವರೂಪಿಣ್ಯಾಂ ವಿಷ್ಣುಃ ಸರ್ವಗುಹಾಶಯಃ । ಆವಿರಾಸೀತ್...'' ಮುಂತಾದ ಆಗಮದಿಂದ, 'ನಿರನಿಷ್ಟೋ ನಿರವದ್ಯಃ' ಎಂಬ ಆಗಮಸಿದ್ಧ ವಿಷ್ಣುತ್ವವನ್ನು ಕೃಷ್ಣನಲ್ಲಿ ತಿಳಿದಿದ್ದರೆ ಮಾತ್ರ, ಕೃಷ್ಣನು ದೋಷೀ ಎಂಬ ಪ್ರತ್ಯಕ್ಷವು, ವಿಷ್ಣುವಿಗೆ ದೋಷ ತಿಳಿಸುವುದು ಎಂದು ಹೇಳಬಹುದು. ಇಲ್ಲವಾದರೆ (ಕೃಷ್ಣನಲ್ಲಿ ವಿಷ್ಣುತ್ವವನ್ನು ತಿಳಿಯದಿದ್ದರೆ) ಕೃಷ್ಣನು ದೋಷೀ ಎಂದಾಗ ಯಾವನೋ ಒಬ್ಬ ದೋಷಿಯೆಂದಾ-ಗುವುದೇ ಹೊರತು, ವಿಷ್ಣು ದೋಷೀ ಎಂದಾಗದು. ಕಾರಣ 'ಕೃಷ್ಣನು ದೋಷೀ ಎಂಬ ಪ್ರತ್ಯಕ್ಷವು' ವಿಷ್ಣುವಿಗೆ ದೋಷ ತಿಳಿಸಬೇಕಾದರೆ,ಕೃಷ್ಣನಲ್ಲಿ ವಿಷ್ಣುತ್ವಜ್ಞಾನವಿರ-ಬೇಕು,ಆ ವಿಷ್ಣುತ್ವ ಎಂಬುದರ ಜ್ಞಾನವಾದದ್ದೇ 'ನಿರನಿಷ್ಟೋ ನಿರವದ್ಯಃ' ಎಂಬ ಆಗಮದಿಂದ. ಆದ್ದರಿಂದ ಈ ಆಗಮವು ದೋಷವನ್ನು ಗ್ರಹಿಸುವ ಪ್ರತ್ಯಕ್ಷಕ್ಕೆ ಉಪಜೀವ್ಯವಾಗಿದೆ. ಉಪಜೀವ್ಯವಾದ 'ನಿರನಿಷ್ಟೋ ನಿರವದ್ಯಃ' ಎಂಬ ಆಗಮವಾದರೋ ವಿಷ್ಣುವಿಗೆ ನಿರ್ದೋಷತ್ವವನ್ನು ಹೇಳುತ್ತದೆ. ಅಂದಮೇಲೆ ಅದರ ವಿರುದ್ಧವಾಗಿ, ಅದನ್ನು ಉಪಜೀವಿಸುವ ಪ್ರತ್ಯಕ್ಷವು ವಿಷ್ಣುವಿಗೆ ದೋಷವನ್ನು ಹೇಗೆತಿಳಿಸೀತು? ತಿಳಿಸಲಾರದು. ಇದರ ಸಾರಾಂಶವೇ ನಿಮ್ಮ ಸೇಯಂ ಎಂಬ

ವಾಕ್ಯವಾದ್ದರಿಂದ, ತನಗೆ ಉಪಜೀವ್ಯವಾದ ಆಗಮಸಂವಾದಿಯಾದ ನಿಮ್ಮ ಮಾತುಗಳ ಅರ್ಥವನ್ನು ಪರ್ಯಾಲೋಚಿಸಿದಾಗ, ದೋಷವನ್ನು ಗ್ರಹಿಸುವ ಪ್ರತ್ಯಕ್ಷವು, ವಿರುದ್ಧವಾದುದರಿಂದ ಸ್ವಾರ್ಥಸಾಧಕವಾಗಲಾರದು. ಕಾರಣ ತನ್ಮೂಲಕ ಸಂಶವೂ ನಿಲ್ಲಲಾರದು, ಎಂದು ಭಾವ. ॥೧೮॥

ಶ್ರೀಹರಿಚರಣಾರವಿಂದಸೇವೆಯೇ ಪುರುಷಾರ್ಥಸಾಧನವಾದ್ದರಿಂದ ಅಪೇಕ್ಷಿಸ-ಬೇಕು. ನಮ್ಮ ಚರಣಸೇವೆಯಿಂದೇನು ಪ್ರಯೋಜನ? ಎಂದರೆ ಹೇಳುವರು -

**ಯತ್ಸೇವಯಾ ಭಗವತಃ ಕೂಟಸ್ಥಸ್ಯ ಮಧುದ್ವಿಷಃ ।**
**ರತಿರಾಸೋ ಭವೇತ್ತೀವ್ರಃ ಪಾದಯೋರ್ವ್ಯಸನಾರ್ದನಃ ॥೧೯॥**

ಯತ್ಸೇವಯಾ=ಯಾವ ನಿಮ್ಮ ಸೇವೆಯಿಂದ ಕೂಟಸ್ಥಸ್ಯ=ನಿರ್ವಿಕಾರನಾದ ಮಧುದ್ವಿಷಃ=ಮಧುಮೊದಲಾದ ಎಲ್ಲ ದೈತ್ಯನಾಶಕನಾದ ಭಗವತಃ=ಪರಮಾತ್ಮನ ಪಾದಯೋಃ=ಪಾದಗಳಲ್ಲಿ ವ್ಯಸನಾರ್ದನಃ=ಸಂಸಾರದುಃಖನಾಶಕವಾದ ತೀವ್ರಃ= ದೃಢವಾದ, ರತಿರಾಸಃ=ಭಕ್ತಿಯೆಂಬ ಉತ್ಸವವು, ಭವೇತ್=ಉಂಟಾಗುವುದು. ಅಂದರೆ ನಿಮ್ಮ ಚರಣಸೇವೆಯು ಶ್ರೀಹರಿಯ ಚರಣ ಸೇವೆಗೆ ಸಾಧನವೆಂದು ಭಾವ. ॥೧೯॥

ಹಾಗಾದರೆ ಎಲ್ಲರೂ ನಿಮ್ಮಂಥ ಜ್ಞಾನಿಗಳ ಸೇವೆ ಮಾಡಿ ಏಕೆ ಸಂಸಾರವನ್ನು ಕಳೆದುಕೊಳ್ಳುವುದಿಲ್ಲ? ಎಂದರೆ ಪೂರ್ವಾರ್ಜಿತ ಪುಣ್ಯವಿಲ್ಲದೇ ನಿಮ್ಮಂಥವರ ಸೇವೆ ಸಿಗಲಾರದು ಎಂದು ಹೇಳುವರು -

**ದುರಾಪಾ ಹ್ಯಲ್ಪತಪಸಃ ಸೇವಾ ವೈಕುಂಠವರ್ತ್ಮಸು ।**
**ಯತ್ರೋಪಗೀಯತೇ ನಿತ್ಯಂ ದೇವದೇವೋ ಜನಾರ್ದನಃ ॥೨೦॥**

ಯತ್ರ=ಯಾವ ಮಹಾತ್ಮರಲ್ಲಿ ದೇವದೇವಃ=ದೇವೋತ್ತಮನಾದ, ಜನಾರ್ದನಃ= ಜನನ-ಮರಣರೂಪ ಸಂಸಾರವನ್ನು ಮರ್ದಿಸುವ ಭಗವಂತನು ನಿತ್ಯಂ=ಯಾವಾಗಲೂ ಉಪಗೀಯತೇ=ಗಾನಮಾಡಲ್ಪಡುವನೋ ಅಂಥ ವೈಕುಂಠವರ್ತ್ಮಸು= ವೈಕುಂಠಲೋಕಕ್ಕೆ ದಾರಿಯಂತಿರುವ ಮಹಾತ್ಮರಲ್ಲಿ ಸೇವಾ=ಸೇವೆಯು ಅಲ್ಪತಪಸಃ=ಸ್ವಲ್ಪ ಪುಣ್ಯವುಳ್ಳವರಿಗೆ ದುರಾಪಾ=ದೊರೆಯಲಾರದು. ಆದ್ದರಿಂದ ಪೂರ್ವ ಪುಣ್ಯವುಳ್ಳ ಕೆಲವರೇ ನಿಮ್ಮಂಥವರ ಸೇವೆ ಮಾಡಿ ಭಗವದನುಗ್ರಹದಿಂದ ಸಂಸಾರಸಾಗರವನ್ನು ದಾಟುವರು ಎಂದು ಭಾವ.

ಇಲ್ಲಿ ತತ್ವನಿಶ್ಚಯವುಳ್ಳ ವಿದುರನು 'ಉಭಯತ್ರ ಮನೋ ಧಾವತಿ' ಎಂದು ಸಂಶಯ ಬರುವದು ಎಂದು ಹೇಳಿದುದು, ಮುಂದೆ 'ಬ್ರೂಹಿ ಮೇಽಜ್ಞಸ್ಯ' ಎಂದು

ಅಜ್ಞಾನವನ್ನು ಹೇಳುವುದು ಹೇಗೆ? ಸುಳ್ಳು ಹೇಳಿದರೆ ದೋಷ ಬರುವುದಿಲ್ಲವೇ? ಎಂಬ ಶಂಕೆಯನ್ನು ಪ್ರಮಾಣದಿಂದಲೇ ಪರಿಹರಿಸುವರು ಶ್ರೀಮದಾಚಾರ್ಯರು.

**ಆತ್ಮಸ್ಥು ಗುಣಾಭಾವಂ ವದತೋ ನ ತ್ವಸತ್ಯತಾ ।**
**ಅಪೃಷ್ಟಸ್ಯ ದಮಾರ್ಥಂ ಚ ಗುಣಾಯೈವ ಭವತ್ಯಪಿ ॥ ಇತಿ ವ್ಯಾಸಸ್ಮೃತೇಃ ।**

**ವಿದ್ಯಮಾನಮಪಿ ಅನುಭವಂ ಅನ್ಯಥಾ ವದತಿ ವಿದುರಃ ।**
**ದ್ರೋಣದ್ರೌಣಕೃಪಾಃ ಪಾರ್ಥಾ ಭೀಷ್ಮೋ ವಿದುರಸಂಜಯೌ ।**
**ಯೇ ಚಾನ್ಯೇ ತತ್ರ ದೇವಾಂಶಾಃ ಸಮ್ಯಕ್ ತತ್ತ್ವಾಪರೋಕ್ಷಿಣಃ ॥**

**ಇತಿ ಸ್ಕಾಂದೇ ।**

ತಮ್ಮಲ್ಲಿ ಜ್ಞಾನಾದಿಗುಣಗಳಿದ್ದರೂ ಇಲ್ಲವೆಂದು ದೇವತೆಗಳು ಹೇಳಿದರೂ, ದೇವತೆಗಳಿಗೆ ಅಸತ್ಯವನ್ನು ಹೇಳುವುದರಿಂದ ಬರುವ ದೋಷ ಬರುವುದಿಲ್ಲ. ಏಕೆಂದರೆ ಅದು ಮುಂದೆ ಮೈತ್ರೇಯರು ಹೇಳುವ ಪ್ರಮೇಯಕ್ಕೆ ಅಪೃಷ್ಟತ್ವವನ್ನು ನಾಶ ಮಾಡಲು ಕಾರಣವಾಗುವುದು. ಆದರಿಂದ ಲೋಕೋಪಕಾರವಾಗುವುದು. ಅಂದರೆ 'ನಾಪೃಷ್ಟಃ ಕಸ್ಯಚಿದ್ ಬ್ರೂಯಾತ್' ಎಂದಿರುವುದರಿಂದ ಇವನು ಪ್ರಶ್ನೆ ಕೇಳದೇ ಅವರು ಉತ್ತರ ಹೇಳುವಂತಿಲ್ಲ. ಹೇಳದೆ ಹೋದರೆ ಜಗತ್ತಿಗೆ ಜ್ಞಾನವಾಗುವುದಿಲ್ಲ.ಹೇಳಿದರೆ ಕೇಳದೇ ಹೇಳಿದ ದೋಷ ಬರುವದು. ಕಾರಣ ಲೋಕೋಪಕಾರಕವಾದ ಪ್ರಶ್ನವಿಷಯತ್ವಲಾಭಕ್ಕಾಗಿ ಹೇಳಿದ ಸುಳ್ಳು ದೋಷಾ-ಪಾದಕವಲ್ಲ ಎಂದು ಭಾವ. ಅಷ್ಟೇ ಅಲ್ಲ ತಿಳಿದಿದ್ದರೂ ಪ್ರಶ್ನೆ ಮಾಡುವುದು ಬಂದಿರುವ ಜ್ಞಾನದ ದೃಢತೆ ಮತ್ತು ವಿಶೇಷಜ್ಞಾನರೂಪ ಗುಣಗಳಿಗೆ ಕಾರಣವಾಗುವುದು. ಎಂದು ವ್ಯಾಸಸ್ಮೃತಿಯಲ್ಲಿದೆ. ಇಲ್ಲಿ ವಿದುರನು ತನಗಿರುವ ತತ್ತ್ವನಿಶ್ಚಯವನ್ನು ಸಂಶಯರೂಪವೆಂದೂ ಅಜ್ಞಾನರೂಪವೆಂದೂ ಹೇಳುವನು.

ದ್ರೋಣಾಚಾರ್ಯ, ಅಶ್ವತ್ಥಾಮಾಚಾರ್ಯ, ಕೃಪಾಚಾರ್ಯ, ಅರ್ಜುನ, ಭೀಷ್ಮಾಚಾರ್ಯ, ವಿದುರ, ಸಂಜಯ, ಇನ್ನುಳಿದ ಅಭಿಮನ್ಯು ಮೊದಲಾದವರು ದೇವಾಂಶರಾದುದರಿಂದ ಚೆನ್ನಾಗಿತತ್ತ್ವಜ್ಞಾನವುಳ್ಳವರು. ಎಂದು ಸ್ಕಾಂದಪುರಾಣ-ದಲ್ಲಿ ಹೇಳಿದೆ. ॥೨೦॥

ಮತ್ತೊಂದು ಪ್ರಮೇಯವನ್ನು ಕೇಳಲು ಹಿಂದೆ ಹೇಳಿದ್ದನ್ನು ಅನುವಾದ ಮಾಡುವನು –

**ಸೃಷ್ಟ್ವಾಗ್ರೇ ಮಹದಾದೀನಿ ಸವಿಕಾರಾಣ್ಯನುಕ್ರಮಾತ್ ।**
**ತೇಭ್ಯೋ ವಿರಾಜಮುದ್ಧೃತ್ಯ ತಮನು ಪ್ರಾವಿಶದ್ ವಿಭುಃ ॥೨೧॥**

ವಿಭುಃ=ವ್ಯಾಪ್ತನಾದ ಪರಮಾತ್ಮನು, ಅಗ್ರೇ=ಪ್ರಪಂಚದ ಪೂರ್ವದಲ್ಲಿ ಸವಿಕಾರಾಣಿ=ಬ್ರಹ್ಮಾಂಡವೆಂಬ ಕಾರ್ಯಸಹಿತವಾದ ಮಹದಾದೀನಿ=ಮಹತ್ತತ್ವ ಮೊದಲಾದವನ್ನು ಸೃಷ್ಟ್ವಾ=ಸೃಷ್ಟಿಮಾಡಿ ತೇಭ್ಯಃ=ತತ್ವಗಳ ಅಂಶಗಳಿಂದಲೇ ವಿರಾಜಂ ಉದ್ಧೃತ್ಯ=ಬ್ರಹ್ಮಾಂಡಾಂತರ್ಗತ ಬ್ರಹ್ಮದೇಹವನ್ನು ಸೃಷ್ಟಿಸಿ ತಂ=ಆ ದೇಹವನ್ನು ಅನುಪ್ರಾವಿಶತ್=ಪ್ರವೇಶ ಮಾಡಿದನು. ತತ್ವಪ್ರವೇಶಾನಂತರ ಬ್ರಹ್ಮಪ್ರವೇಶವೆಂದು ತಿಳಿಸಲು 'ಅನು' ಎಂದಿರುವರು. ಇಲ್ಲಿ ವಿಕಾರಶಬ್ದದಿಂದ ಬ್ರಹ್ಮಾಂಡವನ್ನು ಹೇಳಿದ್ದರಿಂದ ವಿರಾಜ ಎಂಬುದಕ್ಕೆ ವಿವಕ್ಷಿತ ಅರ್ಥ ಹೇಳುವರು -

**ವಿರಾಜಂ ಬ್ರಹ್ಮಾಣಂ ।**

ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ಬ್ರಹ್ಮಾಣಂ ಪ್ರಾವಿಶದ್ವಿಷ್ಣುಃ ಸಹಸ್ರಾಕ್ಷಃ ಸಹಸ್ರಪಾತ್ । ಇತಿ ಬ್ರಾಹ್ಮೇ ।**
**ಅನುಪ್ರವಿಶ್ಯ ಬ್ರಹ್ಮಾಣಂ ಪ್ರಾಣಂ ದಶವಿಧಂ ತಥಾ ।**
**ಇಂದ್ರಿಯಾಣೀಂದ್ರಿಯಾರ್ಥಾಂಶ್ಚ ವರ್ಣಾಂಶ್ಚೈವಾಸೃಜದ್ಧರಿಃ ॥**
**ಇತಿ ಗಾರುಡೇ ।**

ಅನಂತಕಣ್ಣುಗಳು, ಅನಂತಪಾದಗಳುಳ್ಳ ವಿಷ್ಣುವು ಬ್ರಹ್ಮದೇವರನ್ನು ಪ್ರವೇಶ ಮಾಡಿದನು. ಎಂದು ಬ್ರಾಹ್ಮಪುರಾಣದಲ್ಲಿದೆ. ಬ್ರಹ್ಮದೇವರಲ್ಲಿ ಪ್ರವೇಶ ಮಾಡಿ ಹತ್ತುವಿಧ ಪ್ರಾಣವನ್ನು, ಇಂದ್ರಿಯಗಳನ್ನು, ವಿಷಯಗಳನ್ನು, ವರ್ಣಗಳನ್ನು ಸೃಷ್ಟಿಸಿದನು. ಎಂದು ಗರುಡ ಪುರಾಣದಲ್ಲಿದೆ ॥೨೧॥

ಪ್ರವಿಷ್ಟನಾದ ಭಗವಂತನ ಸ್ವರೂಪವನ್ನು ಹೇಳುವರು-

**ಯಮಾಹುರಾದ್ಯಂ ಪುರುಷಂ ಸಹಸ್ರಾಂಘ್ರ್ಯೂರುಬಾಹುಕಂ ।**
**ಯತ್ರ ವಿಶ್ವ ಇಮೇ ಲೋಕಾಃ ಸವಿಕಾಶಂ ಸಮಾಸತೇ ॥೨೨॥**

ಯಂ=ಯಾವನನ್ನು ಆದ್ಯಂ=ಸಕಲಜಗತ್ಕಾರಣನೆಂದೂ ಪುರುಷಂ=ಪೂರ್ಣ-ಷಡ್ಗುಣನೆಂದು ಸಹಸ್ರಾಂಘ್ರ್ಯೂರುಬಾಹುಕಂ=ಅನಂತ ಪಾದ, ತೊಡೆ, ಬಾಹು-ಗಳುಳ್ಳವನೆಂದು ಯತ್ರ=ಯಾವನಲ್ಲಿ ವಿಶ್ವೇ=ಎಲ್ಲ ಇಮೇ ಲೋಕಾಃ=ಈ ಎಲ್ಲ ಲೋಕಗಳು, ಸವಿಕಾಶಂ=ಅಸಂಕುಚಿತವಾಗಿ ಸಮಾಸತೇ=ಆಶ್ರಯಸಿಕೊಂಡಿವೆಯೋ, ॥

**ಯಸ್ಮಿನ್ ದಶವಿಧಪ್ರಾಣಾಃ ಸೇಂದ್ರಿಯಾರ್ಥೇಂದ್ರಿಯಸ್ತ್ರಿವೃತ್ ।**
**ತ್ವಯೇರಿತಾ ಯತೋ ವರ್ಣಾಸ್ತದ್ವಿಭೂತಿರ್ವದಸ್ವ ನಃ ॥೨೩॥**

ಯಸ್ಮಿನ್=ಯಾವ ಬ್ರಹ್ಮಾಂತರ್ಗತಪುರುಷನಲ್ಲಿ ದಶವಿಧಪ್ರಾಣಾಃ=ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಲ ದೇವದತ್ತ, ಧನಂಜಯ ಹೀಗೆ ಹತ್ತು ವಿಧ ಪ್ರಾಣಗಳು, ಸೇಂದ್ರಿಯಾರ್ಥೇಂದ್ರಿಯಃ=ಶಬ್ದ ಸ್ಪರ್ಶ, ರೂಪ, ರಸ, ಗಂಧಗಳೆಂಬ ಇಂದ್ರಿಯವಿಷಯಗಳಿಂದ ಮತ್ತು ಚಕ್ಷುರಾದಿ ಇಂದ್ರಿಯಗಳಿಂದಲೂ ಸಹಿತನಾದ ತ್ರಿವೃತ್=ಆಧ್ಯಾತ್ಮ,ಅಧಿದೈವ,ಅಧಿಭೂತ ಹೀಗೆ ಮೂರು ರೂಪಗಳನ್ನು ಸ್ವೀಕರಿಸುವನೆಂದು, (ಅಥವಾ ಓಜ, ಸಹಸ್, ಬಲಗಳುಳ್ಳವನೆಂದು)ಯತಃ=ಯಾವ ಬ್ರಹ್ಮಾಂತರ್ಯಾಮಿಪುರುಷನಿಂದ ವರ್ಣಾಃ= ವರ್ಣಾಭಿಮಾನಿಗಳು ಜನಿಸಿದರೆಂದು ತ್ವಯಾ=ನಿನ್ನಿಂದ ಈರಿತಾಃ=ಹೇಳಲ್ಪಟ್ಟರೋ ತದ್ವಿಭೂತಿಃ=ಆಬ್ರಹ್ಮಾಂತರ್ಯಾಮಿಯ ಐಶ್ವರ್ಯಗಳನ್ನೂ ಮಹಾತ್ಮ್ಯಗಳನ್ನು ನಃ ವದಸ್ವ=ನಮಗೆ ಹೇಳಿರಿ ॥೨೩॥

**ಯತ್ರ ಪುತ್ರೈಶ್ಚ ಪೌತ್ರೈಶ್ಚ ನಪ್ತೃಭಿಃ ಸಹ ಗೋತ್ರಜೈಃ ।**
**ಪ್ರಜಾ ವಿಚಿತ್ರಾಕೃತಯ ಆಸನ್ ಯಾಭಿರಿದಂ ತತಂ ॥೨೪॥**

ಪುತ್ರೈಃ=ಮಕ್ಕಳಿಂದ ಪೌತ್ರೈಃ=ಮೊಮ್ಮಕ್ಕಳಿಂದ ನಪ್ತೃಭಿಃ=ಮರಿಮಕ್ಕಳಿಂದ ಗೋತ್ರಜೈಃ ಸಹ=ತಮ್ಮ ಗೋತ್ರದಲ್ಲಿ ಹುಟ್ಟಿದವರಿಂದ ಸಹಿತರಾಗಿ ಯಾಭಿಃ=ಯಾವ ಪ್ರಜೆಗಳಿಂದ ಇದಂ=ಈ ಬ್ರಹ್ಮಾಂಡವು ತತಂ=ಪೂರಿತವಾಗಿದೆಯೋ, ಅಂತಹ ವಿಚಿತ್ರಾಕೃತಯಃ=ಪರಸ್ಪರ ವಿಲಕ್ಷಣವಾದ (ಭೇದಕವಾದ) ಆಕಾರಗಳಿಂದ ಕೂಡಿದ ಪ್ರಜಾಃ=ಪ್ರಜೆಗಳು ಯತ್ರ=ಯಾವನಿಂದ ಆಸನ್=ಹುಟ್ಟಿದವೋ, ಅಂಥವನ ಮಹಿಮೆ ಹೇಳು. ॥೨೪॥

**ಪ್ರಜಾಪತೀನಾಂ ಸ ಪತಿಃ ಚಕ್ಲೃಪೇ ಕಾನ್ ಪ್ರಜಾಪತೀನ್ ।**
**ಸರ್ಗಾಂಶ್ಚೈವಾನುಸರ್ಗಾಂಶ್ಚ ಮನೂನ್ ಮನ್ವಂತರಾಧಿಪಾನ್**
**॥೨೫॥**

ಪ್ರಜಾಪತೀನಾಂ=ಪ್ರಜೆಗಳನ್ನು ಸೃಷ್ಟಿಸುವರಿಗೆಲ್ಲ ಪತಿಃ=ಸ್ವಾಮಿಯಾದ ಸಃ= ಬ್ರಹ್ಮಾಂತರ್ಗತನಾದ ಶ್ರೀಹರಿಯು ಕಾನ್ ಪ್ರಜಾಪತೀನ್=ಯಾರನ್ನು ಪ್ರಜಾಪತಿಗಳನ್ನಾಗಿ ಚಕ್ಲೃಪೇ=ಮಾಡಿದನು?, ಕಾನ್=ಯಾರನ್ನು ಮನ್ವಂತರಾಧಿಪಾನ್= ಮನ್ವಂತರಗಳಿಗೆ ಅಧಿಪತಿಗಳಾದ ಮನೂನ್=ಮನುಗಳನ್ನಾಗಿ ಮಾಡಿದನು? ಎಂದು, ಮತ್ತು ಸರ್ಗಾನ್=ಒಂಬತ್ತು ವಿಧ ಸೃಷ್ಟಿಯನ್ನು ಚ=ಮತ್ತು ಅನುಸರ್ಗಾನ್=ಅನುಸರ್ಗದ ಪ್ರಭೇದವನ್ನೂ ಹೇಳಿರಿ. ॥೨೫॥

**ಏತೇಷಾಮಪಿ ವಂಶಾಂಶ್ಚ ವಂಶಾನುಚರಿತಾನಿ ಚ ।**
**ಉಪರ್ಯಧಶ್ಚ ಯೇ ಲೋಕಾಃ ಭೂಮೇರ್ಮಿತ್ರಾತ್ಮಜಾಸತೇ ।**
**ತೇಷಾಂ ಸಂಸ್ಥಾಂ ಪ್ರಮಾಣಂ ಚ ಭೂರ್ಲೋಕಸ್ಯ ಚ ವರ್ಣಯ ॥**

ಹೇ ಮಿತ್ರಾತ್ಮಜ=ಮೈತ್ರೇಯರೇ ! ಏತೇಷಾಂ=ಈ ಮನುಗಳ ವಂಶಾನ್=ವಂಶಗಳನ್ನು, ವಂಶಾನುಚರಿತಾನಿ ಚ=ವಂಶದವರ ಚರಿತ್ರೆಯನ್ನೂ, ಉಪರಿ=ಮೇಲೆ ಅಧಃ=ಕೆಳಗೆ ಯೇ ಲೋಕಾಃ=ಯಾವ ಲೋಕಗಳು ಆಸತೇ=ಇರುವವೋ ತೇಷಾಂ=ಅವುಗಳ, ಭೂಮೇಃ=ಭೂಮಿಯ, ಚ=ಮತ್ತು ಭೂಲೋಕಸ್ಯ=ಭೂಲೋಕದ ಸಂಸ್ಥಾಂ=ಆಕಾರವನ್ನು ಪ್ರಮಾಣಂ=ಅಳತೆಯನ್ನೂ ವರ್ಣಯ=ಹೇಳಿರಿ ॥೨೬॥

**ತಿರ್ಯಙ್‌ಮಾನುಷದೇವಾನಾಂ ಸರೀಸೃಪಪತತ್ರಿಣಾಂ ।**
**ವದ ನಃ ಸರ್ಗಸಂವ್ಯೂಹಂ ಗರ್ಭಸ್ವೇದದ್ವಿಜೋದ್ಭಿದಾಂ ॥೨೭॥**

ತಿರ್ಯಕ್=ಪಶುಗಳ ಮಾನುಷ=ಮನುಷ್ಯರ ದೇವಾನಾಂ=ದೇವತೆಗಳ ಸರೀಸೃಪ=ಸರ್ಪಗಳ ಪತತ್ರಿಣಾಂ=ಪಕ್ಷಿಗಳ ಗರ್ಭಸ್ವೇದದ್ವಿಜೋದ್ಭಿದಾಂ=ಗರ್ಭಜ=ಗರ್ಭದಿಂದ ಹುಟ್ಟುವ (ಜರಾಯುಜಗಳ), ಸ್ವೇದಜ=ಬೆವರಿನಿಂದ ಹುಟ್ಟುವ ತಗಣೆ ಮುಂತಾದವುಗಳ ದ್ವಿಜ=ಗರ್ಭ ಮತ್ತು ಅಂಡ ಎರಡರಿಂದ ಹುಟ್ಟುವ ಉದ್ಭಿದಾಂ=ಭೂಮಿಯನ್ನು ಭೇದಿಸಿ ಹುಟ್ಟುವ ಗಿಡ ಮುಂತಾದ ಸ್ಥಾವರಗಳ ಸರ್ಗಸಂವ್ಯೂಹಂ=ಸೃಷ್ಟಿ ವಿಸ್ತಾರವನ್ನು ನಃ ವದ=ನಮಗೆ ಹೇಳಿರಿ. ॥೨೭॥

**ಗುಣಾವತಾರೈರ್ವಿಶ್ವಸ್ಯ ಸರ್ಗಸ್ಥಿತ್ಯಪ್ಯಯಾತ್ಮನಃ ।**
**ಸೃಜತಃ ಶ್ರೀನಿವಾಸಸ್ಯ ವ್ಯಾಚಕ್ಷ್ವೋದಾರವಿಕ್ರಮಂ ॥೨೮॥**

ಗುಣಾವತಾರೈಃ=ಸತ್ವಾದಿಗುಣಪ್ರವರ್ತಕ ಅವತಾರಗಳಾದ ಬ್ರಹ್ಮ, ವಿಷ್ಣು ಮಹೇಶ್ವರ ಎಂಬ ಅವತಾರಗಳಿಂದ ಸರ್ಗಸ್ಥಿತ್ಯಪ್ಯಯಾತ್ಮನಃ=ಸೃಷ್ಟಿ ಪಾಲನ, ಸಂಹಾರಗಳಲ್ಲಿ ಮನಸ್ಸುಳ್ಳ, ವಿಶ್ವಸ್ಯ=ಜಗತ್ತನ್ನು ಸೃಜತಃ=ಸೃಷ್ಟಿಸುವ ಶ್ರೀನಿವಾಸಸ್ಯ=ಶ್ರೀಹರಿಯ ಉದಾರವಿಕ್ರಮಂ=ಉತ್ಕೃಷ್ಟವಾದ ಪರಾಕ್ರಮವನ್ನು ವ್ಯಾಚಕ್ಷ್ವ=ವಿಶೇಷವಾಗಿ ಹೇಳು. 'ವಿಶ್ವಸ್ಯ ಸೃಜತಃ' ಎಂಬುದಕ್ಕೆ ಜಗತ್ತಿನ ಉದ್ಧಾರಕ್ಕಾಗಿ ತನ್ನನ್ನು ಸೃಷ್ಟಿಸುವ ಹೀಗೂ ಅರ್ಥ. (ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ಎಂದ ಪ್ರಕಾರ.) ॥೨೮॥

**ವರ್ಣಾಶ್ರಮವಿಭಾಗಾಂಶ್ಚ ರೂಪಶೀಲಸ್ವಭಾವತಃ ॥೨೯॥**

**ಋಷೀಣಾಂ ಜನ್ಮಕರ್ಮಾಣಿ ವೇದಸ್ಯ ಚ ವಿಕರ್ಷಣಂ ।**
**ಯಜ್ಞಸ್ಯ ಚ ವಿತಾನಾನಿ ಯೋಗಸ್ಯ ಚ ಪಥಃ ಪ್ರಭೋ ॥೩೦॥**

ಪ್ರಭೋ=ಸಮರ್ಥರಾದ ಮೈತ್ರೇಯರೇ ! ರೂಪಶೀಲಸ್ವಭಾವತಃ=ರೂಪ= ಅಸಾಧಾರಣಧರ್ಮಗಳು ಶೀಲ=ಆಚಾರಗಳು ಸ್ವಭಾವತಃ=ಶಮದಮಾದಿ ಧರ್ಮಗಳು ಇವುಗಳಿಂದ ಸಹಿತವಾಗಿ ವರ್ಣಾಶ್ರಮವಿಭಾಗಾನ್=ಬ್ರಾಹ್ಮಣಾದಿ ವರ್ಣಗಳು, ಬ್ರಹ್ಮಚರ್ಯಾದ್ಯಾಶ್ರಮಗಳ ವಿಭಾಗಗಳನ್ನೂ ಋಷೀಣಾಂ=ಋಷಿಗಳ ಜನ್ಮಕರ್ಮಾಣಿ=ಉತ್ಪತ್ತಿ ಮತ್ತು ಕಾರ್ಯಗಳನ್ನು ವೇದಸ್ಯ=ವೇದಗಳ ವಿಕರ್ಷಣಂ= ವಿಭಾಗವನ್ನು ಯಜ್ಞಸ್ಯ ವಿತಾನಾನಿ=ಯಜ್ಞಗಳ ವಿಸ್ತಾರವನ್ನು ಯೋಗಸ್ಯ= ಅಷ್ಟಾಂಗಯೋಗದ ಪಥಃ=ಮಾರ್ಗವನ್ನೂ ನನಗೆ ಹೇಳಿರಿ.

**ವಿಕರ್ಷಣಂ ವಿಭಾಗಃ ।**

ಇಲ್ಲಿ ವಿಕರ್ಷಣಶಬ್ದಕ್ಕೆ ವಿಭಾಗವೆಂದರ್ಥ ॥೩೦॥

**ನೈಷ್ಕರ್ಮ್ಯಸ್ಯ ಚ ಸಾಂಖ್ಯಸ್ಯ ತಂತ್ರಂ ವಾ ಭಗವತ್ಕೃತಂ ।**
**ಪಾಷಂಡಪಥವೈಷಮ್ಯಂ ಪ್ರತಿಲೋಮನಿವೇಶನಂ ॥೩೧॥**

ನೈಷ್ಕರ್ಮ್ಯಸ್ಯ=ಮೋಕ್ಷಸಾಧನವಾದ ಸಾಂಖ್ಯಸ್ಯ=ಜ್ಞಾನಕ್ಕೆ ತಂತ್ರಂ= ಸಾಧನವಾದ ಭಗವತ್ಕೃತಂ=ಪರಮಾತ್ಮನಿಂದ ರಚಿತವಾದ ಶಾಸ್ತ್ರವನ್ನು ಪಾಷಂಡಪಥವೈಷಮ್ಯಂ= ಮೋಕ್ಷಮಾರ್ಗಕ್ಕೆ ಪಾಷಂಡಮತದ ವೈಲಕ್ಷಣವನ್ನೂ ಅಥವಾ ಪಾಷಂಡಮತ ವೈಲಕ್ಷಣ್ಯವನ್ನು ಪ್ರತಿಪಾದಿಸುವ ಶಾಸ್ತ್ರವನ್ನು ಪ್ರತಿಲೋಮನಿವೇಶನಂ=ಬ್ರಾಹ್ಮಣಾದಿ ಉತ್ತಮಕನ್ಯೆಯರು ಕ್ಷತ್ರಿಯಾದಿಗಳನ್ನು ವಿವಾಹ ಮಾಡಿಕೊಳ್ಳುವುದು,ಇವುಗಳನ್ನು ಹೇಳಿರಿ. ॥೩೧॥

**ಜೀವಸ್ಯ ಗತಯೋ ಯಾಶ್ಚ ಯಾವತೀರ್ಗುಣಕರ್ಮಜಾಃ ।**
**ಧರ್ಮಾರ್ಥಕಾಮಮೋಕ್ಷಾಣಾಂ ನಿಮಿತ್ತಾನ್ಯವಿರೋಧತಃ ॥೩೨॥**

ಜೀವಸ್ಯ=ಜೀವನಿಗೆ,ಗುಣಕರ್ಮಜಾಃ=ಸತ್ವಾದಿಗುಣಾನುಸಾರಿಯಾದ ಕರ್ಮ-ಗಳಿಂದ ಉಂಟಾಗುವ ಯಾವತೀಃ=ಎಷ್ಟು ಚ=ಮತ್ತು ಯಾಃ=ಯಾವ ಗತಯಃ= ಸ್ಥಾನಗಳು ದೊರೆಯುತ್ತವೆ. ಮತ್ತು ಧರ್ಮಾರ್ಥಕಾಮಮೋಕ್ಷಾಣಾಂ=ಧರ್ಮ, ಅರ್ಥ,ಕಾಮ,ಮೋಕ್ಷಗಳಿಗೆ ಅವಿರೋಧತಃ=ಪರಸ್ಪರ ವಿರೋಧವಿಲ್ಲದೆ ನಿಮಿತ್ತಾನಿ= ಸಾಧನಗಳನ್ನು ಹೇಳಿರಿ. ॥೩೨॥

**ವಾರ್ತಾಯಾ ದಂಡನೀತೇಶ್ಚ ಶ್ರುತಸ್ಯ ಚ ವಿಧಿಂ ಪೃಥಕ್ ।**
**ಶ್ರಾದ್ಧಸ್ಯ ಚ ವಿಧಿಂ ಬ್ರಹ್ಮನ್ ಪಿತೄಣಾಂ ಸರ್ವಮೇವ ಚ ॥೩೩॥**

ವಾರ್ತಾಯಾಃ=ವಾಣಿಜ್ಯ (ವ್ಯಾಪಾರ) ವನ್ನು ಮಾಡುವ ಉಪಾಯವನ್ನು ದಂಡನೀತೇಃ=ಅರ್ಥಶಾಸ್ತ್ರದಲ್ಲಿ ಹೇಳಿದ ರಾಜ್ಯಪಾಲನ ನೀತಿಯ ಉಪಾಯವನ್ನು, ಶ್ರುತಸ್ಯ=ಶ್ರುತಿಯಲ್ಲಿ ಹೇಳಿದ ಧರ್ಮದ ವಿಧಿಂ=ಪ್ರಕಾರವನ್ನು ಪಿತೃಣಾಂ ಶ್ರಾದ್ಧಸ್ಯ ಚ ವಿಧಿಂ=ಪಿತೃಗಳಿಗೆ ಮಾಡುವ ಶ್ರಾದ್ಧದ ರೀತಿಯನ್ನೂ ಪೃಥಕ್=ಪ್ರತ್ಯೇಕವಾಗಿ ಸರ್ವಮೇವ=ಎಲ್ಲವನ್ನೂ ಹೇಳಿರಿ. ॥೩೩॥

**ಗ್ರಹನಕ್ಷತ್ರತಾರಣಾಂ ಕಾಲಾವಯವಸಂಸ್ಥಿತಿಂ ।**
**ದಾನಸ್ಯ ತಪಸೋ ವಾಽಪಿ ಯಚ್ಚೇಷ್ಟಾಪೂರ್ತಯೋಃ ಫಲಂ॥೩೪॥**

ಗ್ರಹ=ಸೂರ್ಯ ಮೊದಲಾದವು ನಕ್ಷತ್ರ=ಅಶ್ವಿನೀ ಮೊದಲಾದವು ತಾರಾಣಾಂ=ಧ್ರುವ ಮುಂತಾದವು ಇವುಗಳ,ಸಂಸ್ಥಿತಿಂ=ಸರಿಯಾದ ಲಕ್ಷಣವನ್ನು,ಕಾಲಾವಯವ-ಸಂಸ್ಥಿತಿಂ=ಪರಮಾಣು ಮುಂತಾದವುಗಳ ಲಕ್ಷಣವನ್ನು,ಮತ್ತು ದಾನಸ್ಯ=ದಾನಕ್ಕೆ, ತಪಸಃ=ತಪಸ್ಸಿಗೆ, ಇಷ್ಟಾಪೂರ್ತಯೋಃ=ಯಾಗ ಮತ್ತು ತಟಕಾದಿ ನಿರ್ಮಾಣಕ್ಕೆ ಯತ್‌ಫಲಂ=ಏನು ಪುಣ್ಯವಿರುವದೋ ಅದನ್ನು ಹೇಳಿರಿ. ॥೩೪॥

**ಪ್ರವಾಸಸ್ಥಸ್ಯ ಯೋ ಧರ್ಮಃ ಯಶ್ಚ ಪುಂಸ ಉತಾಪದಿ ।**
**ಯೇನ ವಾ ಭಗವಾನ್ ತುಷ್ಯೇತ್ ಧರ್ಮಯೋನಿರ್ಜನಾರ್ದನಃ ॥**

ಪ್ರವಾಸಸ್ಥಸ್ಯ=ಪ್ರಯಾಣದಲ್ಲಿರುವವನಿಗೆ ಯೋ ಧರ್ಮಃ=ಯಾವುದು ಧರ್ಮವು, ಉತ=ಮತ್ತು ಆಪದಿ=ಆಪತ್ತಿನಲ್ಲಿ ಪುಂಸಃ=ಮನುಷ್ಯನಿಗೆ ಯೋ ಧರ್ಮಃ=ಯಾವುದು ಧರ್ಮವು, ಧರ್ಮಯೋನಿಃ=ಧರ್ಮಪ್ರವರ್ತಕನಾದ, ಧರ್ಮದಿಂದ ಕಾಣಿಸಿಕೊಳ್ಳುವ ಭಗವಾನ್ ಜನಾರ್ದನಃ=ಶ್ರೀಹರಿಯು, ಯೇನ ತುಷ್ಯೇತ್=ಯಾವುದರಿಂದ ಸಂತುಷ್ಟನಾಗುವನೋ ಅದನ್ನೂ ಹೇಳಿರಿ. ॥೩೫॥

**ಸಂಪ್ರಸೀದತಿ ವಾ ಯೇಷಾಮೇತದಾಖ್ಯಾಹಿ ಮೇಽನಘ ।**
**ಅನುವ್ರತಾನಾಂ ಶಿಷ್ಯಾಣಾಂ ಪುತ್ರಾಣಾಂ ಚ ದ್ವಿಜೋತ್ತಮ ॥೩೬॥**
**ಅನಾಪೃಷ್ಟಮಪಿ ಬ್ರೂಯುರ್ಗುರವೋ ದೀನವತ್ಸಲಾಃ ।**

ಹೇ ಅನಘ=ಪಾಪರಹಿತರಾದ ಮೈತ್ರೇಯರೇ ! ಯೇಷಾಂ=ಯಾರಿಗೆ ಸಂಪ್ರಸೀದತಿ=ಶ್ರೀಹರಿಯು ಪ್ರಸನ್ನನಾಗುವನು ಏತತ್=ಎಂಬುದನ್ನು ಮೇ=ನನಗೆ ಆಖ್ಯಾಹಿ=ಹೇಳಿರಿ. ಹೇ ದ್ವಿಜೋತ್ತಮ=ಮೈತ್ರೇಯರೇ ಅನುವ್ರತಾನಾಂ=ಅನುಸರಿಸುವ

**ವರ್ಣಾಶ್ರಮವಿಭಾಗಾಂಶ್ಚ ರೂಪಶೀಲಸ್ವಭಾವತಃ ॥೨೯॥**

**ಋಷೀಣಾಂ ಜನ್ಮಕರ್ಮಾಣಿ ವೇದಸ್ಯ ಚ ವಿಕರ್ಷಣಂ ।**
**ಯಜ್ಞಸ್ಯ ಚ ವಿತಾನಾನಿ ಯೋಗಸ್ಯ ಚ ಪಥಃ ಪ್ರಭೋ ॥೩೦॥**

ಪ್ರಭೋ=ಸಮರ್ಥರಾದ ಮೈತ್ರೇಯರೇ ! ರೂಪಶೀಲಸ್ವಭಾವತಃ=ರೂಪ= ಅಸಾಧಾರಣಧರ್ಮಗಳು ಶೀಲ=ಆಚಾರಗಳು ಸ್ವಭಾವತಃ=ಶಮದಮಾದಿ ಧರ್ಮಗಳು ಇವುಗಳಿಂದ ಸಹಿತವಾಗಿ ವರ್ಣಾಶ್ರಮವಿಭಾಗಾನ್=ಬ್ರಾಹ್ಮಣಾದಿ ವರ್ಣಗಳು, ಬ್ರಹ್ಮಚರ್ಯಾದ್ಯಾಶ್ರಮಗಳ ವಿಭಾಗಗಳನ್ನೂ ಋಷೀಣಾಂ=ಋಷಿಗಳ ಜನ್ಮಕರ್ಮಾಣಿ=ಉತ್ಪತ್ತಿ ಮತ್ತು ಕಾರ್ಯಗಳನ್ನು ವೇದಸ್ಯ=ವೇದಗಳ ವಿಕರ್ಷಣಂ= ವಿಭಾಗವನ್ನು ಯಜ್ಞಸ್ಯ ವಿತಾನಾನಿ=ಯಜ್ಞಗಳ ವಿಸ್ತಾರವನ್ನು ಯೋಗಸ್ಯ= ಅಷ್ಟಾಂಗಯೋಗದ ಪಥಃ=ಮಾರ್ಗವನ್ನೂ ನನಗೆ ಹೇಳಿರಿ.

**ವಿಕರ್ಷಣಂ ವಿಭಾಗಃ ।**

ಇಲ್ಲಿ ವಿಕರ್ಷಣಶಬ್ದಕ್ಕೆ ವಿಭಾಗವೆಂದರ್ಥ ॥೩೦॥

**ನೈಷ್ಕರ್ಮ್ಯಸ್ಯ ಚ ಸಾಂಖ್ಯಸ್ಯ ತಂತ್ರಂ ವಾ ಭಗವತ್ಕೃತಂ ।**
**ಪಾಷಂಡಪಥವೈಷಮ್ಯಂ ಪ್ರತಿಲೋಮನಿವೇಶನಂ ॥೩೧॥**

ನೈಷ್ಕರ್ಮ್ಯಸ್ಯ=ಮೋಕ್ಷಸಾಧನವಾದ ಸಾಂಖ್ಯಸ್ಯ=ಜ್ಞಾನಕ್ಕೆ ತಂತ್ರಂ= ಸಾಧನವಾದ ಭಗವತ್ಕೃತಂ=ಪರಮಾತ್ಮನಿಂದ ರಚಿತವಾದ ಶಾಸ್ತ್ರವನ್ನು ಪಾಷಂಡಪಥವೈಷಮ್ಯಂ= ಮೋಕ್ಷಮಾರ್ಗಕ್ಕೆ ಪಾಷಂಡಮತದ ವೈಲಕ್ಷಣವನ್ನೂ ಅಥವಾ ಪಾಷಂಡಮತ ವೈಲಕ್ಷಣ್ಯವನ್ನು ಪ್ರತಿಪಾದಿಸುವ ಶಾಸ್ತ್ರವನ್ನು ಪ್ರತಿಲೋಮನಿವೇಶನಂ=ಬ್ರಾಹ್ಮಣಾದಿ ಉತ್ತಮಕನ್ಯೆಯರು ಕ್ಷತ್ರಿಯಾದಿಗಳನ್ನು ವಿವಾಹ ಮಾಡಿಕೊಳ್ಳುವುದು,ಇವುಗಳನ್ನು ಹೇಳಿರಿ. ॥೩೧॥

**ಜೀವಸ್ಯ ಗತಯೋ ಯಾಶ್ಚ ಯಾವತೀರ್ಗುಣಕರ್ಮಜಾಃ ।**
**ಧರ್ಮಾರ್ಥಕಾಮಮೋಕ್ಷಾಣಾಂ ನಿಮಿತ್ತಾನ್ಯವಿರೋಧತಃ ॥೩೨॥**

ಜೀವಸ್ಯ=ಜೀವನಿಗೆ,ಗುಣಕರ್ಮಜಾಃ=ಸತ್ವಾದಿಗುಣಾನುಸಾರಿಯಾದ ಕರ್ಮ- ಗಳಿಂದ ಉಂಟಾಗುವ ಯಾವತೀಃ=ಎಷ್ಟು ಚ=ಮತ್ತು ಯಾಃ=ಯಾವ ಗತಯಃ= ಸ್ಥಾನಗಳು ದೊರೆಯುತ್ತವೆ. ಮತ್ತು ಧರ್ಮಾರ್ಥಕಾಮಮೋಕ್ಷಾಣಾಂ=ಧರ್ಮ, ಅರ್ಥ,ಕಾಮ,ಮೋಕ್ಷಗಳಿಗೆ ಅವಿರೋಧತಃ=ಪರಸ್ಪರ ವಿರೋಧವಿಲ್ಲದೆ ನಿಮಿತ್ತಾನಿ= ಸಾಧನಗಳನ್ನು ಹೇಳಿರಿ. ॥೩೨॥

**ವಾರ್ತಾಯಾ ದಂಡನೀತೇಶ್ಚ ಶ್ರುತಸ್ಯ ಚ ವಿಧಿಂ ಪೃಥಕ್ ।**
**ಶ್ರಾದ್ಧಸ್ಯ ಚ ವಿಧಿಂ ಬ್ರಹ್ಮನ್ ಪಿತೃಣಾಂ ಸರ್ವಮೇವ ಚ ॥೩೩॥**

ವಾರ್ತಾಯಾಃ=ವಾಣಿಜ್ಯ (ವ್ಯಾಪಾರ) ವನ್ನು ಮಾಡುವ ಉಪಾಯವನ್ನು ದಂಡನೀತೇಃ=ಅರ್ಥಶಾಸ್ತ್ರದಲ್ಲಿ ಹೇಳಿದ ರಾಜ್ಯಪಾಲನ ನೀತಿಯ ಉಪಾಯವನ್ನು ಶ್ರುತಸ್ಯ=ಶ್ರುತಿಯಲ್ಲಿ ಹೇಳಿದ ಧರ್ಮದ ವಿಧಿಂ=ಪ್ರಕಾರವನ್ನು ಪಿತೃಣಾಂ ಶ್ರಾದ್ಧಸ್ಯ ಚ ವಿಧಿಂ=ಪಿತೃಗಳಿಗೆ ಮಾಡುವ ಶ್ರಾದ್ಧದ ರೀತಿಯನ್ನೂ ಪೃಥಕ್=ಪ್ರತ್ಯೇಕವಾಗಿ ಸರ್ವಮೇವ=ಎಲ್ಲವನ್ನೂ ಹೇಳಿರಿ. ॥೩೩॥

**ಗ್ರಹನಕ್ಷತ್ರತಾರಣಾಂ ಕಾಲಾವಯವಸಂಸ್ಥಿತಿಂ ।**
**ದಾನಸ್ಯ ತಪಸೋ ವಾಽಪಿ ಯಚ್ಚೇಷ್ಟಾಪೂರ್ತಯೋಃ ಫಲಂ॥೩೪॥**

ಗ್ರಹ=ಸೂರ್ಯ ಮೊದಲಾದವು ನಕ್ಷತ್ರ=ಅಶ್ವಿನೀ ಮೊದಲಾದವು ತಾರಾಣಾಂ= ಧ್ರುವ ಮುಂತಾದವು ಇವುಗಳ,ಸಂಸ್ಥಿತಿಂ=ಸರಿಯಾದ ಲಕ್ಷಣವನ್ನು,ಕಾಲಾವಯವ-ಸಂಸ್ಥಿತಿಂ=ಪರಮಾಣು ಮುಂತಾದವುಗಳ ಲಕ್ಷಣವನ್ನು,ಮತ್ತು ದಾನಸ್ಯ=ದಾನಕ್ಕೆ, ತಪಸಃ=ತಪಸ್ಸಿಗೆ, ಇಷ್ಟಾಪೂರ್ತಯೋಃ=ಯಾಗ ಮತ್ತು ತಟಕಾದಿ ನಿರ್ಮಾಣಕ್ಕೆ ಯತ್‌ಫಲಂ=ಏನು ಪುಣ್ಯವಿರುವದೋ ಅದನ್ನು ಹೇಳಿರಿ. ॥೩೪॥

**ಪ್ರವಾಸಸ್ಥಸ್ಯ ಯೋ ಧರ್ಮಃ ಯಶ್ಚ ಪುಂಸ ಉತಾಪದಿ ।**
**ಯೇನ ವಾ ಭಗವಾನ್ ತುಷ್ಯೇತ್ ಧರ್ಮಯೋನಿರ್ಜನಾರ್ದನಃ ॥**

ಪ್ರವಾಸಸ್ಥಸ್ಯ=ಪ್ರಯಾಣದಲ್ಲಿರುವವನಿಗೆ ಯೋ ಧರ್ಮಃ=ಯಾವುದು ಧರ್ಮವು, ಉತ=ಮತ್ತು ಆಪದಿ=ಆಪತ್ತಿನಲ್ಲಿ ಪುಂಸಃ=ಮನುಷ್ಯನಿಗೆ ಯೋ ಧರ್ಮಃ=ಯಾವುದು ಧರ್ಮವು, ಧರ್ಮಯೋನಿಃ=ಧರ್ಮಪ್ರವರ್ತಕನಾದ, ಧರ್ಮದಿಂದ ಕಾಣಿಸಿಕೊಳ್ಳುವ ಭಗವಾನ್ ಜನಾರ್ದನಃ=ಶ್ರೀಹರಿಯು, ಯೇನ ತುಷ್ಯೇತ್=ಯಾವುದರಿಂದ ಸಂತುಷ್ಟನಾಗುವನೋ ಅದನ್ನೂ ಹೇಳಿರಿ. ॥೩೫॥

**ಸಂಪ್ರಸೀದತಿ ವಾ ಯೇಷಾಮೇತದಾಖ್ಯಾಹಿ ಮೇಽನಘ ।**
**ಅನುವ್ರತಾನಾಂ ಶಿಷ್ಯಾಣಾಂ ಪುತ್ರಾಣಾಂ ಚ ದ್ವಿಜೋತ್ತಮ ॥೩೬॥**
**ಅನಾಪೃಷ್ಟಮಪಿ ಬ್ರೂಯುರ್ಗುರವೋ ದೀನವತ್ಸಲಾಃ ।**

ಹೇ ಅನಘ=ಪಾಪರಹಿತರಾದ ಮೈತ್ರೇಯರೇ ! ಯೇಷಾಂ=ಯಾರಿಗೆ ಸಂಪ್ರಸೀದತಿ=ಶ್ರೀಹರಿಯು ಪ್ರಸನ್ನನಾಗುವನು ಏತತ್=ಎಂಬುದನ್ನು ಮೇ=ನನಗೆ ಆಖ್ಯಾಹಿ=ಹೇಳಿರಿ. ಹೇ ದ್ವಿಜೋತ್ತಮ=ಮೈತ್ರೇಯರೇ ಅನುವ್ರತಾನಾಂ=ಅನುಸರಿಸುವ

ಶಿಷ್ಯಾಣಾಂ=ಶಿಷ್ಯರಿಗೆ ಪುತ್ರಾಣಾಂ=ಮಕ್ಕಳಿಗೆ ಅನಾಪೃಷ್ಟಂ ಅಪಿ=ಕೇಳದೆ ಇದ್ದುದನ್ನೂ ದೀನವತ್ಸಲಾಃ=ದುಃಖಿತರ ಮೇಲೆ ಕರುಣೆಯಿರುವ ಗುರವಃ=ಗುರುಗಳು ಬ್ರೂಯುಃ=ಹೇಳುವರು.ಆದ್ದರಿಂದ ನಿಮ್ಮ ಶಿಷ್ಯನಾದ ನನಗೆ ಉಪದೇಶವನ್ನು ಮಾಡಬೇಕೆಂದು ಭಾವ. ॥೩೭॥

**ತತ್ತ್ವಾನಾಂ ಭಗವಂಸ್ತೇಷಾಂ ಕತಿಧಾ ಪ್ರತಿಸಂಕ್ರಮಃ ॥೩೭॥**
**ತತ್ರೇಮಂ ಕ ಉಪಾಸೀರನ್ ಕ ಉ ಸ್ವಿದನುಶೇರತೇ ।**
**ಪುರುಷಸ್ಯ ಚ ಸಂಸ್ಥಾನಂ ಸ್ವರೂಪಂ ವಾಽಪರಸ್ಯ ಚ ॥**
**ಜ್ಞಾನಂ ಚ ನೈಗಮಂ ಯತ್ ತದ್ ಗುರುಶಿಷ್ಯಪ್ರಯೋಜನಂ ॥೩೮॥**

ಹೇ ಭಗವಾನ್=ಪೂಜ್ಯರೇ ! ತತ್ತ್ವಾನಾಂ=ತತ್ತ್ವಗಳ ಪ್ರತಿಸಂಕ್ರಮಃ=ಪ್ರಲಯವು ಕತಿಧಾ=ಎಷ್ಟು ರೀತಿಯಾಗಿರುವುದು. ತತ್ರ=ಪ್ರಳಯದಲ್ಲಿ ಇಮಂ=ಶ್ರೀಹರಿಯನ್ನು ಕಃ=ಯಾರು ಉಪಾಸೀರನ್=ಉಪಾಸನೆ ಮಾಡುವರು. ಕಃ ಸ್ವಿತ್ ಅನುಶೇರತೇ= ಯಾರು ಮಲಗುವರು. ಮತ್ತು ಪುರುಷಸ್ಯ=ಪೂರ್ಣಷಡ್ಗುಣ ಪರಮಾತ್ಮನ ಸಂಸ್ಥಾನಂ=ವ್ಯಕ್ತಿರೂಪದಿಂದ ಇರುವಿಕೆಯನ್ನು, ಅಪರಸ್ಯ=ಅಸ್ವತಂತ್ರ ತತ್ತ್ವಗಳ ಸ್ವರೂಪಸ್ಥಿತಿಯನ್ನು, ಗುರುಶಿಷ್ಯಪ್ರಯೋಜನಂ=ಗುರುಶಿಷ್ಯರಿಗೆ ಪ್ರಯೋಜನಕಾರಿ- ಯಾದ ನೈಗಮಂ=ವೇದಜನ್ಯವಾದ ಯತ್ ಜ್ಞಾನಂ=ಯಾವ ಜ್ಞಾನವಿದೆಯೋ ತತ್=ಅದನ್ನೂ ಹೇಳಿರಿ. ಪರಸ್ಯ=ಮುಕ್ತನ ಸ್ವರೂಪವನ್ನು ಹೇಳಿರಿ ಹೀಗೂ ಅರ್ಥ. ॥

**ನಿಮಿತ್ತಾನಿ ಚ ತಸ್ಯೇಹ ಪ್ರೋಕ್ತಾನ್ಯನಘ ಸೂರಿಭಿಃ ।**
**ಸ್ವತೋ ಜ್ಞಾನಂ ಕುತಃ ಪುಂಸಾಂ ಭಕ್ತಿರ್ವೈರಾಗ್ಯಮೇವ ವಾ ॥೩೯॥**

ಇಹ=ವೇದದಲ್ಲಿ ತಸ್ಯ=ಜ್ಞಾನಕ್ಕೆ ಯಾನಿ=ಯಾವ ನಿಮಿತ್ತಾನಿ=ಕಾರಣಗಳು ಸೂರಿಭಿಃ=ಜ್ಞಾನಿಗಳಿಂದ ಪ್ರೋಕ್ತಾನಿ=ಹೇಳಲ್ಪಟ್ಟಿವೆಯೋ ತಾನಿ=ಅವುಗಳನ್ನು ಹೇಳಿರಿ. ಪುಂಸಾಂ=ಜನರಿಗೆ ಸ್ವತಃ=ಉಪದೇಶವಿಲ್ಲದೇ ಜ್ಞಾನಂ ಕುತಃ=ಜ್ಞಾನ ಹೇಗೆ ಬಂದೀತು? ಬರಲಾರದು. ಭಕ್ತಿಃ=ಭಕ್ತಿಯಾಗಲಿ ವೈರಾಗ್ಯಂ=ವೈರಾಗ್ಯವಾಗಲಿ ಕುತಃ= ಎಲ್ಲಿಯದು? ಕಾರಣ ಅವಶ್ಯ ಹೇಳಿರಿ. ॥೩೯॥

**ಏತಾನ್ ಮೇ ಪೃಚ್ಛತಃ ಪ್ರಶ್ನಾನ್ ಹರೇಃ ಕರ್ಮ ವಿವಿತ್ಸಯಾ ।**
**ಬ್ರೂಹಿ ಮೇಽಂಧಸ್ಯ ಮಿತ್ರತ್ವಾದಜಯಾ ನಷ್ಟಚಕ್ಷುಷಃ ॥೪೦॥**

ಹರೇಃ=ಪರಮಾತ್ಮನ ಕರ್ಮ=ವ್ಯಾಪಾರವನ್ನು ವಿವಿತ್ಸಯಾ=ತಿಳಿಯುವ ಇಚ್ಛೆಯಿಂದ, ಪೃಚ್ಛತಃ=ಕೇಳುತ್ತಿರುವ, ಅಜಯಾ=ಪ್ರಕೃತಿಯಿಂದ ನಷ್ಟಚಕ್ಷುಷಃ=

ಆಚ್ಛಾದಿತವಾದ ಜ್ಞಾನವುಳ್ಳ, ಅಂಧಸ್ಯ=ಅಜ್ಞನಾದ, ಮೇ=ನನ್ನ ಏತಾನ್ ಪ್ರಶ್ನಾನ್= ಈ ಪ್ರಶ್ನೆಗಳನ್ನು ಮೇ ಮಿತ್ರತ್ವಾತ್=ನನಗೆ ಅನಿಮಿತ್ತ ಬಂಧುವಾದುದರಿಂದ ಬ್ರೂಹಿ=ಉತ್ತರಿಸು. ಮಿತ್ರಶಬ್ದದಿಂದ ಸೂರ್ಯನಂತೆ ನೀನು ನನಗೆ ಉಪಕಾರಕ ಎಂದು ಸೂಚಿಸುವನು. ॥೪೦॥

**ಸರ್ವೇ ವೇದಾಶ್ಚ ಯಜ್ಞಾಶ್ಚ ತಪೋ ದಾನಾನಿ ಚಾನಘ ।**
**ಜೀವಾಭಯಪ್ರದಾನಸ್ಯ ನ ಕುರ್ವೀರನ್ ಕಲಾಮಪಿ ॥೪೧॥**

ಹೇ ಅನಘ=ಪಾಪರಹಿತನೇ! ಸರ್ವೇ ವೇದಾಃ=ಎಲ್ಲ ವೇದಗಳು, ಯಜ್ಞಾಃ= ಯಜ್ಞಗಳು, ತಪಃ=ತಪಸ್ಸು ದಾನಾನಿ=ದಾನಗಳು ಜೀವಾಭಯಪ್ರದಾನಸ್ಯ= ಜೀವನಿಗೆ ಮೋಕ್ಷಪ್ರದವಾದ ಜ್ಞಾನದಾನದ ಫಲದ, ಕಲಾಂ ಅಪಿ ನ ಕುರ್ವೀರನ್=ಅದರ ಒಂದಂಶವನ್ನೂ ಮಾಡಲಾರವು. ॥೪೧॥

**ಶ್ರೀ ಶುಕ ಉವಾಚ**

**ಸ ಇತ್ಥಮಾಪೃಷ್ಟಪುರಾಣಕಲ್ಪಃ**
**ಕುರುಪ್ರಧಾನೇನ ಮುನಿಪ್ರಧಾನಃ ।**
**ಪ್ರವೃದ್ಧಹರ್ಷೋ ಭಗವತ್ಕಥಾಯಾಂ**
**ಸಂಚೋದಿತಸ್ತಂ ಪ್ರಹಸನ್ನಿವಾಹ ॥೪೨॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಅಷ್ಟಮೋಽಧ್ಯಾಯಃ ॥*

ಕುರುಪ್ರಧಾನೇನ=ವಿದುರನಿಂದ ಇತ್ಥಂ=ಈರೀತಿ ಆಪೃಷ್ಟಪುರಾಣಕಲ್ಪಃ= ಕೇಳಲ್ಪಟ್ಟ ಪುರಾಣವಿಷಯಕ ಪ್ರಶ್ನೆಯುಳ್ಳ, ಮುನಿಪ್ರಧಾನಃ=ಮೈತ್ರೇಯರು ಭಗವತ್ಕಥಾಯಾಂ=ಶ್ರೀಹರಿಕಥಾದಲ್ಲಿ,ಸಂಚೋದಿತಃ=ಪ್ರೇರಿತರಾಗಿ,ಪ್ರವೃದ್ಧಹರ್ಷಃ= ಬಹಳ ಅಭಿವೃದ್ಧವಾದ ಸಂತೋಷವುಳ್ಳವರಾಗಿ ತಂ=ವಿದುರನನ್ನು ಕುರಿತು ಪ್ರಹಸನ್ ಇವ=ನಗುತ್ತ ಆಹ=ಹೇಳಿದರು. ॥೪೨॥

*ಇಲ್ಲಿಗೆ ಎಂಟನೆಯ ಅಧ್ಯಾಯವು ಮುಗಿಯಿತು.*

# ಎಂಟನೆಯ ಅಧ್ಯಾಯದ ತಾತ್ಪರ್ಯ

ಶುಕಾಚಾರ್ಯರು ಹೀಗೆ ಹೇಳುತ್ತಿದ್ದ ಮೈತ್ರೇಯರನ್ನು ಮಾತಿನಿಂದ ಸಂತೋಷ ಪಡಿಸುವವರಾಗಿ ವೇದವ್ಯಾಸರ ಅನುಗ್ರಹದಿಂದ ಜನ್ಮವೆತ್ತಿದ ವಿದುರರು ಮತ್ತೆ ನುಡಿದರು.

ವಿದುರ– ಬ್ರಹ್ಮಜ್ಞಾನಿಗಳೇ, ಶ್ರೀಹರಿಯು ಜ್ಞಾನಸ್ವರೂಪನು. ಪ್ರಾಕೃತ ಗುಣರಹಿತನು. ನಿರ್ವಿಕಾರನು. ಇವನಿಗೆ ಸತ್ವ ಮೊದಲಾದ ಗುಣ ನಿಮಿತ್ತಕವಾದ ಸೃಷ್ಟಿ ಮೊದಲಾದ ಕಾರ್ಯಗಳು ಹೇಗೆ ಕೂಡುವುವು? ಕ್ರಿಡೆಗಾಗಿ ಶ್ರೀಹರಿಯು ಸೃಷ್ಟಿಸುವನೆಂದೂ ಹೇಳಲಾಗದು. ಕ್ರೀಡೆಯಿಂದ ಸುಖಪಡುವವನು ಅಪರಿ-ಪೂರ್ಣನು. ಅದೂ ಅಲ್ಲದೆ ಕ್ರೀಡೆಗೆ ಇಷ್ಟಪಡಬೇಕಾದರೆ ಬೇಸರವಿರಬೇಕು. ಇಲ್ಲವೆ ತನಗೆ ಸಮಾನನಾದ ಮತ್ತೊಬ್ಬನಿರಬೇಕು. ಶ್ರೀಹರಿಯು ಸ್ವಾಭಾವಿಕವಾಗಿ ತೃಪ್ತನಾದ್ದರಿಂದಲೂ, ಅವನಿಗೆ ಸಮನಾದ ಮತ್ತೊಬ್ಬನು ಇಲ್ಲದೆ ಇರುವುದ-ರಿಂದಲೂ ಕ್ರೀಡಿಸುವ ಇಚ್ಛೆಯೇ ಬರುವಂತಿಲ್ಲ. ಅಂದಮೇಲೆ ಕ್ರೀಡೆಯೆಲ್ಲಿ ಬಂತು? ಆದರೂ ಅವನು ತನ್ನ ಅಧೀನವಾದ ಪ್ರಕೃತಿಯನ್ನು ಉಪಯೋಗಿಸಿ-ಕೊಂಡು ಅದರ ರಜೋಗುಣದ ನಿಮಿತ್ತದಿಂದ ಈ ಜಗತ್ತಿನ ಸೃಷ್ಟಿಯನ್ನೂ ಸತ್ವಗುಣದ ನಿಮಿತ್ತದಿಂದ ಸಂಹಾರವನ್ನೂ ಮಾಡುತ್ತಲೇ ಇರುವನು. ಇದರ ರಹಸ್ಯವನ್ನು ತಿಳಿಸಿ ಅನುಗ್ರಹಿಸಬೇಕು. ಯಾವ ಶ್ರೀಹರಿಯು ದೇಶನಿಮಿತ್ತವಾಗಿ-ಯಾಗಲಿ, ಕಾಲನಿಮಿತ್ತವಾಗಿಯಾಗಲಿ, ಜಾಗ್ರತ್‌ಸ್ವಪ್ನ ಮುಂತಾದ ಅವಸ್ಥಾ ನಿಮಿತ್ತವಾಗಿ ಆಗಲಿ ತನ್ನಿಂದ ಅಥವಾ ಇತರರಿಂದಲಾಗಲಿ ನಷ್ಟವಾಗದಿರುವ ಜ್ಞಾನವೇ ಸ್ವರೂಪವಾಗಿ ಉಳ್ಳವನೋ ಅವನಿಗೆ ಪ್ರಕೃತಿ ಸಂಬಂಧವು ಹೇಗೆ ತಾನೇ ಆಗುವುದು? ಇದು ಯುಕ್ತಿಗೆ ವಿರುದ್ಧವು. ಆದರೆ ಕಂಡು ಬಂದಿದೆಯಾಗಿ ಸಂದೇಹ ಬಂದಿರುವುದು. ಭಗವಂತನು ಜ್ಞಾನಸ್ವರೂಪನು. ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಯಾವ ಅವಸ್ಥೆಯಲ್ಲಿಯೂ ಅವನ ಜ್ಞಾನವು ನಷ್ಟವಾಗುವುದಿಲ್ಲ. ಇಂತಹವನಿಗೆ ಪ್ರಕೃತಿಯ ಸಂಬಂಧವಾಗುವುದು ಹೇಗೆ? ಎಲ್ಲ ಐಶ್ವರ್ಯದಿಂದ ಕೂಡಿದ ಶ್ರೀಹರಿಯು ಒಬ್ಬನೇ ಎಲ್ಲರ ದೇಹಗಳಲ್ಲಿಯೂ ನೆಲೆಸಿಹನು. ದುಃಖಮಯಗಳಾದ ಈ ದೇಹಗಳಲ್ಲಿ ಅಭಿಮಾನಿಗಳಾದ ಜೀವರೂ ಇರುವರು. ಈ ಜೀವರೂ ಐಶ್ವರ್ಯರಹಿತರಾದ್ದರಿಂದ ದೇಹಾನುಗುಣವಾಗಿ ತಮ್ಮ ತಮ್ಮ

ಕರ್ಮಾನುಸಾರ ಕ್ಲೇಶಗಳಿಂದ ಕೂಡಿರುವರು. ಐಶ್ವರ್ಯಯುಕ್ತನಾದ ಶ್ರೀಹರಿಗೆ ಕ್ಲೇಶಗಳು ಸಂಭವಿಸುವಂತಿಲ್ಲ. ಆದರೂ ಕ್ಲೇಶವಿದ್ದಂತೆ ಕಾಣುತ್ತಿದೆ. ನಿಶ್ಚಯ ಜ್ಞಾನವಿಲ್ಲದೆ ಈ ಬಗೆಯ ಸಂಕಟದಲ್ಲಿ ನನ್ನ ಮನಸ್ಸು ಖೇದಗೊಳ್ಳುತ್ತಿದೆ. ತಾವು ಸಮರ್ಥರು. ನನ್ನ ಮನಸ್ಸಿನ ಮೋಹವನ್ನು ಹೋಗಲಾಡಿಸಿರಿ.

ಶುಕಾಚಾರ್ಯರು - ಮೈತ್ರೇಯರು ನಿರಹಂಕಾರಿಗಳು. ತತ್ವವನ್ನು ತಿಳಿಯಬೇಕೆಂಬ ಇಚ್ಛೆಯಿಂದ ವಿದುರರು ಮಾಡಿದ ಮೇಲಿನ ಪ್ರಶ್ನೆಗಳಿಂದ ಸಂತೋಷಪಟ್ಟರು. ಪರಮಾತ್ಮನನ್ನು ಧ್ಯಾನಿಸುತ್ತಾ ಮುಗುಳುನಗೆ ನಕ್ಕು ಉತ್ತರ ಹೇಳಲಾರಂಭಿಸಿದರು.

ಮೈತ್ರೇಯರು - ವಿದುರ! ಶ್ರೀಹರಿಯು ಯಾವಾಗಲೂ ಎಲ್ಲ ಐಶ್ವರ್ಯ-ದಿಂದಲೂ ಯುಕ್ತನು. ಅವನಿಗೆ ದೈನ್ಯವೆಲ್ಲಿಯದು? ಅವನು ನಿತ್ಯ ಮುಕ್ತನು. ಅವನಿಗೆ ಪ್ರಕೃತಿ ಬಂಧವೆಲ್ಲಿ? 'ಅವನು ಕೃಪಣನು, ಬದ್ಧನು' ಎಂದು ಹೇಳುವುದು, ಶಾಸ್ತ್ರಕ್ಕೆ ವಿರುದ್ಧವಾದುದು. ಆದ್ದರಿಂದ ಅವನು ಪ್ರಕೃತಿಬದ್ಧನಲ್ಲವೆಂದು ಹೇಳುವುದೇ ನ್ಯಾಯವು. ಇದೇ ಅವನ ಮಹಿಮೆ. ಜೀವನಾದರೂ ಪ್ರಕೃತಿಬದ್ಧನು. ಸ್ವಪ್ನದಲ್ಲಿ ತನ್ನ ತಲೆಯನ್ನೇ ಕುಡಿದಂತೆ, ತನ್ನ ಹೆಗಲನ್ನೇ ಏರಿದಂತೆ ಕಾಣುವುದು ಉಂಟು. ಇವು ಜೀವನ ವಾಸನೆಯನ್ನು ಉಪಯೋಗಿಸಿ ಕೊಂಡು ಶ್ರೀಹರಿಯಿಂದ ಸೃಷ್ಟವಾದ ಪದಾರ್ಥಗಳಾದ್ದರಿಂದ, ಆ ಕಾಲದಲ್ಲಿ ಮಾತ್ರ ತೋರಿದರೂ ಸತ್ಯವಾದವುಗಳೇ. ಇಲ್ಲಿ ತೋರುವ ಸಂಬಂಧವು ಮಾತ್ರ ಭ್ರಾಂತಿಯು. ಈ ಭ್ರಾಂತಿಗೆ ಪ್ರಯೋಜನವಿಲ್ಲ. ನೀರಿನಲ್ಲಿ ಚಂದ್ರನ ಪ್ರತಿಬಿಂಬವು ಚಲಿಸುತ್ತಿರುವಂತೆ ಕಾಣುವುದು. ಇಲ್ಲಿ ಚಲನೆ ಇರುವುದು ನೀರಿನಲ್ಲಿ. ಆದರೆ ಅದು ಚಂದ್ರನ ಪ್ರತಿಬಿಂಬದಲ್ಲಿ ಇದ್ದಂತೆ ತೋರುವುದೇ ಭ್ರಾಂತಿ. ಹಾಗೆ ದೇಹದ ಧರ್ಮಗಳಾದ ಹುಟ್ಟು ಸಾವುಗಳು ಭ್ರಾಂತಿಯಿಂದ ಕಂಡುಬರುವುವು. ಇದೇ ಜೀವನು ಸಂಸಾರಿಯಾಗಿರುವುದಕ್ಕೆ ಕಾರಣ. ಇದನ್ನೇ ಬಂಧವೆನ್ನುವರು. ಇದು ಸತ್ಯವಾದುದು. ಶ್ರೀಹರಿಯಲ್ಲಿ ಮಾಡುವ ನಿಷ್ಕಾಮ ಭಕ್ತಿಯು ಶ್ರೀಹರಿಯ ಅನುಗ್ರಹವನ್ನು ತಂದು ಕೊಡುವುದು. ಈ ಶ್ರೀಹರಿಯ ಪ್ರಸಾದವೇ ಕ್ರಮವಾಗಿ ಜೀವನನ್ನು ಬಂಧದಿಂದ ಮುಕ್ತನನ್ನಾಗಿ ಮಾಡಿಸುವುದು. ಶ್ರೀಹರಿಯ ಅಪರೋಕ್ಷವಾಗಲು ಸರ್ವೇಂದ್ರಿಯಗಳಿಂದ ಶ್ರೀಹರಿಯನ್ನು ತಿಳಿದು ಆನಂದಿಸುವ ಮೋಕ್ಷವು ದೊರೆಯುವುದು. ನಿದ್ರೆ ಮಾಡುವಾಗ ಹೇಗೆ ಕ್ಲೇಶಗಳಿರುವುದಿಲ್ಲವೋ ಹಾಗೆ ಮೋಕ್ಷದಲ್ಲಿಯೂ ಕ್ಲೇಶಗಳಿರುವುದಿಲ್ಲ. ಇಂತಹ ಮೋಕ್ಷವನ್ನು ಹೊಂದುವುದಕ್ಕೆ ಬೇಕಾದ ಸುಲಭವಾದ ಉಪಾಯವೇ ಶ್ರೀಹರಿಯ ಗುಣಗಳನ್ನು ಹೇಳುವ

ಭಾಗವತ ಮೊದಲಾದ ಸಚ್ಛಾಸ್ತ್ರಗಳ ಶ್ರವಣ, ಇದರಿಂದ ಮನನ, ಇದರಿಂದ ವ್ಯಾಖ್ಯಾನ, ವ್ಯಾಖ್ಯಾನದಿಂದ ಉಪಾಸನೆ (ಧ್ಯಾನ).

ವಿದುರ - ಮೈತ್ರೇಯರೆ, ತಮ್ಮ ಶ್ರೇಷ್ಠವಾದ ಮಾತುಗಳು ನನ್ನ ಅನ್ಯಥಾ ಜ್ಞಾನವನ್ನು ಪರಿಹರಿಸಿದುವು, ನನ್ನ ಅಜ್ಞಾನವು ಹೋಯಿತು. ಆದರೂ ಮನಸ್ಸಿನ್ನೂ ಸಂಶಯದತ್ತ ಓಡುತ್ತಿದೆ. ತಾವು ಅಪರೋಕ್ಷ ಜ್ಞಾನಿಗಳು. ಶ್ರೀಹರಿಯ ಮಹಿಮೆ ಅವನ ಸಾಮರ್ಥ್ಯವನ್ನೇ ಆಶ್ರಯಿಸಿದುದೆಂದು ಹೇಳಿದ್ದರಿಂದ ಸಂಶಯವನ್ನೇ ಹೋಗಲಾಡಿಸಿರುವಿರಿ. ಆದರೂ ಕರ್ಮಾನುಸಾರವಾಗಿ ಬಂದ,ದೇಹವೇ ಆತ್ಮವೆಂಬ ಜ್ಞಾನವೂ ಹೋಗಲಿಲ್ಲ. ಸರ್ವಕ್ಕೂ ಮೂಲಕಾರಣನಾದ ಶ್ರೀಹರಿಯ ಜ್ಞಾನವೂ ಇಲ್ಲದೆ ಇಲ್ಲ. ಅಂದಮೇಲೆ ಈ ಎರಡರ ಮಧ್ಯದಲ್ಲಿ ತೊಳಲುತ್ತಿದೆ ನನ್ನ ಮನಸ್ಸು. ನಿದ್ರೆಯಲ್ಲಿ ದುಃಖವಿಲ್ಲದಿರುವಂತೆ ಅವಿವೇಕಿಯೂ ದುಃಖವಿಲ್ಲದಿರುವನು. ಮುಕ್ತನಂತೆ ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿದವನೂ ಕ್ಲೇಶಕ್ಕೊಳಗಾಗನು. ಇವೆರಡರ ಮಧ್ಯದಲ್ಲಿ ಇರುವವನು ಸ್ವಪ್ನವನ್ನು ನೋಡುತ್ತಿರುವವನು ಕ್ಲೇಶಪಡುತ್ತಿರುವಂತೆ ಕ್ಲೇಶಕ್ಕೊಳಗಾಗುವನು. ನನ್ನ ಪರಿಸ್ಥಿತಿಯೂ ಹಾಗೆಯೇ ಇದೆ. ಆದರೆ ಜೀವನು ಜ್ಞಾನಸ್ವರೂಪಿಯೆಂದು ತಿಳಿದಮೇಲೆ ಈ ದೇಹಧರ್ಮಗಳನ್ನು ಜೀವನಲ್ಲಿ ಕಾಣುವ ಅಹಂಕಾರ ಮಮಕಾರಗಳಿಗೆ ಪ್ರಯೋಜನವಿಲ್ಲವೆಂದು ನಿಶ್ಚಯಿಸಿಕೊಳ್ಳುವೆನು. ಇದು ತಮ್ಮ ಪಾದಸೇವೆಯಿಂದ ದೊರೆಯುವುದು. ನನ್ನ ಸಂಶಯವು ಪರಿಹಾರವಾಗಿ ನಿಶ್ಚಯ ಜ್ಞಾನವು ಬರುವುದು. (ವಿದುರರು ತಿಳಿದಿದ್ದರೂ ಮೈತ್ರೇಯರು ಹೇಳಲೆಂದು ಹೀಗೆ ತಿಳಿಯದವರಂತೆ ಹೇಳಿ ಕೊಂಡಿರುವರು). ತಮ್ಮಂತಹ ಭಗವದ್ಭಕ್ತರ ಪಾದಸೇವೆಯಿಂದ ಶ್ರೀಹರಿಯಲ್ಲಿ ಅತ್ಯಂತ ಆಸಕ್ತಿಯು ಹುಟ್ಟುವುದು. ಶ್ರೀಹರಿಯು ಸಂಸಾರವ್ಯಸನವನ್ನೇ ನಿರ್ಮೂಲ ಮಾಡುವನು. ಭಗವದ್ಭಕ್ತರ ಸೇವೆಯು ಮಂದಭಾಗ್ಯರಿಗೆಂದೂ ದೊರೆಯಲಾರದು. ಅಲ್ಪಭಾಗ್ಯರು ಶ್ರೀಹರಿಯಿಂದ ವಿಮುಖರು. ಭಕ್ತರು ಯಾವಾಗಲೂ ಶ್ರೀಹರಿಯನ್ನೇ ಗಾನಮಾಡುವವರು. ಇವರಿಬ್ಬರಿಗೂ ಹೊಂದಿಕೆಯಾಗುವುದಿಲ್ಲ.

ಮೊದಲು ಶ್ರೀಹರಿಯು ಷೋಡಶವಿಕಾರಗಳಿಂದ ಕೂಡಿದ ಮಹತ್ತತ್ವ ಮೊದಲಾದ ತತ್ವಗಳನ್ನು ಸೃಷ್ಟಿಸಿ ಅವುಗಳಿಂದ ಬ್ರಹ್ಮಾಂಡವನ್ನೂ ಅದರ ಒಳಗೆ ಬ್ರಹ್ಮದೇವರನ್ನೂ ಸೃಷ್ಟಿಸಿದನು. ಕ್ರಮವಾಗಿ ಅವುಗಳಲ್ಲಿ ಪ್ರವೇಶಿಸಿದನು. ಈ ಬ್ರಹ್ಮಾಂತರ್ಯಾಮಿಯಾದ ಶ್ರೀಹರಿಯು ಅನಂತ ಅವಯವಗಳುಳ್ಳವನೆಂದೂ, ಮೊದಲಿಗನೆಂದೂ ವೇದಗಳು ಹೇಳುವುವು. ಇವನನ್ನೇ ಸಮಸ್ತ ಲೋಕಗಳೂ ಆಶ್ರಯಿಸಿರುವುವು. ಇವನನ್ನು ಆಶ್ರಯಿಸಿಯೇ ಹತ್ತು ಬಗೆಯ ಪ್ರಾಣವಾಯುವೂ,

ಇಂದ್ರಿಯಗಳೂ, ಓಜಸ್ಸು, ಸಹನೇ ಬಲವೆನಿಸುವ ಪ್ರಾಣವೂ ಶಬ್ದ ಮೊದಲಾದ ವಿಷಯಗಳೂ ಇರುವುವು. ಈತನಿಂದ ಬ್ರಾಹ್ಮಣಾದಿವರ್ಣಗಳೂ ಹುಟ್ಟಿರುವು-ವೆಂದು ತಾವು ಮೊದಲೇ ಹೇಳಿರುವಿರಿ. ಈಗ ಆ ಶ್ರೀಹರಿಯ ವಿಭೂತಿರೂಪ-ಗಳನ್ನೂ ಆ ವರ್ಣಗಳ ವಿಭೂತಿ ರೂಪಗಳನ್ನೂ ದಯಮಾಡಿ ತಿಳಿಸಬೇಕು. ಈ ವರ್ಣಗಳಲ್ಲಿ ಆದ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಗೋತ್ರದವರೂ ಹೀಗೆ ಬೆಳೆದ ಪ್ರಜೆಗಳಿಂದ ಪ್ರಪಂಚವೇ ತುಂಬಿಹೋದುದನ್ನೂ ತಿಳಿಸಿರಿ. ಪ್ರಜೇಶ್ವರರಿಗೆಲ್ಲ ಅಧಿಪತಿಯಾದ ಆ ಶ್ರೀಹರಿಯು ಯಾವ ಯಾವ ಪ್ರಜೇಶ್ವರರನ್ನು ಸೃಷ್ಟಿಸಿದನು? ಸೃಷ್ಟಿ ಅನುಸೃಷ್ಟಿ ಮನುಗಳು ಇವರ ವಿಚಾರವನ್ನೂ ತಿಳಿಸಿರಿ. ಈ ವಂಶಗಳ ಮತ್ತು ಅನುವಂಶಗಳ ಚರಿತ್ರೆಯನ್ನೂ ವರ್ಣಿಸಿರಿ. ಭೂಲೋಕದ ಮೇಲಿನ ಮತ್ತು ಕೆಳಗಿನ ಲೋಕಗಳನ್ನೂ ಅವುಗಳ ಅಳತೆಗಳನ್ನೂ ವಿವರಿಸಿರಿ. ತಿರ್ಯಗ್‌ಜಂತುಗಳು, ಮನುಷ್ಯರು, ದೇವತೆಗಳು, ಸರ್ಪಗಳು, ಹಕ್ಕಿಗಳು ಮೊದಲಾದ ಜರಾಯುಜ, ಅಂಡಜ, ಸ್ವೇದಜ ಮತ್ತು ಉದ್ಭಿಜ್ಜವೆಂಬ ಎಲ್ಲ ಪ್ರಾಣಿಗಳ ಸೃಷ್ಟಿಯನ್ನು ವಿಸ್ತರಿಸಿರಿ. ಪ್ರಪಂಚದ ಸೃಷ್ಟಿ ಸ್ಥಿತಿ, ಸಂಹಾರಗಳಿಗಾಗಿ ಬೇರೆ ಬೇರೆ ಅವತಾರಗಳನ್ನು ಎತ್ತುವ ಶ್ರೀಹರಿಯ ಆಯಾ ಅವತಾರಗಳ ಪರಾಕ್ರಮುವನ್ನೂ ತಿಳಿಸುವರಾಗಿ ಮಿಕ್ಕ ಎಲ್ಲ ವಿಷಯಗಳಿಗಿಂತ ಶ್ರೀಹರಿಯ ಚರಿತ್ರೆಯನ್ನೇ ವಿಸ್ತಾರವಾಗಿ ಹೇಳಿರಿ. ರೂಪ, ನಡೆ ಸ್ವಭಾವಗಳಂತೆ ವರ್ಣವಿಭಾಗಗಳನ್ನೂ, ಜ್ಞಾನಿಗಳ ಜನ್ಮ ಮತ್ತು ಕರ್ಮಗಳನ್ನೂ, ವೇದಗಳ ವಿಭಾಗವನ್ನೂ, ಭಗವಂತನಿಂದ ಸ್ಥಾಪಿತವಾದ ಮೋಕ್ಷಕ್ಕೆ ಕಾರಣವಾದ ಜ್ಞಾನಶಾಸ್ತ್ರವನ್ನೂ, ಪಾಷಂಡ ಮತ ಹುಟ್ಟಿದ ರೀತಿಯನ್ನೂ, ಅದರ ಪ್ರಭೇದವನ್ನೂ, ಪ್ರತಿಲೋಮವಿವಾಹಗಳ ರೀತಿಯನ್ನೂ, ಗುಣ ಮತ್ತು ಕರ್ಮಗಳಿಗನುಗುಣವಾಗಿ ಜೀವರು ಹೊಂದುವ ಗತಿಗಳನ್ನೂ, ಪರಸ್ಪರ ವಿರೋಧವಿಲ್ಲದಂತೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ಸಾಧನೆಗಳನ್ನೂ, ವಾಣಿಜ್ಯ ಮೊದಲಾದ ಜೀವನೋ-ಪಾಯಗಳನ್ನೂ ರಾಜನೀತಿ ಅರ್ಥಶಾಸ್ತ್ರಗಳನ್ನೂ, ವೇದದಲ್ಲಿ ಹೇಳಿದ ಧರ್ಮಗಳ ಪ್ರಕಾರಗಳನ್ನೂ, ಪಿತೃಗಳ ಸೃಷ್ಟಿಕ್ರಮವನ್ನೂ, ನವಗ್ರಹ, ಅಶ್ವಿನ್ಯಾದಿನಕ್ಷತ್ರಗಳು, ಧೃವತಾರೆ ಮೊದಲಾದ ತಾರೆಗಳು - ಇವುಗಳ ವಿಚಾರವನ್ನೂ, ಕಾಲದ ಅವಯವಗಳ ವಿವರಗಳನ್ನೂ, ಧರ್ಮಕಾರ್ಯಗಳ ಫಲಗಳನ್ನೂ, ಪ್ರವಾಸ, ಆಪತ್ಕಾಲ. ಮೊದಲಾದ ಕಾಲಗಳಲ್ಲಿ ಅನುಸರಿಸಬೇಕಾದ ಧರ್ಮಗಳನ್ನೂ, ಹೆಚ್ಚೇನು ಧರ್ಮಸ್ಥಾಪಕನಾದ ಶ್ರೀಹರಿಯು ಸಂತುಷ್ಟನಾಗಿ ಪ್ರಸನ್ನನಾಗುವ ಎಲ್ಲ ಧರ್ಮಗಳನ್ನೂ ವಿವರಿಸಿ ತಿಳಿಸಬೇಕು. ಭಕ್ತವತ್ಸಲರಾದ ಗುರುಗಳು ಪ್ರಿಯಶಿಷ್ಯರಿಗೆ ಮಕ್ಕಳಿಗೆ ಕೇಳದ ವಿಷಯಗಳನ್ನೂ ಹೇಳುವರಲ್ಲವೆ !

ತತ್ವಗಳ ಲಯವು ಯಾವ ಯಾವ ರೀತಿಯಲ್ಲಿ ಆಗುವುದು? ಆ ಪ್ರಳಯ ಕಾಲದಲ್ಲಿ ಯಾರು ಸುಪ್ತರಾಗಿರುವರು? ಯಾರು ಶ್ರೀಹರಿಯನ್ನು ಆಗಲೂ ಉಪಾಸಿಸುವರು? ಶ್ರೀಹರಿಯ ಅವತಾರಗಳಲ್ಲಿ ಸ್ವರೂಪಾವತಾರ ಆವೇಶಾವತಾರಗಳನ್ನೂ, ಜೀವರ ಭಿನ್ನತೆಯನ್ನೂ, ಮುಕ್ತರ ಸ್ವರೂಪವನ್ನೂ ದಯಮಾಡಿ ತಿಳಿಸಿರಿ. ಗುರುಶಿಷ್ಯರಿಗೆ ಫಲಕಾರಿಯಾದ ವೇದಾಂತಜ್ಞಾನವನ್ನೂ, ಜ್ಞಾನಿಗಳು ಹೇಳಿರುವ ನಿಮಿತ್ತಗಳನ್ನೂ ವಿವರಿಸಿರಿ.

ಅಧಿಕಾರಿಚೇತನರಿಗೆ ಸಾಧನವಿಲ್ಲದೆ ಜ್ಞಾನಭಕ್ತಿ ವೈರಾಗ್ಯಗಳು ಬರುವುದಿಲ್ಲ. ಶ್ರೀಹರಿಯ ಕರ್ಮಗಳನ್ನು ತಿಳಿಯಬಯಸಿದ ನಾನು ಹೀಗೆ ಪ್ರಶ್ನೆಮಾಡುತ್ತಿದ್ದೇನೆ. ಅವಿದ್ಯೆಯಿಂದ ನನಗೆ ಸರಿಯಾದ ಜ್ಞಾನವಿಲ್ಲದೆ ಕುರುಡನಾಗಿದ್ದೇನೆ ಸ್ನೇಹಿತರಾದ ತಾವು ಉತ್ತರ ಹೇಳಿ ನನಗೆ ಮಾರ್ಗದರ್ಶಿಗಳಾಗಿರಿ. ಮೋಕ್ಷಕ್ಕೆ ಕಾರಣವಾದ ಶ್ರೀಹರಿಯ ಜ್ಞಾನವನ್ನು ದಾನಮಾಡಿದರೆ ಅಜ್ಞಾನಿಗಳು ಮಾಡುವ ವೇದಾಧ್ಯಯನ, ಯಜ್ಞ, ತಪಸ್ಸು ದಾನ ಮೊದಲಾದ ಧರ್ಮಕಾರ್ಯಗಳಿಗಿಂತ ಅತಿಶಯವಾದ ಪುಣ್ಯವು ಬರುವುದು.

ಶುಕಾಚಾರ್ಯರು ಹೀಗೆ ವಿದುರರು ಪುರಾಣವಿಷಯಗಳನ್ನು ತಿಳಿಯಲು ಪ್ರಶ್ನೆ ಮಾಡಲು ಮೈತ್ರೇಯರಿಗೆ ಆನಂದವಾಯಿತು. ಶ್ರೀಹರಿಯ ಕಥೆಯಲ್ಲಿ ತಮ್ಮನ್ನು ತೊಡಗಿಸುತ್ತಿರುವರೆಂದು ಹೋದರು. ನಗುತ್ತಾ ಹೀಗೆಂದು ಉತ್ತರ ಹೇಳಲಾರಂಭಿಸಿದರು.



# ಅಥ ನವಮೋಽಧ್ಯಾಯಃ

ಈ ಅಧ್ಯಾಯದಲ್ಲಿ ಸರ್ವಜೀವೋತ್ತಮನಾದ ಬ್ರಹ್ಮದೇವನ ಸೃಷ್ಟಿಯನ್ನು ಹೇಳುವುದರಿಂದ ಶ್ರೀಹರಿಯ ಸರ್ವೋತ್ತಮತ್ವರೂಪಮಹಾತ್ಮ್ಯ ನಿಶ್ಚಿಯಿಸಲ್ಪಟ್ಟಿದೆ, ಆದ್ದರಿಂದ ಅದರ ಜ್ಞಾನವನ್ನು ಅವಶ್ಯವಾಗಿ ಮುಮುಕ್ಷುಗಳು ಮಾಡಿಕೊಳ್ಳಲೇ-ಬೇಕು ಎಂದು ಮೊದಲಿಗೆ ಹೇಳುವರು. ವಿದುರನ ಪ್ರಶ್ನೆಗೆ ಉತ್ತರಿಸುವುದ್ಕಕಾಗಿ ಶ್ರದ್ಧೆಯಿಂದ ಕೇಳುವುದಕ್ಕಾಗಿ ವಿದುರನಿಗೆ ಅಭಿನಂದಿಸುತ್ತ ತಮಗೆ ಪುರಾಣಗಳು ಲಭಿಸಿದ ರೀತಿಯನ್ನು ತಿಳಿಸುವರು–

**ಮೈತ್ರೇಯ ಉವಾಚ**

**ಸತ್ಸೇವನೀಯೋ ಬತ ಪೂರುವಂಶೋ**
**ಯಲ್ಲೋಕಪಾಲೋ ಭಗವತ್ಪ್ರಧಾನಃ ।**
**ಬಭೂವಿಥೇಹಾಜಿತಕೀರ್ತಿಮಾಲಾಂ**
**ಪದೇ ಪದೇ ನೂತನಯಸ್ಯಭೀಕ್ಷ್ಣಂ ॥೧॥**

ಯತ್=ಯಾವ ಕಾರಣ, ಇಹ=ಈ ಕುಲದಲ್ಲಿ ಭಗವತ್ಪ್ರಧಾನಃ=ಭಗವಂತನೇ ಎಲ್ಲ ಕರ್ಮಗಳಲ್ಲಿ ಉದ್ದೇಶ್ಯನಾಗಿವುಳ್ಳ ಲೋಕಪಾಲಃ=ಲೋಕಪಾಲಕನಾದ ಯಮಧರ್ಮನು ಬಭೂವಿಥ=ವಿದುರನಾಗಿ ಜನಿಸಿರುವನೋ ಅಂಥ ಪೂರುವಂಶಃ=ಪುರುರಾಜನ ವಂಶವು ಸತ್ಸೇವನೀಯಃ=ಸಜ್ಜನರಿಂದ ಸೇವಿಸಲು ಯೋಗ್ಯವಾದುದು ಬತ=ಅದ್ಭುತವು. ಏಕೆಂದರೆ ಅಜಿತಕೀರ್ತಿಮಾಲಾಂ= ಭಗವಂತನ ಕೀರ್ತಿಪುಷ್ಪಗಳ ಮಾಲಾವನ್ನು ಪದೇ ಪದೇ=ಪ್ರತಿಯೊಂದು ಪದದಲ್ಲಿ ಪ್ರತಿಪಾದ್ಯವಾದುದನ್ನು ಅಭೀಕ್ಷ್ಣಂ=ಪುನಃ ಪುನಃ ನೂತನಯಸಿ=ಹೊಸದಾಗಿಸುವಿ. ಅಂದರೆ ತಿಳಿದಿದ್ದರೂ ವಿಶೇಷವಾಗಿ ತಿಳಿಯಲು ತಿಳಿದಿಲ್ಲವೆಂದು ಹೇಳುವಿ. ॥೧॥

ತತ್ವಗಳ ಲಯವು ಯಾವ ಯಾವ ರೀತಿಯಲ್ಲಿ ಆಗುವುದು? ಆ ಪ್ರಳಯ ಕಾಲದಲ್ಲಿ ಯಾರು ಸುಪ್ತರಾಗಿರುವರು? ಯಾರು ಶ್ರೀಹರಿಯನ್ನು ಆಗಲೂ ಉಪಾಸಿಸುವರು? ಶ್ರೀಹರಿಯ ಅವತಾರಗಳಲ್ಲಿ ಸ್ವರೂಪಾವತಾರ ಆವೇಶಾವತಾರಗಳನ್ನೂ, ಜೀವರ ಭಿನ್ನತೆಯನ್ನೂ, ಮುಕ್ತರ ಸ್ವರೂಪವನ್ನೂ ದಯಮಾಡಿ ತಿಳಿಸಿರಿ. ಗುರುಶಿಷ್ಯರಿಗೆ ಫಲಕಾರಿಯಾದ ವೇದಾಂತಜ್ಞಾನವನ್ನೂ, ಜ್ಞಾನಿಗಳು ಹೇಳಿರುವ ನಿಮಿತ್ತಗಳನ್ನೂ ವಿವರಿಸಿರಿ.

ಅಧಿಕಾರಿಚೇತನರಿಗೆ ಸಾಧನವಿಲ್ಲದೆ ಜ್ಞಾನಭಕ್ತಿ ವೈರಾಗ್ಯಗಳು ಬರುವುದಿಲ್ಲ. ಶ್ರೀಹರಿಯ ಕರ್ಮಗಳನ್ನು ತಿಳಿಯಬಯಸಿದ ನಾನು ಹೀಗೆ ಪ್ರಶ್ನೆಮಾಡುತ್ತಿದ್ದೇನೆ. ಅವಿದ್ಯೆಯಿಂದ ನನಗೆ ಸರಿಯಾದ ಜ್ಞಾನವಿಲ್ಲದೆ ಕುರುಡನಾಗಿದ್ದೇನೆ ಸ್ನೇಹಿತರಾದ ತಾವು ಉತ್ತರ ಹೇಳಿ ನನಗೆ ಮಾರ್ಗದರ್ಶಿಗಳಾಗಿರಿ. ಮೋಕ್ಷಕ್ಕೆ ಕಾರಣವಾದ ಶ್ರೀಹರಿಯ ಜ್ಞಾನವನ್ನು ದಾನಮಾಡಿದರೆ ಅಜ್ಞಾನಿಗಳು ಮಾಡುವ ವೇದಾಧ್ಯಯನ, ಯಜ್ಞ, ತಪಸ್ಸು ದಾನ ಮೊದಲಾದ ಧರ್ಮಕಾರ್ಯಗಳಿಗಿಂತ ಅತಿಶಯವಾದ ಪುಣ್ಯವು ಬರುವುದು.

ಶುಕಾಚಾರ್ಯರು ಹೀಗೆ ವಿದುರರು ಪುರಾಣವಿಷಯಗಳನ್ನು ತಿಳಿಯಲು ಪ್ರಶ್ನೆ ಮಾಡಲು ಮೈತ್ರೇಯರಿಗೆ ಆನಂದವಾಯಿತು. ಶ್ರೀಹರಿಯ ಕಥೆಯಲ್ಲಿ ತಮ್ಮನ್ನು ತೊಡಗಿಸುತ್ತಿರುವರೆಂದು ಹೋದರು. ನಗುತ್ತಾ ಹೀಗೆಂದು ಉತ್ತರ ಹೇಳಲಾರಂಭಿಸಿದರು.



# ಅಥ ನವಮೋಽಧ್ಯಾಯಃ

ಈ ಅಧ್ಯಾಯದಲ್ಲಿ ಸರ್ವಜೀವೋತ್ತಮನಾದ ಬ್ರಹ್ಮದೇವನ ಸೃಷ್ಟಿಯನ್ನು ಹೇಳುವುದರಿಂದ ಶ್ರೀಹರಿಯ ಸರ್ವೋತ್ತಮತ್ವರೂಪಮಹಾತ್ಮ್ಯ ನಿಶ್ಚಿಯಿಸಲ್ಪಟ್ಟಿದೆ, ಆದ್ದರಿಂದ ಅದರ ಜ್ಞಾನವನ್ನು ಅವಶ್ಯವಾಗಿ ಮುಮುಕ್ಷುಗಳು ಮಾಡಿಕೊಳ್ಳಲೇ-ಬೇಕು ಎಂದು ಮೊದಲಿಗೆ ಹೇಳುವರು. ವಿದುರನ ಪ್ರಶ್ನೆಗೆ ಉತ್ತರಿಸುವುದ್ಕಕಾಗಿ ಶ್ರದ್ಧೆಯಿಂದ ಕೇಳುವುದಕ್ಕಾಗಿ ವಿದುರನಿಗೆ ಅಭಿನಂದಿಸುತ್ತ ತಮಗೆ ಪುರಾಣಗಳು ಲಭಿಸಿದ ರೀತಿಯನ್ನು ತಿಳಿಸುವರು-

**ಮೈತ್ರೇಯ ಉವಾಚ**

**ಸತ್ಸೇವನೀಯೋ ಬತ ಪೂರುವಂಶೋ**
**ಯಲ್ಲೋಕಪಾಲೋ ಭಗವತ್ಪ್ರಧಾನಃ ।**
**ಬಭೂವಿಥೇಹಾಜಿತಕೀರ್ತಿಮಾಲಾಂ**
**ಪದೇ ಪದೇ ನೂತನಯಸ್ಯಭೀಕ್ಷ್ಣಂ ॥೧॥**

ಯತ್=ಯಾವ ಕಾರಣ, ಇಹ=ಈ ಕುಲದಲ್ಲಿ ಭಗವತ್ಪ್ರಧಾನಃ=ಭಗವಂತನೇ ಎಲ್ಲ ಕರ್ಮಗಳಲ್ಲಿ ಉದ್ದೇಶ್ಯನಾಗಿವುಳ್ಳ ಲೋಕಪಾಲಃ=ಲೋಕಪಾಲಕನಾದ ಯಮಧರ್ಮನು ಬಭೂವಿಥ=ವಿದುರನಾಗಿ ಜನಿಸಿರುವನೋ ಅಂಥ ಪೂರುವಂಶಃ=ಪುರುರಾಜನ ವಂಶವು ಸತ್ಸೇವನೀಯಃ=ಸಜ್ಜನರಿಂದ ಸೇವಿಸಲು ಯೋಗ್ಯವಾದುದು ಬತ=ಅದ್ಭುತವು. ಏಕೆಂದರೆ ಅಜಿತಕೀರ್ತಿಮಾಲಾಂ= ಭಗವಂತನ ಕೀರ್ತಿಪುಷ್ಪಗಳ ಮಾಲಾವನ್ನು ಪದೇ ಪದೇ=ಪ್ರತಿಯೊಂದು ಪದದಲ್ಲಿ ಪ್ರತಿಪಾದ್ಯವಾದುದನ್ನು ಅಭೀಕ್ಷ್ಣಂ=ಪುನಃ ಪುನಃ ನೂತನಯಸಿ=ಹೊಸದಾಗಿಸುವಿ. ಅಂದರೆ ತಿಳಿದಿದ್ದರೂ ವಿಶೇಷವಾಗಿ ತಿಳಿಯಲು ತಿಳಿದಿಲ್ಲವೆಂದು ಹೇಳುವಿ. ॥೧॥

**ಸೋಽಹಂ ನೃಣಾಂ ಕ್ಷುಲ್ಲಸುಖಾಯ ದುಃಖಂ**
**ಮಹದ್‌ಗತಾನಾಂ ವಿರಮಾಯ ತುಭ್ಯಂ ।**
**ಪ್ರವರ್ತಯೇ ಭಾಗವತಂ ಪುರಾಣಂ**
**ಯದಾಹ ಸಾಕ್ಷಾದ್ ಭಗವಾನ್ ಋಷಿಭ್ಯಃ ॥೨॥**

ಯಾವನು ಶ್ರೀಕೃಷ್ಣನಿಂದ ನಿನಗೆ ಉಪದೇಶ ಮಾಡಲು ಆಜ್ಞಪ್ತನಾದನೋ ಮತ್ತು ಯಾವನು ನಿನ್ನಿಂದ ಪ್ರಶ್ನಿಸಲ್ಪಟ್ಟನೋ ಸಃ ಅಹಂ=ಆ ನಾನು ಕ್ಷುಲ್ಲಸುಖಾಯ= ಅಲ್ಪಸುಖಕ್ಕಾಗಿ ಮಹದ್ದುಃಖಂ ಗತಾನಾಂ ನೃಣಾಂ=ಬಹಳ ದುಃಖದಲ್ಲಿ ಮಗ್ನರಾದ ಜನರಿಗೆ ವಿರಮಾಯ=ದುಃಖನಾಶಕ್ಕಾಗಿ ತುಭ್ಯಂ=ನಿನಗೆ ನೃಣಾಂ ಪ್ರವೃತ್ತಯೇ= ಜನರಿಗೆ ಉಪದೇಶ ಮಾಡಲು ನಿನ್ನ ಪ್ರಶ್ನೆಗೆ ಉತ್ತರ ರೂಪವಾಗಿ ಸಾಕ್ಷಾದ್ ಭಗವಾನ್=ಶ್ರೀಮನ್ನಾರಾಯಣನು ಋಷಿಭ್ಯಃ=ಬ್ರಹ್ಮಾದಿ ಜ್ಞಾನಿಗಳಿಗೆ ಯದಾಹ= ಯಾವುದನ್ನು ಹೇಳಿದನೋ ಅಂಥ ಪುರಾಣಂ ಭಾಗವತಂ=ಭಾಗವತಪುರಾಣವನ್ನು ಪ್ರವರ್ತಯೇ=ಹೇಳಲು ಪ್ರಾರಂಭಿಸುವೆನು.

ಎರಡು ರೀತಿಯಿಂದ ಭಾಗವತ ಪರಂಪರೆ ನಡೆದು ಬಂದಿದೆ. ಒಂದು ಸಂಕ್ಷೇಪವಾಗಿ ಶ್ರೀಮನ್ನಾರಾಯಣನಿಂದ, ಬ್ರಹ್ಮ ಮತ್ತು ನಾರದರ ಮುಖಾಂತರ. ವಿಸ್ತಾರವಾಗಿ ಶೇಷ, ಸನತ್ಕುಮಾರ, ಸಾಂಖ್ಯಾಯನ ಮುಂತಾದವರ ದ್ವಾರಾ. ಎರಡನೆಯ ಸ್ಕಂಧದಲ್ಲಿ ನಾರಾಯಣ ಬ್ರಹ್ಮ ಸಂವಾದರೂಪವಾಗಿ ಸಂಕ್ಷೇಪವಾಗಿ ಚತುಶ್ಲೋಕೀ ಭಾಗವತ ಹೇಳಲ್ಪಟ್ಟಿತು. ಅದೇ ಬ್ರಹ್ಮ ನಾರದ ಸಂವಾದದಿಂದ ಸ್ವಲ್ಪ ವಿಸ್ತರಿಸಲ್ಪಟ್ಟಿತು. ಅದನ್ನೇ ಶೇಷದೇವರು ಅತಿ ವಿಸ್ತಾರವಾಗಿ ಹೇಳಿದ್ದಾರೆ. ಅದನ್ನೇ ನಿನಗೆ ಹೇಳುವೆನು ಎಂದು ಭಾವ. ॥೨॥

ಯಾರು ಆ ಭಗವಂತ ? ಯಾವ ಋಷಿಗಳಿಗೆ ಹೇಳಿದ ? ನಿನಗೆ ಹೇಗೆ ಪ್ರಾಪ್ತವಾಯಿತು ? ಎಂದರೆ ಹೇಳುವರು –

**ಆಸೀನಮುರ್ವ್ಯಾಂ ಭಗವಂತಮಾದ್ಯಂ**
**ಸಂಕರ್ಷಣಂ ದೇವಮಕುಂಠಸತ್ವಂ ।**
**ವಿವಿತ್ಸವಸ್ತತ್ವಮತಃ ಪರಸ್ಯ**
**ಕುಮಾರಮುಖ್ಯಾ ಮುನಯೋಽನ್ವಪೃಚ್ಛನ್ ॥೩॥**

ಉರ್ವ್ಯಾಂ=ಪಾತಾಲಲೋಕದಲ್ಲಿ (ಲೋಕಗಳಿಗೆ ಭೂಃ ಭುವಃ ಸ್ವಃ ಎಂದು ತ್ರಿತ್ವ ವಿವಕ್ಷೆಯಲ್ಲಿ ಪಾತಾಲವು ಭೂಲೋಕದಲ್ಲೇ ಸೇರುವುದು) ಆಸೀನಂ= ಕುಳಿತಿರುವ, ಭಗವಂತಂ=ಪೂಜ್ಯನಾದ, ಅಕುಂಠಸತ್ವಂ=ಅಪ್ರತಿಹತವಾದ, ಬಲಜ್ಞಾನ–

ವುಳ್ಳ ಸಂಕರ್ಷಣಂ ದೇವಂ=ಶೇಷದೇವರನ್ನು ಅತಃ=ಶೇಷದೇವರಿಗಿಂತ ಪರಸ್ಯ= ಉತ್ತಮನಾದ ಪರಮಾತ್ಮನ ತತ್ವಂ=ಸ್ವರೂಪವನ್ನು ವಿವಿತ್ಸವಃ=ತಿಳಿಯಲಿಚ್ಛಿಸುವ ಕುಮಾರಮುಖ್ಯಾಃ=ಸನತ್ಕುಮಾರ ಮೊದಲಾದ ಮುನಯಃ=ಋಷಿಗಳು ಅನ್ವಪೃಚ್ಛನ್=ಪ್ರಶ್ನಿಸಿದರು. ॥೩॥

ಆಪ್ತತೆಯನ್ನು ಉಪಪಾದಿಸಲು ಶೇಷದೇವರನ್ನು ವರ್ಣಿಸುವರು –

**ಸ್ವಮೇವ ಧಿಷ್ಣ್ಯಂ ಬಹುಮಾನಯಂತಂ**
**ಯಂ ವಾಸುದೇವಾಭಿಧಮಾಮನಂತಿ ।**
**ಪ್ರತ್ಯಕ್‌ಧೃತಾಕ್ಷಾಂಬುಜಕೋಶಮೀಷ**
**ದುನ್ಮೀಲಯಂತಂ ವಿಬುಧೋದಯಾಯ ॥೪॥**

ಯಂ=ಯಾವನನ್ನು ವಾಸುದೇವಾಭಿದಂ=ವಾಸುದೇವಶಬ್ದವಾಚ್ಯನೆಂದು ಆಮನಂತಿ=ವೇದಗಳು ಹೇಳುವವೋ ಸ್ವಂ=ತನ್ನ ಧಿಷ್ಣ್ಯಂ=ಆಶ್ರಯನಾದ ಸಂಕರ್ಷಣನೆಂಬ ಭಗವಂತನನ್ನೇ ಬಹುಮಾನಯಂತಂ=ಬಹಳವಾಗಿ ಪೂಜಿಸುವ ಪ್ರತ್ಯಕ್‌ಧೃತ=ಒಳಗೆ ಧರಿಸಲ್ಪಟ್ಟ ಅಂದರೆ ಬಾಹ್ಯವ್ಯಾಪಾರದಿಂದ ನಿವರ್ತಿತವಾದ ಅರ್ಥಾತ್ ಮುಚ್ಚಲ್ಪಟ್ಟ ಅಕ್ಷಾಂಬುಜಕೋಶಂ=ಕಣ್ಣುಗಳೆಂಬ ಕಮಲದ ಮೊಗ್ಗನ್ನು ವಿಬುಧೋದಯಾಯ=ದೇವತೆಗಳ ಅಭ್ಯುದಯಕ್ಕಾಗಿ ಈಷದುನ್ಮೀಲಯಂತಂ= ಸ್ವಲ್ಪ ವಿಕಾಸಗೊಳಿಸುವ.

ಮೇಲಿನ ಶ್ಲೋಕದಲ್ಲಿ ಧಿಷ್ಣ್ಯಶಬ್ದಕ್ಕೆ ಪ್ರಕೃತೋಪಯುಕ್ತವಾದ ಅರ್ಥವನ್ನು ಹೇಳುವರು –

**"ಆಧಾರ ಆಶ್ರಯೋ ಧಿಷ್ಣ್ಯಂ ನಿಧಾನಂ ಚಾಭಿಧೀಯತೇ"ಇತ್ಯಭಿದಾನಂ ।**

ಧಿಷ್ಣ್ಯವು ಆಧಾರ, ಆಶ್ರಯ, ನಿಧಾನ ಶಬ್ದಗಳಿಂದ ಕರೆಯಲ್ಪಡುವುದು. ॥೪॥

**ಸ್ವರ್ಧುನ್ಯುದಾರ್ದ್ರೈಃ ಸ್ವಜಟಾಕಲಾಪೈ-**
**ರುಪಸ್ಪೃಶಂತ್ಯಶ್ಚರಣೋಪಧಾನಂ ।**
**ಪದ್ಮಂ ಯದರ್ಚಂತ್ಯಹಿರಾಜಕನ್ಯಾಃ**
**ಸಪ್ರೇಮ ನಾನಾಬಲಿಭಿರ್ವರಾರ್ಹಾಃ ॥೫॥**

ಯತ್=ಯಾರ, ಚರಣೋಪಧಾನಂ=ಪಾದಪೀಠದಂತಿರುವ ಪದ್ಮಂ=ಕಮಲ- ವನ್ನು ವರಾರ್ಹಾಃ=ವರನನ್ನು ಪಡೆಯಲು ಯೋಗ್ಯರಾದ ಅಹಿರಾಜಕನ್ಯಾಃ= ನಾಗಕನ್ಯೆಯರು ಸ್ವರ್ಧುನ್ಯುದಾರ್ದ್ರೈಃ=ಗಂಗಾನದಿಯಲ್ಲಿ ಸ್ನಾನ ಮಾಡುವುದರಿಂದ

ಒದ್ದೆಯಾದ (ಉತ್ಕೃಷ್ಟವಾದ) ಸ್ವಜಟಾಕಲಾಪೈಃ=ತಮ್ಮ ಕೂದಲುಗಳಿಂದ ಉಪಸ್ಪೃಶಂತ್ಯಃ=ಸ್ಪರ್ಶಿಸುತ್ತ ಸಪ್ರೇಮ=ಪ್ರೇಮದಿಂದ ನಾನಾಬಲಿಭಿಃ=ಬಹುವಿಧ ಪೂಜಾಸಾಧನಗಳಿಂದ ಅರ್ಚಂತಿ=ಪೂಜಿಸುವರು. ಉತ್ತಮ ಪತಿ ದೊರೆಯಲೆಂದು ನಾಗಕನ್ಯೆಯರು ಮಂದಾಕಿನಿಯಲ್ಲಿ ಮಿಂದು, ಭಕ್ತಿಯಿಂದ ಪಾದಪೀಠವಾದ ಪದ್ಮಕ್ಕೆ ತಲೆ ಬಾಗಿ ನಮಸ್ಕರಿಸುತ್ತ ವಿವಿಧವಾಗಿ ಪೂಜಿಸುವರು ಎಂದು ಭಾವ. ॥೫॥

**ಮುಹುರ್ಗೃಣಂತೋ ವಚಸಾನುರಾಗ-**
**ಸ್ಖಲತ್ಪದೇನಾಸ್ಯ ಕೃತಾನಿ ತಜ್ಞಾಃ ।**
**ಕಿರೀಟಸಾಹಸ್ರಮಣಿಪ್ರವೇಕ-**
**ಪ್ರದ್ಯೋತಿತೋದ್ದಾಮಫಣಾಸಹಸ್ರಂ ॥೬॥**

ತಜ್ಞಾಃ=ಶೇಷದೇವರ ಕಾರ್ಯಗಳನ್ನರಿತ ಕನ್ಯೆಯರು ಅನುರಾಗಸ್ಖಲತ್ಪದೇನ=ಭಕ್ತಿಯಿಂದ ಕುಂಠಿತವಾಗುವ (ತೊದಲುವ) ಶಬ್ದಗಳುಳ್ಳ ವಚಸಾ=ಮಾತಿನಿಂದ ಅಸ್ಯ=ಶೇಷದೇವರ ಕೃತಾನಿ=ಕಾರ್ಯಗಳನ್ನು ಮುಹುಃ=ಪುನಃ ಪುನಃ ಗೃಣಂತಃ=ಸ್ತುತಿಸುತ್ತ, ಕಿರೀಟಸಾಹಸ್ರಮಣಿಪ್ರವೇಕಪ್ರದ್ಯೋತಿತೋದ್ದಾಮಫಣಾಸಹಸ್ರಂ=ಸಾವಿರ ಕಿರೀಟಗಳಲ್ಲಿರುವ ಶ್ರೇಷ್ಠ ರತ್ನಗಳಿಂದ ಪ್ರಕಾಶಿತವಾದ ಉತ್ಕೃಷ್ಟವಾದ ಸಾವಿರ ಹೆಡೆಗಳುಳ್ಳ ಶೇಷದೇವರನ್ನು ಪ್ರಶ್ನಿಸಿದರು ಎಂದು ಪೂರ್ವಶ್ಲೋಕದಲ್ಲಿ ಅನ್ವಯ.

**ಪ್ರೋಕ್ತಂ ಕಿಲೈತದ್ ಭಗವತ್ತಮೇನ**
**ನಿವೃತ್ತಧರ್ಮಾಭಿರತಾಯ ತೇನ ।**
**ಸನತ್ಕುಮಾರಾಯ ಸ ಚಾಹ ಪೃಷ್ಟಃ**
**ಸಾಂಖ್ಯಾಯನಾಯಾಂಗ ಧೃತವ್ರತಾಯ ॥೭॥**

ಅಂಗ=ವಿದುರನೇ ! ಭಗವತ್ತಮೇನ ತೇನ=ಅತ್ಯಂತ ಪೂಜ್ಯರಾದ ಶೇಷದೇವರಿಂದ ನಿವೃತ್ತಧರ್ಮಾಭಿರತಾಯ=ನಿಷ್ಕಾಮವಾಗಿ ಜ್ಞಾನಪೂರ್ವಕ ಮಾಡುವ ಧರ್ಮದಲ್ಲಿ ಆಸಕ್ತರಾದ ಸನತ್ಕುಮಾರಾಯ=ಸನತ್ಕುಮಾರರಿಗೆ ಏತತ್=ಈ ಭಾಗವತವು ಪ್ರೋಕ್ತಂ ಕಿಲ=ಹೇಳಲ್ಪಟ್ಟಿತಷ್ಟೇ. ಸ ಚ=ಸನತ್ಕುಮಾರರಾದರೂ ಪೃಷ್ಟಃ=ಪ್ರಶ್ನಿಸಲ್ಪಟ್ಟವರಾಗಿ ಧೃತವ್ರತಾಯ=ವ್ರತವನ್ನು ಧಾರಣಮಾಡಿದ ಸಾಂಖ್ಯಾಯನಾಯ=ಸಾಂಖ್ಯಾಯನರಿಗೆ ಆಹ=ಹೇಳಿದನು.

**ಸಾಂಖ್ಯಾಯನಃ ಪಾರಮಹಂಸ್ಯಮುಖ್ಯೋ**
**ವಿವಕ್ಷಮಾಣೋ ಭಗವದ್ವಿಭೂತೀಃ ।**

**ಜಗಾದ ಸೋಽಸ್ಮದ್‌ಗುರವೇಽನ್ವಿತಾಯ**
**ಪರಾಶರಾಯಾಥ ಬೃಹಸ್ಪತೇಶ್ಚ ॥೮॥**

ಪಾರಮಹಂಸ್ಯಮುಖ್ಯಃ=ಪರಮಹಂಸರ ಧರ್ಮಾಚರಣೆಯಲ್ಲಿ ಮುಖ್ಯರಾದ ಸಾಂಖ್ಯಾಯನಃ=ಸಾಂಖ್ಯಾಯನರು ಭಗವದ್ವಿಭೂತೀಃ=ಪರಮಾತ್ಮನ ಮಹಿಮೆಯನ್ನು ವಿವಕ್ಷಮಾಣಃ=ಹೇಳುವ ಇಚ್ಛೆವುಳ್ಳವರಾಗಿ, ಅನ್ವಿತಾಯ=ತಮ್ಮನ್ನು ಅನುಸರಿಸುವ ಅಸ್ಮದ್ಗುರವೇ=ನಮ್ಮ ಗುರುಗಳಾದ ಪರಾಶರಾಯ=ಪರಾಶರಋಷಿಗಳಿಗೆ ಅಥ=ಮತ್ತು ಬೃಹಸ್ಪತೇಃ=ಬೃಹಸತಿಗಳಿಗೂ ಜಗಾದ=ಹೇಳಿದರು. ॥೮॥

**ಪ್ರೋವಾಚ ಮಹ್ಯಂ ಸ ದಯಾಲುರುಕ್ತೋ**
**ಮುನಿಃ ಪುಲಸ್ತ್ಯೇನ ಪುರಾಣಮಾದ್ಯಂ ।**
**ಸೋಽಹಂ ತವೈತತ್ ಕಥಯಾಮಿ ವತ್ಸ**
**ಶ್ರದ್ಧಾಲವೇ ನಿತ್ಯಮನುವ್ರತಾಯ ॥೯॥**

ಪುಲಸ್ತ್ಯೇನ=ಪುಲಸ್ತ್ಯರಿಂದ ಉಕ್ತಃ=ವರದಿಂದ ಅಭಿನಂದಿತರಾದ ಸಃ ದಯಾಲುಃ ಮುನಿಃ=ದಯಾಳುಗಳಾದ ಆ ಪರಾಶರರು, ಆದ್ಯಂ ಪುರಾಣಂ=ಶ್ರೇಷ್ಠವಾದ ಭಾಗವತವನ್ನು ಮಹ್ಯಂ ಪ್ರೋವಾಚ=ನನಗೆ ಹೇಳಿದರು. ಸೋಽಹಂ=ಪರಾಶರಶಿಷ್ಯನಾದ ನಾನು, ನಿತ್ಯಂ ಅನುವ್ರತಾಯ=ಯಾವಾಗಲು ನನ್ನನ್ನು ಅನುಸರಿಸುವ ಶ್ರದ್ಧಾಲವೇ=ಶ್ರದ್ಧಾಳುವಾದ ತವ=ನಿನಗೆ ವತ್ಸ=ವಿದುರನೇ ಏತತ್=ಭಾಗವತವನ್ನು ಕಥಯಾಮಿ=ಹೇಳುವೆನು.

ಹಿಂದೆ ತಂದೆಯಾದ ಶಕ್ತಿಯನ್ನು ರಾಕ್ಷಸರು ತಿಂದರು ಎಂಬುದನ್ನು ಕೇಳಿ ಪರಾಶರರು ರಾಕ್ಷಸರ ನಾಶಕ್ಕಾಗಿ ಯಜ್ಞ ಮಾಡಲಾರಂಭಿಸಿ ಅಜ್ಜನಾದ ವಸಿಷ್ಠರ ಮಾತಿನಿಂದ ನಿಲ್ಲಿಸಿದರು. ಆಗ ಪುಲಸ್ತ್ಯರು ತಮ್ಮ ಸಂತತಿಯಾದ ರಾಕ್ಷಸರನ್ನು ಸಂಹರಿಸದೇ ಇರುವದರಿಂದ ಸಂತುಷ್ಟರಾಗಿ ಪುರಾಣವಕ್ತಾ ಆಗುವಿ ಎಂದು ವರವನ್ನಿತ್ತರು. ಇದನ್ನು ಸೂಚಿಸಲು 'ಪುಲಸ್ತ್ಯೇನ ಉಕ್ತಃ' ಎಂಬ ವಿಶೇಷಣವನ್ನಿತ್ತಿರುವರು. ॥೯॥

ಹಿಂದೆ 'ಪಾದ್ಮಕಲ್ಪಮಿಮಂ ಶ್ರುಣು' ಎಂದು ಹೇಳಿದೆ. ಅದನ್ನು ಮೈತ್ರೇಯರ ಮುಖದಿಂದ ಹೇಳಿಸುತ್ತ ಶುಕಾಚಾರ್ಯರು ಹೇಳುವರು –

**ಉದಪ್ಲುತಂ ವಿಶ್ವಮಿದಂ ತದಾಸೀದ್**
**ಯನ್ನಿದ್ರಯಾಽಮೀಲಿತದೃಜ್ ನ್ಯಮೀಲಯತ್ ।**

**ಅಹೀಂದ್ರತಲ್ಪೇಽಧಿಶಯಾನ ಏಕಃ**
**ಕೃತಕ್ಷಣಃ ಸ್ವಾತ್ಮರತಾವನೀಹಃ ॥೧೦॥**

ಅನೀಹಃ=ಕ್ಲೇಶವಿಲ್ಲದೇ ಕಾರ್ಯಮಾಡುವ, ಪ್ರಾಣಿಗಳಿಗಾಗಿ ಅವತಾರ ಮಾಡುವ, ಅಥವಾ ಜಗತ್ತಿನ ಸೃಷ್ಟ್ಯಾದಿವ್ಯಾಪರದಿಂದ ಉಪರತನಾದ ಶ್ರೀಹರಿಯು ಸ್ವಾತ್ಮರತೌ=ತನ್ನಲ್ಲೇ ರಮಣಮಾಡಲು ಕೃತಕ್ಷಣಃ=ಅವಕಾಶದೊರೆತವನಾಗಿ, ಅಹೀಂದ್ರತಲ್ಪೇ=ಶೇಷನೆಂಬಹಾಸಿಗೆಯ ಮೇಲೆ ಶಯಾನಃ ಸನ್=ಮಲಗಿದವನಾಗಿ ಏಕಃ=ಎಲ್ಲ ಅವತಾರಗಳಿಂದ ಒಂದಾಗಿ ಸಂಶ್ಲೇಷವಿಶೇಷವನ್ನು ಪಡೆದು ಯತ್= ಯಾವಾಗ ಅಮೀಲಿತದೃಕ್ ನಿದ್ರಾರಹಿತನಾಗಿದ್ದರೂ ನ್ಯಮೀಲಯತ್=ಕಣ್ಣನ್ನು ಮುಚ್ಚಿದನೋ, ತದಾ=ಆಗ ಇದಂ ವಿಶ್ವಂ=ಈ ಪ್ರಪಂಚವು ಉದಪ್ಲುತಂ ಆಸೀತ್=ಸತ್ಯಲೋಕಪರ್ಯಂತ ಬಂದಿರುವ ಪ್ರಳಯಜಲದಲ್ಲಿ ಮುಳಗಲ್ಪಟ್ಟಿತ್ತು.

**ಸೋಽಂತಃ ಶರೀರೇಽರ್ಪಿತಭೂತಸೂಕ್ಷ್ಮಃ**
**ಕಾಲಾತ್ಮಿಕಾಂಶಕ್ತಿಮುದೀರಯಾಣಃ ।**
**ಉವಾಸ ತಸ್ಮಿನ್ ಸಲಿಲೇ ಪದೇ ಸ್ವೇ**
**ಯಥಾಽನಲೋ ದಾರುಣಿ ರುದ್ಧವೀರ್ಯಃ ॥೧೧॥**

ಸಃ=ಪರಮಾತ್ಮನು, ಅಂತಃಶರೀರೇ=ತನ್ನ ದೇಹಮಧ್ಯದಲ್ಲಿ, ಅರ್ಪಿತಭೂತಸೂಕ್ಷ್ಮಃ= ಪ್ರಾಣಿಗಳ ಸೂಕ್ಷ್ಮಶರೀರಗಳನ್ನು ಇರಿಸಿಕೊಂಡವನಾಗಿ ಕಾಲಾತ್ಮಿಕಾಂ=ಕಾಲವೆಂಬ ಸಹಕಾರಿಶಕ್ತಿಯನ್ನು (ಪ್ರಳಯಕಾಲಾಭಿಮಾನಿನಿಯಾದ ತನ್ನ ಹೆಂಡತಿಯನ್ನು) ಉದೀರಯಾಣಃ=ಪ್ರೇರಿಸುತ್ತ ಸ್ವೇ ಪದೇ=ತನ್ನ ಸ್ಥಾನವಾದ ಸಲಿಲೇ ತಸ್ಮಿನ್= ನೀರಿನಲ್ಲಿ ಅನಲಃ=ಅಗ್ನಿಯು ದಾರುಣಿ=ಕಟ್ಟಿಗೆಯಲ್ಲಿ ರುದ್ಧವೀರ್ಯಃ= ಪ್ರತಿಬದ್ಧವಾದ ದಾಹಕತ್ವಶಕ್ತಿಯುಳ್ಳದ್ದಾಗಿ ಯಥಾ=ಹೇಗಿರುವುದೋ ಹಾಗೆ, ಉವಾಸ=ತನ್ನ ಶಕ್ತಿಯನ್ನು ಆವಿರ್ಭಾವಗೊಳಿಸದೇ ವಾಸಿಸಿದನು. ॥೧೧॥

ಶ್ರೀಹರಿಯ ನಿದ್ರೆಯ ಕಾಲವನ್ನು ಹೇಳಿ ಮತ್ತೆ ಸೃಷ್ಟಿಯನ್ನು ಹೇಳಲು ಹೇಳುವರು –

**ಚತುರ್ಯುಗಾನಾಂ ಚ ಸಹಸ್ರಮಪ್ಸು**
**ಸ್ವಪಂಸ್ತಯೋದೀರಿತಯಾ ಸ್ವಶಕ್ತ್ಯಾ ।**
**ಕಾಲಾಖ್ಯಯಾಽಸಾದಿತಕರ್ಮತಂತ್ರೋ**
**ಲೋಕಾನಪೀಮಾನ್ ದದೃಶೇ ಸ್ವದೇಹೇ ।೧೨॥**

ಚತುರ್ಯುಗಾನಾಂ ಸಹಸ್ರಂ=ನಾಲ್ಕುಸಾವಿರ ಮಹಾಯುಗಪರ್ಯಂತವಾಗಿ ಅಪ್ಸು=ನೀರಲ್ಲಿ ಸ್ವಪನ್=ಮಲಗಿದವನಾಗಿ ಕಾಲಾಖ್ಯಯಾ=ಸೃಷ್ಟಿಕಾಲವೆಂಬ ಸಹಕಾರಿಯಿಂದ ಉದೀರಿತಯಾ=ಪ್ರೇರಿತವಾದ ತಯಾ=ಹಿಂದೆ ಹೇಳಿದ ಸ್ವಶಕ್ತ್ಯಾ=ಕಾಲನಾಮಕವಾದ ತನ್ನ ಶಕ್ತಿಯಿಂದ ಆಸಾದಿತಕರ್ಮತಂತ್ರಃ=ಸಂಪಾದಿತವಾದ ಅದೃಷ್ಟವೆಂಬ ಸಾಧನವುಳ್ಳವನಾಗಿ ಸ್ವದೇಹೇ=ತನ್ನ ದೇಹದಲ್ಲಿ ಇಮಾನ್= ಲೋಕಾನ್=ಈ ಜನರನ್ನು ಅಪಿ=ಕಾಲಮುಂತಾದ ಸಹಕಾರಿಗಳನ್ನೂ ದದೃಶೇ= ನೋಡಿದನು. ॥೧೨॥

ಮೊದಲಿಗೆ ಪದ್ಮದ ಉತ್ಪತ್ತಿಯನ್ನು ಹೇಳುವರು –

**ತಸ್ಯಾತ್ಮಸೂಕ್ಷ್ಮಾಭಿನಿವಿಷ್ಟದೃಷ್ಟೇ-**
**ರಂತರ್ಗತೋಽರ್ಥೋ ರಜಸಾಽತನೀಯಾನ್ ।**
**ಗುಣೇನ ಕಾಲಾನುಗತೇನ ವಿದ್ಧಃ**
**ಶುಷ್ಯಂಸ್ತದಾಽಭಿದ್ಯತ ನಾಭಿದೇಶಾತ್ ॥೧೩॥**

ತದಾ=ಸೃಷ್ಟಿಕಾಲವು ಬಂದಾಗ ಆತ್ಮಸೂಕ್ಷ್ಮಾಭಿನಿವಿಷ್ಟದೃಷ್ಟೇಃ=ಜೀವರುಗಳ ಸೂಕ್ಷ್ಮದೇಹಗಳನ್ನು ಸ್ಥೂಲಮಾಡುವುದಕ್ಕಾಗಿ ಅಭಿನಿವೇಶವುಳ್ಳ ದೃಷ್ಟಿಯುಳ್ಳ (ತನ್ನಲ್ಲಿರುವ ಯೋಗಿಗಳಿಗೆ ಕಾಣುವ ಆಕಾಶಾದಿಗಳು, ಇಂದ್ರಿಯಗಳು, ಜೀವರು, ಇವರ ಸಾಕ್ಷಾತ್ಕಾರವಿರುವ) ತಸ್ಯ=ನಾರಾಯಣನ ನಾಭಿದೇಶಾತ್=ಹೊಕ್ಕಳಿನಿಂದ ಅಂತರ್ಗತಃ=ಉದರದಲ್ಲಿರುವ ಅತನೀಯಾನ್ ಅರ್ಥಃ=ಗರ್ಭೋದಕವೆಂಬ ಸ್ಥೂಲಪದಾರ್ಥವು ಕಾಲಾನುಗತೇನ=ಸೃಷ್ಟಿಕಾಲಾನುಸಾರಿಯಾದ ರಜಸಾ ಗುಣೇನ= ರಜೋಗುಣದಿಂದ ವಿದ್ಧಃ=ಕ್ಷೋಭಿತವಾಗಿ ಶುಷ್ಯನ್=ಗಾಳಿಯಿಂದ ಒಣಗಿ ಗಟ್ಟಿಯಾಗಿ ಅಭಿದ್ಯತ=ಪದ್ಮಾಕಾರವಾಗಿ ಹೊರಹೊರಟಿತು.

ಇಲ್ಲಿ 'ಉದರಾಂತರ್ಗತಅರ್ಥ' ಯಾವುದೆಂದು ತಿಳಿಯುವುದಿಲ್ಲ ಆದ್ದರಿಂದ ಪ್ರಮಾಣದಿಂದ ಅದನ್ನು ತಿಳಿಸುವರು –

**ಉದಕಂ ವಾಯುನಾ ಶುಷ್ಕಂ ಭಿನ್ನಂ ಪದ್ಮಮಭೂದ್ಧರೇಃ । ಇತಿ ಪಾದ್ಮೇ ।**

ವಾಯುನಾ ಶುಷ್ಕಂ ಎಂದದ್ದರಿಂದ ಮೂಲದಲ್ಲಿ ವಾಯುನಾ ಎಂದು ಅಧ್ಯಾಹಾರ ಮಾಡಬೇಕು ಎಂದು ಸೂಚಿಸುವರು.

ಗರ್ಭೋದಕವು ವಾಯುವಿನಿಂದ ಶುಷ್ಕವಾಗಿ(ಘನೀಭೂತವಾಗಿ) ಪದ್ಮಾಕಾರ-ವಾಗಿ ನಿರ್ಗತವಾಯಿತು ಎಂದು ಭಾವ. ॥೧೩॥

ಹುಟ್ಟಿರುವ ಪದ್ಮದ ಅಭಿವೃದ್ಧಿಯನ್ನು ಹೇಳುವರು–

**ಸ ಪದ್ಮಕೋಶಃ ಸಹಸೋದತಿಷ್ಠತ್**
**ಕಾಲೇನ ಕರ್ಮಪ್ರತಿಬೋಧಿತೇನ ।**
**ಸ್ವರೋಚಿಷಾ ತತ್ ಸಲಿಲಂ ವಿಶಾಲಂ**
**ವಿದ್ಯೋತಯನ್ನರ್ಕ ಇವಾತ್ಮಯೋನಿಃ ॥೧೪॥**

ಆತ್ಮಯೋನಿಃ=ಶ್ರೀಹರಿಯೇ ಮುಖ್ಯ ಕಾರಣವಾಗಿವುಳ್ಳ ಸಃ=ಪದ್ಮಕೋಶಃ=ಆ ಪದ್ಮವು ಸಹಸಾ=ದೃಷ್ಟಕಾರಣಗಳಿಲ್ಲದಿದ್ದರೂ ಕರ್ಮಪ್ರತಿಬೋಧಿತೇನ=ಕಾರ್ಯ-ವನ್ನು ಹುಟ್ಟಿಸಲು, ಜೀವರ ಅದೃಷ್ಟದಿಂದ ಉನ್ಮುಖೀಕರಿಸಲ್ಪಟ್ಟ ಕಾಲೇನ=ಕಾಲವೆಂಬ ನಿಮಿತ್ತದಿಂದ, ವಿಶಾಲಂ=ವ್ಯಾಪಿಸಿರುವ ತತ್ ಸಲಿಲಂ=ಪ್ರಳಯಕಾಲದ ನೀರನ್ನು ಅರ್ಕಃ ಇವ=ಸೂರ್ಯನಂತೆ ಸ್ವರೋಚಿಷಾ ವಿದ್ಯೋತಯನ್=ತನ್ನ ಕಾಂತಿಯಿಂದ ಬೆಳಗುತ್ತ ಉದತಿಷ್ಠತ್=ಹದಿನಾಲ್ಕು ಲೋಕಗಳಾಗುವಂತೆ ಬೆಳೆಯಿತು.

**ಆತ್ಮಾ ವಿಷ್ಣುರಸ್ಯ ಯೋನಿಃ ॥೧೪॥**

ಬ್ರಹ್ಮದೇವನು ಕೇವಲ ಪದ್ಮದಿಂದ ಜನಿಸಿದನು ಎಂಬುವ ಪ್ರಸಿದ್ಧಿಯನ್ನು ನಿರಾಕರಿಸಲು ಪದ್ಮದಲ್ಲಿ ಶ್ರೀಹರಿಯ ಪ್ರವೇಶವನ್ನು ಹೇಳುವರು.

**ತಲ್ಲೋಕಪದ್ಮಂ ಸ ಉ ಏವ ವಿಷ್ಣುಃ**
**ಪ್ರಾವೀವಿಶತ್ ಸರ್ವಗುಣಾವಭಾಸಂ ।**
**ತಸ್ಮಿನ್ ಸ್ವಯಂ ವೇದಮಯೋ ವಿಧಾತಾ**
**ಸ್ವಯಂಭುವಂ ಯಂ ಸ್ಮ ವದಂತಿ ಸೋಽಭೂತ್ ॥೧೫॥**

ಸಃ ಏವ ವಿಷ್ಣುಃ=ಯಾವನನಾಭಿಯಿಂದ ಪದ್ಮವು ಜನಿಸಿತೋ ಆ ವಿಷ್ಣುವೇ ಸರ್ವಗುಣಾವಭಾಸಂ=ಶಬ್ದಾದಿ ಎಲ್ಲ ಗುಣಗಳು ಕಂಡು ಬರುವ ಪೃಥಿವ್ಯಾತ್ಮಕವಾದ ತತ್=ಮೊದಲಿಗೆ ಜನಿಸಿದ ಲೋಕಪದ್ಮಂ=ಲೋಕಾತ್ಮಕಪದ್ಮವನ್ನು ಪ್ರಾವೀವಿಶತ್=ಪ್ರವೇಶಿಸಿದನು. ತಸ್ಮಿನ್=ಆ ಪದ್ಮದಲ್ಲಿ ಅಂತರ್ಯಾಮಿಯಾಗಿ ಇರುವ ಸ್ವಯಂ=ಪ್ರಧಾನನಾದ ಹರಿಯಿಂದ ತಸ್ಮಿನ್=ಪದ್ಮದಲ್ಲಿ ವೇದಮಯಃ=ಸಕಲ ವೇದದ್ರಷ್ಟ್ರ-ವಾದ ವಿಧಾತಾ=ಬ್ರಹ್ಮದೇವನು ಅಭೂತ್=ಉತ್ಪನ್ನನಾದನು ಆದ್ದರಿಂದಲೇ ಯಂ=ಯಾವನನ್ನು ಸ್ವಯಂಭುವಂ ವದಂತಿ='ಸ್ವಯಂಭೂ' ಎಂದು ಕರೆಯುವರು. ಹೊರತು ತನ್ನಿಂದ ತಾನೇ ವ್ಯಕ್ತನಾದದ್ದರಿಂದಲ್ಲ.

ಇಲ್ಲಿ ವಿಷ್ಣುವಿಗೆ ಪದ್ಮದಲ್ಲಿ ಪ್ರವೇಶವನ್ನು ಮಾತ್ರ ಹೇಳಿದೆ. ಅವನಿಂದ ಬ್ರಹ್ಮನು ಜನಿಸಿದನೆಂದು ಹೇಳಿಲ್ಲ. ಕಾರಣ ಪದ್ಮದಲ್ಲಿರುವ ವಿಷ್ಣುವಿನಿಂದ ಬ್ರಹ್ಮನು ಹುಟ್ಟಿದನು ಎಂದು ಇಲ್ಲಿ ವ್ಯಾಖ್ಯಾನಿಸಬೇಕು ಎಂಬ ಅಭಿಪ್ರಾಯದಿಂದ ಆ ವಿಷಯದಲ್ಲಿ ಪ್ರಮಾಣ ಹೇಳುವರು–

**ಪದ್ಮಸಂಸ್ಥಾದ್ಧರೇಸ್ತತ್ರ ಬ್ರಹ್ಮಾಽಜನಿ ಚತುರ್ಮುಖಃ । ಇತಿ ಚ ।**

ಪದ್ಮದಲ್ಲಿರುವ ಶ್ರೀಹರಿಯಿಂದ ಪದ್ಮದಲ್ಲಿ ನಾಲ್ಕು ಮುಖವುಳ್ಳವನಾಗಿ ಬ್ರಹ್ಮನು ಜನಿಸಿದನು ಎಂದರ್ಥ. ಇದರಿಂದ ಮೂಲದಲ್ಲಿ 'ತಸ್ಮಿನ್' 'ಸ್ವಯಂ' ಎಂಬ ಪದಗಳಿಗೆ ಪದ್ಮದಲ್ಲಿರುವ ಹರಿಯಿಂದ ಎಂದು ಅರ್ಥ ಮಾಡಬೇಕೆಂದು ಸೂಚಿತವಾಗುವುದು. ಮತ್ತು 'ತತ್ರ' ಪದ್ಮದಲ್ಲಿ ಎಂದೂ ಪ್ರಮಾಣದಲ್ಲಿರುವುದ-ರಿಂದ 'ತಸ್ಮಿನ್' ಎಂಬುದಕ್ಕೆ ಆವೃತ್ತಿಯೂ ಸೂಚಿತವು. ಚತುರ್ಮುಖನಾಗಿ ಎಂದು ಹೇಳಿದ್ದರಿಂದ ಮುಂದಿನ ಶ್ಲೋಕದ ತಾತ್ಪರ್ಯವನ್ನು ಹೇಳಿದಂತಾಯಿತು.

ಸರ್ವಗುಣಾವಭಾಸಂ ಎಂಬ ಪದಕ್ಕೆ ಅಭಿಪ್ರೇತವಾದ ಅರ್ಥ ಹೇಳುವರು–

**ಸರ್ವಗುಣಾವಭಾಸಂ ಪೃಥಿವ್ಯಾತ್ಮಕಂ ।**
**ಪೃಥಿವ್ಯಾಂ ಹಿ ಸರ್ವೇ ಶಬ್ದಾದಯೋ ಗುಣಾಃ ಅವಭಾಸಂತೇ ॥**

ಯಾವ ಕಾರಣ ಪೃಥಿವಿಯಲ್ಲಿ ಶಬ್ದ ಮೊದಲಾದ ಎಲ್ಲ ಗುಣಗಳು ಕಂಡು ಬರುವವೋ ಆದ್ದರಿಂದ 'ಸರ್ವಗುಣಾವಭಾಸಾ' ಎಂದರೆ ಪೃಥಿವೀ. ಅದೇ ಉಪಾದಾನವಾದ್ದರಿಂದ ಪೃಥಿವ್ಯಾತ್ಮಕವಾದುದು ಕಮಲ ಎಂದು ಭಾವ. 'ಸರ್ವೇಷಾಂ ಗುಣಾನಾಂ ಅವಭಾಸಃ ಯಸ್ಯಾಂ ಸಾ ಸರ್ವಗುಣಾವಭಾಸಾ' ಎಂದು ವಿಗ್ರಹ ಸೂಚಿತವಾಗುವುದು. ಪೃಥಿವ್ಯಾತ್ಮಕವಾದುದರಿಂದ ಪದ್ಮವೂ ಸರ್ವಗುಣಾ-ವಭಾಸವೆನಿಸುವುದು.

ಪದ್ಮವು ಪೃಥಿವ್ಯಾತ್ಮಕವೆನ್ನಲು ಪ್ರಮಾಣ ಹೇಳುವರು –

**ತಸ್ಯಾಸನವಿಧಾನಾರ್ಥಂ ಪೃಥಿವೀ ಪದ್ಮಮುಚ್ಯತೇ । ಇತಿ ಮೋಕ್ಷಧರ್ಮೇ ।**

ಬ್ರಹ್ಮನಿಗೆ ಆಸನವನ್ನು ಮಾಡಲು ಪೃಥವೀರೂಪವಾದ ಪದ್ಮವು ಹೇಳಲ್ಪಡುವುದು.

ಮೂಲದಲ್ಲಿ 'ಸ್ವಯಂ'ಶಬ್ದ ಹರಿವಾಚಕವೆಂದು 'ಪದ್ಮಸಂಸ್ಥಾತ್ ಹರೇಃ' ಎಂಬಲ್ಲಿ ಸೂಚಿಸಿರುವರು. ಆ ವಿಷಯದಲ್ಲಿ ಪ್ರಮಾಣ ಹೇಳುವರು –

**ಪ್ರಧಾನವಾಚಕಸ್ತ್ವೇಕಶ್ಚಾನನ್ಯಃ ಕೇವಲಃ ಸ್ವಯಂ । ಇತಿ ಬ್ರಾಹ್ಮೇ ।**

ಏಕಃ, ಅನನ್ಯಃ, ಕೇವಲಃ, ಸ್ವಯಂ, ಇವುಗಳೆಲ್ಲವು ಪ್ರಧಾನವಾಚಕಗಳೇ ಆಗಿವೆ. ಕಾರಣ ಪ್ರಧಾನನಾದ ಹರಿವಾಚಕತ್ವವು ಸ್ವಯಂಶಬ್ದಕ್ಕೆ ಯುಕ್ತವೇ ಎಂದು ಭಾವ.

ಆ ಬ್ರಹ್ಮನು ಈ ಕಲ್ಪದಲ್ಲಿ ನಾಲ್ಕು ಮುಖವುಳ್ಳವನಾದನು ಎಂದು ಹೇಳುವರು.

**ತಸ್ಯಾಂ ಸ ಚಾಂಭೋರುಹಕರ್ಣಿಕಾಯಾ-**
**ಮವಸ್ಥಿತೋ ಲೋಕಮಪಶ್ಯಮಾನಃ ।**
**ಪರಿಕ್ರಮನ್ ವ್ಯೋಮ್ನಿ ವಿವೃತ್ತನೇತ್ರ-**
**ಶ್ಚತ್ವಾರಿ ಲೇಭೇಽನುದಿಶಂ ಮುಖಾನಿ ॥೧೬॥**

ತಸ್ಯಾಂ=ಆ ಅಂಭೋರುಹಕರ್ಣಿಕಾಯಾಂ=ಕಮಲಕರ್ಣಿಕೆಯಲ್ಲಿ (ಬೀಜ-ಕೋಶದಲ್ಲಿ) ಅವಸ್ಥಿತಃ ಏವ=ಕುಳಿತುಕೊಂಡೇ ಸಃ=ಬ್ರಹ್ಮದೇವನು ಲೋಕಂ=ಜನರನ್ನು ಪರಿಕ್ರಮನ್=ಪ್ರದಕ್ಷಿಣಾಕಾರವಾಗಿ (ಕ್ರಮವಾಗಿ ಪೂರ್ವ,ದಕ್ಷಿಣ, ಪಶ್ಚಿಮ,ಉತ್ತರ) ವ್ಯೋಮ್ನಿ=ಆ ಆ ದಿಕ್ಕುಗಳಲ್ಲಿರುವ ಜನರನ್ನು ನೋಡುವುದಕ್ಕಾಗಿ, ವಿವೃತ್ತನೇತ್ರಃ=ವಿಶೇಷವಾಗಿ ಯಾವಾಗಲೂ ಇರುವ ಕಣ್ಣುಳ್ಳವನಾಗಲು ಅನುದಿಶಂ=ದಕ್ಷಿಣಾದಿ ದಿಕ್ಕುಗಳಲ್ಲಿ ಚತ್ವಾರಿ ಮುಖಾನಿ ಭೇಜೇ=ಮೊದಲು ಹುಟ್ಟಿದ ಮುಖ ಸೇರಿ ನಾಲ್ಕು ಮುಖಗಳನ್ನು ಪಡೆದನು. ಮುಖವಿಲ್ಲದೆ ಕಣ್ಣಿರಲು ಸಾಧ್ಯವಿಲ್ಲವಷ್ಟೇ. ಬ್ರಹ್ಮದೇವರು ಕಮಲಕರ್ಣಿಕೆಯಲ್ಲಿ ಕುಳಿತುಕೊಂಡೇ ನಾಲ್ಕೂ ದಿಕ್ಕುಗಳಲ್ಲಿರುವ ಜನರನ್ನು ನೋಡುವುದಕ್ಕಾಗಿ ನಾಲ್ಕು ದಿಕ್ಕುಗಳಲ್ಲಿಯೂ ತನಗೆ ಕಣ್ಣುಗಳಿರಬೇಕು ಎಂದು ಬಯಸಿ, ಮೊದಲು ಹುಟ್ಟಿದ ಪೂರ್ವದಲ್ಲಿರುವ ಮುಖದ ಜೊತೆಗೆ ಕ್ರಮವಾಗಿ ದಕ್ಷಿಣಾದಿ ದಿಕ್ಕುಗಳಲ್ಲಿ ಹೆಚ್ಚಿನ ಮೂರು ಮುಖವನ್ನು ಪಡೆದರು ಎಂದು ಭಾವ. ॥೧೬॥

ಈ ರೀತಿಯಾಗಿ ಜನಿಸಿದ ಚತುರ್ಮುಖನಿಗೆ ಶ್ರೀಹರಿಯ ಅನುಗ್ರಹದಿಂದಲೇ ಶ್ರೀಹರಿಸಾಕ್ಷಾತ್ಕಾರಾದಿಗಳೇ ಹೊರತು ಸ್ವತಂತ್ರವಾಗಿ ಅಲ್ಲ ಎಂದು ತಿಳಿಸಲು ಮೊದಲಿಗೆ ಅವನಿಗೆ ತನಗೆ ಜನಕನಾದ ಶ್ರೀಹರಿಯ ಸಾಕ್ಷಾತ್ಕಾರವಿರಲಿಲ್ಲವೆಂದು ಹೇಳುವರು –

**ತಸ್ಮಾದ್ ಯುಗಾಂತಶ್ವಸನಾವಘೂರ್ಣ-**
**ಮಹೋರ್ಮಿಚಕ್ರಾತ್ ಸಲಿಲಾದ್ ವಿರೂಢಂ ।**
**ಅಥಾಶ್ರಿತಃ ಕಂಜಮು ಲೋಕತಂತ್ರಂ**
**ನಾತ್ಮಾನಮದ್ಧಾಽವಿದದಾದಿದೇವಃ ॥೧೭॥**

ಯುಗಾಂತಶ್ವಸನಾವಘೂರ್ಣಮಹೋರ್ಮಿಚಕ್ರಾತ್=ಪ್ರಳಯಕಾಲದ ಗಾಳಿಯಿಂದ ಚಲಿಸಲ್ಪಟ್ಟ ದೊಡ್ಡ ತೆರೆಗಳ ಸಮೂಹವುಳ್ಳ, ತಸ್ಮಾತ್ ಸಲಿಲಾತ್=ಆ ನೀರಿನಿಂದ ವಿರೂಢಂ=ಹೊರಹೊರಟ ಚಂಚಲವಾದ ಲೋಕತಂತ್ರಂ=ಲೋಕಗಳಿಗೆ ಕಾರಣವಾದ ಕಂಜಂ=ಕಮಲವನ್ನು ಆಶ್ರಿತಃ=ಆಶ್ರಯಿಸಿದ ಆದಿದೇವಃ=ಮೊದಲಿಗೆ ಜನಿಸಿದ ಬ್ರಹ್ಮದೇವನು, ಆತ್ಮಾನಂ=ಪರಮಾತ್ಮನನ್ನು ಅದ್ಧಾ=ಪ್ರತ್ಯಕ್ಷವಾಗಿ ನ ಉ ಅವಿದತ್=ತಿಳಿಯಲೇ ಇಲ್ಲ. ॥೧೭॥

ಆ ಸಂದರ್ಭದಲ್ಲಿ ಬ್ರಹ್ಮದೇವನಿಗೆ ವಿಚಾರ ಮಾಡಿದ್ದರಿಂದ ಶ್ರೀಹರಿಯ ಪರೋಕ್ಷಜ್ಞಾನ ಸಾಮಾನ್ಯವಾಗಿ ಆಯಿತು ಎಂದು ಹೇಳುವರು –

**ಕ ಏಷ ಯೋಽಸಾವಹಮಬ್ಜಪೃಷ್ಠ**
**ಏತತ್ ಕುತೋ ವಾಽಬ್ಜಮನನ್ಯದಪ್ಸು ।**
**ಅಸ್ತಿ ಹ್ಯಧಸ್ತಾದಿಹ ಕಿಂಚನೈತ-**
**ದಧಿಷ್ಠಿತಂ ಯತ್ರ ಸತಾನುಭಾವ್ಯಂ ॥೧೮॥**

ಯಃ ಅಸೌ ಅಹಂ=ಯಾವ ನಾನು ಅಬ್ಜಪೃಷ್ಠೇ=ಕಮಲದಲ್ಲಿರುವೆನೋ ಏಷಃ ಕಃ=ಈ ನಾನು ಯಾವ ಜಾತಿಯವನು? (ಅಂದರೆ ಯಾರಿಂದ ಹುಟ್ಟಿದವನು ಎಂದರ್ಥ)ಏತತ್=ಈ ಕಮಲವು ಅಪ್ಸು=ನೀರಿನಲ್ಲಿ ಕುತಃ=ಯಾರಿಂದ ಜನಿಸಿತು ? ಯತಃ ಅನನ್ಯತ್=ಯಾವಕಾರಣ ಬೇರೊಬ್ಬ ಕರ್ತೃವಿಲ್ಲದ್ದಾಗಿದೆ. (ಉಪ-ಲಕ್ಷಣಯಾ) ಅಹಮಪಿ ಅನನ್ಯಃ=ನಾನೂ ಸಹ ಕರ್ತ್ರಂತರರಹಿತನು. ಯತ್ರ=ಎಲ್ಲಿ ಏತತ್=ಈ ಕಮಲವು ಅಧಿಷ್ಠಿತಂ ಆಶ್ರಿತವೋ (ಜನಿಸಿತೋ) ತತ್ ಕಿಂಚನ=ಅದು ಒಂದು ಲೋಕವಿಲಕ್ಷಣವಾದುದು ಇಹ=ನೀರಿನಲ್ಲಿ ಅಧಸ್ತಾತ್=ಕೆಳಗೆ ಅಸ್ತಿ= ಇರುವುದು.ಅದು ಸತಾನುಭಾವ್ಯಂ=ನಿಶ್ಚಯವಾಗಿ ಬ್ರಹ್ಮನೇ ಆಗಿರಬೇಕು ಎಂದು ನಿಶ್ಚಯಿಸುವೆ.

ನಾನು ಮತ್ತು ಪದ್ಮವೂ ಕಾರ್ಯವಾದುದರಿಂದ ಕರ್ತೃ ಒಬ್ಬನು ಇರಲೇಬೇಕು.(ಸಾಮಾನ್ಯಸಿದ್ಧಿ) ನನಗಾಗಲಿ ಪದ್ಮಕ್ಕಾಗಲಿ ಬೇರೆ ಕರ್ತೃಗಳಿಲ್ಲ.(ಪ್ರಸಕ್ತ ಪ್ರತಿಷೇಧ) ಅಂದ ಮೇಲೆ ನನಗೂ ಕಮಲಕ್ಕೂ ಕರ್ತೃವಾದವನು ಶ್ರೀಹರಿಯೇ ಆಗಬೇಕು(ಪರಿಶೇಷ)ಎಂದು ಸಾಮಾನ್ಯ ಪರಿಶೇಷಗಳಿಂದ ತಿಳಿದನು ಎಂದು ಭಾವ.

ಈ ಶ್ಲೋಕದಲ್ಲಿಯ ಸಚ್ಛಬ್ದಾರ್ಥ ಹೇಳುವರು –

**ಸತಾ ಬ್ರಹ್ಮಣಾ ।**

"ಹಿ" ಶಬ್ದ ಸೂಚಿತ ಪ್ರಮಾಣ ಹೇಳುವರು –

**"ಸ ಬ್ರಹ್ಮಾऽಚಿಂತಯತ್ ಕುತೋ ನು ಪದ್ಮಂ ? ಬ್ರಹ್ಮಣಃ ಸ್ಯಾದಿತಿ"।**
**ಇತಿ ಮೈತ್ರಾಯಣಶ್ರುತಿಃ**

ಬ್ರಹ್ಮದೇವನು ಪದ್ಮವು ಯಾರಿಂದ ಹುಟ್ಟಿರಬಹುದು ಎಂದು ವಿಚಾರ ಮಾಡಿ ನಿಶ್ಚಯವಾಗಿ ಬ್ರಹ್ಮನಿಂದಲೇ ಹುಟ್ಟಿದೆ ಎಂದು ನಿಶ್ಚಿಯಿಸುದನು ಎಂದು ಬಾವ.

ಈ ರೀತಿಯಾಗಿ ಪರಿಶೇಷದಿಂದ ತನಗೂ ಪದ್ಮಕ್ಕೂ ಕರ್ತೃವನ್ನು ಪರೋಕ್ಷವಾಗಿ ನಿಶ್ಚಯಿಸಿ ಅವನ ಸಾಕ್ಷಾತ್ಕಾರಕ್ಕಾಗಿ ಬಾಹ್ಯ ಪ್ರಯತ್ನಗಳನ್ನು ಬಹುಕಾಲ ಮಾಡಿದರೂ ಸಾಕ್ಷಾತ್ಕಾರ ಪಡೆಯಲಿಲ್ಲವೆಂದು ಹೇಳುವರು–

**ಸ ಇತ್ಥಮುದ್ವೀಕ್ಷ್ಯ ತದಬ್ಜನಾಲನಾಲೀಭಿರಂತರ್ಜಲಮಾವಿವೇಶ ।**
**ನಾರ್ವಾಗ್ಗತಸ್ತತ್ಖರನಾಲನಾಲೀಃ ಸ ವೈ ವಿಚಿನ್ವಂಸ್ತದವಿಂದತಾಜಃ ॥**

ಸಃ=ಬ್ರಹ್ಮದೇವರು ಇತ್ಥಂ=ಈ ರೀತಿ ಉತ್=ಪರಬ್ರಹ್ಮನನ್ನು ('ತಸ್ಯ ಉದಿತಿ' ನಾಮ ಎಂದು ಶ್ರುತಿ ಇದೆ) ವೀಕ್ಷ್ಯ=ವಿಚಾರ ಮಾಡಿ ತದಬ್ಜನಾಲನಾಲೀಭಿಃ=ಆ ಕಮಲದ ದೇಟಿನ ಒಳಗಿರುವ ರಂಧ್ರಗಳಿಂದ ಅಂತರ್ಜಲಂ=ನೀರಿನಲ್ಲಿ ಆವಿವೇಶ= ಪ್ರವೇಶಿಸಿದನು. ಅರ್ವಾಗ್‌ಗತಃ=ಕೆಳಗೆ ಹೋಗಿ ಖರನಾಲನಾಲೀಃ=ಪದ್ಮದ ದೇಟಿನಲ್ಲಿ ವಿಚಿನ್ವನ್=ಹುಡುಕಿದರೂ ಸಃ ಅಜಃ=ಬ್ರಹ್ಮ ದೇವರು ತತ್= ಪರಬ್ರಹ್ಮನನ್ನು ನ ಅವಿಂದತ=ಪ್ರತ್ಯಕ್ಷವಾಗಿ ಕಾಣಲಿಲ್ಲ ॥೧೯॥

ಭಗವಂತನ ಪ್ರಸಾದವಿಲ್ಲದೆ ಸಂಪೂರ್ಣ ಆಯುಷ್ಯ ಪ್ರಯತ್ನಿಸಿದರೂ ಅವನ ದರ್ಶನ ಅಶಕ್ಯ ಎಂದು ಹೇಳುವರು–

**ತಮಸ್ಯಪಾರೇ ವಿದುರಾತ್ಮಸರ್ಗಂ**
**ವಿಚಿನ್ವತೋऽಭೂತ್ ಸುಮಹಾಂಸ್ತ್ರಿನೇಮಿಃ ।**
**ಯೋ ದೇಹಭಾಜಾಂ ಭಯಮೀರಯಾಣಃ**
**ಪರಿಕ್ಷಿಣೋತ್ಯಾಯುರಜಸ್ಯ ಹೇತಿಃ ॥೨೦॥**

ಹೇ ವಿದುರ=ಎಲೋ ವಿದುರನೇ ! ಅಪಾರೇ=ಕೊನೆಯಿಲ್ಲದ ತಮಸಿ=ಪ್ರಳಯ ಕಾಲೀನವಾದ, ಸ್ವರೂಪಾಚ್ಛಾದಕವಾದ ಮಾಯಾರೂಪ ಅಂಧಕಾರದಲ್ಲಿ ಆತ್ಮಸರ್ಗಂ=ತನ್ನ ಉತ್ಪಾದಕನನ್ನು ವಿಚಿನ್ವತಃ=ಹುಡುಕುವ ಬ್ರಹ್ಮದೇವನಿಗೆ ಯಃ= ಯಾವುದು ದೇಹಭಾಜಾಂ=ಜೀವರಿಗೆ ಭಯಂ=ಹೆದರಿಕೆಯನ್ನು ಈರಯಾಣಃ= ಉಂಟುಮಾಡಿ ಆಯುಃ=ಆಯುಷ್ಯವನ್ನು ಪರಿಕ್ಷಿಣೋತಿ=ನಾಶಮಾಡುವುದೋ

ಸಃ=ಅಂಥ ಅಜಸ್ಯ=ಶ್ರೀಹರಿಯ ಹೇತಿಃ=ಸುದರ್ಶನವೆಂಬ ಆಯುಧದಂತಿರುವ ಸುಮಹಾನ್ ತ್ರಿನೇಮಿಃ=ಚಾತುರ್ಮಾಸ್ಯಗಳೆಂಬ ಮೂರು ಅರಗಳಿಂದ ಕೂಡಿದ ಸಂವತ್ಸರಾತ್ಮಕ ಕಾಲವು (ಒಂದುವರ್ಷದಲ್ಲಿ ನಾಲ್ಕುತಿಂಗಳುಗಳ ಮೂರುಗುಂಪು) ಅಭೂತ್=ಆಯಿತು. ಅಂದರೆ ಮನುಷ್ಯಮಾನದಿಂದ ಒಂದುನೂರುವರ್ಷ ಪರ್ಯಂತ ಹುಡುಕಿದನೆಂದರ್ಥ. ॥೨೦॥

ಇವನ ದರ್ಶನ ನಮ್ಮ ಪ್ರಯತ್ನ ಸಾಧ್ಯವಲ್ಲವೆಂದು ಅವನ ಪ್ರಸಾದಿಂದಲೇ ಆಗುವುದು ಎಂದು ನಿಶ್ಚಯಿಸಿ ಪ್ರಸಾದಕ್ಕಾಗಿ ಅವನ ಧ್ಯಾನ ಮಾಡಬೇಕೆಂದು ನಿಶ್ಚಯಿಸಿ ಧ್ಯಾನ ಮಾಡಿದನೆಂದು ಹೇಳುವರು –

**ತತೋ ನಿವರ್ತ್ಯಾಽಪ್ರತಿಲಬ್ಧಕಾಷ್ಠಃ**
**ಸ್ವಧಿಷ್ಣ್ಯಮಾಸ್ಥಾಯ ಪುನಃ ಸ ದೇವಃ ।**
**ಶನೈರ್ಜಿತಶ್ವಾಸನಿವೃತ್ತಚಿತ್ತೋ**
**ನ್ಯಷೀದದಾರೂಢಸಮಾಧಿಯೋಗಃ ॥೨೧॥**

ಅಪ್ರತಿಲಬ್ಧಕಾಷ್ಠಃ=ತಾರತಮ್ಯಾವಧಿಯಾದ ಭಗವಂತನನ್ನು ಕಾಣದವನಾಗಿ ತತಃ=ಹುಡುಕುವುದರಿಂದ ನಿವರ್ತ್ಯ=ನಿವೃತ್ತನಾಗಿ ಸಃ ದೇವಃ=ಬ್ರಹ್ಮದೇವನು ಸ್ವಧಿಷ್ಣ್ಯಂ=ತನ್ನ ಸ್ಥಾನವಾದ ಪದ್ಮವನ್ನು ಆಸ್ಥಾಯ=ಆಶ್ರಯಿಸಿ ಶನೈಃ=ಸಾವಕಾಶವಾಗಿ ಜಿತಶ್ವಾಸಃ=ಪ್ರಾಣವನ್ನು ಕುಂಭಕದಲ್ಲಿ ನಿರೋಧಿಸಿ ನಿವೃತ್ತಚಿತ್ತಃ=ವಿಷಯಗಳಿಂದ ಪರಾವೃತ್ತವಾದ ಮನಸ್ಸುಳ್ಳವನಾಗಿ ಆರೂಢಸಮಾಧಿಯೋಗಃ=ಸಮಾಧಿಯನ್ನಾಶ್ರ-ಯಿಸಿದವನಾಗಿ ನ್ಯಷೀದತ್=ಕುಳಿತು ಕೊಂಡನು. ॥೨೧॥

ಯೋಗದ ಫಲವನ್ನು ಹೇಳುವರು –

**ಕಾಲೇನ ಸೋಽಜಃ ಪುರುಷಾಯುಷಾಽಭಿ-**
**ಪ್ರವೃದ್ಧಯೋಗೇನ ವಿರೂಢಬೋಧಃ ।**
**ಸ್ವಯಂ ತದಂತರ್ಹೃದಯೇಽವಭಾತ-**
**ಮಪಶ್ಯತಾಪಶ್ಯತ ಯನ್ನಪೂರ್ವಂ ॥೨೨॥**

ಸಃ ಅಜಃ=ಆ ಬ್ರಹ್ಮದೇವರು ಪುರುಷಾಯುಷಾ ಕಾಲೇನ=ಒಂದುನೂರು ವರ್ಷದ ಅವಧಿಯಲ್ಲಿ ಅಭಿಪ್ರವೃದ್ಧಯೋಗೇನ=ಪ್ರತಿನಿತ್ಯದಲ್ಲಿಯೂ ಹೆಚ್ಚಾಗಿ ಬೆಳೆದ ಧ್ಯಾನರೂಪ ಉಪಾಯದಿಂದ ವಿರೂಢಬೋಧಃ=ಸಾಕ್ಷಾತ್ಕಾರ ಪಡೆದು ಹೃದಯೇ ಅಂತಃ=ಹೃದಯದ ಒಳಗೆ ಭಾತಂ=ಸಾಕ್ಷಾತ್ಕಾರವಿಷಯನಾದ, ಯತ್=

ಯಾವುದನ್ನು ಪೂರ್ವಂ=ಹುಡುಕುವ ಕಾಲದಲ್ಲಿ ನ ಅಪಶ್ಯತ=ಕಾಣಲಿಲ್ಲವೋ ತತ್=ಆ ತನ್ನ ಕಾರಣವನ್ನು (ಭಗವಂತನನ್ನು) ಅಪಶ್ಯತ=ನೋಡಿದನು. ॥೨೨॥

ಮುಂದಿನ ೯ ಶ್ಲೋಕಗಳಿಂದ ಬ್ರಹ್ಮನು ಕಂಡ ಪರಮಾತ್ಮನನ್ನು ವರ್ಣಿಸುವರು. ೯ ಶ್ಲೋಕಗಳಲ್ಲೂ 'ಅಪಶ್ಯತ' ಎಂಬ ಕ್ರಿಯಾಪದ ಅನ್ವಯಿಸುವುದು –

**ಮೃಣಾಲಗೌರಾಯತಶೇಷಭೋಗ-**
**ಪರ್ಯಂಕ ಏಕಂ ಪುರುಷಂ ಶಯಾನಂ ।**
**ಫಣಾಸಹಸ್ರಾಯುತಮೂರ್ಧರತ್ನ-**
**ದ್ಯುಭಿರ್ಹತಧ್ವಾಂತಯುಗಾಂತತೋ ಯೇ ॥೨೩॥**

ಫಣಾಸಹಸ್ರಾಯುತಮೂರ್ಧರತ್ನದ್ಯುಭಿಃ=ಫಣಾಸಹಸ್ರ=ಸಾವಿರ ಹೆಡೆಗಳಲ್ಲಿ ಆಯುತ=ಚೆನ್ನಾಗಿ ಸಂಬದ್ಧಗಳಾದ ಅಂದರೆ ಸಹಜವಾದ ಮೂರ್ಧರತ್ನದ್ಯುಭಿಃ= ಶಿರೋರತ್ನಗಳ ಕಾಂತಿಯಿಂದ ಹತಧ್ವಾಂತಯುಗಾಂತತೋಯೇ=ನಾಶವಾದ ಕತ್ತಲೆಯುಳ್ಳ ಪ್ರಳಯ ಜಲದಲ್ಲಿ ಮೃಣಾಲ=ಕಮಲದದೇಟಿನಂತೆ ಗೌರ=ಬೆಳ್ಳಗಾದ ಆಯತ=ವಿಶಾಲವಾದ ಶೇಷ=ಹಾವಿನ ಭೋಗ=ದೇಹವೆಂಬ ಪರ್ಯಂಕೇ= ಹಾಸಿಗೆಯಲ್ಲಿ ಶಯಾನಂ=ಮಲಗಿದ ಏಕಂ=ಪ್ರಧಾನನಾದ ಶ್ರೀಹರಿಯನ್ನು ಅಪಶ್ಯತ=ನೋಡಿದನು.॥೨೩॥

ನೀಲಪರ್ವತದಂತೆ ಎಂದು ವರ್ಣಿಸುವರು –

**ಪ್ರೇಕ್ಷಾಂ ಕ್ಷಿಪಂತಂ ಹರಿತೋಪಲಾದ್ರೇಃ**
**ಸಂಧ್ಯಾಭ್ರನೀವೇರುರುರುಕ್ಮಮೂರ್ಧ್ನಃ ।**
**ರತ್ನೋದಧೇರೋಷಧಿಸೌಮನಸ್ಯ-**
**ವನಸ್ರಜೋ ವೇಣುಭುಜಾಂಘ್ರಿಪಾಂಘ್ರೇಃ ॥೨೪॥**

ಸಂಧ್ಯಾಭ್ರನೀವೇಃ=ಸಾಯಂಕಾಲದಮೋಡಗಳೇಪೀತಾಂಬರಗಳಾಗಿವುಳ್ಳ ಉರುರುಕ್ಮಮೂರ್ಧ್ನಃ=ಶಿರಸ್ಸಿನ ಸ್ಥಾನೀಯವಾದ ಶಿಖರಗಳಲ್ಲಿ ಕಿರೀಟ ಸ್ಥಾನೀಯ-ವಾದ ಬಂಗಾರವುಳ್ಳ ಓಷಧಿಸೌಮನಸ್ಯವನಸ್ರಜಃ=ತುಳಸಿ ಮೊದಲಾದ ಗಿಡಗಳು ಹಾಗೂ ಪುಷ್ಪಸಮೂಹಗಳೇ ವನಮಾಲೆಯಾಗಿ ಉಳ್ಳ, ವೇಣುಭುಜಃ= ಬಿದುರುಗಳೇ ಭುಜವಾಗಿವುಳ್ಳ ಅಂಘ್ರಿಪಾಂಘ್ರೇಃ=ಗಿಡಗಳೇ ಪಾದವಾಗಿವುಳ್ಳ ಹರಿತೋಪಲಾದ್ರೇಃ=ಇಂದ್ರನೀಲಪರ್ವತದ ಪ್ರೇಕ್ಷಾಂ=ಶೋಭೆಯನ್ನು ಕ್ಷಿಪಂತಂ= ತನ್ನಕಾಂತಿಯಿಂದ ತಿರಸ್ಕರಿಸುವನನ್ನು ಅಪಶ್ಯತ=ನೋಡಿದನು. ॥೨೪॥

**ಆಯಾಮತೋ ವಿಸ್ತರತಃ ಸಮಾನ-**
**ದೇಹೇನ ಲೋಕತ್ರಯಸಂಗ್ರಹೇಣ ।**
**ವಿಚಿತ್ರದಿವ್ಯಾಭರಣಾಂಶುಕಾನಾಂ**
**ಕೃತಶ್ರೀಯೋಪಾಶ್ರಿತದಿವ್ಯವೇಷಂ ॥೨೫॥**

ಆಯಾಮತಃ=ದೈರ್ಘ್ಯದಿಂದ ವಿಸ್ತರತಃ=ವಿಸ್ತಾರದಿಂದಲೂ ಸಮಾನದೇಹೇನ= ಅನೂರೂಪವಾದ ದೇಹದಿಂದ ಲೋಕತ್ರಯಸಂಗ್ರಹೇಣ=ಮೂರೂಲೋಕಗಳನ್ನೂ ಸಂಗ್ರಹಿಸಿದ (ಲೋಕಕ್ಕೆ ಆಶ್ರಯವಾದ) ದೇಹದಿಂದ ಕೂಡಿದ ವಿಚಿತ್ರ=ನಾನಾವಿಧ- ವಾದ ದಿವ್ಯ=ಅಪೂರ್ವವಾದ ಆಭರಣ=ಅಲಂಕಾರಗಳು ಅಂಶುಕಾನಾಂ= ವಸ್ತ್ರಗಳಿಗೆ, ಕೃತಶ್ರಿಯಾ=ಶೋಭೆಯನ್ನು ತಂದು ಕೊಡುವ ಶರೀರಕಾಂತಿಯಿಂದ ಉಪಾಶ್ರಿತದಿವ್ಯವೇಷಂ=ಕೂಡಿದ ಸ್ವಾಭಾವಿಕ ಸೌಂದರ್ಯವುಳ್ಳ ಹರಿಯನ್ನು ಅಪಶ್ಯತ=ನೋಡಿದನು. ॥೨೫॥

**ಪುಂಸಾಂ ಸ್ವಕಾಮಾಯ ವಿವಿಕ್ತಮಾರ್ಗೈ-**
**ರಭ್ಯರ್ಚತಾಂ ಕಾಮದುಘಾಂಘ್ರಿಪದ್ಮಂ ।**
**ಪ್ರದರ್ಶಯಂತಂ ಕೃಪಯಾ ನಖೇಂದು-**
**ಮಯೂಖಭಿನ್ನಾಂಗುಲಿಚಾರುಪತ್ರಂ ॥೨೬॥**

ಸ್ವಕಾಮಾಯ=ತಮಗೆ ಇಷ್ಟವಾದ ಫಲಕ್ಕಾಗಿ, ವಿವಿಕ್ತಮಾರ್ಗೈಃ=ಪಾಷಂಡಾದಿ- ಗಳಿಂದ ಭಿನ್ನವಾದ, ವೇದವಿಹಿತವಾದ ರೀತಿಯಿಂದ ಅಭ್ಯರ್ಚತಾಂ=ಪೂಜಿಸುವ ಪುಂಸಾಂ=ಅಧಿಕಾರಿಗಳಿಗೆ,ಕೃಪಯಾ=ದಯೆಯಿಂದ ನಖೇಂದು=ಉಗುರುಗಳೆಂಬ ಚಂದ್ರನ ಮಯೂಖ=ಕಿರಣಗಳಿಂದ ಭಿನ್ನ=ಇತರ ಕಮಲಗಳಿಂದ ವಿಲಕ್ಷಣವಾದ ಅಂಗುಲಿ=ಬೆರಳುಗಳೆಂಬ ಚಾರು=ಮನೋಹರವಾದ ಪತ್ರಂ=ದಳಗಳುಳ್ಳ ಕಾಮದುಘಾಂಘ್ರಿಪದ್ಮಂ=ಅಭೀಷ್ಟಪ್ರದವಾದ ಪಾದಪದ್ಮವನ್ನು ಪ್ರದರ್ಶಯಂತಂ= ತೋರಿಸುವ ಹರಿಯನ್ನು ಅಪಶ್ಯತ=ನೋಡಿದನು. ॥೨೬॥

**ಮುಖೇನ ಲೋಕಾರ್ತಿಹರಸ್ಮಿತೇನ**
**ಪರಿಸ್ಫುರತ್‌ಕುಂಡಲಮಂಡಿತೇನ ।**
**ಶೋಣಾಯಿತೇನಾಧರಬಿಂಬಭಾಸಾ**
**ಪ್ರತ್ಯರ್ಹಯಂತಂ ಸುನಸೇನ ಸುಭ್ರ್ವಾ ॥೨೭॥**

ಲೋಕಾರ್ತಿಹರಸ್ಮಿತೇನ=ಜನರ ದುಃಖಪರಿಹಾರಕವಾದ ಮುಗುಳುನಗೆಯುಳ್ಳ, ಪರಿಸ್ಫುರತ್‌ಕುಂಡಲಮಂಡಿತೇನ=ಹೊಳೆಯುವ ಕುಂಡಲಗಳಿಂದ ಅಲಂಕೃತವಾದ,

ಅಧರಬಿಂಬಭಾಸಾ=ತುಟಿಗಳೆಂಬ ತೊಂಡೆಹಣ್ಣಿನ ಕಾಂತಿಯಿಂದ, ಶೋಣಾಯಿತೇನ=ಕೆಂಪಾದ, ಸುನಸೇನ=ಒಳ್ಳೆ ಮೂಗಿನಿಂದ ಕೂಡಿದ, ಸುಭ್ರ್ವಾ=ಒಳ್ಳೆ ಹುಬ್ಬುಗಳಿಂದ ಕೂಡಿದ, ಮುಖೇನ=ಮುಖದಿಂದ ಪ್ರತ್ಯರ್ಹಯಂತಂ=ಪೂಜಕರನ್ನು ಸನ್ಮಾನಿಸುವನನ್ನು ಅಪಶ್ಯತ=ನೋಡಿದನು. ॥೨೭॥

**ಕದಂಬಕಿಂಜಲ್ಕಪಿಶಂಗವಾಸಸಾ**
**ಸ್ವಲಂಕೃತಂ ಮೇಖಲಯಾ ನಿತಂಬೇ ।**
**ಹಾರೇಣ ಚಾನಂತಧನೇನ ವತ್ಸ**
**ಶ್ರೀವತ್ಸವಕ್ಷಸ್ಥಲವಲ್ಲಭೇನ ॥೨೮॥**

ಹೇ ವತ್ಸ=ನಾರದನೇ ! ನಿತಂಬೇ=ಸೊಂಟದಲ್ಲಿ ಕದಂಬಕಿಂಜಲ್ಕಪಿಶಂಗವಾಸಸಾ=ನೀಪಪುಷ್ಪದ ಕೇಶರದಂತೆ ಪೀತವರ್ಣದ ವಸ್ತ್ರದಿಂದ, ಮೇಖಲಯಾ ಚ=ಉಡುದಾರದಿಂದಲೂ ಅಲಂಕೃತನಾದ, ಅನಂತಧನೇನ=ಬಹಳ ಬೆಲೆಬಾಳುವ ಶ್ರೀವತ್ಸವಕ್ಷಸ್ಥಲವಲ್ಲಭೇನ=ಶ್ರೀವತ್ಸದಿಂದಕೂಡಿದ ಹೃದಯಕ್ಕೆ ಪ್ರಿಯವಾದ ಅಂದರೆ ಯಾವಾಗಲೂ ಅಲ್ಲಿರುವ, ಹಾರೇಣ=ಹಾರದಿಂದಲೂ, ಸ್ವಲಂಕೃತಂ=ಚೆನ್ನಾಗಿ ಅಲಂಕರಿಸಲ್ಪಟ್ಟ ಶ್ರೀಹರಿಯನ್ನು ಅಪಶ್ಯತ=ನೋಡಿದನು. ॥೨೮॥

ಗಂಧದ ಮರಕ್ಕೆ ಹೋಲಿಸಿ ವರ್ಣಿಸುವರು –

**ಪರಾರ್ಧ್ಯಕೇಯೂರಮಣಿಪ್ರವೇಕ-**
**ಪರ್ಯಸ್ತದೋರ್ದಂಡಸಹಸ್ರಶಾಖಂ ।**
**ಅವ್ಯಕ್ತಮೂಲಂ ಭುವನಾಂಘ್ರಿಪೇಂದ್ರ**
**ಮಹೀಂದ್ರಭೋಗೈರಧಿವೀತಕಲ್ಕಂ ॥೨೯॥**

ಪರಾರ್ಧ್ಯ=ಶ್ರೇಷ್ಠವಾದ ಕೇಯೂರ=ವಂಕಿ (ಭುಜಕೀರ್ತಿ) ಮಣಿಪ್ರವೇಕ=ಶ್ರೇಷ್ಠಮಣಿಗಳಿಂದ ಪರ್ಯಸ್ತ=ವ್ಯಾಪ್ತವಾದ ದೋರ್ದಂಡ=ಭುಜಗಳೆಂಬ ಸಹಸ್ರಶಾಖಂ=ಅನಂತಟೊಂಗೆಗಳುಳ್ಳ ಅವ್ಯಕ್ತಮೂಲಂ=ಪ್ರಧಾನಕ್ಕೆ ಕಾರಣನಾದ, ಕಾಣದ ಬೇರುಗಳುಳ್ಳ, ಭುವನಾಂಘ್ರಿಪೇಂದ್ರಂ=ಹದಿನಾಲ್ಕು ಲೋಕಗಳೆಂಬ ಗಿಡಗಳಿಗೆ ಶ್ರೇಷ್ಠನಾದ ಅಹೀಂದ್ರಭೋಗೈಃ=ಸರ್ಪಗಳ ದೇಹದಿಂದ ಅಧಿವೀತಕಲ್ಕಂ=ಸುತ್ತಲ್ಪಟ್ಟ ಚರ್ಮವುಳ್ಳ ಶ್ರೀಹರಿಯನ್ನು ಅಪಶ್ಯತ=ನೋಡಿದನು. ಗಂಧದ ಗಿಡವೂ ಸರ್ಪದಿಂದ ಸುತ್ತಲ್ಪಡುವುದು.

ಪ್ರಧಾನಕ್ಕೆ ಕಾರಣನೆನ್ನಲು ಪ್ರಮಾಣ ಹೇಳುವರು –

**ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ । ಇತಿ ಮೋಕ್ಷಧರ್ಮೇ ।**

'ಹೇ ಬ್ರಾಹ್ಮಣಶ್ರೇಷ್ಠನೇ ಸತ್ವರಜಸ್ತಮೋಗುಣಾತ್ಮಕವಾದ ಪ್ರಧಾನವು ಭಗವಂತನಿಂದ ಜನಿಸಿತು' ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. ॥೨೯॥

ಪರ್ವತಸಾಮ್ಯವನ್ನು ಹೇಳುವರು –

**ಚರಾಚರೌಕೋ ಭಗವನ್ಮಹೀಧ್ರ-**
**ಮಹೀಂದ್ರಬಂಧುಂ ಸಲಿಲೋಪಗೂಢಂ ।**
**ಕಿರೀಟಸಾಹಸ್ರಹಿರಣ್ಯಶೃಂಗ-**
**ಮಾವಿರ್ಭವತ್ಕೌಸ್ತುಭರತ್ನಗರ್ಭಂ ॥೩೦॥**

ಚರಾಚರೌಕಃ=ಜಂಗಮ ಸ್ಥಾವರಗಳಿಗೆ ಆವಾಸಸ್ಥಾನವಾದ ಅಹೀಂದ್ರ= ಬಂಧುಂ=ಸರ್ಪಗಳಿಗೆ ಬಂಧುವಾದ ಸಲಿಲೋಪಗೂಢಂ=ಪ್ರಳಯೋದಕದಿಂದ ಆವೃತನಾದ, ಪರ್ವತವೂ ಝರಿಗಳ ನೀರಿನಿಂದ ಆವೃತವಾಗುವುದು ಕಿರೀಟ- ಸಾಹಸ್ರಹಿರಣ್ಯಶೃಂಗಂ=ಸಾವಿರ ಕಿರೀಟಗಳೆಂಬ ಚಿನ್ನದ ಶಿಖರಗಳುಳ್ಳ ಮೇರು- ಪರ್ವತದಂತೆ, ಆವಿರ್ಭವತ್ಕೌಸ್ತುಭರತ್ನಗರ್ಭಂ=ಸ್ಪಷ್ಟವಾಗಿ ಕಾಣುವ ಕೌಸ್ತುಭ- ವೆಂಬ ರತ್ನವುಳ್ಳ, ಪರ್ವತದಲ್ಲಿಯೂ ಕೆಲವು ಸ್ಥಳದಲ್ಲಿ ರತ್ನಗಳು ಉದ್ಭವಿಸುವವು. ಭಗವನ್ಮಹೀಧ್ರಂ=ಶ್ರೀಹರಿಯೆಂಬ ಪರ್ವತವನ್ನು ಅಪಶ್ಯತ್ ನೋಡಿದನು. ॥೩೦॥

**ನಿವೀತಮಾಮ್ನಾಯಮಧುವ್ರತಶ್ರಿಯಾ**
**ಸ್ವಕೀರ್ತಿಮಯ್ಯಾ ವನಮಾಲಯಾ ಹರಿಂ ।**
**ಸೂರ್ಯೇಂದುವಾಯ್ವಗ್ನ್ಯಗಮತ್ರಿಧಾಮಭಿಃ**
**ಪರಿಕ್ರಮತ್ ಪ್ರಾಧನಿಕೈರ್ದುರಾಸದಂ ॥೩೧॥**

ಆಮ್ನಾಯಮಧುವ್ರತಶ್ರಿಯಾ=ವೇದಗಳೆಂಬ ಭೃಂಗಗಳಿಂದ ಶೋಭಿಸುವ ಸ್ವಕೀರ್ತಿಮಯ್ಯಾ=ತನ್ನ ಕೀರ್ತಿ ಎಂಬ ವನಮಾಲಾಯಾ=ವನಮಾಲೆಯಿಂದ ನಿವೀತಂ=ಸಂವೇಷ್ಟಿತನಾದ, ಕೊರಳಲ್ಲಿ ವನಮಾಲೆ ಧರಿಸಿದ, (ವೇದಪ್ರತಿಪಾದ್ಯ ಶುದ್ಧಕೀರ್ತಿಯುಳ್ಳ ಎಂದರ್ಥ) ಪರಿಕ್ರಮತ್=ರಕ್ಷಣೆಗಾಗಿ ಸುತ್ತಲೂ ತಿರುಗುವ ಸೂರ್ಯೇಂದುವಾಯ್ವಗ್ನ್ಯಗಮತ್ರಿಧಾಮಭಿಃ=ಭಗವಂತನಿಂದ ದೂರಸರಿಯದ ಯಾವಾಗಲೂ ಅವನ ಸಮೀಪದಲ್ಲಿರುವ ಮುಕ್ತರಾದ ಸೂರ್ಯ, ಚಂದ್ರ, ಪ್ರವಹವಾಯು, ಅಗ್ನಿ ಇವರೇ ಮೊದಲಾದ ಪ್ರಾಧನಿಕೈಃ=ಪುರಪಾಲಕರಿಂದ ದುರಾಸದಂ=ಹೊಂದಲಾಸಾಧ್ಯನಾದವನನ್ನು ಅಪಶ್ಯತ್=ನೋಡಿದನು.

ಅಧರಬಿಂಬಭಾಸಾ=ತುಟಿಗಳೆಂಬ ತೊಂಡೆಹಣ್ಣಿನ ಕಾಂತಿಯಿಂದ, ಶೋಣಾಯಿತೇನ=ಕೆಂಪಾದ, ಸುನಸೇನ=ಒಳ್ಳೆ ಮೂಗಿನಿಂದ ಕೂಡಿದ, ಸುಭ್ರ್ವಾ=ಒಳ್ಳೆ ಹುಬ್ಬುಗಳಿಂದ ಕೂಡಿದ, ಮುಖೇನ=ಮುಖದಿಂದ ಪ್ರತ್ಯರ್ಹಯಂತಂ=ಪೂಜಕರನ್ನು ಸನ್ಮಾನಿಸುವವನನ್ನು ಅಪಶ್ಯತ=ನೋಡಿದನು. ॥೨೭॥

**ಕದಂಬಕಿಂಜಲ್ಕಪಿಶಂಗವಾಸಸಾ**
**ಸ್ವಲಂಕೃತಂ ಮೇಖಲಯಾ ನಿತಂಬೇ ।**
**ಹಾರೇಣ ಚಾನಂತಧನೇನ ವತ್ಸ**
**ಶ್ರೀವತ್ಸವಕ್ಷಸ್ಥಲವಲ್ಲಭೇನ ॥೨೮॥**

ಹೇ ವತ್ಸ=ನಾರದನೇ ! ನಿತಂಬೇ=ಸೊಂಟದಲ್ಲಿ ಕದಂಬಕಿಂಜಲ್ಕಪಿಶಂಗವಾಸಸಾ=ನೀಪಪುಷ್ಪದ ಕೇಶರದಂತೆ ಪೀತವರ್ಣದ ವಸ್ತ್ರದಿಂದ, ಮೇಖಲಯಾ ಚ=ಉಡುದಾರದಿಂದಲೂ ಅಲಂಕೃತನಾದ, ಅನಂತಧನೇನ=ಬಹಳ ಬೆಲೆಬಾಳುವ ಶ್ರೀವತ್ಸವಕ್ಷಸ್ಥಲವಲ್ಲಭೇನ=ಶ್ರೀವತ್ಸದಿಂದಕೂಡಿದ ಹೃದಯಕ್ಕೆ ಪ್ರಿಯವಾದ ಅಂದರೆ ಯಾವಾಗಲೂ ಅಲ್ಲಿರುವ, ಹಾರೇಣ=ಹಾರದಿಂದಲೂ, ಸ್ವಲಂಕೃತಂ=ಚೆನ್ನಾಗಿ ಅಲಂಕರಿಸಲ್ಪಟ್ಟ ಶ್ರೀಹರಿಯನ್ನು ಅಪಶ್ಯತ=ನೋಡಿದನು. ॥೨೮॥

ಗಂಧದ ಮರಕ್ಕೆ ಹೋಲಿಸಿ ವರ್ಣಿಸುವರು –

**ಪರಾರ್ಘ್ಯಕೇಯೂರಮಣಿಪ್ರವೇಕ-**
**ಪರ್ಯಸ್ತದೋರ್ದಂಡಸಹಸ್ರಶಾಖಂ ।**
**ಅವ್ಯಕ್ತಮೂಲಂ ಭುವನಾಂಘ್ರಿಪೇಂದ್ರ**
**ಮಹೀಂದ್ರಭೋಗೈರಧಿವೀತಕಲ್ಕಂ ॥೨೯॥**

ಪರಾರ್ಘ್ಯ=ಶ್ರೇಷ್ಠವಾದ ಕೇಯೂರ=ವಂಕಿ (ಭುಜಕೀರ್ತಿ) ಮಣಿಪ್ರವೇಕ=ಶ್ರೇಷ್ಠಮಣಿಗಳಿಂದ ಪರ್ಯಸ್ತ=ವ್ಯಾಪ್ತವಾದ ದೋರ್ದಂಡ=ಭುಜಗಳೆಂಬ ಸಹಸ್ರಶಾಖಂ=ಅನಂತಟೊಂಗೆಗಳುಳ್ಳ ಅವ್ಯಕ್ತಮೂಲಂ=ಪ್ರಧಾನಕ್ಕೆ ಕಾರಣನಾದ, ಕಾಣದ ಬೇರುಗಳುಳ್ಳ, ಭುವನಾಂಘ್ರಿಪೇಂದ್ರಂ=ಹದಿನಾಲ್ಕು ಲೋಕಗಳೆಂಬ ಗಿಡಗಳಿಗೆ ಶ್ರೇಷ್ಠನಾದ ಅಹೀಂದ್ರಭೋಗೈಃ=ಸರ್ಪಗಳ ದೇಹದಿಂದ ಅಧಿವೀತಕಲ್ಕಂ=ಸುತ್ತಲ್ಪಟ್ಟ ಚರ್ಮವುಳ್ಳ ಶ್ರೀಹರಿಯನ್ನು ಅಪಶ್ಯತ=ನೋಡಿದನು. ಗಂಧದ ಗಿಡವೂ ಸರ್ಪದಿಂದ ಸುತ್ತಲ್ಪಡುವುದು.

ಪ್ರಧಾನಕ್ಕೆ ಕಾರಣನೆನ್ನಲು ಪ್ರಮಾಣ ಹೇಳುವರು -

**ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ । ಇತಿ ಮೋಕ್ಷಧರ್ಮೇ ।**

'ಹೇ ಬ್ರಾಹ್ಮಣಶ್ರೇಷ್ಠನೇ ಸತ್ವರಜಸ್ತಮೋಗುಣಾತ್ಮಕವಾದ ಪ್ರಧಾನವು ಭಗವಂತನಿಂದ ಜನಿಸಿತು' ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. ॥೨೯॥

ಪರ್ವತಸಾಮ್ಯವನ್ನು ಹೇಳುವರು -

**ಚರಾಚರೌಕೋ ಭಗವನ್ಮಹೀಧ್ರ-**
**ಮಹೀಂದ್ರಬಂಧುಂ ಸಲಿಲೋಪಗೂಢಂ ।**
**ಕಿರೀಟಸಾಹಸ್ರಹಿರಣ್ಯಶೃಂಗ-**
**ಮಾವಿರ್ಭವತ್‌ಕೌಸ್ತುಭರತ್ನಗರ್ಭಂ ॥೩೦॥**

ಚರಾಚರೌಕಃ=ಜಂಗಮ ಸ್ಥಾವರಗಳಿಗೆ ಆವಾಸಸ್ಥಾನವಾದ ಅಹೀಂದ್ರ=ಬಂಧುಂ=ಸರ್ಪಗಳಿಗೆ ಬಂಧುವಾದ ಸಲಿಲೋಪಗೂಢಂ=ಪ್ರಳಯೋದಕದಿಂದ ಆವೃತನಾದ, ಪರ್ವತವೂ ಝುರಿಗಳ ನೀರಿನಿಂದ ಆವೃತವಾಗುವುದು ಕಿರೀಟ-ಸಾಹಸ್ರಹಿರಣ್ಯಶೃಂಗಂ=ಸಾವಿರ ಕಿರೀಟಗಳೆಂಬ ಚಿನ್ನದ ಶಿಖರಗಳುಳ್ಳ ಮೇರು-ಪರ್ವತದಂತೆ, ಆವಿರ್ಭವತ್‌ಕೌಸ್ತುಭರತ್ನಗರ್ಭಂ=ಸ್ಪಷ್ಟವಾಗಿ ಕಾಣುವ ಕೌಸ್ತುಭ-ವೆಂಬ ರತ್ನವುಳ್ಳ, ಪರ್ವತದಲ್ಲಿಯೂ ಕೆಲವು ಸ್ಥಳದಲ್ಲಿ ರತ್ನಗಳು ಉದ್ಭವಿಸುವವು. ಭಗವನ್ಮಹೀಧ್ರಂ=ಶ್ರೀಹರಿಯೆಂಬ ಪರ್ವತವನ್ನು ಅಪಶ್ಯತ್ ನೋಡಿದನು. ॥೩೦॥

**ನಿವೀತಮಾಮ್ನಾಯಮಧುವ್ರತಶ್ರಿಯಾ**
**ಸ್ವಕೀರ್ತಿಮಯ್ಯಾ ವನಮಾಲಯಾ ಹರಿಂ ।**
**ಸೂರ್ಯೇಂದುವಾಯ್ವಗ್ನ್ಯಗಮತ್ರಿಧಾಮಭಿಃ**
**ಪರಿಕ್ರಮತ್ ಪ್ರಾಧನಿಕೈರ್ದುರಾಸದಂ ॥೩೧॥**

ಆಮ್ನಾಯಮಧುವ್ರತಶ್ರಿಯಾ=ವೇದಗಳೆಂಬ ಭೃಂಗಗಳಿಂದ ಶೋಭಿಸುವ ಸ್ವಕೀರ್ತಿಮಯ್ಯಾ=ತನ್ನ ಕೀರ್ತಿ ಎಂಬ ವನಮಾಲಾಯಾ=ವನಮಾಲೆಯಿಂದ ನಿವೀತಂ=ಸಂವೇಷ್ಟಿತನಾದ, ಕೊರಳಲ್ಲಿ ವನಮಾಲೆ ಧರಿಸಿದ, (ವೇದಪ್ರತಿಪಾದ್ಯ ಶುದ್ಧಕೀರ್ತಿಯುಳ್ಳ ಎಂದರ್ಥ) ಪರಿಕ್ರಮತ್=ರಕ್ಷಣೆಗಾಗಿ ಸುತ್ತಲೂ ತಿರುಗುವ ಸೂರ್ಯೇಂದುವಾಯ್ವಗ್ನ್ಯಗಮತ್ರಿಧಾಮಭಿಃ=ಭಗವಂತನಿಂದ ದೂರಸರಿಯದ ಯಾವಾಗಲೂ ಅವನ ಸಮೀಪದಲ್ಲಿರುವ ಮುಕ್ತರಾದ ಸೂರ್ಯ, ಚಂದ್ರ, ಪ್ರವಹವಾಯು, ಅಗ್ನಿ ಇವರೇ ಮೊದಲಾದ ಪ್ರಾಧನಿಕೈಃ=ಪುರಪಾಲಕರಿಂದ ದುರಾಸದಂ=ಹೊಂದಲಾಸಾಧ್ಯನಾದವನನ್ನು ಅಪಶ್ಯತ್=ನೋಡಿದನು.

'ಸೂರ್ಯೇಂದುವಾಯ್ವಗ್ನಿ' ಎಂಬ ಪದವು ಉಪಲಕ್ಷಕ ಎಂಬ ಅಭಿಪ್ರಾಯ-ದಿಂದ ವ್ಯಾಖ್ಯಾನಿಸುವರು –

**ಸೂರ್ಯೇಂದುವಾಯ್ವಗ್ನ್ಯಾದಿಭಿಃ ತ್ರಿಧಾಮ್ನಃ ವಿಷ್ಣೋಃ ಅಗಚ್ಛದ್ಭಿಃ ಪ್ರಾಧಾನಿಕೈಃ ॥**

'ಸೂರ್ಯೇಂದುವಾಯ್ವಗ್ನಿ' ಎಂಬ ಪದವು ಉಪಲಕ್ಷಕ ಎಂಬುದನ್ನು 'ಆದಿ'ಪದದಿಂದ ಸೂಚಿಸುವರು. 'ಅಗಮ' ಎಂಬುದಕ್ಕೆ 'ಅಗಚ್ಛದ್ಭಿಃ' ಎಂದು ವ್ಯಾಖ್ಯಾನ. ಇದರಿಂದ 'ತ್ರಿಧಾಮ್ನಃ ನ ವಿದ್ಯತೇ ಗಮಃ ಗಮನಂ ಯೇಷಾಂ ತೇ ಅಗಮತ್ರಿಧಾಮಾನಃ ತೈಃ' ಎಂದು ಬಹುವ್ರೀಹಿಸಮಾಸವೆಂದು ತಿಳಿಸಿದಂತಾಯಿತು. (ಅಗ್ನ್ಯಾಹಿತ ಎಂಬಲ್ಲಿಯಂತೆ ಪರನಿಪಾತವಾಗಿದೆ) ಯಾವಾಗಲೂ ಅವನ ಹತ್ತಿರವಿರುವ ಎಂದರ್ಥ. ಇದು ಪ್ರಾಧನಿಕರಿಗೆ ವಿಶೇಷಣವೆಂದು ತಿಳಿಸಲು 'ಪ್ರಾಧಾನಿಕೈಃ' ಎಂದಿರುವರು.

ಆ ಕಾಲದಲ್ಲಿ ಬ್ರಹ್ಮಾಂಡದಲ್ಲಿ ಕಶ್ಯಪಾದಿಗಳಿಂದ ಜನಿಸಿದ ಸೂರ್ಯ ಮೊದಲಾದವರು ನಾಶವಾದದ್ದರಿಂದ, ಇವರಾರೂ ಇಲ್ಲದೇ ಇರುವುದರಿಂದ, 'ಇವರಿಂದ ಸುತ್ತುವರೆದ' ಎಂದು ಹೇಳಿದ್ದು ಸರಿಯಲ್ಲ ಎಂದರೆ, ಇವರು ಮುಕ್ತರೇ ಹೊರತು ಅಮುಕ್ತರಲ್ಲ ಎಂದು ಪ್ರಮಾಣದಿಂದ ತಿಳಿಸುವರು –

**ಮುಕ್ತವಾಯ್ವಾದಿಭಿರ್ವಿಷ್ಣುಂ ವೃತಂ ಬ್ರಹ್ಮಾ ದದರ್ಶ ಹ ।**
**ತದನ್ಯಾಭಾವತೋ ನಾನ್ಯದತಸ್ತತ್ಸ್ರಷ್ಟುಮೈಚ್ಛತ ॥ ಇತಿ ಬ್ರಹ್ಮಾಂಡೇ ।**

'ಮುಕ್ತರಾದ ವಾಯ್ವಾದಿಗಳಿಂದ ಸುತ್ತುವರಿದ ವಿಷ್ಣುವನ್ನು ಬ್ರಹ್ಮದೇವನು ನೋಡಿದನು. ಮುಕ್ತರಿಂದ ಭಿನ್ನರಾದವರು ಇಲ್ಲದಿರುವುದರಿಂದ ಅಮುಕ್ತರು ಇಲ್ಲಿ ವಿವಕ್ಷಿತರಲ್ಲ, ಅಮುಕ್ತವಾಯ್ವಾದಿಗಳು ಇಲ್ಲದಿರುವುದರಿಂದಲೇ ಅವರನ್ನು ಸೃಷ್ಟಿಸಲು ಇಚ್ಛಿಸಿದನು' ಎಂದು ಬ್ರಹ್ಮಾಂಡಪುರಾಣದಲ್ಲಿದೆ ಎಂದು ಭಾವ. ॥೩೧॥

**ತರ್ಹ್ಯೇವ ತನ್ನಾಭಿಸರಃಸರೋಜ-**
**ಮಾತ್ಮಾನಮಂಭಃ ಶ್ವಸನಂ ವಿಯಚ್ಚ ।**
**ದದರ್ಶ ದೇವೋ ಜಗತೋ ವಿಧಾತಾ**
**ನಾತಃ ಪರಂ ಲೋಕವಿಸರ್ಗದೃಷ್ಟಿಃ ॥೩೨॥**

ಲೋಕವಿಸರ್ಗದೃಷ್ಟಿಃ=ಲೋಕಗಳನ್ನು ಸೃಷ್ಟಿಸುವಲ್ಲಿ ದೃಷ್ಟಿಯುಳ್ಳ, ಜಗತಃ ವಿಧಾತಾ=ಜಗತ್ತನ್ನು ಸೃಷ್ಟಿಸುವ ದೇವಃ=ಬ್ರಹ್ಮದೇವನು, ತರ್ಹಿ=ಆವಾಗ ತನ್ನಾಭಿಸರಃ ಸರೋಜಂ=ಶ್ರೀಹರಿಯ ನಾಭಿಯೆಂಬ ಸರೋವರದಲ್ಲಿ ಹುಟ್ಟಿದ ಕಮಲವನ್ನು,

ಆತ್ಮಾನಂ=ಕಮಲದಲ್ಲಿ ಹುಟ್ಟಿದ ತನ್ನನ್ನು, ಅಂಭಃ= ನೀರನ್ನು, ಶ್ವಸನಂ=ಗಾಳಿಯನ್ನು ವಿಯತ್=ಆಕಾಶವನ್ನು ದದರ್ಶ=ನೋಡಿದನು. ಅತಃ ಪರಂ ನ ದದರ್ಶ= ಇವುಗಳನ್ನು ಬಿಟ್ಟು ಬೇರೆಯಾದ ಜಗನ್ನಿರ್ಮಾಣಸಾಧನವನ್ನು ಕಾಣಲಿಲ್ಲ. ॥೩೨॥

ಎಲ್ಲ ಸಾಧನಗಳ ಜ್ಞಾನಕ್ಕೆ ಶ್ರೀಹರಿಪ್ರಸಾದ ಒಂದೇ ಉಪಾಯ ಎಂದು ಅವನ ಪ್ರಸಾದಕ್ಕಾಗಿ ಸ್ತೋತ್ರವನ್ನು ಮಾಡಿದನು ಎಂದು ಹೇಳುವರು-

**ಸ್ವಕರ್ಮಬೀಜಂ ರಜಸೋಪರಕ್ತಃ**
**ಪ್ರಜಾಃ ಸಿಸೃಕ್ಷನ್ನಿಯದೇವ ದೃಷ್ಟ್ವಾ ।**
**ಅಸ್ತೌದ್ ವಿಸರ್ಗಾಭಿಮುಖಸ್ತಮೀಶ-**
**ಮವ್ಯಕ್ತವರ್ತ್ಮನ್ಯಭಿವೇಶಿತಾತ್ಮಾ ॥೩೩॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ನವಮೋಽಧ್ಯಾಯಃ ॥*

ವಿಸರ್ಗಾಭಿಮುಖಃ=ವಿವಿಧ ಸೃಷ್ಟಿಮಾಡಲು ಹೊರಟ ಬ್ರಹ್ಮದೇವನು ರಜಸಾ= ರಜೋಗುಣದಿಂದ ಉಪರಕ್ತಃ=ಸಂಬದ್ಧನಾಗಿ ಅಂದರೆ ರಜೋಗುಣ ಕಾರ್ಯವಾದ ಸೃಷ್ಟಿಯಲ್ಲಿ ಪ್ರವರ್ತಿತನಾಗಿ, ಅವ್ಯಕ್ತವರ್ತ್ಮನಿ=ಅಗಮ್ಯನಾದ ಭಗವಂತನಲ್ಲಿ ಅಭಿ- ನಿವೇಶಿತಾತ್ಮಾ=ಚೆನ್ನಾಗಿ ಮನಸ್ಸಿಟ್ಟವನಾಗಿ ಸ್ವಕರ್ಮಬೀಜಂ=ತನ್ನ ಅದೃಷ್ಟಕ್ಕೆ ವ್ಯಂಜಕನಾದ ತಂ ಈಶಂ=ಆ ಸ್ವಾಮಿಯನ್ನು ಅಸ್ತೌತ್=ಸ್ತೋತ್ರ ಮಾಡಿದನು. ॥೩೩॥

*ಇಲ್ಲಿಗೆ ಒಂಬತ್ತನೆಯ ಅಧ್ಯಾಯವು ಮುಗಿಯಿತು.*

## ಒಂಬತ್ತನೆಯ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ಶ್ರೀಹರಿಯು ಯಾರಿಂದಲೂ ಎಂದೂ ಜಿತನಲ್ಲ. ಅವನ ಕೀರ್ತಿಯ ಪುಷ್ಪಮಾಲೆಯನ್ನು ನೀನು ಪದೇ ಪದೇ ಹೊಸದಾಗಿರುವಂತೆ ಮಾಡುತ್ತಿರುವೆ. ಶ್ರೀಹರಿಯು ಸರ್ವೋತ್ತಮನೆಂದು ತಿಳಿದ ನಿನ್ನಂತಹ ಭಗವದ್ಭಕ್ತನು ಜನಿಸಿದ ಪುರುವಂಶವೇ ಪ್ರಶಂಸನೀಯವಾದುದು. ಆ ವಂಶವನ್ನು ಸೇವಿಸದ ಜನರು ಮಂದಭಾಗ್ಯರು !

ಶ್ರೀಕೃಷ್ಣನು ನಿನಗೆ ಜ್ಞಾನವನ್ನು ಉಪದೇಶಿಸುವಂತೆ ನನಗೆ ಆಜ್ಞೆಮಾಡಿರುವನು. ನೀನೂ ಉಪದೇಶಿಸೆಂದು ನನ್ನನ್ನು ಪ್ರಾರ್ಥಿಸುತ್ತಿರುವೆ. ನಿನಗೀಗ ಭಾಗವತ ಪುರಾಣವನ್ನೇ ಈ ಪ್ರಶ್ನೆಗಳಿಗೆ ಉತ್ತರವಾಗಿ ಹೇಳುತ್ತೇನೆ. ಈ ಪುರಾಣವು ಅಲ್ಪ ಸುಖಕ್ಕಾಗಿ ಮಹದ್ದುಃಖಕ್ಕೆ ಗುರಿಯಾದ ಅಧಿಕಾರಿಚೇತನರ ದುಃಖವನ್ನು ನಾಶ ಮಾಡುವಂತಹುದು. ಇದನ್ನು ಶೇಷದೇವರು ಸನತ್ಕುಮಾರರೇ ಮೊದಲಾದ ಜ್ಞಾನಿಗಳಿಗೆ ಉಪದೇಶಿಸಿರುವರು. ಆದ್ದರಿಂದ ಪ್ರಮಾಣವೆನಿಸುವುದಿದು. ಹಿಂದೆ ಸನತ್ಕುಮಾರರೇ ಮೊದಲಾದ ಜ್ಞಾನಿಗಳು ಶೇಷದೇವರಿಂದ ಸರ್ವೋತ್ತಮನಾದ ಶ್ರೀಹರಿಯ ತತ್ವವನ್ನು ತಿಳಿಯಬಯಸಿದರು. ಆಗವರು ಪಾತಾಳಲೋಕಕ್ಕೆ ಬಂದರು. ಅಲ್ಲಿ ವಿಶಾಲಪೀಠದಲ್ಲಿ ಕುಳಿತಿರುವ ಪರಮವೈಷ್ಣವರೂ ಜ್ಞಾನಿಗಳೂ ಆದ ತಮಗಿಂತಲೂ ಮೊದಲೇ ಸೃಷ್ಟರಾಗಿದ್ದ ಶೇಷದೇವರನ್ನು ಕಂಡರು. ಸ್ವತಂತ್ರನೂ, ಸರ್ವಾಧಾರನೂ, ಆನಂದಮಯನೂ ಆದ ವಾಸುದೇವನನ್ನು ಭಕ್ತಿಯಿಂದ ಉಪಾಸಿಸುತ್ತಿದ್ದ ಶೇಷದೇವರು ಆಗಾಗ ಭಕ್ತರಾದ ದೇವತೆಗಳ ಮೇಲೆ

ಅನುಗ್ರಹಬುದ್ಧಿಯಿಂದ ತಮ್ಮ ಧ್ಯಾನಕ್ಕಾಗಿ ಮುಚ್ಚಿದ ಕಣ್ಣುಗಳನ್ನು ಸ್ವಲ್ಪ ತೆರದು ಕೃಪಾಕಟಾಕ್ಷವನ್ನು ಬೀರುತ್ತಿದ್ದರು. ಉತ್ತಮ ವರವನ್ನು ಅಪೇಕ್ಷಿಸುತ್ತಿದ್ದ ನಾಗಕನ್ನಿಕೆಯರು ದೇವಗಂಗೆಯಲ್ಲಿ ಮಿಂದು ಶೇಷದೇವರ ಪಾದಪದ್ಮಗಳಿಗೆ ನಮಸ್ಕರಿಸಿ ವಿವಿಧ ಪೂಜಾಸಾಮಗ್ರಿಗಳಿಂದ ಪೂಜಿಸಿ ಅವರ ಅನುಗ್ರಹವನ್ನು ಪಡೆಯುತ್ತಿದ್ದರು. ಶೇಷದೇವರ ಸಾವಿರ ಹೆಡೆಗಳಿಗೂ ಇರುವ ಸಾವಿರ ಕಿರೀಟಗಳಲ್ಲಿನ ಶ್ರೇಷ್ಠರತ್ನಗಳ ಪ್ರಕಾಶದಿಂದ ಎಲ್ಲೆಲ್ಲೂ ಬೆಳಕು ತುಂಬಿತ್ತು. ಶೇಷದೇವರ ಮಹಿಮೆಯನ್ನು ಬಲ್ಲ ಈ ಜ್ಞಾನಿಗಳಿಗೆ ಭಕ್ತಿಯು ಉಕ್ಕಿ ಮಾತು ಹೊರಡದಂತಾಗಿ ಪದಗಳು ತೊದಲುತ್ತಿದ್ದುವು. ಹಾಗೆಯೇ ಅವರು ಸ್ತೋತ್ರಮಾಡುತ್ತ ಸಾಷ್ಟಾಂಗವೆರಗಿ ಪ್ರಶ್ನೆ ಮಾಡಿದರು. ಭಗವಂತನಿಗೆ ಪ್ರಿಯವಾದ ಕರ್ಮಗಳಲ್ಲಿಯೇ ಆಸಕ್ತರಾದ ಸನತ್ಕುಮಾರರನ್ನು ಬಲ್ಲ ಶೇಷದೇವರು ಅವರಿಗೆ ಭಾಗವತವನ್ನು ಉಪದೇಶಿಸಿದರು. ಆ ಸನತ್ಕುಮಾರರು ಭಗವತ್ಪ್ರಿಯವಾದ ವ್ರತಗಳನ್ನು ಮಾಡುವ ಸಾಂಖ್ಯಾಯನರಿಗೆ ಹೇಳಿದರು. ಪರಮಹಂಸ ಶ್ರೇಷ್ಠರೆನಿಸಿದ ಆ ಸಾಂಖ್ಯಾಯನರು ವಿನಯ ಮೊದಲಾದ ಗುಣಗಳಿಂದ ಉಪದೇಶಕ್ಕೆ ಅರ್ಹರಾಗಿದ್ದ ಪರಾಶರರಿಗೂ, ಬೃಹಸ್ಪತಿಗಳಿಗೂ ಅನುಗ್ರಹಿಸಿದರು. ಪುಲಸ್ತ್ಯರ ಮಾತಿನಂತೆ ಪರಾಶರರು ನನಗೆ ಈ ಉತ್ತಮೋತ್ತಮ ಪುರಾಣವನ್ನು ಉಪದೇಶಕೊಟ್ಟರು. ವಿದುರ! ನೀನಾದರೂ ಯಾವಾಗಲೂ ಶ್ರೀಹರಿಗೆ ಪ್ರಿಯವಾದ ಕಾರ್ಯಗಳನ್ನೇ ಮಾಡುವೆ. ಭಕ್ತನೂ ಶ್ರದ್ಧಾವಂತನೂ ಇರುವೆ. ಆದ್ದರಿಂದ ನಿನಗೆ ಆ ಪುರಾಣವನ್ನೇ ಉಪದೇಶ ಮಾಡುತ್ತೇನೆ.

ಶ್ರೀಹರಿಗೆ ಕ್ಲೇಶವಿಲ್ಲ. ಭಕ್ತರ ಉದ್ಧಾರಕ್ಕಾಗಿಯೇ ಅವತರಿಸಿರುವವನು. ಇಂತಹ ಶ್ರೀಹರಿಯು ಸೃಷ್ಟಿಮೊದಲಾದ ಕಾರ್ಯಗಳಲ್ಲಿ ತೊಡಗದೆ ತನ್ನಲ್ಲಿಯೇ ತಾನು ಆನಂದಪಡುತ್ತಾ ಮುಕ್ತಶೇಷಶಾಯಿಯಾಗಿ ನಿದ್ರೆಯಿಲ್ಲದಿದ್ದರೂ ಯೋಗನಿದ್ರಾ-ಸಕ್ತನಾಗಿ ಕಣ್ಣು ಮುಚ್ಚಿದ್ದನು. ಆಗ ಈ ಪ್ರಪಂಚವೆಲ್ಲವೂ ಅವನ ಉದರದಲ್ಲಿ ಅಡಗಿತ್ತು. ಆದ್ದರಿಂದ ನೀರಿನಲ್ಲಿ ಮುಳುಗಿಹೋಗಿತ್ತೆಂದು ಹೇಳುವರು. ಶ್ರೀಹರಿಯ ಶಕ್ತಿಯು ಕುಗ್ಗಿರಲಿಲ್ಲ. ಬೆಂಕಿಯು ತನ್ನ ದಾಹಕಶಕ್ತಿಯನ್ನು ಅಡಗಿಸಿಕೊಂಡು ಕಟ್ಟಿಗೆಯಲ್ಲಿ ಇರುವಂತೆ ಶ್ರೀಹರಿಯು ಎಲ್ಲ ಸೂಕ್ಷ್ಮರೂಪದ ಜಗತ್ತನ್ನೂ ತನ್ನ ಶರೀರದಲ್ಲಿ ಅಡಗಿಸಿಕೊಂಡು ಪ್ರಳಯಕಾಲವೆಂಬ ತನ್ನ ಶಕ್ತಿಯನ್ನು ವ್ಯಕ್ತಗೊಳಿಸಿದ್ದನು. ಆ ಕಾಲಕ್ಕೆ ಅಭಿಮಾನಿಯಾದ ತನ್ನ ಹೆಂಡತಿ ರಮಾದೇವಿಯನ್ನು ಪ್ರೇರಿಸಿ ಸುಖಪಡಿಸುತ್ತಿದ್ದನು. ಹೀಗೆ ತನ್ನ ವಾಸಸ್ಥಳವೆನಿಸಿದ ಪ್ರಳಯೋದಕದಲ್ಲಿ ಪವಡಿಸಿದ್ದನು. ಹೀಗೆ ಒಂದು ಸಾವಿರ ಚತುರ್ಯುಗಗಳು ಕಳೆದುವು. ಅನಂತರ

ಸೃಷ್ಟಿಕಾಲವೆಂಬ ತನ್ನ ಶಕ್ತಿಯನ್ನು ಪ್ರೇರಿಸಿದನು. ಆಗವನು ಸೃಷ್ಟಿಗಾಗಿ ಜೀವರ ಅದೃಷ್ಟವನ್ನು ಉಪಯೋಗಿಸಿಕೊಂಡು ತನ್ನ ಉದರದಲ್ಲಿ ಇದ್ದ ತ್ರಿವಿಧ ಜೀವರ ಸಮೂಹವನ್ನೂ ನೋಡಿದನು. ಅವರವರ ಗತಿಯನ್ನು ಅವರವರಿಗೆ ಕೊಡಲು ಸೃಷ್ಟಿಸಲಿಚ್ಛೆ ಮಾಡಿದನು. ಅವನ ಪ್ರಳಯಶಕ್ತಿಗೂ ಸೃಷ್ಟಿಶಕ್ತಿಗೂ ಸ್ವಲ್ಪವೂ ಭೇದವಿಲ್ಲ. ಅವನಿಗೆ ತಿಳಿಯದ ವಸ್ತುವಿಲ್ಲ. ಸೂಕ್ಷ್ಮವಾದ ಭೂತಗಳನ್ನೂ, ಇಂದ್ರಿಯಗಳನ್ನೂ, ಜೀವರನ್ನೂ ಪ್ರತ್ಯಕ್ಷವಾಗಿ ಕಾಣುವ ಅವನು ಸೃಷ್ಟಿಸಬಯಸಿದಾಗ ಅವನ ಉದರದಲ್ಲಿದ್ದ ಜಲಭೂತವು ಸೃಷ್ಟಿಕಾಲಾನುಗುಣವಾದ ಪೃಥಿವೀಭೂತದೊಂದಿದಗೆ ಸೇರಿ ವಾಯುವಿನಿಂದ ಘನೀಭಾವವನ್ನು ಹೊಂದಿ ಅವನ ನಾಭಿಯಿಂದ ಹೊರಕ್ಕೆ ಹೊಮ್ಮಿತು. ಅದೊಂದು ಕಮಲದ ಮೊಗ್ಗು. ಅದಕ್ಕೆ ಶ್ರೀಹರಿಯೇ ಕಾರಣನು. ಅದರ ಪ್ರಕಾಶವು ವಿಸ್ತಾರವಾದ ಪ್ರಳಯ ಜಲವನ್ನೇ ಪ್ರಕಾಶಪಡಿಸಿತು. ಅದೃಷ್ಟ ಫಲವನ್ನುಂಟು ಮಾಡಲು ಪ್ರೇರಿತವಾದ ಶ್ರೀಹರಿಯ ಸೃಷ್ಟಿಕಾಲವೆಂಬ ಶಕ್ತಿಯಿಂದ ಆ ಕಮಲದ ಮೊಗ್ಗು ಇದ್ದಕ್ಕಿದ್ದಂತೆಯೇ ಹದಿನಾಲ್ಕು ಲೋಕಗಳೂ ಆಗುವಷ್ಟು ದೊಡ್ಡದಾಗಿ ಬೆಳೆಯಿತು. ಆ ಲೋಕಪದ್ಮದಲ್ಲಿ ಶ್ರೀಹರಿಯೇ ಮತ್ತೊಂದು ರೂಪದಿಂದ ಪ್ರವೇಶಿಸಿದನು. ಸ್ವತಂತ್ರವಾದ ಈ ರೂಪವು ಸ್ವಯಂ ಎನಿಸುವುದು. ಅದರಿಂದ ಬ್ರಹ್ಮದೇವರು ಹುಟ್ಟಿದರು. ಆದ್ದರಿಂದ ಅವರಿಗೆ ಸ್ವಯಂಭೂಃ ಎಂಬ ಹೆಸರು ಬಂದಿತು. ಲಕ್ಷ್ಮೀನಾರಾಯಣರನ್ನು ಬಿಟ್ಟರೆ ಈ ಬ್ರಹ್ಮದೇವರೇ ಸಕಲ ವೇದ ಪ್ರತಿಪಾದ್ಯರು. ಹಾಗೆ ಹುಟ್ಟಿದ ಬ್ರಹ್ಮದೇವರು ಆ ಕಮಲಕರ್ಣಿಕೆಯಲ್ಲಿ ಕುಳಿತು ಸುತ್ತಲೂ ನೋಡಿದರು. ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮುಖಗಳಾದ್ದರಿಂದ ಚತುರ್ಮುಖರೆನಿಸಿದರು. ಅವರಿಗೆ ತಮ್ಮ ವಿನಹ ಮತ್ತೆ ಏನೂ ಕಾಣಿಸಲಿಲ್ಲ. ಪ್ರಳಯಕಾಲದ ಗಾಳಿಯಿಂದ ಅಲ್ಲಕಲ್ಲೋಲವಾಗುತ್ತಿದ್ದ ಆ ಜಲರಾಶಿಯಲ್ಲಿ ತಮಗೆ ಕಾರಣವಾಗಿದ್ದ ಕಮಲವೊಂದು ಮಾತ್ರ ಕಾಣುತ್ತಿತ್ತು. ಪ್ರತ್ಯಕ್ಷವಾಗಿ ತಮ್ಮನ್ನಾಗಲಿ ತಮಗೆ ಕಾರಣನಾದ ಶ್ರೀಹರಿಯನ್ನಾಗಲಿ ಅವರು ಕಾಣಲಿಲ್ಲ. (ಹೀಗವರು ಅಜ್ಞಾನವನ್ನು ತೋರಿಸಿದುದು ತಾವು ಶ್ರೀಹರಿಯಲ್ಲವೆಂದು ಉತಿಳಿಸುವುದಕ್ಕಾಗಿ.) ಆಗವರ ಮನಸ್ಸಿನಲ್ಲಿ ಈ ಕಮಲದಲ್ಲಿ ಕುಳಿತಿರುವ ನಾನಾರು? ಈ ಕಮಲವಾದರೂ ಎಲ್ಲಿಂದ ಉತ್ಪನ್ನವಾಯಿತು? ಇದಕ್ಕೆ ಕಾರಣವಾದ ಯಾವುದೋ ವಿಲಕ್ಷಣವಸ್ತು-ವಿರಲೇಬೇಕು. ಅದನ್ನಾಶ್ರಯಿಸಿಕೊಂಡೇ ಈ ಕಮಲವಾದರೂ ಇರಲು ಸಾಧ್ಯವು. ಆ ವಸ್ತುವೂ ಪರಬ್ರಹ್ಮನಲ್ಲದೆ ಬೇರೆಯಲ್ಲ, ಎಂಬೀ ಯೋಚನಾತರಂಗಗಳೆದ್ದುವು. ಆಗವರು ಆ ವಸ್ತುವನ್ನು ಕಾಣಲು ಕಮಲದ ನಾಳದ ಮೂಲಕ ನೀರಿನಲ್ಲಿ ಪ್ರವೇಶಿಸಿದರು. ಅಲ್ಲೆಲ್ಲಿ ಹುಡುಕಿದರೂ ಅದನ್ನು ಕಾಣಲಾಗಲಿಲ್ಲ. ಅವನ ಅನುಗ್ರಹವಿಲ್ಲದೆ ಅವನನ್ನು ಕಾಣಲಾಗುವುದೇ? ಬ್ರಹ್ಮದೇವರು ಹುಡುಕುತ್ತಿರು-

ವಂತೆಯೇ ಮನುಷ್ಯಮಾನದ ಒಂದು ನೂರು ವರ್ಷಗಳು ಕಳೆದುಹೋದುವು. ಚಾತುರ್ಮಾಸ್ಯಗಳೆಂಬ ಮೂರು ಅರೆಗಾಲುಗಳುಳ್ಳ ಈ ಕಾಲಚಕ್ರವು ಶ್ರೀಹರಿಯ ಆಯುಧವು, ಇದರಿಂದಲೇ ಪ್ರತಿಯೊಬ್ಬದೇಹಿಯೂ ಮೃತ್ಯುಭಯಕ್ಕೆ ತುತ್ತಾಗುವನು. ಹೀಗೆ ನೂರು ವರ್ಷಗಳ ಕಾಲ ಹುಡುಕಿ ಸರ್ವೋತ್ತಮವಸ್ತುವನ್ನು ಕಾಣದೆ ಬ್ರಹ್ಮದೇವರು ಹಿಂತಿರುಗಿ ಪದ್ಮಕ್ಕೆ ಬಂದು ಅಲ್ಲಿಯೇ ಕುಳಿತು ತಪಸ್ಸು ಮಾಡಿದರು. ಆ ಕಮಲಕರ್ಣಿಕೆಯೇ ಅವರಿಗೆ ಅಜಿನದ ಆಸನವಾಯಿತು. ಶ್ವಾಸವನ್ನು ನಿರೋಧಮಾಡಿ ಏಕಾಗ್ರತೆಯಿಂದ ಅಸಂಪ್ರಜ್ಞಾತಸಮಾಧಿಯಲ್ಲಿ ಮಗ್ನರಾದರು. ಹಿಂದೆ ನೂರುವರ್ಷ ಹುಡುಕಿದರೂ ಕಾಣದಿದ್ದ ಶ್ರೀಹರಿಯನ್ನು ಬ್ರಹ್ಮದೇವರು ತಮ್ಮ ಹೃದಯದಲ್ಲಿಕಂಡರು. ಅಭಿವೃದ್ಧಿಹೊಂದಿದ ಸಾಧನೆಯಿಂದ ಅಪರೋಕ್ಷಜ್ಞಾನಿಗಳಾಗಿದ್ದ ಅವರಲ್ಲಿ ಶ್ರೀಹರಿಯು ಅನುಗ್ರಹಮಾಡಿ ಹೃದಯದಲ್ಲಿ ಪ್ರಕಾಶನಾದನು. ಇವನೇ ಬ್ರಹ್ಮದೇವರ ಇಷ್ಟದೈವ ಶೇಷದೇವರ ಸಾವಿರ ಹೆಡೆಗಳಲ್ಲಿನ ರತ್ನಗಳ ಕಾಂತಿಯಿಂದ ಕತ್ತಲೆಯಿಲ್ಲದಿರುವ ಆ ಪ್ರಳಯೋದಕದಲ್ಲಿ ಬೆಳ್ಳಗೂ ವಿಶಾಲವಾಗಿಯೂ ಇರುವ ಶೇಷದೇವರ ದೇಹವೆಂಬ ಹಾಸಿಗೆಯಲ್ಲಿ ಪುರುಷಾಕಾರನಾಗಿ ಅಪ್ರಾಕೃತನಾದ ಶ್ರೀಹರಿಯು ಮಲಗಿದ್ದ ರೂಪವನ್ನೇ ಅವರು ಕಂಡದ್ದು. ನೀಲಮಣಿಯ ಕಾಂತಿಯಿಂದ ಕೂಡಿದ್ದ ಆ ಶ್ರೀಹರಿಯು ಪೀತಾಂಬರ-ಧಾರಿಯೂ, ಬಂಗಾರದ ಕಿರೀಟದಿಂದ ಅಲಂಕೃತನೂ, ಕೌಸ್ತುಭರತ್ನವನ್ನು ಧರಿಸಿದವನೂ, ವನಮಾಲೆಯನ್ನು ಹಾಕಿಕೊಂಡವನೂ, ಉದ್ದವಾದ ತೋಳುಗಳು ಮತ್ತು ನಮಸ್ಕರಿಸಿದವರ ದುಃಖಗಳನ್ನು ಪರಿಹರಿಸುವ ಪಾದಗಳು ಇವುಗಳಿಂದ ಕೂಡಿದವನೂ ಆಗಿ ಅತ್ಯಂತ ಸುಂದರನಾಗಿದ್ದನು. ಮೂರುಲೋಕಗಳಿಗೂ ಹಿಡಿಸುವಷ್ಟು ವಿಶಾಲವೂ ಉದ್ದವೂ ಆದ ಆ ದೇಹದಲ್ಲಿ ಧರಿಸಿದ್ದ ರತ್ನಾಭರಣಗಳು ಮತ್ತು ಬಟ್ಟೆಗಳು ಪೂರ್ಣಕಾಂತಿಯನ್ನು ಗಳಿಸಿದ್ದುವು. ಕಾಲಿನ ಉಗುರುಗಳ ಕಾಂತಿಯಿಂದ ಹೊಳೆಯುತ್ತಿದ್ದ ಪಾದಾಂಗುಲಿಗಳುಳ್ಳ, ವಿವಿಧರೀತಿಯಿಂದ ಸೇವಿಸುವ ಭಕ್ತರಿಗೆ ಇಷ್ಟಪ್ರದಗಳಾದ ಪಾದಗಳನ್ನು ಶ್ರೀಹರಿಯು ಧ್ಯಾನಿಸುವ ಭಕ್ತರಿಗಾಗಿ ತೋರುತ್ತಿದ್ದನು. ಅವನ ಮುಖದಲ್ಲಿ ಮಿನುಗುತ್ತಿದ್ದ ಮುಗುಳು-ನಗೆಯು ಜನರ ದುಃಖವನ್ನು ಹೋಗಲಾಡಿಸುತ್ತಿತ್ತು. ಪ್ರಕಾಶಮಾನಗಳಾದ ಕುಂಡಲಗಳು, ಕೆಂಪಗಿರುವ ತುಟಿಗಳು, ಸುಂದರವಾದ ಮೂಗು ಮತ್ತು ಹುಬ್ಬುಗಳಿಂದ ಕೂಡಿದ ಮುಖದಿಂದ ಭಕ್ತರನ್ನು ಸಂಭಾವಿಸುತ್ತಿದ್ದನು. ಅವನು ಉಟ್ಟಿದ್ದ ವಸ್ತ್ರದ ಮೇಲೆ ನಡುಪಟ್ಟಿಯೊಂದು ಹೊಳೆಯುತ್ತಿತ್ತು. ಅವನ ಎದೆಯು ಅಮೂಲ್ಯವಾದ ಹಾರಕ್ಕೆ ಆಶ್ರಯವಾಗಿದ್ದಿತು. ತಲೆಯ ಆಭರಣ, ಕೈಬಳೆ ಇವುಗಳಲ್ಲಿನ ರತ್ನಗಳ ಕಾಂತಿಯು ಸುತ್ತಲೂ ಹರಡಿರಲು ಸಾವಿರಾರು

ತೋಳುಗಳನ್ನು ಚಾಚಿದ್ದನು. ಶೇಷದೇವರ ದೇಹವು ಅವನ ದೇಹಕ್ಕೆ ಅಂಟಿಕೊಂಡಿದ್ದಿತು. ಅವನು ಪ್ರಕೃತಿಗೂ ಮೂಲನಾಗಿದ್ದು ಅವನ ಮೂಲವನ್ನು ತಿಳಿಯಲಾಗದವನಾಗಿದ್ದನು. ಅವನ ದೇಹವು ಸಮಸ್ತ ಜಗತ್ತಿಗೂ ಮನೆಯಾಗಿತ್ತು. ಸುತ್ತಲೂ ತುಂಬಿದ್ದ ನೀರಿನಲ್ಲಿ ಅವನ ಕಿರೀಟಗಳ ರತ್ನಗಳ ಕಾಂತಿಯು ಬೆಳಗುತ್ತಿತ್ತು. ಅವನ ಕೀರ್ತಿಯನ್ನೇ ವೇದಗಳು ಯಾವಾಗಲು ಸಾರುತ್ತಿರುವುವು. ಅವನ ಸುತ್ತಲೂ ಮುಕ್ತರಾದ ದೇವತೆಗಳು ಕುಳಿತಿದ್ದರು. ಅವನ ಪಟ್ಟಣದ ಪಾಲಕರು ಪ್ರದಕ್ಷಿಣೆಯಾಗಿ ಸುತ್ತುತ್ತಿದ್ದರು. ಇಂತಹ ಮಹಾಮಹಿಮೋಪೇತನಾದ ಶ್ರೀಹರಿಯನ್ನು ಬ್ರಹ್ಮದೇವರು ಕಂಡರು.

ಹೀಗೆ ಬ್ರಹ್ಮದೇವರು ಶ್ರೀಹರಿಯನ್ನು ಕಂಡಾಗ ಶ್ರೀಹರಿಯ ನಾಭಿಕಮಲದಲ್ಲಿ ಹುಟ್ಟಿದ ತಮ್ಮನ್ನೂ, ಪ್ರಳಯಜಲವನ್ನೂ, ವಾಯುವನ್ನೂ, ಆಕಾಶವನ್ನೂ ನೋಡಿದರು. ಹಾಗೆಯೇ ಮುಕ್ತಸೂರ್ಯ ಮೊದಲಾದ ದೇವತೆಗಳನ್ನೂ, ಸೃಷ್ಟಿ ಇಲ್ಲದ ನಿತ್ಯಪದಾರ್ಥಗಳನ್ನೂ ಕಂಡರು. ಸೃಷ್ಟಿ ಮೊದಲಾದ ವ್ಯಾಪಾರಮಾಡದಿರುವ ಶ್ರೀಹರಿಯ ದರ್ಶನವೇ ನಿರ್ಗುಣಬ್ರಹ್ಮದರ್ಶನವು. ಅದಕ್ಕಿಂತ ಬೇರೆ ನಿರ್ಗುಣ-ಬ್ರಹ್ಮವೆಂಬ ವಸ್ತುವಿಲ್ಲ.

ರಜೋಗುಣದ ಕಾರ್ಯವಾದ ಸೃಷ್ಟಿಯಲ್ಲಿ ತೊಡಗಿದ ಬ್ರಹ್ಮದೇವರು ಜೀವರಿಗೆ ಅವರವರ ಕರ್ಮಾನುಗುಣವಾಗಿ ದೇಹವನ್ನು ಕೊಡಲು ಇಷ್ಟಪಟ್ಟವರಾಗಿ ಅದಕ್ಕೆ ಬೇಕಾದ ಕೆಲವೇ ಸಾಧನಪದಾರ್ಥಗಳನ್ನು ಕಂಡು ಶ್ರೀಹರಿಯ ಅನುಗ್ರಹಕ್ಕಾಗಿ ಅವನನ್ನು ಸ್ತೋತ್ರಮಾಡಲಾರಂಭಿಸಿದರು.



## ಅಥ ದಶಮೋಽಧ್ಯಾಯಃ

ಈ ಅಧ್ಯಾಯದಲ್ಲಿ ಕೆಲವು ಶ್ಲೋಕಗಳಿಂದ ಬ್ರಹ್ಮದೇವರ ಸ್ತುತಿಯನ್ನು ವಿವರಿಸುವರು. ಮೊದಲಿಗೆ ಭಗವಂತನ ದರ್ಶನದಿಂದ ತನಗೆ ಕೃತಾರ್ಥತೆಯನ್ನು ವ್ಯಕ್ತಪಡಿಸುವರು ಬ್ರಹ್ಮದೇವರು.

**ಬ್ರಹ್ಮೋವಾಚ**

**ಜ್ಞಾತೋಽಸಿ ಮೇಽದ್ಯ ಸುಚಿರಾನ್ನನು ದೇಹಭಾಜಾಂ**
**ನ ಜ್ಞಾಯತೇ ಭಗವತೋ ಗತಿರಿತ್ಯವದ್ಯಂ ।**
**ನಾನ್ಯತ್ ತ್ವದಸ್ತಿ ಭಗವನ್ನಪಿ ತತ್ತ್ವಶುದ್ಧಂ**
**ಮಾಯಾಗುಣವ್ಯತಿಕರಾದ್ ಯದುರುರ್ವಿಭಾಸಿ ॥೧॥**

ಅದ್ಯ=ಈಗ ಮೇ=ನನಗೆ ಸುಚಿರಾತ್=ಬಹುಕಾಲಮಾಡಿದ ಧ್ಯಾನದಿಂದುಂಟಾದ ಪ್ರಸಾದಿಂದ ಜ್ಞಾತೋಽಸಿ=ಪ್ರತ್ಯಕ್ಷನಾಗಿರುವಿ ನನು=ಆಶ್ಚರ್ಯ. ('ಅವ್ಯಕ್ತಮಚಲಂ' ಎಂಬ ಶ್ರುತಿಯು ಭಗವಂತನು ಸರ್ವಥಾ ತೋರುವುದಿಲ್ಲ ಎಂದು ಹೇಳುತ್ತಿದೆಯಲ್ಲ?) ದೇಹಭಾಜಾಂ=ಅಧಿಕಾರಿಗಳಿಗೆ ಭಗವತಃ=ಪರಮಾತ್ಮನ ಗತಿಃ=ಸ್ವರೂಪವು ನ ಜ್ಞಾಯತೇ=ಸರ್ವಥಾ ತಿಳಿಯಲಾರದು ಎಂದು 'ಅವ್ಯಕ್ತಮಚಲಂ' ಎಂಬ ಶ್ರುತಿಗೆ ಅರ್ಥ ಮಾಡುವದು, ಅವದ್ಯಂ=ನಿಂದ್ಯವಾದುದು. (ದುಷ್ಟವು) ಏಕೆಂದರೆ, ಧ್ಯಾನದಿಂದ ಪ್ರಸನ್ನನಾದ ಭಗವಂತ ನನ್ನಿಂದಲೇ ಜ್ಞಾತನಾಗಿರುವನಷ್ಟೇ!

ಕಾರಣ 'ಅವ್ಯಕ್ತಮಚಲಂ' ಎಂಬ ಶ್ರುತಿಗೆ ಭಗವಂತನ ಪ್ರಸಾದವಿಲ್ಲದೇ ಕೇವಲ ಸ್ವಪ್ರಯತ್ನದಿಂದ ಭಗವಂತನು ತಿಳಿಯಲಾರನೆಂದು ಅರ್ಥ ಮಾಡಬೇಕು ಎಂದು ಭಾವ. ('ನಾನ್ಯೋऽತೋऽಸ್ತಿದ್ರಷ್ಟಾ' ಎಂಬ ಶ್ರುತಿಯು ಭಗವಂತನಿಂದ ಭಿನ್ನರಾದ ದ್ರಷ್ಟಗಳು ಯಾರೂ ಇಲ್ಲವೆಂದು ಹೇಳುತ್ತಿದೆ. ಆದ್ದರಿಂದ ನೋಡುವವರೇ ಇಲ್ಲದಿರುವುದರಿಂದ ಭಗವಂತನನ್ನು ಅವ್ಯಕ್ತ ಎಂದು ಕರೆಯಬಹುದಲ್ಲಾ? ಎಂದರೆ ಹೇಳುವರು) ತ್ವತ್ (ತ್ವತ್ತಃ)=ನಿನ್ನಿಂದ ಅನ್ಯತ್=ಭಿನ್ನವಾದದ್ದು ಸ್ವತಃ ನ ಅಸ್ತಿ= ಸ್ವತಂತ್ರವಾದುದು ಇಲ್ಲ. ಕಾರಣ 'ನಾನ್ಯೋऽತೋऽಸ್ತಿದ್ರಷ್ಟಾ' ಎಂಬ ಶ್ರುತಿಗೆ ನಿನ್ನಿಂದ ಭಿನ್ನರಾದ ಸ್ವತಂತ್ರದ್ರಷ್ಟಾ ಬೇರೆ ಇಲ್ಲವೆಂದೇ ಅರ್ಥವೇ ಹೊರತು, ಸರ್ವಥಾ ನಿನ್ನಿಂದ ಭಿನ್ನರಾದ ದ್ರಷ್ಟಗಳು ಯಾರೂ ಇಲ್ಲವೆಂದಲ್ಲ. ತತ್ ಅಪಿ=ನಿನ್ನ ಅಧೀನವಾದ ದ್ರಷ್ಟ್ರಸಮೂಹವೂ ಕೂಡ ಅಶುದ್ಧಂ ತು=(ಬ್ರಹ್ಮದೇವರಂತೆ) ರಾಗಾದಿ ದೋಷರಹಿತವಲ್ಲ. ಕಾರಣ ನಿನ್ನನ್ನು ಕಾಣಲಾರರು. (ಭಗವಂತನಿಂದ ಭಿನ್ನವಾದುದೆಲ್ಲವೂ ಭಗವದಧೀನವೆಂದಾದರೆ, ಸ್ಥಾನಭೇದದಿಂದ ಭಗವದ್ರೂಪ- ಗಳಿಗೂ ಭೇದ ತಿಳಿದುಬರುವುದು.ಆದ್ದರಿಂದ ಆ ಬೇರೆ ಬೇರೆ ರೂಪಗಳು ಭಗವದಧೀನವಾಗಿವೆಯೇ? ಎಂದರೆ ಹೇಳುವರು) ಮಾಯಾಗುಣವ್ಯತಿಕರಾತ್= ಪ್ರಕೃತಿಗುಣಗಳಾದ ಸತ್ವಾದಿಗಳ ಕಾರ್ಯವಾದ ಪದಾರ್ಥಗಳೆಂಬ ಸ್ಥಾನಭೇದದಿಂದ ಉರು=ನಾನಾರೂಪದಿಂದ ಅವುಗಳ ಪ್ರೇರಕನಾಗಿ ಯದ್ಭಾಸಿ=ಏನು ತೋರು- ವಿಯೋ ತತ್ ವಿಭಾಸಿ=ವಿಗತಾರ್ಥವಾಗಿ ತೋರುವಿ. ಅಂದರೆ ಜ್ಞಾನದಲ್ಲಿ ತೋರಿದ ಭೇದವು ಅಸತ್ ಆಗಿದೆ. ಕಾರಣ ರೂಪಗಳಿಗೆ ಅಧೀನತೆ ಬರಬೇಕಿಲ್ಲ- ವೆಂದು ಭಾವ.

ಮೇಲಿನ ಶ್ಲೋಕದ ಉತ್ತರಾರ್ಧದಲ್ಲಿ ನಿನ್ನಿಂದ ಭಿನ್ನವಾದುದು ಇಲ್ಲವೇ ಇಲ್ಲ. ಯಾವುದು ಇದೆಯಂದು ತೋರುವುದೋ ಅದು ಅಶುದ್ಧ ಅಂದರೆ ಅಸತ್. ಹಾಗಾದರೆ ತೋರುವುದು ಹೇಗೆ? ಅಂದರೆ ಮಾಯಾಗುಣಕ್ಷೋಭೆಯಿಂದ ನೀನೇ ಬಹಳವಾಗಿ ತೋರುವಿ ಎಂಬ ವ್ಯಾಖ್ಯಾನ ಸರಿಯಲ್ಲ. ಕಾರಣ ವಿವಕ್ಷಿತ ಅರ್ಥವನ್ನು ಹೇಳುವರು –

**ಸ್ವತೋ ನಾಸ್ತಿ ತದಧೀನಂ ವಿದ್ಯಮಾನಮಪಿ ಅಶುದ್ಧಂ ।**

ಮೇಲೆ ತೋರುವ ಅರ್ಥ ಪ್ರತ್ಯಕ್ಷಾದಿ ವಿರುದ್ಧವಾದ್ದರಿಂದ 'ಸ್ವತಃ' ಎಂಬ ಪದ ಅಧ್ಯಾಹಾರಮಾಡಿ ಯೋಜಿಸಬೇಕು.ನಿನ್ನಿಂದ ಭಿನ್ನವಾದದ್ದು ಸ್ವತಂತ್ರವಾದುದು ಯಾವುದೂ ಇಲ್ಲ ಎಂದು ಭಾವ. ಅಶುದ್ಧವೆಂದರೆ ಶುದ್ಧವಲ್ಲದ್ದು ದೋಷವುಳ್ಳದ್ದು ಎಂದರ್ಥ.

ಭಗವಂತನಿಗೂ ಸ್ಥಾನಬೇದದಿಂದ ಬೇದವಿರುವುದರಿಂದ ಅಧೀನತೆ ಬರಲಿ ಎಂದರೆ ಹೇಳುವರು –

**ಯಚ್ಚ ಸ್ವನಾನಾತ್ವಂ ತದಪಿ ಸ್ಥಾನಭೇದಾತ್ ಅಸದೇವ ಭಾತಿ ।**

ಸ್ಥಾನಭೇದದಿಂದ ಭಗವದ್ರೂಪಗಳಲ್ಲಿ ಭೇದವು ಇಲ್ಲದಿರುವುದೇ ತೋರುವುದು ಎಂದರ್ಥ.

ಈ ವಿಷಯದಲ್ಲಿ ಪ್ರಮಾಣ ಹೇಳುವರು –

**ಏಕೋಽಪಿ ಸ್ಥಾನನಾನಾತ್ವಾತ್ ನಾನೇವ ಹರಿರೀಯತೇ ।**
**ಸರ್ವಾಂತರ್ಯಾಮಿಣಸ್ತಸ್ಯ ನ ಭೇದೋ ವಿದ್ಯತೇ ಕ್ವಚಿತ್ ॥**
**ಇತಿ ಬ್ರಹ್ಮವೈವರ್ತೇ ।**

ಸ್ವಗತಭೇದಶೂನ್ಯನಾಗಿದ್ದರೂ ಸ್ಥಾನಗಳಲ್ಲಿ ಭೇದವಿರುವುದರಿಂದ ಭೇದವಿದ್ದಂತೆ ತಿಳಿಯಲ್ಪಡುವನು. ಸರ್ವಾಂತರ್ಯಾಮಿಯಾದ ಅವನಿಗೆ ಯಾವ ರೂಪ-ದಲ್ಲಿಯೂ ಬೇಧವಿರುವುದಿಲ್ಲ ಎಂದು ಭಾವ. 'ಸರ್ವಾಂತರ್ಯಾಮಿಣಃ' ಎಂದದ್ದರಿಂದ ಶ್ರೀಹರಿಗೂ ಆ ಆ ಸ್ಥಾನದಲ್ಲಿರುವ ರೂಪಗಳಿಗೂ ಪರಸ್ಪರ ಭೇದವಿದ್ದದ್ದಾರೆ ಶ್ರೀಹರಿಗೆ ಶ್ರುತಿಯಲ್ಲಿ ಹೇಳಿದ ಸರ್ವಾಂತರ್ಯಾಮಿತ್ವಲಕ್ಷಣವು ಅಸಂಭಾವಿತವಾಗುವುದು ಎಂಬ ಯುಕ್ತಿಯನ್ನೂ ಸೂಚಿಸುವರು. ಕಾರಣ ಬೇಧವಿಲ್ಲವೆಂದು ಭಾವ. ॥೧॥

ನೀವು ನೋಡಿದ ಬ್ರಹ್ಮನು ಸೋಪಾಧಿಕನು, ನೂತನನು; ಉತ್ತಮನಾದ ಬ್ರಹ್ಮ ಬೇರೆ ಇರುವನು. ಅವನು ಸರ್ವಥಾ ಅವ್ಯಕ್ತನೇ ಏಕಾಗಬಾರದು? ಎಂಬ ಶಂಕೆಗೆ ಎರಡು ಶ್ಲೋಕಗಳಿಂದ ಉತ್ತರಿಸುವರು –

**ರೂಪಂ ಯದೇತದವಭೋಧರಸೋದಯೇನ**
**ಶಶ್ವನ್ನಿವೃತ್ತತಮಸಃ ಸದನುಗ್ರಹಾಯ ।**
**ಆದೌ ಗೃಹೀತಮವತಾರಶತೈಕಬೀಜಂ**
**ಯನ್ನಾಭಿಪದ್ಮಭವನಾದಹಮಾವಿರಾಸಂ ॥೨॥**

**ನಾತಃ ಪರಂ ಪರಮ ಯದ್ ಭವತಃ ಸ್ವರೂಪ-**
**ಮಾನಂದಮಾತ್ರಮವಿಕಾರಮವಿದ್ಧವರ್ಚಃ ।**
**ಪಶ್ಯಾಮಿ ವಿಶ್ವಸೃಜಮೇಕಮವಿಶ್ವಮಾದ್ಯಂ**
**ಭೂತೇಂದ್ರಿಯಾತ್ಮಕಮದಸ್ತ ಉಪಾಶ್ರಿತೋಽಸ್ಮಿ ॥೩॥**

ಅವಬೋಧರಸೋದಯೇನ=ಶ್ರೇಷ್ಠವಾದ ಜ್ಞಾನದ ಆವಿರ್ಭಾವದಿಂದ ಶಶ್ವತ್=ಸರ್ವದಾ (ಯಾವಾಗಲೂ) ನಿವೃತ್ತತಮಸಃ=ಅತ್ಯಂತ ದೂರೀಕೃತವಾದ ಅಜ್ಞಾನವುಳ್ಳ ಸದನುಗ್ರಹಾಯ=ಸಜ್ಜನರಾದ ನಮ್ಮಂಥವರಿಗೆ ಅನುಗ್ರಹ ಮಾಡಲು ಆದೌ=ಅನಾದ್ಯನಂತಕಾಲದಲ್ಲಿ ಗೃಹೀತಂ=ವ್ಯಕ್ತೀಕರಿಸಿದ ಅವತಾರಶತ್ಯೆಕಬೀಜಂ= ಮತ್ಸ್ಯಾದಿ ನೂರು ಅವತಾರಗಳಿಗೆ ವ್ಯಂಜಕವಾದ, ಯನ್ನಾಭಿಪದ್ಮಭವನಾತ್ ಅಹಂ ಆವಿರಾಸಂ=ಯಾವ ನಿನ್ನ ನಾಭಿಯಲ್ಲಿರುವ ಪದ್ಮವೆಂಬ ಮನೆಯಿಂದ ನಾನು ಜನಿಸಿದೆನೋ, ಯತ್=ಯಾವುದು ಭವತಃ ಸ್ವರೂಪಂ=ನಿಮ್ಮಿಂದ ಅಭಿನ್ನವೋ, (ಜೀವರ ದೇಹದಂತೆ ಭಿನ್ನವಲ್ಲವೋ) ಆನಂದಮಾತ್ರಂ=ಕೇವಲ ಜ್ಞಾನಾನಂದಾ-ದ್ಯಾತ್ಮಕವೋ ಆದ್ದರಿಂದಲೇ ಅವಿಕಾರಂ=ವಿಕಾರರಹಿತವೋ, ಅವಿದ್ಧವರ್ಚಃ= ಅಪ್ರತಿಬದ್ಧವಾದ ಪ್ರಕಾಶವುಳ್ಳದ್ದೋ, ವಿಶ್ವಸೃಜಂ=ಜಗತ್ತಿಗೆ ಜನಕವೋ ಏಕಂ= ಸ್ರಷ್ಟ್ರಂತರರಹಿತವೋ (ನಿನಗೆ ಇನ್ನೊಬ್ಬ ಜನಕರಿಲ್ಲ ಎಂದರ್ಥ) ಅವಿಶ್ವಂ=ಪ್ರಪಂಚ ವಿಲಕ್ಷಣವೋ ಆದ್ಯಂ=ಎಲ್ಲದಕ್ಕೂ ಕಾರಣವೋ, ಭೂತೇಂದ್ರಿಯಾತ್ಮಕಂ= ಪಂಚಭೂತಗಳು ಮತ್ತು ಇಂದ್ರಿಯಗಳಲ್ಲಿ ವ್ಯಾಪಿಸಿದುದೋ ಅದಃ=ಪುರುಷ ಪ್ರಯತ್ನದಿಂದ ಅವ್ಯಕ್ತವಾದ ತೇ=ನಿನ್ನ ಯತ್ ಏತದ್ರೂಪಂ ಪಶ್ಯಾಮಿ ಉಪಾಶ್ರಿತೋऽಸ್ಮಿ=ಯಾವ ಈ ರೂಪವನ್ನು ನೋಡುವೆನೋ,ಆಶ್ರಯಿಸಿರುವನೋ ಹೇ ಪರಮ=ಸರ್ವೋತ್ತಮನೇ ಅತಃ=ಇದಕ್ಕಿಂತ ಪರಂ=ಉತ್ತಮವಾದ, ಭಿನ್ನವಾದ, ನಿರುಪಾಧಿಕವಾದುದು (ನಿರ್ಗುಣ ಬ್ರಹ್ಮ) ನಾಸ್ತಿ=ಇರುವುದಿಲ್ಲ. ಆದ್ದರಿಂದ ಇದೇ ನಿರಪಾಧಿಕವಾದುದು, ಉತ್ತಮವಾದುದು. ಇಂತಹ ರೂಪವನ್ನು ನಾನು ನೋಡುವೆನು. ಆದ್ದರಿಂದ 'ನ ಜ್ಞಾಯತೇ ಭಗವತೋ ಗತಿರಿತ್ಯವದ್ಯಂ' ಎಂದು ತನ್ನ ಪ್ರಸಾದದಿಂದ ಜ್ಞೇಯನೆಂದು ಹೇಳಿದುದು ನಿರುಪಾಧಿಕನಾದ ಉತ್ತಮನಿಗೇನೇ ಹೊರತು ಸೋಪಾಧಿಕನಿಗಲ್ಲವೆಂದು ಭಾವ. ॥೨-೩॥

ಮೇಲಿನ ೨-೩ನೇ ಶ್ಲೋಕಗಳಲ್ಲಿ ವಿವಕ್ಷಿತವಾದ ಉದ್ದೇಶ್ಯ-ವಿಧೇಯಭಾವವು ಸ್ಪಷ್ಟವಾಗಿ ತೋರುವುದಿಲ್ಲವಾದ್ದರಿಂದ ಅದನ್ನು ತೋರಿಸುತ್ತ ವ್ಯಾಖ್ಯಾನಿಸುವರು-

**''ಯನ್ನಾಭಿಪದ್ಮಭವನಾದಹಮಾವಿರಾಸಂ । ಯಚ್ಚೇದಂ ಭಗವತ್ಸ್ವರೂಪಂ ಆನಂದಮಾತ್ರಂ ಪಶ್ಯಾಮಿ । ಯಚ್ಚ ಆಶ್ರಿತೋऽಸ್ಮಿ ಅತಃ ಪರಂ ನಾಸ್ತಿ । ಅತೋ ನಜ್ಞಾಯತೇ ಇತಿ ಅವದ್ಯಮಿತಿ ಉತ್ತಮಾಪೇಕ್ಷಯಾ ।**

ಯಾವ ಕ್ಷೀರಸಮುದ್ರದ ಮಧ್ಯದಲ್ಲಿರುವ ಶ್ರೀಹರಿಯ ನಾಭಿಕಮಲವೆಂಬ ಮಂದಿರದಿಂದ ನಾನು ಜನಿಸಿರುವೆನೋ ಯಾವ ಈ ಭಗವತ್ಸ್ವರೂಪವನ್ನು ಕೇವಲ

ಆನಂದರೂಪವನ್ನಾಗಿ ನೋಡುತ್ತಿರುವೆನೋ ಯಾವ ರೂಪವನ್ನೇ ಯಾವಾಗಲೂ ಆಶ್ರಯಿಸಿರುತ್ತೇನೋ ಇದಕ್ಕಿಂತ ಉತ್ತಮವಾದುದು ಇಲ್ಲ.

'ಅತೋ ನ ಜ್ಞಾಯತೇ ಇತಿ ಅವದ್ಯ'ಮಿತಿ ಉತ್ತಮಾಪೇಕ್ಷಯಾ' ಎಂಬ ತಾತ್ಪರ್ಯಕ್ಕೆ ವಿಜಯಧ್ವಜರ ಪ್ರಕಾರ ಅರ್ಥ ಹೀಗೆ- 'ಶ್ರೀಹರಿಯು ತಿಳಿಯಲಾರನು ಎಂಬುದು ದುಷ್ಟವಾದುದು' ಎಂದು ಹೇಳಿದುದು ಉತ್ತಮಾಧಿಕಾರಿಗಳ ದೃಷ್ಟಿಯಿಂದ. ಅಂದರೆ ಭಕ್ತ್ಯಾದಿ ಸಾಧನ ಸಂಪತ್ತಿಲ್ಲದವರಿಗೆ ಶ್ರೀಹರಿಯು ತೋರದಿದ್ದರೂ ಭಕ್ತ್ಯಾದಿಗಳುಳ್ಳ ಉತ್ತಮಾಧಿಕಾರಿಗಳಿಗೆ ಪ್ರತ್ಯಕ್ಷನಾಗೇ ಆಗುವನು ಎಂದರ್ಥ. ಯಾದವಾರ್ಯರ ಪ್ರಕಾರ ಅರ್ಥ ಹೀಗೆ- ನಾನು ಕಂಡವನಿಗಿಂತ ಉತ್ತಮನಾದ, ಸರ್ವಥಾ ಅವ್ಯಕ್ತನಾದ ಬೇರೆ ವ್ಯಕ್ತಿ ಇಲ್ಲದಿರುವುದರಿಂದ 'ನ ಜ್ಞಾಯತೇ ಇತ್ಯವದ್ಯಂ' ಎಂದು 'ಅಧಿಕಾರಿಯ ಪ್ರಯತ್ನದಿಂದ ಮಾತ್ರ ಜ್ಞೇಯನಾಗದಿದ್ದರೂ ತನ್ನ ಪ್ರಸಾದದಿಂದ ಜ್ಞೇಯನಾಗುತ್ತಾನೆ' ಎಂದು ಹೇಳಿದ್ದು ಪರಬ್ರಹ್ಮನ ವಿವಕ್ಷೆಯಿಂದಲೇ ಹೊರತು ನೂತನನಾದ ಸೋಪಾಧಿಕ ಬ್ರಹ್ಮನ ವಿವಕ್ಷೆಯಿಂದಲ್ಲ ಎಂದರ್ಥ. ಮೂಲದಲ್ಲಿ 'ಆದೌ ಗೃಹೀತಂ' ಎಂದದ್ದರಿಂದ ಅವನಿಗೆ ಸಾದಿತ್ವ ತೋರುವುದಲ್ಲ ಎಂದರೆ ಹೇಳುವರು-

**ಅನಾದಿಗೃಹೀತಮೇವ ಚ ಇದಾನೀಂ ಗೃಹ್ಯತೇ ।**

ಅನಾದಿ ಕಾಲದಿಂದ ತಿಳಿಯಲ್ಪಟ್ಟವನೇ ಸೃಷ್ಟಿಯ ಆದಿಕಾಲದಲ್ಲಿಯೂ ತಿಳಿಯಲ್ಪಡುವನು. ಈ ವಿಷಯದಲ್ಲಿ ಪ್ರಮಾಣ-

**'ಯತ್ತದ್ದಿವ್ಯಂ ಹರೇರೂಪಂ ಕ್ಷೀರಸಾಗರಮಧ್ಯಗಮ್ ।**
**ಜ್ಞಾನಾನಂದೈಕಮಾತ್ರಂ ಚ ನ ತತಃ ಪರಮಂ ಕ್ವಚಿತ್ ॥**
**ಅನಾದಿನಿತ್ಯಾದವ್ಯಕ್ತಾತ್ತಸ್ಮಾಜ್ಜಜ್ಞೇ ಚತುರ್ಮುಖಃ ॥ ಇತ್ಯಧ್ಯಾತ್ಮೇ ।**

ಕೇವಲ ಜ್ಞಾನಾನಂದಸ್ವರೂಪನಾದ ಕ್ಷೀರಸಾಗರ ಮಧ್ಯದಲ್ಲಿರುವ ಶ್ರೀಹರಿಯ ದಿವ್ಯವಾದ ರೂಪವೇನಿದೆಯೋ ಅದಕ್ಕಿಂತ ಉತ್ತಮವಾದುದು ಇನ್ನೊಂದು ಎಲ್ಲಿಯೂ ಇಲ್ಲ. ಅನಾದಿನಿತ್ಯನು ಅವ್ಯಕ್ತನೂ ಆದ ಪರಮಾತ್ಮನಿಂದ ಚತುರ್ಮುಖನು ಜನಿಸಿದನು. ಎಂದು ಅಧ್ಯಾತ್ಮದಲ್ಲಿದೆ.

**ಭೂತೇಂದ್ರಿಯಾಣಾಮಾತ್ಮಕಂ ಯಚ್ಚಾಪ್ನೋತೀತ್ಯಾದೇಃ ।**

'ಭೂತೇಂದ್ರಿಯಾತ್ಮಕಂ' ಎಂಬುದಕ್ಕೆ 'ಯಚ್ಚಾಪ್ನೋತಿ' ಮುಂತಾಗಿ ಹೇಳಿದ ಗೀತಾಭಾಷ್ಯಾನುಸಾರವಾಗಿ ಭೂತ ಮತ್ತು ಇಂದ್ರಿಯಗಳನ್ನು ವ್ಯಾಪಿಸಿಕೊಂಡಿರುವ ಎಂದರ್ಥ.

(ಯದ್ಯಪಿ 'ರೂಪಂ ಯದೇತತ್' ಮುಂತಾದುದು ಉದ್ದೇಶ್ಯವೇ ಆಗಿದೆ. ಆದರೂ ಶ್ರೀಮದಾಚಾರ್ಯರು 'ನಾತಃ ಪರಂ' ಎಂಬುದಕ್ಕೆ ಸ್ಪಷ್ಟಯುಕ್ತಿಗಳಾದ ಬ್ರಹ್ಮಜನಕತ್ವ, ಅಪರಿಚ್ಛಿನ್ನಆನಂದಮಾತ್ರಸ್ವರೂಪತ್ವ, ಬ್ರಹ್ಮಾಶ್ರಯತ್ವಗಳನ್ನು ಸ್ಪಷ್ಟ ಸೂಚಿಸುವ ಪದಗಳನ್ನು ಉದ್ದೇಶ್ಯ ವಾಚಕಗಳನ್ನಾಗಿ ಸ್ವೀಕರಿಸಿರುವರು ಎಂದು ತಿಳಿಯಬೇಕು.)

ಈ ವಿಧವಾದ ರೂಪವನ್ನು ತೋರಿಸಿದ ನಿನಗೆ ನಮಸ್ಕಾರದ ಹೊರತು ಬೇರೇನು ಪ್ರತಿಕ್ರಿಯೆ ಮಾಡಬಲ್ಲೆನು ಎಂದು ಹೇಳುವರು –

**ಯದ್ವಾ ಇದಂ ಭುವನಮಂಗಲ ಮಂಗಲಾಯ**
**ಧ್ಯಾನಾತ್ಮನೋ ದರ್ಶಿತಂ ತ ಉಪಾಸಕಾನಾಂ ।**
**ತಸ್ಮೈ ನಮೋ ಭಗವತೇಽನುವಿಧೇಮ ತುಭ್ಯಂ**
**ಯೋಽನಾದೃತೋ ನಿರಯಭಾಗ್ಭಿರಸತ್ಪ್ರಸಂಗೈಃ ॥೪॥**

ಹೇ ಭುವನಮಂಗಲ=ಜಗತ್ತಿಗೆ ಮಂಗಲಪ್ರದನೇ ಧ್ಯಾನಾತ್ಮನಃ= ಅವರವರ ಧ್ಯಾನಕ್ಕನುಗುಣವಾದ ರೂಪವುಳ್ಳ ತೇ=ನಿನ್ನ ಯದಿದಂ=ಯಾವ ಈ ರೂಪವು ಉಪಾಸಕಾನಾಂ=ಉಪಾಸನೆ ಮಾಡುವ ನಮ್ಮ ಮಂಗಲಾಯ=ಕಲ್ಯಾಣಕ್ಕಾಗಿ ದರ್ಶಿತಂ=ತೋರಿಸಲ್ಪಟ್ಟಿತೋ ತಸ್ಮೈ=ಆ ರೂಪಸ್ವರೂಪನಾದ ಭಗವತೇ= ಪರಮಾತ್ಮನಿಗೆ ನಮಃ=ನಮಸ್ಕಾರವನ್ನು ಅನುವಿಧೇಮ=ಯೋಗ್ಯತಾನುಸಾರ ಮಾಡುವೆವು. ಯಃ=ಯಾವನು ಅಸತ್ಪ್ರಸಂಗೈಃ=ಅಮಂಗಲವಿಷಯಗಳಲ್ಲಿ ಬಹಳ ಆಸಕ್ತಿಯುಳ್ಳ ನಿರಯಭಾಗ್ಭಿಃ=ತಮೋಯೋಗ್ಯರಿಂದ ಅನಾದೃತಃ=ಆದರಿಸಲ್ಪಟ್ಟಿಲ್ಲವೋ ಅಂಥವನಿಗೆ ನಮಸ್ಕಾರವು. ಕೆಲವರು ಭಗವಂತನನ್ನು ಆದರಿಸದಿರಲು ವೈರಾಗ್ಯ ಇಲ್ಲದಿರುವುದು ಮತ್ತು ಯೋಗ್ಯತೆ ಕಾರಣ ಎಂದು ಹೇಳಿದಂತಾಯಿತು. ಇದರಿಂದ ನನಗೆ ಮಾತ್ರ ಜ್ಞಾತನಾಗಿಲ್ಲ ಉಪಾಸಕರಿಗೆಲ್ಲ ಜ್ಞಾತನಾಗಿರುವಿ. ಆದ್ದರಿಂದ 'ನ ಜ್ಞಾಯತೇ ಗತಿರಿತ್ಯವದ್ಯಂ' ಎಂದು ಹೇಳಿದ್ದು ಸರಿಯೇ. ಶ್ರೀಹರಿಯ ಗತಿ ದುರ್ಜ್ಞೇಯ ಎಂಬ ಮಾತಿಗೆ ಯಾರಿಂದ ಅನಾದೃತನೋ ಅಂಥವರಿಗೆ ದುರ್ಜ್ಞೇಯನೆಂದರ್ಥ ॥೪॥

ಆದರಿಸುವರಿಗೆ ನರಕಾದಿಗಳಿಲ್ಲ ಎಂದು ಹೇಳುವರು–

ಬಲಿಯನ್ನು ಕೊಡುವಾಗ ಯಕ್ಷರು ಪ್ರತ್ಯಕ್ಷವಾಗುವಂತೆ ಶ್ರೀಹರಿಯು ಸಾಕ್ಷಾತ್ ಪ್ರತ್ಯಕ್ಷನಾಗುವುದಿಲ್ಲ ಆದ ಕಾರಣ ತಿಳಿಯಲಾರನು ಎಂದರೆ ಹೇಳುವರು– (ವಿಜಯಧ್ವಜೀಯ)

**ಯೇ ತು ತ್ವದೀಯಚರಣಾಂಬುಜಕೋಶಗಂಧಂ**
**ಜಿಘ್ರಂತಿ ಕರ್ಣವಿವರೈಃ ಶ್ರುತಿವಾತನೀತಂ ।**
**ಭಕ್ತ್ಯಾ ಗೃಹೀತಚರಣಃ ಪರಯಾ ಚ ತೇಷಾಂ**
**ನಾಪೈಷಿ ನಾಥ ಹೃದಯಾಂಬುರುಹಾತ್ ಸ್ವಪುಂಸಾಂ ॥೫॥**

ಯೇ ತು=ಯಾರು (ತು ಶಬ್ದದಿಂದ ಹಿಂದಿನವರಿಗಿಂತ ಒಂದು ವಿಶೇಷವಿದೆ ಎಂದು ಸೂಚಿಸುವರು. ವಿಷಯಾಸಕ್ತಿಯಿಲ್ಲದವರೆಂದರ್ಥ.) ಕರ್ಣವಿವರೈಃ= ಕಿವಿಯಮಾರ್ಗದಿಂದ ಶ್ರುತಿವಾತನೀತಂ=ಗುರುಮುಖದಿಂದ ವೇದೋಪನಿಷತ್ತು-ಗಳಲ್ಲಿ ಹೇಳಿದ ಪ್ರಕಾರ ಮಾಡಿದ ಶ್ರವಣವೆಂಬ ಗಾಳಿಯಿಂದ ಪ್ರಾಪಿತವಾದ ತ್ವದೀಯಚರಣಾಂಬುಜಕೋಶಗಂಧಂ ಜಿಘ್ರಂತಿ=ನಿನ್ನ ಪಾದಕಮಲಗಳ ಮೊಗ್ಗಿನ ಗಂಧವನ್ನು ಮೂಸುವರೋ ಅಂದರೆ ಹೃದಯದಲ್ಲಿ ವ್ಯಕ್ತವಾದ ರೂಪವನ್ನು ಪ್ರತ್ಯಕ್ಷ ಕಂಡು ಅನುಭವಿಸುವರೋ ಹೇ ನಾಥ=ಸ್ವಾಮಿಯೇ ಪರಯಾ ಭಕ್ತ್ಯಾ ಗೃಹೀತ-ಚರಣಃ=ಶ್ರೇಷ್ಠವಾದ (ಬಹಳವಾದ) ಭಕ್ತಿಯೆಂಬ ದೃಢವಾದ ಪಾಶದಿಂದ ಕಟ್ಟಲ್ಪಟ್ಟವನಾಗಿ ತೇಷಾಂ ಸ್ವಪುಂಸಾಂ=ಆ ಭಕ್ತರ ಹೃದಯಾಂಬುರುಹಾತ್= ಹೃದಯ ಕಮಲದಿಂದ ನ ಅಪೈಷಿ= ನೀನು ಕದಲುವುದಿಲ್ಲ.

ಇಲ್ಲಿ ಗಂಧಶಬ್ದದ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು–

**ಹೃದಿ ವ್ಯಕ್ತಂ ತು ಯದ್ರೂಪಂ ಹರೇರ್ಗಂಧಃ ಸ ಉಚ್ಯತೇ ।**
**ಗಂಧಗಂಧವತೋರ್ಯಸ್ಮಾತ್ ನ ಭೇದಃ ಕ್ವಚನೇಷ್ಯತೇ ॥ ಇತಿ ಬ್ರಹ್ಮತರ್ಕೇ ।**

ಹೃದಯದಲ್ಲಿ ಅವರವರಿಂದ ಉಪಾಸ್ಯವಾದ ಗುಣವಿಶಿಷ್ಟವಾಗಿ ಕಾಣುವ ಶ್ರೀಹರಿಯ ರೂಪವು ಗಂಧ ಎನಿಸಿಕೊಳ್ಳುವುದು. ಗಂಧಗಂಧವತೋಃ= ಅಂಶಾಂಶಿಗಳಿಗೆ ಯಾವ ಭಗವದ್ರೂಪದಲ್ಲಿಯೂ ಭೇದವು ಪ್ರಾಮಾಣಿಕರಿಂದ ಅಂಗಿಕರಿಸಲ್ಪಟ್ಟಿಲ್ಲ. ತಾತ್ಪರ್ಯಾನುಸಾರ ತ್ವದೀಯಚರಣವೆಂದರೆ ನಿನ್ನ ಸ್ವರೂಪ-ವೆಂಬ ಅಂಬುಜಕೋಶ ಕಮಲದ ಮೊಗ್ಗು ಅದರ ಗಂಧ ಅಂದರೆ ಹೃದಯದಲ್ಲಿ ವ್ಯಕ್ತವಾದ ರೂಪ ಅದನ್ನು ಅನುಭವಿಸುವ ಎಂದರ್ಥ. ಗಂಧಶಬ್ದದಿಂದ ಹೇಳಿದ ಹೃದಯದಲ್ಲಿ ವ್ಯಕ್ತವಾದ ಹರಿಯ ರೂಪ ಹರಿಯ ಏಕದೇಶವಾಯಿತು ಅವನ ಸ್ವರೂಪವಲ್ಲ ಎಂಬ ಶಂಕೆಯನ್ನು 'ಗಂಧಗಂಧವತಃ' ಎಂಬುದರಿಂದ ಪರಿಹರಿಸಿರುವರು. ॥೫॥

ಭಕ್ತಿಪಾಶದಿಂದ ಕಟ್ಟಲ್ಪಟ್ಟ ಭಗವಂತನು ಹೃದಯದಿಂದ ಕದಲದಿರುವುದರಿಂದ ಏನು ಫಲವೆಂದು ಹೇಳುವರು –

**ತಾವದ್ಭಯಂ ದ್ರವಿಣಗೇಹಸುಹೃನ್ನಿಮಿತ್ತಂ**
**ಶೋಕಃ ಸ್ಪೃಹಾ ಪರಿಭವೋ ವಿಪುಲಶ್ಚ ಲೋಭಃ ।**
**ತಾವನ್ಮಮೇತ್ಯಸದವಗ್ರಹ ಆರ್ತಿಮೂಲಂ**
**ಯಾವನ್ನ ತೇಽಂಘ್ರಿಮಭಯಂ ಪ್ರವೃಣೀತ ಲೋಕಃ ॥೬॥**

ಲೋಕಃ=ಜನರು ಯಾವತ್=ಎಲ್ಲಿಯವರೆಗೆ ತೇ=ನಿನ್ನ ಅಭಯಂ=ಭಯಪರಿಹಾರಕವಾದ ಅಂಘ್ರಿಂ=ಪಾದವನ್ನು ನ ಪ್ರವೃಣೀತ=ಭಕ್ತಿಪೂರ್ವಕವಾಗಿ ಸರ್ವದಾ ಆಶ್ರಯಿಸುವುದಿಲ್ಲವೋ ತಾವತ್=ಅಲ್ಲಿಯವರೆಗೆ ದ್ರವಿಣಗೇಹಸುಹೃನ್ನಿಮಿತ್ತಂ= ಹಣ, ಮನೆ, ಮಡದಿ, ಸ್ನೇಹಿತರುಗಳ ನಿಮಿತ್ತದಿಂದ ಭಯಂ=ಅವುಗಳು ಇರುವಾಗ ಭಯವು, (ಹೆದರಿಕೆ) ಶೋಕಃ=ಅವುಗಳು ಹೋದರೆ ದುಃಖವು ಸ್ಪೃಹಾ=ಮತ್ತೆ ಅವುಗಳನ್ನು ಪಡೆಯುವ ಆಶೆ, ನಂತರ ಪರಿಭವಃ=ಹಣ ಸಂಪಾದಿಸುವಾಗ ಅಪಮಾನ, ಮುಖಭಂಗ, ತಿರಸ್ಕಾರಗಳಾಗುವವು. ಹೇಗಾದರೂ ಮಾಡಿ ಮತ್ತೆ ಪಡೆದರೆ ವಿಪುಲಃ ಲೋಭಃ=ಬಹಳ ಜೀನತನ ಮತ್ತು ಮಮ ಇತಿ ಅಸದವಗ್ರಹಃ= ನನ್ನದು ಎಂಬ ದುರಾಗ್ರಹವು ಆರ್ತಿಮೂಲಂ=ದುಃಖಕ್ಕೆ ಕಾರಣವಾದುವುಗಳು ಆಗುವವು. ನಿನ್ನನ್ನಾಶ್ರಯಿಸಿದರೆ ಇದ್ಯಾವುದೂ ಇಲ್ಲ, ಇದೇ ಫಲವೆಂದು ಭಾವ. ॥೬॥

ಶೋಕ ಮುಂತಾದವು ನಾಶವಾಗಬೇಕಾದರೆ ಶ್ರೀಹರಿಯ ಚರಣವನ್ನೇ ಯಾವಾಗಲೂ ಮುಮುಕ್ಷುಗಳು ಆಶ್ರಯಿಸಬೇಕು ಎಂಬ ಅಭಿಪ್ರಾಯದಿಂದ ಆಶ್ರಯಿಸದಿದ್ದವರ ನಿಂದೆ ಮಾಡುವರು –

**ದೈವೇನ ತೇ ಹತಧಿಯೋ ಭವತಃ ಪ್ರಸಂಗಾತ್**
**ಸರ್ವಾಶುಭೋಪಶಮನಾದ್ ವಿಮುಖೇಂದ್ರಿಯಾ ಯೇ ।**
**ಕುರ್ವಂತಿ ಕಾಮಸುಖಲೇಶಲವಾಯ ದೀನಾ**
**ಲೋಭಾಭಿಭೂತಮನಸೋಽಕುಶಲಾನಿ ಶಶ್ವತ್ ॥೭॥**

ಸರ್ವಾಶುಭೋಪಶಮನಾತ್=ಎಲ್ಲ ಪಾಪ (ದುಃಖ) ಗಳಿಗೆ ನಾಶಕವಾದ ಭವತಃ ಪ್ರಸಂಗಾತ್=ನಿನ್ನವಿಷಯಕ ಶ್ರವಣಾದಿಗಳಿಂದ ವಿಮುಖೇಂದ್ರಿಯಾಃ ಯೇ= ವಿರುದ್ಧವಾಗಿರುವ ಇಂದ್ರಿಯಗಳುಳ್ಳವರಾರೋ (ಶ್ರವಣಾದಿಗಳನ್ನು ಮಾಡದಿದ್ದವರು ಎಂದರ್ಥ) ತೇ=ಅವರು ದೈವೇನ=ಶ್ರೀಹರಿಯಿಂದ ಹತಧಿಯಃ=ನಷ್ಟವಾದ ಬುದ್ಧಿಯುಳ್ಳವರಾಗಿ (ಬುದ್ಧಿಯಿಲ್ಲದಲೇ) ಲೋಭಾಭಿಭೂತಮನಸಃ=ಒಳ್ಳೆಯ ಕಾರ್ಯಕ್ಕೆ ಖರ್ಚುಮಾಡಲು ಒಪ್ಪದಿರುವುದೆಂಬ ಲೋಭದಿಂದ ಕೂಡಿದ

ಮನಸ್ಸುಳ್ಳವರಾಗಿ ಕಾಮಸುಖಲೇಶಲವಾಯ=ಅತ್ಯಲ್ಪ ವೈಷಯಿಕಸುಖಕ್ಕಾಗಿ ದೀನಾಃ=ದುಃಖಿತರು ಶಶ್ವತ್=ಕೊನೆಯವರೆಗೆ (ತಮಸ್ಸಿಗೆ ಹೋಗುವವರೆಗೆ) ಅಕುಶಲಾನಿ=ಪಾಪಕಾರ್ಯಗಳನ್ನು ಕುರ್ವಂತಿ=ಮಾಡುವರು. ॥೭॥

**ಕ್ಷುತ್ತೃಟ್ತ್ರಿಧಾತುಭಿರಿಮಾ ಮುಹುರರ್ದ್ಯಮಾನಾಃ**
**ಶೀತೋಷ್ಣವಾತವರ್ಷೈರಿತರೇತರಾಚ್ಚ ।**
**ಕಾಮಾಗ್ನಿನಾಽಚ್ಯುತ ರುಷಾ ಚ ಸುದುರ್ಭರೇಣ**
**ಸಂಪಶ್ಯತೋ ಮನ ಉರುಕ್ರಮ ಸೀದತೇ ಮೇ ॥೮॥**

ಅಚ್ಯುತ=ಚತುರ್ವಿಧನಾಶರಹಿತನೇ ! ಉರುಕ್ರಮ=ಪರಾಕ್ರಮಿಯೇ! ಕ್ಷುತ್=ಹಸಿವೆ ತೃಟ್=ನೀರಡಿಕೆ (ಬಾಯಾರಿಕೆ) ತ್ರಿಧಾತುಭಿಃ=ಕಫ, ವಾತ, ಪಿತ್ತಗಳಿಂದ, ಶೀತ=ಥಂಡಿ(ಛಳಿ) ಉಷ್ಣ=ಬಿಸಿಲಿನತಾಪ ವಾತ=ಗಾಳಿ ವರ್ಷೈಃ=ಮಳೆಗಳಿಂದ (ಆಧಿದೈವಿಕ) ಇತರೇತರಾತ್=ಪರಸ್ಪರವಾಗಿ ತಮ್ಮತಮ್ಮಲ್ಲಿ (ಆಧಿಭೌತಿಕ) ರುಷಾ=ಸಿಟ್ಟಿನಿಂದ, ಸುದುರ್ಭರೇಣ=ಅತ್ಯಂತ ಕಷ್ಟದಿಂದ ಸಹಿಸಲಸಾಧ್ಯವಾದ ಕಾಮಾಗ್ನಿನಾ=ಕಾಮದಿಂದಲೂ ಮುಹುಃ=ಪುನಃ ಪುನಃ ಅರ್ದ್ಯಮಾನಾಃ ಪೀಡಿತರಾಗುವ ಇಮಾಃ=ಈ ಪ್ರಜೆಗಳನ್ನು ಸಂಪಶ್ಯತಃ=ನೋಡುವ ಮೇ=ನನ್ನ ಮನಃ=ಮನಸ್ಸು ಸೀದತಿ= ನನ್ನಿಂದ ಸೃಷ್ಟಿಸಲ್ಪಟ್ಟ ಪ್ರಜೆಗಳು ಹೀಗಾದರಲ್ಲ ಎಂದು ಖೇದಪಡುವುದು. ॥೮॥

ಶ್ರವಣಾದಿರೂಪ ಭಗವತ್ಪ್ರಸಂಗಕ್ಕೆ ಸಂಸಾರನಿವರ್ತಕತ್ವವನ್ನು ವಿಸ್ತರಿಸುವುದಕ್ಕಾಗಿ ಅನ್ವಯ ವ್ಯತಿರೇಕಗಳನ್ನು ತೋರಿಸುವರು, ಎರಡು ಶ್ಲೋಕಗಳಿಂದ -

**ಯಾವತ್ ಪೃಥಕ್ತ್ವಮಿದಮಾತ್ಮನ ಇಂದ್ರಿಯಾರ್ಥಂ**
**ಮಾಯಾಬಲಂ ಭಗವತೋ ಜನ ಈಶ ಪಶ್ಯೇತ್ ।**
**ತಾವನ್ನ ಸಂಸೃತಿರಸೌ ಪ್ರತಿಸಂಕ್ರಮೇತ**
**ವ್ಯರ್ಥಾಪಿ ದುಃಖನಿವಹಂ ವಹತೀ ಕ್ರಿಯಾರ್ಥಾ ॥೯॥**

**ಅಹ್ನ್ಯಾಪೃತಾರ್ತಕರಣಾ ನಿಶಿ ನಿಃಶಯಾನಾ**
**ನಾನಾಮನೋರಥಧಿಯಃ ಕ್ಷಣಭಗ್ನನಿದ್ರಾಃ ।**
**ದೈವಾಹತಾರ್ಥರಚನಾ ಋಷಯೋಽಪಿ ದೇವ-**
**ಯುಷ್ಮತ್ಪ್ರಸಂಗವಿಮುಖಾ ಇಹ ಸಂಸರಂತಿ ॥೧೦॥**

ಹೇ ಈಶ=ಭೋ ಸ್ವಾಮಿಯೇ ! ಅಯಂ ಜನಃ=ಮುಕ್ತಿಯೋಗ್ಯಸಜ್ಜನರು ಯಾವತ್=ಯಾವಾಗ ಆತ್ಮನಃ=ತನ್ನ ಇಂದ್ರಿಯಾರ್ಥಂ=ಇಂದ್ರಿಯಗಳ ವಿಷಯ ಭೋಗಕ್ಕಾಗಿ ಮಾಡುವ ಪೃಥಕ್ತ್ವಂ=ಆ ಆ ಇಂದ್ರಿಯ ವ್ಯಾಪಾರಗಳ ಕರ್ತೃತ್ವಾನು-ಸಂಧಾನವನ್ನು (ಧ್ಯಾನಮಾಡುವೆನು, ನೋಡುವೆನು, ಕೇಳುವೆನು, ಮುಂತಾದ ಇಚ್ಛೆಯು) ಭಗವತಃ=ಪರಮಾತ್ಮನ ಮಾಯಾಬಲಂ=ಇಚ್ಛಾಬಲದಿಂದ ಬಂದುದು ಎಂದು ಪಶ್ಯೇತ್=ಶ್ರವಣಾದಿಗಳಿಂದ ತಿಳಿಯುವನೋ, ತಾವತ್ ಚ=ಆಗಲೇ, ವ್ಯರ್ಥಾ ಪಿ=ಆತ್ಯಂತಿಕ ಸುಖರಹಿತವಾಗಿದ್ದರೂ, ಕ್ರಿಯಾರ್ಥಾ=ಯಜ್ಞಾದಿಕ್ರಿಯೆಗಳ ಫಲವಾದ ತಾತ್ಕಾಲಿಕ ಸುಖವನ್ನು ಕೊಡುವ ಸ್ವರ್ಗಾದಿಫಲವುಳ್ಳ, ದುಃಖನಿವಹಂ ವಹತೀ=ದುಃಖ ಪರಂಪರೆಯನ್ನು ಹೊತ್ತ (ದುಃಖ ಪರಂಪರೆಯಿಂದ ಕೂಡಿದ) ಅಸೌ ಸೃಸಂತಿಃ=ಈ ಸಂಸಾರವು ಪ್ರತಿಸಂಕ್ರಮೇತ=ನಾಶವಾಗುವುದು.

ನಾನಾಮನೋರಥಧಿಯಃ=ಅನೇಕ ಅಭಿಲಾಷೆಗಳಿಂದ ಕೂಡಿದ ಮನಸ್ಸುಳ್ಳ-ವರು ಆದ್ದರಿಂದಲೇ ಕ್ಷಣಭಗ್ನನಿದ್ರಾಃ=ಕ್ಷಣಕ್ಷಣಕ್ಕೂ ನಾಶವಾಗುವ ನಿದ್ರೆಯುಳ್ಳ (ಇವರಿಗೆ ನಿದ್ರಿಸಲೂ ಅವಕಾಶವಿಲ್ಲ)ದೈವಾತ್=ಶ್ರೀಹರಿಯಿಂದ, ಹೃತಾರ್ಥರಚನಾಃ ಅಪಹರಿಸಲ್ಪಟ್ಟ ಹಣಕ್ಕಾಗಿ ಮಾಡುವ ಪ್ರಯತ್ನವುಳ್ಳ ಅಧ್ಯಾಹೃತಾರ್ಥಕರಣಾಃ ಶಬ್ದಾದಿವಿಷಯಗಳಿಂದ ಆಕರ್ಷಿಸಲ್ಪಟ್ಟ ಇಂದ್ರಿಯಗಳುಳ್ಳ ನಿಶಿ=ಅಜ್ಞಾನದಲ್ಲಿ ನಿಃಶಯಾನಾಃ=ಮಗ್ನರಾದವರು ಋಷಯಃ ಅಪಿ=ಋಷಿಕುಲದಲ್ಲಿ ಜನಿಸಿದ್ದರೂ ಯುಷ್ಮತ್ಪ್ರಸಂಗವಿಮುಖಾಃ=ನಿನ್ನ ಶ್ರವಣಾದಿರೂಪಸೇವೆಮಾಡದವರು ಇಹ ಸಂಸರಂತಿ=ಈ ಜೀವಲೋಕದಲ್ಲಿ ಸಂಸಾರವನ್ನು ಪಡೆಯುವರು.

ಇಲ್ಲಿ ಮಾಯಾಶಬ್ದಕ್ಕೆ ಅನಿರ್ವಾಚ್ಯ ಅವಿದ್ಯಾ ಎಂಬ ಅರ್ಥ ತೋರುವುದು ಅದನ್ನು ನಿರಾಕರಿಸಲು ಅರ್ಥ ಹೇಳುವರು –

**ಮಾಯಾಬಲಂ ಭಗವದಿಚ್ಛಾಬಲಂ ।**

ಮಾಯಾಬಲವೆಂದರೆ ಭಗವಂತನ ಇಚ್ಛಾಬಲವೆಂದರ್ಥ.

ಇಲ್ಲಿ ಮಾಯಾಶಬ್ದಕ್ಕೆ ಭಗವದಿಚ್ಛೆಯಂದೇ ಅರ್ಥ ಮಾಡಬೇಕು. ಏಕೆಂದರೆ 'ಪಶ್ಯೇತ್' ಎಂಬುದಾಗಿ ಭಗವಂತನ ಮಾಯೆಯನ್ನು ಮೋಕ್ಷಕ್ಕಾಗಿ ತಿಳಿಯ-ಬೇಕೆಂದು ಹೇಳಿದೆ.'ಮೋಕ್ಷಾರ್ಥಂ ಜ್ಞೇಯತ್ವ'ವು ಮಾಯಾಶಬ್ದಕ್ಕೆ ಈಶ್ವರನ ಇಚ್ಛಾ ಎಂದು ಅರ್ಥಮಾಡಲು ಲಿಂಗ(ಗಮಕ,ಹೇತು)ವಾಗಿದೆ ಎಂಬ ಅಭಿಪ್ರಾಯದಿಂದ ಮಾಯಾಶಬ್ದಾರ್ಥ ನಿರ್ಣಾಯಕವಾದ ಲಿಂಗಗಳನ್ನು ಪ್ರಮಾಣದಿಂದ ತಿಳಿಸುವರು.

**ಜ್ಞೇಯತ್ವಂ ದುರ್ಘಟಸ್ಯಾಪಿ ಘಟನಾಧಿಕಶಕ್ತಿತಾ ।**
**ಅಭೇದ ಈಶ್ವರೇಣಾಪಿ ಸೃಷ್ಟ್ಯಾದಾವಂತರಂಗತಾ ॥**

**ಉಚ್ಯೇತ ಯಸ್ಯಾಃ ಸಾ ಮಾಯಾ ಹರೇರಿಚ್ಛಾಽಥವಾ ಬಲಂ ।**
**ಭಗವತ್ತಂತ್ರತಾ ಯಸ್ಯಾಸ್ತದ್ಭಾರ್ಯಾತ್ವಂ ಸುರೂಪತಾ ॥**

**ಉಚ್ಯೇತ ಮಾಯಾ ಸಾ ತು ಶ್ರೀರ್ದೋಷಯುಕ್ತಾ ಜಡಾ ಸ್ಮೃತಾ ।**
**ಪರಿಣಾಮಿನೀ ಚ ಯಸ್ಯಾಸ್ತು ದೋಷಾಃ ಚೇತನತಾ ತಥಾ ॥**
**ಶೈವಲೀ ನಾಮ ಸಾ ಮಾಯಾ ಜಗದ್ಬಂಧಾತ್ಮಿಕಾ ಸದಾ ॥ ಇತಿ ಬ್ರಹ್ಮತರ್ಕೇ**

ಶಾಸ್ತ್ರಗಳಲ್ಲಿ ಯಾವ ಮಾಯೆಗೆ ಮೋಕ್ಷಾರ್ಥಂ ಜ್ಞೇಯತ್ವವನ್ನು, ದುರ್ಘಟವಾದುದನ್ನು ಸುಘಟ ಮಾಡುವ ಹೆಚ್ಚಿನ ಶಕ್ತಿಯನ್ನು, ಶ್ರೀಹರಿಯಿಂದ ಅಭೇದವನ್ನು, ಸೃಷ್ಟ್ಯಾದಿವ್ಯಾಪಾರದಲ್ಲಿ ಅಂತರಂಗತೆಯನ್ನೂ(ಕಾರಣತ್ವವನ್ನು) ಹೇಳುವರೋ ಆ ಮಾಯಾ ಎಂದರೆ ಶ್ರೀಹರಿಯ ಇಚ್ಛೆ ಅಥವಾ ಬಲ ಎಂದು ತಿಳಿಯಬೇಕು. ಇನ್ನು ಭಗವದಧೀನತೆ, ಅವನ ಪತ್ನೀ ಎಂದು ಮತ್ತು ಅತ್ಯಂತ ಸೌಂದರ್ಯವನ್ನೂ ಹೇಳಿದ್ದರೆ ಆ ಮಾಯಾ ಲಕ್ಷ್ಮೀದೇವಿಯೆ ಎಂದು ತಿಳಿಯಬೇಕು.ಇನ್ನು ದೋಷ, ಪರಿಣಾಮಗಳನ್ನು ಹೇಳಿದ್ದರೆ ಜಡವಾದ ಪ್ರಕೃತಿಯು ಮಾಯಾ ಎನಿಸಿಕೊಳ್ಳವುದು. ಯಾವುದಕ್ಕೆ ದೋಷ ಮತ್ತು ಚೇತನತ್ವವನ್ನು ಹೇಳುವರೋ ಅದನ್ನು ಯಾವಾಗಲೂ ಜಗತ್ತಿಗೆ ಬಂಧಕಾರಣವಾದ ಶೈವಲೀ ಎಂಬ ಮಾಯಾ ಎಂದು ತಿಳಿಯಬೇಕು. ನಿತ್ಯಸಂಸಾರಿಗಳ ವಿವಕ್ಷೆಯಿಂದ ಸದಾಬಂಧಕ ಎಂದಿದ್ದಾರೆ.

ಈ ರೀತಿ ಮಾಯಾಶಬ್ದಾರ್ಥ ಹೇಳಿ ಈಗ 'ಪೃಥಕ್ತ್ವಮಯಮಾತ್ಮನಃ ಇಂದ್ರಿಯಾರ್ಥಂ ಮಾಯಾಬಲಂ' ಎಂಬ ವಾಕ್ಯವನ್ನು ವ್ಯಾಖ್ಯಾನಿಸುವರು–

**ಧ್ಯಾಯೇ ಮಂಸ್ಯೇ ತಥಾ ಪಶ್ಯೇ ಶೃಣೋಮೀತಿ ವಿಭಕ್ತತಾ ।**
**ಜೀವಸ್ಯ ತು ಹರೇರೀಚ್ಛಾಬಲಾದಿಂದ್ರಿಯಭುಕ್ತಯೇ ॥ ಇತಿ ಷಾಡ್ಗುಣ್ಯೇ**

ಧ್ಯಾನ ಮಾಡುವೆನು, ಮನನ ಮಾಡುವೆನು, ದರ್ಶನ ಮಾಡುವೆನು, ಕೇಳುವೆನು ಮುಂತಾಗಿ ಇಚ್ಛೆಮಾಡುವುದು ಅಂದರೆ ಆ ಆ ಇಂದ್ರಿಯಗಳ ವ್ಯಾಪಾರಕರ್ತೃತ್ವದ ಅನುಸಂಧಾನವೇ ಪೃಥಕ್ತ್ವವು. ಅದು ಜೀವನಿಗೆ ಇಂದ್ರಿಯಗಳಿಂದ ವಿಷಯಭೋಗ ಮಾಡುವದಕ್ಕಾಗಿ ಶ್ರೀಹರಿಯ ಇಚ್ಛಾಬಲದಿಂದ ಬಂದಿದೆ. ಎಂದು ಷಾಡ್ಗುಣ್ಯದಲ್ಲಿ ಹೇಳಿದೆ. ಈ ಅರ್ಥ ಇಂದ್ರಿಯಾರ್ಥ ಎಂಬ ಪದದಿಂದ ಹೇಗೆ ಬಂದಿತು? ಎಂದರೆ ಮಧ್ಯಮಪದಲೋಪಿಸಮಾಸವೆಂದು ತಿಳಿಸಲು ಹೇಳುವರು–

**ಇಂದ್ರಿಯಾಣಾಂ ಭೋಗಾರ್ಥಂ ।**

ಇಂದ್ರಿಯಾಣಾಂ ಭೋಗಾರ್ಥಂ ಇಂದ್ರಿಯಾರ್ಥಂ ಎಂದಂತಾಯಿತು.

ವ್ಯರ್ಥಾಪಿ ಕ್ರಿಯಾರ್ಥಾ ಎಂಬುದು ವ್ಯಾಹತವಾಗಿದೆ ಕಾರಣ ವ್ಯಾಖ್ಯಾನಿಸಿರುವರು–

**ವ್ಯರ್ಥಾಪಿ ಯಜ್ಞಾದಿಕ್ರಿಯಾರ್ಥಾ ॥**

ವ್ಯರ್ಥಾ ಅಂದರೆ ಆತ್ಯಂತಿಕಸುಖರೂಪಪ್ರಯೋಜನವಿಲ್ಲದಿದ್ದರೂ ಯಜ್ಞಾದಿ-ಕ್ರಿಯೆಗಳಿಗೆ ಏನು ಫಲವೋ ಆ ಫಲ ಉಳ್ಳದ್ದು. (ಸ್ವರ್ಗಾದಿಫಲಕವೆಂದರ್ಥ)

ಅಧ್ಯಾಹೃತಾರ್ಥಕರಣಾಃ ಎಂಬುದಕ್ಕೆ ಅರ್ಥ ಹೇಳುವರು –

**ಅರ್ಥೈಃ ಅಧ್ಯಾಹೃತಾನಿ ಕರಣಾನಿ ಯೇಷಾಂ ।**

ಇದರಿಂದ ಅಧ್ಯಾಹೃತಾರ್ಥ ಎಂಬಲ್ಲಿ ಅರ್ಥಶಬ್ದಕ್ಕೆ ಪರನಿಪಾತವಾಗಿದೆ ಎಂದು ಸೂಚಿಸುತ್ತಾರೆ. ವಿಷಯಗಳಿಂದ ಆಕರ್ಷಿಸಲ್ಪಟ್ಟ ಇಂದ್ರಿಯವುಳ್ಳವರೆಂದರ್ಥ.

'ನಿಶಿ ನಿಃಶಯಾನಾ' ಎಂಬಲ್ಲಿ ನಿಶಿಶಬ್ದಕ್ಕೆ ರಾತ್ರಿ ಎಂದರ್ಥವಲ್ಲ. ನಿಶಃಯಾನಾಃ ಕ್ಷಣಭಗ್ನನಿದ್ರಾಃ ಈ ಪದಗಳಿಗೆ ವಿರೋಧ ಬರುವುದು. (ಗಾಡವಾಗಿ ನಿದ್ರಿಸುವ-ವನು, ನಿದ್ರೆ ಇಲ್ಲದವನು ಎಂದರ್ಥವಾಗುವುದು) ಕಾರಣ ಪ್ರಮಾಣದಿಂದ ಅರ್ಥ ತಿಳಿಸುವರು –

**ಅಜ್ಞಾನಂ ತು ನಿಶಾ ಪ್ರೋಕ್ತಾ ದಿವಾ ಜ್ಞಾನಮುದೀರ್ಯತೇ । ಇತಿ ಸ್ಕಾಂದೇ**

ಅಜ್ಞಾನವು ನಿಶಾ ಎನಿಸಿಕೊಳ್ಳುವುದು. ದಿವಾ ಹಗಲು ಎಂದು ಜ್ಞಾನವು ಹೇಳಲ್ಪಡುವುದು. ಅಜ್ಞಾನದಲ್ಲಿ ಅತ್ಯಂತ ಬದ್ಧರಾದವರು ಎಂದು ಮೂಲಾರ್ಥ ತಿಳಿಯಬೇಕು. ॥೯–೧೦॥

ಸಜ್ಜನರ ಸಂಗದಿಂದ ಆಗುವ ಶ್ರವಣಾದಿಗಳಿಂದ ಕೇವಲ ಅನಿಷ್ಟವಾದ ಸಂಸಾರ ನಿವೃತ್ತಿಯಾಗುವುದೆಂದಿಷ್ಟೇ ಅಲ್ಲ, ಇಷ್ಟಪ್ರಾಪ್ತಿಯೂ ಆಗುವುದು ಎಂದು ಹೇಳುವರು–

**ತ್ವದ್ಭಾವಯೋಗಪರಿಭಾವಿತಹೃತ್ಸರೋಜಾ**
**ಯೇ ಸಚ್ಛ್ರುತೇಕ್ಷಿತಪಥಾ ನನು ನಾಥ ಪುಂಸಾಮ್ ।**
**ಯದ್ ಯದ್ ಧಿಯಾ ತ ಉರುಗಾಯ ವಿಭಾವಯಂತಿ**
**ತತ್ ತದ್ ವಪುಃ ಪ್ರಣಯಸೇ ತದನುಗ್ರಹಾಯ ॥೧೧॥**

ಹೇ ಪುಂಸಾಂ ನಾಥ=ಪುರುಷೋತ್ತಮನೇ ! ಯೇ=ಯಾರು ಸತ್‌ಶ್ರುತೇಕ್ಷಿತ-ಪಥಾಃ=ಉತ್ತಮರಾದ ಆಚಾರ್ಯರ ಮುಖದಿಂದ ಶ್ರವಣಮಾಡಿ ವಿಷ್ಣುಭಕ್ತಿ ಮುಂತಾದ ಮೋಕ್ಷ ಮಾರ್ಗವನ್ನು ತಿಳಿದವರೋ, ಆದ್ದರಿಂದಲೇ ತ್ವದ್ಭಾವಯೋಗ-ಪರಿಭಾವಿತಹೃತ್ಸರೋಜಾಃ=ನಿನ್ನ ಭಕ್ತಿ ಎಂಬ ಉಪಾಯದಿಂದ ಮನಸ್ಸೆಂಬ ಕಮಲವನ್ನು ನಿರ್ಮಲಗೊಳಿಸಿದವರೋ (ವೇದಾಂತಾದಿ ಸಚ್ಛಾಸ್ತ್ರಶ್ರವಣದಿಂದ ಉಂಟಾದ ಭಕ್ತಿಯಿಂದ ಶುದ್ಧವಾದ ಸಕಲೇಂದ್ರಿಯಗಳುಳ್ಳವರು) ಅಂತಹ ಮುಕ್ತಿಯೋಗ್ಯರು ಹೇ ಉರುಗಾಯ=ಶ್ರೀಹರಿಯೇ ತೇ=ನಿನ್ನ ಯದ್ ಯದ್ ವಪುಃ=ಯಾವ ಯಾವ ಗುಣವಿಶಿಷ್ಟವಾದ ರೂಪವನ್ನು ಧಿಯಾ ವಿಭಾವಯಂತಿ= ಮನಸ್ಸಿನಲ್ಲಿ ಧ್ಯಾನಮಾಡುವರೋ ತದನುಗ್ರಹಾಯ=ಅವರಿಗೆ ಅನುಗ್ರಹ ಮಾಡಲು ತತ್ತದ್ವಪುಃ=ಅದಕ್ಕೆ ಸದೃಶವಾದ (ಅವರ ಸ್ವರೂಪದೇಹದ)ರೂಪವನ್ನು ತೇಷಾಂ=ಅವರಿಗೆ ಪ್ರಣಯಸೇ=ಪ್ರಕಟಿಸುವಿ. ನನು =ಪ್ರಮಾಣ ನಿಶ್ಚಿತವು.

ತತ್ತದ್ವಪುಃ ಪ್ರಣಯಸೇ ಎಂಬಲ್ಲಿ ಅಪೇಕ್ಷಿತವನ್ನು ಪೂರ್ಣ ಮಾಡುವರು-

**ತತ್ತದ್ವಪುಃ ತೇಷಾಂ ಪ್ರಣಯಸೇ ।**

ಅವರವರಿಗೆ ಧ್ಯಾನಮಾಡಿದ ರೂಪಸದೃಶವಾದ ರೂಪವನ್ನು ಪ್ರಕಟಿಸುವಿ.

ಪ್ರಮಾಣ ಹೇಳುವರು -

**ಯಾದೃಶೋ ಭಾವಿತಸ್ತ್ವೀಶಸ್ತಾದೃಶೋ ಜೀವ ಆಭವೇತ್। ಇತಿತಂತ್ರಸಾರೇ**
**ತಂ ಯಥಾ ಯಥೋಪಾಸತೇ ತದೇವಭವತಿ । ಇತಿ ಚ ।**

ಪರಮಾತ್ಮನನ್ನು ಯಾವ ರೀತಿ ಜೀವನು ಉಪಾಸಿಸುವನೋ ಮುಕ್ತಿಯಲ್ಲಿ ಅದೇ ರೀತಿಯಾಗುವನು. ನಿರವಕಾಶ ತಂತ್ರಸಾರಪ್ರಕಾರ ಶ್ರುತಿಯ ತದೇವ ಎಂಬುದಕ್ಕೂ ಅದರಂತಹ ಎಂದೇ ಅರ್ಥ ಮಾಡಬೇಕು. ॥೧೧॥

ಭಗವಂತನ ಶ್ರವಣಾದಿಗಳಿಂದ ಮೋಕ್ಷ (ಸಾರೂಪ್ಯ) ವಾಗುವುದೆಂದು ಹೇಳಿ,ಆ ಶ್ರವಣಾದಿಗಳಿಗೆ ನಿಷ್ಕಾಮತೆ ಮತ್ತು ಭಗವದರ್ಪಣಗಳೆಂಬ ಸಹಕಾರಿಗಳು ಬೇಕು ಎಂದು ಎರಡು ಶ್ಲೋಕದಿಂದ ಹೇಳುವರು -

**ನಾತಿಪ್ರಸೀದಸಿ ತಥೋಪಚಿತೋಪಚಾರೈ-**
**ರಾರಾಧಿತಃ ಸುರಗಣೈರ್ಹೃದಿ ಬದ್ಧಕಾಮೈಃ ।**
**ಯಃ ಸರ್ವಭೂತದಯಯಾಽಸದಲಭ್ಯಯೈಕೋ**
**ನಾನಾಜನೇಷ್ವವಹಿತಃ ಸುಹೃದಂತರಾತ್ಮಾ ॥೧೨॥**

**ಇಂದ್ರಿಯಾಣಾಂ ಭೋಗಾರ್ಥಂ ।**

ಇಂದ್ರಿಯಾಣಾಂ ಭೋಗಾರ್ಥಂ ಇಂದ್ರಿಯಾರ್ಥಂ ಎಂದಂತಾಯಿತು.

ವ್ಯರ್ಥಾಪಿ ಕ್ರಿಯಾರ್ಥಾ ಎಂಬುದು ವ್ಯಾಹತವಾಗಿದೆ ಕಾರಣ ವ್ಯಾಖ್ಯಾನಿಸಿರುವರು–

**ವ್ಯರ್ಥಾಪಿ ಯಜ್ಞಾದಿಕ್ರಿಯಾರ್ಥಾ ॥**

ವ್ಯರ್ಥಾ ಅಂದರೆ ಆತ್ಯಂತಿಕಸುಖರೂಪಪ್ರಯೋಜನವಿಲ್ಲದಿದ್ದರೂ ಯಜ್ಞಾದಿ-ಕ್ರಿಯೆಗಳಿಗೆ ಏನು ಫಲವೋ ಆ ಫಲ ಉಳ್ಳದ್ದು. (ಸ್ವರ್ಗಾದಿಫಲಕವೆಂದರ್ಥ)

ಅಧ್ಯಾಹೃತಾರ್ಥಕರಣಾಃ ಎಂಬುದಕ್ಕೆ ಅರ್ಥ ಹೇಳುವರು –

**ಅರ್ಥೈಃ ಅಧ್ಯಾಹೃತಾನಿ ಕರಣಾನಿ ಯೇಷಾಂ ।**

ಇದರಿಂದ ಅಧ್ಯಾಹೃತಾರ್ಥ ಎಂಬಲ್ಲಿ ಅರ್ಥಶಬ್ದಕ್ಕೆ ಪರನಿಪಾತವಾಗಿದೆ ಎಂದು ಸೂಚಿಸುತ್ತಾರೆ. ವಿಷಯಗಳಿಂದ ಆಕರ್ಷಿಸಲ್ಪಟ್ಟ ಇಂದ್ರಿಯವುಳ್ಳವರೆಂದರ್ಥ.

'ನಿಶಿ ನಿಃಶಯಾನಾ' ಎಂಬಲ್ಲಿ ನಿಶಿಶಬ್ದಕ್ಕೆ ರಾತ್ರಿ ಎಂದರ್ಥವಲ್ಲ. ನಿಶಃಯಾನಾಃ ಕ್ಷಣಭಗ್ನನಿದ್ರಾಃ ಈ ಪದಗಳಿಗೆ ವಿರೋಧ ಬರುವುದು. (ಗಾಡವಾಗಿ ನಿದ್ರಿಸುವ-ವನು, ನಿದ್ರೆ ಇಲ್ಲದವನು ಎಂದರ್ಥವಾಗುವುದು) ಕಾರಣ ಪ್ರಮಾಣದಿಂದ ಅರ್ಥ ತಿಳಿಸುವರು –

**ಅಜ್ಞಾನಂ ತು ನಿಶಾ ಪ್ರೋಕ್ತಾ ದಿವಾ ಜ್ಞಾನಮುದೀರ್ಯತೇ । ಇತಿ ಸ್ಕಾಂದೇ**

ಅಜ್ಞಾನವು ನಿಶಾ ಎನಿಸಿಕೊಳ್ಳುವುದು. ದಿವಾ ಹಗಲು ಎಂದು ಜ್ಞಾನವು ಹೇಳಲ್ಪಡುವುದು. ಅಜ್ಞಾನದಲ್ಲಿ ಅತ್ಯಂತ ಬದ್ಧರಾದವರು ಎಂದು ಮೂಲಾರ್ಥ ತಿಳಿಯಬೇಕು. ॥೯–೧೦॥

ಸಜ್ಜನರ ಸಂಗದಿಂದ ಆಗುವ ಶ್ರವಣಾದಿಗಳಿಂದ ಕೇವಲ ಅನಿಷ್ಟವಾದ ಸಂಸಾರ ನಿವೃತ್ತಿಯಾಗುವುದೆಂದಿಷ್ಟೇ ಅಲ್ಲ, ಇಷ್ಟಪ್ರಾಪ್ತಿಯೂ ಆಗುವುದು ಎಂದು ಹೇಳುವರು–

**ತ್ವದ್ಭಾವಯೋಗಪರಿಭಾವಿತಹೃತ್ಸರೋಜಾ**
**ಯೇ ಸಚ್ಛ್ರುತೇಕ್ಷಿತಪಥಾ ನನು ನಾಥ ಪುಂಸಾಮ್ ।**
**ಯದ್ ಯದ್ ಧಿಯಾ ತ ಉರುಗಾಯ ವಿಭಾವಯಂತಿ**
**ತತ್ ತದ್ ವಪುಃ ಪ್ರಣಯಸೇ ತದನುಗ್ರಹಾಯ ॥೧೧॥**

ಹೇ ಪುಂಸಾಂ ನಾಥ=ಪುರುಷೋತ್ತಮನೇ ! ಯೇ=ಯಾರು ಸತ್‌ಶ್ರುತೇಕ್ಷಿತ-ಪಥಾಃ=ಉತ್ತಮರಾದ ಆಚಾರ್ಯರ ಮುಖದಿಂದ ಶ್ರವಣಮಾಡಿ ವಿಷ್ಣುಭಕ್ತಿ ಮುಂತಾದ ಮೋಕ್ಷ ಮಾರ್ಗವನ್ನು ತಿಳಿದವರೋ, ಆದ್ದರಿಂದಲೇ ತ್ವದ್ಭಾವಯೋಗ-ಪರಿಭಾವಿತಹೃತ್ಸರೋಜಾಃ=ನಿನ್ನ ಭಕ್ತಿ ಎಂಬ ಉಪಾಯದಿಂದ ಮನಸ್ಸೆಂಬ ಕಮಲವನ್ನು ನಿರ್ಮಲಗೊಳಿಸಿದವರೋ (ವೇದಾಂತಾದಿ ಸಚ್ಛಾಸ್ತ್ರಶ್ರವಣದಿಂದ ಉಂಟಾದ ಭಕ್ತಿಯಿಂದ ಶುದ್ಧವಾದ ಸಕಲೇಂದ್ರಿಯಗಳುಳ್ಳವರು) ಅಂತಹ ಮುಕ್ತಿಯೋಗ್ಯರು ಹೇ ಉರುಗಾಯ=ಶ್ರೀಹರಿಯೇ ತೇ=ನಿನ್ನ ಯದ್ ಯದ್ ವಪುಃ=ಯಾವ ಯಾವ ಗುಣವಿಶಿಷ್ಟವಾದ ರೂಪವನ್ನು ಧಿಯಾ ವಿಭಾವಯಂತಿ=ಮನಸ್ಸಿನಲ್ಲಿ ಧ್ಯಾನಮಾಡುವರೋ ತದನುಗ್ರಹಾಯ=ಅವರಿಗೆ ಅನುಗ್ರಹ ಮಾಡಲು ತತ್ತದ್ವಪುಃ=ಅದಕ್ಕೆ ಸದೃಶವಾದ (ಅವರ ಸ್ವರೂಪದೇಹದ)ರೂಪವನ್ನು ತೇಷಾಂ=ಅವರಿಗೆ ಪ್ರಣಯಸೇ=ಪ್ರಕಟಿಸುವಿ. ನನು =ಪ್ರಮಾಣ ನಿಶ್ಚಿತವು.

ತತ್ತದ್ವಪುಃ ಪ್ರಣಯಸೇ ಎಂಬಲ್ಲಿ ಅಪೇಕ್ಷಿತವನ್ನು ಪೂರ್ಣ ಮಾಡುವರು-

**ತತ್ತದ್ವಪುಃ ತೇಷಾಂ ಪ್ರಣಯಸೇ ।**

ಅವರವರಿಗೆ ಧ್ಯಾನಮಾಡಿದ ರೂಪಸದೃಶವಾದ ರೂಪವನ್ನು ಪ್ರಕಟಿಸುವಿ.

ಪ್ರಮಾಣ ಹೇಳುವರು -

**ಯಾದೃಶೋ ಭಾವಿತಸ್ತ್ವೀಶಸ್ತಾದೃಶೋ ಜೀವ ಆಭವೇತ್। ಇತಿತಂತ್ರಸಾರೇ**
**ತಂ ಯಥಾ ಯಥೋಪಾಸತೇ ತದೇವಭವತಿ । ಇತಿ ಚ ।**

ಪರಮಾತ್ಮನನ್ನು ಯಾವ ರೀತಿ ಜೀವನು ಉಪಾಸಿಸುವನೋ ಮುಕ್ತಿಯಲ್ಲಿ ಅದೇ ರೀತಿಯಾಗುವನು. ನಿರವಕಾಶ ತಂತ್ರಸಾರಪ್ರಕಾರ ಶ್ರುತಿಯ ತದೇವ ಎಂಬುದಕ್ಕೂ ಅದರಂತಹ ಎಂದೇ ಅರ್ಥ ಮಾಡಬೇಕು. ॥೧೧॥

ಭಗವಂತನ ಶ್ರವಣಾದಿಗಳಿಂದ ಮೋಕ್ಷ (ಸಾರೂಪ್ಯ) ವಾಗುವುದೆಂದು ಹೇಳಿ,ಆ ಶ್ರವಣಾದಿಗಳಿಗೆ ನಿಷ್ಕಾಮತೆ ಮತ್ತು ಭಗವದರ್ಪಣಗಳೆಂಬ ಸಹಕಾರಿಗಳು ಬೇಕು ಎಂದು ಎರಡು ಶ್ಲೋಕದಿಂದ ಹೇಳುವರು -

**ನಾತಿಪ್ರಸೀದಸಿ ತಥೋಪಚಿತೋಪಚಾರೈ-**
**ರಾರಾಧಿತಃ ಸುರಗಣೈರ್ಹೃದಿ ಬದ್ಧಕಾಮೈಃ ।**
**ಯಃ ಸರ್ವಭೂತದಯಯಾಽಸದಲಭ್ಯಯೈಕೋ**
**ನಾನಾಜನೇಷ್ವವಹಿತಃ ಸುಹೃದಂತರಾತ್ಮಾ ॥೧೨॥**

**ಪುಂಸಾಮತೋ ವಿವಿಧಕರ್ಮಭಿರಧ್ವರಾದ್ಯೈ-**
**ರ್ದಾನೇನ ಚೋಗ್ರತಪಸಾ ವ್ರತಚರ್ಯಯಾ ಚ ।**
**ನಾರಾಧನಂ ಭಗವತಸ್ತವ ಸತ್ಕ್ರಿಯಾರ್ಥೋ**
**ಧರ್ಮೋಽರ್ಪಿತಃ ಕರ್ಹಿಚಿತ್ ಕ್ರಿಯತೇ ನ ಯತ್ರ ॥೧೩॥**

ಅಂತರಾತ್ಮಾ ಸನ್=ಅಂತರ್ನಿಯಾಮಕನಾಗಿ ಸುಹೃತ್=ಅನಿಮಿತ್ತೋಪಕಾರಕ-ನಾದ ನಾನಾಜನೇಷು ಅವಹಿತಃ=ನಾನಾ ವಿಧಪ್ರಾಣಿಗಳಲ್ಲಿರುವ ನೀನು, (ಎಲ್ಲ ಭೂತಗಳಲ್ಲಿ ಶ್ರೀಹರಿಯಿರುವುದರಿಂದ ಭೂತದಯೆ ಮಾಡಿದರೆ ಅದು ಶ್ರೀಹರಿಯ ಆರಾಧನೆಯಾಗುವುದು ಎಂದು ತಿಳಿಸಿದಂತಾಯಿತು) ಅಸದಲಭ್ಯಯಾ=ದುಷ್ಟ-ರಾದ ದೈತ್ಯರಿಂದ ಪಡೆಯಲಾಗದ ಸರ್ವಭೂತದಯಯಾ=ಎಲ್ಲ ಪ್ರಾಣಿಗಳಲ್ಲಿ ದಯೆ ಮಾಡುವುದು ಮತ್ತು ಭಕ್ತಿ, ಜ್ಞಾನ ಮುಂತಾದುವುಗಳಿಂದ ಸುರಗಣೈಃ= ದೇವತೆಗಳ ಸಮೂಹಗಳಿಂದ ಹೃದಿ=ಹೃದಯದಲ್ಲಿ ಆರಾಧಿತಃ=ಪೂಜಿಸಲ್ಪಟ್ಟವನು. ಆದ್ದರಿಂದ; ಹೃದಿ ಬದ್ಧಕಾಮೈಃ=ಮನಸ್ಸಿನಲ್ಲಿ ಅನೇಕ ಅಭಿಲಾಷೆಗಳನ್ನಿಟ್ಟುಕೊಂಡ ಜನರಿಂದ ತಥಾ=ಆ ಆ ಕಾಮನೆಗಳಿಗನುಗುಣವಾಗಿ ಉಪಚಿತೈಃ=ಸಂಪಾದಿಸಿದ ಉಪಚಾರೈಃ=(ಪುಷ್ಪಾದಿಗಳಿಂದ) ಉಪಚಾರಗಳಿಂದ ಆರಾಧಿತಃ=ಆರಾಧಿಸಲ್ಪಟ್ಟು, ನ ಅತಿಪ್ರಸೀದಸಿ=ಸಂಪೂರ್ಣ ಪ್ರಸನ್ನನಾಗಲಾರೆ. ಸಕಾಮವಾಗಿ ಆರಾಧಿಸಿದವರಿಗೆ ಆ ಆ ಕಾಮನೆ ದೊರೆತರೂ ಮೋಕ್ಷಸಾಧನ ಅತ್ಯರ್ಥಪ್ರಸಾದವಾಗಲಾರದು. ಕಾರಣ ಕಾಮನೆಯನ್ನು ಬಿಟ್ಟು ಆರಾಧಿಸಬೇಕು ಎಂದು ಭಾವ.

ಅತಃ=ಆದ್ದರಿಂದ ಪುಸಾಂ=ಅಧಿಕಾರಿಗಳಿಗೆ ವಿವಿಧಕರ್ಮಭಿಃ ಅಧ್ವರಾದ್ಯೈಃ= ಯಜ್ಞ ಮೊದಲಾದ ನಾನಾರೀತಿಯ ಕರ್ಮಗಳಿಂದ ದಾನೇನ=ದಾನದಿಂದ ತಪಸಾ=ತಪಸ್ಸಿನಿಂದ, ವ್ರತಚರ್ಯಯಾ=ವ್ರತಾನುಷ್ಠಾನದಿಂದಲಾಗಲಿ ಯತ್ರ= ಯಾವಾಗ ಸತ್‌ಕ್ರಿಯಾರ್ಥಃ ಧರ್ಮಃ=ಸತ್ಯವಾದ ಯಜ್ಞಾದಿ ಕ್ರಿಯೆಗಳ ಪ್ರಯೋಜನವಾದ (ಪುಣ್ಯವು) ಧರ್ಮವು ಕರ್ಹಿಚಿತ್=ಯಾವಾಗಲಾದರೂ (ಆದಿ, ಮಧ್ಯ, ಅಂತಗಳಲ್ಲಿಯೂ) ತವ=ನಿನಗೆ ನ ಅರ್ಪಿತಃ=ಸಮರ್ಪಿಸಲ್ಪಡುವು-ದಿಲ್ಲವೋ ಆಗ ತವ ಆರಾಧನಂ ನ=ನಿನ್ನ ಆರಾಧನೆಯಾಗುವುದಿಲ್ಲ, ಕಾರಣ ಅರ್ಪಣ ಅವಶ್ಯಕವು.

೧೨ ನೇ ಶ್ಲೋಕದಲ್ಲಿ 'ಸುರಗಣೈಃ ಹೃದಿ ಬದ್ಧಕಾಮೈಃ' ಎಂದು ಇದ್ದಂತೆಯೇ ಅನ್ವಯ ಮಾಡಿದರೆ ಬಾಧಿತವಾಗುವುದು. (ದೇವತೆಗಳು ಸಕಾಮರಲ್ಲ) ಕಾರಣ ಸರಿಯಾದ ಅನ್ವಯ ತಿಳಿಸುವರು –

**ಸರ್ವಭೂತದಯಯಾ ಸುರಗಣೈಃ ಹೃದ್ಯಾರಾಧಿತಃ ತ್ವಂ ಬದ್ಧಕಾಮ್ಯೈಃ ಜನೈರುಪಚಿತೋಪಚಾರೈಃ ನಾತಿಪ್ರಸೀದಸಿ ॥**

ಪ್ರಮಾಣ ಹೇಳುವರು-

**ಆರಾಧಿತೋ ಯೋ ಬ್ರಹ್ಮಾದ್ಯೈರ್ಭಕ್ತಿಜ್ಞಾನದಯಾದಿಭಿಃ ।**
**ಕಿಂ ತಸ್ಯ ಕಾಮುಕಜನೈಃ ಕೃತಯಾ ಪರಿಚರ್ಯಯಾ ॥**

**ಇತಿ ಸತ್ಯಸಂಹಿತಾಯಾಂ ।**

ಸರ್ವಭೂತದಯೆ,ಭಕ್ತಿ,ಜ್ಞಾನ ಇವುಗಳಿಂದ ದೇವತೆಗಳಿಂದ ಆರಾಧಿತನಾದ ನೀನು, ಕಾಮಿಗಳಾದ ಜನರ ಪುಷ್ಪಾದಿಗಳ ಪೂಜೆಯಿಂದ ಅವರ ಅಭೀಷ್ಟ ಕೊಡಲು ಅಲ್ಪಸಂತುಷ್ಟನಾದರೂ ಮುಕ್ತಿ ಜನಕ ಪ್ರಸಾದವುಳ್ಳವನಾಗಲಾರಿ.

ಯಾವನು ಬ್ರಹ್ಮಾದಿ ದೇವತೆಗಳಿಂದ ಭಕ್ತಿ, ಜ್ಞಾನ, ದಯಾ ಮುಂತಾದ ಭಾವಪುಷ್ಪಗಳಿಂದ ಆರಾಧಿತನೋ ಅವನಿಗೆ ಕಾಮುಕ ಜನರು (ಸಕಾಮಕರ್ಮ ಮಾಡುವರು) ಮಾಡುವ ಸೇವೆಯಿಂದ ಪ್ರೀತಿ ಉಂಟಾದೀತೇ? ಆಗಲಾರದು ಎಂದು ಭಾವ. ॥೧೨-೧೩॥

ಭಗವಂತನ ಸೇವೆ ಮಾಡುವಾಗ ಇರಬೇಕಾದ ಮತ್ತೊಂದು ಗುಣವನ್ನು ಹೇಳುವರು -

**ಶಶ್ವತ್ ಸ್ವರೂಪಮಹಸೈವ ನಿಪೀತಭೇದ-**
**ಮೋಹಾಯ ಬೋಧಧಿಷಣಾಯ ನಮಃ ಪರಸ್ಮೈ ।**
**ವಿಶ್ವೋದಯಸ್ಥಿತಿಲಯೇಷು ನಿಮಿತ್ತಲೀಲಾ-**
**ರಾಮಾಯ ತೇ ನಮ ಇದಂ ಚಕೃಮೇಶ್ವರಾಯ ॥೧೪॥**

ಶಶ್ವತ್=ಯಾವಾಗಲೂ (ಸರ್ವಕಾಲದಲ್ಲಿಯೂ) ಸ್ವರೂಪಮಹಸಾ ಏವ=ತನ್ನ ಸ್ವರೂಪ ಭೂತಜ್ಞಾನದಿಂದಲೇ (ಹೊರತು ಪರೋಪದೇಶದಿಂದ ಬಂದ ಜ್ಞಾನ-ದಿಂದಲ್ಲ) ನಿಪೀತಭೇದಮೋಹಾಯ=ನಿಪೀತ=ಚೆನ್ನಾಗಿ ನಿರಾಕರಿಸಲ್ಪಟ್ಟ ಭೇದ-ಮೋಹ=ಭೇದಮೋಹವುಳ್ಳ, ಭೇದಮೋಹವೆಂದರೆ ಶ್ರೀಹರಿಯು ಅಪೂರ್ಣನು, ವಿಷ್ಣುಭಿನ್ನರು ಸರ್ವೋತ್ತಮರು, ಶ್ರೀಹರಿಯ ಅವತಾರಗಳಲ್ಲಿ ಭೇದವಿದೆ, ಜೀವನೇ ಈಶನು, ಈಶನೇ ಜೀವನು, ಮತ್ತು ಜೀವೇಶ್ವರರಿಗೆ ಜಡಗಳಿಂದ ಅಭೇದವಿದೆ ಎಂಬ ಜ್ಞಾನಗಳು. ಈ ವಿಧ ಜ್ಞಾನ ಶ್ರೀಹರಿಗೆ ಯಾವ ಕಾಲದಲ್ಲಿಯೂ ಇಲ್ಲವೆಂದರ್ಥ. ಬೋಧಧಿಷಣಾಯ=ಇತರರಿಗೆ ಮೇಲೆ ಹೇಳಿದ ಭೇದಮೋಹ-

ನಿವರ್ತಕವಾದಜ್ಞಾನಕ್ಕೆ ಜನಕವಾದ ಬುದ್ಧಿಯುಳ್ಳ ಪರಸ್ಮೈ=ಸರ್ವೋತ್ತಮನಾದ ವಿಶ್ವೋದಯಸ್ಥಿತಿಲಯೇಷು=ಪ್ರಪಂಚದ ಸೃಷ್ಟಿ ಸ್ಥಿತಿ, ಸಂಹಾರಗಳಿಗೆ ನಿಮಿತ್ತ-ಲೀಲಾರಾಮಾಯ=ಕಾರಣವಾದ ಕ್ರೀಡೆಗೆ ಆಶ್ರಯನಾದ (ಲೀಲೆಯೇ ಆನಂದ-ವಾಗಿವುಳ್ಳ)ಈಶ್ವರಾಯ=ಶ್ರೀಹರಿಗೆ ಇದಂ (ಉದ್ದಿಶ್ಯ)=ದರ್ಶನ ಕೊಟ್ಟಿದ್ದಕ್ಕಾಗಿ ನಮಃ ಚಕ್ರಮೆ=ನಮಸ್ಕಾರ ಮಾಡುವೆನು.

ಈ ಶ್ಲೋಕದಲ್ಲಿ 'ನಿಪೀತಭೇದಮೋಹಾಯ' ಎನ್ನುವುದಕ್ಕೆ ಭೇದ ಭ್ರಮೆಯನ್ನು ಕಳೆದುಕೊಂಡ ಎಂದರ್ಥ ತೋರುವುದು. ಅವನಿಗೆ ಭ್ರಮ ಪ್ರಸಕ್ತಿಯೇ ಇಲ್ಲದ್ದರಿಂದ ಈ ಅರ್ಥ ಸರಿಯಲ್ಲ ಕಾರಣ ಭೇದಮೋಹ ಶಬ್ದಾರ್ಥವನ್ನು ಹೇಳುವ ಪ್ರಮಾಣ ಉದಾಹರಿಸುವರು –

**ಈಶಸ್ಯಾಪೂರ್ಣತಾಜ್ಞಾನಂ ವಿಷ್ಣೋರನ್ಯಸ್ಯ ಚೇಶತಾ ।**
**ಭೇದಸ್ತಸ್ಯಾವತಾರೇಷು ಜೀವಸ್ಯೇಶತ್ವಮೇವ ಚ ॥**

**ತಥಾ ಜೀವತ್ವಮೀಶಸ್ಯ ಜಡಾಭೇದಸ್ತಯೋರಪಿ ।**
**ಭೇದಮೋಹ ಇತಿ ಪ್ರೋಕ್ತಃ ಸ ಸದಾ ನ ಹರೌ ಕ್ವಚಿತ್ ।**
**ಅನ್ಯೇಷಾಂ ತತ್ಪ್ರಸಾದೇನ ಶನೈರ್ಯಾತಿ ಸತಾಮಪಿ ॥ ಇತಿ ಸ್ಕಾಂದೇ ।**

ಶ್ರೀಹರಿಯು ಅಪೂರ್ಣನೆಂದು ತಿಳಿಯುವುದು, ವಿಷ್ಣುಭಿನ್ನರಾದವರಿಗೆ ಈಶತ್ವವನ್ನು ತಿಳಿಯುವುದು, ಭಗವಂತನ ಅವತಾರಗಳಲ್ಲಿ ಭೇದವನ್ನು ತಿಳಿಯುವುದು, ಜೀವೇಶರಿಗೆ ಜಡದಿಂದ ಅಭೇದ ತಿಳಿಯುವುದು ಭೇದಮೋಹ-ವೆನಿಸುವುದು. ಈ ಭೇದಮೋಹವು ಯಾವ ಕಾಲದಲ್ಲಿಯೂ ಯಾವ ವಿಷಯ-ದಲ್ಲಿಯೂ ಶ್ರೀಹರಿಗೆ ಇರುವುದಿಲ್ಲ. ಮಿಕ್ಕ ಸಜ್ಜನರಿಗೂ ಶ್ರೀಹರಿಯ ಪ್ರಸಾದದಿಂದ ನಿಧಾನವಾಗಿ ಈ ಭೇದಮೋಹ ಪೋಗುವುದು. ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ. ಅಧಿಷ್ಠಾನದ ನಿಜವಾದ ಸ್ವರೂಪಕ್ಕೆ ವಿಪರೀತವಾದ ಆಕಾರಕ್ಕೆ ಭೇದ ಎನ್ನುವರು. ಅದರ ಮೋಹ ಎಂದರೆ ಜ್ಞಾನ ಯಾವಾಗಲೂ ಇಲ್ಲ. ಭ್ರಾಂತಿಯ ಧ್ವಂಸವಲ್ಲ ಭ್ರಾಂತಿಯ ಅತ್ಯಂತಾಭಾವವೇ ಶ್ರೀಹರಿಗೆ ಎಂದು ಭಾವ. ॥೧೫॥

ಭಗವಂತನ ಧ್ಯಾನಾದಿ ಆರಾಧನೆಗೆ ಮೋಕ್ಷಕಾರಣತ್ವವನ್ನು ಕೈಮುತ್ಯದಿಂದ ತಿಳಿಸುತ್ತ ನಾನೂ ಸಹ ಧ್ಯಾನ ಮಾಡುವೆನು ಎಂದು ಹೇಳುವರು–

**ಯಸ್ಯಾವತಾರಗುಣಕರ್ಮವಿಡಂಬನಾನಿ**
**ನಾಮಾನಿ ಯೇಽಸುವಿಗಮೇ ವಿವಶಾ ಗೃಣಂತಿ ।**

**ತೇ ನೈಕಜನ್ಮಶಮಲಂ ಸಹಸೈವ ಹಿತ್ವಾ**
**ಸಂಯಾಂತ್ಯಪಾವೃತಮೃತಂ ತಮಜಂ ಪ್ರಪದ್ಯೇ ॥೧೫॥**

ಯಸ್ಯ=ಯಾವ ಶ್ರೀಹರಿಯ ಅವತಾರಗುಣಕರ್ಮವಿಡಂಬನಾನಿ=ಅವತಾರ, ಗುಣಗಳು, ಕ್ರಿಯೆಗಳು ಇವುಗಳನ್ನು ಪ್ರತಿಪಾದಿಸುವ ನಾಮಾನಿ='ವಾಸುದೇವ-ದಾಶರಥಿ' ಮುಂತಾದ ಅವತಾರವನ್ನು ತಿಳಿಸುವ, 'ಸರ್ವಜ್ಞ-ಸರ್ವೇಶ್ವರ' ಮುಂತಾದ ಗುಣಗಳನ್ನು ತಿಳಿಸುವ, 'ಕಂಸಾರಿ-ರಾಕ್ಷಸಾರಿ' ಮುಂತಾದ ಕ್ರಿಯೆ-ಗಳನ್ನು ತಿಳಿಸುವ ಹೆಸರುಗಳನ್ನು ಯೇ=ಯಾರು ಅಸುವಿಗಮೇ=ಪ್ರಾಣ ಹೋಗುವಾಗ (ಚರಮ ಮರಣದಲ್ಲಿ) ವಿವಶಾಃ=ಭಕ್ತಿ ಪರವಶರಾಗಿ ಗೃಣಂತಿ= ಅರ್ಥಾನುಸಂಧಾನಪೂರ್ವಕವಾಗಿ ಉಚ್ಚರಿಸುವರೋ ತೇ=ಅವರು ನೈಕಜನ್ಮ-ಶಮಲಂ=ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಶಮಲಂ=ಪ್ರಾರಬ್ಧ ಪಾಪವನ್ನು ಹಿತ್ವಾ= ಕಳೆದುಕೊಂಡು ಸಹಸಾ ಏವ=ಶೀಘ್ರವಾಗಿಯೇ ಅಥವಾ ವಾಯುದೇವರಿಂದ ಅಪಾವೃತಂ=ಆವರಣಗಳನ್ನು ಕಳೆದುಕೊಂಡು ಋತಂ=ಜ್ಞಾನಪೂರ್ಣನಾದ ಪರಬ್ರಹ್ಮನನ್ನು ಸಂಯಾಂತಿ=ಹೊಂದುವರು. ಅಂದಮೇಲೆ ಸ್ವಯೋಗ್ಯಗುಣೋಪ-ಸಂಹಾರಪೂರ್ವಕವಾಗಿ ಅವನನ್ನು ಧ್ಯಾನಿಸುವವರು ಪರಬ್ರಹ್ಮನನ್ನು ಹೊಂದು-ವರು ಎಂದೇನು ಪ್ರತ್ಯೇಕ ಹೇಳಬೇಕಿಲ್ಲ. ಕೈಮುತ್ಯಸಿದ್ಧವೆಂದರ್ಥ. ತಂ ಅಜಂ ಪ್ರಪದ್ಯೇ=ಅಂಥ ಪರಮಾತ್ಮನನ್ನು ನಾನು ಮನಸಾ ಹೊಂದುವೆನು. ಸದಾ ಧ್ಯಾನ ಮಾಡುವೆನೆಂದರ್ಥ.

ಈ ಶ್ಲೋಕದಲ್ಲಿ ವಿವಶರಿಗೆ(ವಿಷಯಾಸಕ್ತರಿಗೆ) ನಾಮೋಚ್ಚಾರಣೆಯಿಂದ ಮುಕ್ತಿಯಾಗುವುದು ಎಂದು ಹೇಳಿದಂತೆ ತೋರುವುದು ಕಾರಣ ವ್ಯಾಖ್ಯಾನಿಸುವರು –

**ಭಕ್ತಿವಿವಶಾಃ ।**
**ಯೇ ಭಕ್ತ್ಯಾ ವಿವಶಾ ವಿಷ್ಣೋರ್ನಾಮಮಾತ್ರೈಕಜಲ್ಪಕಾಃ ।**
**ತೇಽಪಿ ಮುಕ್ತಿಂ ವ್ರಜಂತ್ಯಾಶು ಕಿಮು ತದ್ಧ್ಯಾಯಿನಃ ಸದಾ ॥**
**ಇತಿ ವ್ಯೋಮಸಹಿತಾಯಾಂ ।**

ಇಲ್ಲಿ ವಿವಶಪದವು ವಿಷಯ ಪರವಶತೆಯನ್ನು ಹೇಳುವುದಿಲ್ಲ. ಹಾಗಿದ್ದಲ್ಲಿ ಮುಕ್ತಿಯಾಗುವುದು ಹೇಗೆಂಬ ಪ್ರಶ್ನೆ ಬರುವುದು. ಕಿಂತು ಭಕ್ತಿಪರವಶರಾದ-ವರೆಂದು ಹೇಳುವುದು.ಅವರಿಗೆ ನಾಮೋಚ್ಚಾರಣೆಯಿಂದ ಮುಕ್ತಿ ಅನುಪಪನ್ನವಲ್ಲ ವೆಂದು ಭಾವ. ಈ ವಿಷಯದಲ್ಲಿ ವ್ಯೋಮಸಂಹಿತೆಯಲ್ಲಿ 'ಯಾರು ಭಕ್ತಿ

ನಿವರ್ತಕವಾದಜ್ಞಾನಕ್ಕೆ ಜನಕವಾದ ಬುದ್ಧಿಯುಳ್ಳ ಪರಸ್ಮೈ=ಸರ್ವೋತ್ತಮನಾದ ವಿಶ್ವೋದಯಸ್ಥಿತಿಲಯೇಷು=ಪ್ರಪಂಚದ ಸೃಷ್ಟಿ ಸ್ಥಿತಿ, ಸಂಹಾರಗಳಿಗೆ ನಿಮಿತ್ತ-ಲೀಲಾರಾಮಾಯ=ಕಾರಣವಾದ ಕ್ರೀಡೆಗೆ ಆಶ್ರಯನಾದ (ಲೀಲೆಯೇ ಆನಂದ-ವಾಗಿವುಳ್ಳ)ಈಶ್ವರಾಯ=ಶ್ರೀಹರಿಗೆ ಇದಂ (ಉದ್ದಿಶ್ಯ)=ದರ್ಶನ ಕೊಟ್ಟಿದ್ದಕ್ಕಾಗಿ ನಮಃ ಚಕೃಮೆ=ನಮಸ್ಕಾರ ಮಾಡುವೆನು.

ಈ ಶ್ಲೋಕದಲ್ಲಿ 'ನಿಪೀತಭೇದಮೋಹಾಯ' ಎನ್ನುವುದಕ್ಕೆ ಭೇದ ಭ್ರಮೆಯನ್ನು ಕಳೆದುಕೊಂಡ ಎಂದರ್ಥ ತೋರುವುದು. ಅವನಿಗೆ ಭ್ರಮ ಪ್ರಸಕ್ತಿಯೇ ಇಲ್ಲದ್ದರಿಂದ ಈ ಅರ್ಥ ಸರಿಯಲ್ಲ ಕಾರಣ ಭೇದಮೋಹ ಶಬ್ದಾರ್ಥವನ್ನು ಹೇಳುವ ಪ್ರಮಾಣ ಉದಾಹರಿಸುವರು –

**ಈಶಸ್ಯಾಪೂರ್ಣತಾಜ್ಞಾನಂ ವಿಷ್ಣೋರನ್ಯಸ್ಯ ಚೇಶತಾ ।**
**ಭೇದಸ್ತಸ್ಯಾವತಾರೇಷು ಜೀವಸ್ಯೇಶತ್ವಮೇವ ಚ ॥**

**ತಥಾ ಜೀವತ್ವಮೀಶಸ್ಯ ಜಡಾಭೇದಸ್ತಯೋರಪಿ ।**
**ಭೇದಮೋಹ ಇತಿ ಪ್ರೋಕ್ತಃ ಸ ಸದಾ ನ ಹರೌ ಕ್ವಚಿತ್ ।**
**ಅನ್ಯೇಷಾಂ ತತ್ಪ್ರಸಾದೇನ ಶನೈರ್ಯಾತಿ ಸತಾಮಪಿ ॥ ಇತಿ ಸ್ಕಾಂದೇ ।**

ಶ್ರೀಹರಿಯು ಅಪೂರ್ಣನೆಂದು ತಿಳಿಯುವುದು, ವಿಷ್ಣುಭಿನ್ನರಾದವರಿಗೆ ಈಶತ್ವವನ್ನು ತಿಳಿಯುವುದು, ಭಗವಂತನ ಅವತಾರಗಳಲ್ಲಿ ಭೇದವನ್ನು ತಿಳಿಯುವುದು, ಜೀವೇಶರಿಗೆ ಜಡದಿಂದ ಅಭೇದ ತಿಳಿಯುವುದು ಭೇದಮೋಹ-ವೆನಿಸುವುದು. ಈ ಭೇದಮೋಹವು ಯಾವ ಕಾಲದಲ್ಲಿಯೂ ಯಾವ ವಿಷಯ-ದಲ್ಲಿಯೂ ಶ್ರೀಹರಿಗೆ ಇರುವುದಿಲ್ಲ. ಮಿಕ್ಕ ಸಜ್ಜನರಿಗೂ ಶ್ರೀಹರಿಯ ಪ್ರಸಾದದಿಂದ ನಿಧಾನವಾಗಿ ಈ ಭೇದಮೋಹ ಹೋಗುವುದು. ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ. ಅಧಿಷ್ಠಾನದ ನಿಜವಾದ ಸ್ವರೂಪಕ್ಕೆ ವಿಪರೀತವಾದ ಆಕಾರಕ್ಕೆ ಭೇದ ಎನ್ನುವರು. ಅದರ ಮೋಹ ಎಂದರೆ ಜ್ಞಾನ ಯಾವಾಗಲೂ ಇಲ್ಲ. ಭ್ರಾಂತಿಯ ಧ್ವಂಸವಲ್ಲ ಭ್ರಾಂತಿಯ ಅತ್ಯಂತಾಭಾವವೇ ಶ್ರೀಹರಿಗೆ ಎಂದು ಭಾವ. ॥೧೫॥

ಭಗವಂತನ ಧ್ಯಾನಾದಿ ಆರಾಧನೆಗೆ ಮೋಕ್ಷಕಾರಣತ್ವವನ್ನು ಕೈಮುತ್ಯದಿಂದ ತಿಳಿಸುತ್ತ ನಾನೂ ಸಹ ಧ್ಯಾನ ಮಾಡುವೆನು ಎಂದು ಹೇಳುವರು–

**ಯಸ್ಯಾವತಾರಗುಣಕರ್ಮವಿಡಂಬನಾನಿ**
**ನಾಮಾನಿ ಯೇಽಸುವಿಗಮೇ ವಿವಶಾ ಗೃಣಂತಿ ।**

**ತೇ ನೈಕಜನ್ಮಶಮಲಂ ಸಹಸೈವ ಹಿತ್ವಾ**
**ಸಂಯಾಂತ್ಯಪಾವೃತಮೃತಂ ತಮಜಂ ಪ್ರಪದ್ಯೇ ॥೧೫॥**

ಯಸ್ಯ=ಯಾವ ಶ್ರೀಹರಿಯ ಅವತಾರಗುಣಕರ್ಮವಿಡಂಬನಾನಿ=ಅವತಾರ, ಗುಣಗಳು, ಕ್ರಿಯೆಗಳು ಇವುಗಳನ್ನು ಪ್ರತಿಪಾದಿಸುವ ನಾಮಾನಿ='ವಾಸುದೇವ-ದಾಶರಥಿ' ಮುಂತಾದ ಅವತಾರವನ್ನು ತಿಳಿಸುವ, 'ಸರ್ವಜ್ಞ-ಸರ್ವೇಶ್ವರ' ಮುಂತಾದ ಗುಣಗಳನ್ನು ತಿಳಿಸುವ, 'ಕಂಸಾರಿ-ರಾಕ್ಷಸಾರಿ' ಮುಂತಾದ ಕ್ರಿಯೆ-ಗಳನ್ನು ತಿಳಿಸುವ ಹೆಸರುಗಳನ್ನು ಯೇ=ಯಾರು ಅಸುವಿಗಮೇ=ಪ್ರಾಣ ಹೋಗುವಾಗ (ಚರಮ ಮರಣದಲ್ಲಿ) ವಿವಶಾಃ=ಭಕ್ತಿ ಪರವಶರಾಗಿ ಗೃಣಂತಿ=ಅರ್ಥಾನುಸಂಧಾನಪೂರ್ವಕವಾಗಿ ಉಚ್ಚರಿಸುವರೋ ತೇ=ಅವರು ನೈಕಜನ್ಮ-ಶಮಲಂ=ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಶಮಲಂ=ಪ್ರಾರಬ್ಧ ಪಾಪವನ್ನು ಹಿತ್ವಾ=ಕಳೆದುಕೊಂಡು ಸಹಸಾ ಏವ=ಶೀಘ್ರವಾಗಿಯೇ ಅಥವಾ ವಾಯುದೇವರಿಂದ ಅಪಾವೃತಂ=ಆವರಣಗಳನ್ನು ಕಳೆದುಕೊಂಡು ಋತಂ=ಜ್ಞಾನಪೂರ್ಣನಾದ ಪರಬ್ರಹ್ಮನನ್ನು ಸಂಯಾಂತಿ=ಹೊಂದುವರು. ಅಂದಮೇಲೆ ಸ್ವಯೋಗ್ಯಗುಣೋಪ-ಸಂಹಾರಪೂರ್ವಕವಾಗಿ ಅವನನ್ನು ಧ್ಯಾನಿಸುವವರು ಪರಬ್ರಹ್ಮನನ್ನು ಹೊಂದು-ವರು ಎಂದೇನು ಪ್ರತ್ಯೇಕ ಹೇಳಬೇಕಿಲ್ಲ. ಕೈಮುತ್ಯಸಿದ್ಧವೆಂದರ್ಥ. ತಂ ಅಜಂ ಪ್ರಪದ್ಯೇ=ಅಂಥ ಪರಮಾತ್ಮನನ್ನು ನಾನು ಮನಸಾ ಹೊಂದುವೆನು. ಸದಾ ಧ್ಯಾನ ಮಾಡುವೆನೆಂದರ್ಥ.

ಈ ಶ್ಲೋಕದಲ್ಲಿ ವಿವಶರಿಗೆ(ವಿಷಯಾಸಕ್ತರಿಗೆ) ನಾಮೋಚ್ಚಾರಣೆಯಿಂದ ಮುಕ್ತಿಯಾಗುವುದು ಎಂದು ಹೇಳಿದಂತೆ ತೋರುವುದು ಕಾರಣ ವ್ಯಾಖ್ಯಾನಿಸುವರು –

**ಭಕ್ತಿವಿವಶಾಃ ।**
**ಯೇ ಭಕ್ತ್ಯಾ ವಿವಶಾ ವಿಷ್ಣೋರ್ನಾಮಮಾತ್ರೈಕಜಲ್ಪಕಾಃ ।**
**ತೇಽಪಿ ಮುಕ್ತಿಂ ವ್ರಜಂತ್ಯಾಶು ಕಿಮು ತದ್ಧ್ಯಾಯಿನಃ ಸದಾ ॥**
**ಇತಿ ವ್ಯೋಮಸಹಿತಾಯಾಂ ।**

ಇಲ್ಲಿ ವಿವಶಪದವು ವಿಷಯ ಪರವಶತೆಯನ್ನು ಹೇಳುವುದಿಲ್ಲ. ಹಾಗಿದ್ದಲ್ಲಿ ಮುಕ್ತಿಯಾಗುವುದು ಹೇಗೆಂಬ ಪ್ರಶ್ನೆ ಬರುವುದು. ಕಿಂತು ಭಕ್ತಿಪರವಶರಾದ-ವರೆಂದು ಹೇಳುವುದು. ಅವರಿಗೆ ನಾಮೋಚ್ಚಾರಣೆಯಿಂದ ಮುಕ್ತಿ ಅನುಪಪನ್ನವಲ್ಲ-ವೆಂದು ಭಾವ. ಈ ವಿಷಯದಲ್ಲಿ ವ್ಯೋಮಸಂಹಿತೆಯಲ್ಲಿ 'ಯಾರು ಭಕ್ತಿ

ಪರವಶತೆಯಿಂದ ವಿಷ್ಣುವಿನ ನಾಮವನ್ನು ಉಚ್ಚರಿಸುವವರೋ ಅವರೂ ಬೇಗನೇ ಮುಕ್ತಿಗೆ ಹೋಗುವರು. ಅಂದಮೇಲೆ ಸದಾ ಶ್ರೀಹರಿಯ ಧ್ಯಾನ ಮಾಡುವರು ಮುಕ್ತಿಗೆ ಹೋಗುವರು ಎಂಬುದು ಕೈಮುತ್ಯಸಿದ್ಧ' ಎಂದು ಹೇಳಿದೆ. ॥೧೫॥

ಬ್ರಹ್ಮನು ಜಗತ್ತಿನ ಸೃಷ್ಟಿಕರ್ತಾ, ಪ್ರಳಯಕರ್ತಾ ಶಿವನು ಎಂದು ಪ್ರಸಿದ್ಧಿ ಇರುವಾಗ ವಿಷ್ಣುವಿಗೆ ಉತ್ಪತ್ತಿ, ಸ್ಥಿತಿ, ಸಂಹಾರಕರ್ತೃತ್ವವನ್ನು ಹೇಳಿದುದು ಹೇಗೆ ಸಮಂಜಸವಾಗುವುದು? ಎಂಬ ಶಂಕೆಯನ್ನು ಪರಿಹರಿಸುತ್ತ ಮತ್ತೆ ನಮಸ್ಕರಿಸುವನು –

**ಯೋ ವಾ ಅಹಂ ಚ ಗಿರಿಶಶ್ಚ ವಿಭುಃ ಸ್ವಯಂ ಚ**
**ಸ್ಥಿತ್ಯುದ್ಭವಪ್ರಲಯಹೇತವ ಆತ್ಮಮೂಲಾಃ ।**
**ಭೂತ್ವಾ ತ್ರಿಪಾದ್ ವವೃಧ ಏಕ ಉರುಪ್ರರೋಹ-**
**ಸ್ತಸ್ಮೈ ನಮೋ ಭಗವತೇ ಭುವನದ್ರುಮಾಯ ॥೧೬॥**

ಯಃ=ಯಾವನು ತ್ರಿಪಾತ್=ಅನಂತಾಸನ, ಶ್ವೇತದ್ವೀಪ, ವೈಕುಂಠ ಎಂಬ ಮೂರು ಸ್ಥಾನಗಳಲ್ಲಿ ಮೂರು ಸ್ವರೂಪಾಂಶವುಳ್ಳ ಶ್ರೀಹರಿಯು ಏಕಃ ಅಪಿ= ಒಬ್ಬನೇ ಆಗಿದ್ದರೂ ಉರುಪ್ರರೋಹಃ=ಬಹಳವಾದ ಶಾಖೋಪಶಾಖಾಸ್ಥಾನೀಯ-ವಾದ ಆ ಆ ಕಾರ್ಯನಿಯಾಮಕವಾದ ಅನಂತ ಅಂಶವುಳ್ಳವನು ಭೂತ್ವಾ=ಆಗಿ, ಆತ್ಮಮೂಲಾಃ=ತಾನೇ ಮೂಲಸ್ಥಾನೀಯನಾಗಿವುಳ್ಳ ಸ್ಥಿತ್ಯುದ್ಭವಪ್ರಳಯಹೇತವಃ= ಪಾಲನ, ಉತ್ಪತ್ತಿ, ನಾಶಗಳಿಗೆ ಕಾರಣಗಳಾದ ಅಹಂ=ನನ್ನಲ್ಲಿ ಆವಿಷ್ಟವಾದ ನನ್ನ ನಿಯಾಮಕನಾದ ನನ್ನ ಹೆಸರುಳ್ಳವನು, ಗಿರಿಶಃ ಚ=ರುದ್ರನಲ್ಲಿ ಆವಿಷ್ಟನಾಗಿ ರುದ್ರನಿಯಾಕನಾಗಿ ರುದ್ರನಾಮಕನಾಗಿಯೂ ಚ=ಮತ್ತು ಸ್ವಯಂ ವಿಭುಃ= ಸಾಕ್ಷಾತ್ ವಿಷ್ಣುವು ಭೂತ್ವಾ=ಆಗಿ ಅವತರಿಸಿ ವವೃಧೇ=ಬೆಳೆದನೋ ತಸ್ಮೈ=ಅಂಥ ಭುವನದ್ರುಮಾಯ=ಜಗತ್ತನ್ನು ವ್ಯಾಪಿಸಿದ ವೃಕ್ಷದಂತಿರುವ ಭಗವತೇ=ಶ್ರೀಹರಿಗೆ ನಮಃ=ನಮಸ್ಕಾರವು. ವೈ=ಪ್ರಸಿದ್ಧವು.

ಈ ಶ್ಲೋಕದಲ್ಲಿ ಶ್ರೀಹರಿಗೆ ವಿಷ್ಣುತ್ವದಂತೆ ಬ್ರಹ್ಮತ್ವ, ರುದ್ರತ್ವಗಳೂ ತೋರುವುದು. ಕಾರಣ ಇಲ್ಲಿ ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು –

ಬ್ರಹ್ಮಾದಿಭಾವೋ ವಿಷ್ಣೋಸ್ತು ತನ್ನಿಯಾಮಕತಾ ಭವೇತ್ ।
ಮತ್ಸ್ಯಾದಿತಾ ತತ್ಸ್ವಭಾವೋ ನಾನ್ಯಥಾ ಕ್ವಚಿದಿಷ್ಯತೇ ॥ ಇತಿ ವಾಮನೇ ।

ವಿಷ್ಣುವಿಗೆ ಎಲ್ಲಿ ಬ್ರಹ್ಮತ್ವ, ರುದ್ರತ್ವಗಳು ಹೇಳಲ್ಪಡುವವೋ ಅಂದರೆ ವಿಷ್ಣುವೇ ಬ್ರಹ್ಮ, ರುದ್ರ ಮುಂತಾಗಿ ಹೇಳಿದಲ್ಲಿ ಅವರ ನಿಯಾಮಕತೆಯನ್ನು ಹೇಳುವರು, (ಇವರು ಅವನ ಅಧೀನರಾದದ್ದರಿಂದ ಅವನೇ ಎಂದು ಕರೆಯುವರು) ಎಂದು ತಿಳಿಯಬೇಕು. ಮತ್ಸ್ಯಾದಿತ್ವವು ಅವನ ಸ್ವಭಾವವೇ. ಅಂದರೆ ಮತ್ಸ್ಯಾದಿಗಳು ಭಗವಂತನ ಸ್ವರೂಪಾಂಶಗಳೇ. ವೇದಾದಿಗಳಲ್ಲಿ ಎಲ್ಲಿಯೂ ಬ್ರಹ್ಮಾದಿಗಳಿಗೆ ಮತ್ಸ್ಯಾದಿಗಳಂತೆ ಅಭೇದವೆಂಬರ್ಥವು ಅಂಗೀಕರಿಸಲಾಗಿಲ್ಲ.

ತ್ರಿಪಾತ್ ಎಂಬುದಕ್ಕೆ 'ಬ್ರಹ್ಮ,ರುದ್ರ,ವಿಷ್ಣು ಎಂಬ ಮೂರು ಸ್ಕಂಧಗಳುಳ್ಳ' ಎಂಬ ವ್ಯಾಖ್ಯಾನ ಪ್ರಮಾಣ ವಿರುದ್ಧ. ಕಾರಣ ಪ್ರಮಾಣದಿಂದ ಅರ್ಥ ತಿಳಿಸುವರು -

**ಅನಂತಾಸನವೈಕುಂಠಕ್ಷೀರಾಬ್ಧಿಸ್ಥೋ ಹರಿಃ ತ್ರಿಪಾತ್ । ಇತಿ ಚ ।**

ಅನಂತಾಸನ-ವೈಕುಂಠ-ಕ್ಷೀರಸಾಗರ ಈ ಮೂರು ಸ್ಥಾನದಲ್ಲಿರುವ ಶ್ರೀಹರಿಗೆ (ಮೂರು ಸ್ವರೂಪ ಅಂಶ) ತ್ರಿಪಾತ್ ಎನ್ನುವರು. ಎಂದು ಹೇಳಿದೆ. ॥೧೬॥

ಮೋಕ್ಷಾಪೇಕ್ಷಿಯಾಗಿ ಭಗವಂತನನ್ನು ಆರಾಧಿಸುವವನು ಅವಶ್ಯವಾಗಿ ನಿಷಿದ್ಧ ತ್ಯಾಗ, ವಿಹಿತ ಅನುಷ್ಠಾನ ಮಾಡಬೇಕು ಎಂಬುದನ್ನು, ಮಾಡದಿದ್ದರೆ ಬಾಧಕ ಹೇಳುವ ಮುಖಾಂತರ ಉಪಪಾದಿಸುತ್ತ, ಕಾಲಪ್ರವರ್ತಕನಾದ ಅನಿಮಿಷನಾಮಕ ಶ್ರೀಹರಿಯನ್ನು ನಮಿಸುವರು -

**ಲೋಕೋ ವಿಕರ್ಮನಿರತಃ ಕುಶಲೇ ಪ್ರಮತ್ತಃ**
**ಕರ್ಮಣ್ಯಯಂ ತ್ವದುದಿತೇ ಭವದರ್ಚನೇ ಸ್ವೇ ।**
**ಯಸ್ತಾವದಸ್ಯ ಬಲವಾನಿಹ ಜೀವಿತಾಶಾಂ**
**ಸದ್ಯಶ್ಛಿನತ್ತ್ಯನಿಮಿಷಾಯ ನಮೋಽಸ್ತು ತಸ್ಮೈ ॥೧೭॥**

ಯತ್=ಯಾವಾಗ ಅಯಂ ಲೋಕಃ=ಈ ಜನರು ವಿಕರ್ಮನಿರತಃ=ನಿಷಿದ್ಧ-ಕರ್ಮದಲ್ಲಿ ಅತ್ಯಂತ ಆಸಕ್ತರಾಗಿ ಸ್ವೇ=ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಭವದರ್ಚನೇ=ನಿನ್ನ ಪೂಜಾರೂಪವಾದ, ತ್ವದುದಿತೇ=ದತ್ತ, ಕಪಿಲ, ವ್ಯಾಸ ಮುಂತಾದ ರೂಪಗಳಿಂದ ನಿನ್ನಿಂದಲೇ ಮಾಡಬೇಕೆಂದು ಹೇಳಲ್ಪಟ್ಟ ಕುಶಲೇ=ಕ್ಷೇಮವನ್ನುಂಟುಮಾಡುವ ಕರ್ಮಣಿ=ಕಾರ್ಯಗಳಲ್ಲಿ ಪ್ರಮತ್ತಃ=ಲಕ್ಷ್ಯವಿಡುವು-ದಿಲ್ಲವೋ (ಮನಸಿಡುವುದಿಲ್ಲವೋ) ತಾವತ್=ಆಗ, ಅಸ್ಯ=ಜನರ ಇಹ=ಈ ಲೋಕದಲ್ಲಿ ಜೀವಿತಾಶಾಂ=ಬದುಕುವ ಅಪೇಕ್ಷೆಯನ್ನು, ಸದ್ಯಃ=ಕಾಲವಿಲಂಬ-ವಿಲ್ಲದೇ ಬಲವಾನ್=ಯಾರಿಂದಲೂ ನಿವಾರಿಸಲಾಗದ ಯಃ=ಯಾವನು ಛಿನತ್ತಿ=

ನಾಶಮಾಡುವನೋ ತಸ್ಮೈ=ಅಂತಹ ಅನಿಮಿಷಾಯ=ನಿತ್ಯದಲ್ಲಿಯೂ ಸೂಕ್ಷ್ಮಕಾಲವನ್ನು ನೋಡುವ ಶ್ರೀಹರಿಗೆ ನಮೋ ಅಸ್ತು=ನಮಸ್ಕಾರವಿರಲಿ.

ಇಲ್ಲಿ ಅನಿಮಿಷಪದವು ಕಾಲವನ್ನಷ್ಟೇ ಹೇಳುವುದು ಎಂಬ ವಿಪರೀತ ಜ್ಞಾನವನ್ನು ನಿರಾಕರಿಸಲು ಪ್ರಮಾಣದಿಂದ ಅರ್ಥ ಹೇಳುವರು–

**ನಿತ್ಯಜ್ಞಾನದೃಶಾ ನಿತ್ಯಂ ಲವಕಾಲಮಪೀಶ್ವರಃ।**
**ಪಶ್ಯೇತ್ತಾತ್ಕಾಲಿಕಂ ಚೈವ ತಸ್ಮಾದನಿಮಿಷೋ ಹರಿಃ।**
**ಕಾಲಸ್ಯಾನಿಮಿಷತ್ವಂ ಚ ಲವಾದೇರ್ನಿತ್ಯವೀಕ್ಷಣಾತ್ ॥ ಇತಿ ತಂತ್ರಸಾರೇ ।**

ನಿತ್ಯವಾದ ತನ್ನ ಜ್ಞಾನದೃಷ್ಟಿಯಿಂದ ಲವವೆಂಬ ಸೂಕ್ಷ್ಮ ಕಾಲವನ್ನೂ ಆ ಲವಕಾಲದಲ್ಲಿರುವ ವಸ್ತುವನ್ನೂ ಈಶ್ವರನು ನೋಡುವನು. ಕಾರಣ ಅನಿಮಿಷನು ಶ್ರೀಹರಿಯು. ನಿತ್ಯದಲ್ಲಿಯೂ ನೋಡಲ್ಪಡುವುದರಿಂದ ಕಾಲಕ್ಕೆ ಅನಿಮಿಷವೆನ್ನುವರು ಎಂದು ಭಾವ. ಇಲ್ಲಿ ನಿಮಿಷಶಬ್ದಕ್ಕೆ ಯಾವಗಲೋ ಒಮ್ಮೆ ಸೂಕ್ಷ್ಮ ವಸ್ತುವನ್ನು ನೋಡುವುದು ಎಂದರ್ಥ. (ಕಾದಾಚಿತ್ಕಸೂಕ್ಷ್ಮನಿರೀಕ್ಷಣಪರಃ 'ನ ವಿದ್ಯತೇ ನಿಮಿಷೋ ಯಸ್ಯ ಸಃ ಅನಿಮಿಷಃ' ಎಂಬಲ್ಲಿ ಅನ್ಯಪದಾರ್ಥವಾಗಿ ಕರ್ತೃವನ್ನು ತೆಗೆದುಕೊಂಡರೆ ನಿತ್ಯದಲ್ಲೂ ಸೂಕ್ಷ್ಮನಿರೀಕ್ಷಿತೃವಾದ ಭಗವಂತನು ವಾಚ್ಯನಾಗುವನು. ಕರ್ಮವನ್ನು ತೆಗೆದುಕೊಂಡರೆ ಲವಾದಿಕಾಲಗಳಾಗುವುವು. ಅಂತು ನಿತ್ಯವೂ ಸೂಕ್ಷ್ಮಲವಾದಿಗಳನ್ನು ನೋಡುವುದರಿಂದ ಅನಿಮಿಷನು ಶ್ರೀಹರಿಯು. ಶ್ರೀಹರಿಯಿಂದ ನಿತ್ಯ ನೋಡಲ್ಪಡುವುದರಿಂದ ಅನಿಮಿಷವು ಕಾಲವು. ಇದರಿಂದ ಲವಾದಿಕಾಲಾತರ್ಂಗನಾದ ಶ್ರೀಹರಿಯೇ ಅನಿಮಿಷಶಬ್ದವಾಚ್ಯನೆಂದು ಸೂಚಿತವಾಯಿತು. ॥೧೭॥

'ದ್ವಾ ಸುಪರ್ಣಾ ಸಯುಜಾ ಸಖಾಯಾ' ಎಂಬ ಶ್ರುತಿಯು ಶ್ರೀಹರಿಯು ಲೋಕಸಖನೆಂದು ಹೇಳಿರುವುದರಿಂದ, ಅವನಿಗೆ ಲೋಕಮಾರಕತ್ವವು ಉಪಪನ್ನವಲ್ಲ ಎಂಬ ಶಂಕೆಯನ್ನು ಪರಿಹರಿಸುತ್ತ ಮತ್ತೆ ನಮಸ್ಕರಿಸುವರು ಬ್ರಹ್ಮದೇವರು –

**ಯಸ್ಮಾದ್ ಬಿಭೇಮ್ಯಹಮಪಿ ದ್ವಿಪರಾರ್ಧಧಿಷ್ಣ್ಯ-**
**ಮಧ್ಯಾಸಿತಃ ಸಕಲಲೋಕನಮಸ್ಕೃತಂ ಯತ್ ।**
**ತೇಪೇ ತಪೋ ಬಹುತಪೋಽವರುರುತ್ಸಮಾನ-**
**ಸ್ತಸ್ಮೈ ನಮೋ ಭಗವತೇ ವಿಸಖಾಯ ತುಭ್ಯಂ ॥೧೮॥**

ಯತ್=ಯಾವುದು ಸಕಲಲೋಕನಮಸ್ಕೃತಂ=ಸಮಸ್ತ ಜಗತ್ತಿನಿಂದ ನಮಸ್ಕರಿಸಲ್ಪಡುವದೋ ತತ್=ಅಂಥ ದ್ವಿಪರಾರ್ಧಧಿಷ್ಣ್ಯಂ=ಎರಡು ಪರಾರ್ಧದವರೆಗೆ

ಇರುವ ಧಿಷ್ಣ್ಯಂ=ಸತ್ಯಲೋಕವನ್ನು ಅಧ್ಯಾಸಿತಃ=ಅಲಂಕರಿಸಿದ ಅಂದರೆ ಸತ್ಯಲೋಕಾಧಿಪತಿಯಾದ ಅಹಂ ಅಪಿ=ಸರ್ವಾಧಿಕಾರಿಗಳಲ್ಲಿ ಉತ್ತಮನಾದ ನಾನೂ ಸಹ ಯಸ್ಮಾದ್=ಯಾವ ಅನಿಮಿಷನಾಮಕ ಪರಮಾತ್ಮನಿಂದ ಬಿಭೇಮಿ=ಅವನಿಂದ ಮರಣ ಬರುವುದೆಂದು ತಿಳಿದಿರುವೆನೋ ಬಹುತಪಃ=ನನ್ನಯೋಗ್ಯತಾನುಸಾರ ಅಭಿವೃದ್ಧವಾದ ಜ್ಞಾನವನ್ನು ಅವರುರುತ್ಸಮಾನಃ=ಹೊಂದುವ ಇಚ್ಛೆಯಿಂದ ತಪಃ ತೇಪೆ=ತಪಸ್ಸು ಮಾಡಿದೆನೋ. ತಸ್ಮೈ=ಅಂಥ ವಿಸಖಾಯ=ಸ್ನೇಹಿತರಿಲ್ಲದ ಅಂದರೆ ಅವನಿಂದ ಮರಣ ರಹಿತರಿಲ್ಲದ ಭಗವತೇ=ಷಡ್ಗುಣೈಶ್ವರ್ಯಸಂಪನ್ನನಾದ ತುಭ್ಯಂ ನಿನಗೆ ನಮಃ=ನಮಸ್ಕಾರವು.

ದೀರ್ಘ ಆಯುಷ್ಯವುಳ್ಳ ಸಕಲಲೋಕವಂದ್ಯವಾದ ಪದದಲ್ಲಿರುವ ಜೀವೋತ್ತಮನಾದ ನಾನೇ ಪರಮಾತ್ಮ ಕೊಡುವ ಮರಣರಹಿತನಲ್ಲ ಅಂದ ಮೇಲೆ ಇತರರ ಪಾಡೇನು? ದ್ವಾಸುಪರ್ಣಾ ಶ್ರುತಿಯು ಅವರವರ ಕರ್ಮಾನುಸಾರ ಅನ್ನಾದಿಗಳನ್ನು ಕೊಟ್ಟು ರಕ್ಷಿಸುವನು ಎಂಬರ್ಥದಲ್ಲಿ ಇದೆ ಎಂದು ಭಾವ. ॥೧೮॥

ಶ್ರೀಹರಿಯು ತಿರ್ಯಕ್(ಪ್ರಾಣಿ) ಯೋನಿಯಲ್ಲಿ ಜನಿಸುವನು. ವಿಷಯ-ಭೋಗ ಮಾಡುವವನು. ಕಾರಣ ಇವನೂ ಎಲ್ಲರಂತೆಯೇ ಅಂದ ಮೇಲೆ ಸರ್ವೋತ್ತಮ ಎಂದು ಹೇಳಿದುದು ಸರಿಯಲ್ಲ ಎಂಬ ಶಂಕೆಯನ್ನು ಪರಿಹರಿಸುತ್ತ ನಮಸ್ಕರಿಸುವರು –

**ತಿರ್ಯಙ್‌ಮನಷ್ಯವಿಬುಧಾದಿಷು ಜೀವಯೋನಿ-**
**ಷ್ವಾತ್ಮೇಚ್ಛಯಾಽತ್ಮಕೃತಸೇತುಪರೀಪ್ಸಯಾ ಯಃ ।**
**ರೇಮೇಽನಿರಸ್ತರತಿರಪ್ಯುಪಲಬ್ಧಕಾಷ್ಠ-**
**ಸ್ತಸ್ಮೈ ನಮೋ ಭಗವತೇ ಪುರುಷೋತ್ತಮಾಯ ॥೧೯॥**

ಯಃ=ಯಾವನು ತಿರ್ಯಙ್‌ಮನುಷ್ಯವಿಬುಧಾದಿಷು=ಮತ್ಸ್ಯ, (ಮೀನು) ಕೂರ್ಮ, (ಆಮೆ) ವರಾಹ,(ಹಂದಿ) ಮುಂತಾದ ನೀಚಯೋನಿಗಳಲ್ಲಿ ಮತ್ತು ಮನುಷ್ಯಯೋನಿಯಲ್ಲಿ ರಾಮಕೃಷ್ಣಾದಿಕ್ಷತ್ರಿಯರಾಗಿ, ವಿಬುಧಯೋನಿಯಲ್ಲಿ ಅಂದರೆ ಯಮಧರ್ಮನಿಂದ ನಾರಾಯಣ, ಬ್ರಹ್ಮನಿಂದ ಸನತ್ಕುಮಾರ ಮುಂತಾಗಿ, ಬ್ರಾಹ್ಮಣಯೋನಿಯಲ್ಲಿ ಪರಶುರಾಮ, ವೇದವ್ಯಾಸ, ಕಲ್ಕಿ ಮುಂತಾಗಿ ಜೀವಯೋನಿಷು=ಬೇರೆ ಬೇರೆ ಜೀವಯೋನಿಗಳಲ್ಲಿ ಆತ್ಮಕೃತಸೇತುಪರೀಪ್ಸಯಾ= ತಾನೇ ಮಾಡಿದ ಧರ್ಮ ಮರ್ಯಾದೆಯನ್ನು ರಕ್ಷಿಸಲು ಆತ್ಮೇಚ್ಛಯಾ=ತನ್ನ ಇಚ್ಛೆಯಿಂದಲೇ ಅವತೀರ್ಯ=ಅವತಾರಮಾಡಿ ಅನಿರಸ್ತರತಿಃ ಅಪಿ=ನಿತ್ಯಸುಖ-

ವುಳ್ಳವನಾದರೂ ಉಪಲಬ್ಧಕಾಷ್ಠಃ=ಶ್ರುತ್ಯಾದಿಗಳಲ್ಲಿ ಪ್ರತಿಪಾದಿತವಾದ ಆನಂದ-ತಾರತಮ್ಯದ ಅವಧಿಯಾದ ಅಪರಿಚ್ಛಿನ್ನ ಆನಂದವುಳ್ಳವನು ರೇಮೇ=ವಿಷಯ-ಭೋಗ ಮಾಡಿದನೋ ತಸ್ಮೈ=ಅಂಥ ಭಗವತೇ ಪುರುಷೋತ್ತಮಾಯ ನಮಃ= ಸರ್ವೋತ್ತಮನಾದ ಶ್ರೀಹರಿಗೆ ನಮನವು. ಭಗವಂತನು ಬೇರೆ ಬೇರೆ ಯೋನಿಗಳಲ್ಲಿ ಅವತರಿಸಿದರೂ ಇತರರಂತೆ ತಾನು ಮಾಡಿದ ಕರ್ಮದ ಫಲದಿಂದ ಜನಿಸಿದ್ದಲ್ಲ. ಮತ್ತು ನಿರವಧಿಕ ನಿತ್ಯಾನಂದ ಪೂರ್ಣನಾಗಿಯೂ ವಿಷಯಭೋಗ ಮಾಡಿದರೂ ನಮ್ಮಂತೆ ಸುಖಕ್ಕಾಗಿ ಅಲ್ಲ. ಕಾರಣ ಇತರ ಪುರುಷರಂತೆ ಇವನೊಬ್ಬ ಎಂದು ತಿಳಿಯಬಾರದು ಎಂದು ಭಾವ.

ಇಲ್ಲಿ 'ನಿರಸ್ತರತಿರಪಿ ರೇಮೇ' ಎಂದು ಪದವಿಭಾಗ ಮಾಡಿ ಅರ್ಥಮಾಡಿದರೆ ವ್ಯಾಹತವಾಗುವುದು. ಕಾರಣ ಅಭಿಪ್ರೇತವಾದ ಪದವಿಭಾಗವನ್ನು ತೋರಿಸುವರು.

**ಅನಿರಸ್ತರತಿಃ ನಿತ್ಯರತಿಃ ।**

ನಾಶವಾಗದಿರುವ ರತಿ ಎಂದರ್ಥ. ನಾಶವಾಗದಿರುವುದು ಎಂದರೆ ನಿತ್ಯವೆಂದು ಅರ್ಥ. ॥೧೯॥

ಶ್ರೀಹರಿಗೆ ಅವಿದ್ಯಾ ಕಾರ್ಯವಾದ ನಿದ್ರೆ ಹೇಗೆ ? ಎಂದರೆ ಅದೂ ಸಹ ಲೋಕನಿದ್ರಾವಿಲಕ್ಷಣವಾದುದೆ ಎಂದು ಹೇಳುವರು.

**ಯೋಽವಿದ್ಯಯಾನುಪಹತೋಽಪಿ ದಶಾರ್ಧವೃತ್ತ್ಯಾ**
**ನಿದ್ರಾಮುವಾಹ ಜಠರೀಕೃತಲೋಕಯಾತ್ರಃ ।**
**ಅಂತರ್ಜಲೇಽಹಿಕಶಿಪುಸ್ಪರ್ಶಾನುಕೂಲಂ**
**ಭೀಮೋರ್ಮಿಮಾಲಿನಿ ಜನಸ್ಯ ಸುಖಂ ವಿವೃಣ್ವನ್ ॥೨೦॥**

ಯಃ=ಯಾವನು ದಶಾರ್ಧವೃತ್ತ್ಯಾ=ಪಂಚಪರ್ವಗಳುಳ್ಳ ಅವಿದ್ಯಯಾ= ಅವಿದ್ಯೆಯಿಂದ, ಅನುಪಹತೋಪಿ=ಬಾಧಿಸಲ್ಪಡದಿದ್ದರೂ ಜಠರೀಕೃತಲೋಕಯಾತ್ರಃ= ಉದರದಲ್ಲಿ ಸಮಸ್ತಲೋಕಗಳನ್ನು ಇರಿಸಿಕೊಂಡು ಜನಸ್ಯ=ಜನರಿಗೆ ಸುಖಂ ವಿವೃಣ್ವನ್=ತಾನು ನಿದ್ರಿಸುವ (ಪ್ರಳಯ) ಕಾಲದಲ್ಲಿ ಜನರಿಗೆ ಸುಪ್ತಿಯನ್ನಿತ್ತು ಅವರ ಸ್ವರೂಪಸುಖಾನುಭವವನ್ನು ಹೊಂದಿಸಿ ಭೀಮೋರ್ಮಿಮಾಲಿನಿ= ಭಯಂಕರ ತೆರೆಗಳುಳ್ಳ ಜಲೇ ಅಂತಃ=ಸಮುದ್ರಮಧ್ಯದಲ್ಲಿ ಅಹಿಕಶಿಪುಸ್ಪರ್ಶಾನು-ಕೂಲಂ=ಹಾವಿನ ಹಾಸಿಗೆಯ ಸ್ಪರ್ಶವೇ ಸುಖವಾಗುವಂತೆ ನಿದ್ರಾಂ ಉವಾಹ=ನಿದ್ರೆ ಮಾಡಿದನು.

ಜಗತ್ತಿನಲ್ಲಿ ನಿದ್ರೆ ಮಾಡುವವರು ಅವಿದ್ಯೆಯ ಬಾಧವಿಲ್ಲದವರಲ್ಲ. ಉದರದಲ್ಲಿ ಜಗತ್ತನ್ನಿಟ್ಟುಕೊಳ್ಳುವುದಿಲ್ಲ. ಸಮುದ್ರ ಮಧ್ಯದಲ್ಲಿ ಹಾವಿನ ಮೇಲೆ ಮಲಗುವುದಿಲ್ಲ. ಮತ್ತು ಪರರ ಸುಖಕ್ಕಾಗಿಯೂ ಮಲಗುವುದಿಲ್ಲ. ಕಾರಣ ಭಗವಂತನ ನಿದ್ರೆ ಲೋಕವಿಲಕ್ಷಣವಾದುದು ಎಂದು ಬಾವ. ॥೨೦॥

೧೬ನೇ ಶ್ಲೋಕದಲ್ಲಿ ರುದ್ರದೇವರಾಗಲಿ (ಬ್ರಹ್ಮ)ನಾನಾಗಲಿ ಸಾಕ್ಷಾದ್ಭಗವದ-ವತಾರವಲ್ಲ ಎಂದು ಹೇಳಿದ್ದನ್ನೇ ಉಪಪಾದಿಸುತ್ತ ಮತ್ತೆ ನಮಸ್ಕರಿಸುವನು-

**ಯನ್ನಾಭಿಪದ್ಮಭವನಾದಹಮಾಸಮದ್ಯ**
**ಲೋಕತ್ರಯೋಪಕರಣೋ ಯದನುಗ್ರಹೇಣ ।**
**ತಸ್ಮೈ ನಮಸ್ತ ಉದರಸ್ಥಭವಾಯ ಯೋಗ-**
**ನಿದ್ರಾವಸಾನವಿಕಸನ್ನಲಿನೇಕ್ಷಣಾಯ ॥೨೧॥**

ಅದ್ಯ=ಈಗ ಅಹಂ=ನಾನು ಯದನುಗ್ರಹೇಣ=ಯಾವನ ಅನುಗ್ರಹದಿಂದ ಯನ್ನಾಭಿಪದ್ಮಭವನಾತ್=ಯಾವನ ನಾಭಿಕಮಲವೆಂಬ ಮಂದಿರದಿಂದ ಆಸಂ= ಹುಟ್ಟಿದೆನೋ ಮತ್ತು ಯದನುಗ್ರಹೇಣ=ಯಾವನ ಅನುಗ್ರಹದಿಂದ ಲೋಕ-ತ್ರಯೋಪಕರಣಃ ಆಸಂ=ಲೋಕತ್ರಯಗಳು ಶ್ರೀಹರಿಯ ಪೂಜಾಸಾಧನವಾಗಿ-ವುಳ್ಳವನಾದೆನೋ ಅಥವಾ ಲೋಕತ್ರಯಗಳಿಗೆ ಸೃಷ್ಟ್ಯಾದಿಗಳನ್ನು ಮಾಡಿ ಉಪಕಾರಕನಾದೆನೋ ಅಥವಾ ಶ್ರೀಹರಿಯು ಮಾಡುವ ಮೂರು ಲೋಕಗಳ ಸೃಷ್ಟಿಯಲ್ಲಿ ಸಹಕಾರಿಯಾದೆನೋ (ಇದರಿಂದ ಮುಖ್ಯಕರ್ತೃತ್ವ ಶ್ರೀಹರಿಗೆ ಎಂದು ತಿಳಿಯುವುದು) ತಸ್ಮೈ=ಅಂಥ ಉದರಸ್ಥಭವಾಯ=ರುದ್ರನನ್ನು ಉದರದಲ್ಲಿ-ರಿಸಿಕೊಂಡ ಯೋಗನಿದ್ರಾವಸಾನವಿಕಸನ್ನಲಿನೇಕ್ಷಣಾಯ=(ತನ್ನಧ್ಯಾನ ಮಾಡಲು ಕಣ್ಣು ಮುಚ್ಚುವದೆಂಬ) ಯೋಗನಿದ್ರೆಯ ಕೊನೆಗೆ ಅರಳಿದ ಕಣ್ಣುಗಳುಳ್ಳ ತೇ=ನಿನಗೆ ನಮಃ=ನಮಸ್ಕಾರವು. ಶ್ರೀಹರಿಯ ಅಧೀನನಾದ ನಾನು ಹರಿಯ ಅವತಾರನಲ್ಲ. ಪೂರ್ವಕಲ್ಪದಲ್ಲಿ ನಷ್ಟನಾದ ರುದ್ರನು ಈಗಲೂ ಶ್ರೀಹರಿಯ ಉದರದಲ್ಲಿರುವನು. ಅವನು ಹೇಗೆ ಶ್ರೀಹರಿಯ ಸಾಕ್ಷಾದವತಾರನಾದಾನು? ಸಾಧ್ಯವಿಲ್ಲ. ॥೨೧॥

ಈ ರೀತಿಯಾಗಿ ಸ್ತುತಿಸಿ ನಾಲ್ಕು ಶ್ಲೋಕಗಳಿಂದ ತನ್ನ ಅಭೀಷ್ಟವನ್ನು ಪ್ರಾರ್ಥಿಸುವನು -

**ಸೋಽಯಂ ಸಮಸ್ತ ಜಗತಾಂ ಸುಹೃದೇಕ ಆತ್ಮಾ**
**ಸತ್ವೇನ ಯನ್ಮೃಡಯತೇ ಭಗವಾನ್ ಭಗೇನ ।**

**ತೇನೈವ ಮೇ ದೃಶಮನುಸ್ಪೃಶತಾದ್ ಯಥಾಽಹಂ**
**ಸ್ರಕ್ಷ್ಯಾಮಿ ಪೂರ್ವವದಿದಂ ಪ್ರಣತಪ್ರಿಯೋಽಸೌ ॥೨೨॥**

ಸಃ=ಈವರೆಗೆ ಸ್ತುತಿಸಲ್ಪಟ್ಟ ಅಯಂ=ಪರಮಾತ್ಮನು ಸಮಸ್ತಜಗತಾಂ=ಎಲ್ಲ ಪ್ರಪಂಚಕ್ಕೆ ಏಕಃ ಏವ=ಒಬ್ಬನೇ ಸುಹೃತ್=ಅನಿಮಿತ್ತೋಪಕಾರಕನು, ಆತ್ಮಾ=ಸರ್ವೋತ್ಕೃಷ್ಟನು, ಯತ್=ಯಾವನಿಂದ ಸತ್ವೇನ=ಸತ್ವಗುಣದಿಂದ ಅಥವಾ ತನ್ನ ಪರಾಕ್ರಮದಿಂದ ಭಗೇನ=ಐಶ್ವರ್ಯದಿಂದ ವಿಶ್ವಂ=ಪ್ರಪಂಚವು ಮೃಡಯತೇ=ರಕ್ಷಿಸಲ್ಪಡುವುದೋ ತೇನ ಏವ=ಅವನಿಂದಲೇ ಮೇ=ನನಗೆ ಯಥಾ=ಹೇಗೆ ಅಹಂ=ನಾನು ಪೂರ್ವವತ್=ಹಿಂದಿನ ಕಲ್ಪದಲ್ಲಿ ಸೃಷ್ಟಿಸಿದಂತೆ ಇದಂ=ಈ ಜಗತ್ತನ್ನು ಸ್ರಕ್ಷ್ಯಾಮಿ=ಸೃಷ್ಟಿಸುವೆನೊ ತಥಾ=ಹಾಗೆ ದೃಶಂ=ಜ್ಞಾನವನ್ನು ಅನುಸ್ಪೃಶತಾತ್=ಕೊಡಲಿ ಅಸೌ=ಶ್ರೀಹರಿಯು ಪ್ರಣತಪ್ರಿಯಃ=ಶರಣಾಗತವತ್ಸಲನು ನಾನಂತು ಶರಣಾಗಿದ್ದೇನೆ. ಕಾರಣ ಜ್ಞಾನವನ್ನೀಯಲಿ ಎಂದು ಭಾವ. ॥೨೨॥

**ಏಷ ಪ್ರಪನ್ನವರದೋ ರಮಯಾಽತ್ಮಶಕ್ತ್ಯಾ**
**ಯದ್ ಯತ್ ಕರಿಷ್ಯತಿ ಗೃಹೀತಗುಣಾವತಾರಃ ।**
**ತಸ್ಮಿನ್ ಸ್ವವಿಕ್ರಮ ಇದಂ ಸೃಜತೋಽಪಿ ಚೇತೋ**
**ಯುಂಜೀತ ಕರ್ಮಶಮಲಂ ಚ ಯಥಾ ವಿಜಹ್ಯಾಂ ॥೨೩॥**

ಏಷಃ ಪ್ರಪನ್ನವರದಃ=ಈ ಶರಣಾಗತರಿಗೆ ಅಭೀಷ್ಟಪ್ರದನಾದ ಶ್ರೀಹರಿಯು ರಮಯಾ ಸಹ=ಲಕ್ಷ್ಮೀದೇವಿಯಿಂದ ಕೂಡಿಕೊಂಡು ಆತ್ಮಶಕ್ತ್ಯಾ=ತನ್ನ ಸಾಮರ್ಥ್ಯ-ದಿಂದಲೇ, ಗೃಹೀತಗುಣಾವತಾರಃ=ಸ್ಥಿತ್ಯಾದಿಗಳನ್ನು ಮಾಡುವುದಕ್ಕಾಗಿ ಸ್ವೀಕರಿಸಲ್ಪಟ್ಟ ಸತ್ವಾದಿಗುಣಗಳ ಪ್ರವರ್ತಕವಾದ ಬ್ರಹ್ಮಾವಿಷ್ಣು ಮಹೇಶ್ವರರೆಂಬ ಅವತಾರ-ಗಳುಳ್ಳ ಅಥವಾ ವಿಶೇಷವಾಗಿ ಪ್ರಕಾಶಿತವಾದ ಜ್ಞಾನಾದಿಗುಣಗಳುಳ್ಳ ಹಯಗ್ರೀವಾದಿ ಅವತಾರವುಳ್ಳವನು ಯದ್ ಯತ್‌ಕರಿಷ್ಯತಿ=ಯಾವ ಯಾವ ವ್ಯಾಪಾರ ಮಾಡುವನೋ ತಸ್ಮಿನ್ ಸ್ವವಿಕ್ರಮೇ=ಆ ತನ್ನ ಪರಾಕ್ರಮರೂಪವಾದ ಜಗತ್ತಿನ ಪಾಲನ, ಸರ್ಜನ, ಸಂಹಾರ ರೂಪಕಾರ್ಯಗಳಲ್ಲಿ ಇದಂ ಸೃಜತಃ=ಈ ವಿಶ್ವವನ್ನು ಅವನ ಆಜ್ಞೆಯಿಂದ ಸೃಷ್ಟಿಸುವ ಮೇ=ನನ್ನ ಚೇತಃ=ಮನಸ್ಸನ್ನು ಯುಂಜೀತ=ಪ್ರೇರಿಸಲಿ. ನಾನಾವಿಧ ಜಗತ್ಸೃಷ್ಟ್ಯಾದಿ ವ್ಯಾಪಾರದಲ್ಲಿ ತೊಡಗಿದರೂ ಶ್ರೀಹರಿಯ ಪರಾಕ್ರಮವಿಷಯಕ ಸ್ಮರಣ ಹೋಗದೇ ಇರುವಂತೆ ಮಾಡಲಿ. ಯಥಾ ಚ ಕರ್ಮಶಮಲಂ ವಿಜಹ್ಯಾಂ=ತಾಮಸರಾದ ದೈತ್ಯರ ಸೃಷ್ಟಿಯಿಂದ ಬಂದ, ಜ್ಞಾನ-ಮೋಕ್ಷಗಳಿಗೆ ಪ್ರತಿಬಂಧಕ ಪಾಪವನ್ನು ಪರಿಹರಿಸಿಕೊಳ್ಳುವಂತೆ (ಬಿಡುವಂತೆ) ಯುಂಜೀತ=ತನ್ನಲ್ಲಿ ಮನಸ್ಸನ್ನು ಇರಿಸಿಕೊಳ್ಳಲಿ.

'ಆತ್ಮಶಕ್ತ್ಯಾ' ಎಂಬಲ್ಲಿ ಶಕ್ತಿಶಬ್ದಕ್ಕೆ ಭಾರ್ಯಾ ಎಂದರ್ಥ ಮಾಡಿದರೆ ವೈಯರ್ಥ್ಯ ಬರುವುದು (ರಮಾ ಪರಮಾತ್ಮನಭಾರ್ಯಾ ಎಂಬುದು ಸಿದ್ಧವೇ) ಮತ್ತು 'ರಮಯಾ ಸಹ ಕರಿಷ್ಯತಿ' ಎಂದರೆ ಶ್ರೀಹರಿಗೆ ಅಸ್ವಾತಂತ್ರ್ಯ ತೋರುವುದು. ಕಾರಣ ವಿವಕ್ಷಿತ ವ್ಯಾಖ್ಯಾನವನ್ನು ಪ್ರಮಾಣದಿಂದ ತೋರಿಸುವರು–

**ಸ್ವಸಾಮರ್ಥ್ಯಾತ್ ಸ್ವಕರ್ಮಾಣಿ ರಮಯಾ ಸಹ ಕೇಶವಃ ।**
**ಕುರುತೇ ಸ್ವಯಮೇವೈಷಃ ಕಾನಿಚಿತ್ ಪುರುಷೋತ್ತಮಃ ॥**

**ಇತಿ ನಾರದೀಯೇ ।**

ಆತ್ಮಶಕ್ತ್ಯಾ ಎಂಬುದಕ್ಕೆ ತನ್ನ ಸಾಮರ್ಥ್ಯದಿಂದ ಎಂದರ್ಥ ಹೊರತು ತನ್ನ ಹೆಂಡತಿ ಎಂಬ ಅರ್ಥವಲ್ಲ. ಅಂತು ಯಾವ ಕಾರ್ಯಗಳನ್ನು ಶ್ರೀಹರಿಯು ರಮೆಯೊಡನೆ ಮಾಡುವನೋ ಅವುಗಳನ್ನೂ ಸಹ ತನ್ನ ಸಾಮರ್ಥ್ಯದಿಂದಲೇ ಮಾಡುವನು. ರಮೆಯನ್ನು ಸೇರಿಸಿಕೊಂಡದ್ದು ಅವಳಿಗೆ ಅನುಗ್ರಹ ಮಾಡಲೆಂದೇ ಹೊರತು ಅಸಹಾಯಕತೆಯಿಂದಲ್ಲ. ಕಾರಣ ಸ್ವಾತಂತ್ರ್ಯಹಾನಿಯಿಲ್ಲ. ಏಕೆಂದರೆ ಇವನು ಕೆಲವು ಕಾರ್ಯಗಳನ್ನು ರಮೆಯನ್ನು ಬಿಟ್ಟೂ ತಾನೊಬ್ಬನೇ ಮಾಡುವನು. ಅಸ್ವತಂತ್ರನೇ ಆಗಿದ್ದರೆ ಅವಳನ್ನು ಬಿಟ್ಟು ಮಾಡಲಾಗುವುದೇ ಇಲ್ಲ. ಮತ್ತು ಇವನು ಕ್ಷರಾಕ್ಷರ ಪುರುಷೋತ್ತಮನು. ಕಾರಣ ತನ್ನ ಅಧೀನಳಾದ ರಮೆಯನ್ನು ಅಪೇಕ್ಷಿಸಿದರೂ ಸ್ವಾತಂತ್ರ್ಯ ಹಾನಿಯಿಲ್ಲ. ॥೨೩॥

**ನಾಭಿಹೃದಾದಿಹ ಸತೋಽಂಭಸಿ ಯಸ್ಯ ಪುಂಸೋ**
**ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ ।**
**ರೂಪಂ ವಿಚಿತ್ರಮಿದಮಸ್ಯ ವಿವೃಣ್ವತೋ ಮೇ**
**ಮಾ ರೀರಿಷೀಷ್ಟ ನಿಗಮಸ್ಯ ಗಿರಾಂ ವಿಸರ್ಗಃ ॥೨೪॥**

ಇಹ ಅಂಭಸಿ=ಈ ಪ್ರಳಯೋದಕದಲ್ಲಿ ಸತಃ=ಇರುವ ಅನಂತಶಕ್ತೇಃ= ಅಪರಿಮಿತ ಅಸಂಖ್ಯ ಶಕ್ತಿಯುಳ್ಳ ಯಸ್ಯ ಪುಂಸಃ=ಯಾವ ಪುರುಷನ ನಾಭಿಹ್ರದಾತ್=ನಾಭಿಕಮಲದಿಂದ ವಿಜ್ಞಾನಶಕ್ತಿಃ=ವಿಶೇಷಜ್ಞಾನದ ಶಕ್ತಿಯುಳ್ಳ ಮಹತ್ತತ್ವದ ಅಭಿಮಾನಿಯಾದ ನಾನು ಆಸಂ=ಜನಿಸಿದನೋ, ಅಸ್ಯ=ಅಂತಹ ಈ ಪರಮಾತ್ಮನ ರೂಪಂ=ಪ್ರತಿಮೆಯಾಗಿರುವ ವಿಚಿತ್ರಂ=ನಾನಾವಿಧವಾದ ಇದಂ= ವಿಶ್ವವನ್ನು ವಿವೃಣ್ವತಃ=ವಿಸ್ತಾರಗೊಳಿಸುವ ಮೇ=ನನಗೆ ನಿಗಮಸ್ಯ=ವೇದದ ಗಿರಾಂ=ಅವಯವವಾದ ವಾಕ್ಯಗಳ ವಿಸರ್ಗಃ=ವಿಶಿಷ್ಟವಾದ ಉಚ್ಚಾರಣವು, ವ್ಯಾಖ್ಯಾನವು ಮಾ ರೀರಿಷೀಷ್ಟ=ಲೋಪವಾಗುವುದು ಬೇಡ.

ಅನಂತಶಕ್ತಿ ಶ್ರೀಹರಿಯು. ಅವನ ಮಗನಾದ ನಾನು ವಿಜ್ಞಾನಶಕ್ತಿಯು. ಆದ್ದರಿಂದ ಅವನ ಅನುಗ್ರಹದಿಂದ ಬೇರೆ ಕಾರ್ಯದಲ್ಲಿ ತೊಡಗಿದರೂ ವೇದೋಚ್ಚಾರಣೆಯ, ವೇದವ್ಯಾಖ್ಯಾನದ ಲೋಪವಾಗುವುದು ಬೇಡ. ವೇದೈಕ-ವೇದ್ಯನಾದ ಶ್ರೀಹರಿಯ ವಿಶೇಷಜ್ಞಾನ ವೇದಾರ್ಥತಾತ್ಪರ್ಯ ಜ್ಞಾನದಿಂದಲೇ ಆಗಬೇಕು ಕಾರಣ ಈ ರೀತಿ ಪ್ರಾರ್ಥಿಸುವರು. ॥೨೪॥

ಅನುಗ್ರಹಮಾಡುವುದು ಸಿದ್ಧವಾದರೂ ಮಾತಾಡುವುದರಿಂದ ಹೆಚ್ಚು ವಿಶ್ವಾಸವಾಗುವುದೆಂದು ಸೃಷ್ಟಿಯ ವಿಷಯದಲ್ಲಿರುವ ವಿಷಾದವನ್ನು ಕಳೆವ ಮಾತನ್ನಾಡೆಂದು ಪ್ರಾರ್ಥಿಸುವನು–

**ಸೋಽಸಾವದಭ್ರಕರುಣೋ ಭಗವಾನ್ ವಿವೃದ್ಧ-**
**ಪ್ರೇಮಸ್ಮಿತೇನ ನಯನಾಂಬುರುಹಂ ವಿಜೃಂಭನ್ ।**
**ಉತ್ಥಾಯ ವಿಶ್ವವಿಜಯಾಯ ಚ(ಮ)ನೋ ವಿಷಾದಂ**
**ಮಾಧ್ವ್ಯಾ ಗಿರಾಽಪನಯತಾತ್ ಪುರುಷಃ ಪುರಾಣಃ ॥೨೫॥**

ಸಃ ಅಸೌ=ನಾನು ಸ್ತುತಿಸಿದ ಗುಣವುಳ್ಳ ಭಗವಾನ್=ಷಡ್ಗುಣೈಶ್ವರ್ಯ ಸಂಪನ್ನನಾದ ಅದಭ್ರಕರುಣಃ=ಅಪಾರ ದಯೆಯುಳ್ಳ ಪುರಾಣಃ ಪುರುಷಃ= ಪುರಾತನನಾದ ಶ್ರೀಹರಿಯು ವಿಶ್ವವಿಜಯಾಯ=ಜಗತ್ತಿನ ಕಲ್ಯಾಣಕ್ಕಾಗಿ ಉತ್ಥಾಯ=ಶೇಷಪರ್ಯಂಕದಿಂದ ಎದ್ದು ಚ=ಮತ್ತು ಉಪಕಾರಕ್ಕಾಗಿ ವಿವೃದ್ಧ-ಪ್ರೇಮಸ್ಮಿತೇನ=ಪೂರ್ಣವಾದ ಸ್ನೇಹದಿಂದುಂಟಾದ ಮಂದಹಾಸದಿಂದ ಕೂಡಿ ನಯನಾಂಬುರುಹಂ=ಕಣ್ಣೆಂಬ ಕಮಲವನ್ನು ವಿಜೃಂಭನ್=ಅರಳಿಸಿ (ಕಣ್ತೆರೆ-ದೆಂದರ್ಥ) ನಃ=ನಮಗಿರುವ ವಿಷಾದಂ=ಮನೋವ್ಯಥೆಯನ್ನು ಮಾಧ್ವ್ಯಾ= ಮಧುರವಾದ ಗಿರಾ=ಮಾತಿನಿಂದ ಅಪನಯತಾತ್=ಕಳೆಯಲಿ. ಮಧುವಿನಂತೆ ರೋಮಾಂಚಜನಕವಾದ ಮಾತುಗಳಿಂದ ಹೀಗೂ ಅರ್ಥ. ಹೇ ವೇದಗರ್ಭನೇ ಭಯಪಡಬೇಡ. ಸೃಷ್ಟಿಗೆ ಪ್ರಯತ್ನ ಮಾಡು. ನನ್ನ ಅನುಗ್ರಹವಿದೆ. ಮುಂತಾಗಿ ಹೇಳಲಿ ಎಂದು ಭಾವ. ॥೨೫॥

ಶ್ರೀಹರಿಯ ಗುಣಗಳು ಅನಂತವಾದುದರಿಂದ ಜ್ಞಾನಿಯಾದ ವಿರಿಂಚಿಯು ಆಯುಷ್ಯಪೂರ್ಣ ಸ್ತುತಿಸಿದನೇ ? ಎಂಬ ಮಂದಾಶಂಕೆಯನ್ನು ಪರಿಹರಿಸುವರು–

**ಮೈತ್ರೇಯ ಉವಾಚ**

**ಸ್ವಸಂಭವಂ ನಿಶಾಮ್ಯೈವಂ ತಪೋ ವಿದ್ಯಾಸಮಾಧಿಭಿಃ ।**
**ಯಾವನ್ಮನೋವಚಃ ಸ್ತುತ್ವಾ ವಿರರಾಮ ಸ ಖಿನ್ನವತ್ ॥೨೬॥**

ಸ್ವಸಂಭವಂ=ತನಗೆ ಜನಕನಾದ ತಂದೆಯನ್ನು ತಪಃ=ತಪಸ್ಸು ವಿದ್ಯಾ=ನಿಷ್ಠೆ ಸಮಾಧಿಭಿಃ=ಧ್ಯಾನಗಳಿಂದ ನಿಶಾಮ್ಯ=ನೋಡಿ ಏವಂ=ಈ ರೀತಿಯಾಗಿ ಯಾವನ್ಮ-ನೋವಚಃ=ಪ್ರಕೃತ ಕಾರ್ಯಕ್ಕೆ ಎಷ್ಟು ಬೇಕೋ ಅಷ್ಟು, ತಮ್ಮ ಮನ-ಮಾತುಗಳಿಗೆ ನಿಲುಕುವಷ್ಟು ಸ್ತುತ್ವಾ=ಸ್ತೋತ್ರ ಮಾಡಿ ಸಃ=ಬ್ರಹ್ಮದೇವನು ಖಿನ್ನವತ್=ಅಲಂಬುದ್ಧಿ ಇಲ್ಲದವನಂತೆ ವಿರರಾಮ= ವಿರಾಮ ಹೊಂದಿದನು. ಇದರಿಂದ ಅವನಿಗೆ ಇನ್ನೂ ಸ್ತುತಿಸುವ ಇಚ್ಛೆಯಿದೆ ಎಂದು ಸೂಚಿತವಾಗುವುದು. ॥೨೬॥

**ಅಥಾಭಿಪ್ರೇತಮಾಲಕ್ಷ್ಯ ಬ್ರಹ್ಮಣೋ ಮಧುಸೂದನಃ ।**
**ವಿಷಣ್ಣಚೇತಸಸ್ತೇನ ಕಲ್ಪವ್ಯತಿಕರಾಂಭಸಾ ॥೨೭॥**

ಅಥ=ನಂತರ ಮಧುಸೂದನಃ ಶ್ರೀಹರಿಯು ಕಲ್ಪವ್ಯತಿಕರಾಂಭಸಾ=ಪ್ರಳಯ-ಜಲದಿಂದ ವಿಷಣ್ಣಚೇತಸಃ=ಖಿನ್ನ ಮನಸ್ಕನಾದ ಬ್ರಹ್ಮಣಃ=ಬ್ರಹ್ಮದೇವನ ಅಭಿಪ್ರೇತಂ= ಅಭಿಪ್ರಾಯವೇನೆಂದು ತೇನ=ಅವನು ಮಾಡಿದ ಸ್ತೋತ್ರದಿಂದ ಆಲಕ್ಷ್ಯ=ತಿಳಿದು,

**ಲೋಕಸಂಸ್ಥಾನವಿಜ್ಞಾನ ಆತ್ಮನಃ ಪರಿಖಿದ್ಯತಃ ।**
**ತಮಾಹಾಗಾಧಯಾ ವಾಚಾ ಕಶ್ಮಲಂ ಶಮಯನ್ನಿವ ॥೨೮॥**

ಆತ್ಮನಃ=ತನಗೆ ಲೋಕಸಂಸ್ಥಾನವಿಜ್ಞಾನೇ=ಲೋಕಗಳ ಅವಯವ ಸನ್ನಿವೇಶ-ವಿಶೇಷಗಳ ಜ್ಞಾನದಲ್ಲಿ ಪರಿಖಿದ್ಯತಃ=ಅಲಂಬುದ್ಧಿಯನ್ನು ಹೊಂದದಿರುವ, ಬ್ರಹ್ಮಣಃ=ಬ್ರಹ್ಮದೇವರ ಅಭಿಪ್ರಾಯವನ್ನು ಆಲಕ್ಷ್ಯ=ತಿಳಿದು (ಹಿಂದಿನಿಂದ ಅನ್ವಯ) ಕಶ್ಮಲಂ ಶಮಯನ್ನಿವ=ವಿಷಾದವನ್ನು ಪರಿಹರಿಸುವಂತೆ ಅಗಾಧಯಾ ವಾಚಾ= ಗಂಭೀರವಾದ ವಾಣಿಯಿಂದ ತಂ=ಬ್ರಹ್ಮದೇವರಿಗೆ ಆಹ=ಹೇಳಿದನು. 'ಇವ' ಶಬ್ದದಿಂದ ದರ್ಶನದಿಂದಲೇ ವಿಷಾದ ಹೋಗಿದೆ, ಮಾತು ಬೇಕಿಲ್ಲ ಎಂದು ಸೂಚಿಸುವರು.

ಇಲ್ಲಿ 'ಆತ್ಮನಃ' ಎಂಬಲ್ಲಿ ಆತ್ಮಶಬ್ದಕ್ಕೆ ತಾನು(ಬ್ರಹ್ಮ) ಎಂದರ್ಥ. 'ಜಗತಾಂ ಸುಹೃದೇಕ ಆತ್ಮಾ'(೨೨ನೇ ಶ್ಲೋಕ) ಎಂಬಲ್ಲಿ ಹಿಂದೆ ವಿಷ್ಣು ಎಂದರ್ಥ. 'ತತ ಆತ್ಮನಿ ಯೋಗೇನ'(೩೧ನೇ ಶ್ಲೋಕ) ಎಂಬುವ ಮುಂದಿನ ವಾಕ್ಯದಲ್ಲಿ ದೇಹ ಮತ್ತು ಜೀವ ಎಂದರ್ಥ ಅಭಿಪ್ರೇತವಾಗಿದೆ. ಆದ್ದರಿಂದ ಎಲ್ಲಡೆಯಲ್ಲೂ ಆತ್ಮಶಬ್ದಪ್ರವೃತ್ತಿ ಸಮನಾಗಿ ಅಲ್ಲ ಎಂದು ತಿಳಿಸುವರು-

**ಆತ್ಮಶಬ್ದಸ್ಯ ಮುಖ್ಯಾರ್ಥೋ ವಿಷ್ಣುರೇಕಃ ಸನಾತನಃ ।**
**ಸಂದೇಹದೇಹಮನಸೋ ಬುದ್ಧಿಜೀವಾಃ ಸ್ವಯಂ ತಥಾ ।**

**ಬ್ರಹ್ಮಾಪ್ಯಮುಖ್ಯಾಃ ಕ್ರಮಶಃ ಉತ್ಕರ್ಷೋ ಹ್ಯಾತ್ಮತಾ ಭವೇತ್ ॥**
**ಇತಿ ಪ್ರಕಾಶಸಂಹಿತಾಯಾಂ ।**

ಉತ್ಕರ್ಷ ಎಂದರೆ ವ್ಯಾಪ್ತಿಯು ಆತ್ಮಶಬ್ದದ ಪ್ರವೃತ್ತಿನಿಮಿತ್ತವಾದುದರಿಂದ ವ್ಯಾಪ್ತನಾದ ವಿಷ್ಣುವೇ ಆತ್ಮಶಬ್ದದ ಮುಖ್ಯಾರ್ಥನು. ಮಧ್ಯದೇಹ, ದೇಹ, ಮನಸ್ಸು ಬುದ್ಧಿ, ಜೀವ, ತಾನು, ಹಾಗೂ ಬ್ರಹ್ಮದೇವರು ಕ್ರಮವಾಗಿ ಆತ್ಮಶಬ್ದದ ಅಮುಖ್ಯವಾಚ್ಯರು ಎಂದು ಪ್ರಕಾಶಸಂಹಿತೆಯಲ್ಲಿ ಹೇಳಿದೆ. ॥೨೮॥

ಶ್ರೀ ಭಗವಾನುವಾಚ

**ಮಾ ವೇದಗರ್ಭ ಗಾಸ್ತಂದ್ರೀಂ ಸರ್ಗ ಉದ್ಯಮಮಾವಹ ।**
**ತನ್ಮಯಾ ಚೋದಿತಂ ಹ್ಯಗ್ರೇ ಯನ್ಮಾಂ ಪ್ರಾರ್ಥಯತೇ ಭವಾನ್ ॥**

ಹೇ ವೇದಗರ್ಭ=ವೇದಪ್ರತಿಪಾದ್ಯನಾದ ಬ್ರಹ್ಮನೇ ತಂದ್ರೀಂ= ವಿಷಾದನಿಮಿತ್ತಕ ಆಲಸ್ಯವನ್ನು ಮಾ ಗಾಃ=ಹೊಂದಬೇಡ. ಸರ್ಗೇ=ಸೃಷ್ಟಿ ವಿಷಯದಲ್ಲಿ ಉದ್ಯಮಂ ಆವಹ=ಪ್ರಯತ್ನವನ್ನು ಮಾಡು. ಭವಾನ್=ನೀನು ಅಗ್ರೇ=ಹಿಂದೆ ಮಾಂ ಪ್ರಾರ್ಥಯತೇ ಯತ್ ತತ್=ನನ್ನನ್ನು ಪ್ರಾರ್ಥನೆ ಮಾಡಿದೆ ಎಂಬುದು ಅಂದರೆ ನೀನು ಮಾಡಿದ ನನ್ನ ಪ್ರಾರ್ಥನೆಯೂ ಮಯಾ ಚೋದಿತಂ ಹಿ='ತಪ'ಎಂದು ಹೇಳಿ ನನ್ನಿಂದ ಪ್ರೇರಿತವಾದುದೆ. ಪ್ರಾರ್ಥನೆಯಲ್ಲಿಯೂ ನೀನು ಸ್ವತಂತ್ರನಲ್ಲ-ವೆಂದು ಭಾವ.

**ಪ್ರಾರ್ಥನಮಪಿ ಮತ್ಪ್ರೇರಣಮೇವ ।**

ಪ್ರಾರ್ಥನೆಯೂ ನನ್ನ ಪ್ರೇರಣೆಯಿಂದ ಜನ್ಯವೇ ಎಂದರ್ಥ.

ಈಗ, ಪ್ರಾರ್ಥಿತವಾದ ಜ್ಞಾನಸಾಧನವನ್ನು ಉಪದೇಶಿಸುವನು –

**ಭೂಯಶ್ಚ ತಪ ಆತಿಷ್ಠ ವಿದ್ಯಾಂ ಚೈವ ಮದಾಶ್ರಯಾಂ ।**
**ತಾಭ್ಯಾಮಂತರ್ಹೃದಿ ಬ್ರಹ್ಮನ್ ಲೋಕಾನ್ ದ್ರಕ್ಷ್ಯಸ್ಯಪಾವೃತಾನ್ ॥**

ಭೂಯಃ=ಮತ್ತೆ ತಪಃ=ಗುಣೋಪಸಂಹಾರರೂಪ ಆಲೋಚನಾತ್ಮಕಧ್ಯಾನವನ್ನು ಮದಾಶ್ರಯಾಂ=ನನ್ನ ವಿಷಯಕವಾದ ವಿದ್ಯಾಂ=ನಿಷ್ಠೆಯನ್ನು (ಶ್ರದ್ಧಾಭಕ್ತಿಯನ್ನು) ಆತಿಷ್ಠ=ಮಾಡು. ತಾಭ್ಯಾಂ=ಅವುಗಳಿಂದ ಹೃದಿ ಅಂತಃ=ಹೃದಯದ ಒಳಗೆ ಅಪಾವೃತಾನ್=ಆವರಕವಿಲ್ಲದ ಲೋಕಾನ್=ಲೋಕಗಳನ್ನು ಪಶ್ಯಸಿ=ನೋಡುವಿ.

ತಪೋವಿದ್ಯಾಶಬ್ದಗಳ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು -

**ತಪ ಆಲೋಚನಂ ಪ್ರೋಕ್ತಂ ವಿದ್ಯಾ ನಿಷ್ಠಾ ಪ್ರಕೀರ್ತಿತಾ ।**

**ಇತಿ ಕಪಿಲಸಂಹಿತಾಯಾಂ ।**

ತಪಸ್ಸು ಎಂದರೆ ಆಲೋಚನ (ಧ್ಯಾನ). ವಿದ್ಯಾ ಎಂದರೆ ನಿಷ್ಠಾ ಶ್ರದ್ಧಾ ಎಂದರ್ಥ. ॥೩೦॥

**ತತ ಆತ್ಮನಿ ಯೋಗೇನ ಭಕ್ತಿಯುಕ್ತಃ ಸಮಾಹಿತಃ ।**
**ದ್ರಷ್ಟಾಸಿ ಮಾಂ ತತಂ ಬ್ರಹ್ಮನ್ ಮಯಿ ಲೋಕಾಂಸ್ತ್ವಮಾತ್ಮನಿ ॥೩೧॥**

ತತಃ=ಅನಂತರ ತೇನ ಯೋಗೇನ=ಆ ಧ್ಯಾನದಿಂದ ಸಮಾಹಿತಃ= ಯಥಾವಸ್ಥಿತಜ್ಞಾನವುಳ್ಳವನಾಗಿ ಭಕ್ತಿಯುಕ್ತಃ=ಭಕ್ತಿಯಿಂದ ಕೂಡಿದವನಾಗಿ ಆತ್ಮನಿ= ಎಲ್ಲ ದೇಹದಲ್ಲಿ ತತಂ=ಅಂಗುಷ್ಠಪರಿಮಾಣರೂಪದಿಂದ ವ್ಯಾಪ್ತನಾದ ಮಾಂ= ನನ್ನನ್ನು ದ್ರಷ್ಟಾಸಿ=ನೋಡುವಿ. ಬ್ರಹ್ಮನ್=ಬ್ರಹ್ಮನೇ ತ್ವಂ=ನೀನು ಆತ್ಮನಿ=ಜೀವರಲ್ಲಿ-ರುವ, ನಿನ್ನಲ್ಲಿರುವ ಮಯಿ=ನನ್ನಲ್ಲಿ ಲೋಕಾನ್=ಲೋಕಗಳನ್ನು ದ್ರಷ್ಟಾಸಿ= ನೋಡುವಿ.

ಇಲ್ಲಿ ದೇಪದಲ್ಲಿರುವ ಅಂಗುಷ್ಠಪರಿಮಿತನಾದ ಶ್ರೀಹರಿಯಲ್ಲಿ ಲೋಕಗಳಿ-ರುವುದು ಹೇಗೆ? ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು–

**ದೇಹೇ ದೇಹೇ ಹರಿಸ್ತಸ್ಮಿನ್ ಲೋಕಾಃ ಸರ್ವೇ ಪ್ರತಿಷ್ಠಿತಾಃ ।**
**ಅಂಗುಷ್ಠಮಾತ್ರೇಽಪಿ ಪರೇ ಪರಶಕ್ತಿರ್ಯತೋ ವಿಭುಃ ॥ ಇತಿ ಚ ।**
**ಆತ್ಮನಿ ಸ್ಥಿತೇ ಮಯಿ ।**

ಶ್ರೀಹರಿಯು ಪ್ರತಿಯೊಂದು ದೇಹಗಳಲ್ಲಿ ಜೀವರ ಅಂಗುಷ್ಠಪರಿಮಾಣ-ದಿಂದಿರುವನು. ಅಘಟಿತಘಟಕ ಶಕ್ತಿಯುಳ್ಳವನಾದ್ದರಿಂದ ಅಂಗುಷ್ಠ ಪರಿಮಿತನಾಗಿ-ದ್ದರೂ ಅವನಲ್ಲಿ ಎಲ್ಲ ಲೋಕಗಳು ಆಶ್ರಿತವಾಗಿವೆ ಎಂದು ಭಾವ. ಮತ್ತೆ ಆಲೋಚನೆ ಮಾಡಿದರೆ ಎಲ್ಲ ದೇಹದಲ್ಲಿರುವ ಜೀವರಲ್ಲಿರುವ ನನ್ನಲ್ಲಿ ಲೋಕಗಳನ್ನು ಕಾಣುವಿ ಎಂದು ಅಭಿಪ್ರಾಯ. ॥೩೧॥

**ಯದಾ ತು ಸರ್ವಭೂತೇಷು ದಾರುಷ್ವಗ್ನಿಮಿವ ಸ್ಥಿತಂ ।**
**ಪ್ರತಿಚಕ್ಷೀತ ಮಾಂ ಲೋಕೋ ಜಹ್ಯಾತ್ ತರ್ಹ್ಯೇವ ಕಶ್ಮಲಂ ॥೩೨॥**

ಲೋಕಃ=ಮನುಷ್ಯನು ಯದಾ=ಯಾವಾಗ ಸರ್ವಭೂತೇಷು=ಎಲ್ಲ ದೇಹ ಮತ್ತು ಜೀವರುಗಳಲ್ಲಿ ದಾರುಷು=ಕಟ್ಟಿಗೆಯಲ್ಲಿ ಅಗ್ನಿಮಿವ ಸ್ಥಿತಂ=ಅಗ್ನಿಯಂತೆ

ಕಾಣದಲೇ ಇರುವ ಮಾಂ=ನನ್ನನ್ನು ಪ್ರತಿಚಕ್ಷೀತ=ನೋಡುವನೋ ತರ್ಹಿ ಏವ= ಆಗಲೇ ಕಶ್ಮಲಂ ಜಹ್ಯಾತ್=ಬಾಹ್ಯ ಮನೋವಿಷಾದವನ್ನು ಬಿಡುವನು. ॥೩೨॥

ಹಿಂದೆ ಹೇಳಿದ ನನ್ನ(ಭಗವಂತನ) ಜ್ಞಾನವಷ್ಟೇ ಸಾಲದು, ತನ್ನ ಸ್ವರೂಪ ಜ್ಞಾನವೂ ಜೀವನಿಗೆ ಪುರುಷಾರ್ಥಕ್ಕಾಗಿ ಬೇಕು ಎಂದು ಹೇಳುವರು -

**ಯದಾ ರಹಿತಮಾತ್ಮಾನಂ ಭೂತೇಂದ್ರಿಯಗುಣಾಶಯೈಃ ।**
**ಸ್ವರೂಪೇಣ ಮಯೋಪೇತಂ ಪಶ್ಯನ್ ಸ್ವಾರಾಜ್ಯಮೃಚ್ಛತಿ ॥೩೩॥**

ಲೋಕಃ (ಹಿಂದಿನಿಂದ ಅಧ್ಯಾಹೃತ)=ಅಧಿಕಾರಿಯು ಯದಾ=ಯಾವಾಗ ಭೂತಾನಿ=ಪಂಚಮಹಾಭೂತಗಳು, ಇಂದ್ರಿಯಾಣಿ=ಹತ್ತು ಇಂದ್ರಿಯಗಳು, ಗುಣಾಃ=ಶಬ್ದಾದಿಗಳು ಆಶಯೈಃ=ಅಂತಃಕರಣ ಇವುಗಳಿಂದ ರಹಿತಂ=ಈ ಷೋಡಶಕಲಾತ್ಮಕ ದೇಹದಲ್ಲಿ ಪರಿತ್ಯಕ್ತವಾದ ಆತ್ಮಭಾವಂ=ದೇಹಾದಿಗಳೇ ತಾನು ಎಂಬ ಭಾವನೆಯನ್ನು ಬಿಟ್ಟು ಆತ್ಮಾನಂ=ತನ್ನನ್ನು ಸ್ವರೂಪೇಣ=ಹೃದಯದಲ್ಲಿರುವ ತನ್ನ ಸಮಗ್ರರೂಪದಿಂದ ಮಯೋಪೇತಂ=ಹೃದಯದಲ್ಲಿರುವ ನನ್ನ ಸಮೀಪದಲ್ಲಿ-ರುವದಾಗಿ ಪಶ್ಯನ್ ವರ್ತತೇ=ನೋಡುತ್ತಿರುವನೋ ಅಥವಾ ಆತ್ಮಾನಂ= ಹೃದಯದಲ್ಲಿರುವ ತನ್ನನ್ನು ಸ್ವರೂಪೇಣ=ಜೀವನೇ ಎಂದು ಯಾವನು ತಿಳಿಯುವನೋ ಸಃ=ಅವನು ಸ್ವಾರಾಜ್ಯಂ=ತನ್ನ ಇಚ್ಛಾವಿಷಯವಾದ ಮೋಕ್ಷವನ್ನು ಕುರಿತು ಋಚ್ಛತಿ=ಹೋಗುವನು.

ಇಲ್ಲಿ 'ಸ್ವರೂಪೇಣ ಮಯೋಪೇತಂ' ಎಂಬುದನ್ನು ಅನುವಾದ ಮಾಡಿ ಅಭೇದಜ್ಞಾನ ನಿರಾಕರಿಸಲು ಸ್ವರೂಪೇಣ ಎಂಬುದರ ಅರ್ಥವನ್ನು ಸೂಚಿಸುತ್ತ ಮಯೋಪೇತಂ ಎಂಬುದನ್ನು ಉಪಪಾದಿಸುವರು -

**ಸ್ವರೂಪೇಣ ಮಯೋಪೇತಂ = ಹೃದಿಸ್ಥಂ ಜೀವರೂಪಂ ಹಿ ಪರಮೇಶ್ವರಸಹಿತಂ ಭವತಿ ।**

**ತ್ಯಕ್ತ್ವಾ ದೇಹಾದ್ಯಾತ್ಮಭಾವಂ ಜೀವರೂಪೇ ಹೃದಿ ಸ್ಥಿತೇ ।**
**ದೃಷ್ಟ್ವಾತ್ಮಭಾವಂ ತಂ ಚಾಪಿ ಹರಿಪಾದಾಬ್ಜಸಂಸ್ಥಿತಂ ।**
**ಯದಾ ಪಶ್ಯತ್ಯಾಪರೋಕ್ಷ್ಯಾತ್ತದಾ ಮುಕ್ತಿಂ ವ್ರಜತ್ಯಸೌ ॥**

ಇತಿ ದತ್ತಾತ್ರೇಯಯೋಗೇ ।

ದೇಹಾದಿಗಳಲ್ಲಿ ಆತ್ಮತ್ವಾಭಿಮಾನವನ್ನು ಬಿಟ್ಟು, ಹೃದಯದಲ್ಲಿರುವ ಜೀವನಲ್ಲಿ ಆತ್ಮತ್ವವನ್ನು ತಿಳಿದು, ಪರಮಾತ್ಮನ ಪಾದಾವಲಂಬಿಯಾಗಿರುವ ತನ್ನ ನಿಜವಾದ

ಸ್ವರೂಪವನ್ನು ಯಾವಾಗ ನೋಡುವನೋ ಆಗ ಮುಕ್ತನಾಗುವನು ಎಂದು ದತ್ತಾತ್ರೇಯಯೋಗದಲ್ಲಿದೆ. ॥೩೩॥

'ಸೃಷ್ಟಿಸುವಾಗ ನಿನ್ನ ವಿಸ್ಮರಣವಾಗದಿರಲಿ' ಎಂದು ಪ್ರಾರ್ಥಿಸಿದ್ದನ್ನು ಕೊಡುವನು.

**ನಾನಾಕರ್ಮವಿಪಾಕೇನ ಪ್ರಜಾ ಬಹ್ವೀಃ ಸಿಸೃಕ್ಷತಃ ।**
**ನಾತ್ಮಾವಸೀದತ್ಯಸ್ಮಿಂಸ್ತೇ ವರ್ಷೀಯಾನ್ ಮದನುಗ್ರಹಃ ॥೩೪॥**

ನಾನಾಕರ್ಮವಿಪಾಕೇನ=ಅನೇಕವಿಧ ಪುಣ್ಯ-ಪಾಪಗಳ ಫಲರೂಪವಾಗಿ ಬಹ್ವೀಃ=ಬಹಳ ಪ್ರಜಾಃ=ಪ್ರಜೆಗಳನ್ನು ಸಿಸೃಕ್ಷತಃ=ಸೃಷ್ಟಿಸುವ ತೇ=ನಿನಗೆ ಮದನು-ಗ್ರಹಃ ವರ್ಷೀಯಾನ್=ನನ್ನ ಅನುಗ್ರಹವು ಅತ್ಯಧಿಕವಾಗಿದೆ. ಕಾರಣ, ತೇ=ನಿನ್ನ ಆತ್ಮಾ=ಬುದ್ಧಿಯು ಅಸ್ಮಿನ್=ನಾನು ಮಾಡುವ ಸೃಷ್ಟ್ಯಾದಿವ್ಯಾಪಾರದ ವಿಷಯದಲ್ಲಿ ನ ಅವಸೀದತಿ=ನಾಶವಾಗಲಾರದು. ನನ್ನ ಅನುಗ್ರಹದಿಂದ ಮಹೋದ್ಯೋಗದಲ್ಲಿ ತೊಡಗಿದರೂ ನನ್ನ ವಿಸ್ಮರಣವಾಗದು ಎಂದು ಭಾವ. ॥೩೪॥

**ಋಷಿಮಾದ್ಯಂ ನ ಬಧ್ನಾತಿ ಪಾಪೀಯಾಂಸ್ತ್ವಾಂ ರಜೋಗುಣಃ ।**
**ಯನ್ಮನೋ ಮಯಿ ನಿರ್ಬದ್ಧಂ ಪ್ರಜಾಃ ಸಂಸೃಜತೋಽಪಿ ತೇ ॥೩೫॥**

ಯತ್=ಯಾವಕಾರಣ ಪ್ರಜಾಃ=ಪ್ರಜೆಗಳನ್ನು ಸಂಸೃಜತಃ ಅಪಿ=ಸೃಷ್ಟಿಮಾಡುತ್ತಿ-ದ್ದರೂ ತೇ=ನಿನ್ನ ಮನಃ=ಮನಸ್ಸು ಮಯಿ=ನನ್ನಲ್ಲಿ ನಿರ್ಬದ್ಧಂ=ಅತ್ಯಂತ ಆಸಕ್ತವಾ-ಗಿದೆ. ಕಾರಣ ಪಾಪೀಯಾನ್=ಇತರರಿಗೆ ಬಂಧಕವಾದರೂ ರಜೋಗುಣಃ= ರಜೋಗುಣವು ಆದ್ಯಂ=ಮೊದಲಿಗೆ ಜನಿಸಿದ ಋಷಿಂ=ತ್ರಿಕಾಲಜ್ಞಾನಿಯಾದ ತ್ವಾಂ= ನಿನ್ನನ್ನು ನ ಬಧ್ನಾತಿ= ಬಂಧಿಸಲಾರದು. ॥೩೫॥

**ಜ್ಞಾತೋಽಹಂ ಭವತಾ ತ್ವದ್ಯ ದುರ್ವಿಜ್ಞೇಯೋಽಪಿ ದೇಹಿನಾಂ ।**
**ಯನ್ಮಾಂ ತ್ವಂ ಮನ್ಯಸೇ ಯುಕ್ತಂ ಭೂತೇಂದ್ರಿಯಗುಣಾತ್ಮಭಿಃ ॥೩೬॥**

ಯತ್=ಯಾವ ಕಾರಣ ತ್ವಂ=ನೀನು ಮಾಂ=ನನ್ನನ್ನು ಭೂತೇಂದ್ರಿಯಗುಣಾ-ತ್ಮಭಿಃ=ಪಂಚಮಹಾಭೂತಗಳು, ಇಂದ್ರಿಯಗಳು, ವಿಷಯಗಳು, ಮನಸ್ಸುಗಳಿಂದ ಯುಕ್ತಂ=ನಿಯಮ್ಯವಾದ ಇವುಗಳಿಂದ ಕೂಡಿದವನು ಅರ್ಥಾತ್ ಇವುಗಳ ನಿಯಾಮಕನೆಂದು ಮನ್ಯಸೇ=ಯಥಾರ್ಥವಾಗಿ ತಿಳಿದಿರುವಿ ಆದ್ದರಿಂದ ದೇಹಿನಾಂ=ಜನರಿಗೆ ದುರ್ವಿಜ್ಞೇಯೋಽಪಿ=ತಿಳಿಯಲಾಗದವನಾದರೂ ಅದ್ಯ= ಈಗ ಭವತಾ=ನಿನ್ನಿಂದ ಅಹಂ ಜ್ಞಾತಃ=ನಾನು ತಿಳಿಯಲ್ಪಟ್ಟಿರುವೆನು.

ಕಾಣದಲೇ ಇರುವ ಮಾಂ=ನನ್ನನ್ನು ಪ್ರತಿಚಕ್ಷೀತ=ನೋಡುವನೋ ತರ್ಹಿ ಏವ= ಆಗಲೇ ಕಶ್ಮಲಂ ಜಹ್ಯಾತ್=ಬಾಹ್ಯ ಮನೋವಿಷಾದವನ್ನು ಬಿಡುವನು. ॥೩೨॥

ಹಿಂದೆ ಹೇಳಿದ ನನ್ನ(ಭಗವಂತನ) ಜ್ಞಾನವಷ್ಟೇ ಸಾಲದು, ತನ್ನ ಸ್ವರೂಪ ಜ್ಞಾನವೂ ಜೀವನಿಗೆ ಪುರುಷಾರ್ಥಕ್ಕಾಗಿ ಬೇಕು ಎಂದು ಹೇಳುವರು –

**ಯದಾ ರಹಿತಮಾತ್ಮನಂ ಭೂತೇಂದ್ರಿಯಗುಣಾಶಯೈಃ ।**
**ಸ್ವರೂಪೇಣ ಮಯೋಪೇತಂ ಪಶ್ಯನ್ ಸ್ವಾರಾಜ್ಯಮೃಚ್ಛತಿ ॥೩೩॥**

ಲೋಕಃ (ಹಿಂದಿನಿಂದ ಅಧ್ಯಾಹೃತ)=ಅಧಿಕಾರಿಯು ಯದಾ=ಯಾವಾಗ ಭೂತಾನಿ=ಪಂಚಮಹಾಭೂತಗಳು, ಇಂದ್ರಿಯಾಣಿ=ಹತ್ತು ಇಂದ್ರಿಯಗಳು, ಗುಣಾಃ=ಶಬ್ದಾದಿಗಳು ಆಶಯೈಃ=ಅಂತಃಕರಣ ಇವುಗಳಿಂದ ರಹಿತಂ=ಈ ಷೋಡಶಕಲಾತ್ಮಕ ದೇಹದಲ್ಲಿ ಪರಿತ್ಯಕ್ತವಾದ ಆತ್ಮಭಾವಂ=ದೇಹಾದಿಗಳೇ ತಾನು ಎಂಬ ಭಾವನೆಯನ್ನು ಬಿಟ್ಟು ಆತ್ಮಾನಂ=ತನ್ನನ್ನು ಸ್ವರೂಪೇಣ=ಹೃದಯದಲ್ಲಿರುವ ತನ್ನ ಸಮಗ್ರರೂಪದಿಂದ ಮಯೋಪೇತಂ=ಹೃದಯದಲ್ಲಿರುವ ನನ್ನ ಸಮೀಪದಲ್ಲಿ-ರುವದಾಗಿ ಪಶ್ಯನ್ ವರ್ತತೇ=ನೋಡುತ್ತಿರುವನೋ ಅಥವಾ ಆತ್ಮಾನಂ= ಹೃದಯದಲ್ಲಿರುವ ತನ್ನನ್ನು ಸ್ವರೂಪೇಣ=ಜೀವನೇ ಎಂದು ಯಾವನು ತಿಳಿಯುವನೋ ಸಃ=ಅವನು ಸ್ವಾರಾಜ್ಯಂ=ತನ್ನ ಇಚ್ಛಾವಿಷಯವಾದ ಮೋಕ್ಷವನ್ನು ಕುರಿತು ಋಚ್ಛತಿ=ಹೋಗುವನು.

ಇಲ್ಲಿ 'ಸ್ವರೂಪೇಣ ಮಯೋಪೇತಂ' ಎಂಬುದನ್ನು ಅನುವಾದ ಮಾಡಿ ಅಭೇದಜ್ಞಾನ ನಿರಾಕರಿಸಲು ಸ್ವರೂಪೇಣ ಎಂಬುದರ ಅರ್ಥವನ್ನು ಸೂಚಿಸುತ್ತ ಮಯೋಪೇತಂ ಎಂಬುದನ್ನು ಉಪಪಾದಿಸುವರು –

**ಸ್ವರೂಪೇಣ ಮಯೋಪೇತಂ = ಹೃದಿಸ್ಥಂ ಜೀವರೂಪಂ ಹಿ ಪರಮೇಶ್ವರಸಹಿತಂ ಭವತಿ ।**

**ತ್ಯಕ್ತ್ವಾ ದೇಹಾದ್ಯಾತ್ಮಭಾವಂ ಜೀವರೂಪೇ ಹೃದಿ ಸ್ಥಿತೇ ।**
**ದೃಷ್ಟ್ವಾತ್ಮಭಾವಂ ತಂ ಚಾಪಿ ಹರಿಪಾದಾಬ್ಜಸಂಸ್ಥಿತಂ ।**
**ಯದಾ ಪಶ್ಯತ್ಯಾಪರೋಕ್ಷ್ಯಾತ್ತದಾ ಮುಕ್ತಿಂ ವ್ರಜತ್ಯಸೌ ॥**
**ಇತಿ ದತ್ತಾತ್ರೇಯಯೋಗೇ ।**

ದೇಹಾದಿಗಳಲ್ಲಿ ಆತ್ಮತ್ವಾಭಿಮಾನವನ್ನು ಬಿಟ್ಟು, ಹೃದಯದಲ್ಲಿರುವ ಜೀವನಲ್ಲಿ ಆತ್ಮತ್ವವನ್ನು ತಿಳಿದು, ಪರಮಾತ್ಮನ ಪಾದಾವಲಂಬಿಯಾಗಿರುವ ತನ್ನ ನಿಜವಾದ

ಸ್ವರೂಪವನ್ನು ಯಾವಾಗ ನೋಡುವನೋ ಆಗ ಮುಕ್ತನಾಗುವನು ಎಂದು ದತ್ತಾತ್ರೇಯಯೋಗದಲ್ಲಿದೆ. ॥೩೩॥

'ಸೃಷ್ಟಿಸುವಾಗ ನಿನ್ನ ವಿಸ್ಮರಣವಾಗದಿರಲಿ' ಎಂದು ಪ್ರಾರ್ಥಿಸಿದ್ದನ್ನು ಕೊಡುವನು.

**ನಾನಾಕರ್ಮವಿಪಾಕೇನ ಪ್ರಜಾ ಬಹ್ವೀಃ ಸಿಸೃಕ್ಷತಃ ।**
**ನಾತ್ಮಾವಸೀದತ್ಯಸ್ಮಿಂಸ್ತೇ ವರ್ಷೀಯಾನ್ ಮದನುಗ್ರಹಃ ॥೩೪॥**

ನಾನಾಕರ್ಮವಿಪಾಕೇನ=ಅನೇಕವಿಧ ಪುಣ್ಯ-ಪಾಪಗಳ ಫಲರೂಪವಾಗಿ ಬಹ್ವೀಃ=ಬಹಳ ಪ್ರಜಾಃ=ಪ್ರಜೆಗಳನ್ನು ಸಿಸೃಕ್ಷತಃ=ಸೃಷ್ಟಿಸುವ ತೇ=ನಿನಗೆ ಮದನು-ಗ್ರಹಃ ವರ್ಷೀಯಾನ್=ನನ್ನ ಅನುಗ್ರಹವು ಅತ್ಯಧಿಕವಾಗಿದೆ. ಕಾರಣ, ತೇ=ನಿನ್ನ ಆತ್ಮಾ=ಬುದ್ಧಿಯು ಅಸ್ಮಿನ್=ನಾನು ಮಾಡುವ ಸೃಷ್ಟ್ಯಾದಿವ್ಯಾಪಾರದ ವಿಷಯದಲ್ಲಿ ನ ಅವಸೀದತಿ=ನಾಶವಾಗಲಾರದು. ನನ್ನ ಅನುಗ್ರಹದಿಂದ ಮಹೋದ್ಯೋಗದಲ್ಲಿ ತೊಡಗಿದರೂ ನನ್ನ ವಿಸ್ಮರಣವಾಗದು ಎಂದು ಭಾವ. ॥೩೪॥

**ಋಷಿಮಾದ್ಯಂ ನ ಬಧ್ನಾತಿ ಪಾಪೀಯಾಂಸ್ತ್ವಾಂ ರಜೋಗುಣಃ ।**
**ಯನ್ಮನೋ ಮಯಿ ನಿರ್ಬದ್ಧಂ ಪ್ರಜಾಃ ಸಂಸೃಜತೋಽಪಿ ತೇ ॥೩೫॥**

ಯತ್=ಯಾವಕಾರಣ ಪ್ರಜಾಃ=ಪ್ರಜೆಗಳನ್ನು ಸಂಸೃಜತಃ ಅಪಿ=ಸೃಷ್ಟಿಮಾಡುತ್ತಿ-ದ್ದರೂ ತೇ=ನಿನ್ನ ಮನಃ=ಮನಸ್ಸು ಮಯಿ=ನನ್ನಲ್ಲಿ ನಿರ್ಬದ್ಧಂ=ಅತ್ಯಂತ ಆಸಕ್ತವಾ-ಗಿದೆ. ಕಾರಣ ಪಾಪೀಯಾನ್=ಇತರರಿಗೆ ಬಂಧಕವಾದರೂ ರಜೋಗುಣಃ= ರಜೋಗುಣವು ಆದ್ಯಂ=ಮೊದಲಿಗೆ ಜನಿಸಿದ ಋಷಿಂ=ತ್ರಿಕಾಲಜ್ಞಾನಿಯಾದ ತ್ವಾಂ= ನಿನ್ನನ್ನು ನ ಬಧ್ನಾತಿ= ಬಂಧಿಸಲಾರದು. ॥೩೫॥

**ಜ್ಞಾತೋಽಹಂ ಭವತಾ ತ್ವದ್ಯ ದುರ್ವಿಜ್ಞೇಯೋಽಪಿ ದೇಹಿನಾಂ ।**
**ಯನ್ಮಾಂ ತ್ವಂ ಮನ್ಯಸೇ ಯುಕ್ತಂ ಭೂತೇಂದ್ರಿಯಗುಣಾತ್ಮಭಿಃ ॥೩೬॥**

ಯತ್=ಯಾವ ಕಾರಣ ತ್ವಂ=ನೀನು ಮಾಂ=ನನ್ನನ್ನು ಭೂತೇಂದ್ರಿಯಗುಣಾ-ತ್ಮಭಿಃ=ಪಂಚಮಹಾಭೂತಗಳು, ಇಂದ್ರಿಯಗಳು, ವಿಷಯಗಳು, ಮನಸ್ಸುಗಳಿಂದ ಯುಕ್ತಂ=ನಿಯಮ್ಯವಾದ ಇವುಗಳಿಂದ ಕೂಡಿದವನು ಅರ್ಥಾತ್ ಇವುಗಳ ನಿಯಾಮಕನೆಂದು ಮನ್ಯಸೇ=ಯಥಾರ್ಥವಾಗಿ ತಿಳಿದಿರುವಿ ಆದ್ದರಿಂದ ದೇಹಿನಾಂ=ಜನರಿಗೆ ದುರ್ವಿಜ್ಞೇಯೋಽಪಿ=ತಿಳಿಯಲಾಗದವನಾದರೂ ಅದ್ಯ= ಈಗ ಭವತಾ=ನಿನ್ನಿಂದ ಅಹಂ ಜ್ಞಾತಃ=ನಾನು ತಿಳಿಯಲ್ಪಟ್ಟಿರುವೆನು.

ಭೂತೇಂದ್ರಿಯಗುಣಾತ್ಮಯುಕ್ತತ್ವವು ಜೀವನಂತೆ ಭಗವಂತನಿಗೆ ಇಲ್ಲ ಎನ್ನುವದನ್ನು ಪ್ರಮಾಣದಿಂದ ತಿಳಿಸುವರು -

**ಭೂತೇಂದ್ರಿಯಮನೋಬುದ್ಧಿತ್ರಿಗುಣಾದಿಷು ಸರ್ವಶಃ ।**
**ಯುಕ್ತಂ ನಿಯಾಮಕತಯಾ ಪಶ್ಯನ್ ಜಾನಾತಿ ಕೇಶವಂ ॥ ಇತಿ ಚ ।**

ಭೂತಗಳು, ಇಂದ್ರಿಯಗಳು, ಮನಸ್ಸು ಬುದ್ಧಿ ಸತ್ವಾದಿಗುಣಗಳೇ ಮೊದಲಾದ ಎಲ್ಲ ಪದಾರ್ಥಗಳಲ್ಲಿ ನಿಯಾಮಕನಾಗಿರುವನು ಎಂದು ತಿಳಿಯುವವನೇ ಸರಿಯಾದ ಶ್ರೀಹರಿ ಜ್ಞಾನಿಯು. ॥೩೬॥

**ತುಭ್ಯಂ ಮದ್ವಿಚಿಕಿತ್ಸಾಯಾಮಾತ್ಮಾ ಮೇ ದರ್ಶಿತೋ ಬಹಿಃ ।**
**ನಾಲೇನ ಸಲಿಲೇ ಮೂಲಂ ಪುಷ್ಕರಸ್ಯ ವಿಚಿನ್ವತಃ ॥೩೭॥**

ಸಲೀಲೇ=ಪ್ರಳಯಜಲದಲ್ಲಿ ಪುಷ್ಕರಸ್ಯ=ಕಮಲದ ಮೂಲಂ=ಕಾರಣನಾದ ನನ್ನನ್ನು ನಾಲೇನ=ದೇಟಿನ ಮಾರ್ಗದಿಂದ ವಿಚಿನ್ವತಃ=ಹುಡುಕುತ್ತಿರುವ ತವ=ನಿನಗೆ ಮದ್ವಿಚಿಕಿತ್ಸಾಯಾಂ=ನನ್ನನ್ನು ನೋಡಬೇಕೆಂಬ ಇಚ್ಛೆಯಿಂದ ಮನೋವಿಷಾದ-ವಾಗುತ್ತಿರಲು ತುಭ್ಯಂ=ನಿನಗೆ ಮೇ ಆತ್ಮಾ=ನನ್ನ ದೇಹವು (ಹೊರಗಿರುವ) ದರ್ಶಿತಃ=ತೋರಿಸಲ್ಪಟ್ಟಿತು. ನನ್ನ ದರ್ಶನ ನಿನಗಾದುದೂ ನನ್ನ ಅನುಗ್ರಹವೇ ಎಂದು ಭಾವ. ॥೩೭॥

**ಯಚ್ಚಕರ್ಥ ಮಮ ಸ್ತೋತ್ರಂ ಮತ್ಕಥಾಭ್ಯುದಯಾಂಕಿತಮ್ ।**
**ಯದ್ವಾ ತಪಸಿ ನಿಷ್ಠಾ ಚ ಸ ಏಷ ಮದನುಗ್ರಹಃ ॥೩೮॥**

ಮತ್ಕಥಾಭ್ಯುದಯಾಂಕಿತಂ=ನನ್ನನ್ನು ಪ್ರತಿಪಾದಿಸುವ ವಾಕ್ಯಪ್ರಬಂಧದ ಉತ್ಕರ್ಷದಿಂದ ಕೂಡಿದ ಮಮ=ನನ್ನ ಸ್ತೋತ್ರಂ=ಸ್ತುತಿಯನ್ನು ಯಚ್ಚಕರ್ಥ=ಏನು ಮಾಡಿದೆಯೋ ಯದ್ವಾ=ಅಥವಾ ತಪಸಿ ನಿಷ್ಠಾ ಚ=ತಪಸ್ಸಿನಲ್ಲಿ ಶ್ರದ್ದೆಯಾಗಲಿ ಏನಿದೆಯೋ ಸಃ ಏಷಃ=ಅದೆಲ್ಲವೂ ಮದನುಗ್ರಹಃ=ನನ್ನ ಅನುಗ್ರಹ ಸಾಧ್ಯವೇ. ಕಾರಣ ನಿನಗಾಗಿ ನಾನು ತಪಸ್ಸು ಪ್ರಾರ್ಥನೆಗಳನ್ನು ಮಾಡಿದ್ದರಿಂದ ಪ್ರತ್ಯಕ್ಷನಾದಿ, ಸುಮ್ಮನೆ ಅಲ್ಲ, ನಿನ್ನದೇನಿಲ್ಲ ಎಂಬ ಗರ್ವ ಸಲ್ಲ ಎಂದು ಬಲ್ಲವನೇ ಬಲ್ಲ. ॥೩೮॥

**ಪ್ರೀತೋಽಹಮಸ್ತು ಭದ್ರಂ ತೇ ಲೋಕಾನಾಂ ವಿಜಯೇಚ್ಛಯಾ ।**
**ಯದಸ್ತೌಷೀದ್ಗುಣಮಯಂ ನಿರ್ಗುಣಂ ಮಾಽನುವರ್ಣಯನ್ ॥**

ಲೋಕಾನಾಂ ವಿಜಯೇಚ್ಛಯಾ=ಲೋಕಗಳನ್ನು ಸೃಷ್ಟಿಮಾಡುವ ಇಚ್ಛೆಯಿಂದ ಮಾಂ=ನನ್ನನ್ನು ಗುಣಮಯಂ=ಆನಂದಾದಿಗುಣಪೂರ್ಣನೆಂದು ನಿರ್ಗುಣಂ=

ಬಂಧಕವಾದ ಸತ್ವಾದಿಗುಣರಹಿತನೆಂದೂ ಅನುವರ್ಣಯನ್=ಪ್ರತಿಪಾದಿಸುತ್ತ ಯತ್=ಯಾವ ಕಾರಣ ಅಸ್ತೌಷೀತ್=ಸ್ತೋತ್ರ ಮಾಡಿದೆಯೋ ಆದ್ದರಿಂದ ಅಹಂ=ನಾನು ಪ್ರೀತಃ ಅಸ್ಮಿ=ಸಂತುಷ್ಟನಾಗಿದ್ದೇನೆ. ತೇ ಭದ್ರಂ ಅಸ್ತು=ನನ್ನ ಪ್ರೀತಿಯಿಂದ ನಿನಗೆ ಕಲ್ಯಾಣವಾಗಲಿ.

'ಗುಣಮಯ, ನಿರ್ಗುಣ'ಪದಗಳಿಗೆ ವ್ಯಾಹತಿಯನ್ನು ಪರಿಹರಿಸಲು ಸಮಾಖ್ಯಾ ಪ್ರಮಾಣವನ್ನು ಹೇಳುವರು –

**ಸಾರ್ವಜ್ಞಾದಿಗುಣೈರ್ಯುಕ್ತಂ ಸತ್ವಾದಿಗುಣವರ್ಜಿತಂ ।**
**ಯೋ ಜಾನಾತಿ ಹರಿಂ ತಸ್ಯ ಪ್ರೀತೋ ಭವತಿ ಕೇಶವಃ ॥**
**ಇತಿ ವ್ಯೋಮಸಂಹಿತಾಯಾಂ ।**

ಯಾರು ಶ್ರೀಹರಿಯನ್ನು ಸಾರ್ವಜ್ಞ್ಯಮುಂತಾದ ಗುಣಗಳಿಂದ ಕೂಡಿದವನೆಂದು, ಸತ್ವ ರಜಃಸ್ತಮೋಗುಣಗಳಿಂದ ರಹಿತನೆಂದು ತಿಳಿಯುವರೋ ಅವರ ವಿಷಯದಲ್ಲಿ ಸಂತುಷ್ಟನಾಗುವನು ಎಂದು ಭಾವ. ಇದರಿಂದ ಗುಣೋತ್ಕರ್ಷ ಜ್ಞಾನವೇ ಪ್ರೀತಿಸಾಧನ ಹೊರತು ನಿರ್ಗುಣ ಜ್ಞಾನವಲ್ಲ ಎಂದು ಸೂಚಿತವಾಗುವುದು.

ಇಲ್ಲಿ 'ವಿಜಯೇಚ್ಛಯಾ'ಎಂದು ವಿಜಯೇಚ್ಛೆಯಿಂದ ಬ್ರಹ್ಮದೇವರು ಸ್ತುತಿಸಿದರು ಎಂದು ಬ್ರಹ್ಮದೇವರುಮಾಡಿದ ಸ್ತೋತ್ರವು ಕಾಮನೆಯಿಂದ ಮಾಡಿದ್ದೆಂದು ಹೇಳಲ್ಪಡುವುದು. ಉತ್ತಮಾಧಿಕಾರಿಗಳಿಗೆ ಸಕಾಮಕರ್ಮನಿಷಿದ್ಧವಾದುದು, ಕಾರಣ ಉಪಪತ್ತಿಯನ್ನು ಪ್ರಮಾಣದಿಂದ ಹೇಳುವರು –

**ಆಧಿಕಾರಿಕದೇವಾನಾಂ ಸ್ವಾಧಿಕಾರಾಭಿಕಾಮನಂ ।**
**ಭವತಿ ಪ್ರೀತಯೇ ವಿಷ್ಣೋಃ ಭಕ್ತ್ಯಾದ್ಯೈರಪಿ ಯತ್ಸದಾ ॥ ಇತಿ ಚ ।**

ಆಧಿಕಾರಿಕ ದೇವತೆಗಳಿಗೆ ತಮ್ಮ ಅಧಿಕಾರಕ್ಕೆ ಸಂಬಂಧಿಸಿದ್ದನ್ನು ಇಚ್ಛಿಸುವದು ಮತ್ತು ಯಾವಾಗಲೂ ಭಕ್ತಿ ಜ್ಞಾನಗಳನ್ನು ಇಚ್ಛಿಸುವುದು ಶ್ರೀಹರಿಯ ಪ್ರೀತಿಗೆ ಕಾರಣವಾಗಿದೆ. ಆದ್ದರಿಂದ ಬ್ರಹ್ಮದೇವರಿಗೆ ಸೃಷ್ಟಿಯ ಇಚ್ಛೆಯು ಅವರ ಅಧಿಕಾರಕ್ಕೆ ಸಂಬಂಧಿಸಿದ್ದರಿಂದ ಹರಿಪ್ರೀತಿಕಾರಣವೇ ಹೊರತು ನಿಷಿದ್ಧವಲ್ಲವೆಂದು ಭಾವ. ॥೩೯॥

**ಯ ಏತೇನ ಪುಮಾನ್ ನಿತ್ಯಂ ಸ್ತುತ್ವಾ ಸ್ತೋತ್ರೇಣ ಮಾಂ ಭಜೇತ್ ।**
**ತಸ್ಯಾಹಂ ಸಂಪ್ರಸೀದೇಯಂ ಸರ್ವಕಾಮವರೇಶ್ವರಃ ॥೪೦॥**

ಮಾಂ=ನನ್ನನ್ನು ಯಃ ಪುಮಾನ್=ಯಾವ ಅಧಿಕಾರಿಯು ಏತೇನ=ನೀನು ಮಾಡಿದ ಸ್ತೋತ್ರೇಣ ಸ್ತುತ್ವಾ=ಗುಣಪ್ರತಿಪಾದಕ ವಾಕ್ಯಗಳಿಂದ ಹೊಗಳಿ ನಿತ್ಯಂ= ಪ್ರತಿನಿತ್ಯವೂ ಭಜೇತ್=ಸೇವಿಸುವನೋ ತಸ್ಯ=ಅವನಿಗೆ ಸರ್ವಕಾಮವರೇಶ್ವರಃ= ಎಲ್ಲ ಅಭೀಷ್ಟಗಳನ್ನೂ ಕೊಡಲು ಸಮರ್ಥನಾದ ಅಹಂ=ನಾನು ಸಂಪ್ರಸೀದೇಯಂ= ಸಂತುಷ್ಟನಾಗುವೆನು. ಅಂದ ಮೇಲೆ ನಿನ್ನ ಮೇಲೆ ಪ್ರಸನ್ನನಾಗಿರುವೆನೆಂದು ಪ್ರತ್ಯೇಕ ಹೇಳಬೇಕಿಲ್ಲ. ॥೪೦॥

**ಪೂರ್ತೇನ ತಪಸಾ ಯಜ್ಞೈರ್ದಾನೈರ್ಯೋಗೈಃ ಸಮಾಧಿನಾ ।**
**ರಾಜ್ಯಂ ನಿಶ್ರೇಯಸಂ ಪುಂಸಾಂ ಮತ್ಪ್ರೀತಿಸ್ತತ್ವವಿನ್ಮತಂ ॥೪೧॥**

ಪೂರ್ತೇನ=ಪ್ರಪಾದಾನದಿಂದ (ಪ್ರಪಾ=ಅರವಟ್ಟಿಗೆ, ಬೇಸಿಗೆಯಲ್ಲಿ ನೀರು, ಮಜ್ಜಿಗೆ ದಾನ ಮಾಡುವುದು) ತಪಸಾ=ತಪಸ್ಸಿನಿಂದ ಯಜ್ಞೈಃ=ಯಜ್ಞಗಳಿಂದ ದಾನೈಃ=ಚಿನ್ನಮುಂತಾದ ದಾನಗಳಿಂದ ಯೋಗೈಃ=ಭಕ್ತಿ,ವೈರಾಗ್ಯ ಮುಂತಾದ ಉಪಾಯಗಳಿಂದ ಸಮಾಧಿನಾ=ಧ್ಯಾನದಿಂದ ಪುಂಸಾಂ=ಅಧಿಕಾರಿಗಳಿಗೆ ನಿಶ್ರೇಯಸಂ (ನಿಶ್ರೇಯಸೇ)=ಮೋಕ್ಷದಲ್ಲಿ ಮತ್ಪ್ರೀತಿಃ=ನನ್ನ ಪ್ರಸಾದವೇ ರಾಜ್ಯಂ=ರಂಜನೀಯ-ವಾದುದು, ಅಪೇಕ್ಷಣೀಯವಾದುದು ಎಂದು ತತ್ವವಿನ್ಮತಂ=ಜ್ಞಾನಿಗಳ ಅಭಿಪ್ರಾಯ. ಅಜ್ಞಾನಿಗಳು ಪೂರ್ತಾದಿಗಳಿಂದ ಸ್ವರ್ಗಾದಿಗಳು ಅಪೇಕ್ಷಣೀಯವೆನ್ನುವರು.

ಮೂಲದಲ್ಲಿ ಪ್ರೀತಿಯೇ ನಿಶ್ರೇಯಸ್ಸು ರಾಜ್ಯ ಎಂದು ಹೇಳುವುದು ಹೇಗೆ? ಎಂದರೆ ಹೇಳುವರು–

**ನಿಶ್ರೇಯಸಂ ರಾಜ್ಯಂ । ಮೋಕ್ಷೇಽಪಿ ರಂಜನೀಯಾ ಮತ್ಪ್ರೀತಿರೇವ । ಮುಕ್ತಸ್ಯಾಪಿ ಹರೇಃ ಪ್ರೀತಿಃ ಸರ್ವತೋಽಪ್ಯನುರಜ್ಯತೇ । ಇತಿ ವಾಮನೇ ।**

ಮೋಕ್ಷದಲ್ಲಿಯೂ ನನ್ನ ಪ್ರೀತ್ರಿಯೇ ಅಪೇಕ್ಷಣೀಯವಾದುದು. ಮುಕ್ತ-ರಿಂದಲೂ, ಉತ್ತಮಾಧಿಕಾರಿಗಳಿಂದಲೂ ಪೂರ್ತಾದಿಗಳೆಲ್ಲದರಿಂದ ಶ್ರೀಹರಿ-ಪ್ರೀತಿಯೇ ಯೋಗ್ಯತಾನುಸಾರವಾಗಿ ಅಪೇಕ್ಷಿಸಲ್ಪಡುವುದು.

ಅಂತು ಮೂಲದಲ್ಲಿ 'ನಿಶ್ರೇಯಸಂ'ಎನ್ನುವಲ್ಲಿ ಪ್ರಥಮಾ ವಿಭಕ್ತಿಯು 'ಸಪ್ತಸು ಪ್ರಥಮಾ' ಎಂದಿರುವುದರಿಂದ ಸಪ್ತಮೀ ಅರ್ಥದಲ್ಲಿದೆ. ರಾಜ್ಯ ಶಬ್ದಕ್ಕೆ ದೇಶವೆಂದರ್ಥವಲ್ಲ 'ರಂಜ್'ರಾಗೇ' ಎಂದು ಧಾತು ಇರುವುದರಿಂದ ರಂಜನೀಯ ಎಂದರ್ಥ ಎಂದು ಹೇಳಿದಂತಾಯಿತು. ಉತ್ತಮರಿಗೆ ಮೋಕ್ಷವು ಪರಮಾತ್ಮನ ಪ್ರೀತಿಗಾಗಿಯೇ. ॥೪೧॥

**ಅಹಮಾತ್ಮಾತ್ಮನಾಂ ಧಾತಃ ಪ್ರೇಷ್ಠಃ ಸನ್ ಪ್ರೇಯಸಾಮಪಿ ।**
**ಅತೋ ಮಯಿ ರತಿಂ ಕುರ್ಯಾದ್ ದೇಹಾದಿರ್ಯತ್ ಕೃತೇ ಪ್ರಿಯಃ ॥**

ಹೇ ಧಾತಃ=ಎಲೋ ಚತುರ್ಮುಖನೇ ! ಅಹಂ=ನಾನು, ದೇಹಾದಿಃ=ದೇಹ ಮೊದಲಾದವು ಯತ್ಕೃತೇ=ಯಾರಿಗಾಗಿ ಪ್ರಿಯಃ=ಪ್ರಿಯವೋ ತೇಷಾಂ ಪ್ರೇಯಸಾಂ ಅಪಿ=ಆ ದೇಹಾದಿಗಳಿಗಿಂತ ಅತಿಶಯ ಪ್ರಿಯರಾದ ಆತ್ಮನಾಂ= ಜೀವರಿಗೆ ಪ್ರೇಷ್ಠಃ ಸನ್=ಪ್ರಿಯತ್ವವನ್ನು ತಂದು ಕೊಡುವವನಾದದ್ದರಿಂದ ಅತ್ಯಂತ ಪ್ರೀತಿ ವಿಷಯನಾಗಿ ಆತ್ಮಾ=ಅಂತರ್ಯಾಮಿಯಾಗಿರುವೆನು. ಅತಃ=ಆದ್ದರಿಂದ ಮಯಿ=ನನ್ನಲ್ಲಿ ರತಿಂ=ಪ್ರೀತಿಯನ್ನು ಕುರ್ಯಾತ್=ಮಾಡಬೇಕು.

ಇಲ್ಲಿ ಪರಮಾತ್ಮನಿಗೆ ಜೀವನಿಗಿಂತ ಹೆಚ್ಚು ಪ್ರಿಯತ್ವವನ್ನು ಹೇಳುವರು. ಅದು ಹೇಗೆಂದು ತಿಳಿಸುವ ಪ್ರಮಾಣ ಹೇಳುವರು –

**ಸರ್ವತೋಽಪಿ ಪ್ರಿಯೋ ಹ್ಯಾತ್ಮಾ ತಸ್ಯಾಪಿ ಪ್ರಿಯತಾಂ ಹರಿಃ ।**
**ಆಪಾದಯತಿ ಯತ್ ತಸ್ಮಾತ್ ಸ್ವಾತ್ಮನೋಽಪಿ ಪ್ರಿಯೋ ಹರಿಃ ॥**
**ಇತಿ ಬ್ರಹ್ಮವೈವರ್ತೇ ।**

ಎಲ್ಲ ವಸ್ತುಗಳಿಗಿಂತ ತಾನು ತನಗೆ ಅತಿ ಪ್ರಿಯನು. ತನಗೂ ತನ್ನಲ್ಲಿ ಪ್ರೀತಿಯನ್ನು ಕೊಡುವವನು ಶ್ರೀಹರಿಯೇ ಆದ್ದರಿಂದ ತನಗಿಂತಲೂ ಹರಿಯು ಪ್ರಿಯನು ಎಂದು ಬ್ರಹ್ಮವೈವರ್ತದಲ್ಲಿದೆ. ॥೪೨॥

**ಸರ್ವವೇದಮಯೇನೇಮಾ ಆತ್ಮನಾಽಽತ್ಮಾತ್ಮಯೋಗಿನಾ ।**
**ಪ್ರಜಾಃ ಸೃಜ ಯಥಾಪೂರ್ವಂ ಯಾಶ್ಚ ಮಯ್ಯನುಶೇರತೇ ॥೪೩॥**

ಸರ್ವವೇದಮಯೇನ='ಪ್ರಜಾಪತೇ ನ ತ್ವದೇತಾನ್ಯನ್ಯೋ ಜಾತಾನಿ ಪರಿತಾ ಬಭೂವ' ಮುಂತಾದ ವೇದಪ್ರತಿಪಾದ್ಯನಾದ ಅಥವಾ ಸರ್ವವೇದಾರ್ಥ ವಿಷಯನಾದ ಆತ್ಮಾತ್ಮಯೋಗಿನಾ=ಜೀವರಿಗೆ ಸ್ವಾಮಿಯಾದ, ಈ ಭಗವಂತನ ಧ್ಯಾನರೂಪಯೋಗವುಳ್ಳ ಆತ್ಮನಾ=ಮನಸ್ಸಿನಿಂದ ಯಾಃ=ಯಾವ ದೇವ, ಋಷಿ ಮುಂತಾದವರು ಮಯಿ=ನನ್ನಲ್ಲಿ ಅನುಶೇರತೇ=ಮಲಗಿರುವರೋ ತಾಃ ಇಮಾಃ ಪ್ರಜಾಃ=ಆ ಈ ಪ್ರಜೆಗಳನ್ನು ಯಥಾಪೂರ್ವಂ=ಪೂರ್ವಕಲ್ಪದಂತೆ ಸೃಜ=ಸೃಷ್ಟಿಸು. ವೇದಾರ್ಥಾನುಸಾರವಾಗಿ ನಾಮಾತ್ಮಕ, ರೂಪಾತ್ಮಕ ಪ್ರಪಂಚವನ್ನು ಸೃಷ್ಟಿಸು ಎಂದರ್ಥ. ॥೪೩॥

**ಮೈತ್ರೇಯ ಉವಾಚ**

**ತಸ್ಮಾ ಏವಂ ಜಗತ್ಸ್ರಷ್ಟಾ ಪ್ರಧಾನಪುರುಷೇಶ್ವರಃ ।**
**ವ್ಯಜ್ಯೇದಂ ಸ್ವೇನ ರೂಪೇಣ ಕಂಜನಾಭಸ್ತಿರೋದಧೇ ॥೪೪॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂದೇ ದಶಮೋಽಧ್ಯಾಯಃ ॥***

ಏವಂ=ಈ ರೀತಿಯಾಗಿ ಜಗತ್ಸ್ರಷ್ಟಾ=ವಿಶ್ವ ವಿಧಾತೃವಾದ ಪ್ರಧಾನಪುರುಷೇಶ್ವರಃ=ಪ್ರಕೃತಿ,ಬ್ರಹ್ಮರುಗಳಿಗೆ ನಿಯಾಮಕನಾದ ಕಂಜನಾಭಃ=ಪದ್ಮನಾಭನು ಇದಂ=ಬ್ರಹ್ಮನ ಮನಸ್ಸಿನಲ್ಲಿ ಸನ್ನಿಹಿತವಾದದ್ದನ್ನು, ಸೃಜ್ಯವಾದದ್ದನ್ನು ವ್ಯಜ್ಯ=ವ್ಯಕ್ತಗೊಳಿಸಿ ಸ್ವೇನ ರೂಪೇಣ ತಿರೋದಧೇ=ತನ್ನ ರೂಪದಿಂದ ಕಾಣದಾದನು. ॥೪೪॥

***ಇಲ್ಲಿಗೆ ಹತ್ತನೆಯ ಅಧ್ಯಾಯವು ಮುಗಿಯಿತು.***

# ಹತ್ತನೆಯ ಅಧ್ಯಾಯದ ತಾತ್ಪರ್ಯ

ಬ್ರಹ್ಮದೇವರು - ಶ್ರೀಹರಿಯೇ, ಬಹುಕಾಲದ ತಪಸ್ಸಿನ ಫಲವಾಗಿ ನಿನ್ನನ್ನು ಕಾಣುವನಾದೆನು. ಅಂದಮೇಲೆ ಜೀವರು ನಿನ್ನನ್ನು ತಿಳಿಯಲಾಗುವುದೇ ಇಲ್ಲವೆಂಬ ಮಾತು ಸರಿಯಲ್ಲ. ಆಗ ಅವರು ನಿನ್ನನ್ನು ಕಾಣದಿರುವುದು ಅವರ ಪಾಪದಿಂದ; ಶ್ರೀಹರಿಯು ಸ್ವಾಮಿ, ನಾವು ಭೃತ್ಯರು ಎಂಬ ಜ್ಞಾನವಿಲ್ಲದ್ದರಿಂದ. ನಿನಗಿಂತ ಭಿನ್ನವಾದ ಜೀವ ಜಡಾತ್ಮಕಪ್ರಪಂಚವು ಇದ್ದೇ ಇದೆ. ಆದರೆ ಅದು ಸ್ವತಂತ್ರವಾಗಿ ಇಲ್ಲ. ಅಶುದ್ಧವಾದ ಈ ಜಗತ್ತು ನಿನ್ನ ಅಧೀನ. ನೀನು ಪ್ರಾಕೃತತತ್ವಗಳಲ್ಲಿ ಅಂತರ್ಯಾಮಿಯಾಗಿದ್ದು ಬಹುರೂಪಗಳಿಂದ ಪ್ರಕಾಶಮಾನ-ನಾಗಿರುವೆ. ನೀನೊಬ್ಬನೇ ನಿರ್ದೋಷನು. ಜ್ಞಾನಸ್ವರೂಪಿಯಾದ ನೀನು ಪ್ರಾಕೃತ ಗುಣಸಂಬಂಧರಹಿತನು. ನನಗೆ ಈ ಕಾಣಿಸಿರುವ ರೂಪವೇ ಮತ್ಸ್ಯಾದಿ ಅನಂತರೂಪಗಳಿಗೆ ಕಾರಣವಾದುದು. ಈ ರೂಪಗಳನ್ನು ಸಜ್ಜನರ ಅನುಗ್ರಹಕ್ಕಾಗಿ ವ್ಯಕ್ತಮಾಡುವೆ. ಇವೆಲ್ಲವೂ ಅನಾದಿಕಾಲದಿಂದಲೂ ಇದ್ದೇ ಇವೆ. ಈ ನಿನ್ನರೂಪದ ನಾಭಿಕಮಲದಿಂದಲೇ ನಾನು ಆವಿರ್ಭವಿಸಿರುವೆನು. ಆನಂದಮಯವೂ, ನಿರ್ವಿಕಾರವೂ, ಸರ್ವಸಮರ್ಥವೂ ಆದ ನಿನ್ನ ಈ ರೂಪಕ್ಕೆ ನಿರ್ಗುಣರೂಪವೆಂದು ಹೆಸರು. ಇದೇ ಜಗತ್ತನ್ನು ಸೃಷ್ಟಿಸುವುದು. ಇದಕ್ಕೊಂದು ಸೃಷ್ಟಿಯಿಲ್ಲ. ಎಲ್ಲಕ್ಕೂ ಕಾರಣವಾದ ನಿನ್ನ ಈ ರೂಪವು ಜಗತ್ತಿಗಿಂತ ವಿಲಕ್ಷಣವಾದುದು. ಭೂತಗಳಲ್ಲಿಯೂ ಇಂದ್ರಿಯಗಳಲ್ಲಿಯೂ ವ್ಯಾಪಕವಾದುದು. ಇಂತಹ ನಿನ್ನ ರೂಪವನ್ನು ನಿನ್ನ ಅನುಗ್ರಹದಿಂದಲೇ ನಾನು ಕಂಡೆನು. ನಿನ್ನ ಈ ಅತ್ಯಂತ ಮಂಗಳಕರವಾದ ರೂಪವನ್ನು ನಿನ್ನ ಭಕ್ತರೆಲ್ಲರೂ ಕಾಣುವರು. ವಿಷಯಾಸಕ್ತರಾದ ತಮೋಯೋಗ್ಯರಾದ ದೈತ್ಯರು ನಿನ್ನನ್ನು ಭಕ್ತಿಯಿಂದ ಸೇವಿಸುವುದಿಲ್ಲವಾಗಿ ಅವರು ಈ ರೂಪವನ್ನು ಕಾಣಲು ಸಾಧ್ಯವೇ ಇಲ್ಲ. ಅಂತರಂಗದಲ್ಲಿ ನಿನ್ನನ್ನು ಕಾಣುವ ಮಹನೀಯರು ಶಾಸ್ತ್ರರೀತಿಯಿಂದ ನಿನ್ನ ಗುಣಗಳನ್ನು ಶ್ರವಣಮಾಡಿ ಧ್ಯಾನಿಸಿ ಈ ನಿನ್ನ ರೂಪವನ್ನು ಹೃದಯದಲ್ಲಿ ಕಾಣುವರು. ಭಕ್ತಿಯಿಂದ ಬದ್ಧನಾದ ನೀನು ಅವರ ಹೃದಯದಲ್ಲಿ ಯಾವಾಗಲೂ ಭಾಸವಾಗುತ್ತಿರುವೆ. ಸಮಸ್ತ ಭಯಗಳಿಂದ ದೂರಮಾಡುವ ನಿನ್ನ ಪಾದಗಳನ್ನು ಸೇವಿಸುವತನಕ ಲೌಕಿಕವಿಷಯಗಳ ಭಯವು ತಪ್ಪಿದ್ದಲ್ಲ. ಸರ್ವದುಃಖಕ್ಕೂ ಮೂಲಕಾರಣವಾದ ಮಮಕಾರವು ಹೋಗುವುದಿಲ್ಲ. ನಿನ್ನ ಕಥಾಪ್ರಸಂಗವು ಎಲ್ಲ ಅಮಂಗಳಗಳನ್ನೂ ನಾಶಪಡಿಸುವುದು. ತಮೋ-ಯೋಗ್ಯರಿಗೆ ನೀನು ಎಂದೂ ನಿನ್ನ ಕಡೆಗೆ ಮನಸ್ಸುಕೊಡುವುದಿಲ್ಲ. ಆದ್ದರಿಂದ ಅವರ ಇಂದ್ರಿಯಗಳು ನಿನ್ನ ಕಥೆಯಲ್ಲಿ ವಿಮುಖವಾಗಿರುವುವು ದೀನರಾದ ಅವರ

ಮನಸ್ಸು ದುರಾಶೆಯಿಂದ ತುಂಬಿರುವುದು ಹೀಗಾಗಿ ಒಳ್ಳೆಯ ಮನಃಪ್ರವೃತ್ತಿ ಇಲ್ಲದ ಅವರು ಅತ್ಯಲ್ಪ ಸುಖಕ್ಕಾಗಿ ಜನ್ಮಜನ್ಮಗಳಲ್ಲಿಯೂ ಕೆಟ್ಟಕೆಲಸಗಳನ್ನೇ ಮಾಡುತ್ತಾ ಕೊನೆಗೆ ನಿತ್ಯತಮಸ್ಸನ್ನೇ ಸೇರುವರು. ಅವರು ನಿನ್ನನ್ನು ತಿಳಿಯುವುದೆಂತು? ಆದರೆ ಮುಕ್ತಿಯೋಗ್ಯರಾದ ಜನರೂ ಅಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕತಾಪಗಳಿಗೆ ತುತ್ತಾಗಿ ವಿಷಯಾಭಿಲಾಷೆ, ಕೋಪ ಮೊದಲಾದವುಗಳಿಗೆ ವಶರಾಗಿ ಮತ್ತೆ ಮತ್ತೆ ದುಃಖಕ್ಕೀಡಾಗುತ್ತಿರುವರು. ವಿಷಯ-ವೈರಾಗ್ಯ, ಅದರಿಂದ ನಿನ್ನ ಜ್ಞಾನ ನಿನ್ನ ಅನುಗ್ರಹಗಳನ್ನು ಸಂಪಾದಿಸಿಕೊಳ್ಳದಿರುವ ಇವರನ್ನು ನೋಡಿ ನನ್ನ ಮನಸ್ಸು ಕನಿಕರಗೊಳ್ಳುತ್ತದೆ. ಇವರು ಮಾಡುವ ಧ್ಯಾನ, ನೋಡುವ ನೋಟ, ಕೇಳುವ ಶಬ್ದ ಇವು ಪ್ರತಿಯೊಂದು ನಿನ್ನ ಇಚ್ಛೆಯ ಬಲವೆಂದು ತಿಳಿದು ಯಾವಾಗ ನಿನ್ನನ್ನು ಕಾಣುವರೋ ಆಗಲೇ ಸಂಸಾರವು ನಿವೃತ್ತಿ-ಯಾಗುವುದು. ಈ ಸಂಸಾರವಾದರೋ ಮುಖ್ಯಪ್ರಯೋಜನರಹಿತವಾದುದು. ಧರ್ಮಕಾರ್ಯಗಳಿಗೆ ಎಡೆಗೊಡುವುದಾದರೂ ದುಃಖಪರಂಪರೆಗೆ ಆಶ್ರಯ-ವಾಗಿರುವುದು. ನಿನ್ನ ಅಪರೋಕ್ಷದಿಂದ ಇದನ್ನು ಸಂಪೂರ್ಣವಾಗಿ ಹೋಗಲಾಡಿಸಿ-ಕೊಂಡು ಮುಕ್ತರಾದ ಈ ಜನರು ಮುಕ್ತಿಯಲ್ಲಿಯೂ ನಿನ್ನ ಅಧೀನತೆಯನ್ನು ಮರೆಯುವುದಿಲ್ಲ. ಅಲ್ಲಿಮಾಡುವ ಕಾರ್ಯಗಳೂ ನಿನ್ನ ಇಚ್ಛಾಬಲದಿಂದಲೇ ನಡೆಯುವುವೆಂದರಿಯುವರು. ನಿತ್ಯಸಂಸಾರಿಗಳಾದರೋ ಜ್ಞಾನಿಗಳ ವಂಶಗಳಲ್ಲಿ ಜನಿಸಿದರೂ ನಿನ್ನ ಮಹಿಮೆಯನ್ನರಿಯದೆ ಅಜ್ಞಾನದಲ್ಲಿ ಮಗ್ನರಾಗಿ, ಲೌಕಿಕ-ವಿಷಯಗಳಲ್ಲಿ ಪ್ರಸಕ್ತವಾದ ಇಂದ್ರಿಯಸಮೂಹವುಳ್ಳವರಾದ್ದರಿಂದ ಅನೇಕ ಬಯಕೆಗಳಿಂದ ತುಂಬಿದ ಮನಸ್ಸಿನವರಾಗಿ ಸರಿಯಾಗಿ ನಿದ್ರೆಮಾಡಲುಕೂಡ ಸಮಯವಿಲ್ಲದೆ ಭೂ, ಸ್ವರ್ಗ ಮತ್ತು ನರಕಗಳಲ್ಲಿ ಸಂಚರಿಸುತ್ತಾ ದುಃಖ-ಮಿಶ್ರವಾದ ಸುಖಕ್ಕೆ ಗುರಿಯಾಗುವರು. ಇವರಿಗೆ ನಿತ್ಯವೂ ನಿರ್ದುಃಖವೂ ಆದ ಸುಖವು ಎಲ್ಲಿಯದು ?

ಪುರುಷೋತ್ತಮನೇ, ಮುಕ್ತಿಯೋಗ್ಯರಿಗೆ ನೀನು ಸದ್ಗುರುಗಳನ್ನು ದೊರಕಿಸುವೆ. ಅವರಿಂದ ಶಾಸ್ತ್ರಾರ್ಥವನ್ನು ಅರಿಯುವಂತೆ ಮಾಡುವೆ. ಹೀಗೆ ನಿನ್ನ ಮಹಿಮೆಯನ್ನು ತಿಳಿಸಿಕೊಟ್ಟು ನಿನ್ನಲ್ಲಿ ಅತ್ಯಂತ ಪ್ರೇಮವನ್ನು ಹುಟ್ಟಿಸುವೆ. ಈ ಭಕ್ತಿಯಿಂದ ಅವರ ಮನಸ್ಸನ್ನು ಶುದ್ಧಿಗೊಳಿಸುವೆ. ಹೀಗೆ ಶುದ್ಧವಾದ ಬಾಹ್ಯ ಮತ್ತು ಅಂತರಿಂದ್ರಿಯಗಳಿಂದ ಅವರಿಗಿಷ್ಟವಾದ ಶುದ್ಧವಾದ ನಿನ್ನ ಯಾವುದಾದರೂ ಮೂರ್ತಿಯನ್ನು ಅವರ ಯೋಗ್ಯತೆಗೆ ತಕ್ಕಂತೆ ಉಪಾಸಿಸುವಂತೆ ಮಾಡುವೆ. ಅವರಲ್ಲಿ ಅತಿಶಯ ಅನುಗ್ರಹಮಾಡಿ ಆ ನಿನ್ನ ಮೂರ್ತಿಯನ್ನು ವ್ಯಕ್ತಗೊಳಿಸಿ

ಸುದೃಢವಾದ ಭಕ್ತಿಯನ್ನು ಕೊಡುವೆ. ಇದರಿಂದ ಅವರಿಗೆ ಸಂಸಾರವಿಲ್ಲದಂತೆ ಅನುಗ್ರಮಾಡುವೆ. ನೀನು ಜೀವರಿಗೆ ಅನಿಮಿತ್ತ ಬಂಧುವು. ಒಬ್ಬನೇ ಎಲ್ಲರಲ್ಲಿಯೂ ಅಂತರ್ಯಾಮಿಯಾಗಿದ್ದು ಅವರವರ ಯೋಗ್ಯತೆಯನ್ನು ವ್ಯಕ್ತಗೊಳಿಸಿ ಅನುಗ್ರಹಿಸುತ್ತೀ ಹೀಗೆ ಎಲ್ಲರಲ್ಲಿಯೂ ನೀನು ಇದ್ದರೂ ನಿನಗೆ ದುಃಖಸಂಬಂಧ-ವಿಲ್ಲ. ಆದ್ದರಿಂದಲೇ ದೇವತೆಗಳು ಎಲ್ಲ ಭೂತಗಳಲ್ಲಿಯೂ ದಯೆಮಾಡುವರು. ಈ ಭಾವನೆಯು ದುಷ್ಟರಿಗೆಂದೂ ಬರುವುದಿಲ್ಲ. ಹೀಗೆ ದೇವತೆಗಳಿಂದ ಆರಾಧಿತನಾದ ನೀನು ಮೋಕ್ಷಕ್ಕೆ ಕಾರಣವಾದ ಅತ್ಯಂತಾನುಗ್ರಹವನ್ನು ಮಾಡುತ್ತೀ. ಆದರೆ ನಿನ್ನ ಆರಾಧನೆಯು ನಿಷ್ಕಾಮದಿಂದ ಕೂಡಿದುದಾಗಿರಬೇಕು. ಸಕಾಮವಾದ ಆರಾಧನೆಯಿಂದ ನೀನು ಮುಕ್ತಿಯನ್ನು ಕೊಡುವುದಿಲ್ಲ.

ಅಧಿಕಾರಿಚೇತನರು ಮಾಡುವ ಯಜ್ಞ, ದಾನ, ತಪಸ್ಸುಮತ್ತು ವ್ರತಾಚರಣೆ ಮೊದಲಾದ ಧರ್ಮಕಾರ್ಯಗಳು ನಿನ್ನಲ್ಲಿ ಅರ್ಪಿತಗಳಾಗದಿದ್ದಲ್ಲಿ ಅವು ಯಾವುವೂ ನಿನ್ನ ಅನುಗ್ರಹಕ್ಕೆ ಕಾರಣಗಳಾಗುವುದಿಲ್ಲ. ನೀನು ನಿನ್ನ ಸಾಮರ್ಥ್ಯದಿಂದಲೇ ಎಲ್ಲ ಬಗೆಯ ಭೇದಮೋಹವಿಲ್ಲದಿರುವೆ. ನೀನು ಅಪ್ರಾಕೃತ ಜ್ಞಾನಸ್ವರೂಪಿಯು ನಿನ್ನ ಚೇಷ್ಟೆಗಳು ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ನಿಮಿತ್ತವಾಗಿರುವುವು. ನೀನೊಬ್ಬನೇ ಮುಖ್ಯನಾದ ಈಶ್ವರನು. ನಿನಗೆಂದೂ ಮಾಯೆಯು ಆವರಣವಾಗಲಾರದು. ನಿನಗೆ ವಿಕಾರವಿಲ್ಲ, ನೀನು ಜನನವಿಲ್ಲದವನು. ಇಂತಹ ನಿನ್ನನ್ನು ಅಭ್ಯಾಸಬಲದಿಂದ ಭಕ್ತಿಯಿಂದ ಮತ್ತು ನಿನ್ನ ಅನುಗ್ರಹದಿಂದ ಯಾರು ಮರಣಕಾಲದಲ್ಲಿ ಸ್ಮರಿಸುವರೋ ಅಂತಹ ಚೇತನರು ತಮ್ಮ ಜನ್ಮ ಜನ್ಮಾಂತರಗಳ ಪಾಪಗಳನ್ನು ಹೋಗಲಾಡಿಸಿಕೊಂಡು ಕಾಲಕ್ರಮದಲ್ಲಿ ನಿನ್ನನ್ನು ಸೇರುವರು. ಹೇ ದೇವ ! ನೀನು ಅನಂತಾಸನ ಶ್ವೇತದ್ವೀಪ ಮತ್ತು ವೈಕುಂಠಗಳಲ್ಲಿ ವ್ಯಕ್ತನಾಗಿರುವೆ. ಮುಖ್ಯನಾದ ನಿನಗೆ ಕಾರಣವಸ್ತುವಿಲ್ಲವು. ಇಂತಹ ನೀನು ವಿಷ್ಣುರೂಪದಿಂದಲೂ, ನನ್ನಲ್ಲಿ ಅಂತರ್ಯಾಮಿಯಾಗಿರುವ ಬ್ರಹ್ಮನಾಮಕರೂಪದಿಂದಲೂ ರುದ್ರನಲ್ಲಿ ಅಂತರ್ಯಾಮಿಯಾಗಿರುವ ಈಶ್ವರ-ನಾಮಕರೂಪದಿಂದಲೂ ಕ್ರಮವಾಗಿ ಸ್ಥಿತಿ, ಸೃಷ್ಟಿ ಮತ್ತು ಲಯಗಳಿಗೆ ಕಾರಣ-ನಾಗಿರುವೆ. ಸೃಷ್ಟಿಸುವ ನಾನಾವಿಧ ಪದಾರ್ಥಗಳಲ್ಲಿ ನಿಯಾಮಕಗಳಾದ ನಾನಾವಿಧ ರೂಪಗಳಿಂದ ವ್ಯಕ್ತನಾಗಿರುವೆ. ಹೀಗಿರುವುದರಿಂದಲೇ ನೀನು ಜಗ್ಗತ್ತಕ್ಕೆ ಆಶ್ರಯನಾಗಿರುವೆ ನಿನಗೆ ನಮಸ್ಕಾರ. ಜನರು ಮಾಡಬಾರದ ಕೆಲಸದಲ್ಲಿ ಆಸಕ್ತ-ರಾಗಿರುವರು. ನಿನ್ನ ಆಜ್ಞಾರೂಪವಾದ ಶ್ರುತಿಸ್ಮೃತಿಗಳಲ್ಲಿ ಹೇಳಿದ ವಿಹಿತಕರ್ಮಗಳಲ್ಲಿ ಆಸಕ್ತಿ ಇಲ್ಲದೆ ಹೋಗಿರುವರು. ಇಂತಹ ಜನರ ಆಯುಸ್ಸು ವ್ಯರ್ಥವಾಗುವುದು. ಕಾಲರೂಪಿಯಾದ ನೀನು ಇವರ ಜೀವಿತವನ್ನು ಮುಗಿಸುವೆ.

ನಾನಿರುವ ಸ್ಥಾನವು ಎಲ್ಲಜೀವರಿಂದ ಪೂಜ್ಯವಾದುದು. ಈ ಸತ್ಯಲೋಕವು ನನ್ನ ನೂರು ವರ್ಷಗಳ ಕಾಲವಿರುವುದು. ಇಂತಹ ಸ್ಥಾನದಲ್ಲಿರುವ ನಾನೂ ಕೂಡ ನಿನಗೆ ಹೆದರುತ್ತೇನೆ. ನಿನ್ನ ಗುಣಗಳನ್ನೇ ಉಪಾಸನೆಮಾಡುತ್ತೇನೆ. ಇದರಿಂದ ನೀನು ನನಗೆ ಮೋಕ್ಷದಲ್ಲಿ ಆನಂದವೃದ್ಧಿಯನ್ನು ಕೊಡುವೆ. ನೀನು ನಿನ್ನ ಇಚ್ಛೆಯಿಂದಲೇ ಧರ್ಮಪಾಲನೆಗಾಗಿ ಅವತಾರಗಳನ್ನು ಮಾಡುವೆ. ಯಾವ ಅವತಾರದಲ್ಲಿಯೂ ನಿನಗೆ ಜ್ಞಾನಲೋಪವಿಲ್ಲ. ಯಾವಾಗಲೂ ಆನಂದಾನುಭವದಿಂದ ಕೂಡಿರುವೆ. ನಿನಗೆ ಅವಿದ್ಯೆಯ ಸಂಪರ್ಕವಿಲ್ಲ. ಪ್ರಳಯ ಕಾಲದಲ್ಲಿ ನೀನು ಜೀವರನ್ನು ಉದರದಲ್ಲಿ ಇಟ್ಟುಕೊಂಡು ಶೇಷಶಾಯಿಯಾಗಿ ಮಲಗಿರುವೆ. ಮುಕ್ತಿಯೋಗ್ಯ ಜನರ ಸುಖಾಭಿವೃದ್ಧಿಗಾಗಿ ಸೃಷ್ಟಿಸುವೆ. ನಿನ್ನ ಈ ಯೋಗ ನಿದ್ರೆಯೂ ಸಹ ಅವರ ಸುಖಕ್ಕಾಗಿ. ನಿನ್ನ ನಾಭಿಕಮಲದಿಂದಲೇ ನಾನು ವ್ಯಕ್ತನಾದುದು. ರುದ್ರನೂ ನಿನ್ನ ಉದರದಲ್ಲಿಯೇ ಇರುವನು. ನೀನು ನಮ್ಮನ್ನು ಅನುಗ್ರಹಿಸಿ ನಿನ್ನ ಜಗತ್ಸೃಷ್ಟಿ-ಸಂಹಾರ ಕಾರ್ಯಗಳಲ್ಲಿ ಸಹಕಾರಿಗಳನ್ನಾಗಿ ಮಾಡಿಕೊಂಡಿರುವೆ.

ದೇವ ದೇವ ! ನೀನು ಎಲ್ಲ ಜೀವರಿಗೂ ನಿರ್ನಿಮಿತ್ತ ಸ್ನೇಹಿತನು. ಭಕ್ತ ವತ್ಸಲನು. ನಿನ್ನ ಸಾಮರ್ಥ್ಯದಿಂದ ನನಗೆ ಜ್ಞಾನವನ್ನು ಕೊಡು. ನಿನ್ನ ಅನುಗ್ರಹದಿಂದ ನಾನು ಹಿಂದಿನಂತೆ ಜಗತ್ತನ್ನು ಸೃಷ್ಟಿಸುವೆನು. ನೀನು ಹಯಗ್ರೀವ ಮೊದಲಾದ ಅವತಾರಗಳನ್ನು ಮಾಡಿ ಗುಣಗಳನ್ನು ಪ್ರಕಾಶಪಡಿಸುವೆ. ನಿನ್ನ ಹೆಂಡತಿಯಾದ ರಮಾದೇವಿಯಿಂದ ಕೂಡಿ ಅನೇಕ ಪರಾಕ್ರಮಗಳನ್ನು ತೋರಿಸಿರುವೆ. ನಿನ್ನ ಆ ಪರಾಕ್ರಮಗಳನ್ನು ಸ್ಮರಿಸುತ್ತಿದ್ದರೆ ಪಾಪಗಳು ಪರಿಹಾರವಾಗುವವು. ಆದ್ದರಿಂದ ಸೃಷ್ಟಿಕಾರ್ಯದಲ್ಲಿ ಮಗ್ನನಾಗಿದ್ದರೂ ನನ್ನ ಮನಸ್ಸು ನಿನ್ನಲ್ಲಿಯೇ ಆಸಕ್ತವಾಗಿರುವಂತೆ ಅನುಗ್ರಹಿಸು. ಅನಂತಾನಂತ ಶಕ್ತಿಯುಳ್ಳ ನಿನ್ನಿಂದ ನಾಭಿಕಮಲದಿಂದ ವಿಶಿಷ್ಟ ಜ್ಞಾನಶಕ್ತಿಯುಳ್ಳ ನಾನು ಆವಿರ್ಭವಿಸಿದೆನು. ವಿವಿಧ ರೂಪವಾದ ಈ ಜಗತ್ತು ನಿನ್ನ ಪ್ರತಿಮೆಯೆನಿಸುವುದು. ಇಂತಹ ಜಗತ್ತನ್ನು ವಿವರಿಸಲು ಹೊರಟ ನನಗೆ ಸರ್ವ ವೇದಗಳೂ ತಿಳಿಸುವ ನೀನು ಸರ್ವೋತ್ತಮನೆಂಬ ಜ್ಞಾನವು ಕ್ಷೀಣವಾಗದಿರಲಿ. ಮಹಾಕರುಣಾನಿಧಿಯಾದ ನೀನು ನನ್ನ ಸೃಷ್ಟಿಕಾರ್ಯವು ಸುಗಮವಾಗಿ ನಡೆಯುವಂತೆ ಅನುಗ್ರಹಿಸು. ಶೇಷಶಯನದಿಂದೆದ್ದು ಮಂದಸ್ಮಿತವನ್ನು ಬೀರುತ್ತಾ ಬಿಟ್ಟ ಕಣ್ಣುಗಳಿಂದ ನನ್ನನ್ನು ನೋಡುತ್ತಾ ಮನಮೋಹಕವಾದ ನಿನ್ನ ಮಾತುಗಳಿಂದ ನನಗೆ ಅಭಯವನ್ನು ನೀಡು.

ಬ್ರಹ್ಮದೇವರು ಶ್ರೀಹರಿಯನ್ನು ಕಂಡು ಮೇಲೆ ಹೇಳಿದಂತೆ ತಮ್ಮ ಮನಸ್ಸು ಮತ್ತು ಮಾತುಗಳಿಗೆ ನಿಲುಕುವಷ್ಟು ಶ್ರೀಹರಿಯನ್ನು ಸ್ತೋತ್ರಮಾಡಿದರು. ಆದರೂ

ಅವರಿಗೆ ತೃಪ್ತಿಯಾಗಲಿಲ್ಲ. ಆಗ ಶ್ರೀಹರಿಯು ಬ್ರಹ್ಮದೇವರ ಮನಸ್ಸಿನ ಕಾತುರತೆಯನ್ನು ತಿಳಿದನು. ಲೋಕಗಳ ಸೃಷ್ಟಿಗಾಗಿ ವಿಶೇಷ ಜ್ಞಾನವನ್ನು ಮತ್ತೂ ಹೆಚ್ಚಾಗಿ ಹೊಂದಬೇಕೆಂಬ ಬಯಕೆಯನ್ನು ತಿಳಿದನು. ಅವರ ಆ ಜ್ಞಾನಸಂಕಟವನ್ನು ಹೋಗಲಾಡಿಸುವನಂತೆ ಅರ್ಥಪೂರ್ಣವಾದ ಮಾತುಗಳಿಂದ ಬ್ರಹ್ಮದೇವರನ್ನು ಸಂತೈಸಿದನು.

ಭಗವಂತನು - ಬ್ರಹ್ಮ ಖಿನ್ನನಾಗಬೇಡ. ಸೃಷ್ಟಿಕಾರ್ಯದಲ್ಲಿ ಪ್ರವೃತ್ತನಾಗು. ನಾನು ಮೊದಲು ಹೇಳಿದ 'ತಪಸ್ಸು ಮಾಡು' ಎಂಬ ಪ್ರೇರಣೆಯೇ ಈ ಎಲ್ಲಕ್ಕೂ ಸಹಾಯಕವಾಗಿರುವುದು. ನನ್ನಿಂದ ಪ್ರೇರಿತನಾಗಿಯೇ ನೀನು ಈ ಪ್ರಾರ್ಥನೆಯನ್ನು ಮಾಡುತ್ತಿರುವುದು. ಮತ್ತೆ ನನ್ನ ಧ್ಯಾನವನ್ನು ಮಾಡು. ನನ್ನಲ್ಲಿ ಭಕ್ತಿಯನ್ನು ಮಾಡು. ಈ ಧ್ಯಾನ ಭಕ್ತಿಗಳಿಂದ ಸಂತುಷ್ಟನಾದ ನಾನು ನಿನಗೆ ಎಲ್ಲ ಲೋಕಗಳ ವಿವರಗಳೂ ಮನಸ್ಸಿಗೆ ಗೋಚರಿಸುವಂತೆ ಮಾಡುತ್ತೇನೆ. ಆಗ ನೀನು ನಿನ್ನ ಹೃದಯ ಮಧ್ಯದಲ್ಲಿ ಸರ್ವಗುಣ ಪೂರ್ಣನಾದ ನನ್ನನ್ನು ನೋಡುವೆ. ನನ್ನಲ್ಲಿ ಸರ್ವಜಗತ್ತನ್ನೂ ಕಾಣುವೆ. ಅಗ್ನಿಯು ಎಲ್ಲ ಮರಗಳಲ್ಲಿದ್ದರೂ ಅದರ ಸಂಪರ್ಕವಿಲ್ಲದೆ ಇರುವಂತೆ ನಾನು ಎಲ್ಲರಲ್ಲಿ ವ್ಯಾಪ್ತನಾಗಿದ್ದರೂ ಸಂಪರ್ಕವಿಲ್ಲದೆ ಇದ್ದೇನೆ. ಇಂತಹ ನನ್ನನ್ನು ಹೃದಯಕಮಲದಲ್ಲಿ ನೋಡಿದಾಗಲೇ ಜೀವೇಶ್ವರರು ಒಂದೆಂಬ ಅಜ್ಞಾನವೂ ಅದರಿಂದ ಉಂಟಾಗುವ ಸಂಸಾರ ದುಃಖವೂ ನಿವೃತ್ತಿಯಾಗುವುದು. ಇದೇ ವಿಶೇಷಜ್ಞಾನವು ದೇಹಕ್ಕಿಂತ ಭಿನ್ನವಾಗಿ ದೇಹದಲ್ಲಿ ಜೀವನಿರುವನು. ಅವನಿಗೆ ಭೌತಿಕವಾದ ಇಂದ್ರಿಯಗಳಾಗಲೀ ಗುಣಗಳಾಗಲಿ ಇರುವುದಿಲ್ಲ. ಇಂತಹ ಜೀವನಿಗೆ ಜೀವನಪ್ರದನಾಗಿ ನಾನು ಅವನ ಸಮೀಪದಲ್ಲಿಯೇ ಇರುವೆನು. ಹೀಗೆ ನನ್ನನ್ನು ಕಂಡಾಗಲೇ ಸ್ವರೂಪಾನಂದವನ್ನು ಅನುಭವಿಸುವ ಮೋಕ್ಷವನ್ನು ಹೊಂದಲಾಗುವುದು. ಜೀವರ ಕರ್ಮಗಳು ವಿವಿಧವಾಗಿವೆ. ಅವುಗಳಿಗೆ ತಕ್ಕಂತೆ ಅವರನ್ನು ಸೃಷ್ಟಿಸುವ ನೀನು ನನ್ನನ್ನು ಮರೆಯುವುದಿಲ್ಲ. ನಾನು ನಿನ್ನಲ್ಲಿ ಶ್ರೇಷ್ಠವಾದ ಅನುಗ್ರಹವನ್ನು ಮಾಡಿರುವೆನು. ಎಲ್ಲರಿಗಿಂತ ಮೊದಲಿಗನೂ, ಜ್ಞಾನಿಯೂ ಆದ ನಿನ್ನನ್ನು ರಜೋಗುಣವು ಎಂದೂ ಬಂಧಿಸಲಾರದು. ಸಾಮಾನ್ಯರಿಗೆ ನನ್ನ ಮರೆವನ್ನು ತಂದುಕೊಟ್ಟರೂ ನಿನಗೆ ಎಂದೂ ನನ್ನ ಮರೆವು ಬರುವಂತೆ ಮಾಡಲಾರದು. ಆದ್ದರಿಂದ ಸೃಷ್ಟಿಸುತ್ತಿರುವ ಕಾಲದಲ್ಲಿಯೂ ನಿನ್ನ ಮನಸ್ಸು ನನ್ನಲ್ಲಿಯೇ ಆಸಕ್ತವಾಗಿರುವುದು. ನಾನು ಭೂತೇಂದ್ರಿಯಗಳು, ಪ್ರಾಕೃತಗುಣಗಳು ಮನಸ್ಸು ಬುದ್ಧಿಗಳನ್ನು ನಿಯಮಿಸುವೆನು ಎಂಬ ಯಥಾರ್ಥ ಜ್ಞಾನವನ್ನು ನೀನು ಹೊಂದಿರುವೆಯಾದ್ದರಿಂದ ನನ್ನನ್ನು

ತಿಳಿದವನಾಗಿರುವೆ. ಮಿಕ್ಕ ಜೀವರು ನನ್ನನ್ನು ನಿನ್ನಷ್ಟು ತಿಳಿಯಲಾರರು. ನಿನಗೆ ನನ್ನನ್ನು ನೋಡಬೇಕೆಂಬ ಇಚ್ಛೆಯನ್ನು ಕೊಟ್ಟವನೂ ನಾನೇ. ಕಮಲದ ನಾಳವನ್ನು ಹೊಕ್ಕು ನನ್ನನ್ನು ಹುಡುಕುತ್ತಿದ್ದ ನಿನಗೆ ನನ್ನ ಅಪ್ರಾಕೃತ ಸ್ವರೂಪವನ್ನು ಕಾಣುವಂತೆ ಮಾಡಿದೆನು. ನನ್ನ ಮಹಿಮೆಯಿಂದ ತುಂಬಿದ್ದ ಈ ಸ್ತೋತ್ರವನ್ನು ಮಾಡಿದುದೂ, ನನ್ನ ಧ್ಯಾನದಲ್ಲಿ ನಿಗಿರುವ ಆಸಕ್ತಿಯೂ ಇವೆಲ್ಲವೂ ನನ್ನ ಅನುಗ್ರಹವೇ. ಜೀವರನ್ನು ಸೃಷ್ಟಿಸುವ ಕಾರ್ಯದಲ್ಲಿ ಜಯಗಳಿಸಲು ನೀನು ಗುಣಪೂರ್ಣನೂ ಪ್ರಾಕೃತ ಗುಣರಹಿತನೂ ಆದ ನನ್ನನ್ನು ಸ್ತೋತ್ರಮಾಡಿರುವೆ. ನಿನ್ನ ಈ ಸ್ತೋತ್ರದಿಂದ ನಾನು ಪ್ರೀತನಾಗಿರುವೆನು. ನಿನಗೆ ಒಳ್ಳೆಯದಾಗಲಿ. ನೀನು ಮಾಡಿರುವ ಈ ಸ್ತೋತ್ರದಿಂದ ನನ್ನನ್ನು ಸೇವಿಸುವವರಿಗೂ ನಾನು ಒಲಿಯುವಾಗ ನಿನಗೆ ಒಲಿಯದಿರುವೆನೇ? ನಾನು ಎಲ್ಲರ ಇಷ್ಟವನ್ನೂ ಪೂರ್ಣಮಾಡುವ ಸಾಮರ್ಥ್ಯವುಳ್ಳವನು. ಆದ್ದರಿಂದ ಅವರವರಿಗೆ ಯೋಗ್ಯವಾದ ಇಚ್ಛೆಯನ್ನು ಮಾಡಿದರೂ ನನಗೆ ಪ್ರೀತಿಯಾಗುವುದು. ದಾನ, ಧರ್ಮ, ಯಜ್ಞ, ವ್ರತ, ಯೋಗ ಮತ್ತು ಮನಸ್ಸಿನ ಏಕಾಗ್ರತೆಯಿಂದ ಭಕ್ತರು ಸಂಪಾದಿಸುವುದು ನನ್ನ ಪ್ರೀತಿಯನ್ನೇ, ಇದೇ ಅವರಿಗೆ ಮೋಕ್ಷದಲ್ಲಿಯೂ ಆನಂದವನ್ನು ಕೊಡುವುದು. ಇದೇ ತತ್ತ್ವಜ್ಞಾನಿಗಳ ಮತ. ಇಂತಹ ನನ್ನಪ್ರೀತಿಯು ಬರಬೇಕಾದರೆ ಭಕ್ತಿಯೇ ಮುಖ್ಯ ಸಾಧನ. ನಾನೇ ಎಲ್ಲರ ಅಂತರ್ಯಾಮಿಯು. ಭಕ್ತರೆಲ್ಲರಿಗೂ ಎಲ್ಲ ವಸ್ತುಗಳಿಗಿಂತ ಅತ್ಯಂತ ಪ್ರಿಯನು. ಜೀವನು ತನಗಾಗಿ ದೇಹವನ್ನು ಪ್ರೀತಿಸುವುದೂ ನನ್ನ ಇಚ್ಛೆಯಿಂದಲೇ. ಆದ್ದರಿಂದ ನಾನೇ ಎಲ್ಲಕ್ಕಿಂತಲೂ ಪ್ರಿಯತಮನು. ಇಂತಹ ನನ್ನಲ್ಲಿ ಭಕ್ತಿಯನ್ನು ಮಾಡು. ಬ್ರಹ್ಮ ನನ್ನನ್ನು ಬಿಟ್ಟರೆ ನೀನೂ ವೇದಗಳಿಂದ ಪ್ರತಿಪಾದಿತನು. ನಿನ್ನ ಈ ದೇಹವನ್ನು ನಾನೇ ಸೃಷ್ಟಿಸಿರುವೆನು. ನನ್ನ ಉದರದಲ್ಲಿ ನಿದ್ರಿಸುತ್ತಿರುವ ಈ ಜೀವರನ್ನು ಹಿಂದಿನಂತೆಯೇ ಸೃಷ್ಟಿಸು. ಇದಕ್ಕೆ ನೀನೇ ಅಧಿಕಾರಿಯು. ಮೈತ್ರೇಯರು – ಜಗತ್ತಿನ ಮುಖ್ಯ ಸೃಷ್ಟಿಕರ್ತನೂ, ಲಕ್ಷ್ಮೀ ಬ್ರಹ್ಮಾದಿ ದೇವತೆಗಳಿಗೆ ನಿಯಾಮಕನೂ ಆದ ಶ್ರೀಹರಿಯು ಬ್ರಹ್ಮದೇವರು ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದ ಆ ರೂಪವನ್ನು ವ್ಯಕ್ತಗೊಳಿಸಿ ಮತ್ತೆ ಅದೃಶ್ಯನಾದನು.



# ಅಥ ಏಕಾದಶೋಽಧ್ಯಾಯಃ

ಈ ಅಧ್ಯಾಯದಲ್ಲಿ ನವವಿಧ ಸೃಷ್ಟಿಯನ್ನು ಹೇಳುವ ಮುಖಾಂತರ ಶ್ರೀಹರಿಯ ನಿರತಿಶಯ ಮಹಿಮೆ ಹೇಳಲ್ಪಡುವುದು.

**ವಿದುರ ಉವಾಚ**

**ಅಂತರ್ಹಿತೇ ಭಗವತಿ ಬಹ್ಮಾ ಲೋಕಪಿತಾಮಹಃ ।**
**ಪ್ರಜಾಃ ಸಸರ್ಜ ಕತಿಧಾ ದೈಹಿಕೀರ್ಮಾನಸೀರ್ವಿಭುಃ ॥೧॥**

ಭಗವತಿ=ಶ್ರೀಹರಿಯು ಅಂತರ್ಹಿತೇ=ಕಾಣದಾಗುತ್ತಿರಲು ವಿಭುಃ=ಸಮರ್ಥನಾದ ಲೋಕಪಿತಾಮಹಃ ಬ್ರಹ್ಮಾ=ಜಗತ್ತಿನ ಪಿತಾಮಹನೆನಿಸಿದ ಬ್ರಹ್ಮದೇವರು ದೈಹಿಕೀಃ ಮಾನಸೀಃ=ದೇಹದಿಂದ ಮತ್ತು ಮನಸ್ಸಿನಿಂದ ಹುಟ್ಟಲ್ಪಡುವ ಪ್ರಜಾಃ= ಪ್ರಜೆಗಳನ್ನು ಕತಿಧಾ=ಎಷ್ಟು ವಿಧವಾಗಿ ಸಸರ್ಜ=ಸೃಷ್ಟಿಸಿದನು. ॥೧॥

**ಯೇ ಚ ಮೇ ಭಗವನ್ ಪೃಷ್ಟಾಸ್ತ್ವಯ್ಯರ್ಥಾ ಬಹುವಿತ್ತಮ ।**
**ತಾನ್ ವದಸ್ವಾನುಪೂರ್ವ್ಯೇಣ ಛಿಂದಿ ನಃ ಸರ್ವಸಂಶಯಾನ್ ॥೨॥**

ತ್ವಯಿ=ನೀವು ಹೇಳುವುದಕ್ಕಾಗಿ ದೊರೆತಾಗ ಮೇ=ನನ್ನಿಂದ ಪೃಷ್ಟಾಃ ಯೇ ಅರ್ಥಾಃ=ಪ್ರಶ್ನಿಸಲ್ಪಟ್ಟ ಯಾವ ವಿಷಯಗಳಿವೆಯೋ ತಾನ್=ಅವುಗಳನ್ನು ಆನುಪೂರ್ವ್ಯೇಣ=ಕ್ರಮವಾಗಿ ವದಸ್ವ=ಹೇಳಿರಿ. ಹೇ ಬಹುವಿತ್ತಮ=ಜ್ಞಾನಿಶ್ರೇಷ್ಠನೇ ನಃ= ನಮ್ಮ ಸರ್ವಸಂಶಯಾನ್=ಎಲ್ಲ ಸಂದೇಹಗಳನ್ನು ಛಿಂದಿ= ಪರಿಹರಿಸು. ॥೨॥

**ಸೂತ ಉವಾಚ**

**ಏವಂ ಸಂಚೋದಿತಸ್ತೇನ ಕ್ಷತ್ರಾ ಕೌಷಾರವೋ ಮುನಿಃ ।**
**ಪ್ರೀತಃ ಪ್ರತ್ಯಾಹ ಪ್ರಶ್ನಾನ್ ತಾನ್ ಹೃದಿಸ್ಥಾನಥ ಭಾರ್ಗವ ॥೩॥**

ಭಾರ್ಗವ=ಶೌನಕರೇ ! ಅಥ=ನಂತರ ಏವಂ=ಈ ರೀತಿ ತೇನ ಕ್ಷತ್ರಾ ಸಂಚೋದಿತಃ=ಆ ವಿದುರನಿಂದ ಪ್ರಾರ್ಥಿತರಾದ ಕೌಷಾರವಃ ಮುನಿಃ=ಮೈತ್ರೇಯರು ಪ್ರೀತಃ=ಸಂತುಷ್ಟರಾಗಿ ಹೃದಿಸ್ಥಾನ್=ತನ್ನ ಹೃದಯದಲ್ಲಿ (ಮನಸ್ಸಿನಲ್ಲಿ)ರುವ ಮರೆಯದಿರುವ ತಾನ್ ಪ್ರಶ್ನಾನ್= ವಿದುರನ ಪ್ರಶ್ನೆಗಳಿಗೆ ಪ್ರತ್ಯಾಹ=ಉತ್ತರಿಸಿದರು. ॥೩॥

**ಮೈತ್ರೇಯ ಉವಾಚ**

**ವಿರಿಂಚೋಽಪಿ ತಥಾ ಚಕ್ರೇ ದಿವ್ಯಂ ವರ್ಷಶತಂ ತಪಃ।**
**ಆತ್ಮನ್ಯಾತ್ಮಾನಮಾವೇಶ್ಯ ಯಥಾಹ ಭಗವಾನಜಃ ॥೪॥**

ವಿರಿಂಚಃ ಅಪಿ=ಬ್ರಹ್ಮದೇವರಾದರೂ ಅಜಃ ಭಗವಾನ್ ಯಥಾ ಆಹ ತಥಾ= 'ಭೂಯಶ್ಚ ತಪ ಆತಿಷ್ಠ ಪುನಃ ತಪಸ್ಸು ಮಾಡು' ಎಂದು ಭಗವಂತನು ಹೇಳಿದ ಪ್ರಕಾರ ದಿವ್ಯಂ ವರ್ಷಶತಂ=ದೇವಮಾನದ ನೂರು ವರ್ಷಗಳವರೆಗೆ ಆತ್ಮನಿ= ಪರಮಾತ್ಮನಲ್ಲಿ ಆತ್ಮಾನಂ=ಮನಸ್ಸನ್ನು ಆವೇಶ್ಯ=ತೊಡಗಿಸಿ ತಪಃ ಚಕ್ರೇ=ತಪಸ್ಸು ಮಾಡಿದರು. ॥೪॥

**ತದ್ ವಿಲೋಕ್ಯಾಬ್ಜಸಂಭೂತೋ ವಾಯುನಾ ಯದಧಿಷ್ಠಿತಂ।**
**ಪದ್ಮಮಂಭಶ್ಚ ತತ್ಕಾಲಕೃತವೀರ್ಯೇಣ ಕಂಪಿತಮ್ ॥೫॥**

ಅಬ್ಜಸಂಭೂತಃ=ಕಮಲದಲ್ಲಿ ಜನಿಸಿದ ಬ್ರಹ್ಮದೇವರು ಯತ್=ಯಾವುದು ಅಧಿಷ್ಠಿತಂ=ತನ್ನಿಂದ ಅಧಿಷ್ಠಿತವಾಗಿತ್ತೋ ತದ್=ಅಂಥ (ತಾನು ಕುಳಿತ ಎಂದರ್ಥ) ತತ್ಕಾಲಕೃತವೀರ್ಯೇಣ=ಪ್ರಲಯ ಕಾಲದಿಂದ ಉಂಟು ಮಾಡಿದ ಪರಾಕ್ರಮ (ವೇಗ)ವುಳ್ಳ ವಾಯುನಾ=ಗಾಳಿಯಿಂದ ಕಂಪಿತಃ=ಚಲಿಸುತ್ತಿರುವ ಪದ್ಮಂ ಅಂಭಃ ಚ=ಕಮಲ ಮತ್ತು ನೀರನ್ನು ವಿಲೋಕ್ಯ=ನೋಡಿ.... ॥೫॥

**ತಪಸಾ ಹ್ಯೇಧಮಾನೇನ ವಿದ್ಯಯಾ ಚಾತ್ಮಸಂಸ್ಥಯಾ।**
**ವಿವೃದ್ಧವಿಜ್ಞಾನಬಲೋ ನ್ಯಪಾದ್ ವಾಯುಂ ಸಹಾಂಭಸಾ ॥೬॥**

ತಪಸಾ=ತಪಸ್ಸಿನಿಂದಲೂ ಆತ್ಮಸಂಸ್ಥಯಾ=ತನ್ನಲ್ಲಿರುವ ವಿದ್ಯಯಾ=ಭಗವದ-ಪರೋಕ್ಷಜ್ಞಾನದಿಂದಲೂ ವಿವೃದ್ಧವಿಜ್ಞಾನಬಲಃ=ಅಭಿವೃದ್ಧವಾದ ಸೃಷ್ಟಿವಿಷಯಕ ವಿಶೇಷ ಜ್ಞಾನಬಲವುಳ್ಳ ಬ್ರಹ್ಮದೇವರು ಅಂಭಸಾ ಸಹ=ನೀರಿನೊಡನೆ ವಾಯುಂ= ಗಾಳಿಯನ್ನು ನ್ಯಪಾತ್=ಕುಡಿದನು. 'ನಿಪಾನಮುಪಾನಂ ಸ್ಯಾದಾಪಾನಂ ಪಾನಗೋ(ಕೊ)ಷ್ಠಿಕೇ(ಕಃ)' ಎಂದು ಹಲಾಯುಧ. ನೀರು ಕುಡಿಯುವುದಕ್ಕೆ 'ನಿಪಾನ' ಎನ್ನುವರು ಕಾರಣ ನ್ಯಪಾತ್ ಎಂದಿದ್ದಾರೆ. ॥೬॥

ಶ್ರೀಹರಿಯಿಂದ ಸೃಷ್ಟಿಸಲು ಆಜ್ಞಪ್ತರಾದ ಬ್ರಹ್ಮದೇವರು ಸಂಹರಿಸಲು ಪ್ರಾರಂಭಿಸಿದನಲ್ಲ! ಏನಿದು? ಎಂದರೆ ಈ ನೀರು, ಗಾಳಿಗಳೆರಡೂ ಸೃಷ್ಟಿಗೆ ಪ್ರತಿಬಂಧಕಗಳಾದ್ದರಿಂದ ಅವುಗಳನ್ನು ಪಾನ ಮಾಡಿದ್ದು ಯುಕ್ತವೇ ಎಂದು ಹೇಳುವರು –

**ತದ್ ವಿಲೋಕ್ಯ ವಿಯದ್ವ್ಯಾಪಿ ಪುಷ್ಕರಂ ಯದಧಿಷ್ಠಿತಃ ।**
**ಅನೇನ ಲೋಕಾನ್ ಪ್ರಾಗ್ಲೀನಾನ್ ಕಲ್ಪಿತಾಸ್ಮೀತ್ಯಚಿಂತಯತ್ ॥೭॥**

ಯದಧಿಷ್ಠಿತಃ=ಯಾವುದರಲ್ಲಿ ತಾನು ಕುಳಿತಿರುವನೋ ತತ್=ಆ ವಿಯದ್ವ್ಯಾಪಿ=ಆಕಾಶದಂತೆ ಮಹಾಪರಿಮಾಣವುಳ್ಳ ಪುಷ್ಕರಂ=ಕಮಲವನ್ನು ವಿಲೋಕ್ಯ=ನೋಡಿ ಅನೇನ=ಈ ಕಮಲದಿಂದ ಪ್ರಾಕ್=ಪೂರ್ವ ಕಲ್ಪ ಪ್ರಳಯದಲ್ಲಿ ಲೀನಾನ್=ಮುಳುಗಿದ (ಅಡಗಿದ) ಲೋಕಾನ್=ಲೋಕಗಳನ್ನು ಕಲ್ಪಿತಾಸ್ಮಿ= ಸೃಷ್ಟಿಸುವೆನು ಇತಿ=ಎಂದು ಅಚಿಂತಯತ್=ಭಾವಿಸಿದನು ವಿಚಾರ ಮಾಡಿದನು. (ಗಾಳಿ,ನೀರುಗಳಿಂದ ಪದ್ಮವು ನಷ್ಟವಾದರೆ ಲೋಕಗಳ ಸೃಷ್ಟಿ ಸಾಧ್ಯವಿಲ್ಲ,ಆದ್ದರಿಂದ ಅವೆರಡನ್ನೂ ಪಾನ ಮಾಡಿದ್ದು ಯುಕ್ತವೇ.) ॥೭॥

**ಪದ್ಮಕೋಶಂ ತದಾವಿಶ್ಯ ಭಗವಾನ್ ಕರ್ಮಚೋದಿತಃ ।**
**ಏಕಂ ವ್ಯಭಾಂಕ್ಷೀದುರುಧಾ ತ್ರಿಧಾ ಭಾವ್ಯ ದ್ವಿಸಪ್ತಧಾ ॥೮॥**

ಭಗವಾನ್=ಜ್ಞಾನಾದಿ ಗುಣಗಳುಳ್ಳ ಬ್ರಹ್ಮದೇವರು ತದಾ=ವಿಚಾರಮಾಡಿ-ದಾಗಲೇ ಕರ್ಮಚೋದಿತಃ=ಲೋಕಗಳಿಗೆ ನಿಮಿತ್ತಕಾರಣವಾದ ಅದೃಷ್ಟದಿಂದ ಪ್ರೇರಿತರಾಗಿ (ಅಥವಾ ಕರ್ಮಣಾ=ತನ್ನ ಜ್ಞಾನ ವಿಷಯನಾದ ಶ್ರೀಹರಿಯಿಂದ ಕರ್ಮಣಿ=ಜಗತ್ತಿನ ಸೃಷ್ಟಿಕಾರ್ಯದಲ್ಲಿ ಚೋದಿತಃ=ಪ್ರೇರಿತರಾಗಿ) ಪದ್ಮಕೋಶಂ ಆವಿಶ್ಯ=ಕಮಲದ ನಾಲದಲ್ಲಿ ಪ್ರವೇಶಿಸಿ ಏಕಂ ಪದ್ಮಂ=ಒಂದಾದ ಪದ್ಮವನ್ನು ಉರುಧಾ=ಅನೇಕ ರೀತಿಯಾಗಿ ವ್ಯಭಾಂಕ್ಷೀತ್=ವಿಭಾಗ ಮಾಡಿದರು. ಸಾವಿರಾರು ವಿಭಾಗ ಮಾಡಿದನೆ ? ಇಲ್ಲ, ತ್ರಿಧಾ ಭಾವ್ಯ=ಮೊದಲಿಗೆ ಭೂಮಿ, ಅಂತರಿಕ್ಷ, ಸ್ವರ್ಗವೆಂದು ಮೂರು ವಿಭಾಗ ಮಾಡಿ, ಆ ಮೂರನ್ನು ದ್ವಿಸಪ್ತಧಾ ವ್ಯಭಾಂಕ್ಷೀತ್=ಮತ್ತೆ ಹದಿನಾಲ್ಕಾಗಿ ವಿಭಾಗಿಸಿದನು. ಈ ಹದಿನಾಲ್ಕರಲ್ಲಿ ಸತ್ಯ ಲೋಕಕ್ಕೆ ಉಪಚಯ ಮಾತ್ರವೆಂದು ತಿಳಿಯಬೇಕು. ॥೮॥

ಹೆಚ್ಚು ಕಡಿಮೆ ಇಲ್ಲದೆ ಇಷ್ಟೇ ವಿಭಾಗ ಮಾಡಲು ಕಾರಣ ಹೇಳುವರು–

**ಏತಾವಾನ್ ಜೀವಲೋಕಸ್ಯ ಸಂಸ್ಥಾಭೇದಃ ಸಮಾಸತಃ ।**
**ಧರ್ಮಸ್ಯ ಹ್ಯನಿಮಿತ್ತಸ್ಯ ವಿಪಾಕಃ ಪರಮೇಷ್ಠಿನಃ ॥೯॥**

ಜೀವಲೋಕಸ್ಯ=ಜೀವರು ಇರಲು ಯೋಗ್ಯವಾದ ಲೋಕಗಳ ಸಂಸ್ಥಾಭೇದಃ= ಸ್ಥಿತಿವಿಶೇಷವು ಏತಾವಾನ್=ಇಷ್ಟೇ ಎಂದು ಸಮಾಸತಃ=ಸಂಕ್ಷೇಪವಾಗಿ ಕಥಿತಃ= ಹೇಳಲ್ಪಟ್ಟಿದೆ. ಅಂದರೆ ವೈಕುಂಠ, ಬ್ರಹ್ಮಾಂಡದ ಹೊರಗಿನ ದೇಶ ಇವುಗಳನ್ನು

ಬಿಟ್ಟು ಹೇಳಿದೆ ಎಂದರ್ಥ. ವಿರಿಂಚಿ ಮಾಡಿದ, ಅನ್ಯರಿಂದ ಅಸಾಧ್ಯವಾದ ಈ ಕಾರ್ಯವೂ ಶ್ರೀಹರಿಯ ಅನುಗ್ರಹದಿಂದಲೇ ಆದದ್ದು ಎಂದು ಹೇಳುವರು. ಹಿಂದೆ ಹೇಳಿದ ಸೃಷ್ಟಿಯು ಪರಮೇಷ್ಠಿನಃ=ಬ್ರಹ್ಮದೇವರ ಅನಿಮಿತ್ತಸ್ಯ=ಬ್ರಹ್ಮಾರ್ಪಣ ಬುದ್ಧಿಯಿಂದ ಮಾಡಿದ ಧರ್ಮಸ್ಯ=ಕರ್ಮಗಳ ಪುಣ್ಯದ ವಿಪಾಕಃ=ವಿಶಿಷ್ಟ ಫಲವು.

ಇಲ್ಲಿ 'ಅನಿಮಿತ್ತ' ಎಂಬುದಕ್ಕೆ ನಿರ್ನಿಮಿತ್ತ ಎಂಬರ್ಥವನ್ನು ನಿರಾಕರಿಸಲು ಅರ್ಥ ಹೇಳುವರು–

**ಅನಿಮಿತ್ತಸ್ಯ ಬ್ರಹ್ಮಾರ್ಪಣಬುಧ್ಯಾ ಕೃತಸ್ಯ । 'ಅಇತಿಬ್ರಹ್ಮ'ಇತಿ ಶ್ರುತೇಃ ।**

'ಅ' ಎಂದರೆ ಬ್ರಹ್ಮನೆಂದು ಶ್ರುತಿ ಇರುವುದರಿಂದ 'ಅ–ನಿಮಿತ್ತ' ಎಂದರೆ ಅಕಾರ ವಾಚ್ಯನಾದ ಪರಬ್ರಹ್ಮನೇ ನಿಮಿತ್ತ-ಉದ್ದೇಶ್ಯವಾಗಿ ಉಳ್ಳ ಅಂದರೆ ಬ್ರಹ್ಮಾರ್ಪಣ ಬುದ್ಧಿಯಿಂದ ಮಾಡಿದ ಎಂದು ಅರ್ಥ. 'ಅಃ ಪರಬ್ರಹ್ಮ ನಿಮಿತ್ತಂ ಉದ್ದೇಶ್ಯಂ ಯಸ್ಯ ಸಃ ತಸ್ಯ' ಎಂದು ವಿಗ್ರಹ ಮಾಡಿ ಲಬ್ಧವಾದ ಬ್ರಹ್ಮಾರ್ಪಣಬುದ್ಧಿಯಿಂದ ಮಾಡಿದ ಎಂಬ ಅರ್ಥವೇ ಹೊರತು, 'ನ ವಿದ್ಯತೇ ನಿಮಿತ್ತಂ ಯಸ್ಯ' ಎಂದು ವ್ಯಾಖ್ಯಾನಿಸಿ ಯಾವ ಉದ್ದೇಶ್ಯವೂ ಇಲ್ಲದ ಎಂದು ಅರ್ಥವನ್ನು ಮಾಡಬಾರದು. ಏಕೆಂದರೆ 'ಲೋಕಾನಾಂ ವಿಜಯೇಚ್ಛಯಾ'' ಎಂದು ಉದ್ದೇಶ್ಯವನ್ನು ಹಿಂದೆ ಹೇಳಿದೆ ಕಾರಣ ಬಾಧಿತವಾಗುವುದು. ॥೯॥

**ವಿದುರ ಉವಾಚ**

**ಯದಾತ್ಥ ಬಹುರೂಪಸ್ಯ ಹರೇರದ್ಭುತಕರ್ಮಣಃ ।**
**ಕಾಲಾಖ್ಯಂ ಲಕ್ಷಣಂ ಬ್ರಹ್ಮನ್‌ಯಥಾವರ್ಣಯ ನಃ ಪ್ರಭೋ ॥೧೦॥**

ಪ್ರಭೋ=ಸಮರ್ಥನೇ ಹೇಬ್ರಹ್ಮನ್=ಮೈತ್ರೇಯರೇ ! ಅದ್ಭುತಕರ್ಮಣಃ= ಆಶ್ಚರ್ಯಕರವ್ಯಾಪಾರವುಳ್ಳ 'ಅಹಂ ಚ ಗಿರಿಶಶ್ಚ ವಿಭುಃ ಸ್ವಯಂ ಚ' ಎನ್ನುವಲ್ಲಿ, 'ಉರುಪ್ರರೋಹಂ' ಎನ್ನುವಲ್ಲಿಯೂ ಬಹುರೂಪನೆಂದು ಹೇಳಲ್ಪಟ್ಟ ಹರೇಃ= ಶ್ರೀಹರಿಯ 'ಅನಿಮಿಷಾಯ' ಎಂದು ಬ್ರಹ್ಮ ದೇವರ ಸ್ತೋತ್ರ ಹೇಳುವ ನೆಪದಿಂದ ಅನಿಮಿಷಶಬ್ದದಿಂದ ಯತ್ ಕಾಲಾಖ್ಯಂ ಲಕ್ಷಣಂ ಆತ್ಥ=ಯಾವ ಕಾಲವೆಂಬ ಸ್ವರೂಪವನ್ನು ಹೇಳಿರುವಿರೋ ತತ್=ಆ ಕಾಲಾಖ್ಯ ಸ್ವರೂಪವನ್ನು ತಾನಿ=ಆ ಬಹುರೂಪಗಳನ್ನು ನಃ=ನಮಗೆ ವರ್ಣಯ=ತಿಳಿಸಿರಿ.

ಇಲ್ಲಿ ಲಕ್ಷಣಶಬ್ದಕ್ಕೆ ಸ್ವರೂಪ ಎಂದರ್ಥ. ಈ ವಿಷಯದಲ್ಲಿ ಅಭಿಧಾನ ಹೇಳುವರು.

**ಲಕ್ಷಣಂ ಲಕ್ಷ್ಯಮಾತ್ಮಾ ಚ ಸ್ವರೂಪಮಿತಿ ಕಥ್ಯತೇ । ಇತ್ಯಭಿಧಾನಂ ।**

ಸ್ವರೂಪವು ಲಕ್ಷಣ, ಲಕ್ಷ್ಯ, ಆತ್ಮಾ, ಎಂಬ ಶಬ್ದಗಳಿಂದ ಹೇಳಲ್ಪಡುವದು ಎಂದು ಅಭಿಧಾನದಲ್ಲಿದೆ. ॥೧೦॥

ಹಿಂದೆ ಹೇಳಿದ ಅನೇಕ ರೂಪಗಳನ್ನು, ಕಾಲವೆಂಬ ರೂಪವನ್ನೂ ಹೇಳುತ್ತ ಬ್ರಹ್ಮಾಂಡದ ಒಳ-ಹೊರಗಿನ ಸೃಷ್ಟಿಯನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು. ಮೊದಲಿಗೆ, ಭಗವಂತನು ಸೃಷ್ಟಿಮುಂತಾದವುಗಳಿಗಾಗಿ ಸತ್ವಾದಿಗುಣಗಳನ್ನು ವಿಶೇಷವಾಗಿ ಸ್ವೀಕರಿಸುವ ಮೂರು ರೂಪಗಳನ್ನು ಪ್ರಕಟಗೊಳಿಸಿದನು ಎಂದು ಹೇಳುವರು -

**ಮೈತ್ರೇಯ ಉವಾಚ**

**ಗುಣವ್ಯತಿಕರಾಕಾರೋ ನಿರ್ವಿಶೇಷೋಽಪ್ರತಿಷ್ಠಿತಃ ।**
**ಪುರುಷಸ್ತದುಪಾದಾನಮಾತ್ಮಾನಂ ಲೀಲಯಾಽಸೃಜತ್ ॥೧೧॥**

ಗುಣವ್ಯತಿಕರಾಕಾರಃ=ಮುಂದೆ ಆಗುವ ಗುಣವೈಷಮ್ಯನಾಮಕ ಸೃಷ್ಟಿಗೆ ಉಪಾದಾನವಾಗಿ ಗುಣತ್ರಯಗಳನ್ನು ನೋಡುವ ನಿರ್ವಿಶೇಷಃ=ತನಗಿಂತ ವಿಶಿಷ್ಟ-ವಸ್ತು ರಹಿತನಾದ ಅಪ್ರತಿಷ್ಠಿತಃ=ಬೇರೆಯವರನ್ನಾಶ್ರಯಿಸದ ತನ್ನ ಮಹಿಮೆಯಲ್ಲಿಯೇ ಇರುವ ಪುರುಷಃ=ಪೂರ್ಣಷಡ್ಗುಣನಾದ ಶ್ರೀಹರಿಯು ತದುಪಾದಾನಂ=ಸೃಷ್ಟಿ ಸ್ಥಿತಿ, ಸಂಹಾರಕ್ಕಾಗಿ ಉದ್ದೇಶಿಸುವ ಆತ್ಮಾನಂ=ತನ್ನ ಬ್ರಹ್ಮಾ, ವಿಷ್ಣು ಮಹೇಶ್ವರ ಎಂಬ ಮೂರು ರೂಪಗಳನ್ನು ಲೀಲಯಾ ಅಸೃಜತ್=ಕ್ರೀಡಾರೂಪವಾಗಿ ವ್ಯಕ್ತಗೊಳಿಸಿದನು.

ಇಲ್ಲಿ 'ಗುಣವ್ಯತಿಕರಾಕಾರಃ' ಎಂಬುದಕ್ಕೆ ವ್ಯಾಖ್ಯಾನಿಸುವರು-

**ಗುಣವ್ಯತಿಕರಂ ಆಕರೋತಿ ತದ್ರಷ್ಟಾ ।**

ಗುಣವೈಷಮ್ಯವನ್ನು ಚೆನ್ನಾಗಿ (ಸೃಷ್ಟಿ) ಮಾಡುವವನು. ಇಲ್ಲಿ ಸೃಷ್ಟಿಗಿಂತ ಮೊದಲಿರುವ ಪುರುಷನ ಸ್ಥಿತಿಯನ್ನು ಹೇಳುತ್ತಿರುವುದರಿಂದ ಸೃಷ್ಟಿ ಮಾಡುವವನು ಎಂದರೆ ಅದನ್ನು ನೋಡುವವನೆಂದರ್ಥ.

'ಅಪ್ರತಿಷ್ಠಿತಃ' ಎಂಬುದಕ್ಕೆ ಅಸಂಭವ ಪರಿಹರಿಸಲು ಅಪೇಕ್ಷಿತ ಅಧ್ಯಾಹಾರ ಸೂಚಿಸುವರು.

**ಅಪ್ರತಿಷ್ಠಿತಃ ಅನ್ಯತ್ರ ।**

ಬೇರೆಯವರನ್ನು ಆಶ್ರಯಿಸದ. ತನ್ನಲ್ಲೇ ಇರುವವನೆಂದರ್ಥ.

ಈ ವಿಷಯದಲ್ಲಿ ಶ್ರುತಿ ಸಮ್ಮತಿಯನ್ನು ತಿಳಿಸುವರು.

**''ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ ಇತಿ ಸ್ವೇಮಹಿಮ್ನೀ''ತಿ ಶ್ರುತೇಃ ।**

ಪರಮಾತ್ಮನು ಎಲ್ಲಿರುವನು ಎಂಬ ಪ್ರಶ್ನೆಗೆ ಸ್ವೇಮಹಿಮ್ನಿ ಎಂದುತ್ತರ. ಸ್ವೇ ಎನ್ನುವಲ್ಲಿ ಮಹಿಮ್ನಿ ಎಂದದ್ದರಿಂದ ಆಶ್ರಯತ್ವ ಆಶ್ರಿತತ್ವ ಎರಡನ್ನು ಒಬ್ಬನಿಗೆ ವಿಶೇಷಬಲದಿಂದ ಉಪಪಾದಿಸಲು. ಈ ರೀತಿ ಶ್ರುತಿ ಇರುವುದರಿಂದ ಭಗವಂತನಿಗೆ ಸ್ವಾಶ್ರಿತತ್ವ ತಿಳಿಯುವುದು.

'ತದುಪಾದಾನಂ' ಎಂದರೆ ಗುಣವ್ಯತಿಕರಕ್ಕೆ ಉಪಾದಾನಕಾರಣ ಎಂಬ ಅನ್ಯಥಾಪ್ರತೀತಿಯನ್ನು ನಿವಾರಿಸಲು ವಿವಕ್ಷಿತ ಅರ್ಥ ಹೇಳುವರು–

**ತದುಪಾದಾನಂ ಗುಣವ್ಯತಿರೋಪಾದಾನಕರ್ತಾರಂ । ಸೃಷ್ಟ್ಯಾದ್ಯರ್ಥತ್ವೇನ ತಸ್ಯ ಪುರುಷಸ್ಯ ಬ್ರಹ್ಮವಿಷ್ಣು ಮಹೇಶ್ವರ ಇತಿ ತ್ರೀಣಿ ರೂಪಾಣ್ಯಾತ್ಮನಾ ಸೃಷ್ಟಾನಿ ॥**

ಗುಣವ್ಯತಿಕರಪದವು ಸ್ಥಿತಿಪ್ರಲಯಗಳಿಗೆ ಉಪಲಕ್ಷಕವು. 'ತತ್ ಗುಣವ್ಯತಿಕರಾದಿಕಂ ಉಪಾದತ್ತೇ=ಉದ್ದೇಶ್ಯಂ ಕರೋತೀತಿ ತದುಪಾದಾನಃ, ತಂ ತದುಪಾದಾನಂ' ಸೃಷ್ಟ್ಯಾದಿಗಳಿಗಾಗಿ ಬ್ರಹ್ಮಾ, ವಿಷ್ಣು, ಮಹೇಶ್ವರ ಎಂಬ ಮೂರು ರೂಪಗಳನ್ನು ವ್ಯಕ್ತಗೊಳಿಸಿದನು ಎಂಬುದು ವಾಕ್ಯಾರ್ಥ. ॥೧೧॥

ಸೃಷ್ಟಿ-ಸ್ಥಿತಿ-ಸಂಹಾರಕ್ಕಾಗಿ ಮೂರು ರೂಪಗಳನ್ನು ವ್ಯಕ್ತಗೊಳಿಸಿ ಅವುಗಳಲ್ಲಿ ಯಾವ ರೂಪವು ಏನನ್ನು ಮಾಡುವುದು ಎಂದು ವಿವರಿಸಿ ಹೇಳುವರು –

**ವಿಶ್ವಂ ವೈ ಬ್ರಹ್ಮತನ್ಮಾತ್ರಂ ಸಂಸ್ಥಿತಂ ವಿಷ್ಣುಮಾಯಯಾ ।**
**ಈಶ್ವರೇಣ ಪರಿಚ್ಛಿನ್ನಂ ಕಾಲೇನಾವ್ಯಕ್ತಮೂರ್ತಿನಾ ॥೧೨॥**

ವಿಶ್ವಂ=ಪ್ರಪಂಚವು ಬ್ರಹ್ಮತನ್ಮಾತ್ರಂ=ಬ್ರಹ್ಮಾಂತರ್ಗತ ಬ್ರಹ್ಮನಾಮಕ ಪುರುಷ-ನಿರ್ಮಿತವಾದುದು, ವಿಷ್ಣುಮಾಯಯಾ ಸಂಸ್ಥಿತಂ=ವಿಷ್ಣುರೂಪನಾದ ಪುರುಷನ ಇಚ್ಛೆಯಿಂದ ಚೆನ್ನಾಗಿ ಸ್ಥಿತವಾದುದು, (ವಿಷ್ಣುವಿನಿಂದ ಪಾಲಿತವೆಂದರ್ಥ) ಅವ್ಯಕ್ತ-ಮೂರ್ತಿನಾ=ರುದ್ರಾಂತರ್ಗತನಾದದ್ದರಿಂದ ಕಾಣದಿರುವ ಸ್ವರೂಪವುಳ್ಳ ಕಾಲೇನ=ಕಾಲನಾಮಕವಾದ ಈಶ್ವರೇಣ=ರುದ್ರಾವಿಷ್ಟವಾದ ಈಶ್ವರನೆಂಬ ರೂಪದಿಂದ ಪರಿಚ್ಛಿನ್ನಂ=ಸಂಹರಿಸಲ್ಪಟ್ಟಿದ್ದು.

ಇಲ್ಲಿ 'ಬ್ರಹ್ಮತನ್ಮಾತ್ರಂ' ಎಂದರೆ ಬ್ರಹ್ಮನಿಂದ ನಿರ್ವಿಶೇಷಾಭಿನ್ನ, ಬ್ರಹ್ಮನೇ ಇರುವನು. ಪ್ರಪಂಚವೇ ಇಲ್ಲ ಎಂದು ವಿಪರೀತ ಅರ್ಥವಾಗುವುದು, ಕಾರಣ ತಾತ್ಪರ್ಯ ಹೇಳುವರು–

**" ಬ್ರಹ್ಮ ನಿರ್ಮಾತ್ರೃಕಮ್ । ಮಾಯಯಾ ಸಾಮರ್ಥ್ಯೇನ" ।**

೧)ಬ್ರಹ್ಮನಿಂದ ಸೃಷ್ಟಿಯಾದುದು ೨) ಮಾಯಯಾ ಎಂದರೆ ಸಾಮರ್ಥ್ಯದಿಂದ.

ಮೂಲದಲ್ಲಿ ಕಾಲೇನ ಎಂದು ಈಶ್ವರನಿಗೆ ವಿಶೇಷಣವಿತ್ತುದರ ಅಭಿಪ್ರಾಯ ಹೇಳುವರು –

**ತತ್ರ ಯತ್ ಸಂಹರ್ತೃ ಈಶ್ವರಾಖ್ಯಂ ರೂಪಂ ತತ್ ಕಾಲಾಖ್ಯಂ, ಕಲ ಛೇದನೇ ಇತಿ ಧಾತೋಃ ॥**

೩) 'ಕಲ ಛೇದನೇ' ಎಂದು ಧಾತುವ್ಯಾಖ್ಯಾನವಿರುವುದರಿಂದ ಯಾವುದು ರುದ್ರನಲ್ಲಿದ್ದು ಈಶ್ವರನೆನಿಸುವ ಸಂಹೃರ್ತೃವಾದ ರೂಪವೋ ಅದು ಕಾಲವೆನ್ನಿಸಿಕೊಳ್ಳುವದು. ಇದರಿಂದ ಕಾಲಸ್ವರೂಪ ಹೇಳು ಎಂಬುದಕ್ಕೆ ಉತ್ತರಿಸಿದಂತಾಯಿತು.

ಗುಣವ್ಯತಿಕರಾಕಾರಃ ಮುಂತಾಗಿ ಹೇಳಿದ ವಿಷಯದಲ್ಲಿ ಶ್ರುತಿಸಂವಾದ ತೋರಿಸುವರು–

**"ಅಥ ತ್ರಯೀ ವಾವ ಪ್ರಕೃತಿಃ ಸತ್ವಂ ರಜಸ್ತಮ ಇತಿ । ತಾಂ ನಾರಾಯಣಃ ಪರ್ಯಪಶ್ಯತ್ ಅನನ್ಯಪ್ರತಿಷ್ಠಃ ತಂ ವಾ ಏತಂ ಆಹುಃ ಪುರುಷ ಇತಿ ಪೂರ್ಣೋ ಹಿ ಏಷ ಭವತಿ ಸ ತ್ರೇಧಾ ಬಭೂವ ಏಷಾಂ ಗುಣಾನಾಂ ಉಪಾದಾನಾಯ ವಿಷ್ಣುರ್ವಾವ ಸತ್ವಸ್ಯ, ರಜಸೋ ಬ್ರಹ್ಮಾ ಈಶೋ ನಾಮ ತಮಸಃ ಸ ಆವಿವೇಶ । ಬ್ರಹ್ಮಾ ಬ್ರಹ್ಮಾಣಂ ನಾಮ ಚತುರ್ಮುಖಂ ಈಶ ಈಶಾನಂ ನಾಮ ಪಂಚಮುಖಂ ಯೋವಾ ಈಶ ಈಶಾನಮಾವಿವೇಶ ತಂ ವಾ ಏನಂ ಕಾಲ ಇತ್ಯಾಚಕ್ಷತೇ ಕಾಲ ಇತ್ಯಾಚಕ್ಷತೇ ॥ ಇತಿ ಸೌಕರಾಯಣಶ್ರುತಿಃ**

ಪ್ರಕೃತಿಯು ಸತ್ವ,ರಜಸ್,ತಮಸ್,ಎಂದು ಮೂರು ವಿಧವು. ಆ ಪ್ರಕೃತಿಯನ್ನು ಇತರರನ್ನಾಶ್ರಯಿಸದ ನಾರಾಯಣನು ನೋಡಿದನು. ಸರ್ವಗುಣಪೂರ್ಣ-ನಾದುದರಿಂದ ಆ ಶ್ರೀನಾರಾಯಣನನ್ನು ಪುರುಷ ಎನ್ನುತ್ತಾರೆ. ಆ ಪುರುಷನು ಸತ್ವಾದಿಗುಣಕಾರ್ಯಗಳಾದ ಸೃಷ್ಟ್ಯಾದಿಗಳನ್ನು ಮಾಡುವುದಕ್ಕಾಗಿ ಮೂರು ರೂಪಗಳನ್ನು ತೆಗೆದುಕೊಂಡನು. ಶ್ರೀ ವಿಷ್ಣುವು ರಕ್ಷಣೆಗಾಗಿ ಸತ್ವಗುಣವನ್ನು

ಬ್ರಹ್ಮಾಂತರ್ಗತ ಬ್ರಹ್ಮನಾಮಕ ಶ್ರೀಹರಿಯು ಸೃಷ್ಟಿಗಾಗಿ ರಜೋಗುಣವನ್ನು, ರುದ್ರಾಂತರ್ಗತನಾದ ಈಶಾನ ಎಂದು ಹೆಸರುಳ್ಳ ಶ್ರೀಹರಿಯು ಸಂಹಾರಕ್ಕಾಗಿ ತಮೋಗುಣವನ್ನೂ ತೆಗೆದುಕೊಂಡು ಬ್ರಹ್ಮರುದ್ರರಲ್ಲಿ ಪ್ರವೇಶ ಮಾಡಿದನು. ಬ್ರಹ್ಮ ಎಂಬ ರೂಪದಿಂದ ನಾಲ್ಕು ಮುಖಗಳುಳ್ಳ ಬ್ರಹ್ಮನನ್ನು, ಈಶನೆಂಬ ಶ್ರೀಹರಿಯು ಐದು ಮುಖವುಳ್ಳ ರುದ್ರನನ್ನೂ ಪ್ರವೇಶಿಸಿದನು. ಯಾವ ಶ್ರೀಹರಿಯು ರುದ್ರನನ್ನು ಪ್ರವೇಶಿಸಿದನೋ ಆ ಶ್ರೀಹರಿಯನ್ನು ಕಾಲನೆನ್ನುತ್ತಾರೆ ಎಂದು ಸೌಕರಾಯಣ ಶ್ರುತಿಯು ಇರುವುದು.

ಈ ಸೌಕರಾಯಣ ಶ್ರುತಿಯಲ್ಲಿ 'ಅಥ' ಆರಂಭಿಸಿ 'ಪರ್ಯಪಶ್ಯತ' ಎಂಬುವ-ವರೆಗೆ 'ಗುಣವ್ಯತಿಕರಾಕಾರಃ' ಎಂಬುದಕ್ಕೆ, 'ಅನನ್ಯಪ್ರತಿಷ್ಠ' ಎಂಬುವುದರಿಂದ 'ಅಪ್ರತಿಷ್ಠಿತ' ಎಂಬುದಕ್ಕೆ, 'ಪೂರ್ಣೋಹಿ' ಎಂದು 'ಪುರುಷ' ಎಂಬುದಕ್ಕೆ, 'ಸ ತ್ರೇಧಾ ಬಭೂವ' ಎಂಬುವುದರಿಂದ 'ಆತ್ಮಾನಂ ಲೀಲಯಾಸೃಜತ್' ಎಂಬುದಕ್ಕೆ, 'ಏಷಾಂ ಗುಣಾನಾಂ ಉಪಾದಾನಾಯ' ಎಂಬುದರಿಂದ 'ತದುಪಾದಾನಂ' ಎಂಬುದಕ್ಕೆ, 'ಈಶಾನೋ ನಾಮ ತಮಸಃ' ಎಂಬುದರಿಂದ 'ಈಶ್ವರೇಣ ಪರಿಚ್ಛಿನ್ನಂ' ಎಂಬುದಕ್ಕೆ, 'ಯೋ ವಾ' ಎಂದು 'ಕಾಲೇನ' ಎಂಬುದಕ್ಕೆ ವ್ಯಾಖ್ಯಾನಿಸಿ-ದಂತಾಯಿತು. ||೧೨||

ಜಗತ್ತು ಕಾಣಿಸುವುದರಿಂದ ಸುಳ್ಳು ಆದ ಕಾರಣ ವಿಷ್ಣುವಿನಿಂದ ಪಾಲಿತ ಮುಂತಾದುದು ಸುಳ್ಳು ಎಂದರೆ ಹೇಳುವರು–

**ಯಥೇದಾನೀಂ ತಥಾ ಚಾಗ್ರೇ ಪಶ್ಚಾದಪ್ಯೇತದೀದೃಶಂ ।**
**ಸರ್ಗೋ ನವ ವಿಧಸ್ತಸ್ಯ ಪ್ರಾಕೃತೋ ವೈಕೃತಶ್ಚ ಯಃ ||೧೩||**

ಏತತ್=ಈ ಪ್ರಪಂಚವು ಯಥಾ ಇದಾನೀಂ=ಇಗ ಹೇಗೆ ಇದೆಯೋ ತಥಾ= ಹಾಗೆಯೇ ಅಗ್ರೇ=ಹಿಂದೆಯೂ ಪಶ್ಚಾದಪಿ ಈದೃಶಂ=ಮುಂದೆಯೂ ಹೀಗೆ ಇರುವುದು ಎಂದು ಶ್ರುತಿಸಿದ್ಧವಾದುದು. ಅನಾದ್ಯನಂತಕಾಲಗಳಲ್ಲಿ ಏಕಪ್ರಕಾರ-ವಿರುವುದೆಂದು ಶ್ರುತಿ ಸಿದ್ಧವಾದುದು ಮಿಥ್ಯಾ ಹೇಗಾದೀತು? 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಅನುಮಾನವು ಬಾಧಿತವೆಂದರ್ಥ. ಈ ವರೆಗೆ ಬಹುರೂಪಾಣಿ ಎಂಬ ಪ್ರಶ್ನೆಗೆ ಮೂರು ರೂಪಗಳು ವ್ಯಕ್ತವಾದವು ಎಂದು ಉತ್ತರಿಸಿ, ಸಕಲಕಾರ್ಯಾಂತರ್ಗತ ಬಹುರೂಪಗಳನ್ನು ಹೇಳಲು ಸೃಷ್ಟಿಯ ಪ್ರಬೇಧಗಳನ್ನು ಉತ್ತರಾರ್ಧದಲ್ಲಿ ಹೇಳುವರು;

ತಸ್ಯ=ಪ್ರಪಂಚದ ಸರ್ಗಃ=ಸೃಷ್ಟಿಯು ಯಃ=ಯಾವುದು ಪ್ರಾಕೃತಃ=ಪ್ರಾಕೃತವೆಂದು ವೈಕೃತಃ=ವೈಕೃತವೆಂಬುದಾಗಿ ಇದೆಯೋ ಸಃ=ಅದು ನವವಿಧಃ= ಒಂಭತ್ತು ರೀತಿಯದು. ಅವ್ಯಕ್ತದಿಂದ ಪೃಥಿವಿಯವರೆಗೆ ಎಲ್ಲವು ಪ್ರಕೃತಿಗಳು. ತದುಪಾದನಕವಾದುದ್ದು ಪ್ರಾಕೃತ. ಬ್ರಹ್ಮಾಂಡವು ವಿಕೃತವು ಅದರಲ್ಲಿ ಉಂಟಾದದ್ದು ವೈಕೃತ. ಅರ್ಥಾತ್ ಬ್ರಹ್ಮಾಂಡದ ಹೊರಗಿನದು ಪ್ರಾಕೃತ. ಒಳಗಿನದು ವೈಕೃತವೆಂದು ತಿಳಿಯಬೇಕು. ಪ್ರಾಕೃತ ಆರು, ವೈಕೃತ ಮೂರು ಒಟ್ಟು ಒಂಭತ್ತು.

ಜಗತ್ತು ಏಕ ಪ್ರಕಾರ ಎಂಬಲ್ಲಿ ಪ್ರಮಾಣ ಕೊಡುವರು –

**ಸೃಷ್ಟಿಶ್ಚ ಪ್ರಳಯಶ್ಚೈವ ಸಂಸಾರೋ ಮುಕ್ತಿರೇವ ಚ ।**
**ದೇವಾ ಋಷಿಪ್ರಭೃತಯೋ ಲೋಕಾ ಭೂರಾದಯಸ್ತಥಾ ॥**
**ಅನಾದ್ಯಂನಂತಕಾಲೀನಾಃ ಸರ್ವದೈಕಪ್ರಕಾರತಃ ।**
**ಜಗತ್ಪ್ರವಾಹಃ ಸತ್ಯೋಽಯಂ ನೈವ ಮಿಥ್ಯಾ ಕಥಂಚನ ॥**
**ಯೇತ್ವೇತದನ್ಯಥಾ ಬ್ರೂಯುಃ ಸರ್ವಹಂತಾರ ಏವ ತೇ।**
**ದೇವೈರ್ಬ್ರಹ್ಮಾದಿಭಿಃ ಶಪ್ತಾ ಋಷಿಭಿರ್ಮಾನುಷಾದಿಭಿಃ ॥**
**ಸೇತಿಹಾಸೈಸ್ತಥಾ ವೇದೈಃ ಸರ್ವೇ ಯಾಂತ್ಯಧರಂ ತಮಃ ।**
**ಸರ್ವಬ್ರಹ್ಮತ್ವವೇತ್ತಾರೋ ಜೀವಬ್ರಹ್ಮತ್ವವೇದಿನಃ ॥**
**ಅನ್ಯಸಾಮ್ಯವಿದೋ ವಿಷ್ಣೋರ್ವಿಷ್ಣುದ್ವೇಷ್ಟಾರ ಏವ ಚ ।**
**ಸರ್ವೇ ಯಾಂತಿ ತಮೋ ಘೋರಂ ನ ಚೈಷಾಮುತ್ಥಿತಿಃ ಕ್ವಚಿತ್ ॥**

**ಇತಿ ಸ್ಕಾಂದೇ ।**

ಸೃಷ್ಟಿಯು, ಪ್ರಳಯವು, ಸಂಸಾರವು, ಮುಕ್ತಿಯು, ದೇವತೆಗಳು, ಋಷಿ ಮುಂತಾದವರು ಭೂರಾದಿಲೋಕಗಳು ಅನಾದಿಕಾಲದಿಂದ ಅನಂತ ಕಾಲದವರೆಗೆ ಏಕ ಪ್ರಕಾರವೇ ಆಗಿವೆ. ಈ ಜಗತ್ಪ್ರವಾಹವು ಸತ್ಯವಾಗಿದೆ. ಯಾವ ರೀತಿಯಿಂದಲೂ ಮಿಥ್ಯಾ ಅಲ್ಲವೇ ಅಲ್ಲ. ಯಾರು ಇದನ್ನು ಮಿಥ್ಯಾ ಎಂದು ಹೇಳುವರೋ ಅವರು ಎಲ್ಲರನ್ನು ಕೊಂದವರಂತೆ. ಬ್ರಹ್ಮಾದಿದೇವತೆಗಳಿಂದ ಋಷಿಗಳಿಂದ ಶಪಿಸಲ್ಪಟ್ಟು ತಮಸ್ಸಿಗೆ ಹೋಗುವರು. ಅದರಂತೆ ಎಲ್ಲವೂ ಬ್ರಹ್ಮನೇ ಎಂದು ತಿಳಿದವರು, ಜೀವನನ್ನು ಬ್ರಹ್ಮನೆಂದು ತಿಳಿದವರು, ವಿಷ್ಣುವಿಗೆ ಬೇರೆಯವರ ಸಮಾನತೆ ತಿಳಿಯುವವರು, ವಿಷ್ಣುವನ್ನು ದ್ವೇಷಿಸುವವರು ಎಲ್ಲರೂ ಘೋರವಾದ ತಮಸ್ಸನ್ನು ಹೊಂದುವರು. ಯಾವ ಕಾಲದಲ್ಲಿಯೂ ಪುನಃ ಮೇಲೆ ಬರಲಾರರು ಎಂದು ಸ್ಕಾಂದ ವಚನದ ಅಭಿಪ್ರಾಯ. ॥೧೩॥

ಪ್ರಾಸಂಗಿಕವಾಗಿ ಕಾಲನಾಮಕರುದ್ರನಿಂದ ಮಾಡಲ್ಪಡುವ ಸಂಹಾರವೂ ಮೂರು ವಿಧ ಎಂದು ಪೂರ್ವಾರ್ಧದಲ್ಲಿ ಹೇಳುವರು –

**ಕಾಲದ್ರವ್ಯಗುಣೈರಸ್ಯ ತ್ರಿವಿಧಃ ಪ್ರತಿಸಂಕ್ರಮಃ ।**
**ಆದ್ಯಸ್ತು ಮಹತಃ ಸರ್ಗೋಽಗುಣವೈಷಮ್ಯಮಾತ್ಮನಃ ॥೧೪॥**

ಅಸ್ಯ=ಈ ಪ್ರಪಂಚಕ್ಕೆ ಕಾಲದ್ರವ್ಯಗುಣೈಃ=ಕಾಲದಿಂದಲೂ, ವಿರೋಧಿದ್ರವ್ಯ-ಗಳಿಂದಲೂ,ಸತ್ವಾದಿಗುಣಗಳಿಂದಲೂ ತ್ರಿವಿಧಃ=ಮೂರು ರೀತಿಯ ಪ್ರತಿಸಂಕ್ರಮಃ= ನಾಶವು ಪ್ರಳಯವು ಆಗುವುದು.

ಪ್ರಾಕೃತಸರ್ಗದ ವಿಭಾಗವನ್ನು ಹೇಳುವರು–

ಆತ್ಮನಃ=ಪರಮಾತ್ಮನಿಂದ ಗುಣವೈಷಮ್ಯಂ=ಜನಕವಾದ ಗುಣಗಳು ಹೆಚ್ಚು ಕಡಿಮೆ ಇದ್ದುದರಿಂದ ಗುಣವೈಷಮ್ಯವೆಂಬ ತತ್ವವು ಜನಿಸುವುದು. ಅದು ಮಹತಃ=ಮಹತ್ತತ್ವದ ಸರ್ಗಃ=ಸೃಷ್ಟಿಯು ಸ ಏವ ಆದ್ಯಃ=ಪ್ರಾಕೃತಸೃಷ್ಟಿಯಲ್ಲಿ ಮೊದಲನೆಯದು.

ಕಾಲಾದಿಗಳಿಂದ ಆಗುವ ಪ್ರಳಯವನ್ನು ಪ್ರಮಾಣದಿಂದಲೇ ತಿಳಿಸುವರು–

**ತಾಮಸಸ್ಯ ಪದಾರ್ಥಸ್ಯ ಸತ್ವಂ ಹಿ ಲಯಕಾರಣಂ ।**
**ಸಾತ್ವಿಕಸ್ಯ ತಮಶ್ಚೈವ ತಯೋರಪಿ ರಜಃ ಕ್ವಚಿತ್ ॥**
**ಗುಣತೋಽಯಂ ಲಯಃ ಪ್ರೋಕ್ತೋ ದ್ರವ್ಯತಸ್ತು ವಿರೋಧಿನಾ ।**
**ಕಾಲತಃ ಕಾಲಸಂಖ್ಯಾಕೋ ಲಯಃ ಸರ್ವಸ್ಯ ವಸ್ತುನಃ ॥ ಇತಿ ಬ್ರಹ್ಮತರ್ಕೇ ।**

ತಾಮಸಗಳಾದ ದುಃಖ, ಮೋಹಾದಿಗಳಿಗೆ ಅಭಿವೃದ್ಧವಾದ ಸತ್ವಗುಣವು ನಾಶಕಾರಣವು. ಸಾತ್ವಿಕವಾದ ಜ್ಞಾನ, ಸುಖಾದಿಗಳಿಗೆ ಅಭಿವೃದ್ಧವಾದ ತಮೋಗುಣವು ಲಯಕಾರಣವು. ತಾಮಸ,ಸಾತ್ವಿಕಪದಾರ್ಥಗಳಿಗೆ ಅಭಿವೃದ್ಧವಾದ ರಜೋಗುಣವು ಲಯಕಾರಣವು. ಹೀಗೆ ಗುಣದಿಂದಾಗುವ ಲಯವು ಹೇಳಲ್ಪಟ್ಟಿದೆ.

ಇನ್ನು ವಿರೋಧಿಯಾದ ಬೆಳಕಿನಿಂದ ಕತ್ತಲೆಯು, ಪಿತ್ತದಿಂದ ಶ್ಲೇಷ್ಮಗಳ ನಾಶವಾಗುವುದು. ಇದು ದ್ರವ್ಯದಿಂದ ನಾಶಕ್ಕೆ ಉದಾಹರಣ. ಅದರಂತೆ ಒನಕೆಯಿಂದ ಮಣ್ಣಿನ ಮಡಿಕೆ ಒಡೆಯುವುದು ದ್ರವ್ಯದಿಂದ ನಾಶವೆ. ಎಲ್ಲ ವಸ್ತುಗಳಿಗೂ ಇಂತಿಷ್ಟು ಎಂಬ ಕಾಲದ ಸಂಖ್ಯೆಯಿಂದ ನಾಶ. ಉದಾಹರಣೆಗೆ ಮನುಷ್ಯನಿಗೆ ನೂರುವರ್ಷಗಳಿಂದ, ಪಶುಗಳಿಗೆ ೨೦ ವರ್ಷಗಳಿಂದ ಮುಂತಾಗಿ ಆಗುವ ನಾಶ ಕಾಲದಿಂದನಾಶ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಮೇಲಿನ ಶ್ಲೋಕದಲ್ಲಿ ಪ್ರಸಕ್ತವಾದ ಗುಣವೈಷಮ್ಯಶಬ್ದಾರ್ಥವನ್ನು ತಿಳಿಸಲು ಅಪೇಕ್ಷಿತವಾದ ಗುಣಸಾಮ್ಯವನ್ನು ತಿಳಿಸಲು ಮೊದಲಿಗೆ ರಾಶೀಕೃತ ಗುಣಗಳ ಸ್ಥಿತಿಯನ್ನು ಹೇಳುವರು–

> "ತಮಸೋ ರಜಸ್ತು ದ್ವಿಗುಣಂ ರಜಸಃ ಸತ್ವಮೇವ ಚ ।
> ಪರಿಮಾಣತ ಏವಂ ಸ್ಯುಸ್ತ್ರಯಃ ಪ್ರಕೃತಿಜಾ ಗುಣಾಃ ॥
> ತತ್ರ ಸತ್ವಂ ಕೇವಲಂ ಸ್ಯಾತ್ ರಜಸ್ಯಪಿ ಶತಾಧಿಕಂ ।
> ಸತ್ವಂ ರಜಃ ಶತಾಂಶಂ ತು ತಮಸ್ತತ್ರ ಪ್ರಕೀರ್ತಿತಂ ॥
> ತಮಸ್ಯಪಿ ತಥಾ ಸತ್ವಂ ತಮಸಸ್ತು ದಶೋತ್ತರಂ ।
> ತದರ್ಧಾಂಶೇನ ತು ರಜೋ ಮೂಲಜಂ ಯದ್ರಜಸ್ತು ತತ್ ॥
> ವಿಲಯೇ ದಶಾಂಶತಃ ಸತ್ವ ಏಕಾಂಶೇನ ತಮಸ್ಯಪಿ ।
> ಮಿಶ್ರಿತಂ ಭವತಿ ಹ್ಯೇತಾಂ ಸಾಮ್ಯಾವಸ್ಥಾಂ ವಿದುರ್ಬುಧಾಃ ॥
> ಯದಾ ತು ತದ್ರಜಃ ಸರ್ವಂ ತಮಸಾ ಸಹ ಸಂಗತಂ ।
> ತದಾ ತ್ವಾಹುರ್ಮಹತ್ತತ್ವಂ ತಚ್ಚತುರ್ಭಾಗಸಂಭವಂ ॥
> ತತ್ರ ತ್ರಿಭಾಗೋ ರಜಸ ಏಕೋಂಶಸ್ತಮಸಸ್ತಥಾ ।
> ತದಾಹುರ್ಬ್ರಹ್ಮಣೋ ರೂಪಂ ಗುಣವೈಷಮ್ಯನಾಮಕಂ ॥
> ತದೇವ ಕೇವಲಂ ಸತ್ವಂ ಇತರಾಪೇಕ್ಷಯಾ ಭವೇತ್ ।
> ಶ್ರೀರ್ಮೂಲಸತ್ವಂ ವಿಜ್ಞೇಯಾ ಭೂರ್ಮೂಲಂ ರಜ ಉಚ್ಯತೇ ॥
> ಮೂಲಂ ತಮಸ್ತಥಾ ದುರ್ಗಾ ಮಹಾಲಕ್ಷ್ಮೀಸ್ತ್ರಿಮೂಲಿಕಾ ।
> ಗುಣೇಭ್ಯೋ ಗುಣಮೂಲಾಚ್ಚ ಯೋಽತೀತಃ ಸ ಜನಾರ್ದನಃ ॥
> ಯದ್ರಜೋ ಮೂಲರಜಸಿ ಮೂಲೇ ತಮಸಿ ಯದ್ರಜಃ ।
> ತಮಶ್ಚ ಮೂಲೇ ತಮಸಿ ಮಹತ್ತತ್ವಂ ತದಾತ್ಮಕಂ ॥
> ದಶಾಂಶಾಸ್ತತ್ರ ಸತ್ವಂ ಸ್ಯುರೇಕಾಂಶೋ ರಜ ಏವ ತು ।
> ತದ್ದ್ವಾಶಾಶಂ ತಮೋ ಜ್ಞೇಯಂ ॥



ಚಿತ್ರ ೧ ಮೂಲಪ್ರಕೃತಿ ಗುಣಮಿಶ್ರಣ
□ ಸತ್ವ ಗುಣ (೪ ಭಾಗ)
▧ ರಜೋ ಗುಣ (೨ ಭಾಗ)
■ ತಮೋಗುಣ (೧ ಭಾಗ)

ತಮೋಗುಣಕ್ಕಿಂತ ರಜೋಗುಣವು ಎರಡು ಪಟ್ಟು (ದ್ವಿಗುಣ), ರಜೋಗುಣದ ಎರಡುಪಟ್ಟು ಸತ್ವಗುಣವು ಇರುವುದು. ಅಂದರೆ ಸೃಷ್ಟಿಗಾಗಿ ಅಪರಿಚ್ಛಿನ್ನ ಪ್ರಕೃತಿಯಿಂದ ಸ್ವೀಕರಿಸುವ ಸತ್ವರಜಸ್ತಮೋ ಗುಣಗಳ ಪರಿಮಾಣ ಕ್ರಮವಾಗಿ ಸ-೪. ರ-೨. ತ-೧. ಎಂದಂತಾಯಿತು. ಇವುಗಳಿಗೆ ರಾಶೀಕೃತ ಗುಣವೆಂದು, ಮೂಲಗುಣವೆಂದೂ ಕರೆಯುವರು. ಇವುಗಳು ಕೆಲವು

ಭಾಗದಿಂದ ಮಹದಾದಿಗಳಿಗೆ ಉಪಾದಾನವಾಗುವವು ಕೆಲವುಭಾಗ ಹಾಗೆ ಉಳಿದು ಅಪಾದಾನವೆನಿಸುವದು. (ಚಿತ್ರ.೧)



ಚಿತ್ರ ೨.ಶುದ್ಧ ಸತ್ವ

ಈ ಮೂರರಲ್ಲಿ ಸತ್ವವು ರಜೋಗುಣ, ತಮೋಗುಣಗಳಿಂದ ಮಿಶ್ರವಾಗದೆ ಶುದ್ಧವಾಗಿರುವುದು. (ಚಿತ್ರ ೨.)

ರಜೋಗುಣ, ತಮೋಗುಣಗಳು ಗುಣತ್ರಯ ಮಿಶ್ರಣ ರೂಪವಾದುವು. ರಜೋ-ರಾಶಿಯಲ್ಲಿ ರಜೋಗುಣಕ್ಕಿಂತ ನೂರುಪಟ್ಟು ಸತ್ವಗುಣ, ರಜೋಗುಣದ ನೂರನೇ ಒಂದಂಶ ತಮೋಗುಣವು ಇರುವುದು. (ಅಂದರೆ ೧೦೦ ಸತ್ವಗುಣ. ೧ ರಜೋಗುಣ. ೧/೧೦೦ ತಮೋ ಗುಣ.) (ಚಿತ್ರ.೩)


ಚಿತ್ರ ೩. ರಜೋಗುಣ ಮಿಶ್ರಣ
□ ಸತ್ವ ಗುಣ (೧೦೦ ಭಾಗ)
▨ ರಜೋ ಗುಣ (೧ ಭಾಗ)
■ ತಮೋಗುಣ (೧/೧೦೦ ಭಾಗ)

ತಮೋರಾಶಿಯಲ್ಲಿ ತಮೋಗುಣದ ಹತ್ತು ಪಟ್ಟು ಸತ್ವಗುಣ, ತಮೋಗುಣದ ೧೦ನೇ ಒಂದಂಶ ರಜೋಗುಣ ಇರುವುದು. (ಅಂದರೆ ಸತ್ವಗುಣ ೧೦, ರಜೋಗುಣ ೧/೧೦ ತಮೋಗುಣ ೧.) (ಚಿತ್ರ.೪) ಇದು ರಾಶೀಕೃತ ಗುಣಗಳ ಸ್ಥಿತಿ. (ರಜೋರಾಶಿ ತಮೋರಾಶಿಯಲ್ಲಿ ಸತ್ವಗುಣವೇ ಹೆಚ್ಚಾಗಿದ್ದರೂ ಇತರ ಎರಡು ಗುಣಗಳಲ್ಲಿ ಎಲ್ಲಿ ಯಾವುದು ಹೆಚ್ಚಿದೆಯೋ ಅದನ್ನು ಆ ಗುಣವೆಂದು ಕರೆಯುವರು.)


ಚಿತ್ರ ೪. ತಮೋಗುಣ ಮಿಶ್ರಣ
□ ಸತ್ವ ಗುಣ (೧೦ ಭಾಗ)
▨ ರಜೋ ಗುಣ (೧/೧೦ ಭಾಗ)
■ ತಮೋಗುಣ (೧ ಭಾಗ)

ಇನ್ನು ಸಾಮ್ಯಾವಸ್ಥೆಯ ನಿರೂಪಣೆ - ಪ್ರಳಯಕಾಲದಲ್ಲಿ ಮಹತ್ತತ್ವವು ಗುಣತ್ರಯದಲ್ಲಿ ಲಯವನ್ನು ಹೊಂದುತ್ತದೆ. ಲಯವನ್ನು ಹೊಂದುವಾಗ ಮಹತ್ತತ್ವ- ದಲ್ಲಿರುವ ರಜೋಗುಣವು ೧೨ ವಿಭಾಗವಾಗಿ ೧೦ ಅಂಶದಿಂದ ಸತ್ವರಾಶಿಯಲ್ಲಿ ಒಂದಂಶ ದಿಂದ ತಮೋರಾಶಿಯಲ್ಲಿ ಸೇರುವುದು. ಒಂದು ಭಾಗ ರಜೋರಾಶಿಯಲ್ಲಿ ಸೇರುವುದು. ಈ ರೀತಿ ಪ್ರಳಯಕಾಲದಲ್ಲಿ ಮೂರೂ ಗುಣಗಳು ಗುಣಾಂತರ ಮಿಶ್ರವಾಗಿ-

ಪ್ರಳಯಕಾಲದಲ್ಲಿ ಮಹತ್ತತ್ವಾಂತರ್ಗತ ರಜೋ ಗುಣ ಲಯ ಕ್ರಮ

ಚಿತ್ರ ೫



ಗುಣಸಾಮ್ಯಾವಸ್ಥಾ - ಸತ್ವ, ರಜಸ್, ತಮೋ ಗುಣಗಳು ಗುಣಾಂತರಮಿಶ್ರವಾಗುವಿಕೆ

ರುವುದರಿಂದ ಮೂರರಲ್ಲೂ 'ಮಿಶ್ರಿತತ್ವ'ಎಂಬ ಸಾಮ್ಯಬಂತು. ಆದ್ದರಿಂದ ಈ ಪ್ರಳಯಾವಸ್ಥೆಯನ್ನು 'ಸಾಮ್ಯಾವಸ್ಥಾ' ಎಂದು ಕರೆಯುವರು. ಮಿಶ್ರಿತತ್ವೇನ ಸಾಮ್ಯವೇ ಹೊರತು ಗುಣಗಳು ಸಮಪ್ರಮಾಣದಿಂದ ಸೇರುವುದೆಂದಲ್ಲ. (ಚಿತ್ರ.೫)

ಪ್ರಶ್ನೆ-ಪ್ರಲಯದಲ್ಲಿ ರಾಶೀಕೃತಸತ್ವಾದಿಗುಣಗಳು ಗುಣಾಂತರ ಮಿಶ್ರವಾಗಿರುತ್ತವೆ. ಅವುಗಳಲ್ಲಿ ಮಿಶ್ರಿತತ್ವ ಎಂಬ ಸಾಮ್ಯವಿರುವುದರಿಂದ ಪ್ರಲಯವನ್ನು ಸಾಮ್ಯಾವಸ್ಥಾ ಎಂದು ಕರೆದರೂ, ಈ ರಾಶೀಕೃತಗುಣಗಳು ಮೂಲಪ್ರಕೃತಿಯಲ್ಲಿ ಲಯವಾದ ಮೇಲೆ ಪ್ರಲಯವನ್ನು ಸಾಮ್ಯಾವಸ್ಥಾ ಎಂದು ಹೇಗೆ ಕರೆಯುವದು?

ಉತ್ತರ-ರಾಶೀಕೃತಸತ್ವಾದಿಗುಣಗಳು ಯಾವ ಪ್ರಕೃತಿಯಲ್ಲಿ ಲಯ ಹೊಂದುವವೋ ಆ ಪ್ರಕೃತಿಯೂ ಗುಣತ್ರಯಾತ್ಮಕವಾಗಿಯೇ ಇರುವುದು. ಅಂದರೆ ಮಹದಾದಿಗಳಂತೆ ಗುಣತ್ರಯಗಳಿಗೂ ಉಪಾದಾನಕಾರಣವಾದದ್ದು ಗುಣತ್ರಯಗಳ ಸೂಕ್ಷ್ಮರೂಪವೇ. ಆ ಸೂಕ್ಷ್ಮರೂಪದಲ್ಲಿಯೇ ರಾಶೀಕೃತಸತ್ವಾದಿ ಗುಣಗಳ ಲಯವಾಗುವುದು. ಆ ಸೂಕ್ಷ್ಮರೂಪಗಳೂ ಮಿಶ್ರವೇ ಆಗಿರುವುದರಿಂದ ಅವುಗಳಲ್ಲಿ ಲಯವಾದರೂ ಈ ಗುಣತ್ರಯಗಳಲ್ಲಿ ಮಿಶ್ರಿತತ್ವ ಎಂಬ ಸಾಮ್ಯಇದ್ದೇ ಇರುವುದು. ಆದ್ದರಿಂದ ಆಗಲೂ ಪ್ರಲಯವನ್ನು ಸಾಮ್ಯಾವಸ್ಥೆ ಎಂದು ಕರೆಯಬಹುದು. ಇಲ್ಲವಾದರೆ ಸೃಷ್ಟಿಯ ಆರಂಭದಲ್ಲಿ ಮಾತ್ರ 'ತತ್ರ ಸತ್ವಂ ಕೇವಲಂ ಸ್ಯಾತ್' ಎಂದು ಸತ್ವಕ್ಕೆ ಶುದ್ಧತೆ ಹೇಗೆ ಹೇಳುವರು. ಇದರಿಂದ ಉಳಿದ ಕಾಲದಲ್ಲಿ ಗುಣಗಳು ಮಿಶ್ರವಾಗಿಯೇ ಇರುವುದು ಎಂದು ತಿಳಿಯುವುದು.



ಚಿತ್ರ.೬

ಇನ್ನು ಗುಣವೈಷಮ್ಯದ ನಿರೂಪಣೆ:- ಯಾವ ರಜೋಗುಣವು ಪ್ರಳಯದಲ್ಲಿ ಹತ್ತುಭಾಗ ಸತ್ವದಲ್ಲಿ, ಒಂದುಭಾಗ ತಮಸ್ಸಿನಲ್ಲಿ, ಇನ್ನೊಂದು ರಜಸ್ಸಿನಲ್ಲಿ ಪ್ರವಿಷ್ಟವಾಗಿತ್ತೋ ಆ ಹನ್ನೆರಡು ಭಾಗವುಳ್ಳ ಎಲ್ಲ ರಜೋಗುಣವು ಸೃಷ್ಟಿಕಾಲದಲ್ಲಿ ಹನ್ನೊಂದು ಭಾಗದಿಂದ ರಜೋರಾಶಿಯಲ್ಲಿ, ಒಂದು ಭಾಗದಿಂದ ತಮೋರಾಶಿಯಲ್ಲಿ ಪ್ರವೇಶಿಸಿ ತಮೋರಾಶಿಯಲ್ಲಿರುವ ತಮೋಭಾಗದಿಂದ ಕೂಡಿಕೊಳ್ಳುವುದು. (ಚಿತ್ರ.೬)

ಆ ರಜೋಗುಣ, ತಮೋಗುಣಗಳ ನಾಲ್ಕು ಭಾಗಗಳಿಂದ ಉತ್ಪನ್ನವಾದುದೇ ಮಹತ್ತತ್ತ್ವವೆಂದು ಜ್ಞಾನಿಗಳು ಹೇಳುವರು. ಮಹತ್ತತ್ತ್ವದಲ್ಲಿ ನಾಲ್ಕು ಭಾಗಗಳು. ಅವುಗಳಲ್ಲಿ ಒಂದು ಭಾಗ ತಮೋಗುಣ, ಮೂರು ಭಾಗ ರಜೋಗುಣ. (ಒಂದು ಭಾಗ ತಮೋರಾಶಿಯಲ್ಲಿರುವ ರಜೋಗುಣದಿಂದ ಬಂದದ್ದು, ಇನ್ನೆರಡು ಭಾಗ ರಜೋರಾಶಿಯಲ್ಲಿರುವ ರಜೋಗುಣದಿಂದ ಬಂದದ್ದು. ಇದರಲ್ಲಿಯೂ ಒಂದು ಭಾಗ ಪ್ರಳಯಕಾಲದಲ್ಲಿ ಸತ್ತ್ವರಾಶಿಯಲ್ಲಿ ಪ್ರವಿಷ್ಟವಾಗಿ ಪುನಃ ಸೃಷ್ಟಿಕಾಲದಲ್ಲಿ ರಜೋರಾಶಿಯಲ್ಲಿ ಬಂದಿತ್ತೋ ಅಂತಹ ರಜೋಗುಣದಿಂದ ಬಂದದ್ದು. ಇನ್ನೊಂದು ರಜೋರಾಶಿ ಪ್ರವಿಷ್ಟ ರಜೋಗುಣದಿಂದ ಬಂದದ್ದು.) ಈ ಮಹತ್ತತ್ತ್ವವು ಬ್ರಹ್ಮದೇವರಿಂದ ಅಭಿಮನ್ಯಮಾನವಾದುದರಿಂದ ಬ್ರಹ್ಮದೇವರ ದೇಹಸ್ಥಾನೀಯ-ವಾಗಿದೆ. ಈ ಮಹತ್ತತ್ತ್ವವು, ಮೂರು ರಜೋಗುಣ, ಒಂದು ತಮೋಗುಣ ಹೀಗೆ ವಿಷಮ ಸಂಖ್ಯಾವುಳ್ಳ ಭಾಗವುಳ್ಳದ್ದಾದ್ದರಿಂದ ಗುಣವೈಷಮ್ಯವೆನಿಸುವುದು. ಮತ್ತು

ಚಿತ್ರ ೭ **ಮಹತ್ತತ್ತ್ವದ ಉತ್ಪತ್ತಿ - ಗುಣ ವೈಷಮ್ಯ**




ರಾಶೀಕೃತ ಗುಣಗಳಲ್ಲಿ "ಸತ್ತ್ವವು ಶುದ್ಧ" (ಅಮಿಶ್ರ) "ರಜೋಗುಣ-ತಮೋಗುಣಗಳು ಮಿಶ್ರ" ಹೀಗೆ ವೈಷಮ್ಯ ಇರುವುದು. ಇವುಗಳಿಂದ ಜನ್ಯವಾದುದರಿಂದಲೂ ಗುಣವೈಷಮ್ಯವೆನಿಸುವುದು. ಯದ್ಯಪಿ ಮಹತ್ತತ್ತ್ವವು ರಜೋಗುಣ-ತಮೋಗುಣ-ಗಳಿಂದ ಹುಟ್ಟಿದೆ. ಆದರೂ ರಜೋಗುಣದಲ್ಲಿ ಬಹುತರ(೧೦೦ಪಟ್ಟು) ಸತ್ತ್ವವಿರುವುದರಿಂದ ಮಹತ್ತತ್ತ್ವದಲ್ಲಿ ಸತ್ತ್ವವೇ ಇಲ್ಲ ಎಂದು ಶಂಕಿಸಬಾರದು.

ಇನ್ನು ಬ್ರಹ್ಮದೇವರ ದೇಹ ಶುದ್ಧಸಾತ್ತ್ವಿಕವೆಂದು ಪ್ರಸಿದ್ಧಿಯಿದೆ. ಅದು ಹೇಗೆ ಎಂದರೆ, ಹಿಂದೆ ಹೇಳಿದಂತೆ ನಾಲ್ಕು ಭಾಗಗಳಿಂದ (ರ.೩,ತ.೧) ಉತ್ಪನ್ನವಾದ

ಮಹತ್ತತ್ವದಲ್ಲಿ ಅಹಂಕಾರತತ್ವದಲ್ಲಿರುವಸತ್ವಕ್ಕಿಂತ ಹೆಚ್ಚು ಸತ್ವವಿರುವುದರಿಂದ ಕೇವಲ ಸತ್ವಾತ್ಮಕವೆನಿಸುತ್ತದೆ. ಕೇವಲವೆಂದರೆ ಅಧಿಕವೆಂದೇ ಅರ್ಥ ಹೊರತು ಅಮಿಶ್ರವೆಂದಲ್ಲ. (ಚಿತ್ರ.೭)

'ಯದ್ರಜೋ ಮೂಲರಜಸಿ' ಎಂಬುದರಿಂದ 'ತತ್ರ ತ್ರಿಭಾಗೋ ರಜಸಃ' ಎಂಬುದರ ವಿವರಣ ಮಾಡಲು ಮೂಲಸತ್ವಾದಿಶಬ್ದಾರ್ಥ ಹೇಳುವರು. ಅಭಿಮಾನಿಗಳಾದುದರಿಂದ ಶ್ರೀ, ಭೂ, ದುರ್ಗಾದೇವಿಯರೇ ಮೂಲಸತ್ವ, ಮೂಲರಜ, ಮೂಲತಮ ಎಂಬ ಶಬ್ದಗಳಿಂದ ಕರೆಸಿಕೊಳ್ಳುವರು. ಅವರಿಂದ ಅಭಿಮನ್ಯಮಾನಗುಣಗಳೂ ಕರೆಸಿಕೊಳ್ಳುವುವು. ಈ ಮೂರು ಅಂಶಗಳುಳ್ಳ ಮೂಲಪ್ರಕೃತಿಗೆ ಅಭಿಮಾನಿನೀ ಮಹಾಲಕ್ಷ್ಮಿ ತ್ರಿಮೂಲಿಕಾ ಎನಿಸುವಳು. ಸತ್ವಾದಿಗುಣಗಳಿಂದಲೂ ಗುಣಮೂಲವೆನಿಸುವ ಚಿತ್ಪ್ರಕೃತಿಯಿಂದಲೂ ಅತೀತನಾದವನು ಸರ್ವೋತ್ತಮನೂ ಶ್ರೀಹರಿಯು.

ಈಗ ತತ್ರ ತ್ರಿಭಾಗಃ ಎಂದು ಹೇಳಿದ್ದನ್ನು ವಿವರಿಸುವರು. ಮೂಲ ರಜೋಗುಣದಲ್ಲಿ ಅಂದರೆ ಮೂಲರಜವೆಂಬ ಭೂದೇವಿಯಿಂದ ಅಭಿಮನ್ಯಮಾನವಾದ ರಾಶೀಕೃತ ರಜೋಗುಣದಲ್ಲಿ ಇರುವ ರಜಸ್ಸಿನ ಹನ್ನೊಂದು ಭಾಗವು ಮತ್ತು ಮೂಲತಮೋನಾಮಕ ದುರ್ಗಾಭಿಮನ್ಯಮಾನ ರಾಶೀಕೃತ ತಮೋಗುಣದಲ್ಲಿರುವ ಏನು ರಜೋಗುಣವಿದೆಯೋ ಆ ರಜೋಗುಣ ಮತ್ತು ಮೂಲತಮಸ್ಸಿನಲ್ಲಿರುವ (ರಾಶೀಕೃತ) ಏನು ತಮೋಗುಣವಿದೆಯೋ ಅವುಗಳೇ ಉಪಾದಾನವಾಗಿ ಉಳ್ಳದ್ದು ಮಹತ್ತತ್ವವು. ಅಂತು ಮಹತ್ತತ್ವದಲ್ಲಿ ನಾಲ್ಕು ಭಾಗಗಳು. ಅವುಗಳಲ್ಲಿ ಒಂದಾದ ತಮೋಭಾಗವೇನಿದೆಯೋ ಅದು ತಮೋರಾಶಿಯಲ್ಲಿರುವ ತಮೋಗುಣೋಪಾದನಕವು. ಮೂರು ರಜೋಭಾಗಗಳಲ್ಲಿ ಒಂದು ತಮೋಗುಣದಲ್ಲಿರುವ ರಜೋಗುಣೋಪಾದಾನಕವಾದುದು. ಎರಡು ಭಾಗಗಳು ರಜೋಗುಣ ದಲ್ಲಿರುವ ರಜೋಗುಣೋಪಾದಾನಕವಾದವು. ಅದರಲ್ಲಿಯೂ ಒಂದು ಯಾವುದು ಪ್ರಳಯದಲ್ಲಿ ಸತ್ವರಾಶಿಯಲ್ಲಿ ಸೇರಿತ್ತೋ ಮತ್ತೆ ಸೃಷ್ಟಿ ಕಾಲದಲ್ಲಿ ರಜೋರಾಶಿಗೆ ಬಂದಿತ್ತೋ ಅದೇ ಎಂದು ತಿಳಿಯಬೇಕು.



ಚಿತ್ರ ೮. ಮಹತ್ತತ್ವದ ಗುಣಮಿಶ್ರಣ
□ ಸತ್ವ ಗುಣ (೧೦ ಭಾಗ)
▨ ರಜೋ ಗುಣ (೧ ಭಾಗ)
■ ತಮೋಗುಣ (೧/೧೦ ಭಾಗ)

ಮಹತ್ತತ್ವದಲ್ಲಿ ೧೦ ಅಂಶ ಸತ್ವಗುಣವು, ಒಂದು ಅಂಶ ರಜೋಗುಣವು ರಜೋಗುಣದ ಹತ್ತನೇ ಒಂದಂಶ ತಮೋಗುಣವು ಇರುವುವು. ಈ ಕಾರಣದಿಂದಲೇ ಅಧಿಕ ಸತ್ವಾಂಶೋಪೇತವಾದದ್ದರಿಂದ ಅದನ್ನು ಶುದ್ಧಸತ್ವಾತ್ಮಕ, ಕೇವಲ ಸತ್ವಾತ್ಮಕ ಎನ್ನುವರು. (ಚಿತ್ರ. ೮)

ಹೀಗಿರುವುದರಿಂದ ಪರಮಾತ್ಮನಿಂದ ಮಾಡಲ್ಪಡುವ ಪ್ರಾಕೃತಸೃಷ್ಟಿಯ ಮೊದಲನೆಯದಾದ ಮಹತ್ತತ್ವವು, ಅಧಿಕ ರಜೋಗುಣ (೩) ನ್ಯೂನತಮೋಗುಣ (೧) ಈ ವೈಷಮ್ಯವುಳ್ಳ ಗುಣದಿಂದ ಜನಿಸಿದ್ದರಿಂದ ಗುಣವೈಷಮ್ಯ ನಾಮಕವೆನಿಸುವುದು. ॥೧೪॥

ಎರಡನೇ ಸೃಷ್ಟಿ ಹೇಳುವರು –

**ದ್ವಿತೀಯಸ್ತ್ವಹಮಸ್ತತ್ರ ದ್ರವ್ಯಜ್ಞಾನಕ್ರಿಯಾದಯಃ ।**
**ಭೂತಸರ್ಗಸ್ತೃತೀಯಸ್ತು ತನ್ಮಾತ್ರದ್ರವ್ಯಶಕ್ತಿಮಾನ್ ॥೧೫॥**

ತದಾತ್ಮಕಃ=ಮಹತ್ತತ್ವಾಂತರ್ಗತ ತಮೋಭಾಗಾತ್ಮಕವಾದ ಅಹಮಃ=ಅಹಂಕಾರ-ತತ್ವದ ಸರ್ಗಃ=ಸೃಷ್ಟಿಯು ದ್ವಿತೀಯಃ=ಎರಡನೆಯದು. ತತ್ರ=ಅಹಂಕಾರದಲ್ಲಿ ದ್ರವ್ಯಜ್ಞಾನಕ್ರಿಯಾದಯಃ=ಪಂಚಮಹಾಭೂತಗಳು, ಜ್ಞಾನೇಂದ್ರಿಯ, ಕರ್ಮೇಂದ್ರಿಯ ಮತ್ತು ದೇವತೆಗಳದೇಹಜನಕ ಶಕ್ತಿಗಳು ಸಂತಿ=ಇರುವುವು. ಭೂತಸರ್ಗಃ= ಪಂಚಭೂತಗಳ ಸೃಷ್ಟಿಯು ತೃತೀಯಃ=ಮೂರನೆಯದು ತಾಮಸವು. ಈ ಭೂತಗಳು ತನ್ಮಾತ್ರದ್ರವ್ಯಶಕ್ತಿಮಾನ್=ಮಾತ್ರಾಶಕ್ತಿಮಾನ್=ಶಬ್ದಾದಿಗಳಿಂದ ಉಪ-ಚಯಹೊಂದಿ ಪರಿಣತವಾದುದು, ದ್ರವ್ಯಶಕ್ತಿಮಾನ್=ದ್ರವಣಪ್ರಾಪ್ಯವಾದುದು ಎಂದರ್ಥ.

ಚಿತ್ರ ೯. ಅಹಂಕಾರಾದ್ಯುತ್ಪತ್ತಿ



**ಚತುರ್ಥ ಐಂದ್ರಿಯಃ ಸರ್ಗೋ ಯಸ್ತು ಜ್ಞಾನಕ್ರಿಯಾತ್ಮಕಃ ।**
**ವೈಕಾರಿಕೋ ದೇವಸರ್ಗಃ ಪಂಚಮೋ ಯನ್ಮಯಂ ಮನಃ ॥೧೬॥**

ಯಃ=ಯಾವುದು ಜ್ಞಾನಕ್ರಿಯಾತ್ಮಕಃ=ಜ್ಞಾನಜನಕ, ಕ್ರಿಯಾಜನಕಶಕ್ತಿಯುಳ್ಳ ತು=ಅಂಹಕಾರಗತ ರಜೋಗುಣಕಾರ್ಯವಾದ ಅರ್ಥಾತ್ ತೈಜಸಅಹಂಕಾರ ಕಾರ್ಯವಾದ ಐಂದ್ರಿಯಃ ಸರ್ಗಃ=ಇಂದ್ರಿಯಗಳ ಸೃಷ್ಟಿಯೋ ಸಃ ಚತುರ್ಥಃ= ಅದು ನಾಲ್ಕನೆಯದು. ಮನಃ=ಮನಸ್ಸು ಯನ್ಮಯಂ=ಯಾವ ವೈಕಾರಿಕ ಅಂಹಕಾರ ಜನ್ಯವೋ ವೈಕಾರಿಕಃ=ಆ ವೈಕಾರಿಕ ಅಹಂಕಾರಕಾರ್ಯವಾದದ್ದರಿಂದ ವೈಕಾರಿಕ ನಾಮಕವಾದ ದೇವಸರ್ಗಃ=ಇಂದ್ರಿಯಾಭಿಮಾನಿದೇವತೆಗಳ ದೇಹಸೃಷ್ಟಿಯು ಪಂಚಮಃ=ಐದನೆಯದು. ॥೧೬॥

ಮೂಲದಲ್ಲಿ ಅಹಂಕಾರಕ್ಕೆ ಉಪಾದಾನಕಾರಣ ಹೇಳದಿರುವುದರಿಂದ ಅದನ್ನು ಹೇಳುತ್ತ ವ್ಯಾಖ್ಯಾನಿಸುವರು -

**ಅಹಂಕಾರಸ್ತದಾತ್ಮಕಃ ।**

ಅಹಂಕಾರತತ್ವವು ಮಹತ್ತತ್ವಾಂತರ್ಗತ ತಮೋಭಾಗದಿಂದ ಉತ್ಪನ್ನವಾದುದು (ಪರಿಣತವು). (ಚಿತ್ರ.೯)

ಅಹಂಕಾರಾಭಿಮಾನಿಯನ್ನು ಮತ್ತು ಅವರಿಗೆ ತಾಮಸ ಎಂದು ಕರೆಯಲು ನಿಮಿತ್ತವನ್ನು ತಿಳಿಸುವರು–

**ಸ ರುದ್ರಸ್ತಾಮಸೋ ಜ್ಞೇಯೋ ವಿರಿಂಚಾಪೇಕ್ಷಯೈವ ತು ।**
**ಇತರಾಪೇಕ್ಷಯಾ ಸತ್ವಂ ಸತ್ವಾದ್ಯಾಸ್ತದ್ವದಸ್ಯ ಚ ॥**

ಆ ಅಹಂಕಾರವು ರುದ್ರದೇವರಿಂದ ಅಭಿಮನ್ಯಮಾನವಾದುದು. ವಿರಿಂಚಿಯಲ್ಲಿ ತಮೋಗುಣ ಕಾರ್ಯ ಸರ್ವಥಾ ಇಲ್ಲ. ರುದ್ರದೇವರಲ್ಲಿ ಸ್ವಲ್ಪ ತಮೋಗುಣದ ಕಾರ್ಯ ಕಂಡು ಬರುವುದು. ಈ ಅಭಿಪ್ರಾಯದಿಂದ ರುದ್ರದೇವರನ್ನು ತಾಮಸ ಎನ್ನುವುದೇ ಹೊರತು ತಮೋಗುಣಪ್ರಾಚುರ್ಯದಿಂದಲ್ಲ. ಇವರಲ್ಲಿ ಇಂದ್ರಾದಿ-ಗಳಗಿಂತ ಸತ್ವವು ವಿಶೇಷವಾಗಿಯೇ ಇರುವುದು. ಅಹಂಕಾರತತ್ವದಲ್ಲೂ ಮಹತ್ತತ್ವದಂತೆ ಸತ್ವಾದಿಗಳು ತರತಮಭಾವದಿಂದ ಇರುವುವು. (ಸ.೧೦,ರ.೧,ತ. ೧/೧೦)

**ತತ್ತಮೋಂಶಾತ್ ಸಾತ್ವಿಕಾಂಶೋ ಮನ ಆದ್ಯಾಃ ಪ್ರಕೀರ್ತಿತಾಃ ।**
**ರಜಸೋಂಶಸ್ತ್ವಿಂದ್ರಿಯಾಣಿ ತಮಸೋಂಶಶ್ಚ ಖಾದಯಃ ॥**

**ಇತ್ಯಾದಿ ತತ್ವವಿವೇಕೇ ।**

ಅಹಂಕಾರದಲ್ಲಿ ಸತ್ವರಜಸ್ತಮೋಗುಣಗಳಿವೆ. ಆ ತಮೋಗುಣದಲ್ಲಿ ಸತ್ವ-ರಜಸ್ಸು-ತಮಸ್ಸು ಎಂದು ಮತ್ತೆ ಮೂರು ಭಾಗಗಳಿವೆ. ಅವುಗಳಲ್ಲಿ ಸತ್ವದಿಂದ ಮನಸ್ಸು (ಆದ್ಯಾಃ=) ದೇವತೆಗಳ ದೇಹಗಳು, ರಜಸ್ಸಿನಿಂದ ಇಂದ್ರಿಯಗಳು, (ತು=) ಬುದ್ಧಿ ಪ್ರಾಣಗಳು, ತಮಸ್ಸಿನಿಂದ ಆಕಾಶಾದಿ ಭೂತಗಳು, (ಚ=) ತನ್ಮಾತ್ರಾಗಳು ಜನಿಸಿದವು. ( 'ತು'ಶಬ್ದದಿಂದ ಬುದ್ಧಿ,ಪ್ರಾಣಗಳನ್ನು 'ಚ' ಶಬ್ದದಿಂದ ತನ್ಮಾತ್ರಾಗಳನ್ನು ಗ್ರಹಣಮಾಡಬೇಕು).

(ಯದ್ಯಪಿ ಮೂಲದಲ್ಲಿ ಮನಸ್ಸನ್ನು ಕೊನೆಗೆ ( ಶ್ಲೋಕ.೧೬) ಹೇಳಿರುವರು ಆದರೂ ಭೂತ, ಇಂದ್ರಿಯ, ಮನಸ್ಸು ದೇವತಾದೇಹಗಳ ಸೃಷ್ಟಿಯಲ್ಲಿ ಮುಂದಿನ ಮುಂದಿನದು ಉತ್ತಮ ಎಂದು ತಿಳಿಸಲು ಸಾತ್ವಿಕವಾದ ಮನಸ್ಸನ್ನು ತಾತ್ಪರ್ಯದಲ್ಲಿ ಮೊದಲು ಹೇಳಿರುವರು.)

'ಭೂತಸರ್ಗಃ' ಎಂದಾರಂಭಿಸಿ 'ಮನಃ'( ಶ್ಲೋಕ.೧೬) ಎಂಬಲ್ಲಿಯವರೆಗಿನ ತಾತ್ಪರ್ಯ ಹೇಳುವರು –

**ಭೂತಾನಿ ದ್ರವ್ಯಶಕ್ತೀನಿ ಭೂತೇಷು ದ್ರವಣಂ ಯತಃ ।**
**ತಥಾ ತನ್ಮಾತ್ರಶಕ್ತೀನಿ ಶಬ್ದಾದ್ಯಾತ್ಮಕತಾ ಯತಃ ॥**

**ಕ್ರಿಯಾಶಕ್ತೀನಿ ವಾಗಾದ್ಯಾನೀಂದ್ರಿಯಾಣೀತರಾಣಿ ತು ।**
**ಜ್ಞಾನಶಕ್ತೀನಿ ಮನಸಾ ದೇವಾಶ್ಚ ಜ್ಞಾನಶಕ್ತಯಃ ॥**
**ಏತೇಷಾಂ ಮೂಲಭೂತತ್ವಾದಹಂಕಾರಸ್ತ್ರಿಶಕ್ತಿಮಾನ್ ॥**

ಮೂಲದಲ್ಲಿ 'ತನ್ಮಾತ್ರದ್ರವ್ಯಶಕ್ತಿಮಾನ್'ಎಂದು ಭೂತಗಳಗೆ 'ತನ್ಮಾತ್ರಶಕ್ತಿ' 'ದ್ರವ್ಯಶಕ್ತಿ' ಎಂದು ಕರೆದಿರುವರು. ಅದರ ನಿಮಿತ್ತವನ್ನು ಹೇಳುವರು – ಯಾವ ಕಾರಣ ಪೃಥಿವ್ಯಾದಿಗಳಲ್ಲಿ ಜನರು ದ್ರವಣ ಮಾಡುವರು (ಓಡುವರು) ಆದ್ದರಿಂದ ಭೂತಗಳು ದ್ರವ್ಯಶಕ್ತಿಯುಳ್ಳವು. ಅಂದರೆ ಜನರು ಮಾಡುವ ದ್ರವಣ ವಿಷಯವಾಗುವುದೇ ದ್ರವ್ಯ ಎಂದರ್ಥ. ಇದನ್ನೇ 'ದ್ರವ್ಯಂ ತು ದ್ರವಣಪ್ರಾಪ್ಯಂ ದ್ವಯೋರ್ವಿವದಮಾನಯೋಃ । ಪೂರ್ವವೇಗಾಭಿಸಂಬಧಾತ್ ಆಕಾಶಸ್ತು ಪ್ರದೇಶತಃ' ಎಂದು ಅನ್ಯತ್ರ ಹೇಳಿದೆ. ಜ್ಞಾನವಿಷಯವಾಗುವುದರಿಂದ ಶಬ್ದಾದಿಗಳು ಮಾತ್ರಾ (ಮೀಯಂತೇ ಇತಿ ಮಾತ್ರಾ) ಎಂದು ಕರೆಸಿಕೊಳ್ಳುವುವು. ಇವುಗಳಿಂದ ಉಪಚಿತವಾದ ಭೂತಸೂಕ್ಷ್ಮಗಳು ಆಕಾಶಾದಿಭೂತಗಳಾಗಿ ಪರಿಣಮಿಸುವವು. ಆದ್ದರಿಂದ ಭೂತಗಳು ಮಾತ್ರಾಶಕ್ತಿವುಳ್ಳವುಗಳು ಎನಿಸುವವು. ವಾಗಾದಿ ಇಂದ್ರಿಯಗಳು ಕ್ರಿಯಾಜನನ ಶಕ್ತಿಯುಳ್ಳವುಗಳು ಆದ್ದರಿಂದ ಕ್ರಿಯಾತ್ಮಕಗಳು

ಎನ್ನುವರು. ಇತರ ಚಕ್ಷುರಾದಿ ಇಂದ್ರಿಯಗಳು ಜ್ಞಾನಜನಕ ಶಕ್ತಿಯುಳ್ಳವುಗಳು ಆದ್ದರಿಂದ ಜ್ಞಾನಾತ್ಮಕಗಳು ಎನಿಸುವುವು.

ಮನಸ್ಸು ಹಾಗೂ ಇಂದ್ರಿಯಾಭಿಮಾನಿ ದೇವತೆಗಳಿಗೂ ಜ್ಞಾನಜನನಶಕ್ತಿ ಇರುವದರಿಂದ 'ಜ್ಞಾನಾತ್ಮಕ' ಎನ್ನುವರು. ಇಂದ್ರಿಯಾಭಿಮಾನಿ ದೇವತೆಗಳಿಗೆ ಕ್ರಿಯಾಜನನಶಕ್ತಿಯೂ ಇರುವದರಿಂದ 'ಕ್ರಿಯಾತ್ಮಕ' ಎಂದೂ ಕರೆಯುವರು. ಹಿಂದೆ 'ದ್ರವ್ಯಜ್ಞಾನಕ್ರಿಯಾದಯಃ' ಎಂದು ಅಹಂಕಾರದ ಸ್ವರೂಪ ಹೇಳಿತ್ತು. ಅದರ ತಾತ್ಪರ್ಯವೇ 'ಏತೇಷಾಂ' ಎಂಬುದು. ಭೂತ, ಇಂದ್ರಿಯ, ದೇವತೆಗಳ ದೇಹ ಇವುಗಳ ಜನನಶಕ್ತಿಯುಳ್ಳದ್ದು ಆದ್ದರಿಂದ ಅಹಂಕಾರವು 'ತ್ರಿಶಕ್ತಿಮಾನ್' ಎನಿಸುವುದು.

'ತತ್ತಮೋಂಶಾತ್ ಸಾತ್ವಿಕಾಂಶಃ' ಎಂಬಲ್ಲಿ ದೇವತೆಗಳಿಗೆ ಏನು ಸಾತ್ವಿಕತ್ವ ಹೇಳಿದೆಯೋ ಅದು ನಮಗಿಂತ ಹೆಚ್ಚು ಮತ್ತು ತಾರತಮ್ಯೋಪೇತವೆಂದು ಹೇಳುವರು–

ಮಾನುಷಾಪೇಕ್ಷಯಾ ದೇವಾಃ ಸಾತ್ವಿಕಾಃ ಪರಿಕೀರ್ತಿತಾಃ ।
ತತ್ರಾಪಿ ಸಾತ್ವಿಕಾಃ ಪ್ರೋಕ್ತಾಸ್ತಾತ್ವಿಕಾ ಯಾಸ್ತು ದೇವತಾಃ ॥
ತತ್ರಾಪಿ ಸಾತ್ವಿಕೋ ರುದ್ರಸ್ತತ್ರಾಪಿ ಚ ಚತುರ್ಮುಖಃ ।

ಮನುಷ್ಯರಿಗಿಂತ ಅತಾತ್ವಿಕದೇವತೆಗಳು ಹೆಚ್ಚು ಸಾತ್ವಿಕರು. ದೇವತೆಗಳಲ್ಲಿಯೂ ತಾತ್ವಿಕದೇವತೆಗಳು ಅಧಿಕ ಸಾತ್ವಿಕರು. ತಾತ್ವಿಕದೇವತೆಗಳಲ್ಲಿಯೂ ರುದ್ರದೇವರು ಅಧಿಕ ಸಾತ್ವಿಕರು. ರುದ್ರದೇವರಿಗಿಂತ ಅಧಿಕ ಸಾತ್ವಿಕರು ಬ್ರಹ್ಮದೇವರು ಎಂದು ತಿಳಿಯಬೇಕು.

ಅವಿಕಾರೌ ಬ್ರಹ್ಮರುದ್ರೌ ದೇಹಭೇದಾದಿಸಂಭವೇ ॥
ವಿಕಾರವಂತ ಇಂದ್ರಾದ್ಯಾಸ್ತಸ್ಮಾದ್ವೈಕಾರಿಕಾ ಮತಾಃ ।
ತ ಏವೇಂದ್ರಿಯರೂಪೇಣ ಯತಸ್ತ್ವತಿವಿಕಾರಿಣಃ ॥
ಜ್ಞಾನಮಾತ್ರಗುಣೋದ್ರಿಕ್ತಾಸ್ತಸ್ಮಾತ್ತೈಜಸನಾಮಕಾಃ ।
ಅವಿಕಾರಿತ್ವಯೋಗ್ಯತ್ವಂ ನಿವೃತ್ತಂ ಹೀಂದ್ರಿಯೇಷು ತು ॥
ವೈಕಾರಿಕತ್ವನಾಮಾಪಿ ತತಸ್ತೇಷಾಂ ನ ವಿದ್ಯತೇ ।
ಯಥಾ ವಿಪ್ರಕುಲೇ ಮೂರ್ಖೋ ಮೂರ್ಖ ಇತ್ಯಭಿಧೀಯತೇ ॥
ವಿದ್ಯಾಯೋಗ್ಯತ್ವತಃ ಶೂದ್ರೋ ನ ಮೂರ್ಖೋ ಮುರ್ಖ ಏವ ಸನ್ ।
ತಾಮಸಾನಿ ಹಿ ಭೂತಾನಿ ಕಿಂಚಿದ್ವ್ಯವಹಿತತ್ವತಃ ॥
ಜ್ಞಾನಸ್ಯ ಸುಷುಪ್ತತ್ವೇಽಪಿ ಪೂರ್ಣಜ್ಞಾನೋ ಹರಿಃ ಸ್ವಯಂ ॥ ಇತಿ ಚ ।

(ದೇವತೆಗಳ ಉತ್ಪತ್ತಿ ಎರಡು ತರಹ. ಒಂದು ದೇಹವಿಶೇಷ ಸಂಬಂಧರೂಪವಾದದ್ದು, ಇನ್ನೊಂದು ಅಭಿಮಾನೋತ್ಪತ್ತಿರೂಪವಾದದ್ದು. ಅಂದರೆ ದೇವತೆಗಳು ಮೊದಲು ತಮ್ಮ ತಮ್ಮ ದೇಹವನ್ನು ಪಡೆದು ಹುಟ್ಟುತ್ತಾರೆ. ಆಮೇಲೆ ಆ ಆ ತತ್ತ್ವಗಳ ಜೊತೆಗೆ ಅವುಗಳಿಗೆ ಅಭಿಮಾನಿಗಳಾಗಿ ಹುಟ್ಟುತ್ತಾರೆ.) ಈ ಎರಡುವಿಧ ಉತ್ಪತ್ತಿಯಾದಾಗಲೂ ಬ್ರಹ್ಮದೇವರು, ರುದ್ರದೇವರು ಮತ್ತು ಗರುಡದೇವರು ವಿಕಾರರಹಿತರು. ಕಾರಣ ಇವರು ವೈಕಾರಿಕ ದೇವತೆಗಳಲ್ಲಿ ಸೇರುವುದಿಲ್ಲ. ಆದರೆ ಉಳಿದ ಇಂದ್ರಾದಿದೇವತೆಗಳಿಗೆ ಈ ಎರಡುವಿಧ ಉತ್ಪತ್ತಿಯಲ್ಲೂ ವಿಕಾರವಾಗುತ್ತದೆ. ಆದ್ದರಿಂದ ಅವರನ್ನು ವೈಕಾರಿಕ ಎಂದು ಕರೆಯುತ್ತಾರೆ. ಇಲ್ಲಿಯೂ ಒಂದು ವಿಶೇಷವಿದೆ. ಈ ದೇವತೆಗಳು ಮೊದಲು ಅಹಂಕಾರಗತ ತಮೋಗುಣದಲ್ಲಿರುವ ಸತ್ತ್ವಾಂಶದಿಂದ (ವೈಕಾರಿಕಾಹಂಕಾರದಿಂದ) ದೇಹವನ್ನು ಪಡೆದು ಹುಟ್ಟುತ್ತಾರೆ. ನಂತರ ಅಹಂಕಾರಗತ ತಮೋಗುಣದಲ್ಲಿರುವ ರಜೋಂಶದಿಂದ(ತೈಜಸ ಅಹಂಕಾರದಿಂದ) ಇಂದ್ರಿಯಗಳಿಗೆ ಅಭಿಮಾನಿಗಳಾಗಿ ಹುಟ್ಟುತ್ತಾರೆ. ಕೊನೆಗೆ ಇವರಲ್ಲಿಯ ಕೆಲವರು ಅಹಂಕಾರಗತ ತಮೋಗುಣದಲ್ಲಿರುವ ತಮೋಂಶದಿಂದ (ತಾಮಸ ಅಹಂಕಾರದಿಂದ) ಭೂತಗಳಿಗೆ ಅಭಿಮಾನಿಗಳಾಗಿ ಹುಟ್ಟುತ್ತಾರೆ. ಇದರಲ್ಲಿ ಅವಿಕಾರಿಗಳಾದ ಇಂದ್ರಾದಿಗಳಿಗೆ ಮೊದಲಬಾರಿ ದೇಹವನ್ನು ಪಡೆದು ಹುಟ್ಟಿದಾಗ ವಿಕಾರಉಂಟಾಯಿತು. ಆದ್ದರಿಂದ ಆಗ ಅವರಿಗೆ ವೈಕಾರಿಕ ಎಂದು ಕರೆಯುತ್ತಾರೆ. ಇನ್ನು ಈ ದೇವತೆಗಳಿಗೆ ವೈಕಾರಿಕರಾದಾಗ ಎಷ್ಟು ಜ್ಞಾನವಿತ್ತೋ ಅಷ್ಟೇ ಪ್ರಭೂತವಾದ ಜ್ಞಾನ ಇಂದ್ರಿಯಾಭಿಮಾನಿಗಳಾಗಿ ಹುಟ್ಟಿದಾಗಲೂ ಇರುತ್ತದೆ. ಆದ್ದರಿಂದ ಆಗ ಅವರಿಗೆ ತೈಜಸ ಎಂದು ಕರೆಯುತ್ತಾರೆ. ಇನ್ನು ಭೂತಾಭಿಮಾನಿಗಳಾದಾಗ ಇವರು ಸರ್ವಜ್ಞರಾಗಿದ್ದರೂ ಮೊದಲಿನಷ್ಟು ಜ್ಞಾನೋದ್ರೇಕವನ್ನು ಪಡೆದಿರುವುದಿಲ್ಲ. ಆದ್ದರಿಂದ ಇವರನ್ನು ತಾಮಸ ಎಂದು ಕರೆಯುತ್ತಾರೆ. ನಿತ್ಯೋದ್ರಿಕ್ತಜ್ಞಾನನಾದವನು ಶ್ರೀಹರಿಯೊಬ್ಬನೇ. ಇಲ್ಲಿ ಒಂದು ಸಮಸ್ಯೆ ಏನೆಂದರೆ, ಅವಿಕಾರಿಗಳಾದ ಇಂದ್ರಾದಿಗಳಿಗೆ ಮೊದಲು ದೇಹವನ್ನು ಪಡೆದು ಹುಟ್ಟಿದಾಗ ಹೇಗೆ ವಿಕಾರವಾಯಿತೋ, ಹಾಗೆಯೇ ಎರಡನೆಯ ಬಾರಿ ಇಂದ್ರಿಯಾಭಿಮಾನಿಗಳಾಗಿ ಹುಟ್ಟಿದಾಗಲೂ ಇನ್ನೂ ಹೆಚ್ಚಿನ ವಿಕಾರವಾಯಿತು. ಆದ್ದರಿಂದ ಇವರನ್ನೂ ವೈಕಾರಿಕ ಎಂದೇ ಕರೆಯಬೇಕಲ್ಲ ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಪರಿಹಾರ ಹೀಗೆ –

ವೈಕಾರಿಕ ಎಂದು ಹೆಸರು ಬರಲು 'ವಿಕಾರವತ್ತ್ವ' (ಅಂದರೆ ವಿಕಾರ ಹೊಂದುವುದು) ಇದು ನಿಮಿತ್ತವಲ್ಲ. ಹಾಗಾಗಿದ್ದರೆ ಇಂದ್ರಿಯಾಭಿಮಾನಿಗಳಾದಾಗಲೂ ಹೆಚ್ಚಿನ ವಿಕಾರ ಹೊಂದಿದ್ದಾರೆ ಆದ್ದರಿಂದ ಅವರನ್ನೂ ವೈಕಾರಿಕ ಎಂದು ಕರೆಯಬಹುದಾಗಿತ್ತು. ಆಧರೆ ವೈಕಾರಿಕ ಎಂಬ ಹೆಸರು ಬರಲು

"ಅವಿಕಾರಿತ್ವಯೋಗ್ಯತಾನಿವೃತ್ತಿಜನಕಉತ್ಪತ್ತಿಮತ್ವ" ಇದು ನಿಮಿತ್ತ. ಅಂದರೆ ಯಾವ ಉತ್ಪತ್ತಿಯನ್ನು ಪಡೆದಾಗ ಅವರಲ್ಲಿರುವ ಅವಿಕಾರಿತ್ವ ಯೋಗ್ಯತೆಯು ನಿವೃತ್ತಿಯಾಗುತ್ತದೆಯೋ ಆ ಉತ್ಪತ್ತಿಯನ್ನು ಹೊಂದಿದಾಗ ಮಾತ್ರ ಅವರನ್ನು ವೈಕಾರಿಕರು ಎಂದು ಕರೆಯಬೇಕು. ಪ್ರಕೃತ, ದೇವತೆಗಳು ಮೊದಲು ಅವಿಕಾರಿಗಳಾಗಿದ್ದರು.ಇವರು ಮೊದಲಬಾರಿ, ದೇಹವನ್ನು ಪಡೆದು ಹುಟ್ಟಿದಾಗ ಅವರಲ್ಲಿರುವ ಅವಿಕಾರಿತ್ವ ಯೋಗ್ಯತೆಯು ನಿವೃತ್ತಿಯಾಗಿ ವಿಕಾರವಾಯಿತು. (ಈ ಉತ್ಪತ್ತಿಯು ಅವರಲ್ಲಿರುವ ಅವಿಕಾರಿತ್ವಯೋಗ್ಯತಾನಿವೃತ್ತಿಗೆ ಕಾರಣವಾಯಿತು.) ಆದ್ದರಿಂದ ಈ ಉತ್ಪತ್ತಿಯಲ್ಲಿ ಇವರನ್ನು ವೈಕಾರಿಕ ಎಂದು ಕರೆಯುತ್ತಾರೆ.

ಇನ್ನು ಈ ದೇವತೆಗಳಿಗೆ ಅವರ ಮೊದಲ ಉತ್ಪತ್ತಿಯಲ್ಲಿಯೇ ಅವರಲ್ಲಿರುವ ಅವಿಕಾರಿತ್ವಯೋಗ್ಯತಾ ನಿವೃತ್ತಿಯಾಗಿ ವಿಕಾರಿತ್ವ ಬಂದು ಬಿಟ್ಟಿದೆ. ಆದ್ದರಿಂದ ಇಂದ್ರಿಯಾಭಿಮಾನಿಗಳಾಗಿ ಹುಟ್ಟುವ ಸಂದರ್ಭದಲ್ಲಿ ಅವರಲ್ಲಿ ಅವಿಕಾರಿತ್ವ-ಯೋಗ್ಯತೆ ಉಳಿದಿರುವುದಿಲ್ಲ, ಅವಿಕಾರಿತ್ವ ಯೋಗ್ಯತೆಯೇ ಇಲ್ಲ ಎಂದ ಮೇಲೆ ಅದನ್ನು ನಿವೃತ್ತಿ ಮಾಡಲು ಹೇಗೆ ಬರುತ್ತದೆ ? ಆದ್ದರಿಂದ ಇಂದ್ರಿಯಾಭಿಮಾನಿಗಳಾಗಿ ಹುಟ್ಟಿದಾಗ ಈ ಉತ್ಪತ್ತಿಯಲ್ಲಿ ಅವರಲ್ಲಿರುವ ಅವಿಕಾರಿತ್ವಯೋಗ್ಯತಾ ನಿವೃತ್ತಿಯಾಗುವ ಪ್ರಸಂಗವೇ ಇಲ್ಲ. (ಈ ಉತ್ಪತ್ತಿಯು ಅವರಲ್ಲಿರುವ ಅವಿಕಾರಿತ್ವ-ಯೋಗ್ಯತಾನಿವೃತ್ತಿಗೆ ಕಾರಣವಾಗಲಿಲ್ಲ )ಆದ್ದರಿಂದ ಈಗ ಇವರನ್ನು ವೈಕಾರಿಕ ಎಂದು ಕರೆಯುವದಿಲ್ಲ.

ಇದಕ್ಕೆ ದೃಷ್ಟಾಂತವನ್ನು ಕೊಡುತ್ತಾರೆ- ಯಾವ ರೀತಿಯಾಗಿ ವೇದಾಧಿಕಾರ ಇರುವ ಬ್ರಾಹ್ಮಣಜನ್ಮದಲ್ಲಿ ಜನಿಸಿದಾಗ ವೇದವಿದ್ಯೆಯನ್ನು ಪಡೆಯದಿದ್ದರೆ ಅವನನ್ನು ಮೂರ್ಖನೆನ್ನುವರು. ಆದರೆ ಅವನೇ ಶೂದ್ರನಾದಾಗ ವೇದವನ್ನು ಓದದಿದ್ದರೂ ಅವನನ್ನು ಮೂರ್ಖ ಎನ್ನುವುದಿಲ್ಲ. ಏಕೆಂದರೆ ಅವನಿಗೆ ವೇದಾಧಿಕಾರವೇ ಇಲ್ಲ. ಆದ್ದರಿಂದ ಮೂರ್ಖ ಎಂದು ಕರೆಯಲು ಕೇವಲ ವಿದ್ಯೆ ಇಲ್ಲದಿರುವುದು ಕಾರಣವಲ್ಲ. ಕಿಂತು ವಿದ್ಯಾಯೋಗ್ಯತೆ ಇದ್ದು ವಿದ್ಯೆ ಇಲ್ಲದಿರುವುದು ಕಾರಣ. ('ಜ್ಞಾನಾಭಾವ' ಇದು ಮೂರ್ಖನೆನ್ನಲು ಪ್ರಯೋಜಕವಲ್ಲ 'ವಿದ್ಯಾಯೋಗ್ಯತಾ-ನಿವೃತ್ತಿಜನಕಉತ್ಪತ್ತಿಮತ್ವ'ವೇ ಮೂರ್ಖ ಎನ್ನಲು ಪ್ರಯೋಜಕವೆಂದು ಭಾವ.) ಹಾಗೆ ಇಲ್ಲಿಯೂ ಅವಿಕಾರಿತ್ವಯೋಗ್ಯತೆ ಇರುವ ದೇವತೆಗಳಿಗೆ ವಿಕಾರವಾದಾಗ ಅವರನ್ನು ವೈಕಾರಿಕ ಎಂದು ಕರೆಯಬೇಕು. ಅವಿಕಾರಿತ್ವಯೋಗ್ಯತೆಯೇ ಇಲ್ಲದಿರುವ ಮೊದಲಿಗೇ ವಿಕಾರಿಗಳಾದವರಿಗೆ ಅತಿವಿಕಾರವಾದಾಗ ವೈಕಾರಿಕ ಎಂದು ಕರೆಯಬಾರದು ಎಂದು ಭಾವ. ॥೧೬॥

**ಷಷ್ಠಸ್ತು ತಮಸಃ ಸರ್ಗೋ ಯಸ್ತ್ವಬುದ್ಧಿಕೃತಃ ಪ್ರಭೋಃ ।**
**ಷಡಿಮೇ ಪ್ರಾಕೃತಾಃ ಸರ್ಗಾಃ ವೈಕೃತಾನಪಿ ಮೇ ಶೃಣು ॥೧೭॥**

ಪ್ರಭೋಃ=ಬ್ರಹ್ಮದೇವರಿಂದ ಅಬುದ್ಧಿಕೃತಃ=ಶ್ವಾಸೋಚ್ಛ್ವಾಸದಂತೆ ಅನಾಯಾಸವಾಗಿ ಮಾಡಲ್ಪಟ್ಟ ತಮಸಃ=ಅವಿದ್ಯೆಯ ಸರ್ಗಃ=ಸೃಷ್ಟಿಯು ಷಷ್ಠಃ=ಆರನೆಯದು, ತು=ಭೂತಾನುಸ್ಯೂತತಮೋಗುಣಜನ್ಯವಾದುದು ಇಮೇ ಷಟ್=ಈವರೆಗೆ ಹೇಳಿದ ಆರು ಸರ್ಗಾಃ=ಸೃಷ್ಟಿಗಳು ಪ್ರಾಕೃತಾಃ=ಪ್ರಾಕೃತಸೃಷ್ಟಿ ಎನಿಸಿಕೊಳ್ಳುವವು. ವೈಕೃತಾನ್ ಅಪಿ=ವೈಕೃತಸೃಷ್ಟಿಗಳನ್ನೂ ಮೇ=ನನ್ನಿಂದ ಶೃಣು=ಕೇಳು.

ಮೇಲಿನ ಶ್ಲೋಕದಲ್ಲಿ 'ತಮಸಃ' ಎಂಬುದಕ್ಕೆ ತಮೋಗುಣದ ಎಂದೂ, 'ಅಬುದ್ಧಿಕೃತಃ' ಎಂಬುದಕ್ಕೆ ಸರ್ವಥಾ ಜ್ಞಾನವಿಲ್ಲದೇ ಮಾಡಿದ್ದು ಎಂದರ್ಥ ತೋರುವುದು ಅದು ಸರಿಯಲ್ಲ. ಕಾರಣ ಪ್ರಮಾಣದಿಂದ ತಾತ್ಪರ್ಯ ಹೇಳುವರು

**ಅಬುದ್ಧಿಪೂರ್ವಮಿವ ತು ಬ್ರಹ್ಮಣೋ ಹರಿಬುದ್ಧಿತಃ ।**
**ಅವಿದ್ಯಾ ಪಂಚಪರ್ವೈಷಾ ಪ್ರಾದುರ್ಭೂತಾ ಮಹಾತ್ಮನಃ ॥ ಇತಿ ಚ ।**

ಬುದ್ಧಿಪೂರ್ವಕವಲ್ಲದ ಶ್ವಾಸೋಚ್ಛ್ವಾಸದಂತೆ(ಅನಾಯಾಸವಾಗಿ) ಬ್ರಹ್ಮದೇವ-ರಿಂದ ಪಂಚಪರ್ವವುಳ್ಳ ಅವಿದ್ಯೆಯು ಉತ್ಪನ್ನವಾಯಿತು. ಯಾವಾಗಲೂ ಬ್ರಹ್ಮದೇವರು ಶ್ರೀಹರಿಯ ಜ್ಞಾನವುಳ್ಳವರೇ ಆದರೂ ಅವಿದ್ಯೆಯನ್ನು ಸೃಷ್ಟಿಸುವಾಗ ಪಾಪ ಬರಬಾರದೆಂದು ವಿಶೇಷವಾಗಿ ಭಗವದ್ಬುದ್ಧಿಯುಳ್ಳವರಾದ್ದರಿಂದ ಸರ್ವಥಾ ಜ್ಞಾನವಿಲ್ಲದೆ ಎಂಬರ್ಥ ಬಾಧಿತವಾದುದು ಎಂದು ಭಾವ. ಅಬುದ್ಧಿಕೃತಃ 'ಅಕಾರ' ವಾಚ್ಯಪರಬ್ರಹ್ಮನಲ್ಲಿ ಬುದ್ಧಿಯುಳ್ಳವರು ಎಂದೂ ವ್ಯಾಖ್ಯಾನ ಸೂಚಿತವಾಗುವುದು. ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ, ಎಂದು ಐದು ಪರ್ವವುಳ್ಳ ಎಂದದ್ದರಿಂದ ಅಭಾವರೂಪವಾದ ಅವಿದ್ಯೆಯಲ್ಲ ಕಿಂತು ಭಾವರೂಪ-ವಾದ ಅವಿದ್ಯಾ ಎಂದೂ ಸೂಚಿತವಾಗುವುದು.

'ತಮಸಃ ಸರ್ಗಃ' ಎಂಬ ಮೂಲದಲ್ಲಿಯ ತಮಸ್ ಎಂಬ ಪದಕ್ಕೆ ಅವಿದ್ಯಾ ಎಂದರ್ಥವನ್ನು ಹೇಳಿ, ಷಷ್ಠ್ಯಂತತ್ವವನ್ನು ಅಂಗೀಕರಿಸಿ 'ಅವಿದ್ಯೆಯ ಸೃಷ್ಟಿ' ಎಂದು ವ್ಯಾಖ್ಯಾನಿಸಿದರು. ಈಗ ತಮಸ್ ಎಂಬ ಪದಕ್ಕೆ ಅವಿದ್ಯಾಕ್ಕೆ ಉಪಾದಾನವಾದ ತಮೋಗುಣ ಎಂದರ್ಥವನ್ನು ಹೇಳಿ, ಪಂಚಮ್ಯಂತತ್ವವನ್ನು ಅಂಗೀಕರಿಸಿ 'ತಮಸ್ಸಿನಿಂದ ಆದ (ಅವಿದ್ಯೆಯ)ಸೃಷ್ಟಿ' ಎಂದು ವ್ಯಾಖ್ಯಾನಿಸುವರು –

**ತಾಮಸಾನಾಂ ತು ಭೂತಾನಾಂ ಸಹಸ್ರಂ ಸತ್ವಭಾಗಿನಾಂ ।**
**ಶತಾಂಶರಜಸಾಮೇಕತಮಸಾಂ ಸರ್ವವೇದಿನಾಂ ॥**

**ಕೇವಲಸ್ತಾಮಸೋ ಯೋಽಂಶಃ ಸಾಽವಿದ್ಯಾ ಪಂಚಪರ್ವಿಕಾ ।**
**ಜಾತಾಽತಿಕೃಷ್ಣಾ ತದ್ದೇಹಾತ್ ದೈತ್ಯರಕ್ಷಃ ಪಿಶಾಚಕಾಃ ॥**

ತು=ಅಹಂಕಾರತತ್ವದಲ್ಲಿರುವ ತಮೋಗುಣ ಜನ್ಯವಾದುದರಿಂದ ತಾಮಸ-ಗಳಾದ ಭೂತಗಳು (ಸಹಸ್ರಂ ಸತ್ವಭಾಗಿನಾಂ) ತಮೋಭಾಗಕ್ಕಿಂತ ಸಾವಿರ ಪಟ್ಟು (ಗುಣಿತ) ಸತ್ವಭಾಗ, ನೂರುಪಟ್ಟು ರಜೋಭಾಗ, ಒಂದು ತಮೋಭಾಗವುಳ್ಳ-ದ್ದಾಗಿವೆ. (ಭೂತಗಳು=ತ.೧, ರ.೧೦೦, ಸ.೧೦೦೦.) (ಸರ್ವವೇದಿನಾಂ=ಇಷ್ಟು ಅಧಿಕ ಸತ್ವವಿರುವುದರಿಂದಲೇ ಭೂತಾಭಿಮಾನಿಗಳು ಸರ್ವಜ್ಞರಾಗಿದ್ದಾರೆ ಎಂದರ್ಥ.) ಇಂತಹ ಭೂತದಲ್ಲಿರುವ, ಸತ್ವ ರಜೋಗುಣಗಳಿಂದ ಮಿಶ್ರವಾಗದ ಕೇವಲ ತಮೋಗುಣದ ಅಂಶದಿಂದ ಅತ್ಯಂತ ಕಪ್ಪಾದ ಪಂಚಪರ್ವಾತ್ಮಕ ಅವಿದ್ಯಾ ಜನಿಸಿತು (ತಮಸ್ಸೇ ಅವಿದ್ಯೆಯಾಯಿತು). ಅವಿದ್ಯಾಭಿಮಾನಿಯ ದೇಹದಿಂದ ದೈತ್ಯರು, ರಾಕ್ಷಸರು, ಪಿಶಾಚಗಳು ಜನಿಸಿದರು.

ಅವಿದ್ಯೆಯು ಭೂತಗಳಲ್ಲಿರುವ ತಮೋಗುಣಜನ್ಯ ಎಂದು ಹೇಳುವ ಪ್ರಸಂಗದಿಂದ ಈ ಅಧ್ಯಾಯದಲ್ಲಿ ಹೇಳುವ ದೇವ, ದಾನವ, ಮಾನವ ಮುಂತಾದ ಚರಾಚರ ಸೃಷ್ಟಿಯು ಎಲ್ಲವು ಭೂತಗಳಲ್ಲಿರುವ ಸತ್ವಾದಿಗುಣ ಜನ್ಯವೇ ಎಂದು ತಿಳಿಸುವರು–

**ಯದ್ರಜೋ ಭೌತಿಕಂ ತೇನ ಮಾನುಷಾಣಾಂ ಸದಾ ಜನಿಃ ।**
**ತಮೋಗೂಢೇನ ರಜಸಾ ತ್ವಿತರಸ್ಥಾಸ್ನುಚಾರಿಣಾಂ ॥**
**ಭೌತಿಕೇನ ತು ಸತ್ವೇನ ಗೂಢಂ ಬ್ರಹ್ಮಣ ಆಂಡಜಂ ।**
**ರೂಪಂ ತತ್ರಾಪಿ ತು ತಮಃ ಶತಾಂಶೇನ ಪ್ರಕೀರ್ತಿತಂ ॥**
**ತಜ್ಜೋ ರುದ್ರಸ್ತತಸ್ತ್ವೇವಮಿಂದ್ರಾದೀನಾಂ ಪುನರ್ಜನಿಃ ।**
**ಗೂಹಿತಂ ಭೂತರಜಸಾ ತತ್ಸತ್ವಂ ಮಾನುಷಾ ಯದಾ ॥**
**ದೇವಾ ಏವಂ ಗುಣಾಸ್ತ್ವೇತೇ ಸರ್ವಂ ವ್ಯಾಪ್ಯ ವ್ಯವಸ್ಥಿತಾಃ ।**

೧.ಭೌತಿಕ(ಭೂತಗಳಲ್ಲಿರುವ)ರಜೋಗುಣದಿಂದ ಮನುಷ್ಯರ ಉತ್ಪತ್ತಿಯಾಗು-ವುದು. ೨. ತಮೋಗುಣದಿಂದ ಗೂಹಿತವಾದ ಸಾಮರ್ಥ್ಯವುಳ್ಳ ಭೌತಿಕರಜೋ-ಗುಣದಿಂದಲೇ ಮನುಷ್ಯಭಿನ್ನ ಸ್ಥಾವರಜಂಗಮಗಳ ಉತ್ಪತ್ತಿಯಾಗುವುದು. ೩. ಸತ್ವಗುಣದಿಂದ ಗೂಹಿತವಾದ ಭೌತಿಕ ರಜೋಗುಣದಿಂದ ಬ್ರಹ್ಮಾಂಡದೊಳಗೆ ಜನಿಸುವ ಬ್ರಹ್ಮದೇವರದೇಹವು ಜನಿಸುವುದು. ಆ ಬ್ರಹ್ಮದೇವರ ದೇಹದಲ್ಲಿಯೂ ರಜೋಗುಣಾಪೇಕ್ಷಯಾ ನೂರನೇ ಒಂದಂಶ ತಮೋಗುಣವಿರುವುದು. ಆದರೆ ಅದು ತನ್ನ ಕಾರ್ಯ ಮಾಡಲು ಸಮರ್ಥವಲ್ಲ. ೪. ಆ ಬ್ರಹ್ಮದೇಹದೊಳಗಿರುವ

ಸತ್ತ್ವಗೂಹಿತವಾದ ತಮೋಭಾಗದಿಂದಲೇ ರುದ್ರದೇವರ ದೇಹ ಹಾಗು ಇಂದ್ರಾದಿಗಳ ದೇಹಗಳು ಬ್ರಹ್ಮಾಂಡದೊಳಗೆ ಮತ್ತೆ ಜನಿಸುವುವು. ೫. ದೇವತೆಗಳು ಮನುಷ್ಯರಾಗಿ ಜನಿಸುವಾಗ ಭೌತಿಕಸತ್ತ್ವವು ಭೌತಿಕರಜೋಗುಣದಿಂದ ಆಚ್ಛಾದಿತ ಸಾಮರ್ಥ್ಯವುಳ್ಳದ್ದಾಗುವುದು. ಈ ರೀತಿಯಾಗಿ ಈ ಭೌತಿಕ ಗುಣಗಳು ಎಲ್ಲವನ್ನು ವ್ಯಾಪಿಸಿಕೊಂಡೇ ಇರುವುವು.

ಬ್ರಹ್ಮಾದಿಗಳೆಲ್ಲರೂ ಗುಣತ್ರಯಬದ್ಧರೇ ಎಂದಮೇಲೆ ಅವರ ಸ್ವರೂಪದಲ್ಲಿ ತಾರತಮ್ಯವನ್ನು ಹೇಗೆ ತಿಳಿಯುವುದು ಎಂದು ತಿಳಿಸುವರು–

**ಗುಣಾತೀತಂ ಚ ಯದ್ರೂಪಂ ಬ್ರಹ್ಮಾದೀನಾಂ ಸುಖಾತ್ಮಕಂ ॥**
**ಚಿದ್ರೂಪಂ ತಚ್ಚ ಸತ್ತ್ವಸ್ಯೈವೋತ್ಕರ್ಷೋ ಯತ್ರ ವಿದ್ಯತೇ ।**
**ತಚ್ಚೋತ್ಕೃಷ್ಟಂ ತಮೋ ಯತ್ರ ಹೀನಂ ತತ್ರ ಸ್ವಭಾವತಃ ॥**
**ಉಪಗೂಹನೇ ತು ನೈವಾಸ್ತಿ ವಿಶೇಷೋ ನಿತ್ಯಚಿನ್ಮಯೇ ।**
**ಪ್ರಕೃತೇರ್ಗುಣರೂಪಾಯಾ ಮೂಲಿಕಾಯಾಶ್ಚ ನ ಕ್ವಚಿತ್ ॥**
**ವಿಶೇಷಃ ಪರಮೇ ತತ್ತ್ವೇ ವಾಸುದೇವೇ ಕುತಃ ಪುನಃ । ಇತಿ ಚ ॥**

ಗುಣಸಂಬಂಧವಿಲ್ಲದಿರುವ ಬ್ರಹ್ಮಾದಿಗಳ ಸ್ವರೂಪವು ಸುಖಜ್ಞಾನಾತ್ಮಕ-ವಾದುದು. ಯಾರಲ್ಲಿ ಸತ್ತ್ವಕಾರ್ಯವಾದ ಜ್ಞಾನಾದಿಗಳೇ ಹೆಚ್ಚಾಗಿರುವವೋ ಅವರು ಉತ್ತಮರೆಂದು ತಿಳಿಯಬೇಕು. ತಮೋಗುಣಕಾರ್ಯವಾದ ದ್ವೇಷಾದಿ-ಗಳು ಸ್ವಾಭಾವಿಕವಾಗಿ ಎಲ್ಲಿ ಹೆಚ್ಚಿರುವವೋ ಆ ಚೇತನ ಅಧಮವೆಂದು ತಿಳಿಯಬೇಕು. ಇದರಂತೆ ರಜೋಗುಣ ಕಾರ್ಯ ಅಧಿಕವಿದ್ದಲ್ಲಿ ಮಧ್ಯಮವೆಂದು ತಿಳಿಯಬೇಕು. ಇನ್ನು ದೇವತೆಗಳೇ ಮನುಷ್ಯರಾದಾಗ ಸತ್ತ್ವಗುಣವು ರಜೋಗುಣ-ದಿಂದ ಆಚ್ಛಾದಿತವಾದರೂ ನಿತ್ಯವಾದುದರಿಂದ ಸ್ವರೂಪದಲ್ಲಿ ಬದಲಾವಣೆ ಆಗುವುದಿಲ್ಲ. ಆದರೆ ಜ್ಞಾಪಕವಾದ ಜ್ಞಾನೋತ್ಕರ್ಷವಿಲ್ಲದ್ದರಿಂದ ಉತ್ತಮತ್ವವನ್ನು ತಿಳಿಯಲಾಗುವುದಿಲ್ಲ.

ಈ ರೀತಿ ಸತ್ತ್ವಾದಿಸಂಬಂಧವೇ ಉತ್ತಮತ್ವಾದಿಗಳಿಗೆ ಜ್ಞಾಪಕವಾಗಿದ್ದರೂ ಸತ್ತ್ವಾದಿಗುಣಗಳಿಗೆ ಅಭಿಮಾನಿನಿಯರಾದ ಶ್ರೀಭೂದುರ್ಗಾದಿಗಳಿಗಾಗಲಿ, ಮೂಲಪ್ರಕೃತ್ಯಭಿಮಾನಿನಿಯಾದ ಲಕ್ಷ್ಮೀದೇವಿಗಾಗಲಿ ಮೂಲರೂಪದಲ್ಲಿಯಾಗಲಿ, ಅವತಾರಗಳಲ್ಲಾಗಲೀ ನಿಚೋಚ್ಚತೆಗಳಿಲ್ಲ. ಇವರು ಗುಣಾಭಿಮಾನಿಗಳು, ಪ್ರಕೃತಿಗೆ ಅಭಿಮಾನಿನೀ ಮಹಾಲಕ್ಷ್ಮೀದೇವಿ ಹೊರತು ಗುಣಾತ್ಮಕ ದೇಹವುಳ್ಳವರಲ್ಲ. ಆದ್ದರಿಂದ ಗುಣ ಸಂಬಂಧ ಮಾತ್ರ ನಿಚೋಚ್ಚತೆಗೆ ಕಾರಣವಲ್ಲ. ಗುಣಾತ್ಮಕದೇಹವಿರುವುದೇ ಕಾರಣವೆಂದು ಭಾವ. ಇದರಂತೆ ಸೃಷ್ಟ್ಯಾದಿಗಳಿಗಾಗಿ ಗುಣತ್ರಯವನ್ನು ಸ್ವೀಕರಿಸುವ

ಶ್ರೀಹರಿಗೆ ಇವುಗಳ ಸಂಬಂಧದಿಂದ ವಿಶೇಷವೆಲ್ಲಿಯದು? ಇವುಗಳಿಗೆ ನಿಯಾಮಕನು ಅವನು. ಪ್ರಾಕೃತದೇಹ ಸರ್ವಥಾ ಇಲ್ಲ.

ಹಿಂದೆ ಪ್ರಾಕೃತ, ವೈಕೃತ ಎಂದು ವಿಭಾಗ ಹೇಳಿದ್ದು ಸರಿಯಲ್ಲ ವೈಕೃತಗಳಿಗೂ ಪ್ರಕೃತಿಸಂಬಂಧವಿರುವುದರಿಂದ ಪ್ರಾಕೃತವಾಗುವುವು. ಪ್ರಾಕೃತಗಳೂ ವಿಕಾರ ಹೊಂದುವುದರಿಂದ ವೈಕೃತವೇ ಆಗುವುವು ಎಂಬ ಶಂಕೆಗೆ ಅಸಂಕೀರ್ಣವಾದ ಪ್ರಾಕೃತ, ವೈಕೃತ ಶಬ್ದಾರ್ಥವನ್ನು ಹೇಳುವರು–

**ಅವ್ಯಕ್ತಾದ್ಯಾ ಪೃಥಿವ್ಯಂತಾಃ ಸರ್ವಾಃ ಪ್ರಕೃತಯಃ ಸ್ಮೃತಾಃ ।**
**ತದುಪಾದಾನಕಃ ಸರ್ಗಃ ಪ್ರಾಕೃತಂ ಪರಿಪಠ್ಯತೇ ॥**
**ಅಂಡಂ ತು ವಿಕೃತಂ ಜ್ಞೇಯಂ ತಜ್ಜೋ ವೈಕೃತ ಉಚ್ಯತೇ ।**

ಅವ್ಯಕ್ತದಿಂದ ಆರಂಭಿಸಿ ಪೃಥಿವಿಯವರೆಗೆ ಎಲ್ಲವೂ ಪ್ರಕೃತಿಯೆನಿಸುವುವು. ಇವುಗಳನ್ನು ಉಪಾದಾನ ಮಾಡಿಕೊಂಡು ಮಾಡಿದ ಸೃಷ್ಟಿ ಪ್ರಾಕೃತವೆನಿಸುವುದು. ಬ್ರಹ್ಮಾಂಡವು ವಿಕೃತವು. ಅದರಲ್ಲಿ ಜನಿಸಿದವುಗಳು ವೈಕೃತವೆನಿಸುವುವು. ಬ್ರಹ್ಮಾಂಡದ ಹೊರಗಿನದು ಪ್ರಾಕೃತ. ಒಳಗಿನದು ವೈಕೃತ. 'ಬ್ರಹ್ಮಾಂಡವು ಪ್ರಾಕೃತವೇ. ಅದು ಹೊರಗಿನದೇ ತಾನೇ.

ಹಾಗಾದರೆ ಬ್ರಹ್ಮಾಂಡದ ಒಳಗೆ ಬ್ರಹ್ಮನಿಂದ ಸೃಷ್ಟವಾದ ಅವಿದ್ಯಾಸೃಷ್ಟಿಯನ್ನು ಪ್ರಾಕೃತದಲ್ಲಿ ಸೇರಿಸಿದ್ದೇಕೆ? ಎಂದರೆ ಉತ್ತರಿಸುವರು –

**ಪಂಚಪರ್ವಾ ತ್ವವಿದ್ಯಾ ತು ಭೂತೇಭ್ಯೋ ಹರಿಣಾ ಪುರಾ ॥**
**ಉದ್ಧೃತ್ಯ ಬ್ರಹ್ಮಣಿ ಕ್ಷಿಪ್ತಾ ಸಾ ಪುನಸ್ತೇನ ನಿಃಸೃತಾ ।**
**ತತ್ಸೃಷ್ಟತ್ವಜ್ಞಾಪನಾಯ ತಸ್ಮಾತ್ಸಾ ಪ್ರಾಕೃತಾ ಮತಾ ॥ ಇತಿ ಚ ।**

ಅವಿದ್ಯೆಯನ್ನು ಶ್ರೀಹರಿಯೇ ಬ್ರಹ್ಮಾಂಡದ ಹೊರಗೆನೇ ಭೂತಗಳಿಂದ ಸೃಷ್ಟಿಸಿದ್ದ. ನಂತರ ಬ್ರಹ್ಮನು ಸೃಷ್ಟಿಸಿದನೆಂದು ತಿಳಿಸಲು ಬ್ರಹ್ಮಾಂಡಾಂತರ್ಗತ ಬ್ರಹ್ಮದೇಹದಲ್ಲಿ ಇರಿಸಿದ. ಆಗ ಅವಿದ್ಯೆಯು ಮತ್ತೊಮ್ಮೆ ಬ್ರಹ್ಮನಿಂದ ಜನಿಸಿತು. ಆದ್ದರಿಂದ ಬ್ರಹ್ಮಾಂಡದ ಹೊರಗೆ ಭೂತಗಳಿಂದ ಪೂರ್ವದಲ್ಲಿ ಉತ್ಪನ್ನವಾದದ್ದರಿಂದ ಅವಿದ್ಯೆಯನ್ನು ಪ್ರಾಕೃತವೆಂದು ಹೇಳಿದೆ ಎಂದು ಭಾವ. ॥೧೭॥

ಶ್ರೀಹರಿಯು ಪೂರ್ಣಕಾಮನಾದದ್ದರಿಂದ ರಜೋಗುಣಾದಿಗಳನ್ನು ಸ್ವೀಕರಿಸಿ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಅವನಿಗೆ ಏನು ಪ್ರಯೋಜನ? ಎಂದರೆ ಹೇಳುವರು –

**ರಜೋಭಾಜೋ ಭಗವತೋ ಲೀಲೇಯಂ ಹರಿಮೇಧಸಃ ।**
**ಸಪ್ತಮೋ ಮುಖ್ಯಸರ್ಗಸ್ತು ಷಡ್‌ವಿಧಸ್ತಸ್ಥುಷಾಂ ಚ ಯಃ ॥೧೮॥**

ಹರಿಮೇಧಸಃ=ಸೂರ್ಯನಂತೆ ತಮಸ್ಸಿನ(ಅಜ್ಞಾನ) ಸಂಬಂಧ ರಹಿತವಾದ ಜ್ಞಾನವುಳ್ಳ ರಜೋಭಾಜಃ=ತನ್ನ ಇಚ್ಛಾಧೀನವಾದ ರಜೋಗುಣ, ಸತ್ವಗುಣ, ತಮೋಗುಣಗಳನ್ನು ಹೊಂದಿರುವ ಭಗವತಃ=ಶ್ರೀಹರಿಯ ಇಯಂ=ಸೃಷ್ಟ್ಯಾದಿ-ವ್ಯಾಪಾರವು ಲೀಲಾ=ಕ್ರೀಡಾರೂಪವು. ಅದು ಅವನ ಸ್ವಭಾವ. ಯಾವ ತನ್ನ ಪ್ರಯೋಜನಕ್ಕಾಗಿ ಅಲ್ಲಯಃ=ಯಾವುದು ತಸ್ಥುಷಾಂ=ಸ್ಥಾವರಗಳ ಮುಖ್ಯಸರ್ಗಃ= ಮುಖ್ಯಸ್ರೋತವೆಂಬ ಹೆಸರಿನ ಸೃಷ್ಟಿಯೋ ಸಃ=ಅದು ಸಪ್ತಮಃ=ಏಳನೆಯದು. ಷಡ್ವಿಧಃ=ಅದು ಆರು ರೀತಿಯಾಗಿದೆ.

ರಜಆದಿಗಳನ್ನು ಸ್ವೀಕರಿಸುವುದು ಎಂದರೆ ಅವುಗಳಿಂದ ಬದ್ಧನಾಗುವುದು ಎಂಬ ಪ್ರತೀತಿಯನ್ನು ನಿವಾರಿಸಲು ವಿವಕ್ಷಿತ ಗುಣಭಾಕ್ತ್ವವನ್ನು ಪ್ರಮಾಣದಿಂದ ತಿಳಿಸುವರು –

**"ಏತೇ ಗುಣಾ ಹರೇಃ ಸಮ್ಯಕ್ ಸ್ವಾತಂತ್ರ್ಯವಿಷಯಾಃ ಸದಾ ।**
**ಸ್ವತಂತ್ರಾಃ ಪ್ರಕೃತೇಶ್ಚಾಪಿ ಬ್ರಹ್ಮಣೋಽನ್ಯೇಷು ತು ಕ್ರಮಾತ್ ।**
**ದೇವೇಷ್ವೇವ ತದನ್ಯೇಷು ಪರತಂತ್ರಾ ಹಿ ತೇ ಮತಾಃ" ॥ ಇತಿ ಚ ।**

ಈ ಗುಣಗಳು ಪರಮಮುಖ್ಯವಾಗಿ ಶ್ರೀಹರಿಯ ಸ್ವಾತಂತ್ರಕ್ಕೆ ಒಳಪಟ್ಟವುಗಳು (ಇಚ್ಛಾನುಸಾರವಿನಿಯೋಗಿಸಲ್ಪಡುವವು). ಲಕ್ಷ್ಮೀದೇವಿ ಹಾಗೂ ಬ್ರಹ್ಮದೇವರ ಸ್ವಾತಂತ್ರ್ಯಕ್ಕೂ ವಿಷಯವಾಗಿವೆ. ಉಳಿದ ದೇವತೆಗಳ ಸ್ವಾತಂತ್ರ್ಯಕ್ಕೂ ಕ್ರಮವಾಗಿ ಅವರವರ ತಾರತಮ್ಯಕ್ಕನುಗುಣವಾಗಿ ಅಧೀನವಾಗಿವೆ. ರಮಾದಿಗಳಲ್ಲಿರುವ ಸ್ವಾತಂತ್ರ್ಯ ಭಗವದಧೀನವಾದುದು. ॥೧೮॥

ಸ್ಥಾವರದ ಷಡ್ವಿಧತೆಯನ್ನು ತಿಳಿಸುವರು –

**ವನಸ್ಪತ್ಯೋಷಧಿಲತಾ ತ್ವಕ್‌ಸಾರಾ ವೀರುಧೋ ದ್ರುಮಾಃ ।**
**ಉತ್ಸ್ರೋತಸಸ್ತಮಃಪ್ರಾಯಾ ಅಂತಃಸ್ಪರ್ಶಾ ವಿಶೋಷಿಣಃ ॥೧೯॥**

೧)ವನಸ್ಪತಿ=ಹೂವಾಗದೇ ಹಣ್ಣಾಗುವ ಹಲಸು ಮುಂತಾದವು. ೨)ಓಷಧಿ= ಫಲಬರುವವರೆಗೆ ಇರುವ ಭತ್ತ ಮುಂತಾದವು. ೩)ಲತಾ=ಬೇರೆ ವಸ್ತುಗಳಿಗೆ ಅಂಟಿಕೊಂಡಿರುವ ಬಳ್ಳಿಗಳು. ೪) ತ್ವಕ್‌ಸಾರಾಃ=ಬಿದಿರು ಮುಂತಾದವು (ಇವುಗಳ ತೊಗಟೆಗೇ ಶ್ರೇಷ್ಠತೆ ಇರುವುದು). ೫)ವೀರುಧಃ=ಕಾಂಡಗಳಿಂದ ಬೆಳೆಯುವ

ಗುಲಾಬಿ, ಮಲ್ಲಿಗೆ ಮುಂತಾದವು. ೬)ದ್ರುಮಾಃ=ಹೂ ಆಗಿ ಫಲವಾಗುವ ಮಾವು ಮುಂತಾದವು.

ಇವುಗಳು ಉತ್ಸ್ರೋತಸಃ=ಮುಖ್ಯಸ್ಥಾನಕ್ಕೆ ಹೋಗುವವುಗಳು ತಮಃಪ್ರಾಯಾಃ= ಅಜ್ಞಾನವುಳ್ಳವುಗಳು (ಕಲ್ಪವೃಕ್ಷಬಿಟ್ಟು) ಬಹುಶಃ ವಿಶೋಷಿಣಃ=ನೀರು ಇಲ್ಲವಾದರೆ ಒಣಗುವುವುಗಳು ಅಂತಸ್ಸ್ಪರ್ಶಾಃ=ಹೃದಯದ ಒಳಗಿರುವುದನ್ನು ಬೇಗನೆ ತಿಳಿಯುವುವುಗಳು.

ಈ ಶ್ಲೋಕದಲ್ಲಿ ಸ್ಥಾವರಗಳಿಗೆ ಉತ್ಸ್ರೋತಸ್ತ್ವವನ್ನು ಹೇಳಿದೆ. ೨೫ನೇ ಶ್ಲೋಕದಲ್ಲಿ 'ಅರ್ವಾಕ್ಸ್ರೋತಸ್ತು ನವಮಃ' ಎಂದು ಮನುಷ್ಯರಿಗೆ ಅರ್ವಾಕ್ಸ್ರೋತಸ್ತ್ವವನ್ನು ಹೇಳುವರು. ಮುಂದೆ ಹೇಳುವ ತಿರ್ಯಕ್ ಪ್ರಾಣಿಗಳಿಗೆ ತಿರ್ಯಕ್ಸ್ರೋತಸ್ತ್ವ ಮತ್ತು ದೇವತೆಗಳಿಗೆ ಊರ್ಧ್ವಸ್ರೋತಸ್ತ್ವವನ್ನು ಸ್ವೀಕರಿಸಬೇಕು ಎಂಬ ಅಭಿಪ್ರಾಯದಿಂದ ಸ್ಥಾವರಾದಿ ಜೀವರಲ್ಲಿ ಮುಖ್ಯಸ್ರೋತಸ್ತ್ವ ಮುಂತಾದ ವಿಭಾಗವನ್ನು ಮತ್ತು ಅವುಗಳನ್ನು ಆ ಆ ಶಬ್ದಗಳಿಂದ ಕರೆಯಲು ಕಾರಣವನ್ನು ಪ್ರಮಾಣದಿಂದಲೇ ಹೇಳುವರು -

> ''ಸ್ಥಾಸ್ನುಭಿರ್ನಿಯಮಾನ್ಮುಖ್ಯಾ ಸ್ಥಿತೇರ್ಗತಿರವಾಪ್ಯತೇ ।
> ಪ್ರಾಯಃ ಪರೋಪಕರ್ತೃತ್ವಾತ್ತೇ ಮುಖ್ಯಸ್ರೋತಸಃ ಸ್ಮೃತಾಃ ॥
> ನಾಧೋ ನೋರ್ಧ್ವಂ ತಿರಶ್ಚಾಂ ತು ಪುನಸ್ತತ್ರೈವ ಯಜ್ಜನಿಃ ।
> ಯಜ್ಜ್ಞೋಪಯೋಗಂ ಚ ಸತಾಮುಪಕಾರಂ ವಿನಾಪಿ ಚ ।
> ತಿರ್ಯಕ್ಸ್ರೋತಸ ಇತ್ಯೇವ ಪ್ರೋಚ್ಯಂತೇ ಜ್ಞಾನಿಭಿಸ್ತತಃ ॥
> ಪ್ರಾಯೋಽಧೋಗಮನಂ ಯಸ್ಮಾತ್ ಪ್ರಯತ್ನೇನ ವಿನಾ ಭವೇತ್ ।
> ಅರ್ವಾಕ್ಸ್ರೋತಸ ಇತ್ಯೇವ ಮಾನುಷಾಃ ಪರಿಕೀರ್ತಿತಾಃ ॥
> ನಿಯಮಾದೂರ್ಧ್ವಗಂತಾರೋ ದೇವಾ ಮೋಕ್ಷೈಕಭಾಗಿನಃ ।
> ಊರ್ಧ್ವಸ್ರೋತಸ ಇತ್ಯೇವ ತಸ್ಮಾತ್ತೇ ಪರಿಕೀರ್ತಿತಾಃ'' ॥ ಇತಿ ಬ್ರಾಹ್ಮೇ ।

ಯಾವಕಾರಣ ಸ್ಥಾವರಗಳು ಬಹುತೇಕವಾಗಿ ಪರೋಪಕಾರ ಮಾಡುತ್ತಲೆ ಇರುವುದರಿಂದ ನಿಯಮೇನ ಮುಖ್ಯವಾದ ಗತಿಯನ್ನೇ ಹೊಂದುವವು. ಕಾರಣ ಅವುಗಳನ್ನು 'ಮುಖ್ಯಸ್ರೋತಸ್' ಎಂದು ಕರೆಯುವರು. ('ಮುಖ್ಯಂ ಸ್ರೋತಃ ಗಮ್ಯಂ ಯೇಷಾಂ ತೇ' ಎಂದು ವಿಗ್ರಹ). ಪರೋಪಕಾರ ಮಾಡದಿರುವ ಸ್ಥಾವರಗಳು ಇದರಲ್ಲಿ ಸೇರುವುದಿಲ್ಲ ಎಂದು ತಿಳಿಸಲು ಪ್ರಾಯಃ ಎಂದಿದ್ದಾರೆ.

ಬುದ್ಧಿಪೂರ್ವಪ್ರವೃತ್ತಿ ಇಲ್ಲದಿರುವ ತಿರ್ಯಕ್‌ಪ್ರಾಣಿಗಳಿಗೆ ಊರ್ಧ್ವಗಮನವಾಗಲಿ, ಅಧೋಗಮನವಾಗಲಿ ಇಲ್ಲ. ಪುನಃ ಭೂಮಿಯಲ್ಲೇ ಜನಿಸುವವು. ಯಜ್ಞಕ್ಕೆ ಉಪಯೋಗವಾಗದಿರುವ, ಸಜ್ಜನರನ್ನು ವಹನಮಾಡಿ ಉಪಕಾರವನ್ನೂ ಮಾಡದಿರುವ ಈ ಪ್ರಾಣಿಗಳು 'ತಿರ್ಯಕ್‌ಸ್ರೋತಸ್' ಎನಿಸಿಕೊಳ್ಳುವುವು. ಹರಿಯ ಆರಾಧನಾರೂಪ ಪ್ರಯತ್ನಶೂನ್ಯರಾದ ಮನುಷ್ಯರಿಗೆ ಪ್ರಾಯಃ ಅಧೋಗಮನವಿರುವುದರಿಂದ ಮನುಷ್ಯರು 'ಅರ್ವಾಕ್ ಸ್ರೋತಸ್' ಎನಿಸುವರು. ನಿಯಮೇನ ಮೋಕ್ಷವನ್ನೇ ಹೊಂದಲು ಯೋಗ್ಯರಾದ ದೇವತೆಗಳು ಅತ್ಯುತ್ತಮ ಸ್ಥಾನಕ್ಕೆ ಹೋಗುವುದರಿಂದ 'ಊರ್ಧ್ವಸ್ರೋತಸ್' ಎನಿಸುವರು.

**''ತಿರಶ್ಚಾಂ ಸ್ಥಾವರಾಣಾಂ ಚ ಬುದ್ಧಿಪೂರ್ವಪ್ರವರ್ತಿನಾಂ ।**
**ಅಸುರಾಣಾಂ ರಕ್ಷಸಾಂ ವಾಪಿ ಪಿಶಾಚಾನಾಂ ತಥೈವ ಚ ॥**
**ಅರ್ವಾಕ್‌ಸ್ರೋತಸ್ತ್ವಮುದ್ದಿಷ್ಟಂ ನಿಯಮಾದಸುರಾದಿನಾಂ'' ॥ ಇತಿ ಚ ।**

ಇನ್ನು ಬುದ್ಧಿಪೂರ್ವಕವಾಗಿ ಪಾಪದಲ್ಲಿ ಪ್ರವರ್ತಿಸುವ ತಿರ್ಯಕ್‌ಪ್ರಾಣಿಗಳು, ಸ್ಥಾವರಗಳು, ಅಸುರರು, ರಾಕ್ಷಸರು, ಪಿಶಾಚಗಳು ಎಲ್ಲರೂ ಅರ್ವಾಕ್ ಸ್ರೋತಸ್ಸಿನಲ್ಲಿಯೇ ಸೇರುವರು. ಇಲ್ಲಿ ಮನುಷ್ಯರಿಗೆ ಬುದ್ಧಿ ಪೂರ್ವಕವಾಗಿ ಪಾಪದಲ್ಲಿ ಪ್ರವೃತ್ತರಾದ್ದರಿಂದ ಬಂದ ಅರ್ವಾಕ್‌ಸ್ರೋತಸ್ತ್ವ ಕಾದಾಚಿತ್ಕ (ಅನಿತ್ಯ). ಅಸುರರಿಗೆ ಸ್ವಭಾವನಿಮಿತ್ತಕವಾದುದು ಸಾರ್ವಕಾಲಿಕ ಎಂಬ ವಿಶೇಷವನ್ನು 'ನಿಯಮಾದಸುರಾದಿನಾಂ' ಎಂಬುದರಿಂದ ತಿಳಿಸಿರುವರು.

ಮೂಲದಲ್ಲಿ ಸ್ಥಾವರಗಳಿಗೆ ಉತ್‌ಸ್ರೋತಸ್ ಎಂದು ಕರೆದಿದ್ದಾರೆ. ನೀವು ನೀಡಿದ ಪ್ರಮಾಣದಲ್ಲಿ 'ಮುಖ್ಯಸ್ರೋತಸಃ ಸ್ಮೃತಾಃ' ಎಂದು ಅವುಗಳನ್ನು ಮುಖ್ಯಸ್ರೋತಸ್ ಎಂದು ಕರೆದಿದ್ದಾರೆ. ಆದ್ದರಿಂದ ವಿರೋಧ ಬರುವುದಲ್ಲಾ? ಎಂದರೆ ಪರಿಹರಿಸುವರು–

**ಮುಖ್ಯಸ್ರೋತಸ ಇತ್ಯಸ್ಯ ಅರ್ಥಃ ಉತ್ಸ್ರೋತಸಃ ಇತಿ ।**

ಮುಖ್ಯಸ್ರೋತಸ್ ಎಂಬುದರ ಅರ್ಥವೇ ಉತ್ಸ್ರೋತಸ್ ಎಂಬುದು. ಅಂದರೆ ಉತ್ಕೃಷ್ಟ ಎಂಬ ಅರ್ಥವುಳ್ಳ ಮುಖ್ಯ,ಉತ್ ಇವರೆಡೂ ಪರ್ಯಾಯವಾದದ್ದರಿಂದ ಮುಖ್ಯಸ್ರೋತಸ್ ಮತ್ತು ಉತ್ಸ್ರೋತಸ್ ಎಂಬ ಎರಡೂ ಪದಗಳು ಒಂದೇ ಅರ್ಥವನ್ನು ತಿಳಿಸಿಕೊಡುವವು ಎಂದು ಭಾವ. ಆದ್ದರಿಂದ ಯಾವ ವಿರೋಧವಿಲ್ಲ.

ಉತ್ ಮತ್ತು ಊರ್ಧ್ವ ಎರಡೂ ಪರ್ಯಾಯಪದಗಳಾದದ್ದರಿಂದ ಉತ್‌ಸ್ರೋತವಾದ ಸ್ಥಾವರಗಳಿಗೂ, ಊರ್ಧ್ವಸ್ರೋತರಾದ ದೇವತೆಗಳಿಗೂ ಯಾವ ವಿಶೇಷವೂ ಇಲ್ಲ ಎಂದಾಗುವುದಿಲ್ಲವೇ? ಎಂದರೆ ಉತ್ತರಿಸುವರು-

''ಊರ್ಧ್ವ ಇತ್ಯೇವ ಯಸ್ತೂಚ್ಚತಮ ಏವಾಭಿಧೀಯತೇ ।
ಊರ್ಧ್ವಸ್ರೋತಸ ಏತಸ್ಮಾದ್ದೇವಾ ಏವ ನ ತತ್ಪರೇ ॥
ಉಚ್ಛಬ್ದ ಉಚ್ಚಮಾತ್ರೇಽಪಿ ತಸ್ಮಾತ್ ಸ್ಥಾಸ್ನುಷು ಭಣ್ಯತೇ'' ॥

'ಊರ್ಧ್ವ'ಶಬ್ದವು ಯಾವುದು ಅತ್ಯುತ್ತಮವೋ ಅದನ್ನು ತಿಳಿಸಿಕೊಡುವುದು. ಕಾರಣ ಊರ್ಧ್ವಸ್ರೋತಸರು ಎಂದರೆ ಉತ್ತಮೋತ್ತಮಗತಿಯನ್ನು ಹೊಂದುವ ದೇವತೆಗಳು ಮಾತ್ರ. ಆದರೆ 'ಉತ್'ಶಬ್ದವು ಸಾಮಾನ್ಯ ಉತ್ತಮ ಎಂಬರ್ಥವುಳ್ಳದ್ದು. ಕಾರಣ ಸ್ಥಾವರಗಳಿಗೆ ಉತ್ಸ್ರೋತಸ ಎಂದು ಹೆಸರು. ಉತ್‌ಶಬ್ದವು ಊರ್ಧ್ವಪದಪರ್ಯಾಯವಲ್ಲವೆಂದು ಭಾವ.

''ತಿರಶ್ಚೀನಾಃ ಸ್ಥಾವರಾಶ್ಚ ಅಂತಃಸ್ಪರ್ಶಾ ಇತೀರಿತಾಃ ।
ಯತ್ಪ್ರತ್ಯಕ್ಷಾನುಮಾನಾಭ್ಯಾಂ ಹೃದ್ಗಜ್ಞಾನಂ ನ ಶಾಸ್ತ್ರತಃ'' ॥ ಇತಿ ಪಾದ್ಮೇ ।

**ಯದಪ್ರಯತ್ನಾದ್ಧೃದಯಂಗಮಂ ತದೇವ ಜಾನಂತಿ ನ ಶಾಸ್ತ್ರಯುಕ್ತಿಭ್ಯಾಮಿತ್ಯರ್ಥಃ ॥೧೯॥**

ತಿರ್ಯಕ್ ಜಂತುಗಳಿಗೆ, ಸ್ಥಾವರಗಳಿಗೆ ಮನೋಹರವಾದ ಇಷ್ಟ ಪ್ರಾಪ್ತಿ, ಅನಿಷ್ಟಪರಿಹಾರಸಾಧನರೂಪವಾದದ್ದು ಮಾತ್ರ, ಪ್ರಯತ್ನವಿಲ್ಲದೆ ಪ್ರತ್ಯಕ್ಷದಿಂದಲೂ, ಅದಕ್ಕೆ ಸಮಾನವಾದ ಶೀಘ್ರದಲ್ಲಿ ಆಗುವ ವ್ಯಾಪ್ತಿಸಾಪೇಕ್ಷ ಅನುಮಾನದಿಂದಲೂ ತಿಳಿಯುವವು. ಹೊರತು ಶಾಸ್ತ್ರ ಮತ್ತು ಮೀಮಾಂಸಗಳಿಂದ ತಿಳಿಯಲಾರವು ಕಾರಣ ಅಂತಸ್ಪರ್ಶಾಃ ಎನ್ನುವರು. ಅಂತು 'ಅಂತಸ್ಥಂ ಹೃದಯಂಗಮಂ ಸ್ಪೃಶಂತೀತಿ ಅಂತಸ್ಪರ್ಶಾಃ' ಎಂದು ಮೂಲವ್ಯಾಖ್ಯಾನ ಮಾಡಿದಂತಾಯಿತು. ॥೧೯॥

**ತಿರಶ್ಚಾಮಷ್ಟಮಃ ಸರ್ಗಃ ಸೋಽಷ್ಟಾವಿಂಶದ್ವಿಧೋ ಮತಃ ।**
**ಅವಿದೋ ಭೂರಿತಮಸೋ ಘ್ರಾಣಜ್ಞಾ ಹೃದ್ಯವೇದಿನಃ ॥೨೦॥**

ತಿರಶ್ಚಾಂ ಸರ್ಗಃ=ಪಶುಗಳ ಸೃಷ್ಟಿಯು ಅಷ್ಟಮಃ=ಎಂಟನೆಯದು ಸಃ=ಅದು ಅಷ್ಟಾವಿಂಶದ್ವಿಧಃ=ಇಪ್ಪತ್ತೆಂಟು ಪ್ರಕಾರವುಳ್ಳದ್ದು. ಅವುಗಳು ಭೂರಿತಮಸಃ= ತಮೋಗುಣ ಪ್ರಚುರವಾದವುಗಳು.(ಬಹಳತಮೋಗುಣವುಳ್ಳದ್ದಾಗಿದೆ) ಆದ್ದರಿಂದಲೇ ಅವಿದಃ=ಶಾಸ್ತ್ರ ಮತ್ತು ಯುಕ್ತಿಯಿಂದ ಉಂಟಾಗುವ ಜ್ಞಾನರಹಿತವಾದವುಗಳು. ಘ್ರಾಣಜ್ಞಾಃ=ಮೂಗಿನಿಂದಲೇ ತಮಗೆ ಬೇಕಾದ ಪದಾರ್ಥಗಳನ್ನು ತಿಳಿಯುವುವು.

ಹೃದ್ಯವೇದಿನಃ=ಮನೋಹರವಾದವುಗಳನ್ನು ಮಾತ್ರ ತಿಳಿಯುವವು. (ಘ್ರಾಣಜ್ಞಾಃ ಎಂಬುದೇ ಲಕ್ಷಣವು. ಮಿಕ್ಕಾದವು ಸ್ವರೂಪ ಕಥನಪರವಾದವು ಎಂದು ತಿಳಿಯಬೇಕು). ॥೨೦॥

**ಗೌರಜೋ ಮಹಿಷಃ ಕೃಷ್ಣಃ ಸೂಕರೋ ಗವಯೋ ರುರುಃ ।**
**ದ್ವಿಶಫಾಃ ಪಶವಶ್ಚೇಮೇ ಅವಿರುಷ್ಟ್ರಶ್ಚ ಸತ್ತಮ ॥೨೧॥**

**ಖರೋಽಶ್ವೋಽಶ್ವತರೋ ಗೌರಃ ಶರಭಶ್ಚಮರೀ ತಥಾ ।**
**ಏತೇ ಚೈಕಶಫಾಃ ಕ್ಷತ್ತಃ ಶೃಣು ಪಂಚನಖಾನ್ ಪಶೂನ್ ॥೨೨॥**

**ಶ್ವಾ ಶೃಗಾಲೋ ವೃಕೋ ವ್ಯಾಘ್ರೋ ಮಾರ್ಜಾರಃ ಶಶಶಲ್ಯಕೌ ।**
**ಸಿಂಹಃ ಕಪಿರ್ಗಜಃ ಕೂರ್ಮೋ ಗೋಧಾ ಚ ಮಕರಾದಯಃ ॥೨೩॥**

**ಕಂಕಗೃಧ್ರಬಕಶ್ಯೇನಾ ಭಾಸವಲ್ಲೂರಬರ್ಹಿಣಃ ।**
**ಹಂಸಸಾರಸಚಕ್ರಾಹ್ವಕಾಕೋಲೂಕಾದಯಃ ಖಗಾಃ ॥೨೪॥**

ಹೇ ಸತ್ತಮ=ವಿದುರನೇ ! ಗೌಃ=ಆಕಳು, ಅಜಃ=ಆಡು, ಮಹಿಷಃ=ಎಮ್ಮೆ ಕೃಷ್ಣಃ=ಜಿಂಕೆ, ಗವಯಃ=ಕಾಡಾಕಳು, ರುರುಃ= ಮತ್ತೊಂದು ತರಹದ ಜಿಂಕೆ, ಅವಿಃ= ಕುರಿ, ಉಷ್ಟ್ರಃ=ಒಂಟೆ, ಇಮೇ=ಮೇಲೇ ಹೇಳಿದ ಪಶುಗಳು ದ್ವಿಶಪಾಃ=ಎರಡು ಖುರವುಳ್ಳವುಗಳು.

ಖರಃ=ಕತ್ತೆ, ಅಶ್ವಃ=ಕುದುರೆ, ಅಶ್ವತರಃ=ಹೇಸರಗತ್ತೆ ಗೌರಃ=ಜಿಂಕೆಯಪ್ರಬೇದ ಶರಭಃ=ಸಿಂಹಕ್ಕಿಂತ ಕ್ರೂರಮೃಗ ತಥಾ=ಹಾಗೂ ಚಮರೀ=ಚಮರೀಮೃಗ ಏತೇ= ಇವುಗಳು ಏಕಶಫಾಃ=ಒಂದೇ ಖುರವುಳ್ಳವು. ಹೇ ಕ್ಷತ್ತಃ=ವಿದುರನೇ ಪಂಚನಖಾನ್ ಪಶೂನ್ ಶೃಣು=ಐದು ಉಗುರುಳ್ಳ ಪಶುಗಳನ್ನು ಹೇಳುತ್ತೇನೆ ಕೇಳು.

ಶ್ವಾ=ನಾಯಿ, ಶೃಗಾಲಃ=ನರಿ, ವೃಕಃ=ತೋಳ, ವ್ಯಾಘ್ರಃ=ಹುಲಿ, ಮಾರ್ಜಾರಃ= ಬೆಕ್ಕು, ಶಶಃ=ಮೊಲ, ಶಲ್ಯಕಃ=ಮುಳ್ಳುಹಂದಿ, ಸಿಂಹಃ=ಸಿಂಹ, ಕಪಿಃ=ಮಂಗ, ಗಜಃ=ಆನೆ, ಕೂರ್ಮಃ=ಆವಿ(ಮೆ) ಗೋಧಾ=ಹಲ್ಲಿ ಇವು ಐದು ಉಗುರು ಇರುವವು. ಮಕರಾದಯಃ=ಮೊಸಳೆ ಮೊದಲಾದ ಜಲಚರಪ್ರಾಣಿಗಳು ಕಂಕ-ಗೃಧ್ರ-ಬಕ-ಶ್ಯೇನಾಃ=ಬಕ ಹಾಗು ಹದ್ದಿನಜಾತಿಗೆ ಸೇರಿದ ಕಂಕ,ಗೃಧ್ರ, ಶ್ಯೇನಗಳು, ಭಾಸವಲ್ಲೂರ ಬರ್ಹಿಣಃ=ಕೋಳಿ, ನೃತ್ತಪಕ್ಷಿ, ನವಿಲುಗಳು, ಹಂಸಸಾರಸಚಕ್ರಾಹ್ವ= ಹಂಸ, ಸಾರಸ, ಚಕ್ರವಾಕ ಕಾಕ=ಕಾಗೆ ಉಲೂಕ=ಗೂಬೆ ಮೊದಲಾದವು, ಖಗಾಃ= ಪಕ್ಷಿಗಳು.

ಪ್ರಾಣಿಗಳು ಅನೇಕ ರೀತಿಯವು ಇರುವಾಗ ೨೮ ವಿಧ ಎಂದು ಹೇಳಲು ಕಾರಣವೇನು? ಎಂಬುದಕ್ಕೆ ಪ್ರಯೋಜನ ಹೇಳುವರು–

''ಅಷ್ಟಾವಿಂಶದ್ವಿಶೇಷೇಣ ಯಜ್ಞೇಷೂಪಕೃತಂ ಯತಃ ।
ತಿರಶ್ಚಾಂ ತಾವದೇತಸ್ಮಾದ್ಗಣ್ಯಂತೇ ಶಾಸ್ತ್ರವೇದಿಭಿಃ'' ॥

ಶಾಸ್ತ್ರವನ್ನು ತಿಳಿದವರು ಯಜ್ಞಕ್ಕೆ ವಿಶೇಷ ಉಪಯೋಗವಾದುದರಿಂದ ೨೮ ಎಂದು ಗಣನೆ ಮಾಡಿ ಹೇಳುವರು.

ಹಿಂದಿನ ಶ್ಲೋಕದಲ್ಲಿ ಪ್ರಾಣಿಗಳು ೨೮ ವಿಧ ಎಂದು ಹೇಳಿ, ಅದನ್ನು ವಿವರಿಸುವ ಮುಂದಿನ ಶ್ಲೋಕದಲ್ಲಿ ಇಪ್ಪತ್ತೆಂಟಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಪ್ರಾಣಿಗಳ ಹೆಸರನ್ನು ಉದಾಹರಿಸಿದ್ದಾರೆ. ಈ ವಿರೋಧವನ್ನು ಪರಿಹರಿಸಲು ಹೇಳುತ್ತಾರೆ–

''ಗೌರಜೋ ಮಹಿಷಃ ಕೃಷ್ಣಃ ಸೂಕರೋ ಗವಯೋ ರುರುಃ ।
ಅವ್ಯುಷ್ಟ್ರೌ ಚ ಖರಾಶ್ವೌ ಚ ತಥೈವಾಶ್ವತರೋಽಪರಃ ॥
ಗೌರಶ್ಚ ಶರಭಶ್ಚೈವ ಚಮರೀ ಶ್ವಶೃಗಾಲಕೌ ।
ವೃಕೋ ವ್ಯಾಘ್ರಶ್ಚ ಮಾರ್ಜಾರೋ ಹರಿಶ್ಚ ಶಶಶಲ್ಯಕೌ ।
ಕಪಿರ್ಗಜಶ್ಚ ಗೋಧಾದ್ಯಾ ಜಲಜಾಃ ಪಕ್ಷಿಣಸ್ತಥಾ'' ॥ ಇತಿ ಬ್ರಹ್ಮಾಂಡೇ ।

ಆಕಳಿಂದ ಹಲ್ಲಿಯವರೆಗೆ ೨೬ ಪ್ರಾಣಿಗಳು, ಎಲ್ಲ ಜಲಚರಗಳು ಸೇರಿ ಒಂದು ಗುಂಪು. ಇದು ೨೭ನೆಯದು, ಎಲ್ಲ ಪಕ್ಷಿಗಳು ಸೇರಿ ಒಂದು ಗುಂಪು. ಇದು ೨೮ನೆಯದು. ಹೀಗೆ ಹೇಳಿದರೆ ಯಾವ ವಿರೋಧವೂ ಬರುವುದಿಲ್ಲ.

**ಕೂರ್ಮಃ ಜಲಜತ್ವೇನ ಅಷ್ಟಾವಿಂಶತ್ಸು ಅಂತರ್ಭೂತೋಽಪಿ ಪಂಚನಖತ್ವ-ಪ್ರದರ್ಶನಾರ್ಥಂ ಪೃಥಗುಕ್ತಃ ।**

ಆಮೆಯು ಜಲಚರವಾದುದರಿಂದ ೨೮ ರಲ್ಲಿಯೇ ಸೇರಿದ್ದರೂ ಐದು ಉಗುರು ಉಳ್ಳದ್ದೆಂದು ತಿಳಿಸಲು ಮೂಲದಲ್ಲಿ ಪ್ರತ್ಯೇಕವಾಗಿ ಹೇಳಲ್ಪಟ್ಟಿದೆ.

''ತತ್ತದಾಕಾರಸಂಯುಕ್ತಾನ್ ಸೃಜ್ಯಾನ್ ಸ್ರಷ್ಟಾರಮೇವ ಚ ।
ಯಃ ಸದಾ ಸಂಸ್ಮರೇದ್ಯೋಗೀ ನ ಸ ಭೂಯೋಽಭಿಜಾಯತೇ'' ॥

ಇತಿ ಸ್ಕಾಂದವಚನಾತ್ ಪ್ರಸಿದ್ಧಾನಾಮಪಿ ದ್ವಿಶಫಾದೀನಾಂ ಸ್ಮರಣ-ವಿಧಾನಾರ್ಥಮುಕ್ತಿಃ ।

''ಉಚ್ಯತೇ ಸುಪ್ರಸಿದ್ಧಂ ಚ ಸ್ಮರಣಾರ್ಥಂ ಚ ಕುತ್ರಚಿತ್ ॥
ಅಪ್ರಸಿದ್ಧಜ್ಞಾಪನಾರ್ಥಂ ದ್ವಿಧಾ ಶಾಸ್ತ್ರವಚಃ ಸ್ಮೃತಂ'' । ಇತಿ ಷಾಡ್ಗುಣ್ಯೇ ।

**ವಲ್ಲೂರೋ ನೃತ್ತಪಕ್ಷೀ ಚ ಸಲಲೂಕಶ್ಚ ಕಥ್ಯತೇ । ಇತ್ಯಭಿಧಾನೇ ।**

'ಆಯಾ ಆಕಾರಗಳಿಂದ ಕೂಡಿದ, ಉತ್ಪನ್ನವಾದ ಪದಾರ್ಥಗಳನ್ನು ಅವುಗಳನ್ನು ಸೃಷ್ಟಿಸಿದ ಭಗವಂತನನ್ನು ಯಾವ ಯೋಗಿಯು ಯಾವಾಗಲೂ ಸ್ಮರಿಸುವನೋ ಅವನು ಪುನಃ ಜನಿಸುವುದಿಲ್ಲ' ಎಂದು ಸ್ಕಾಂದಪುರಾಣದ ವಚನವಿರುವುದರಿಂದ ಪ್ರಸಿದ್ಧವಾಗಿದ್ದರೂ ದ್ವಿಶಫಾದಿಗಳನ್ನು ಸ್ಮರಣ ಮಾಡುವುದಕ್ಕಾಗಿ ಹೇಳಿರುವರು. ಶಾಸ್ತ್ರದಲ್ಲಿ ಕೆಲವು ಸ್ಥಳದಲ್ಲಿ ಸ್ಮರಣ ಮಾಡುವುದಕ್ಕಾಗಿ ಪ್ರಸಿದ್ಧವಾದುದನ್ನು ಹೇಳುವರು. ಹಲವೆಡೆ ಅಪ್ರಸಿದ್ಧವಾದುದನ್ನು ತಿಳಿಸಲು ವಚನಗಳಿರುವುವು ಎಂದು ಷಾಡ್ಗುಣ್ಯದಲ್ಲಿದೆ.

ವಲ್ಲೂರ ಎಂದು ನೃತ್ತಪಕ್ಷೀ ಮತ್ತು ಸಲಲೂಕ ಎಂಬುದು ಹೇಳಲ್ಪಡುವವು ಎಂದು ಅಭಿಧಾನವಿದೆ.

**ಅಷ್ಟಾವಿಂಶತ್ಪ್ರಧಾನಾಸ್ತು ತಿರಶ್ಚಾಂ ಯಾಸ್ತು ಜಾತಯಃ ।**
**ಯೋ ಯಸ್ಯ ಸದೃಶಸ್ತ್ವನ್ಯಃ ಸ ತತ್ರಾಂತರ್ಗತೋ ಭವೇತ್ ॥**
**ಜಲಜಾಂತರ್ಗತಾ ಸರ್ಪಾ ಕೀಟಾದ್ಯಾ ಯಾಶ್ಚ ಜಾತಯಃ ।**
**ತೇಷಾಂ ಜಲಪ್ರಧಾನತ್ವಾತ್ ಶರೀರಸ್ಯ ತು ಸರ್ವಶಃ ॥**

**ಇತಿ ಸತ್ಯಸಂಹಿತಾಯಾಂ ।**

ಇಪ್ಪತ್ತೆಂಟು ಮುಖ್ಯ ಪಶುಜಾತಿಗಳನ್ನು ಏನು ಹೇಳಿದೆಯೋ ಅವುಗಳಲ್ಲಿಯೇ ಇಲ್ಲಿ ಹೇಳದಿರುವ ಇತರ ಪಶುಗಳೂ ಅಂತರ್ಭಾವವಾಗುತ್ತವೆ. ಯಾವುದು ಯಾವುದರಂತೆ ಇರುವುದೋ ಅದು ಅದರಲ್ಲಿ ಸೇರಿದ್ದೆಂದು ತಿಳಿಯಬೇಕು. ಕಾರಣ ಎಲ್ಲವನ್ನೂ ಹೇಳಲಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ. ಕೆಲವು ಸರ್ಪಗಳು, ಕೀಟಗಳು ಅವುಗಳ ಶರೀರ ಜಲಪ್ರಧಾನಕಗಳಾದ್ದರಿಂದ ಜಲಜದಲ್ಲಿ ಸೇರುವುವು. ಎಂದು ಸತ್ಯಸಂಹಿತೆಯಲ್ಲಿ ಹೇಳಿದೆ. ॥೨೧-೨೪॥

**ಅರ್ವಾಕ್‌ಸ್ರೋತಸ್ತು ನವಮಃ ಕ್ಷತ್ತರೇಕವಿಧೋ ನೃಣಾಂ ।**
**ರಜೋಽಧಿಕಾಃ ಕರ್ಮಪರಾ ದುಃಖೇ ಚ ಸುಖಮಾನಿನಃ ॥೨೫॥**

ಕ್ಷತ್ತಃ=ವಿದುರನೇ! ನವಮಃ=ಒಂಬತ್ತನೆಯದು ಅರ್ವಾಕ್‌ಸ್ರೋತಃ ಸರ್ಗಃ= ಅರ್ವಾಕ್‌ಸ್ರೋತ ಎಂಬ ಹೆಸರಿನ ಸೃಷ್ಟಿಯು. ಇದು, ತು=ಎರಡು ವಿಭಾಗ ಉಳ್ಳದ್ದು. ನೃಣಾಂ ಏಕವಿಧಃ=ಮನುಷ್ಯರಿಗೆ ಸಂಬಂಧಿಸಿದ್ದು ಒಂದು. ಅಸುರ ಸಂಬಂಧಿಯಾದುದು ಮತ್ತೊಂದು. ಅದರಲ್ಲಿ ಮೊದಲನೆಯವರಾದ ಮನುಷ್ಯರು ರಜೋಧಿಕಾಃ=ಹೆಚ್ಚು ರಜೋಗುಣಯುಕ್ತರಾದವರು, ಕರ್ಮಪರಾಃ=ಕರ್ಮಗಳಲ್ಲಿ

ಆಸಕ್ತರು. ಇನ್ನು ಎರಡನೆಯವರಾದ ಅಸುರರು ದುಃಖೇ=ದುಃಖಸಾಧನವಾದ ಶ್ರೀಹರಿದ್ವೇಷಾದಿಗಳಲ್ಲಿ ಸುಖಮಾನಿನಃ=ಸುಖಸಾಧನತ್ವವಿದೆ ಎಂದು ತಿಳಿದವರು, ಎಲ್ಲ ಪದಾರ್ಥಗಳನ್ನೂ ವಿಪರೀತ ತಿಳಿಯುವವರು, ತಮೋಗುಣ ಹೆಚ್ಚಾಗಿವುಳ್ಳವರು.

ಈ ಶ್ಲೋಕವು ಕೇವಲ ಮನುಷ್ಯರನ್ನು ಹೇಳುವುದು ಎಂದರೆ 'ದುಃಖೇ ಚ ಸುಖಮಾನಿನಃ' ಎಂಬ ಅಸುರರ ಸ್ವಭಾವ ಹೇಳಿದ್ದು ಅಯುಕ್ತವಾಗುವುದು. ಕಾರಣ ತಾತ್ಪರ್ಯ ಹೇಳುವರು –

**''ರಜೋನಿಷ್ಠಾಸ್ತಮೋನಿಷ್ಠಾ ದ್ವೇಧಾಽರ್ವಾಕ್‌ಸ್ರೋತಸಃ ಸ್ಮೃತಾಃ ।**
**ಅಸುರಾದ್ಯಾಸ್ತಮೋನಿಷ್ಠಾ ಮಾನುಷಾಸ್ತು ರಜೋಧಿಕಾಃ'' ॥**

**ಇತಿ ವ್ಯೋಮಸಂಹಿತಾಯಾಂ ।**

**ದುಃಖೇ ಚ ಸುಖಮಾನಿನೋ ಅಸುರಾಃ ।'**
**'ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ'' ।**

**ಇತಿ ವಚನಾತ್ ।**

**''ಸುಖೇ ಸುಖೈಕಭಾವಾಸ್ತು ದೇವಾ ನೈವಂ ತು ದಾನವಾಃ'' ।**

**ಇತಿ ಷಾಡ್ಗುಣ್ಯೇ ।**

ಅರ್ವಾಕ್‌ಸ್ರೋತಸರು ರಜೋನಿಷ್ಠರು, ತಮೋನಿಷ್ಠರು ಎಂದು ಎರಡು ವಿಧವಾದವರು. ಅಸುರರೇ ಮೊದಲಾದವರು ತಮೋನಿಷ್ಠರು. ಮನುಷ್ಯರು ರಜೋಧಿಕರು ಎಂದು ವ್ಯೋಮಸಂಹಿತೆಯಲ್ಲಿದೆ.

ದುಃಖಕರವಾದ ಹರಿದ್ವೇಷವನ್ನು ಸುಖಕರವೆಂದು ತಿಳಿಯುವವರು, ಅಲ್ಲದೆ ದುಃಖರೂಪವಾದ ತಮ್ಮ ಚೈತನ್ಯವನ್ನು ಸುಖರೂಪವೆಂದು ತಿಳಿದವರು ಅಸುರರು. 'ಎಲ್ಲ ಪದಾರ್ಥಗಳನ್ನು ವಿಪರೀತವಾಗಿ ವಿಷಯೀಕರಿಸುವ ಬುದ್ಧಿಯು ತಾಮಸವು' ಎಂದು ಗೀತೆಯಲ್ಲಿ ಶ್ರೀಕೃಷ್ಣವಚನ. ಪರತತ್ವನಾದ ಶ್ರೀಹರಿಯನ್ನು ನಿರ್ಗುಣ, ನಿರಾಕಾರ ಮುಂತಾಗಿ ತಿಳಿಯುವರು. ಅಪರತತ್ವವಾದ ಜಗತ್ತನ್ನು ಮಿಥ್ಯಾ ಎಂದು ತಿಳಿಯುವರು. ಕಾರಣ ಎಲ್ಲ ವಿಷಯದಲ್ಲಿ ವಿಪರೀತ ಬುದ್ಧಿಯೇ ಅವರದು.

ಸುಖಾತ್ಮಕವಾದ ತಮ್ಮ ಚೈತನ್ಯವನ್ನು ಸುಖರೂಪವೇ ಎಂದು ತಿಳಿಯುವವರು ದೇವತೆಗಳು. ದಾನವರು ಇವರಂತೆ ಅಲ್ಲ. ದುಃಖಾತ್ಮಕವಾದ ತಮ್ಮ ಸ್ವರೂಪವನ್ನು ಸುಖರೂಪವೇ ಎಂದು ತಿಳಿಯುವರು ಎಂದು ಷಾಡ್ಗುಣ್ಯದಲ್ಲಿ ಹೇಳಿದೆ. ॥೨೫॥

**ವೈಕೃತಾಸ್ತ್ರಯ ಏವೈತೇ ದೇವಸರ್ಗಶ್ಚ ಸತ್ತಮ ।**
**ವೈಕಾರಿಕಸ್ತು ಯಃ ಪ್ರೋಕ್ತಃ ಕೌಮಾರಸ್ತೂಭಯಾತ್ಮಕಃ ॥೨೬॥**

ಭೋ ಸತ್ತಮ=ಸಜ್ಜನಶ್ರೇಷ್ಠನಾದ ವಿದುರನೇ! ಏತೇ=ಸ್ಥಾವರ, ಪಶು, ಮಾನುಷ ಎಂಬ ಈ ತ್ರಯಃ ಸರ್ಗಃ=ಮೂರು ಸೃಷ್ಟಿಗಳು ವೈಕೃತಾಃ=ವೈಕೃತ ಎಂಬ ಹೆಸರಿನವು. ಯಃ=ಯಾವುದು ವೈಕಾರಿಕಃ=ವೈಕಾರಿಕ ಅಹಂಕಾರಕಾರ್ಯವಾದ ಇಂದ್ರಿಯಾಭಿಮಾನಿ ದೇವತೆಗಳ ಸರ್ಗಃ=ದೇಹಸಂಬಂದರೂಪ ಸೃಷ್ಟಿಯು ಪ್ರೋಕ್ತಃ=ಹಿಂದೆ ಪ್ರಾಕೃತವೆಂದು ಹೇಳಲ್ಪಟ್ಟಿತ್ತೋ ಸಃ ಏವ=ಅದೇ ಕೌಮಾರಃ=ದೇವತೆಗಳು ಬ್ರಹ್ಮಾಂಡದ ಒಳಗೆ ಉತ್ಪನ್ನವಾಮುದರಿಂದ ಉಭಯಾತ್ಮಕಃ= ಪ್ರಾಕೃತವೈಕೃತ ಎಂಬ ಹೆಸರಿನ ಹತ್ತನೆಯ ಸೃಷ್ಟಿಯು. ( ಕೌ=ಭೂಮಿಯಲ್ಲಿ ಮಾ=ನಿರ್ಮಾಣವನ್ನು ರಂತಿ=ಹೊಂದುವುದರಿಂದ ಕುಮಾರಾಃ ಎಂದರೆ ದೇವತೆಗಳು ಅವರ ಸಂಬಂಧಿ ಯಾದುದು ಕೌಮಾರವೆಂದು ತಿಳಿಯಬೇಕು.)

ಇಲ್ಲಿ ಕೌಮಾರ ಎಂಬುದಕ್ಕೆ ಸನತ್ಕುಮಾರಾದಿ ಸಂಬಂಧಿ ಎಂಬ ಅರ್ಥವನ್ನು ನಿವಾರಿಸಲು ಆದರ ಅರ್ಥವನ್ನು ಹೇಳುವ ಮತ್ತು ಉತ್ತರಾರ್ಧದ ಅರ್ಥವನ್ನೂ ಹೇಳುವ ಪ್ರಮಾಣ ಹೇಳುವರು –

**''ಕುಮಾರಂತೀತಿ ಕೌಮಾರೋ ದೇವಾನಾಮಂಡಜೋದ್ಭವಃ ।**
**ವೈಕಾರಿಕಾಣಾಂ ಜನನಾತ್ ಪ್ರಾಕೃತೋ ವೈಕೃತಶ್ಚ ಸಃ'' ॥**
**ವೈಕಾರಿಕೇಷ್ವೇವಾನ್ಯೇಷಾಂ ಈಷದ್ ಭೋಗಿತ್ವಹೇತುತಃ ।**
**ಉಭಾಯಾತ್ಮಕತ್ವಂ ತೇನೈವ ಪ್ರೋಚ್ಯಂತೇಽಷ್ಟಗಣಾಃ ಅಪಿ ॥ ಇತಿ ।**

ದೇವತೆಗಳ ಬ್ರಹ್ಮಾಂಡದ ಒಳಗೆ ಆಗುವ ಉತ್ಪತ್ತಿಯು ಕು=ಅಂದರೆ ಭೂಮಿಯಲ್ಲಿ ಮಾ=ಎಂದರೆ ನಿರ್ಮಾಣವನ್ನು ರಂತಿ=ಹೊಂದುವ ದೇವತೆಗಳ ಸಂಬಂಧಿ ಯಾದ್ದರಿಂದ ಕೌಮಾರವೆನಿಸುವುದು. ಅದೇ ವೈಕಾರಿಕರು ಮತ್ತೆ ಹುಟ್ಟುವುದರಿಂದ ಪ್ರಾಕೃತವೆಂತಲೂ, ವೈಕೃತವೆಂತಲೂ ಕರೆಯುವರು.

ಬ್ರಹ್ಮಾಂಡದಲ್ಲಿ ಜನಿಸಿದ ಇಂದ್ರಿಯಾಭಿಮಾನಿದೇವತೆಗಳಿಗೆ ಮಾತ್ರ ಉಭಾಯಾತ್ಮಕತ್ವ ಹೇಳಿದರೆ, ಮುಂದೆ ಹೇಳುವ ಪಿತೃ ಮುಂತಾದವರಿಗೆ ವೈಕಾರಿಕತ್ವವಿಲ್ಲದ್ದರಿಂದ ಉಭಯಾತ್ಮಕದೇವಪ್ರಬೇಧತ್ವ ಅನುಪಪನ್ನವಾಗುವುದು ಎಂಬುದಕ್ಕೆ ಉತ್ತರ 'ಅಷ್ಟಗಣಾಃ ಅಪಿ' ಎಂಬುದು.

ಅಷ್ಟಗಣಗಳಲ್ಲಿ ಸೇರಿದ ಪಿತೃ ಮುಂತಾದವರು ಯಜ್ಞದ ಹವಿಸ್ಸು ಮುಂತಾದವುಗಳ ಕಿಂಚಿತ್ ಭೋಗ ಮಾಡುವುದರಿಂದ ವೈಕಾರಿಕರಲ್ಲಿಯೂ ಸೇರುವರು ಆದ್ದರಿಂದ

ಉಭಯಾತ್ಮಕತೆ ಇದೆ. ಆದಕಾರಣ ಉಭಾಯಾತ್ಮಕದೇವಪ್ರಭೇದತ್ವವು ಉಪಪನ್ನ-ವಾಗುವುದು.

ದೇವಸರ್ಗ ಉಭಯಾತ್ಮಕವೆಂದಮೇಲೆ 'ವೈಕೃತಾಸ್ತ್ರಯ ಏವೈತೇ ದೇವಸರ್ಗಶ್ಚ' ಎಂದು ಪೂರ್ವಾರ್ಧದಲ್ಲಿ ಚ ಶಬ್ದದಿಂದ ದೇವಸರ್ಗಕ್ಕೆ ವೈಕೃತತ್ವ ಸಮುಚ್ಚಯ ಮಾಡಿದ್ದು ಹೇಗೆ ಎಂದರೆ ಹೇಳುವರು–

**ದೇವಸರ್ಗಶ್ಚ ಇತಿ ಚಕಾರಾರ್ಥಃ ಉಭಯಾತ್ಮಕ ಇತಿ । ವೈಕಾರಿಕಸ್ತು ದೇವಸರ್ಗಃ ಪ್ರಾಕೃತತ್ವೇನ ಉಕ್ತಃ ॥**

ದೇವಸರ್ಗಶ್ಚ ಎಂಬಲ್ಲಿ ಚಕಾರದ ಅರ್ಥವೇ ಉಭಯಾತ್ಮಕ ಎಂಬುದು ಎಂದು ಹೇಳಿದ್ದರಿಂದ ಚಕಾರವು ಪೂವಾರ್ಧದಲ್ಲಿ ಅನುಕ್ತವಾದ ಉಭಯಾತ್ಮಕಃ ಎಂಬುದಕ್ಕೆ ಸಮುಚ್ಚಾಯಕವೇ ಹೊರತು, ಉಕ್ತ ವೈಕೃತತ್ವ ಸಮುಚ್ಚಾಯಕವಲ್ಲವೆಂದು ಭಾವ. ವೈಕಾರಿಕರಾದ ಇಂದ್ರಾದಿದೇವತೆಗಳ ಪ್ರಾಕೃತವೆಂದು ಹೇಳಿದ ಸೃಷ್ಟಿಯು ಕೌಮಾರವೂ ಆದ್ದರಿಂದ ಪ್ರಾಕೃತ-ವೈಕೃತವೆನಿಸುವುದು. ॥೨೬॥

ದೇವತೆಗಳ ಸೃಷ್ಟಿಯ ವಿಭಾಗವನ್ನು ಹೇಳುವರು–

**ದೇವಸರ್ಗಶ್ಚಾಷ್ಟವಿಧೋ ವಿಬುಧಾಃ ಪಿತರೋಽಸುರಾಃ ।**
**ಗಂಧರ್ವಾಪ್ಸರಸಃ ಸಿದ್ಧಾ ಯಕ್ಷರಕ್ಷಾಂಸಿ ಚಾರಣಾಃ ॥೨೭॥**

**ಭೂತಪ್ರೇತಪಿಶಾಚಾಶ್ಚ ವಿದ್ಯಾಧ್ರಾಃ ಕಿನ್ನರಾದಯಃ ।**
**ದಶೈತೇ ವಿದುರಾಖ್ಯಾತಾಃ ಸರ್ಗಾಸ್ತೇ ವಿಶ್ವಸೃಕ್ಕೃತಾಃ ॥೨೮॥**

ವಿಬುಧಾಃ=ಎಲ್ಲ ದೇವತೆಗಳು, ಪಿತರಃ=ನೂರುಜನ ಪಿತೃಗಳು, ಅಸುರಾಃ= ಮುವತ್ತು ಜನ ಅಸುರರು, ಗಂದರ್ವಾಃ=ನೂರುಜನ ಗಂಧರ್ವರು, ಅಪ್ಸರಸಃ= ನೂರುಜನ ಅಪ್ಸರಾಸ್ತ್ರೀಯರು, ಯಕ್ಷರಕ್ಷಾಂಸಿ=ಎಪ್ಪತ್ತು ಜನ ಯಕ್ಷರಕ್ಷಸರು, ಚಾರಣಾಃ=ಮೂವತ್ತು ಜನ ಚಾರಣರು, ಸಿದ್ಧಾಃ=ನೂರು ಜನ ಸಿದ್ಧರು, ಭೂತ–ಪ್ರೇತ–ಪಿಶಾಚಾಶ್ಚ ವಿದ್ಯಾಧ್ರಾಃ ಕಿನ್ನರಾದಯಃ=ಭೂತರು, ಪ್ರೇತಗಳು, ಪಿಶಾಚರು, ವಿದ್ಯಾಧರರು, ಕಿನ್ನರರು ಎಲ್ಲ ಜಾತಿಯಲ್ಲಿಯೂ ಎಪ್ಪತ್ತು , ಹೀಗೆ ಒಟ್ಟು ಅಷ್ಟವಿಧಃ ದೇವಸರ್ಗಃ=ಎಂಟು ವಿಧವಾದುದು ದೇವ ಸೃಷ್ಟಿ ಎಂದಿದ್ದಾರೆ. ಹೇ ವಿದುರ=ಎಲೋ ವಿದುರನೇ ವಿಶಸೃಕ್‌ಕೃತಾಃ=ಬ್ರಹ್ಮನಿರ್ಮಿತಗಳಾದ ಸರ್ಗಾಃ= ಸೃಷ್ಟಿಗಳು ಏತೇ ದಶ ಕಥಿತಾಃ=ಪ್ರಾಕೃತ ಆರು, ವೈಕೃತ ಮೂರು, ಪ್ರಾಕೃತ–ವೈಕೃತ ಒಂದು ಹೀಗೆ ಹತ್ತು ಹೇಳಲ್ಪಟ್ಟಿತು.

ದೇವಸರ್ಗ ಎಂಟು ವಿಧ ಹೇಗೆಂದು ಹೇಳುವರು –

**“ಪ್ರೋಕ್ತಾ ಅಷ್ಟವಿಧಾ ದೇವಾ ವಿಬುಧಾಃ ಸರ್ವ ಏವ ತು ।**
**ಪಿತೃಣಾಂ ಶತಮೇವಾತ್ರ ಅಸುರಾಸ್ತ್ರಿಂಶದೇವ ಚ ॥**
**ಗಂಧರ್ವಾಪ್ಸರಸಾಂ ಚೈವ ದ್ವಿಶತಂ ಪರಿಕೀರ್ತಿತಂ ।**
**ಸಪ್ತತಿರ್ಯಕ್ಷರಕ್ಷಸ್ಸು ತ್ರಿಂಶಚ್ಚಾರಣಜಾತಿಷು ।**
**ಶತಂ ಸಿದ್ಧಾ ಸ್ತಥಾನ್ಯಾಸು ಸಪ್ತತಿಃ ಸರ್ವಜಾತಿಷು ।**

ಮೂಲದಲ್ಲಿ ವಿಬುಧಾ ಎಂದು ಆರಂಭ ಮಾಡಿ ಕಿನ್ನರವರೆಗೆ ಎಂಟಕ್ಕಿಂತಲೂ ಬಹಳ ಜನರನ್ನು ಹೇಳಿರುವರು. ಕಾರಣ ಎಂಟುವಿಧ ಹೇಗೆಂದು ಹೇಳಲು ಪ್ರವೃತ್ತವಾಗಿದೆ ತಾತ್ಪರ್ಯ.

೧) ಇಂದ್ರಾದಿ ಎಲ್ಲ ದೇವತೆಗಳು. (ಪಿತೃಗಳಂತೆ ಸಂಕೋಚವಿಲ್ಲ) ೨) ನೂರು ಜನ ಪಿತೃಗಳು. ೩) ೩೦ ಜನ ಅಸುರರು ೪) ಒಂದನೂರು ಜನ ಗಂಧರ್ವರು ಹಾಗೂ ನೂರು ಜನ ಅಪ್ಸರಾಸ್ತ್ರೀಯರು ಸೇರಿ ಒಟ್ಟು ಎರಡು ನೂರು ಜನ. ೫) ಯಕ್ಷರಾಕ್ಷಸರು ೭೦ ಜನ. ೬) ೩೦ ಜನ ಚಾರಣರು. ೭) ನೂರು ಜನ ಸಿದ್ಧರು. ೮) ಭೂತ, ಪ್ರೇತ,ಪಿಶಾಚ, ವಿದ್ಯಾಧರ, ಕಿನ್ನರ ಈ ಎಲ್ಲ ಜಾತಿಯಲ್ಲಿಯೂ ಸೇರಿ ೭೦ ಜನರು. ಹೀಗೆ ಎಂಟುವಿಧ ಎಂದು ತಿಳಿಯಬೇಕು.

ಪಿತೃ,ಅಸುರ ಮೊದಲಾದವರಲ್ಲಿ ಕೆಲವರಿಗೆ ಮಾತ್ರ ದೇವಸರ್ಗದಲ್ಲಿ ಗಣನೆ ಎಂಬುದಕ್ಕೆ ಪ್ರಮಾಣ ಹೇಳುವರು–

**ಊರ್ಧ್ವಸ್ರೋತಸ ಏತೇ ವೈ ಅನ್ಯೇಽರ್ವಾಕ್‌ಸ್ರೋತಸಃ ಸ್ಮೃತಾಃ ॥**
**ವೈಕಾರಿಕೇಷು ದೇವೇಷು ಏತೇ ವೈ ಮುಗ್ಧಭೋಗಿನಃ ।**
**ಅಭೋಗಿನಸ್ತದನ್ಯೇ ತು ದೇವಾ ಏತೇ ತತಃ ಸ್ಮೃತಾಃ ॥**

ಪಿತೃ,ಅಸುರ ಮೊದಲಾದವರಲ್ಲಿ ಹಿಂದೆ ಹೇಳಿದ ಕೆಲವರು ಮಾತ್ರ ಊರ್ಧ್ವಸ್ರೋತಸರೆಂದು ಸ್ಮೃತಿಯಲ್ಲಿ ಹೇಳಿದೆ. ಇವರಿಂದ ಭಿನ್ನರಾದವರು ಅರ್ವಾಕ್‌ಸ್ರೋತಸರೆಂದು ಹೇಳಿದೆ. ಕಾರಣ ಊರ್ಧ್ವಸ್ರೋತಸರೆನಿಸಿದ ದೇವತೆ-ಗಳಲ್ಲಿ ಉಳಿದವರನ್ನು ಸೇರಿಸಲಾಗುವುದಿಲ್ಲ. ಅಷ್ಟೇ ಅಲ್ಲದೆ ದೇವತೆಗಳಲ್ಲಿ ಸೇರಿಸಿದ ಪಿತ್ರಾದಿಗಳು ಮುಗ್ಧಭೋಗಿಗಳು. ಅಂದರೆ ಯಜ್ಞದ ಹವಿರ್ಭಾಗವನ್ನು ಸ್ವಲ್ಪ ಸ್ವೀಕರಿಸುವುದರಿಂದ ವೈಕಾರಿಕ ದೇವತೆಗಳಲ್ಲಿ ಸೇರಿರುವರು. ಈ ಕಾರಣದಿಂದಲೂ ದೇವತೆಗಳ ವಿಭಾಗದಲ್ಲಿ ಬರುವರು. ಉಳಿದ ಪಿತೃ, ಅಸುರಾದಿಗಳಿಗೆ ಸ್ವಲ್ಪವೂ ಹವಿರ್ಭೋಗವಿಲ್ಲ, ಕಾರಣ ದೇವ ಸರ್ಗದಲ್ಲಿ ಸೇರುವುದಿಲ್ಲ.

ಈ ರೀತಿ ಜಾತಿಯಿಂದ ವಿಭಾಗ ಹೇಳಿ ಬೇರೆ ವಿಭಾಜಕಗಳನ್ನು ಹೇಳುವರು–

**ಸರ್ವಜ್ಞಾಸ್ತೇ ಸಹಾರಾಧ್ಯಾ ಭಕ್ತಾಸ್ತೇಷ್ವಂತರೇವ ಚ ।**
**ನೃತ್ತಗಾನಾದಿಕರ್ತಾರೋ ವಾಹನಾದಿಕೃತಸ್ತಥಾ ॥**
**ಸಿದ್ಧಸಿದ್ಧೇತಿ ವಕ್ತಾರಃ ಚಾರಾಶ್ಚೈಷಾಂ ಕ್ವಚಿತ್ ಕ್ವಚಿತ್ ।**
**ಸೇವಾಕರಾ ಇತಿ ಹ್ಯೇತೈರ್ಭೇದೈರಷ್ಟವಿಧಾ ಮತಾಃ ॥**

೧. ಸರ್ವಜ್ಞತ್ವವುಳ್ಳವರು ವಿಬುಧರು

೨. ದೇವತೆಗಳ ಜೊತೆಗೆ ಪೂಜಿಸಲ್ಪಡುವವರು ಪಿತೃಗಳು. (ಶ್ರಾದ್ಧದಲ್ಲಿ ವಿಶ್ವೇದೇವತೆಗಳ ಪೂಜಾ ಉಂಟು.)

೩. ದೇವತೆಗಳಲ್ಲಿ ಅಂತರಂಗದಲ್ಲಿ ಭಕ್ತಿಯುಳ್ಳವರು ಅಸುರರು. ಬಲಿಯು ತನ್ನ ಭೃತ್ಯರ ಮನಃಸಮಾಧಾನಕ್ಕೆ ದೇವತೆಗಳ ದ್ವೇಷ ಮಾಡಿದರೂ ಒಳಗೆ ಭಕ್ತಿಮಾಡುತ್ತಿದ್ದ ಎಂಬುದು ಪ್ರಸಿದ್ಧ ಮಾತು.

೪. ನೃತ್ತಗಾನ ಮಾಡುವವರು ಗಂಧರ್ವ–ಅಪ್ಸರಸರು.

೫. ಎತ್ತಿಕೊಂಡು ಹೋಗುವವರು ಯಕ್ಷ-ರಾಕ್ಷಸರು.

೬. ಸಿದ್ಧಂ ಸಿದ್ಧಂ ಎನ್ನುವವರು ಸಿದ್ಧರು.

೭. ದೇವತೆಗಳ ಚಾರರು, ಆಗಾಗ ಸೇವಕರು ಚಾರಣರು.

೮. ಕಾರ್ಯವಿಶೇಷವಿದ್ದಾಗ ಸೇವಿಸುವವರು ಭೂತಾದಿ ಕಿಂನ್ನರಾಂತರು.

ಈ ರೀತಿಯಾಗಿಯೂ ಎಂಟು ವಿಧ ಎಂದು ಹೇಳಬಹುದು.

ಇನ್ನು ಸರ್ವಜ್ಞರು ವಿಬುಧರು ಎನ್ನುವದಾದರೆ ವಸಿಷ್ಠಾದಿಮುನಿಗಳೂ ಸರ್ವಜ್ಞರೇ ಆದ್ದರಿಂದ ಸರ್ವಜ್ಞತ್ವ ಇದು ದೇವತೆಗಳ ಲಕ್ಷಣ ಹೇಗಾದಿತು? ಎಂದರೆ ಈ ಸಂದರ್ಭದಲ್ಲಿ ಅವರೂ ವಿಬುಧರೆಂದು ಪರಿಗಣಿಸಲ್ಪಡುವರು ಎಂದು ಹೇಳುವರು–

**ಅನ್ಯೇ ಚ ಯೇ ತು ಸರ್ವಜ್ಞಾ ವಿಬುಧಾಸ್ತೇ ಪ್ರಕೀರ್ತಿತಾಃ ।**
**ತಥಾನ್ಯೇ ಕರ್ಮಭಿಸ್ತೈಸ್ತೈರಷ್ಟಭೇದಾಂತರಂ ಗತಾಃ'' ॥ ಇತಿ ತತ್ವವಿವೇಕೇ**

ಇಲ್ಲಿ ಹೇಳದಿರುವ ಬೇರೆ ಸರ್ವಜ್ಞರಾರಿದ್ದರೂ ಅವರೂ ಸಹ ವಿಬುಧರು ಎನಿಸುವರು. ಇದರಂತೆ ಅವರವರಿಗೆ ಹೇಳಿದ ಧರ್ಮ 'ತೈಃ ಸಹ ಆರಾಧ್ಯತ್ವ' (ದೇವತೆಗಳ ಜೊತೆ ಪೂಜೆಮಾಡಿಸಿಕೊಳ್ಳುವುದು) 'ನೃತ್ತಗಾನಾದಿಕರ್ತೃತ್ವ' (ನೃತ್ತಗಾನ ಮಾಡುವುದು) ಮುಂತಾದುವು ಇಲ್ಲಿ ಹೇಳಿದವರನ್ನು ಬಿಟ್ಟು

ಬೇರೆಯವರಲ್ಲಿ ಬಂದರೆ ಅವರನ್ನು ಪಿತೃ,ಗಂಧರ್ವ ಮೊದಲಾದವರೆಂದಾಗಿ ಪರಿಗಣಿಸಬೇಕು. ಕಾರಣ ನಾವು ಹೇಳಿದ ಸರ್ವಜ್ಞತ್ವ ಮೊದಲಾದ ಉಪಾಧಿಗಳು ಅತಿಪ್ರಸಕ್ತವಲ್ಲವೆಂದು ತಿಳಿಯಬೇಕು.

**ಯದಿ ದೇವಾದಯೋ ದೋಷಾಜ್ಜಾಯೇರನ್ ಮಾನುಷಾದಿಷು ।**
**ತಥಾಪಿ ದೇವಾ ವಿಜ್ಞೇಯಾ ಅಸುರಾದ್ಯಾಸ್ತಥಾ ಧ್ರುವಮ್ ॥ ಇತಿ ಚ ।**

ದೇವತೆಗಳು ಯಾವದೋ ದೋಷದಿಂದ ಮನುಷ್ಯರಾಗಿ ಜನಿಸಿದ ಮಾತ್ರಕ್ಕೆ ದೇವತ್ವ ಹೋಗುವುದಿಲ್ಲ ಕಾರಣ ಅವರು ದೇವತೆಗಳೇ. ಅಸುರರು ಮನುಷ್ಯರಾಗಿ ಹುಟ್ಟಿದರೂ ಅಸುರರೇ ಹೇಗೋ ಹಾಗೆಂದು ತಿಳಿಯಬೇಕು ಎಂದು ತಾತ್ಪರ್ಯದ ಭಾವ. ॥೨೭-೨೮॥

**ಅತಃ ಪರಂ ಪ್ರವಕ್ಷ್ಯಾಮಿ ವಂಶಾನ್ ಮನ್ವಂತರಾಣಿ ಚ ॥**

ಅತಃ ಪರಂ=ಇನ್ನು ಮುಂದೆ ಮನ್ವಂತರಾಣಿ=ಮನ್ವಂತರಗಳನ್ನು ವಂಶಾನ್= ಮನುಗಳ ವಂಶಗಳನ್ನು ಪ್ರವಕ್ಷ್ಯಾಮಿ=ಹೇಳುವೆನು. ॥

ಹೇಳಿದ ಸೃಷ್ಟಿಗಳಲ್ಲಿ ಬ್ರಹ್ಮಾದಿಗಳು ನಿಮಿತ್ತಮಾತ್ರರು ಶ್ರೀಹರಿಯೇ ಸ್ವತಂತ್ರವಾಗಿ ದೇವತೆಗಳನ್ನೂ ಸೃಷ್ಟಿಸಿ, ಅವರಲ್ಲಿ ನಿಯಾಮಕನಾಗಿ ತನ್ನನ್ನೂ ಸೃಷ್ಟಿಸಿಕೊಂಡನೆಂದು ಉಪಸಂಹಾರ ಮಾಡುವರು –

**ಏವಂ ರಜಃಪ್ಲುತಃ ಸ್ರಷ್ಟಾ ಕಲ್ಪಾದಿಷ್ವಾತ್ಮಭೂರ್ಹರಿಃ ।**
**ಸೃಜತ್ಯಮೋಘಸಂಕಲ್ಪ ಆತ್ಮೈವಾತ್ಮಾನಮಾತ್ಮನಾ ॥೨೯॥**

ರಜಃಪ್ಲುತಃ=ನಿಯಾಮಕನಾಗಿ ರಜೋಗುಣದಲ್ಲಿರುವ ಆದ್ದರಿಂದಲೇ ಸ್ರಷ್ಟಾ= ಸೃಷ್ಟಿಕರ್ತೃವಾದ ಆತ್ಮಭೂಃ=ತನ್ನ ಇಚ್ಛೆಯಿಂದ ಇರುವವನಾದ್ದರಿಂದ ಆತ್ಮಭೂ ಎನಿಸಿದ (ಆತ್ಮನಾ ಭವತಿ) ಹರಿಃ=ಶ್ರೀಹರಿಯು ಆತ್ಮಾ ಏವ=ತಾನೇ ಕರ್ತೃ, ಕರ್ಮ ಮೊದಲಾದ ಎಲ್ಲ ಕಾರಕಗಳಲ್ಲಿ ನಿಯಾಮಕನಾಗಿ ಸ್ವತಂತ್ರನಾಗಿದ್ದು ಆತ್ಮಾನಂ= ಜೀವರಾಶಿಯನ್ನು ದೇವ, ದಾನವಮೊದಲಾದ ಅನೇಕರೀತಿಯಿಂದ ಕಲ್ಪಾದಿಷು= ಕಲ್ಪಗಳ ಆದಿಕಾಲದಲ್ಲಿ ಸೃಜತಿ=ಸೃಷ್ಟಿಸುವನು. ಏವಂ=ಅದೇ ರೀತಿಯಾಗಿ ಆತ್ಮಾನಂ= ಪ್ರಕೃತಿಯನ್ನು ಬಹುಧಾ=ದೇವಾದಿದೇಹಭೇದದಿಂದ ಸೃಜತಿ=ಸೃಷ್ಟಿಸುವನು. ತಥಾ=ಹಾಗೆಯೇ ಆತ್ಮೈವ=ಬೇರೆ ಕರ್ತ್ರಾದಿಗಳನ್ನು ಅಪೇಕ್ಷಿಸದೆ ಆತ್ಮಾನಂ=ತನ್ನನ್ನು ಆತ್ಮನಾ=ತನ್ನ ಇಚ್ಛೆಯಿಂದಲೇ ಬಹುಧಾ=ಜೀವಾದಿನಿಯಾಮಕ ಬಹುರೂಪವುಳ್ಳ-ವನನ್ನಾಗಿ ಸೃಜತಿ=ಪ್ರಾದುರ್ಭಾವಗೊಳಿಸುವನು.

ಇಲ್ಲಿ 'ರಜಃಪ್ಲುತ' ಎಂಬುದಕ್ಕೆ ರಜೋಗುಣಬದ್ಧ ಎಂದರ್ಥವಾಗದಿರಲೆಂದು ಪ್ರಮಾಣದಿಂದ ತಾತ್ಪರ್ಯ ಹೇಳುವರು –

**''ಗುಣಾಪ್ಲುತೋ ಹರಿರ್ನಿತ್ಯಂ ಗುಣಾನಾಂ ಮಧ್ಯಗೋ ಯತಃ।**
**ಅನಹಂವೇದನಾತ್ತಸ್ಯ ಗುಣಾಸಂಸ್ಪರ್ಶ ಏವ ಚ'' ॥ ಇತಿ ಚ।**
**''ಸೃಷ್ಟ್ವಾ ದೇವಾದಿದೇಹಾನ್ ಸ ಆತ್ಮಾನಂ ಬಹುಧಾಽಕರೋತ್।**
**ತನ್ನಿಯಂತೃತಯಾಽಽತ್ಮಾನಂ ಪ್ರಕೃತಿಂ ದೇಹಭೇದತಃ'' । ಇತಿ ನಾರದೀಯೇ**
**''ಕರ್ತಾ ಚ ಕರಣಂ ಚೈವ ಕರ್ಮ ಚೈವ ಸ್ವಯಂ ಹರಿಃ।**
**ಆತ್ಮನೋ ಬಹುಧಾ ಭಾವೇ ಪ್ರಕೃತೇಸ್ತು ಸ್ವತಂತ್ರತಾ'' ॥ ಇತ್ಯಾಗ್ನೇಯೇ।**

ಗುಣಗಳಿಗೆ ಪ್ರೇರಕನಾಗಿ ಅವುಗಳ ಅಂತರ್ಗತನಾಗಿರುವನು ಆ ಕಾರಣದಿಂದ ಗುಣಾಪ್ಲುತ ಎನ್ನುವರು. ಅಭಿಮಾನ ಇಲ್ಲದಿರುವುದರಿಂದ ಗುಣಗಳ ಸಂಸ್ಪರ್ಶ, ಬಂಧ ಅವನಿಗಿಲ್ಲ. ಮೂಲದಲ್ಲಿ 'ಬಹುಧಾ' ಎಂದು ಅಧ್ಯಾಹಾರ ಮತ್ತು 'ಆತ್ಮಾನಂ' ಎಂಬ ದ್ವಿತೀಯಾಂತ ಆತ್ಮಶಬ್ದವು ಜೀವರಾಶಿಪರ, ಪ್ರಕೃತಿಪರ, ಸ್ವಾತ್ಮಪರ(ಭಗವತ್‌ಪರ) ಎಂದಿಟ್ಟುಕೊಂಡು ವ್ಯಾಖ್ಯಾನಿಸುವರು. ಸಃ=ಶ್ರೀಹರಿಯು ದೇವತೆ ಮೊದಲಾದವರ ದೇಹಗಳನ್ನು ಸೃಷ್ಟಿಸಿ ಅವುಗಳಿಗೆ ನಿಯಾಮಕನಾಗಿ ತನ್ನನ್ನು ಅನೇಕ ರೂಪ ಉಳ್ಳವನನ್ನಾಗಿ ಆವಿರ್ಭಾವಗೊಳಿಸಿದನು. ಪ್ರಕೃತಿಯನ್ನು ದೇಹಾದಿ ಅನೇಕ ರೀತಿಯಿಂದ ಸೃಷ್ಟಿಸಿದನು. ಎಂದು ನಾರದೀಯ ಪುರಾಣದಲ್ಲಿ ಇದೆ. ತಾನು ಅನೇಕ ರೂಪಗಳನ್ನು ಸ್ವೀಕರಿಸುವಾಗ ಕರ್ತಾ, ಕರಣ, ಕರ್ಮ ಎಲ್ಲವೂ ತಾನೇ ಆಗಿದ್ದಾನೆ. ಪ್ರಕೃತಿಯು ದೇಹ ಮೊದಲಾಗಿ ಅನೇಕವಾಗಿ ಆಗಬೇಕಾದರೆ ಶ್ರೀಹರಿಗೆ ಸ್ವತಂತ್ರತೆ ಮಾತ್ರ. ಅಂದರೆ ಪ್ರಕೃತಿಭಿನ್ನಕರ್ತೃ,ಕರಣಾದಿಗಳಿಗೆ ನಿಯಾಮಕನು ಹೊರತು ಇಲ್ಲಿಯಂತೆ ಅಲ್ಲಿ ಕರ್ತಾದಿಗಳಿಗೆ ಐಕ್ಯವಿಲ್ಲ ಎಂದು ಆಗ್ನೇಯ ಪುರಾಣದಲ್ಲಿದೆ. ॥೨೯॥

ಈ ಸೃಷ್ಟಿಯು ಮೊದಲಿನದ್ದೋ, ಅನಂತರದ್ದೋ? ಎಂದರೆ ಹೇಳುವರು–

**ಗುಣವ್ಯತ್ಯಯ ಏತಸ್ಮಿನ್ ಮಾಯಾವತ್ವಾದಧೀಶಿತುಃ ।**
**ನ ಪೌರ್ವಾಪರ್ಯಮಿಚ್ಛಂತಿ ನದ್ಯಾಂ ಭ್ರಾಮ್ಯದ್ಭ್ರಮೇರ್ಯಥಾ ॥**

ನದ್ಯಾಂ=ನದಿಯಲ್ಲಿ ಭ್ರಾಮ್ಯತ್=ಪುನಃ ಪುನಃ ಬರುವ ಭ್ರಮೇಃ=ಸುಳಿಗಳಿಗೆ ಯಥಾ=ಹೇಗೆ ಪೌರ್ವಾಪರ್ಯವಿಲ್ಲವೋ ಅದರಂತೆ, ಅಧೀಶಿತುಃ=ಸ್ವತಂತ್ರ ಕರ್ತೃವಾದ ಶ್ರೀಹರಿಯ, ಏತಸ್ಮಿನ್ ಗುಣವ್ಯತ್ಯಯೇ=ಈ ಸೃಷ್ಟಿವಿಷಯದಲ್ಲಿ ಪೌರ್ವಾಪರ್ಯಂ=ಮೊದಲುನಂತರಎಂಬುದನ್ನಾಗಲಿ, ಇಂದು ಇದು ಪ್ರಾರಂಭ–

ವಾಯಿತು ಎಂಬುದನ್ನು ಮಾಯಾವತ್ತ್ವಾತ್=ಸರ್ವದಾ ಪ್ರಕೃತ್ಯಾದಿ ಸರ್ವಕಾರಣ-ಗಳು ಇರುವುದರಿಂದ ನ ಇಚ್ಛಂತಿ=ಜ್ಞಾನಿಗಳು ಒಪ್ಪುವುದಿಲ್ಲ. ಅನಾದಿಯಿಂದ ಅನಂತಕಾಲದವರೆಗೆ ಇರುವುದು ಎಂದು ಭಾವ. ॥೩೦॥

ಈ ಕಲ್ಪದಲ್ಲಿಯೇ ಎಲ್ಲ ಬ್ರಹ್ಮಾದಿ ದೇವತೆಗಳನ್ನು ಹೇಳಿದ್ದರಿಂದ ಮುಂದಿನ ಕಲ್ಪಕ್ಕೆ ಸೃಜ್ಯದೇವತೆಗಳೇ ಇಲ್ಲ. ಆ ಆ ಪದದಲ್ಲಿರುವ ಬೇರೆಯವರು ಸೃಜ್ಯರು ಎಂದರೆ ಅವರಿಗೆ ಬೇರೆ ಬೇರೆ ಹೆಸರುಗಳು ರೂಪಗಳು ಬರುವುದರಿಂದ ಅವರನ್ನು ಪ್ರತಿಪಾದಿಸುವ ಅಪೌರುಷೇಯ ವೇದಕ್ಕೆ ಅಪ್ರಾಮಾಣ್ಯ ಬರಬೇಕಾದೀತು ಎಂದರೆ ಹೇಳುವರು –

**ದೇವಾಸುರಾದಯಃ ಕ್ಷತ್ತಃ ಕಲ್ಪೇಽಸ್ಮಿನ್ ಯೇ ಪ್ರಕೀರ್ತಿತಾಃ ।**
**ತ ಏವ ನಾಮರೂಪಾಭ್ಯಾಂ ಆಸನ್ ಮನ್ವಂತರಾಂತರೇ ॥೩೧॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂದೇ ಏಕಾದಶೋಽಧ್ಯಾಯಃ ॥*

ಹೇ ಕ್ಷತ್ತಃ=ವಿದುರನೇ ಅಸ್ಮಿನ್ ಕಲ್ಪೇ=ಈ ಕಲ್ಪದಲ್ಲಿ ದೇವಾಸುರಾದಯಃ= ದೇವತೆಗಳಾಗಲಿ ಅಸುರರಾಗಲಿ ಯೇ ಪ್ರಕೀರ್ತಿತಾಃ=ಯಾರು ಹೇಳಲ್ಪಟ್ಟಿರುವರೋ ತೇ ಏವ=ವೇದಾದಿಗಳಲ್ಲಿ ಯಾವ ರೂಪ ಯಾವ ನಾಮ ಹೇಳಿರುವರೋ ನಾಮ-ರೂಪಾಭ್ಯಾಂ=ಅದೇ ಹೆಸರು ಅದೇ ರೂಪವುಳ್ಳವರು ಮನ್ವಂತರಾಂತರೇ=ಬೇರೆ ಮನ್ವಂತರದಲ್ಲಿ ಆಸನ್=ಆಗುವುರು. ಹಿಂದೆಯೂ ಹೀಗೆ ಇದ್ದರು ಎಂದು ಸೂಚಿತ. ಅಥವಾ ಅಸ್ಮಿನ್=ದೈನಂದಿನ ಕಲ್ಪದಲ್ಲಿ ದೇವಾಸುರಾದಯಃ=ಬ್ರಹ್ಮಾದಿ-ಗಳು, ಬಲ್ಯಾದಿಗಳು, ಮರೀಚಿ ಮುಂತಾದ ಋಷಿಗಳು ಯೇ ಪ್ರಕೀರ್ತಿತಾಃ ತೇ ಏವ=ಅವರು ಮನ್ವಂತರಾಂತರೇ ಆಸನ್=ಬೇರೆ ಮನ್ವಂತರದಲ್ಲಿದ್ದರು. ॥೩೧॥

*ಇಲ್ಲಿಗೆ ಹನ್ನೊಂದನೆಯ ಅಧ್ಯಾಯ ಮುಗಿಯಿತು.*

# ಹನ್ನೊಂದನೆಯ ಅಧ್ಯಾಯದ ತಾತ್ಪರ್ಯ

ವಿದುರ – ಮೈತ್ರೇಯರೇ ಶ್ರೀಹರಿಯು ಅದೃಶ್ಯನಾದಮೇಲೆ ಸಮರ್ಥರಾದ ಬ್ರಹ್ಮದೇವರು ತಮ್ಮ ದೇಹದಿಂದಲೂ ಮನಸ್ಸಿಂದಲೂ ಎಷ್ಟು ಬಗೆಯ ಪ್ರಜೆಗಳನ್ನು ಸೃಷ್ಟಿಸಿದರು ? ಪೂಜ್ಯರೆ, ನಾನು ಕೇಳಿದ ಪ್ರಶ್ನೆಗಳಿಗೆಲ್ಲಾ ಕ್ರಮವಾಗಿ ಉತ್ತರ ಕೊಡಿರಿ. ನಮ್ಮ ಸಂಶಯಗಳನ್ನು ಪರಿಹರಿಸಿರಿ.

ಸೂತರು – ಶೌನಕರೆ, ಹೀಗೆ ವಿದುರರು ಮೈತ್ರೇಯರನ್ನು ಪ್ರಶ್ನಿಸಲು ಸಂತೋಷಗೊಂಡ ಆ ಋಷಿಗಳು ವಿದುರರ ಮನಸ್ಸಿನಲ್ಲಿದ್ದ ಎಲ್ಲಾ ಪ್ರಶ್ನೆಗಳಿಗೂ ಉತ್ತರ ಹೇಳತೊಡಗಿದರು.

ಮೈತ್ರೇಯರು – ವಿದುರ, ಶ್ರೀಹರಿಯು ಹೇಳಿದಂತೆ ಬ್ರಹ್ಮದೇವರು ಶ್ರೀಹರಿಯಲ್ಲಿ ಮನಸ್ಸಿಟ್ಟು ದೇವಮಾನದಿಂದ ಒಂದುನೂರು ವರ್ಷಕಾಲ ತಪಸ್ಸು ಮಾಡಿದರು. ಅವರ ಆಸನವಾಗಿದ್ದ ಆ ಕಮಲವೂ ಮತ್ತು ನೀರೂ ಪ್ರಳಯಕಾಲದ ಬಿರುಗಾಳಿಯಿಂದ ಕ್ಷೋಭೆಗೊಂಡುದನ್ನು ನೋಡಿ ಬ್ರಹ್ಮದೇವರು ತಮ್ಮ ತಪಸ್ಸಿನಿಂದ ಶ್ರೀಹರಿಯ ಉಪಾಸನೆಯಿಂದ ತಮ್ಮ ಜ್ಞಾನ ಬಲಗಳನ್ನು ಹೆಚ್ಚಿಸಿಕೊಂಡು ಆ ಗಾಳಿಯನ್ನೂ ನೀರನ್ನೂ ಹೀರಿಬಿಟ್ಟರು. ಆಕಾಶದಂತೆ ದೊಡ್ಡದಾಗಿದ್ದ ಆ ಕಮಲವನ್ನು ನೋಡಿ ಅದರಲ್ಲಿಯೇ ಲೋಕಗಳನ್ನು ಮತ್ತೆ ಸೃಷ್ಟಿಸುವೆನೆಂದು ಬಗೆದರು. ಶ್ರೀಹರಿಯಿಂದ ಪ್ರೇರಿತರಾದ ಅವರು ಕಮಲವನ್ನು ಹೊಕ್ಕು ಭೂಮಿ, ಅಂತರಿಕ್ಷ, ಸ್ವರ್ಗಗಳಾಗಿಯೂ, ಮತ್ತೆ ಅವುಗಳನ್ನು ಹದಿನಾಲ್ಕು ಲೋಕಗಳಾಗಿಯೂ ವಿಭಾಗಿಸಿದರು. ಸಂಕ್ಷೇಪವಾಗಿ ಪ್ರಪಂಚದ ವಿಭಾಗವು ಇಷ್ಟೇ. ಇದನ್ನು ಮಾಡುವ ಸಾಮರ್ಥ್ಯವನ್ನು ಬ್ರಹ್ಮದೇವರು ಶ್ರೀಹರಿಯ ಪ್ರೀತಿಗಾಗಿ ಮಾಡಿದ ಸತ್ಕರ್ಮಗಳ ಫಲವಾಗಿ ಪಡೆದರು.

ವಿದುರ – ಪೂಜ್ಯರೆ, ಅನಂತರೂಪನೂ, ಆಶ್ಚರ್ಯ ಮಹಿಮೆಯುಳ್ಳವನೂ ಆದ ಶ್ರೀಹರಿಯ ಕಾಲವೆಂಬ ರೂಪವನ್ನು ನೀವು ಹೇಳಿದಿರಲ್ಲವೇ ! ಅದನ್ನೇ ಸರಿಯಾಗಿ ವರ್ಣಿಸಿ ಹೇಳಿರಿ.

ಮೈತ್ರೇಯರು - ಕಾಲದ ಸ್ವರೂಪವನ್ನು ತಿಳಿಯುವ ಮೊದಲು ಇವುಗಳನ್ನು ತಿಳಿದುಕೊ. ಶ್ರೀಹರಿಯು ಪ್ರಳಯಕಾಲದಲ್ಲಿ ಪ್ರಾಕೃತಗುಣಗಳನ್ನು ನೋಡುತ್ತಿದ್ದನು. ಅವುಗಳ ವಿಕಾರವನ್ನು ವಿಶೇಷವಾಗಿ ಮಾಡಬಯಸಿದನು. ಅವನಿಗೆ ವಿಕಾರವಿಲ್ಲ, ಅವನು ಯಾವುದನ್ನೂ ಆಶ್ರಯಿಸಿಲ್ಲ. ಗುಣಪೂರ್ಣನಾದ ಆ ಶ್ರೀಹರಿಯು ಸತ್ವಗುಣದ ಸ್ವೀಕಾರಕ್ಕಾಗಿ ವಿಷ್ಣುವೆಂಬ ತನ್ನ ರೂಪವನ್ನೂ ರಜೋಗುಣದ ಸ್ವೀಕಾರಕ್ಕಾಗಿ ಬ್ರಹ್ಮನೆಂಬ ತನ್ನ ರೂಪವನ್ನೂ, ತಮೋಗುಣದ ಸ್ವೀಕಾರಕ್ಕಾಗಿ ರುದ್ರನೆಂಬ ತನ್ನ ರೂಪವನ್ನೂ ವ್ಯಕ್ತಗೊಳಿಸಿದನು. ಬ್ರಹ್ಮರೂಪದಿಂದ ಬ್ರಹ್ಮನಲ್ಲಿ ಪ್ರವೇಶಿಸಿ, ಜಗತ್ತನ್ನು ತಿಳಿಸಿ ರಕ್ಷಿಸಿದನು. ವಿಷ್ಣುವೆಂಬ ರೂಪದಿಂದ ಅವರವರ ಅಧಿಕಾರಗಳಲ್ಲಿ ವ್ಯವಸ್ಥೆಗೊಳಿಸಿ ಕಾಪಾಡಿದನು. ಸರ್ವಸಂಹಾರಕವಾದ ತನ್ನ ರುದ್ರರೂಪದಿಂದ ರುದ್ರನಲ್ಲಿ ಪ್ರವೇಶಿಸಿ ಸಂಹರಿಸಿದನು. ಈ ಜಗತ್ತು ಸೃಷ್ಟಿಕಾಲದಲ್ಲಿ ಪ್ರಯೋಜನಕಾರಿಯಾಗಿರುವಂತೆಯೇ ಹಿಂದೆ ಪ್ರಳಯಕಾಲದಲ್ಲಿಯೂ ಇತ್ತು. ಮುಂದೆಯೂ ಸಹ ಇರುವುದು. ಈ ಜಗತ್ತಿನ ಸೃಷ್ಟಿಯು ಪ್ರಾಕೃತ (ಬ್ರಹ್ಮಾಂಡದ ಹೊರಗಿನದು) ಮತ್ತು ವೈಕೃತ (ಬ್ರಹ್ಮಾಂಡದ ಒಳಗಿನದು) ಎಂದು ಎರಡುಬಗೆ. ಈ ಎರಡುಬಗೆಯ ಸೃಷ್ಟಿಯೂ ಪ್ರಾಕೃತದ ಆರು ವೈಕೃತದ ಮೂರು ಹೀಗೆ ಒಂಬತ್ತು ಪ್ರಕಾರವಾದುದು. ಆದ್ದರಿಂದ ಸತ್ಯವೇ ಹೊರತು ಸುಳ್ಳಲ್ಲ. ಈ ಸತ್ಯವಾದ ಜಗತ್ತಿನ ನಾಶವು ಕಾಲ, ದ್ರವ್ಯ ಮತ್ತು ಗುಣಗಳ ನಿಮಿತ್ತವಾಗಿ ಆಗುವುದರಿಂದ ಮೂರುಬಗೆಯಾದುದು. ಶ್ರೀಹರಿಯಿಂದ ಮೊದಲು ಸೃಷ್ಟವಾದುದು ಮಹತ್ತತ್ವ. ಇದಕ್ಕೆ ಗುಣವೈಷಮ್ಯವೆಂದು ಹೆಸರು. ಇದೇ ಬ್ರಹ್ಮದೇವರ ದೇಹ. ಎರಡನೆಯದು ಅಹಂಕಾರ ತತ್ವದ ಸೃಷ್ಟಿ ಇದೇ ರುದ್ರದೇವರ ದೇಹ, ಇದರಲ್ಲಿ ಆಕಾಶ ಮೊದಲಾದ ದ್ರವ್ಯಗಳೂ, ಜ್ಞಾನೇಂದ್ರಿಯಗಳೂ, ಕರ್ಮೇಂದ್ರಿಯಗಳೂ - ಇವುಗಳ ಅಭಿಮಾನಿ ದೇವತೆಗಳೂ ಸೃಷ್ಟಿಯಾದರು. ಆಕಾಶ ಮೊದಲಾದ ಭೂತಗಳ ಸೃಷ್ಟಿಯೇ ಮೂರನೆಯದು. ಈ ಭೂತಗಳು ಶಬ್ದ ಮೊದಲಾದ ತನ್ಮಾತ್ರೆಗಳ ಸ್ವರೂಪಗಳಾಗಿದ್ದರಿಂದ ಆ ಶಕ್ತಿಯಿಂದ ಕೂಡಿರುವುವು.

ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಸೃಷ್ಟಿಯು ನಾಲ್ಕನೆಯದು. ವೈಕಾರಿಕಾಹಂಕಾರದಿಂದ ಹುಟ್ಟಿದ ದೇವತೆಗಳ ಸೃಷ್ಟಿಯು ಐದನೆಯದು. ಆರನೆಯದು ಅವಿದ್ಯೆಯ ಸೃಷ್ಟಿ ಇದನ್ನು ಸೃಷ್ಟಿಮಾಡುವಾಗ ಬ್ರಹ್ಮದೇವರು ವಿಶೇಷವಾಗಿ ಶ್ರೀಹರಿಯಲ್ಲಿ ಮನಸ್ಸಿಟ್ಟು ಅದರಿಂದ ತಮ್ಮ ಬುದ್ಧಿಗೆ ಕೆಡುಕು ಆಗದಂತೆ ನೋಡಿಕೊಂಡರು. ಅವಿದ್ಯೆಯು ತಮಸ್ಸು ಮೋಹ, ಮಹಾಮೋಹ, ತಾಮಿಸ್ರ ಮತ್ತು ಅಂಧತಾಮಿಸ್ರ ಎಂದು ಐದು ಪರ್ವಗಳುಳ್ಳದ್ದು. ಆರುಬಗೆಯ ಸೃಷ್ಟಿಗಳೂ ಬ್ರಹ್ಮಾಂಡದ ಹೊರಗಿನವೆನಿಸಿ ಪ್ರಾಕೃತವೆನಿಸಿರುವವುವು. ಇನ್ನು ಮುಂದೆ ಹೇಳುವ

ಸೃಷ್ಟಿಗಳು ಬ್ರಹ್ಮಾಂಡದ ಒಳಗಣವೆನಿಸಿ ವೈಕೃತವೆಂದು ಕರೆಸಿಕೊಳ್ಳುವುವು. ಈ ಸೃಷ್ಟಿಗಳೆಲ್ಲವೂ ಸೃಷ್ಟಿಗಾಗಿ ರಜೋಗುಣವನ್ನು ಉಪಯೋಗಿಸಿಕೊಂಡ ಶ್ರೀಹರಿಯ ಲೀಲೆ. ಇದನ್ನು ಕೇಳುವುದರಿಂದ ಶ್ರೀಹರಿಯ ಅನುಗ್ರಹವಾಗಿ ಮೋಕ್ಷವು ದೊರೆಯುವುದು. ಶ್ರೀಹರಿಯ ಅನುಗ್ರಹವನ್ನು ಪಡೆದಿರುವ ಬ್ರಹ್ಮದೇವರಿಗೂ ಸೃಷ್ಟಿಕಾರ್ಯವು ಆಯಾಸಕಾರಿಯಲ್ಲ. ಸ್ಥಾವರಪ್ರಾಣಿಗಳ ಸೃಷ್ಟಿಯೇ ಏಳನೆಯದು. ಇವು ಮೇಲಕ್ಕೆ ಬೆಳೆಯುವುದರಿಂದಲೂ, ಪರೋಪಕಾರಕ್ಕಾಗಿಯೇ ಇರುವುದ-ರಿಂದಲೂ ಊರ್ಧ್ವಸ್ರೋತಗಳೆಂದು ಕರೆಸಿಕೊಳ್ಳುವುವು. ಹೆಮ್ಮರಗಳು, ಪೈರುಗಳು, ಬಳ್ಳಿಗಳು, ಬಿದುರು ಜಾತಿಯವು, ಕಡ್ಡಿಗಳನ್ನು ಹೂಳಿದರೆ ಅಂಟಿಕೊಳ್ಳುವ ಹಾಲುಗಿಡಗಳು ಮತ್ತು ಮರಗಳೆನಿಸುವ ಈ ಸ್ಥಾವರಗಳು ಮುಖ್ಯವಾಗಿ ಆರು ಬಗೆಯೆಂದು ಹೇಳುವರು. ಇವುಗಳಲ್ಲಿ ಅಜ್ಞಾನವೇ ಹೆಚ್ಚು. ಸ್ಪರ್ಶವಾದಾಗ ಒಳಗೇ ಜ್ಞಾನವನ್ನು ಹೊಂದಿರುವುವು. ಕಡಿದುಹಾಕಿದರೆ ಒಣಗಿಹೋಗುವುವು. ತಿರ್ಯಗ್ಜಂತುಗಳ ಸೃಷ್ಟಿಯು ಎಂಟನೆಯದು ಇದರಲ್ಲಿ ಮುಖ್ಯವಾಗಿ ಇಪ್ಪತ್ತೆಂಟು ವಿಧಗಳಿರುವುವು ಇವುಗಳಿಗೆ ವಿವೇಕವಿಲ್ಲ, ಶರೀರದಲ್ಲಿ ನಾನು ನನ್ನದು ಎಂಬ ಅಭಿಮಾನ ಹೆಚ್ಚು, ಇವುಗಳಿಗೆ ತಿಳಿದಿರುವುದು ಆಹಾರ ನಿದ್ರೆಗಳು ಮಾತ್ರ. ಇವುಗಳಿಗೆ ಶಾಸ್ತ್ರೀಯವಾದ ಜ್ಞಾನವಿಲ್ಲ, ಇವುಗಳನ್ನು ಭೂಚರ, ಜಲಚರ ಮತ್ತು ಖೇಚರ ಎಂದು ಸ್ಥೂಲವಾಗಿ ವಿಂಗಡಿಸುವರು. ಭೂಚರಗಳಲ್ಲಿ ಸೀಳುಗೊರಸಿನವು, ದುಂಡುಗೊರಸಿನವು ಮತ್ತು ಐದು ಉಗುರಿನವು ಎಂದು ವಿಭಾಗಿಸಿರುವರು. ಹಸು ಮೊದಲಾದುವು ಸೀಳು ಗೊರಸಿನವು. ಕತ್ತೆ ಮೊದಲಾದವು ದುಂಡುಗೊರಸಿನವು. ನಾಯಿ ಮೊದಲಾದುವು ಐದುಉಗುರಿನವು. ಆಮೆ ಜಲಚರವಾದ ಐದು ಗೊರಸಿನ ಪ್ರಾಣಿ. ಆದರೂ ಸ್ಥಳಚರವೂ ಅಹುದು. ಮೊಸಳೆ ಮುಂತಾದುವು ಜಲಚರಗಳು ಕಾಗೆ ಮೊದಲಾದವು ಹಕ್ಕಿಗಳು. ಅಧೋಗತಿಯನ್ನು ಹೊಂದುವರು ಅರ್ವಾಕ್ ಸ್ರೋತರೆಂದು ಕರೆಸಿಕೊಳ್ಳುವರು. ಇವರಲ್ಲಿ ನಿಯತವಾಗಿ ಅಧೋಗತಿ-ಯನ್ನು ಹೊಂದುವರು ಅಸುರರು. ಉತ್ತಮವಾದ ಗತಿಗೆ ಪ್ರಯತ್ನ ಪಡದೆ ಹೋದರೆ ಅಧೋಗತಿಯನ್ನು ಹೊಂದುವರು ಮನುಷ್ಯರು. ಮನುಷ್ಯರಲ್ಲಿ ರಜೋಗುಣ ಹೆಚ್ಚು, ಇವರು ಯಾವಾಗಲೂ ಏನಾದರೊಂದು ಕರ್ಮವನ್ನು ಮಾಡುತ್ತಲೇ ಇರುವರು. ಅನ್ಯಥಾ ಜ್ಞಾನಿಗಳೇ ಅಸುರರು. ದುಃಖವನ್ನು ಸುಖವೆಂದೇ ಬಗೆಯುವರು. ಮನುಷ್ಯರಲ್ಲಿ ಯಥಾರ್ಥ ಮತ್ತು ಅಯಥಾರ್ಥ ಎರಡು ಬಗೆಯ ಜ್ಞಾನವೂ ಉಂಟು. ದೇವತೆಗಳು ಯಥಾರ್ಥವಾದ ಜ್ಞಾನವನ್ನೇ ಹೊಂದಿರುವರು. ಇವರನ್ನು ಬ್ರಹ್ಮಾಂಡದ ಹೊರಗೆ ಮೊದಲು ಸೃಷ್ಟಿಸಿ ನಂತರ ಬ್ರಹ್ಮಾಂಡದ ಒಳಗೂ ಮತ್ತೆ ಸೃಷ್ಟಿಸುವುದರಿಂದ ಇವರ ಸೃಷ್ಟಿಯು ಪ್ರಾಕೃತ ಮತ್ತು

ವೈಕೃತ ಎರಡು ಬಗೆಯೂ ಆಹುದು. ದೇವತೆಗಳು, ಪಿತೃಗಳು, ಕೆಲವು ಅಸುರರು, ಗಂಧರ್ವರು, ಅಪ್ಸರರು, ಯಕ್ಷರು, ಕೆಲವು ರಾಕ್ಷಸರು, ಚಾರಣರು, ವಿದ್ಯಾಧರರು, ಕಿನ್ನರರು, ಈ ವಿಶೇಷಗಳನ್ನೊಳಗೊಂಡ ದೇವತೆಗಳು ಮುಖ್ಯವಾಗಿ ಎಂಟು ವಿಧವಾಗಿರುವರು. ಈ ದೇವತಾ ಸೃಷ್ಟಿಯನ್ನೂ ಸೇರಿಸಿಕೊಂಡರೆ ಬ್ರಹ್ಮದೇವರು ಮಾಡಿದ ಸೃಷ್ಟಿಯು ಹತ್ತು ಬಗೆಯಾಗುವುದು. ಮುಖ್ಯವಾಗಿ ಸೃಷ್ಟಿಕರ್ತನು ಶ್ರೀಹರಿಯೇ, ಅವನ ಅನುಗ್ರಹದಿಂದ ಸೃಷ್ಟಿಕರ್ತರೆನಿಸಿಕೊಳ್ಳುವರು ಬ್ರಹ್ಮದೇವರು. ಈ ಸೃಷ್ಟಿಯ ವಿವರವನ್ನು ತಿಳಿದು ಉಪಾಸಿಸುವ ಮುಕ್ತಿಯೋಗ್ಯ ಜೀವನು ಮತ್ತೆ ಹುಟ್ಟುವ ಅವಶ್ಯಕತೆಯಿಲ್ಲದೆ ಮುಕ್ತಿಯನ್ನು ಹೊಂದುವನು.

ವಿದುರ, ಇನ್ನು ಮುಂದೆ ಮನ್ವಂತರಗಳನ್ನೂ ಅವುಗಳಲ್ಲಿ ಹುಟ್ಟಿದ ಜೀವರ ವಂಶಗಳನ್ನೂ ವರ್ಣಿಸುತ್ತೇನೆ. ಶ್ರೀಹರಿಯು ಜೀವರ ಉದ್ಧಾರಕ್ಕಾಗಿ ಕಲ್ಪದ ಪ್ರಾರಂಭದಲ್ಲಿ ಹೀಗೆ ಸೃಷ್ಟಿಸಿದನು. ಅವನು ಇದಕ್ಕಾಗಿ ರಜೋಗುಣದ ಮಧ್ಯದಲ್ಲಿ-ದ್ದರೂ ಅವನಿಗದರ ಲೇಪವಿಲ್ಲ. ಅವನ ಇಚ್ಛೆಯು ವ್ಯರ್ಥವಾದುದಲ್ಲ. ಅವನನ್ನು ಸೃಷ್ಟಿಸಿದವರು ಮತ್ತೊಬ್ಬರಿಲ್ಲ. ಸ್ವತಂತ್ರನಾದ ಅವನು ಪ್ರಕೃತಿಯನ್ನು ಪರಿಣಾಮ-ಕಾರಣವಾಗಿ ಉಪಯೋಗಿಸಿಕೊಂಡು ದೇವತೆಗಳ ದೇಹಗಳನ್ನು ಸೃಷ್ಟಿಸಿ ಅವುಗಳ ನಿಯಾಮಕವಾದ ತನ್ನ ರೂಪಗಳನ್ನೂ ವ್ಯಕ್ತಗೊಳಿಸುವನು. ಈ ಸೃಷ್ಟಿ ಸ್ಥಿತಿ ಮತ್ತು ಲಯಕಾರ್ಯಗಳು ಒಂದರಮೇಲೊಂದು ಚಕ್ರಾಕಾರವಾಗಿ ಆಗುತ್ತಲೇ ಇರುವಂತೆ ಶ್ರೀಹರಿಯು ಇಚ್ಛೆಯುಳ್ಳವನಾಗಿರುವುದರಿಂದ ಇವುಗಳಲ್ಲಿ ಮೊದಲು ಅನಂತರ ಎಂಬ ವ್ಯತ್ಯಾಸವನ್ನು ಹೇಳುವಂತಿಲ್ಲ. ನದಿಯಲ್ಲಿ ತಿರುಗುತ್ತಿರುವ ಸುಳಿಗೆ ಪ್ರಾರಂಭವ್ಯಾವುದು? ಕೊನೆಯಾವುದು ? ಈ ಕಲ್ಪದಲ್ಲಿ ಯಾವ ಹೆಸರಿನ ಮತ್ತು ರೂಪದ ದೇವತೆಗಳೂ ಅಸುರರೂ ಸೃಷ್ಟರಾಗಿರುವರೋ ಮುಂದಿನ ಕಲ್ಪಗಳಲ್ಲಿಯೂ ಅದೇ ಹೆಸರಿನ ಮತ್ತು ಅದೇ ಆಕಾರದ ಇವರು ಸೃಷ್ಟರಾಗುವರು. ಆಯಾಯಾ ಅಧಿಕಾರಗಳಿಗೆ ಬರುವ ಜೀವರು ಮಾತ್ರ ಬೇರೆಯಾಗಿರುವರು. ಹಿಂದಿನ ಜೀವರನ್ನು ಉತ್ತಮ ಗತಿಯುಳ್ಳವರನ್ನಾಗಿ ಮಾಡಿದ ಶ್ರೀಹರಿಯು ಯೋಗ್ಯರಾದ ಬೇರೆ ಜೀವರನ್ನು ಆಯಾಯಾ ಅಧಿಕಾರಗಳಲ್ಲಿ ತೊಡಗಿಸುವನು.



## ಅಥ ದ್ವಾದಶೋಽಧ್ಯಾಯಃ

ಶ್ರೀಹರಿಯ ದೇಶತಃ ಆನಂತ್ಯ ಮತ್ತು ಕಾಲತಃ ಆನಂತ್ಯವನ್ನು ತಿಳಿಯುವುದು ಮೋಕ್ಷ ಸಾಧನವಾಗಿದೆ, ಕಾರಣ ಅದನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು. ವಿದುರನು ಕೇಳಿದ ಕಾಲಸ್ವರೂಪವನ್ನು ಹೇಳುವುದಕ್ಕಾಗಿ ಪರಮಾಣುಕಾಲವನ್ನು ತಿಳಿಸಲು ದೃಷ್ಟಾಂತವಾಗಿ ದ್ರವ್ಯಪರಮಾಣುವಿನ ಪರಿಮಾಣ ಹೇಳುವರು –

**ಮೈತ್ರೇಯ ಉವಾಚ**

**ಚರಮಸ್ತು ವಿಶೇಷಾಣಾಮನೇಕಾಂಶಾಯುತಸ್ತು ಯಃ ।**
**ಪರಮಾಣುಃ ಸ ವಿಜ್ಞೇಯೋ ನೃಣಾಮೈಕ್ಯಭ್ರಮೋ ಯತಃ ॥೧॥**

ವಿಶೇಷಾಣಾಂ=ಪಾರ್ಥಿವಾದಿಪದಾರ್ಥಗಳ ಚರಮಃ ವಿಶೇಷಃ=ಅಂದರೆ ಸಾಧನೆಯನ್ನು ಮಾಡಿ ದೇವಲೋಕದಲ್ಲಿರುವ ಮನುಷ್ಯರಿಗೆ ವಿಶೇಷಜ್ಞಾನ ಮಾಡಿಕೊಳ್ಳುವ ಶಕ್ತಿಯಿದ್ದರೂ ಇಷ್ಟುಅಂಶಗಳಿಂದ ಕೂಡಿದ ಅಂಶಿ ಎಂದು ತಿಳಿಯಲಾಗದ್ದರಿಂದ ಚರಮ ಎನಿಸುವ ವಸ್ತುತಃ ಅನೇಕಾಂಶಾಯುತಃ=ಅನೇಕ ಅವಯವಗಳಿಂದ ಚೆನ್ನಾಗಿ ಕೂಡಿದ್ದು ಯಃ=ಯಾವುದೋ ಸಃ=ಅದು ಪರಮಾಣು ಎಂದು ತಿಳಿಯಬೇಕು ನೃಣಾಂ=ಕಣಾದಾದಿಗಳಿಗೆ ಗೌತಮ ಮುಂತಾದವರಿಗೆ ಯತಃ=ಯಾವುದರಲ್ಲಿ ಐಕ್ಯಭ್ರಮಃ=ನಿರಂಶತ್ವಭ್ರಮವಿದೆಯೋ ಸಃ ಪರಮಾಣುಃ= ಅದು ಪರಮಾಣು ಎಂದು ತಿಳಿಯಬೇಕು ಹೀಗೆ ಎರಡು ಲಕ್ಷಣ ಹೇಳಿರುವರು. ಇದು ಬೆಳಕಿಂಡಿಯಲ್ಲಿ ಬರುವ ಸೂರ್ಯಪ್ರಕಾಶದಲ್ಲಿ ಹಾರಾಡುವ ಕಣಗಳ ಆರನೇ ಒಂದು ಭಾಗವಾದುದೇ ಎಂದು ತಿಳಿಯಬೇಕು.

ವೈಕೃತ ಎರಡು ಬಗೆಯೂ ಅಹುದು. ದೇವತೆಗಳು, ಪಿತೃಗಳು, ಕೆಲವು ಅಸುರರು, ಗಂಧರ್ವರು, ಅಪ್ಸರರು, ಯಕ್ಷರು, ಕೆಲವು ರಾಕ್ಷಸರು, ಚಾರಣರು, ವಿದ್ಯಾಧರರು, ಕಿನ್ನರರು, ಈ ವಿಶೇಷಗಳನ್ನೊಳಗೊಂಡ ದೇವತೆಗಳು ಮುಖ್ಯವಾಗಿ ಎಂಟು ವಿಧವಾಗಿರುವರು. ಈ ದೇವತಾ ಸೃಷ್ಟಿಯನ್ನೂ ಸೇರಿಸಿಕೊಂಡರೆ ಬ್ರಹ್ಮದೇವರು ಮಾಡಿದ ಸೃಷ್ಟಿಯು ಹತ್ತು ಬಗೆಯಾಗುವುದು. ಮುಖ್ಯವಾಗಿ ಸೃಷ್ಟಿಕರ್ತನು ಶ್ರೀಹರಿಯೇ, ಅವನ ಅನುಗ್ರಹದಿಂದ ಸೃಷ್ಟಿಕರ್ತರೆನಿಸಿಕೊಳ್ಳುವರು ಬ್ರಹ್ಮದೇವರು. ಈ ಸೃಷ್ಟಿಯ ವಿವರವನ್ನು ತಿಳಿದು ಉಪಾಸಿಸುವ ಮುಕ್ತಿಯೋಗ್ಯ ಜೀವನು ಮತ್ತೆ ಹುಟ್ಟುವ ಅವಶ್ಯಕತೆಯಿಲ್ಲದೆ ಮುಕ್ತಿಯನ್ನು ಹೊಂದುವನು.

ವಿದುರ, ಇನ್ನು ಮುಂದೆ ಮನ್ವಂತರಗಳನ್ನೂ ಅವುಗಳಲ್ಲಿ ಹುಟ್ಟಿದ ಜೀವರ ವಂಶಗಳನ್ನೂ ವರ್ಣಿಸುತ್ತೇನೆ. ಶ್ರೀಹರಿಯು ಜೀವರ ಉದ್ಧಾರಕ್ಕಾಗಿ ಕಲ್ಪದ ಪ್ರಾರಂಭದಲ್ಲಿ ಹೀಗೆ ಸೃಷ್ಟಿಸಿದನು. ಅವನು ಇದಕ್ಕಾಗಿ ರಜೋಗುಣದ ಮಧ್ಯದಲ್ಲಿ-ದ್ದರೂ ಅವನಿಗದರ ಲೇಪವಿಲ್ಲ. ಅವನ ಇಚ್ಛೆಯು ವ್ಯರ್ಥವಾದುದಲ್ಲ. ಅವನನ್ನು ಸೃಷ್ಟಿಸಿದವರು ಮತ್ತೊಬ್ಬರಿಲ್ಲ. ಸ್ವತಂತ್ರನಾದ ಅವನು ಪ್ರಕೃತಿಯನ್ನು ಪರಿಣಾಮ-ಕಾರಣವಾಗಿ ಉಪಯೋಗಿಸಿಕೊಂಡು ದೇವತೆಗಳ ದೇಹಗಳನ್ನು ಸೃಷ್ಟಿಸಿ ಅವುಗಳ ನಿಯಾಮಕವಾದ ತನ್ನ ರೂಪಗಳನ್ನೂ ವ್ಯಕ್ತಗೊಳಿಸುವನು. ಈ ಸೃಷ್ಟಿ ಸ್ಥಿತಿ ಮತ್ತು ಲಯಕಾರ್ಯಗಳು ಒಂದರಮೇಲೊಂದು ಚಕ್ರಾಕಾರವಾಗಿ ಆಗುತ್ತಲೇ ಇರುವಂತೆ ಶ್ರೀಹರಿಯು ಇಚ್ಛೆಯುಳ್ಳವನಾಗಿರುವುದರಿಂದ ಇವುಗಳಲ್ಲಿ ಮೊದಲು ಅನಂತರ ಎಂಬ ವ್ಯತ್ಯಾಸವನ್ನು ಹೇಳುವಂತಿಲ್ಲ. ನದಿಯಲ್ಲಿ ತಿರುಗುತ್ತಿರುವ ಸುಳಿಗೆ ಪ್ರಾರಂಭವ್ಯಾವುದು? ಕೊನೆಯಾವುದು ? ಈ ಕಲ್ಪದಲ್ಲಿ ಯಾವ ಹೆಸರಿನ ಮತ್ತು ರೂಪದ ದೇವತೆಗಳೂ ಅಸುರರೂ ಸೃಷ್ಟರಾಗಿರುವರೋ ಮುಂದಿನ ಕಲ್ಪಗಳಲ್ಲಿಯೂ ಅದೇ ಹೆಸರಿನ ಮತ್ತು ಅದೇ ಆಕಾರದ ಇವರು ಸೃಷ್ಟರಾಗುವರು. ಆಯಾಯಾ ಅಧಿಕಾರಗಳಿಗೆ ಬರುವ ಜೀವರು ಮಾತ್ರ ಬೇರೆಯಾಗಿರುವರು. ಹಿಂದಿನ ಜೀವರನ್ನು ಉತ್ತಮ ಗತಿಯುಳ್ಳವರನ್ನಾಗಿ ಮಾಡಿದ ಶ್ರೀಹರಿಯು ಯೋಗ್ಯರಾದ ಬೇರೆ ಜೀವರನ್ನು ಆಯಾಯಾ ಅಧಿಕಾರಗಳಲ್ಲಿ ತೊಡಗಿಸುವನು.



## ಅಥ ದ್ವಾದಶೋಽಧ್ಯಾಯಃ

ಶ್ರೀಹರಿಯ ದೇಶತಃ ಆನಂತ್ಯ ಮತ್ತು ಕಾಲತಃ ಆನಂತ್ಯವನ್ನು ತಿಳಿಯುವುದು ಮೋಕ್ಷ ಸಾಧನವಾಗಿದೆ, ಕಾರಣ ಅದನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು. ವಿದುರನು ಕೇಳಿದ ಕಾಲಸ್ವರೂಪವನ್ನು ಹೇಳುವುದಕ್ಕಾಗಿ ಪರಮಾಣುಕಾಲವನ್ನು ತಿಳಿಸಲು ದೃಷ್ಟಾಂತವಾಗಿ ದ್ರವ್ಯಪರಮಾಣುವಿನ ಪರಿಮಾಣ ಹೇಳುವರು –

**ಮೈತ್ರೇಯ ಉವಾಚ**

**ಚರಮಸ್ತು ವಿಶೇಷಾಣಾಮನೇಕಾಂಶಾಯುತಸ್ತು ಯಃ ।**
**ಪರಮಾಣುಃ ಸ ವಿಜ್ಞೇಯೋ ನೃಣಾಮೈಕ್ಯಭ್ರಮೋ ಯತಃ ॥೧॥**

ವಿಶೇಷಾಣಾಂ=ಪಾರ್ಥಿವಾದಿಪದಾರ್ಥಗಳ ಚರಮಃ ವಿಶೇಷಃ=ಅಂದರೆ ಸಾಧನೆಯನ್ನು ಮಾಡಿ ದೇವಲೋಕದಲ್ಲಿರುವ ಮನುಷ್ಯರಿಗೆ ವಿಶೇಷಜ್ಞಾನ ಮಾಡಿಕೊಳ್ಳುವ ಶಕ್ತಿಯಿದ್ದರೂ ಇಷ್ಟುಅಂಶಗಳಿಂದ ಕೂಡಿದ ಅಂಶಿ ಎಂದು ತಿಳಿಯಲಾಗದ್ದರಿಂದ ಚರಮ ಎನಿಸುವ ವಸ್ತುತಃ ಅನೇಕಾಂಶಾಯುತಃ=ಅನೇಕ ಅವಯವಗಳಿಂದ ಚೆನ್ನಾಗಿ ಕೂಡಿದ್ದು ಯಃ=ಯಾವುದೋ ಸಃ=ಅದು ಪರಮಾಣು ಎಂದು ತಿಳಿಯಬೇಕು ನೃಣಾಂ=ಕಣಾದಾದಿಗಳಿಗೆ ಗೌತಮ ಮುಂತಾದವರಿಗೆ ಯತಃ=ಯಾವುದರಲ್ಲಿ ಐಕ್ಯಭ್ರಮಃ=ನಿರಂಶತ್ವಭ್ರಮವಿದೆಯೋ ಸಃ ಪರಮಾಣುಃ= ಅದು ಪರಮಾಣು ಎಂದು ತಿಳಿಯಬೇಕು ಹೀಗೆ ಎರಡು ಲಕ್ಷಣ ಹೇಳಿರುವರು. ಇದು ಬೆಳಕಿಂಡಿಯಲ್ಲಿ ಬರುವ ಸೂರ್ಯಪ್ರಕಾಶದಲ್ಲಿ ಹಾರಾಡುವ ಕಣಗಳ ಆರನೇ ಒಂದು ಭಾಗವಾದುದೇ ಎಂದು ತಿಳಿಯಬೇಕು.

ಈ ಶ್ಲೋಕಕ್ಕೆ ಪೂರ್ವಪ್ರಕೃತ ವಿಷಯದಿಂದ ಸಂಗತಿ ತಿಳಿಯುವುದಿಲ್ಲ ಕಾರಣ ಸಂಗತಿ ಹೇಳುವರು ಆಚಾರ್ಯರು –

**ಕಾಲಪರಿಮಾಣಂ ದರ್ಶಯಿತುಂ ದ್ರವ್ಯಪರಿಮಾಣಂ ದೃಷ್ಟಾಂತತ್ವೇನ ದರ್ಶಯತಿ ಚರಮ ಇತ್ಯಾದಿ ಶ್ಲೋಕದ್ವಯೇನ ।**

ಹಿಂದೆ ಪ್ರತಿಜ್ಞೆ ಮಾಡಿದ ಮನ್ವಂತರ ಮುಂತಾದ ಕಾಲಗಳನ್ನು ತಿಳಿಸಲು ಪರಮಾಣು ಮುಂತಾದ ಕಾಲಪರಿಮಾಣವನ್ನು ತಿಳಿಸಲು ದೃಷ್ಟಾಂತವಾಗಿ ದ್ರವ್ಯಪರಿಮಾಣವನ್ನು ಚರಮಮುಂತಾದ ಎರಡು ಶ್ಲೋಕದಿಂದ ಹೇಳುವರು. ಅದರಲ್ಲಿ ಕಾಲಪರಿಮಾಣವನ್ನು ತಿಳಿಸಲು ದೃಷ್ಟಾಂತವಾಗಿ ದ್ರವ್ಯಪರಿಮಾಣದ ಲಕ್ಷಣವನ್ನು ಹೇಳುವರು (ಪರಮಾಣುವಿನ ಪರಿಮಾಣ ಹೇಳುವರು) ಚರಮಸ್ತು ಎಂಬ ಮೊದಲನೆ ಶ್ಲೋಕದಿಂದ ಎಂದು ಭಾವ.

ಈ ಶ್ಲೋಕದಲ್ಲಿ ವಿಶೇಷಾಣಾಂ ಚರಮಃ ಎಂದರೆ ಪಾರ್ಥಿವಕಾರ್ಯದ ಕೊನೆಯದಾದ ವಿಶೇಷ ಎಂದರೆ ಅಂತ್ಯಾವಯವಿ ಘಟಾದಿಗಳೇನಿವೆಯೋ ಸಃ ಪರಮಾಣುಃ ಅದೇ ಪರಮಾಣು ಎಂದು ಅನ್ಯಥಾಜ್ಞಾನ ಬರುವುದು ಕಾರಣ ಶ್ಲೋಕದ ತಾತ್ಪರ್ಯವನ್ನು ಪ್ರಮಾಣದಿಂದಲೇ ಹೇಳುವರು –

**ಮನುಷ್ಯಾ ದೇವಲೋಕೇಽಪಿ ವಿಶೇಷೇಣೈವ ದರ್ಶನೇ ।**
**ಅಂಶಾಂಶಿತ್ವವಿಶೇಷಂ ತು ಯಸ್ಯ ದ್ರಷ್ಟುಂ ನ ಶಕ್ನುಯುಃ ॥**
**ಚರಮೋ ವಿಶೇಷ ಇತಿ ತಂ ಮುನಯೋ ಬ್ರೂಯುರಂಜಸಾ ।**
**ಪರಮಾಣುಃ ಸ ವಿಜ್ಞೇಯಃ ಕಣಾದಾದ್ಯಾಃ ನಿರಂಶಿನಂ ॥**
**ಅನಂತಾಂಶಯುತತ್ವೇಽಪಿ ಯಂ ಬ್ರೂಯುರ್ಭ್ರಾಂತಿದರ್ಶನಾತ್ ।**
**ತತೋಽಪಿ ಪರಮಾಣುತ್ವಂ ತದಂಶಾನಾಂತು ಯದ್ಯಪಿ ।**
**ಅನಂತತ್ವಾದ್ವಿವೇಕಾರ್ಥಮಸ್ಯೋಕ್ತಾ ಪರಮಾಣುತಾ'' ॥ ಇತಿ ತತ್ವವಿವೇಕೇ**
**ಅನೇಕಾಂಶೈಃ ಆ ಸಮಂತಾತ್ ಯುತಃ ।**

ಯಜ್ಞಾದಿಗಳನ್ನು ಮಾಡಿ ದೇವಲೋಕವನ್ನು ಪಡೆದು ಅಲ್ಲಿ ನೆಲೆಸಿರುವ ಮನುಷ್ಯರು ವಿಶೇಷಜ್ಞಾನಸಂಪಾದಕವಾದ ದೇವಲೋಕದಲ್ಲಿ ವಸ್ತುವಿನಲ್ಲಿರುವ ಎಲ್ಲ ಧರ್ಮಗಳನ್ನು ನೋಡಲು ಸಮರ್ಥರಾದರೂ ಯಾವ ವಸ್ತುವಿನ (ಈ ಅಂಶಗಳಿಂದ ಇದು ಅಂಶಿಯಾಗಿದೆ ಎಂಬ) ವಿಶೇಷವನ್ನು ಅಲ್ಲಿ ಇದ್ದರೂ ನೋಡಲು ಸಮರ್ಥರಾಗುವುದಿಲ್ಲವೋ ಅದನ್ನು ಚರಮವಿಶೇಷವೆಂದು ಮುನಿಗಳು ಚೆನ್ನಾಗಿ ಹೇಳುವರೋ ಅದು ಪರಮಾಣು ಎಂದು ತಿಳಿಯಬೇಕು. ಇದು ಒಂದು ಪರಮಾಣು ಲಕ್ಷಣ, ಇನ್ನೊಂದು ಲಕ್ಷಣ ಹೇಳಲು ನೃಣಾಂ

ಐಕ್ಯಭ್ರಮೋ ಯತಃ ಎಂದಿರುವರು. ಕಣಾದರು ಗೌತಮ ಮೊದಲಾದವರು ಯಾವುದನ್ನು ಅನಂತ ಅಂಶಗಳಿಂದ ಕೂಡಿದ್ದರೂ ಭ್ರಾಂತಿರೂಪಜ್ಞಾನದಿಂದ ಅಂಶರಹಿತವಾದುದೆಂದು ಹೇಳುವರೋ ಅದನ್ನು ಪರಮಾಣು ಎಂದು ತಿಳಿಯಬೇಕು. ಯತಃ ಪರಂ ಅಣುರ್ನಾಸ್ತಿ ಸಃ ಪರಮಾಣುಃ ಎಂದು ಕಣಾದರು ಹೇಳುವ ಪರಮಾಣು ಲಕ್ಷಣದ ಪ್ರಕಾರ ಅದಕ್ಕಿಂತ ಚಿಕ್ಕ ವಸ್ತುವೇ ಇಲ್ಲ ಎಂಬುದು. ಅದು ಸರಿಯಲ್ಲ. ಯದ್ಯಪಿ ಈಗ ನಾವು ಪರಮಾಣು ಎಂದು ಯಾವುದನ್ನು ಗುರುತಿಸಿದೆವೋ ಅದರ ಅಂಶಗಳಿಗೆ (ಅವಯವಗಳಿಗೆ) ಇದಕ್ಕಿಂತ ಅಣುತ್ವ ಇದ್ದೇ ಇದೆ. ಆದರೆ ಆ ಅಂಶಗಳು ಅನಂತವಾದುದರಿಂದ ಅವುಗಳನ್ನು ಹೇಳದೆ ಪರಮಾಣು ಎಂಬ ಕಾಲಪರಿಮಾಣದ ಜ್ಞಾನ ಮಾಡಿಕೊಡಲು ಇದಕ್ಕೇ ಪರಮಾಣುತೆ ವಿವಕ್ಷಿತವಾಗಿದೆ ಎಂದು ತತ್ವವಿವೇಕದಲ್ಲಿದೆ. ಅನೇಕಾಂಶಯುತ ಎಂಬಲ್ಲಿ ಅನೇಕಾಂಶೈಃ ಯುತಃ ಎಂದು ವ್ಯಾಖ್ಯಾನಿಸಿದರೆ ಪ್ರಮಾಣದಲ್ಲಿ ಹೇಳಿದ ಅನಂತಾಂಶಯುತತ್ವರೂಪವಾದ ತಾತ್ಪರ್ಯ ಇದರದಾಗಲಾರದು, ಕಾರಣ ತಾತ್ಪರ್ಯಾನುಕೂಲವಾಗುವಂತೆ ವಿಗ್ರಹತೋರಿಸಿರುವರು- ಅನೇಕಾಂಶೈಃ ಆಯುತಃ ಎಂದು. ಅನೇಕಾಂಶೈಃ ಆ ಸಮಂತಾತ್=ಚೆನ್ನಾಗಿ ಯುತ=ಕೂಡಿರುವ ಎಂದು ವ್ಯಾಖ್ಯಾನ ಅದರಿಂದ ಅನಂತಾಂಶಯುತ ಎಂಬರ್ಥ ದೊರೆಯುವುದು ॥೧॥

ಪರಮಮಹಾಕಾಲ ಪರಿಮಾಣವನ್ನು ತಿಳಿಸಲು ದೃಷ್ಟಾಂತವಾಗಿ ಪರಮಮಹಾ-ಪರಿಮಾಣದ್ರವ್ಯವನ್ನು ತಿಳಿಸುವರು –

**ಸತ ಏವ ಪದಾರ್ಥಸ್ಯ ಸ್ವರೂಪಾವಸ್ಥಿತಸ್ಯ ಯತ್ ।**
**ಕೈವಲ್ಯಂ ಪರಮಮಹಾನವಿಶೇಷೋ ನಿರಂತರಃ ॥೨॥**

ಸತಃ=ನಿರ್ದೋಷನಾದ ಭಗವಂತನ ಯತ್=ಯಾವ ರೂಪವಿಶೇಷ-ವಿದೆಯೋ ಸಃ ಪರಮಮಹಾನ್=ಅದೇ ಪರಮಮಹಾಪರಿಮಾಣವುಳ್ಳ ದ್ರವ್ಯವು. ಇಲ್ಲಿ ಭಗವಂತನಿಗೆ ಐದು ವಿಶೇಷಣಗಳು - ೧) ಪದಾರ್ಥಸ್ಯ=ಸತ್ಪದದ ಮುಖ್ಯ ಅಭಿಧೇಯವಾದ ೨) ಸ್ವರೂಪಾವಸ್ಥಿತಸ್ಯ=ತನ್ನನ್ನು ಬಿಟ್ಟು ತನ್ನಿಂದ ಭಿನ್ನವಾದ ಮಹದಾದಿಗಳಲ್ಲಿ ಇಲ್ಲದಿರುವ ೩) ಕೈವಲ್ಯಂ ಕೇವಲಃ=ಅಖಂಡಃ ಜಗದನಾವರಕ-ವಾದ ೪)ಅವಿಶೇಷಃ=ಜಗದನಾವರಕವಾದ ಪರಿಚ್ಛಿನ್ನಪರಿಮಾಣವುಳ್ಳದೆಂದು ಕಾಣುವ ಪರಮಪುರುಷಾದಿ ರೂಪಗಳಿಂದ ಭಿನ್ನವಾದ ನಿರಂತರಃ=ಏಕದೇಶಭಿನ್ನ-ವಾದ ಸತಃ=ನಿರ್ದೋಷನಾದ ಶ್ರೀಹರಿಯ ಯತ್ ಯಃ=ಯಾವ ಭಾವಃ ಸಃ ಏವ=ರೂಪವಿಶೇಷವೇ ಪರಮಮಹಾನ್‌ಭವತೀತಿ ಭಾವಃ=ರೂಪವಿಶೇಷವೆಂದರ್ಥ ಅಂದರೆ ಯೋಗಿಗಳು ಪರಮಮಹತ್ ಪರಿಮಾಣವುಳ್ಳದ್ದೆಂದು ನೋಡುವ

ಶೂನ್ಯನಾಮಕ ನಾರಾಯಣನೇ ಪರಮಮಹಾನ್ ದೇಶಕಾಲಗುಣಾನಂತ್ಯವುಳ್ಳವನು ಎಂದರ್ಥ.

ಇಲ್ಲಿ ಸತಃ=ಸತ್‌ಶಬ್ದ ಪ್ರತಿಪಾದ್ಯವಾದುದು ಪರಮಮಹಾನ್ ಎಂದು ವ್ಯಾಖ್ಯಾನಿಸಿದರೆ 'ಏವ' ಎಂದು ಹೇಳಿದ ಅವಧಾರಣ ಅನುಪಪನ್ನವಾಗುವುದು. ಕಾಲಾದಿಗಳಿಗೂ ಪರಮಮಹತ್ವವನ್ನು ಮುಂದೆ ಹೇಳುವರು ಮತ್ತು ಸತ್‌ಶಬ್ದ ಪ್ರತಿಪಾದ್ಯವಾದವೂ ಎಲ್ಲವೂ ಪರಮಮಹಾನ್ ಆಗಬೇಕಾದೀತು, ಕಾರಣ ಇಲ್ಲಿ ವಿವಕ್ಷಿತವಾದ ಪರಮಮಹತ್ವವನ್ನು ತಿಳಿಸುತ್ತ ಅದಕ್ಕೆ ಆಶ್ರಯವಾದ ಸಚ್ಛಬ್ದವಾಚ್ಯವಾವುದೆಂದು ತಿಳಿಸುವರು –

**ಕಾಲತೋ ದೇಶತೋ ಗುಣತಶ್ಚ ಪರಮಮಹತ್ವಂ ಸತಃ ಪರಬ್ರಹ್ಮಣ ಏವ ।**

ಕಾಲತಃ ದೇಶತಃ ಗುಣತಃ ಪರಮಮಹತ್ವವು ಸತ್‌ಪದದ ಮುಖ್ಯ ಅಭಿಧೇಯನಾದ ಪರಬ್ರಹ್ಮನಿಗೆ ಮಾತ್ರವಿದೆ. ಈ ಅಭಿಪ್ರಾಯದಿಂದಲೇ ಅಂದರೆ ತ್ರಿವಿಧಮಹತ್ವವು ಬೇರೆಲ್ಲೂ ಇಲ್ಲದಿರುವುದರಿಂದ ಸತ ಏವ ಎಂದು ಅವಧಾರಣವು ಉಪಪನ್ನವೆಂದು ಭಾವ.

**ಸಚ್ಛಬ್ದೋಽನ್ಯತ್ರಾಪ್ಯುಪಚಾರತೋ ಭವತೀತ್ಯತಃ ಪದಾರ್ಥಸ್ಯೇತಿ। ಸತ್‌ಪದಸ್ಯ ಯೋ ಮುಖ್ಯಾಭಿದೇಯಸ್ತಸ್ಯ ।**

**"ಮುಖ್ಯಾಭಿಧೇಯಸ್ತ್ವರ್ಥಃ ಸ್ಯಾದ್ವಾಚ್ಯಮನ್ಯಚ್ಚ ಭಣ್ಯತೇ ।**
**ಅಮುಖ್ಯೇಷ್ವರ್ಥಶಬ್ದಸ್ತು ನೀಚೋಪರಿಹಿತೋ ಭವೇತ್"॥**

**ಇತಿ ಬ್ರಹ್ಮತರ್ಕೇ ।**

**ಯದ್ವೇವ ಸಮಃ ಪ್ಲುಷಿಣೇತ್ಯಾದಿನಾ ಅನ್ಯತ್ರ ಸ್ಥಿತಸ್ಯ ತತ್ಪರಿಣಾಮತ್ವಮಪ್ಯಸ್ತೀತ್ಯತಃ ಸ್ವರೂಪಾವಸ್ಥಿತಸ್ಯೇತಿ । ಜಗದಾವರಕಸ್ಯ ಸ್ವರೂಪಸ್ಯ ತತಃ ಕಿಂಚಿನ್ಮಹತ್ವಮಿತ್ಯತಃ ಕೈವಲ್ಯಮಿತಿ । ತತ್ರಾಪಿ ಬಹುವಿಧಾನಿ ರೂಪಾಣಿ ತಸ್ಯ ಸಂತೀತ್ಯವಿಶೇಷ ಇತಿ । ಸರ್ವಗತೇ ಪ್ರಾದೇಶಮಾತ್ರಮಪಿ ವಿದ್ಯತೇ ಇತ್ಯತೋಽನಿರಂತರೇತಿ । ಪರಬ್ರಹ್ಮಣೋ ಯಃ ಕೇವಲಭಾವಃ । ಅಂಡಾದ್ಯಂತಃ ಪ್ರವಿಷ್ಟಂ ತದಾವರಕಂ ತಸ್ಯೈವ ಪರಮಪುರುಷಾದಿರೂಪಾಂತರಂ ತದೇಕದೇಶಂ ಪ್ರಾದೇಶಮಾತ್ರಾದಿವಿಶೇಷಂಚ ವಿನಾ ಯತ್ ಸರ್ವಗತಂ ರೂಪಂ ತದೇವ ಪರಮಮಹಾನ್ ।**

ಇನ್ನು ಐದು ವಿಶೇಷಣಗಳಿಗೆ ಕೃತ್ಯವನ್ನು ಕ್ರಮವಾಗಿ ಹೇಳುವರು. ನಿರ್ದುಷ್ಟ ವಾಚಕವಾದ ಸತ್‌ಶಬ್ದವು ವಿಷ್ಣುಭಿನ್ನರಾದ ಮುಕ್ತಾದಿಗಳಲ್ಲಿಯೂ ಔಪಚಾರಿಕವಾಗಿ ಪ್ರಯೋಗಿಸಲ್ಪಡುವುದು. ಅಲ್ಲಿಯಾದರೂ ತ್ರಿವಿಧ ಮಹತ್ವವು ಬರಲಾರದು.

ಕಾರಣ ಪದಾರ್ಥಸ್ಯ ಎಂದಿರುವರು. ಅಮುಖ್ಯಾರ್ಥವು ಪ್ರತಿಪಾದ್ಯವಾದುದರಿಂದ ಅರ್ಥವೇ ಆಗಿದೆ ಕಾರಣ ಹೇಗೆ ಪರಿಹಾರ ಮಾಡಿದಂತಾಯಿತು ಎಂದರೆ ಹೇಳುವರು. ಸತ್ಪದದ ಮುಖ್ಯಾರ್ಥ ಯಾವುದೋ ಅದು ಎಂದರ್ಥ. ಈ ವಿಷಯದಲ್ಲಿ ಅಭಿಧಾನ ಹೇಳುವರು - ಮುಖ್ಯ ಅಭಿಧೇಯವಾದುದು ಅರ್ಥವೆನಿಸುವುದು. ಅಮುಖ್ಯ ಅಭಿಧೇಯವು ವಾಚ್ಯವೆನಿಸುವುದು. ಅಮುಖ್ಯ ಅಭಿಧೇಯಗಳಲ್ಲಿ ಅರ್ಥಶಬ್ದಪ್ರಯೋಗವು 'ನೀಚೋಪರಿಹಿತೋ ಭವೇತ್'. ಲುಪ್ತೋಪಮಾ. ನೀಚನಮೇಲೆ ಇರಿಸಿದ ಆಭರಣದಂತೆ ಆಗುವುದು. ನಾಟಕದಲ್ಲಿ ರಾಜನ ಕಿರೀಟವನ್ನು ಅದಕ್ಕೆ ಅನರ್ಹನಾದವನ ತಲೆಯಲ್ಲಿ ಇಟ್ಟಂತೆ ಆಗುವುದು. ನಿಜವಾದ ಸಕಲದೋಷದೂರ ಎಂಬ ಸತ್‌ಶಬ್ದಾರ್ಥವು ಶ್ರೀಹರಿಯನ್ನು ಬಿಟ್ಟು ಬೇರೆ ಯಾರಲ್ಲಿಯೂ ಇಲ್ಲ. ಲಕ್ಷ್ಮೀದೇವಿಗೂ ಪಾರತಂತ್ರ್ಯವೆಂಬ ದೋಷವಿದೆ. ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ಆದ್ದರಿಂದ ಪದಾರ್ಥಸ್ಯ ಎಂಬ ವಿಶೇಷಣದಿಂದ ರಮಾದಿಗಳನ್ನು ವ್ಯಾವರ್ತನೆ ಮಾಡಿದಂತಾಗುತ್ತದೆ.

ಇನ್ನು 'ಯದ್ವೇವ ಸಮಃ ಪ್ಲುಷಿಣಾ', ಸಮೋಮಶಕೇನ' ಮುಂತಾದ ವಾಕ್ಯಗಳಿಂದ ಪರಮಾತ್ಮನು ಯಾವ ವಸ್ತುವಿನಲ್ಲಿರುವನೋ ಆ ವಸ್ತುವಿನ ಸಮಪರಿಮಾಣವುಳ್ಳವನೆಂದು ತಿಳಿದು ಬರುವುದರಿಂದ ಬ್ರಹ್ಮಾಂಡಾದಿಗಳಲ್ಲಿರುವ ರೂಪಕ್ಕೆ ಬ್ರಹ್ಮಾಂಡಸಮಪರಿಮಾಣವಿರುವುದು. ಪರಮಮಹತ್ವವೂ ಇದೆ (ಅಪಿಪದದಿಂದ) ಆದರೆ ಅದು ಜನರಿಗೆ ಕಾಣವುದಿಲ್ಲ. ಬ್ರಹ್ಮಾಂಡಸಮಪರಿಮಾಣವೇ ಕಾಣುವುದು ಕಾರಣ ಅದೂ ವ್ಯಾವರ್ತ್ಯವೇ, ಅದಕ್ಕಾಗಿ ಸ್ವರೂಪಾವಸ್ಥಿತಸ್ಯ ಎಂಬ ವಿಶೇಷಣವು. ಅನ್ಯತ್ರ ಅನಾಶ್ರಿತವಾದ ಎಂದರ್ಥ. ಇದರಿಂದ ಬ್ರಹ್ಮಾಂಡದ ಒಳಗಿನ ರೂಪ ಸ್ವೀಕರಿಸಬಾರದು ಎಂದಂತಾಯಿತು. ಜಗದನಂತರ್ಗವಾದ ಎಂದರ್ಥ.

ಇನ್ನು ಜಗದಾವರಕವಾದ ರೂಪಕ್ಕೆ ಜಗದಂತರ್ಗತರೂಪಕ್ಕಿಂತ ಮಹತ್ವ ಸಚ್ಛಬ್ದ ಮುಖ್ಯಾಭಿಧೇಯತ್ವವೂ ಜಗದನಂತರರ್ಗತತ್ವವೂ ಇರುವ ಕಾರಣ ಅತಿವ್ಯಾಪ್ತಿ ಬರುವುದು. ಪರಿಹಾರಕ್ಕಾಗಿ ಕೈವಲ್ಯಂ ಎಂದಿರುವರು. ಸ್ವಾರ್ಥೇ ಶ್ಯಞಪ್ರತ್ಯಯ ಲಿಂಗವ್ಯತ್ಯಯ ಮಾಡಿ ಕೇವಲಃ ಜಗದನಾವರಕವಾದ ಎಂದರ್ಥ. ಇದರಿಂದ ಜಗದಾವರಕ ವಾಸುದೇವನ ವ್ಯಾವೃತ್ತಿ ಆಯಿತು. ಆದರೂ ಜಗದಾವರಕ ರೂಪದ ಹೊರಗೆ ಬಹುವಿಧಪರಿಚ್ಛಿನ್ನಪರಿಮಾಣವುಳ್ಳದ್ದೆಂದೇ ಕಾಣುವ ರೂಪಗಳು ಇವೆ. ಅವುಗಳ ವ್ಯಾವೃತ್ತಿಗಾಗಿ ಅವಿಶೇಷಃ ಎಂದಿರುವರು. ಇದರಿಂದ ಜಗದಾವರಕವಾದ ವಾಸುದೇವನಿಂದ ಹೊರಗೆ ಇರುವ ಪರಮಪುರುಷಾದಿರೂಪ ವಿಶೇಷಗಳಿಂದ ಭಿನ್ನವಾದುದು ಎಂದರ್ಥ ಕಾರಣ ವ್ಯಾವೃತ್ತಿ ಆಯಿತು. ಹೀಗೆ ಹೇಳಿದರೂ

ಸರ್ವಗತವಾದ (ಲಕ್ಷ್ಯವಾದ) ರೂಪದಲ್ಲಿ ಪ್ರಾದೇಶಮಾತ್ರತ್ವವು ಇದೆ. ಅಲ್ಲಿ ಹಿಂದಿನ ಎಲ್ಲ ವಿಶೇಷಣಗಳು ಬರುವುವು ಕಾರಣ ನಿರಂತರಃ ಎಂದಿರುವರು. ಅದರ ಅರ್ಥ ಪರಬ್ರಹ್ಮನ ಕೇವಲಭಾವ=ಅಖಂಡವಾದ ರೂಪವಿಶೇಷ ವ್ಯಾಪ್ತವಾಗಿ ಕಾಣುವುದೇ ನಿರಂತರಶಬ್ದದಿಂದ ವಿವಕ್ಷಿತವು ಹೊರತು ಪ್ರದೇಶಗಳಲ್ಲ. ಹಾಗಾದರೆ ಪರಬ್ರಹ್ಮನ ಯಾವ ಅಖಂಡ ಅಪರಿಚ್ಛಿನ್ನ ರೂಪವಿಶೇಷವೋ ಅದೇ ಪರಮಮಹಾನ್ ಎಂದು ಹೇಳಿದರೆ ಸಾಕಲ್ಲ ಎಂದರೆ ನಿಜ. ಎಲ್ಲ ವಿಶೇಷಣಗಳು ಲಕ್ಷಣದಲ್ಲಿ ಸೇರಿಲ್ಲ. ಕ್ರಮವಾಗಿ ರೂಪವಿಶೇಷದಲ್ಲಿ ಬುದ್ಧಿ ಹೋಗಲಿ ಎಂದು ಹೇಳಿದ ಕಾರಣ ದೋಷವಿಲ್ಲ. ಹೇಳಿದ್ದೆಲ್ಲವನ್ನು ಒಟ್ಟುಗೂಡಿಸಿ ಹೇಳುವರು – ಬ್ರಹ್ಮಾಂಡದ ಒಳಗಿರುವ ರೂಪ, ಬ್ರಹ್ಮಾಂಡಾವರಕವಾದ ರೂಪ, ಮತ್ತು ಪರಬ್ರಹ್ಮನದೇ ಆದ ಪರಮಪುರುಷಾದಿ-ರೂಪ ಇವುಗಳಿಂದ ಭಿನ್ನವಾದ, ಮತ್ತು ಪ್ರಾದೇಶಭಿನ್ನವಾದ ಸರ್ವಗತವಾದದ್ದೆಂದು ಯೋಗಿಗಳಿಂದ ನೋಡಲ್ಪಡುವ ಶೂನ್ಯನಾಮಕ ರೂಪಯಾವುದಿದೆಯೋ ಅದೇ ಪರಮಮಹತ್ ಎಂದು ತಿಳಿಯಬೇಕು.

ತ್ರಿವಿಧಮಹತ್ವ ಬ್ರಹ್ಮನಿಗೇನೇ ಎಂದು ಹೇಳಿದ್ದನ್ನು ವಿವರಿಸಲು ಪ್ರಮಾಣ ಹೇಳುವರು –

"ಕಾಲಕೋಟಿವಿಹೀನತ್ವಂ ಕಾಲಾನಂತ್ಯಂ ವಿದುರ್ಬುಧಾಃ ।
ದೇಶಕೋಟಿವಿಹೀನತ್ವಂ ದೇಶಾನಂತ್ಯಂ ತಥೈವ ಚ ॥
ಗುಣಾನಾಮಪ್ರಮೇಯತ್ವಂ ವಸ್ತ್ವಾನಂತ್ಯಂ ವಿದೋ ವಿದುಃ ।
ಆನಂತ್ಯಂ ತ್ರಿವಿಧಂ ನಿತ್ಯಂ ಹರೇರ್ನಾನ್ಯಸ್ಯ ಕಸ್ಯಚಿತ್ ॥
ತಸ್ಯ ಸರ್ವಸ್ವರೂಪೇಷ್ವಪ್ಯಾನಂತ್ಯಂ ತು ತ್ರಿಲಕ್ಷಣಂ ।
ತಥಾಪಿ ದೇಶತಸ್ತಸ್ಯ ಪರಿಚ್ಛೇದೋಽಪಿ ವಿದ್ಯತೇ ॥
ಪರಿಚ್ಛೇದಸ್ತಥಾ ವ್ಯಾಪ್ತಿರೇಕರೂಪೇಽಪಿ ಯುಜ್ಯತೇ ।
ತಸ್ಯಾಚಿಂತ್ಯಾದ್ಯುತೈಶ್ವರ್ಯಾದ್ವ್ಯಹಾರಾರ್ಥಮೇವ ಚ ॥
ಗುಣತಃ ಕಾಲತಶ್ಚೈವ ಪರಿಚ್ಛೇದೋ ನ ಕುತ್ರಚಿತ್ ।
ವ್ಯಾಪ್ತತ್ವಂ ದೇಶತೋಽಪ್ಯಸ್ತಿ ಸರ್ವರೂಪೇಷು ಯದ್ಯಪಿ ॥
ನ ಚ ಭೇದಃ ಕ್ವಚಿತ್ತೇಷಾಂ ಅಣುಮಾತ್ರೋಽಪಿ ವಿದ್ಯತೇ ।
ತಥಾಪಿ ವಿದ್ಯತೇಽಣುತ್ವಂ ಯಸ್ಮಾದೈಶ್ವರ್ಯಯೋಗತಃ ॥
ತಸ್ಮಾದ್ಬುಧ್ಯವತಾರಾರ್ಥಮವ್ಯಾಪ್ತತ್ವಂ ಚ ಭಣ್ಯತೇ ।
ಯತ್ತಸ್ಯ ವ್ಯಾಪಕಂ ರೂಪಂ ಪರಂ ನಾರಾಯಣಾಭಿದಂ ॥
ಶೂನ್ಯಂ ಬ್ರಹ್ಮೇತಿತತ್ಪ್ರಾಹುರ್ದ್ವಿತೀಯಂ ಸ್ರಷ್ಟೃ ಯತ್ತತಃ ।
ಪರಮಃ ಪುರುಷೋ ನಾಮ ಮಿತಂ ತದ್ದೇಶತೋ ವಿಭೋಃ ॥

ತೃತೀಯಂ ವಾಸುದೇವಾಖ್ಯಂ ಜಗದಾವರಕಂ ಮತಂ ।
ದೇಶತೋ ಜಗದಾವಿಷ್ಟಂ ತುರೀಯಂ ವಿಷ್ಣುನಾಮಕಂ"॥ ಇತಿ ಬ್ರಹ್ಮತರ್ಕೇ

ಸರ್ವಗತಸ್ಯಾಪಿ ಬ್ರಹ್ಮರೂಪಸ್ಯ ಕಾಲಾದಿರೂಪಯಾ ಪ್ರಕೃತ್ಯಾ ಸಮವ್ಯಾಪ್ತಾವಪಿ ದಾರ್ಷ್ಟಾಂತಿಕಾಂತರ್ಭಾವಾತ್ ತದನ್ಯಸ್ಮಿನ್ನನವಸ್ಥಾನಾಚ್ಚ ಸ್ವರೂಪಾವಸ್ಥಿತಸ್ಯೇತ್ಯುಕ್ತಂ ।

"ದೇವ್ಯಾಂ ಕಾಲಾದಿರೂಪಿಣ್ಯಾಂ ಸ್ಥಿತಂ ಬ್ರಹ್ಮಾಪಿ ಸರ್ವಗಂ ।
ಉಚ್ಯತೇಽನನ್ಯಗಂ ಯಸ್ಮಾದಾತ್ಮವತ್ವಾ ಹರೇರ್ವಿಭೋಃ ।
ಮಹದಾದಿಗತಂ ಯತ್ತು ತದನ್ಯಗತಮುಚ್ಯತೇ" ॥ ಇತಿ ಬ್ರಾಹ್ಮೇ ।

ಕಾಲಾವಧಿ ಇಲ್ಲದಿರುವುದು ಕಾಲಾನಂತ್ಯ (ಅಂದರೆ ಕಾಲತಃ ಪರಮ-ಮಹತ್ತ್ವವು) ಎಂದು ಜ್ಞಾನಿಗಳು ತಿಳಿಯುವರು. ದೇಶಾವಧಿ ಇಲ್ಲದಿರುವುದು ದೇಶಾನಂತ್ಯವು (ಅಂದರೆ ದೇಶತಃ ಪರಮಮಹತ್ತ್ವವು) ಅದರಂತೆ ಗುಣಗಳನ್ನು ಸಂಖ್ಯಾಪರಿಮಾಣಗಳಿಂದ ತಿಳಿಯಲಾಗದಿರುವುದೇ ಗುಣಾನಂತ್ಯ, ವಸ್ತ್ವಾನಂತ್ಯ-ವೆಂದು (ಅಂದರೆ ಗುಣತಃ ಪರಮಮಹತ್ತ್ವವು) ಜ್ಞಾನಿಗಳು ತಿಳಿಯುವರು. ಈ ಮೂರು ವಿಧ ಆನಂತ್ಯವು (ಅಂದರೆ ತ್ರಿವಿಧ ಪರಮಮಹತ್ತ್ವವು) ಶ್ರೀಹರಿಗೆ ಮಾತ್ರ ಸರ್ವದಾ ಇದೆ. ಬೇರೆ ಯಾರಿಗೂ ಇರುವುದಿಲ್ಲ.

ಭಗವಂತನಿಗೆ ತನ್ನ ಎಲ್ಲ ರೂಪಗಳಲ್ಲಿ ಮೂರು ರೀತಿಯ ಆನಂತ್ಯವು ಇದೆ. ಆದ್ದರಿಂದ ಎಲ್ಲ ರೂಪಗಳೂ ಪರಮಮಹತ್ತೇ ಆಗಿವೆ. ಆದರೂ ಅವುಗಳಲ್ಲಿ ಯೋಗಿಗಳಿಂದ ನೋಡಲ್ಪಡುವ ದೇಶದ ಪರಿಚ್ಛೇದವೂ ಇದೆ. ಅಂದರೆ ಬ್ರಹ್ಮಾಂಡಾದಿಗಳಲ್ಲಿರುವ ರೂಪಗಳಲ್ಲಿ ಪರಮಮಹತ್ಪರಿಮಾಣವಿದ್ದರೂ ಯೋಗಿ-ಗಳಿಂದ ಸರ್ವದಾ ನೋಡಲ್ಪಡುವುದಿಲ್ಲ. ದೇಶತಃ ಪರಿಚ್ಛೇದವೇ ಕಾಣುವುದು. ಕಾಣುವ ಪರಿಮಾಣದ ಅಭಿಪ್ರಾಯದಿಂದ ಉಳಿದ ರೂಪಗಳ ವ್ಯಾವೃತ್ತಿಯನ್ನು ಮಾಡಿ ಶೂನ್ಯನಾಮಕರೂಪಕ್ಕೆ ಪರಮಮಹತ್ ಎಂದು ಹೇಳಿದ್ದಾರೆ ಎಂದು ತಿಳಿಯಬೇಕು.

ಶ್ರೀಹರಿಗೆ ದೇಶತಃ ಪರಿಚ್ಛೇದ (ಪರಿಮಿತಿ) ಮತ್ತು ವ್ಯಾಪ್ತಿ ಒಂದೇ ರೂಪದಲ್ಲಿ ಅವನ ಅಚಿಂತ್ಯವಾದ ಅದ್ಭುತವಾದ ಐಶ್ವರ್ಯದಿಂದ ಉಪಪನ್ನವಾಗುವುದು. ಶ್ರೀಕೃಷ್ಣನು ಬಂದನು, ಹೋದನು ಮುಂತಾದ ಯೋಗಿಗಳ ವ್ಯವಹಾರ ನಡೆಯುವುದಕ್ಕಾಗಿ ಪರಿಚ್ಛೇದವೂ ಇದೆ ಎಂದು ಒಪ್ಪಬೇಕು. ಆದರೆ ಗುಣತಃ, ಕಾಲತಃ ಪರಿಚ್ಛೇದವು ಶ್ರೀಹರಿಯ ಯಾವ ರೂಪದಲ್ಲಿಯೂ ಇರುವುದಿಲ್ಲ. ಯದ್ಯಪಿ ಎಲ್ಲ ರೂಪಗಳಲ್ಲಿ ದೇಶತಃ ವ್ಯಾಪ್ತಿಯೂ ಇದೆ. ರೂಪಗಳಿಗೆ ಸ್ವಲ್ಪವೂ

ಭೇದವಿಲ್ಲ, ಆದರೂ ಅವನ ಸಾಮರ್ಥ್ಯದಿಂದ ಅಣುತ್ವವು ಸ್ಪಷ್ಟ ಕಾಣುತ್ತದೆ. ಆದ ಕಾರಣ ಲಕ್ಷ್ಯವಾದ ರೂಪವಿಶೇಷದಲ್ಲಿ ಬುದ್ಧಿಯು ಹೋಗುವುದಕ್ಕಾಗಿ ಅವ್ಯಾಪ್ತತ್ವವೂ ಹೇಳಲ್ಪಡುವುದು.

ಇಲ್ಲಿ ಲಕ್ಷ್ಯವಾದ ರೂಪದ ಮತ್ತು ವ್ಯಾವರ್ತ್ಯರೂಪಗಳ ನಾಮರೂಪಗಳನ್ನು ತಿಳಿಸುವರುಯಾವದು ಭಗವಂತನ ವ್ಯಾಪಕವಾದ ನಾರಾಯಣ ಎಂಬ ರೂಪವಿದೆಯೋ ಅದನ್ನು ಶೂನ್ಯವೆಂದು, ಪರಂಬ್ರಹ್ಮ ಎಂದೂ ಹೇಳುವರು (ಲಕ್ಷ್ಯ). ಯಾವುದು ಶೂನ್ಯದಿಂದ ಅಭಿವ್ಯಕ್ತವಾಗಿ ಹೊರಗೆ ಬಂದಿತೋ ಆ ಎರಡನೆಯದಾದ (ಮೂಲರೂಪಾಪೇಕ್ಷಯಾ ಎರಡನೆಯದು, ಅವತಾರಾಪೇಕ್ಷಯಾ ಮೊದಲನೆ-ಯದು). ಶುದ್ಧಸೃಷ್ಟಿಗೆ ಸ್ರಷ್ಟವಾದ ರೂಪವಿದೆಯೋ ಅದಕ್ಕೆ ಪರಮಪುರುಷ-ವೆಂದು ಹೆಸರು. ವ್ಯಾಪ್ತವಾದ ಪರಮಾತ್ಮನ ಆ ರೂಪವು ದೇಶತಃ ಮಿತವು. ಅಂದರೆ ಮಿತವೆಂದು ಯೋಗಿಗಳಿಗೆ ಕಾಣುವುದು. ಕಾರಣ 'ಅವಿಶೇಷ'ಪದದಿಂದ ವ್ಯಾವರ್ತ್ಯವು. ಮೂರನೆಯದಾದ ವಾಸುದೇವನೆಂಬ ಜಗದಾವರಕವಾದ ರೂಪವೂ ದೇಶತಃ ಮಿತವಾಗಿಯೇ ಕಾಣುವುದು ಕಾರಣ 'ಕೇವಲ'ಪದ ವ್ಯಾವರ್ತ್ಯವು. ಜಗತ್ತಿನಲ್ಲಿ ಪ್ರವೇಶ ಮಾಡಿದ ವಿಷ್ಣು ಎಂಬ ರೂಪವು ನಾಲ್ಕನೆಯದು. ಇದು ಜಗತ್ತಿನ ಸಮಪರಿಮಾಣವಾದುದರಿಂದ ಇದೂ ದೇಶತಃ ಮಿತವಾಗಿಯೇ ಕಾಣುವುದು. ಕಾರಣ 'ಸ್ವರೂಪಾವಸ್ಥಿತಸ್ಯ' ಎಂಬ ಪದದಿಂದ ವ್ಯಾವರ್ತ್ಯವು.

ಪರಮಮಹತ್‌ಪರಿಮಾಣವುಳ್ಳ ವಸ್ತುವನ್ನು ಹೇಳಬೇಕಾದರೆ ಶೂನ್ಯನಾಮಕ ಬ್ರಹ್ಮನನ್ನೇ ಏಕೆ ಹೇಳಬೇಕು ? ಬ್ರಹ್ಮಸಮವ್ಯಾಪ್ತವಾದ ಕಾಲ, ಆಕಾಶ, ಅವುಗಳ ಅಭಿಮಾನಿ ರಮಾದೇವಿಯೂ ಇರುವರಲ್ಲ ಅವರನ್ನೇ ಏಕೆ ಹೇಳಬಾರದು? ಎಂದು ಒಂದು ಪ್ರಶ್ನೆ. ಎರಡನೆಯದು ಸಮಃ ಪ್ಲುಷಿಣಾ ಎಂಬ ನ್ಯಾಯದಿಂದ ಕಾಲಾದಿರೂಪಪ್ರಕೃತಿಯಲ್ಲಿ ಶೂನ್ಯನಾಮಕ ಬ್ರಹ್ಮನೂ ಇರುವುದರಿಂದ ಹಿಂದೆ ಹೇಳಿದ ಸ್ವರೂಪಾವಸ್ಥಿತ್ವ ಬರಲಿಲ್ಲವಲ್ಲ ಕಾರಣ (ಅನ್ಯತ್ರ ಅನವಸ್ಥಾನ) ಲಕ್ಷಣಕ್ಕೆ ಅಸಂಭವ ಎಂಬ ಶಂಕೆಗಳನ್ನು ಪರಿಹರಿಸುವರು–

ಸರ್ವಗತವಾದ ಬ್ರಹ್ಮನ ರೂಪವೂ ಸಹ ಕಾಲಾದಿರೂಪಳಾದ ಪ್ರಕೃತಿಯಿಂದ ಸಮವ್ಯಾಪ್ತವಾದರೂ ದಾರ್ಷ್ಟಾಂತಿಕದಲ್ಲಿ ಸೇರಿರುವುದರಿಂದ ಮತ್ತು ಪ್ರಕೃತಿಯನ್ನು ಬಿಟ್ಟು ಬೇರೆ ಸ್ಥಳದಲ್ಲಿ ಇಲ್ಲದಿರುವುದರಿಂದಲೂ ಸ್ವರೂಪಾವಸ್ಥಿತಸ್ಯ ಎಂದಿರುವರು. ಅಂದರೆ ಇಲ್ಲಿ ಕಾಲಾದಿ ಪರಿಮಾಣವನ್ನು ತಿಳಿಸಲು ದೃಷ್ಟಾಂತವಾಗಿ ದ್ರವ್ಯ ಪರಿಮಾಣ ಹೇಳಲು ಹೊರಟಿರುವರು. ಕಾಲಶಬ್ದವು ದೇಶಾದಿಗಳಿಗೆ ಉಪಲಕ್ಷಕ-

ವಾಗಿದೆ. ಅಂದ ಮೇಲೆ ಕಾಲಾದಿಗಳಾಗಲಿ ಅದಕ್ಕೆ ಅಭಿಮಾನಿಯಾದ ಪ್ರಕೃತ್ಯಾದಿಗಳಾಗಲಿ ಬ್ರಹ್ಮಸಮವ್ಯಾಪ್ತವಾದವುಗಳು ಎಷ್ಟಿವೆಯೋ ಅವೆಲ್ಲವೂ ಪರಮಮಹತ್ ಪರಿಮಾಣವುಳ್ಳವುಗಳು ಎಂದು ತಿಳಿಸಿಕೊಡಬೇಕಾದವುಗಳು, ಅಂದರೆ ದಾರ್ಷ್ಟಾಂತಿಕಗಳು. ಅವುಗಳಿಗೆ ದೃಷ್ಟಾಂತವಾಗಿ ಹೇಳಬೇಕಾದರೆ ಬ್ರಹ್ಮನ ಶೂನ್ಯನಾಮಕ ರೂಪವನ್ನೇ ಹೇಳಬೇಕೆ ಹೊರತು ಮತ್ತೆ ಅವುಗಳನ್ನೇ ಹೇಳಲಾಗುವುದಿಲ್ಲ ಎಂಬುದು ಮೊದಲನೆ ಶಂಕೆಗೆ ಉತ್ತರ. ಇನ್ನು ಎರಡನೇ ಶಂಕೆಗೆ ಉತ್ತರ ವಿವಕ್ಷಿತರಾದ ದಾರ್ಷ್ಟಾಂತಿಕವಾದ ಕಾಲಾದ್ಯಭಿಮಾನಿಪ್ರಕೃತ್ಯಾದಿಗಳಿಂದ ಭಿನ್ನವಾದ ಮಹದಾದಿಗಳಲ್ಲಿ ಇಲ್ಲದಿರುವುದರಿಂದ ಸ್ವರೂಪಾವಸ್ಥಿತಸ್ಯ ಎಂಬುದು ಉಪಪನ್ನವೇ. ಅದೇ ಆ ಶಬ್ದದಿಂದ ವಿವಕ್ಷಿತವು. ಕಾರಣ ಅಸಂಭವವಿಲ್ಲ.

ಈ ವಿಷಯದಲ್ಲಿ ಹೀಗೇ ಅರ್ಥ ಮಾಡಬೇಕು ಎಂದು ಬ್ರಾಹ್ಮ ಪುರಾಣದಲ್ಲಿದೆ. ಅದರ ಅರ್ಥ ಹೀಗೆ –

ಕಾಲಾದ್ಯಭಿಮಾನಿನಿಯಾದ ಲಕ್ಷ್ಮೀದೇವಿಯಲ್ಲಿ ಇದ್ದರೂ ಬ್ರಹ್ಮನು ಸರ್ವಗತನೆಂದು, ಅನನ್ಯಗನೆಂದು ಹೇಳಲ್ಪಡುವನು. ವ್ಯಾಪ್ತನಾದ ಪರಮಾತ್ಮನಿಗೆ ಲಕ್ಷ್ಮೀದೇವಿಯು ತಾನೇ ಇದ್ದಂತೆ. ಕಾರಣ ಅವಳಲ್ಲಿರುವುದರಿಂದ ಸ್ವರೂಪಾವಸ್ಥಿತತ್ವ ಹೋಗುವುದಿಲ್ಲ. ಮಹದಾದಿಗಳಲ್ಲಿರುವ ರೂಪವು ಅನ್ಯಗತವೆನಿಸುವುದು ಅದೇ ಸ್ವರೂಪಾವಸ್ಥಿತಸ್ಯ ಎಂಬ ಪದದಿಂದ ವ್ಯಾವರ್ತ್ಯವಾದುದು ಎಂದು ತಾತ್ಪರ್ಯದ ಭಾವಾರ್ಥ. ಇದಕ್ಕನುಗುಣವಾಗಿ ಮೂಲದ ಅರ್ಥ ಮೇಲೆ ಬರೆದಂತೆ ತಿಳಿಯಬೇಕು. ॥೨॥

ಇಲ್ಲಿಯವರೆಗೆ ಪರಮಾಣು ಮತ್ತು ಪರಮಮಹತ್ತಾದ ದ್ರವ್ಯಗಳನ್ನು ದೃಷ್ಟಾಂತವಾಗಿ ಸ್ವೀಕರಿಸಿ ಅವುಗಳ ಲಕ್ಷಣ ಹೇಳಿ ಈಗ ಆ ಎರಡು ಲಕ್ಷಣಗಳನ್ನು ದಾರ್ಷ್ಟಾಂತಿಕವಾದ ಪರಮಾಣುಕಾಲ, ಪರಮಮಹತ್‌ಕಾಲಗಳಲ್ಲಿ ತಿಳಿಸುವರು –

**ಏವಂ ಕಾಲೋಽಪ್ಯನುಮಿತಃ ಸೌಕ್ಷ್ಮ್ಯೇ ಸ್ಥೌಲ್ಯೇ ಚ ಸತ್ತಮ ।**
**ಸಂಸ್ಥಾನಭುಕ್ತ್ಯಾ ಭಗವಾನವ್ಯಕ್ತೋ ವ್ಯಕ್ತಭುಗ್ ವಿಭುಃ ॥೩॥**

**ಸ ಕಾಲಃ ಪರಮಾಣುರ್ವೈ ಯೋ ಭುಂಕ್ತೇ ಪರಮಾಣುತಾಂ ।**
**ಸತೋಽವಿಶೇಷಭುಗ್ ಯಸ್ತು ಸ ಕಾಲಃ ಪರಮೋ ಮಹಾನ್॥೪॥**

ಕಾಲೋಽಪಿ=ಪರಮ ಅಣು, ಪರಮ ಮಹತ್ತಾದ ಕೇವಲ ದ್ರವ್ಯಗಳು ಮಾತ್ರವಲ್ಲ ಕಿಂತು ಕಾಲವೂ ಕೂಡ. ಮತ್ತು ಕಾಲಾಂತರ್ಯಾಮಿಯಾದ ಕಾಲ ನಾಮಕ ಶ್ರೀಹರಿಯೂ ಕೂಡ. ಸೌಕ್ಷ್ಮ್ಯೇ=ಪರಮಾಣುತ್ವವಿಷಯದಲ್ಲಿ, ಸ್ಥೌಲ್ಯೇ

ಭೇದವಿಲ್ಲ, ಆದರೂ ಅವನ ಸಾಮರ್ಥ್ಯದಿಂದ ಅಣುತ್ವವು ಸ್ಪಷ್ಟ ಕಾಣುತ್ತದೆ. ಆದ ಕಾರಣ ಲಕ್ಷ್ಯವಾದ ರೂಪವಿಶೇಷದಲ್ಲಿ ಬುದ್ಧಿಯು ಹೋಗುವುದಕ್ಕಾಗಿ ಅವ್ಯಾಪ್ತತ್ವವೂ ಹೇಳಲ್ಪಡುವುದು.

ಇಲ್ಲಿ ಲಕ್ಷ್ಯವಾದ ರೂಪದ ಮತ್ತು ವ್ಯಾವರ್ತ್ಯರೂಪಗಳ ನಾಮರೂಪಗಳನ್ನು ತಿಳಿಸುವರುಯಾವದು ಭಗವಂತನ ವ್ಯಾಪಕವಾದ ನಾರಾಯಣ ಎಂಬ ರೂಪವಿದೆಯೋ ಅದನ್ನು ಶೂನ್ಯವೆಂದು, ಪರಂಬ್ರಹ್ಮ ಎಂದೂ ಹೇಳುವರು (ಲಕ್ಷ್ಯ). ಯಾವುದು ಶೂನ್ಯದಿಂದ ಅಭಿವ್ಯಕ್ತವಾಗಿ ಹೊರಗೆ ಬಂದಿತೋ ಆ ಎರಡನೆಯದಾದ (ಮೂಲರೂಪಾಪೇಕ್ಷಯಾ ಎರಡನೆಯದು, ಅವತಾರಾಪೇಕ್ಷಯಾ ಮೊದಲನೆ-ಯದು). ಶುದ್ಧಸೃಷ್ಟಿಗೆ ಸ್ರಷ್ಟವಾದ ರೂಪವಿದೆಯೋ ಅದಕ್ಕೆ ಪರಮಪುರುಷ-ವೆಂದು ಹೆಸರು. ವ್ಯಾಪ್ತವಾದ ಪರಮಾತ್ಮನ ಆ ರೂಪವು ದೇಶತಃ ಮಿತವು. ಅಂದರೆ ಮಿತವೆಂದು ಯೋಗಿಗಳಿಗೆ ಕಾಣುವುದು. ಕಾರಣ 'ಅವಿಶೇಷ'ಪದದಿಂದ ವ್ಯಾವರ್ತ್ಯವು. ಮೂರನೆಯದಾದ ವಾಸುದೇವನೆಂಬ ಜಗದಾವರಕವಾದ ರೂಪವೂ ದೇಶತಃ ಮಿತವಾಗಿಯೇ ಕಾಣುವುದು ಕಾರಣ 'ಕೇವಲ'ಪದ ವ್ಯಾವರ್ತ್ಯವು. ಜಗತ್ತಿನಲ್ಲಿ ಪ್ರವೇಶ ಮಾಡಿದ ವಿಷ್ಣು ಎಂಬ ರೂಪವು ನಾಲ್ಕನೆಯದು. ಇದು ಜಗತ್ತಿನ ಸಮಪರಿಮಾಣವಾದುದರಿಂದ ಇದೂ ದೇಶತಃ ಮಿತವಾಗಿಯೇ ಕಾಣುವುದು. ಕಾರಣ 'ಸ್ವರೂಪಾವಸ್ಥಿತಸ್ಯ' ಎಂಬ ಪದದಿಂದ ವ್ಯಾವರ್ತ್ಯವು.

ಪರಮಮಹತ್‌ಪರಿಮಾಣವುಳ್ಳ ವಸ್ತುವನ್ನು ಹೇಳಬೇಕಾದರೆ ಶೂನ್ಯನಾಮಕ ಬ್ರಹ್ಮನನ್ನೇ ಏಕೆ ಹೇಳಬೇಕು ? ಬ್ರಹ್ಮಸಮವ್ಯಾಪ್ತವಾದ ಕಾಲ, ಆಕಾಶ, ಅವುಗಳ ಅಭಿಮಾನಿ ರಮಾದೇವಿಯೂ ಇರುವರಲ್ಲ ಅವರನ್ನೇ ಏಕೆ ಹೇಳಬಾರದು? ಎಂದು ಒಂದು ಪ್ರಶ್ನೆ. ಎರಡನೆಯದು ಸಮಃ ಪ್ಲುಷಿಣಾ ಎಂಬ ನ್ಯಾಯದಿಂದ ಕಾಲಾದಿರೂಪಪ್ರಕೃತಿಯಲ್ಲಿ ಶೂನ್ಯನಾಮಕ ಬ್ರಹ್ಮನೂ ಇರುವುದರಿಂದ ಹಿಂದೆ ಹೇಳಿದ ಸ್ವರೂಪಾವಸ್ಥಿತತ್ವ ಬರಲಿಲ್ಲವಲ್ಲ ಕಾರಣ (ಅನ್ಯತ್ರ ಅನವಸ್ಥಾನ) ಲಕ್ಷಣಕ್ಕೆ ಅಸಂಭವ ಎಂಬ ಶಂಕೆಗಳನ್ನು ಪರಿಹರಿಸುವರು–

ಸರ್ವಗತವಾದ ಬ್ರಹ್ಮನ ರೂಪವೂ ಸಹ ಕಾಲಾದಿರೂಪಳಾದ ಪ್ರಕೃತಿಯಿಂದ ಸಮವ್ಯಾಪ್ತವಾದರೂ ದಾರ್ಷ್ಟಾಂತಿಕದಲ್ಲಿ ಸೇರಿರುವುದರಿಂದ ಮತ್ತು ಪ್ರಕೃತಿಯನ್ನು ಬಿಟ್ಟು ಬೇರೆ ಸ್ಥಳದಲ್ಲಿ ಇಲ್ಲದಿರುವುದರಿಂದಲೂ ಸ್ವರೂಪಾವಸ್ಥಿತಸ್ಯ ಎಂದಿರುವರು. ಅಂದರೆ ಇಲ್ಲಿ ಕಾಲಾದಿ ಪರಿಮಾಣವನ್ನು ತಿಳಿಸಲು ದೃಷ್ಟಾಂತವಾಗಿ ದ್ರವ್ಯ ಪರಿಮಾಣ ಹೇಳಲು ಹೊರಟಿರುವರು. ಕಾಲಶಬ್ದವು ದೇಶಾದಿಗಳಿಗೆ ಉಪಲಕ್ಷಕ-

ವಾಗಿದೆ. ಅಂದ ಮೇಲೆ ಕಾಲಾದಿಗಳಾಗಲಿ ಅದಕ್ಕೆ ಅಭಿಮಾನಿಯಾದ ಪ್ರಕೃತ್ಯಾದಿಗಳಾಗಲಿ ಬ್ರಹ್ಮಸಮವ್ಯಾಪ್ತವಾದವುಗಳು ಎಷ್ಟಿವೆಯೋ ಅವೆಲ್ಲವೂ ಪರಮಮಹತ್ ಪರಿಮಾಣವುಳ್ಳವುಗಳು ಎಂದು ತಿಳಿಸಿಕೊಡಬೇಕಾದವುಗಳು, ಅಂದರೆ ದಾರ್ಷ್ಟಾಂತಿಕಗಳು. ಅವುಗಳಿಗೆ ದೃಷ್ಟಾಂತವಾಗಿ ಹೇಳಬೇಕಾದರೆ ಬ್ರಹ್ಮನ ಶೂನ್ಯನಾಮಕ ರೂಪವನ್ನೇ ಹೇಳಬೇಕೆ ಹೊರತು ಮತ್ತೆ ಅವುಗಳನ್ನೇ ಹೇಳಲಾಗುವುದಿಲ್ಲ ಎಂಬುದು ಮೊದಲನೆ ಶಂಕೆಗೆ ಉತ್ತರ. ಇನ್ನು ಎರಡನೇ ಶಂಕೆಗೆ ಉತ್ತರ ವಿವಕ್ಷಿತರಾದ ದಾರ್ಷ್ಟಾಂತಿಕವಾದ ಕಾಲಾದ್ಯಭಿಮಾನಿಪ್ರಕೃತ್ಯಾದಿಗಳಿಂದ ಭಿನ್ನವಾದ ಮಹದಾದಿಗಳಲ್ಲಿ ಇಲ್ಲದಿರುವುದರಿಂದ ಸ್ವರೂಪಾವಸ್ಥಿತಸ್ಯ ಎಂಬುದು ಉಪಪನ್ನವೇ. ಅದೇ ಆ ಶಬ್ದದಿಂದ ವಿವಕ್ಷಿತವು. ಕಾರಣ ಅಸಂಭವವಿಲ್ಲ.

ಈ ವಿಷಯದಲ್ಲಿ ಹೀಗೇ ಅರ್ಥ ಮಾಡಬೇಕು ಎಂದು ಬ್ರಾಹ್ಮ ಪುರಾಣದಲ್ಲಿದೆ. ಅದರ ಅರ್ಥ ಹೀಗೆ –

ಕಾಲಾದ್ಯಭಿಮಾನಿನಿಯಾದ ಲಕ್ಷ್ಮೀದೇವಿಯಲ್ಲಿ ಇದ್ದರೂ ಬ್ರಹ್ಮನು ಸರ್ವಗತನೆಂದು, ಅನನ್ಯಗನೆಂದು ಹೇಳಲ್ಪಡುವನು. ವ್ಯಾಪ್ತನಾದ ಪರಮಾತ್ಮನಿಗೆ ಲಕ್ಷ್ಮೀದೇವಿಯು ತಾನೇ ಇದ್ದಂತೆ. ಕಾರಣ ಅವಳಲ್ಲಿರುವುದರಿಂದ ಸ್ವರೂಪಾವಸ್ಥಿತತ್ವ ಹೋಗುವುದಿಲ್ಲ. ಮಹದಾದಿಗಳಲ್ಲಿರುವ ರೂಪವು ಅನ್ಯಗತವೆನಿಸುವುದು ಅದೇ ಸ್ವರೂಪಾವಸ್ಥಿತಸ್ಯ ಎಂಬ ಪದದಿಂದ ವ್ಯಾವರ್ತ್ಯವಾದುದು ಎಂದು ತಾತ್ಪರ್ಯದ ಭಾವಾರ್ಥ. ಇದಕ್ಕನುಗುಣವಾಗಿ ಮೂಲದ ಅರ್ಥ ಮೇಲೆ ಬರೆದಂತೆ ತಿಳಿಯಬೇಕು. ।।೨।।

ಇಲ್ಲಿಯವರೆಗೆ ಪರಮಾಣು ಮತ್ತು ಪರಮಮಹತ್ತಾದ ದ್ರವ್ಯಗಳನ್ನು ದೃಷ್ಟಾಂತವಾಗಿ ಸ್ವೀಕರಿಸಿ ಅವುಗಳ ಲಕ್ಷಣ ಹೇಳಿ ಈಗ ಆ ಎರಡು ಲಕ್ಷಣಗಳನ್ನು ದಾರ್ಷ್ಟಾಂತಿಕವಾದ ಪರಮಾಣುಕಾಲ, ಪರಮಮಹತ್‌ಕಾಲಗಳಲ್ಲಿ ತಿಳಿಸುವರು –

**ಏವಂ ಕಾಲೋಽಪ್ಯನುಮಿತಃ ಸೌಕ್ಷ್ಮ್ಯೇ ಸ್ಥೌಲ್ಯೇ ಚ ಸತ್ತಮ ।**
**ಸಂಸ್ಥಾನಭುಕ್ತ್ಯಾ ಭಗವಾನವ್ಯಕ್ತೋ ವ್ಯಕ್ತಭುಗ್ ವಿಭುಃ ।।೩।।**

**ಸ ಕಾಲಃ ಪರಮಾಣುರ್ವೈ ಯೋ ಭುಂಕ್ತೇ ಪರಮಾಣುತಾಂ ।**
**ಸತೋಽವಿಶೇಷಭುಗ್ ಯಸ್ತು ಸ ಕಾಲಃ ಪರಮೋ ಮಹಾನ್।।೪।।**

ಕಾಲೋಽಪಿ=ಪರಮ ಅಣು, ಪರಮ ಮಹತ್ತಾದ ಕೇವಲ ದ್ರವ್ಯಗಳು ಮಾತ್ರವಲ್ಲ ಕಿಂತು ಕಾಲವೂ ಕೂಡ. ಮತ್ತು ಕಾಲಾಂತರ್ಯಾಮಿಯಾದ ಕಾಲ ನಾಮಕ ಶ್ರೀಹರಿಯೂ ಕೂಡ. ಸೌಕ್ಷ್ಮ್ಯೇ=ಪರಮಾಣುತ್ವವಿಷಯದಲ್ಲಿ, ಸ್ಥೌಲ್ಯೇ

ಚ=ಪರಮಮಹತ್ವ ವಿಷಯದಲ್ಲಿಯೂ, ಏವಂ=ಹೇಳಿದ ಲಕ್ಷಣವುಳ್ಳವನಾಗಿ, ಅನುಮಿತಃ=ಶಾಸ್ತ್ರಾನುಸಾರವಾಗಿ ಲಿಂಗಾನುಸಾರವಾಗಿಯೂ ಯಥಾವತ್ತಾಗಿ (ಯಥಾರ್ಥವಾಗಿ) ತಿಳಿಯಲ್ಪಟ್ಟಿತು. ಸೌಕ್ಷ್ಮ್ಯದಲ್ಲಿ ಹೇಗೆ ಸ್ಥೌಲ್ಯದಲ್ಲಿ ಹೇಗೆ ತಿಳಿಯಲ್ಪಟ್ಟಿತು ಎಂದರೆ ಭಗವಾನ್=ಪರಮೇಶ್ವರನು, ಸಂಸ್ಥಾನಭುಕ್ತ್ಯಾ=ಅಣು ಮುಂತಾದ ಕಾಲಗಳ ಅವಸ್ಥೆಯಂತೆಯೇ ಆದರಲ್ಲಿ ನಿಯಾಮಕನಾಗಿರುವುದ-ರಿಂದ, ಅವ್ಯಕ್ತಃ=ನಮ್ಮಗಳ ಪ್ರತ್ಯಕ್ಷವಿಷಯನಾಗದೇ ಪರಮಾಣುದ್ರವ್ಯಸಾಮ್ಯ ಉಳ್ಳವನೆಂದು ಸೌಕ್ಷ್ಮವಿಷಯದಲ್ಲಿ ಅನುಮಿತಃ=ಅನುಮಿತನು. ವ್ಯಕ್ತಭುಕ್=ವ್ಯಾಪ್ತವಾಗಿ ಕಾಣಲ್ಪಡುವ ಶೂನ್ಯನಾಮಕ ರೂಪದ ಸಾಮ್ಯವನ್ನನುಭವಿಸುವನು, ಆದ್ದರಿಂದಲೇ ವಿಭುಃ=ವ್ಯಾಪ್ತನಾದ ಕಾಲಾಂತರ್ಯಾಮಿಯಾದ ಶ್ರೀಹರಿಯು ಸ್ಥೌಲ್ಯವಿಷಯದಲ್ಲಿ ಅನುಮಿತನು ॥೩॥

ಯಃ=ಯಾವನು ಪರಮಾಣುತಾಂ ಭುಂಕ್ತೇ=ಹಿಂದಿನ ಶ್ಲೋಕದಲ್ಲಿ ದೃಷ್ಟಾಂತ-ವಾಗಿ ಹೇಳಿದ ಪರಮಾಣುದ್ರವ್ಯಸಾಮ್ಯವನ್ನು ಹೊಂದುವನೋ, ಸಃ=ಅವನು, ಕಾಲಃ=ಕಾಲಾಂತರ್ಯಾಮಿಯು, ಪರಮಾಣುಃ=ಪರಮಾಣುಕಾಲದಲ್ಲಿ ನಿಯಾಮಕನಾಗಿರುವುದರಿಂದ ಪರಮಾಣುಶಬ್ದವಾಚ್ಯನು. ಯಃ=ಯಾವನು, ಸತಃ=ಶೂನ್ಯನಾಮಕನಾದ ಪರಬ್ರಹ್ಮನ ಅವಿಶೇಷಭುಕ್=ಸಾಮ್ಯ ಉಳ್ಳವನೋ, ಸಃ=ಅವನು,ಪರಮಹಾಕಾಲನಿಯಾಮಕನಾಗಿರುವುದರಿಂದ, ಪರಮಃ ಮಹಾನ್-ಕಾಲಃ=ಪರಮಮಹಾಕಾಲಶಬ್ದವಾಚ್ಯನು. ತುಶಬ್ದದಿಂದ ರೂಪಗಳಿಗೆ ಅಭೇದ ಸೂಚಿತವಾಗುವುದು ॥೪॥

ಮೇಲಿನ ಶ್ಲೋಕದಲ್ಲಿ ಅನುಮಿತಶಬ್ದಕ್ಕೆ ಕೇವಲ ಲಿಂಗಜನ್ಯಜ್ಞಾನವಿಷಯ ಎಂದರ್ಥ ಮಾಡಿದರೆ ದೃಷ್ಟಾಂತಗಳಲ್ಲಿಯೂ ಲಿಂಗವನ್ನು ಹೇಳಿಲ್ಲ, ಮುಂದೆಯೂ ಹೇಳುವುದಿಲ್ಲ, ಕಾರಣ ಅರ್ಥಾಬಾಧರೂಪಯೋಗ್ಯತೆ ಇಲ್ಲವಾಗುವುದು, ಬಾಧಿ-ತವಾಗುವುದೆಂಬ ಶಂಕೆಯನ್ನು ಪರಿಹರಿಸಲು ಅನುಮಿತಶಬ್ದವನ್ನು ಅನುವಾದ ಮಾಡಿ ಅರ್ಥ ಹೇಳುವರು.

**ಅನುಮಿತಃ ಶಾಸ್ತ್ರಲೋಕಾನುಸಾರೇಣ ಜ್ಞಾತಃ ।**

ಶಾಸ್ತ್ರದಿಂದಲೂ ಲೋಕಸಿದ್ಧ ದೃಷ್ಟಾಂತದಲ್ಲಿ ಗೃಹೀತವಾದ ವ್ಯಾಪ್ತಿಮೂಲಕ ಅನುಮಾನದಿಂದಲೂ ಯಥಾವತ್ತಾಗಿ ತಿಳಿಯಲ್ಪಟ್ಟ ಎಂದರ್ಥ.

ಈ ವಿಷಯದಲ್ಲಿ ಅಭಿಧಾನ ಹೇಳುವರು.

**ಅನುಮೇತಿ ದ್ವಯಂ ಪ್ರಾಹುರ್ಯಥಾಜ್ಞಾನಂ ಚ ಲಿಂಗಜಂ । ಇತ್ಯಭಿಧಾನಂ**

ಅನುಮಾಶಬ್ದದಿಂದ ಶಾಸ್ತ್ರಜನ್ಯವಾದ ಯಥಾರ್ಥಜ್ಞಾನವು ಮತ್ತು ಲಿಂಗಜನ್ಯ ಯಥಾರ್ಥಜ್ಞಾನವು ಹೀಗೆ ಎರಡು ವಿಧವಾದವು ಎಂದು ತಿಳಿದವರು ಹೇಳುವರು ಎಂದು ಅಭಿಧಾನವಿದೆ. ಕಾರಣ ಅನುಮಿತಃ ಎಂದರೆ ಎರಡು ವಿಧ ಅರ್ಥವಾಗುವುದು.

ಹೇಳಿರುವ ಲಕ್ಷಣವಿಶಿಷ್ಟವಾಗಿ ಎರಡು ರೀತಿಯ ಕಾಲವನ್ನು ತಿಳಿಸುವ ಶಾಸ್ತ್ರವನ್ನು ತಿಳಿಸುವರು.

**''ಯಾವಂತಂ ದೇವಲೋಕಸ್ಥೋ ಮಾನುಷಸ್ತ್ವವಧಾರಯೇತ್ ।**
**ಮಹಾಪ್ರಾಜ್ಞೋ ದೇವಜೂಕಃ ಸ ಕಾಲಃ ಪರಮಾಣುಕಃ ॥**
**ಸರ್ಗಾದ್ಯೈರನವಚ್ಛಿನ್ನಸ್ತದನಂತರ ಇತ್ಯಪಿ ।**
**ತಥೈವ ಪರಮಾಣ್ವಾದಿವಿಶೇಷಾತ್ಮಾಪಿ ನೋ ಭವೇತ್ ।**
**ಪೂರ್ವಾಪರಾದಿಭೇದೋಽಪಿ ಸ ಕಾಲಃ ಪರಮೋ ಮಹಾನ್'' ॥**

**ಇತಿ ಬ್ರಹ್ಮತರ್ಕೇ ।**

ಹಿಂದೆ 'ಚರಮಸ್ತುವಿಶೇಷಾಣಾಂ' ಎಂದು ದ್ರವ್ಯಪರಮಾಣುವಿಗೆ ಏನು ಲಕ್ಷಣವನ್ನು ದೇವಲೋಕದಲ್ಲಿರುವ ಮನುಷ್ಯರು ಅಂಶಾಂಶಿವಿಭಾಗವನ್ನು ಬಿಟ್ಟು ನೋಡುವರು ಎಂದು ಹೇಳಿರುವರೋ ಅದನ್ನೇ ಇಲ್ಲಿ ಕಾಲ ಪರಮಾಣುವಿಗೆ ಹೇಳುವರು - ಯಾವಂತಂ=ಅನಂತಾಂಶೋಪೇತವಾಗಿದ್ದರೂ ತ್ರ್ಯಣುಕಕಾಲದ ಆರನೇ ಭಾಗವಾದ ಕಾಲವನ್ನು ತು=ಅಂಶಾಂಶಿವಿಭಾಗವನ್ನು ಬಿಟ್ಟು ದೇವಲೋಕಸ್ಥಃ= ಯಜ್ಞಾದಿಗಳನ್ನು ಮಾಡಿ ದೇವಲೋಕದಲ್ಲಿರುವ ಮಹಾಪ್ರಾಜ್ಞಃ=ಜ್ಞಾನಿಯಾದ ದೇವಜೂಕಃ=ಯಜ್ಞಾದಿಗಳಿಂದ ದೇವತಾನುಗ್ರಹ ಪಡೆದ ಮಾನುಷಃ= ಮನುಷ್ಯನು ಅವಧಾರಯೇತ್=ನೋಡುವನೋ ಸಃ ಕಾಲಃ=ಆ ಕಾಲವು ಪರಮಾಣುಕಃ=ಪರಮಾಣುವೆಂದು ತಿಳಿಯಲ್ಪಡುವುದು.

ಸರ್ಗಾದ್ಯೈಃ ಅನವಚ್ಛಿನ್ನಃ=ಸೃಷ್ಟಿ ಸ್ಥಿತಿ, ಸಂಹಾರಗಳಿಂದ ಕೂಡದಿರುವ ಅಂದರೆ ಸೃಷ್ಟಿಕಾಲ, ಸ್ಥಿತಿಕಾಲ, ಸಂಹಾರಕಾಲಗಳಿಂದ ಭಿನ್ನವಾದ ತದನಂತರಇತ್ಯಪಿ=ಸೃಷ್ಟಿ ಅನಂತರಕಾಲ ಅದಕ್ಕಿಂತ ಹೆಚ್ಚಿನ ಕಾಲ ಮುಂತಾಗಿ ಹೇಳದಿರುವ ತಥೈವ=ಅದರಂತೆ ಪರಮಾಣ್ವಾದಿವಿಶೇಷಾತ್ಮಾ=ಪರಮಾಣು ದ್ವ್ಯಣುಕ ಮುಂತಾದ ಕಾಲವಿಶೇಷಗಳು. ನೋ ಭವೇತ್=ಪರಮಾಣುಕಾಲವಾಗಲಾರವು ಅಂದರೆ ಅವುಗಳಿಂದಲೂ ಭಿನ್ನವಾದ ಪೂರ್ವಾಪರಾದಿಭೇದೋ ನ=ಪೂರ್ವಕಾಲ, ಅಪರಕಾಲವೆಂಬ ಏಕದೇಶಕಾಲವೂ ಅಲ್ಲದ್ದು ಯಾವುದೋ ಸಃ=ಅದು ಪ್ರವಾಹತಃ=ಅಪರಿಚ್ಛಿನ್ನ-

ವಾದುದು ಪರಮಮಹಾನ್=ಪರಮಮಹಾಶಬ್ದವಾಚ್ಯವು ಕಾಲಪ್ರವಾಹ-ವೆಂದರ್ಥ. (ಲಕ್ಷ್ಯವು).

ಮೂಲದಲ್ಲಿ ಏವಂ ಎಂದು ಸ್ವರೂಪಾವಸ್ಥಿತ ಮುಂತಾಗಿ ಏನು ಪರಮಮಹದ್ದ್ರವ್ಯದಲಕ್ಷಣ ಹೇಳಿರುವರೋ ಅದನ್ನು ದಾರ್ಷ್ಟಾಂತಿಕವಾದ ಪರಮಮಹತ್ಕಾಲದಲ್ಲಿ ಅತಿದೇಶ ಮಾಡಿರುವರು. ಪ್ರಮಾಣದಲ್ಲಿಯಾದರೂ ಬೇರೇ ಲಕ್ಷಣವೇ ಹೇಳಿದೆ, ಕಾರಣ ವಿರೋಧ ಎಂದು ಶಂಕಿಸಿ ಸಮಾಧಾನ ಹೇಳುವರು–

**ಸ್ವರೂಪಾವಸ್ಥಿತಸ್ಯ ಕೈವಲ್ಯಂ ಅವಿಶೇಷಃ ನಿರಂತರಃ ಇತ್ಯೇತಾನಿ ವಿಶೇಷಣಾನಿ ಕ್ರಮೇಣ ಪರಮಮಹತಃ ಕಾಲಸ್ಯಾಪಿ ಅತ್ರ ಉಕ್ತಾನಿ ॥**

ಈ ಪ್ರಮಾಣದಲ್ಲಿಯೂ ಆರ್ಥಿಕವಾಗಿ ಆ ಎಲ್ಲ ವಿಶೇಷಣಗಳೂ ಹೇಳಲ್ಪಟ್ಟಿವೆ. ಸ್ವರೂಪಾವಸ್ಥಿತ ಎಂಬುದರ ತಾತ್ಪರ್ಯವೇ 'ಸರ್ಗಾದ್ಯೈಃ ಅನವಚ್ಛಿನ್ನಃ' ಎಂಬುದು. ಕೈವಲ್ಯ ಎಂಬುದರ ತಾತ್ಪರ್ಯವೇ 'ತದನಂತರ ಇತ್ಯಪಿ' ಎಂಬುದು. ಅವಿಶೇಷಃ ಎಂಬುದರ ಅರ್ಥವೇ 'ಪರಮಾಣ್ವಾದಿವಿಶೇಷಾತ್ಮಾಪಿ ನೋ ಭವೇತ್' ಎಂಬುದು. ನಿರಂತರ ಎಂಬುದರ ಅರ್ಥವೇ ಪೂರ್ವಾಪರವಿಭೇದೋ ನ' ಎಂಬುದು ಎಂದು ತಿಳಿಯಬೇಕು. ವಿಮತಃ ಕಾಲಃ,(ಪಕ್ಷಃ) 'ಪರಮಾಣುಪದವಾಚ್ಯಃ(ಸಾಧ್ಯ) ತಲ್ಲಕ್ಷಣವತ್ವಾತ್ ಲಿಂಗ ಪಕ್ಷ ದ್ರವ್ಯಪರಮಾಣುವತ್ (ದೃಷ್ಟಾಂತ) (ವಿವಾದಾಸ್ಪದಃ ಕಾಲಃ ಪರಮಮಹಾನ್ ಇತಿವ್ಯವಹರ್ತವ್ಯಃ ತಲ್ಲಕ್ಷಣವತ್ವಾತ್ ಶೂನ್ಯನಾಮಕ ಬ್ರಹ್ಮವತ್) ಎಂಬ ಅನುಮಾನಗಳನ್ನೂ ಹೇಳಬಹುದು.

ಇಲ್ಲಿ ಕಾಲಶಬ್ದವು ಉಪಲಕ್ಷಕವಾದ್ದರಿಂದ ಪ್ರಕೃತ್ಯಾದಿಗಳೂ ದಾರ್ಷ್ಟಾಂತಿಕದಲ್ಲಿ ಸೇರಿವೆ ಎಂದು ಹೇಳಿದೆ. ಆದರೆ ಅವುಗಳಲ್ಲಿ ಎಲ್ಲಿಯೂ ತ್ರಿವಿಧಾನಂತ್ಯರೂಪ ಪರಮಮಹತ್ವವೂ ಇಲ್ಲ. ಗುಣತಃ ಆನಂತ್ಯ ಶ್ರೀಹರಿಯನ್ನು ಬಿಟ್ಟು ಬೇರೆಲ್ಲಿಯೂ ಇಲ್ಲ. ಆದ್ದರಿಂದ ಇಲ್ಲಿ ಪ್ರಕೃತಿ ಕಾಲಾದ್ಯಂತರ್ಯಾಮಿ ಶ್ರೀಹರಿಯೇ ದಾರ್ಷ್ಟಾಂತಿಕನೆಂದು ಹೇಳಲು ಬೇರೆ ಕಡೆಯಲ್ಲಿ ತ್ರಿವಿಧಾನಂತ್ಯವಿಲ್ಲವೆನ್ನಲೂ ಪ್ರಮಾಣ ಹೇಳುವರು–

**''ದೇಶತಃ ಕಾಲತಶ್ಚೈವ ವಸ್ತುತಶ್ಚತ್ರಿಧಾ ಹರೇಃ ।**
**ಯಥಾನಂತ್ಯಂ ನ ಚಾನ್ಯಸ್ಯ ಪ್ರಕೃತೇರ್ದೇಶಕಾಲತಃ ॥**
**ತಥಾ ಶಬ್ದಸ್ಯ ಕಾಲಸ್ಯ ದೇಶಾನಂತ್ಯಂ ನ ಕಾಲತಃ ।**
**ಕಾಲಶಬ್ದಾತ್ಮಿಕಾ ಸೈವ ತಥಾಪಿ ತು ಹರೇಃ ಸದಾ ॥**

**ನಾಸ್ಯಾಃ ಸಾಮರ್ಥ್ಯಲೇಶೋಽಪಿ ಜ್ಞಾನಾನಂದಗುಣೇಷ್ವಪಿ ।**
**ಜ್ಞೇಯಸ್ತದವರೋ ವಾಯುಃ ಶೇಷವೀಂದ್ರಹರಾಸ್ತತಃ ॥**
**ಅವರಾಸ್ತತ ಇಂದ್ರಾದ್ಯಾ ಗುಣೈಃ ಸರ್ವೈರ್ನ ಸಂಶಯಃ'' ।**

**ಇತಿ ಬ್ರಹ್ಮವೈವರ್ತೇ ।**

ಹೇಗೆ ಪರಮಾತ್ಮನಿಗೆ ದೇಶ, ಕಾಲ, ವಸ್ತು (ಗುಣ)ಗಳಿಂದ ಮೂರು ರೀತಿಯ ಆನಂತ್ಯವಿದೆಯೋ ಆ ರೀತಿ ಬೇರೆಯವರಿಗೆ ಇಲ್ಲ. ಪ್ರಕೃತಿಗೆ ಮತ್ತು ವರ್ಣಾತ್ಮಕ-ಶಬ್ದಕ್ಕೂ ದೇಶಕಾಲಗಳಿಂದ ಮಾತ್ರ ಆನಂತ್ಯವಿದೆ. ಕಾಲಕ್ಕೆ (ಕ್ಷಣಲವಾದಿಕಾಲಕ್ಕೆ) ದೇಶಾನಂತ್ಯವಿದೆ ಕಾಲಾನಂತ್ಯವಿಲ್ಲ. ಜಡಗಳಿಗೆ ಗುಣಾನಂತ್ಯ ಇಲ್ಲದಿದ್ದರೂ ಚೇತನ ಪ್ರಕೃತಿಗೆ ಇರಬಹುದೆ ಎಂದರೆ ಹೇಳುವರು – ಕಾಲಾಭಿಮಾನಿನೀ ಶಬ್ದಾಭಿಮಾನಿ-ನೀಯೂ ಸೈವ=ಚೇತನಪ್ರಕೃತಿಯೇ (ಲಕ್ಷ್ಮೀದೇವಿಯೇ) ಆದರೂ ಅವಳಿಗೆ ಶ್ರೀಹರಿಯ ಸಾಮರ್ಥ್ಯಲೇಶಕ್ಕೆ ಸಮಾನವಾದ ಸಾಮರ್ಥ್ಯವೂ ಇಲ್ಲ. ಜ್ಞಾನಾನಂದಾದಿಗಳಲ್ಲಿಯೂ ಸಾಮ್ಯವಿಲ್ಲ. ವಾಯುವು ಲಕ್ಷ್ಮಿಗಿಂತ ಕಡಿಮೆ. ಶೇಷಗರುಡರುದ್ರರು ವಾಯುವಿಗಿಂತ ಕಡಿಮೆಯವರು. ಅವರುಗಳಿಗಿಂತ ಇಂದ್ರಾದಿಗಳು ಎಲ್ಲ ಗುಣಗಳಿಂದ ಅವರರು. ಇದರಲ್ಲಿ ಸಂಶಯವಿಲ್ಲವೆಂದು ತಿಳಿಯಬೇಕು ಎಂದು ಬ್ರಹ್ಮವೈವರ್ತದಲ್ಲಿದೆ. ಕಾರಣ ತ್ರಿವಿಧಾನಂತ್ಯ ಬೇರೆಯವರಿಗೆ ಬರುವುದಿಲ್ಲ. ಅದನ್ನು ಕೂಡಿಸಲು ಕಾಲಾಂತರ್ಯಾಮಿ ಹರಿರೂಪವೇ ದಾರ್ಷ್ಟಾಂತಿಕ ಎಂಬ ಅಭಿಪ್ರಾಯದಿಂದ ಎರಡೂ ಶ್ಲೋಕಗಳ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು-

**''ಅಣ್ವಾದಿಕಾಲಸಂಸ್ಥಾನಭೋಕ್ತೃತ್ವಾತ್ ಪರಮೇಶ್ವರಃ ।**
**ಅಣ್ವಾದಿನಾಮವಾಚ್ಯೋಽಸೌ ಕಾಲಶ್ಚೇತ್ಯಭಿಧೀಯತೇ'' ॥ ಇತಿ ಚ ।**

ಅಣುವಾದ ಕಾಲದಲ್ಲಿ ನಿಯಾಮಕನಾಗಿ ಅದೇ ಅವಸ್ಥೆಯಿಂದಿರುವ-ನಾದ್ದರಿಂದ ಪರಮಾತ್ಮನು ಪರಮಾಣ್ವಾದಿನಾಮಗಳಿಂದ ವಾಚ್ಯನಾಗುವನು. ಅಪರಿಚ್ಛಿನ್ನ ಕಾಲನಿಯಾಮಕನಾಗಿ ಪರಮಮಹಾನ್‌ಕಾಲ ಎನಿಸುವನು. ಅಣ್ವಾದಿ-ನಾಮವಾಚ್ಯ ಎಂಬುದರಿಂದ ಎರಡನೇ ಶ್ಲೋಕದ ತಾತ್ಪರ್ಯ. ಕಾಲಶ್ಚ ಎಂದು ಮೊದಲನೆ ಶ್ಲೋಕದ ತಾತ್ಪರ್ಯ. ಪರಮೇಶ್ವರಃ ಎಂಬುದು ಭಗವಾನ್ ಎಂಬುದರ ತಾತ್ಪರ್ಯ ಸ ಕಾಲಃಪರಮೋ ಮಹಾನ್ ಎಂಬ ಪದಗಳ ತಾತ್ಪರ್ಯ ಅಣ್ವಾದಿನಾಮವಾಚ್ಯೋಽಸೌ ಎಂಬುದು.

ಸತೋ ಅವಿಶೇಷಭುಕ್ ಎಂಬುದನ್ನು ವ್ಯಾಖ್ಯಾನಿಸುವರು.

**"ಸತೋ ಬ್ರಹ್ಮಣಃ ಅವಿಶೇಷಂ ಸ್ವರೂಪಂ ಯಃ ಕಾಲಃ ಕಾಲಾಂತರ್ಯಾಮೀ ತದೇವ ಬ್ರಹ್ಮ ಭುಂಕ್ತೇ । ತದಪಿ ಬ್ರಹ್ಮ ಪರಮಮಹಾನ್ । ತಸ್ಯಾಪಿ ತ್ರಿಧಾ ಪರಿಚ್ಛೇದಾಭಾವಾತ್ ॥**

**'ಸರ್ವಂ ಸರ್ವತ್ರ ಭೋಕ್ತಾಪಿ ವಿಶೇಷಾದೇಕಭೋಕ್ತೃವತ್ ।**
**ಸ್ಥಿತೋ ಹರಿರಚಿಂತ್ಯಾತ್ಮಾ ನಿಜೈಶ್ವರ್ಯಾದಜೋ ವಿಭುಃ" ॥**

**ಇತಿ ಬ್ರಹ್ಮತರ್ಕೇ ।**

ಸತ್‌ಶಬ್ದಮುಖ್ಯಾಭಿಧೇಯನಾದ ಶೂನ್ಯನಾಮಕನಾದ ಅಖಂಡಸ್ವರೂಪಾವಸ್ಥಾವನ್ನನುಭವಿಸುವವನೇ ಕಾಲಾಂತರ್ಯಾಮಿಯು. ಅವನು ಪರಮಮಹಾಪರಿಮಾಣವುಳ್ಳವನು. ಕಾಲಾಂತರ್ಯಾಮಿಗೂ ಮೂರು ವಿಧ ಪರಿಚ್ಛೇದವಿಲ್ಲ, ಎಲ್ಲದರಲ್ಲಿ ಎಲ್ಲವನ್ನು ಅನುಭವಿಸಿದರೂ ತನ್ನ ಐಶ್ವರ್ಯದಿಂದ ಅಸಾಧಾರಣವಾಗಿ ಆ ಆ ವಸ್ತುಗಳ ಭೋಕ್ತೃವಿನಂತೆ ಇರುವನು. ಅಚಿಂತ್ಯಸ್ವರೂಪನು ಉತ್ಪತ್ತಿರಹಿತನು ವ್ಯಾಪ್ತನು ಎಂಬ ವಿಶೇಷಣಗಳಿಂದ ಅವನ ಐಶ್ವರ್ಯ ಅಘಟಿತಘಟಕವೆಂದು ತಿಳಿಸುವರು ॥೪॥

ಈಗ ಪರಮಾಣು ಪರಮಮಹತ್ ಇವುಗಳ ಮಧ್ಯದಲ್ಲಿರುವ ಕಾಲಾವಯವಗಳ ಪರಿಮಾಣವನ್ನು ಹಾಗೂ ಅವುಗಳ ಹೆಸರನ್ನು ಹೇಳಲು ಮೊದಲಿಗೆ ದ್ವ್ಯಣುಕ, ತ್ರ್ಯಣುಕ, ಎಂಬ ದ್ರವ್ಯಗಳ ಸ್ವರೂಪವನ್ನು ಹೇಳುವರು–

**ಅಣುರ್ದ್ವೌ ಪರಮಾಣೂ ಸ್ಯಾತ್ ತ್ರಸರೇಣುಸ್ತ್ರಯಃ ಸ್ಮೃತಃ ।**
**ಜಾಲಾರ್ಕರಶ್ಮ್ಯವಗತಃ ಖಮೇವಾನುಪತನ್ನಗಾತ್ ॥೫॥**

ದ್ವೌ ಪರಮಾಣೂ=ಎರಡು ಪರಮಾಣುಗಳು ಸೇರಿ ಅಣುಃ ಸ್ಯಾತ್=ದ್ವ್ಯಣುಕವೆಂಬ ಅಣುವಾಗುವುದು. ತ್ರಯಃ=ಮೂರು ದ್ವ್ಯಣುಕಗಳು ಸೇರಿದಾಗ ತ್ರಸರೇಣುಃ ಸ್ಮೃತಃ=ತ್ರ್ಯಣುಕ ಎನ್ನುವರು (ಪರಮಾಣು, ದ್ವ್ಯಣುಕಗಳು ಅಯೋಗಿಗಳ ಕಣ್ಣಿಗೆ ಕಾಣುವುದಿಲ್ಲ) ಜಾಲಾರ್ಕರಶ್ಮ್ಯವಗತಃ=ಕಿಡಿಕಿಯಿಂದ ಬಂದ ಸೂರ್ಯನ ಕಿರಣಗಳಿಂದ ತಿಳಿಯಲ್ಪಡುವ ಅತ್ಯಂತ ಲಘು ಆದುದರಿಂದ ಖಮೇವ=ಆಕಾಶವನ್ನು ಕುರಿತು ಅನುಪತನ್=ಹಾರಾಡುತ್ತ ಅಗಾತ್=ತಿಳಿಯಲ್ಪಡುವುದು.

ಇಲ್ಲಿ ನಗಾತ್=ಎಂಬ ಪದಚ್ಛೇದದ ಭ್ರಮನಿವಾರಿಸಲು ಪದಚ್ಛೇದ ತೋರಿಸಿ ಅರ್ಥ ಹೇಳುವರು –

**ಅಗಾತ್, ದೃಷ್ಟಿವಿಷಯಂ ಪ್ರಾಪ್ಯ ಜ್ಞಾತಃ ಇತ್ಯರ್ಥಃ ।**

ಇಂದ್ರಿಯಗೋಚರವಾಗಿ ತಿಳಿದ ಎಂದರ್ಥ.

ತ್ರುಟಿಕಾಲವನ್ನಾರಂಭಿಸಿ ಕಾಲಸ್ವರೂಪ ಹೇಳುವರು –

**ತ್ರಸರೇಣುತ್ರಿಕಂ ಭುಂಕ್ತೇ ಯಃ ಕಾಲಃ ಸಾ ತ್ರುಟಿಃ ಸ್ಮೃತಾ ।**
**ತತ್ರಿಭಾಗಸ್ತು ವೇಧಃ ಸ್ಯಾತ್ ತೈಸ್ತ್ರಿಭಿಸ್ತು ಲವಃ ಸ್ಮೃತಃ ॥೬॥**

ಯಃ=ಯಾವ ಕಾಲವು ತ್ರಸರೇಣುತ್ರಿಕಂ ಭುಂಕ್ತೇ=ಮೂರು ತ್ರ[illegible]ಣುಕದ್ರವ್ಯ-ಸಮ ಪರಿಮಾಣವುಳ್ಳದ್ದು ಮತ್ತು ತದಂತರ್ಗತ ಭಗವಂತನು ಸಾ ತ್ರುಟಿಃ=ಆ ಕಾಲವು ತ್ರುಟಿ ಎನಿಸುವುದು. ಶ್ರೀಹರಿಗೂ ತ್ರುಟಿ ಎಂದು ನಾಮವಿದೆ. ಎಂದು ತಿಳಿಯಬೇಕು. ತತ್ರಿಭಾಗಃ=ಮೂರು ತ್ರುಟಿಗಳು ಸೇರಿದರೆ ವೇಧಃ=ಒಂದು ವೇಧವೆಂದು ಹೆಸರು. ತೈಃ ತ್ರಿಭಿಃ=ಆ ಮೂರು ವೇಧಗಳಿಂದ ಕೂಡಿದ ಕಾಲವು ಲವಃ=ಲವವೆಂದು ಸ್ಮೃತಃ=ಹೇಳಲ್ಪಟ್ಟಿದೆ. ದ್ವಣುಕಸಮವಾದುದು ದ್ವಣುಕಕಾಲ, ತ್ರಣುಕಸಮವಾದುದು ತ್ರಣುಕಕಾಲ ಎಂದೂ ತಿಳಿಯಬೇಕು. ಶಾಸ್ತ್ರದಲ್ಲಿ ಹೆಚ್ಚು ಬಳಸದಿರುವುದರಿಂದ ಕಂಠತಃ ಹೇಳಿಲ್ಲ ॥೬॥

**ನಿಮೇಷಸ್ತ್ರಿಲವೋ ಜ್ಞೇಯ ಆಮ್ನಾತಾಸ್ತೇ ತ್ರಯಃ ಕ್ಷಣಃ ।**
**ಕ್ಷಣಾನ್ ಪಂಚ ವಿದುಃ ಕಾಷ್ಠಾಂ ಲಘು ತಾ ದಶ ಪಂಚ ಚ ॥೭॥**

ತ್ರಿಲವಃ=ಮೂರು ಲವ ಎಂದರೆ ನಿಮೇಷಃ=ಒಂದು ನಿಮೇಷವೆಂದು ಜ್ಞೇಯಃ ತಿಳಿಯಬೇಕು. ತೇ ತ್ರಯಃ=ಆ ಮೂರು ನಿಮೇಷಗಳು ಕ್ಷಣಃ ಅಮ್ನಾತಃ= ಕ್ಷಣವೆಂದು ಹೇಳಲ್ಪಟ್ಟಿದೆ. ಪಂಚ ಕ್ಷಣಾನ್=ಐದು ಕ್ಷಣಗಳನ್ನು ಕಾಷ್ಠಾಂ ವಿದುಃ= ಕಾಷ್ಠಾ ಎಂದು ತಿಳಿಯುವರು. ತಾಃ=ಆ ಕಾಷ್ಠಾಗಳು ದಶ ಪಂಚ ಚ=ಹತ್ತು ಮತ್ತು ಐದು ಅರ್ಥಾತ್ ಹದಿನೈದು ಕಾಷ್ಠಾ ಎಂದರೆ ಒಂದು ಲಘು=ಲಘು ಎಂಬ ಕಾಲವಾಗುವುದು. ॥೭॥

**ಲಘೂನಿ ವೈ ಸಮಾಮ್ನಾತಾ ದಶ ಪಂಚ ಚ ನಾಡಿಕಾ ।**
**ತೇ ದ್ವೇ ಮೂಹೂರ್ತಃ ಪ್ರಹರಃ ಷಡ್ ಯಾಮಃ ಸಪ್ತ ವಾ ನೃಣಾಂ ॥**

ದಶ ಪಂಚ ಲಘೂನಿ ನಾಡಿಕಾ ಸಮಾಮ್ನಾತಾ=ಹದಿನೈದು ಲಘುಗಳು ಸೇರಿ ಒಂದು ನಾಡಿಕಾ, ಅಂದರೆ ಘಟಿಕಾ. ತೇ ದ್ವೇ=ಆ ಎರಡು ಘಟಿಕಾ ಎಂದರೆ ಮೂಹೂರ್ತಃ=ಒಂದು ಮೂಹುರ್ತವೆನಿಸುವುದು. ಷಟ್ ನಾಡಿಕಾಃ=ಆರು ಘಟಿಕಾಗಳೆಂದರೆ ಪ್ರಹರಃ=ದಿವಸದ ಐದನೆಯ ಒಂದು ಭಾಗವು. ಸಪ್ತ ನಾಡಿಕಾಃ= ಏಳು ಘಟಿಕಾಗಳು ಎಂದರೆ ಯಾಮಃ=ದಿವಸದ ನಾಲ್ಕನೇ ಒಂದು ಭಾಗವು.

ಸಪ್ತ ವಾ ಎಂದು ವಿಕಲ್ಪವಿದೆ ಅದರ ಅಭಿಪ್ರಾಯ ಹೇಳುವರು -

**ರಾಶಿಭೇಧಾತ್ ಊನಾತಿರೇಕಾತ್ ಸಪ್ತವೇತಿ ।**

ಇಲ್ಲಿ ರಾಶಿಯೆಂದರೆ ಸಂಕ್ರಮಣ ಎಂದು ತಿಳಿಯಬೇಕು. ಅಂದರೆ ಕರ್ಕಾದಿ ಸಂಕ್ರಮಣ ಭೇದಕ್ಕನುಸರಿಸಿ ನಾಡಿಗಳು ಹೆಚ್ಚು ಕಡಿಮೆಯಾಗುವುದರಿಂದ ವಾ=ಎಂದು ವಿಕಲ್ಪ ಹೇಳಿರುವರು. ಇದೆಲ್ಲ ಮನುಷ್ಯಮಾನದಿಂದ ಎಂಬುದನ್ನು ನೃಣಾಂ ಎಂದು ಸೂಚಿಸಿರುವರು.

ಕರ್ಕಸಂಕ್ರಮಣದಿಂದ ಪ್ರಾರಂಭಿಸಿ ಧನುಷಂಕ್ರಮಣದವರೆಗೆ ನಾಡಿಗಳು ಕ್ರಮವಾಗಿ ಕಡಿಮೆಯಾಗುವುದರಿಂದ ಧನುಃಸಂಕ್ರಮಣ ಕಾಲದಲ್ಲಿ ಒಂದು ಯಾಮವೆಂದರೆ ಏಳು ನಾಡಿಗಳು. ಮಕರಸಂಕ್ರಮಣದಿಂದ ಮಿಥುನ ಸಂಕ್ರಮಣದವರೆಗೆ ನಾಡಿಗಳು ಕ್ರಮವಾಗಿ ಹೆಚ್ಚಾಗುವುದರಿಂದ ಮಿಥುನ ಸಂಕ್ರಮಣ ಸಮಯದಲ್ಲಿ ಒಂದು ಯಾಮಕ್ಕೆ ಎಂಟು ನಾಡಿಗಳಿರುವುವು. ಮೇಷತುಲಾಸಂಕ್ರಮಣ ಸಮಯದಲ್ಲಿ ಏಳುವರಿ ನಾಡಿಗಳು ಒಂದು ಯಾಮಕ್ಕೆ ಈ ವಿಶೇಷವನ್ನು ತಿಳಿಸಲು ವಾ ಎಂದಿರುವರು ಎಂದು ಭಾವ ॥೮॥

ನಾಡಿಕಾವನ್ನು ತಿಳಿಯಲು ನಾಡಿಕಾಪಾತ್ರ (ಘಳಿಗೆಬಟ್ಟಲು)ದ ಲಕ್ಷಣ ಹೇಳುವರು -

**ದ್ವಾದಶಾರ್ಧಪಲೋನ್ಮಾನಂ ಚತುರ್ಭಿಶ್ಚತುರಂಗುಲೈಃ ।**
**ಸ್ವರ್ಣಮಾಷೈಃ ಕೃತಚ್ಛಿದ್ರಂ ಯಾವತ್ ಪ್ರಸ್ಥಜಲಂ ಪಿಬೇತ್ ॥೯॥**

ದ್ವಾದಶಾರ್ಧಪಲೋನ್ಮಾನಂ=ಆರುಪಲ (೧೮ ತೊಲ) ತೂಕವುಳ್ಳ ತಾಮ್ರದ ನಾಡಿಜ್ಞಾನಸಾಧನವಾದ ಪಾತ್ರವು ಚತುರ್ಭಿಃ ಸ್ವರ್ಣಮಾಷೈಃ=ನಾಲ್ಕು ಮಾಷತೂಕದಿಂದ ನಿರ್ಮಿತವಾದ ಚತುರಂಗುಲೈಃ=ನಾಲ್ಕು ಅಂಗುಲ ಎತ್ತರವಾಗಿ ಮಾಡಲ್ಪಟ್ಟ ಸೂಜಿಯಿಂದ ಕೃತಚ್ಛಿದ್ರಂ=ತೂತು ಮಾಡಲ್ಪಟ್ಟಿದ್ದು ಪ್ರಸ್ಥಜಲಂ ಯಾವತ್ ಪಿಬೇತ್=ಎಷ್ಟು ಕಾಲದಲ್ಲಿ ಪ್ರಸ್ಥಪರಿಮಿತ (ಪೂರ್ವ ಕಾಲದ ಧಾನ್ಯ ಅಳೆಯುವ ಸೇರಿಗೆ ಪ್ರಸ್ಥ ಎನ್ನುವರು) ನೀರನ್ನು ಕುಡಿಯುವುದೋ ಅಂದರೆ ನೀರಿನಿಂದ ತುಂಬಿ ಮುಳುಗುವುದೋ ಆ ಕಾಲಕ್ಕೆ ಒಂದು ನಾಡಿಕಾ=ಘಟಿಕಾ ಎನ್ನುವರು. ಪಾತ್ರೆಯ ತೂಕವಾಗಲಿ ಛಿದ್ರವಾಗಲಿ ಹೆಚ್ಚಾದರೆ ಬೇಗನೆ ಕಡಿಮೆಯಾದರೆ ವಿಲಂಬವಾಗಿ ತುಂಬುವುದು ಕಾರಣ ಎರಡರ ನಿಯಮ ಹೇಳಿರುವರು.

ಶ್ಲೋಕದ ಸರಿಯಾದ ಅರ್ಥ ಆಗುವುದಕ್ಕಾಗಿ ಮಾಷಶಬ್ದಾರ್ಥ ಹೇಳಲು ಉಪಯುಕ್ತ ವಿಷಯವನ್ನು ಪ್ರಮಾಣದಿಂದ ಹೇಳುವರು –

"ಕಾಕಣಿಕಾಚತುಷ್ಕಂ ತು ವಿಂಶಾಂಶೇತ್ಯಭಿಧೀಯತೇ ।
ಕೃಷ್ಣಲೇತ್ಯಪಿ ತಂ ಬ್ರೂಯುಸ್ತೈಶ್ಚತುರ್ಭಿಸ್ತು ಮಾಷಕಂ ॥
ಚತುರಂಗುಲದೀರ್ಘೇ ತು ಕೃತೇ ಮಾಷಚತುಷ್ಟಯೇ ।
ಯಾವತ್ ಸ್ಯಾತ್ ಪರಿಣಾಹೇನ ತಾವತ್‌ದ್ವಾರಂ ವಿಧೀಯತೇ ।
ಪ್ರಸ್ಥಸ್ಯ ನಾಡೀಪಾತ್ರಸ್ಯ ಷಟ್‌ಪಲಸ್ಯ ಶುಭೇ ಜಲೇ ।
ಭಾರಾಧಿಕ್ಯೇನೋದಕೇನ ಕ್ಷಿಪ್ರಂ ಪೂರ್ತಿರ್ಭವಿಷ್ಯತಿ ॥
ಅತಿಶೈತ್ಯೇ ಕಲಂಕೇ ಚ ನಾದ್ಯೇ (ಮಾಘೇ) ನೈವ ತು ಪೂರಣಂ ।
ತಸ್ಮಾದ್ವಸಂತಕಾಲೇ ತು ಪ್ರಯಾಗಸ್ಥೋದಕೇನ ತು ।
ನಾಡೀಶುದ್ಧಿಪರೀಕ್ಷಾ ಸ್ಯಾತ್ ಅನ್ಯಥಾ ನ ಸಮಂ ಭವೇತ್ ॥ಇತಿ ಪಾದ್ಮೇ ।
ನಿರ್ಮಲೇನ ಸಮೋಷ್ಣೇನ ನಿತ್ಯಸೂರ್ಯಾಂಶುವಾರಿಣಾ ।
ಪ್ರವಾಹಗೇನ ಕಾರ್ಯಾ ಸ್ಯಾತ್ ಕಾಲಶುದ್ಧಿಃ ಸದೈವ ತು ॥ಇತಿ ಬ್ರಹ್ಮಾಂಡೇ

೪ ಕಾಕಣಿಕಾ ೧ ಗುಂಜಿ,ಸಾಮಾನ್ಯವಾಗಿ ಮೂರುತೊಲೆ ಎಂದರೆ ಒಂದು ಪಲ, ೪ ಗುಂಜಿ ೧ ಮಾಸಿ, ೧೬ ಮಾಸಿ ೧ ಕರ್ಷ, ೪ ಕರ್ಷ ೧ ಪಲ, ೪ ಪಲ ೧ ಕುಡವ, ೪ ಕುಡವ ೧ ಪ್ರಸ್ಥ. ಹೀಗೆ ಪರಿಮಾಣಕೋಷ್ಟಕ. ಇಂಥ ನಾಲ್ಕು ಕಾಕಣಿಕಾ ತೂಕಕ್ಕೆ ವಿಂಶಾಂಶ ಎನ್ನುವರು. ಅದಕ್ಕೆ ಕೃಷ್ಣಲಾ ಎಂದೂ ಕರಯುವರು. (ಇದೇ ಗುಂಜಿ) ನಾಲ್ಕು ಕೃಷ್ಣಲಾ ಎಂದರೆ ಒಂದು ಮಾಷಕ. ನಾಲ್ಕು ಮಾಸಿ ತೂಕದ ನಾಲ್ಕು ಅಂಗುಲ ಎತ್ತರದ ಒಂದು ತಂತಿ (ಸೂಜಿ)ಯಿಂದ ರಂಧ್ರವು. ಶುಭ್ರವಾದ ನೀರಿನಲ್ಲಿ ಚೆನ್ನಾಗಿ ಇಟ್ಟಿರುವ ಅಥವಾ ಪ್ರಸ್ಥ ಜಲಪೂರ್ತಿಗೆ ಯೋಗ್ಯವಾದ ಆರು ಪಲತೂಕದ (ಸುಮಾರು ೧೮ ತೊಲ) ಘಟಿಕಾ ಪಾತ್ರಕ್ಕೆ ದ್ವಾರವು ರಂಧ್ರವು ವಿಹಿತವಾಗಿದೆ. ಅದರಿಂದಲೇ ರಂಧ್ರ ಮಾಡಬೇಕೆಂದರ್ಥ. ಬಹು ಭಾರವಾದ ನೀರಿನಿಂದ ಬೇಗನೆ ಪಾತ್ರೆಯು ತುಂಬುವುದು ಬಹಳ ತಣ್ಣಗಿದ್ದರೂ ರಾಡಿ ಇದ್ದರು ಬೇಗ ತುಂಬುವುದು.

ಮಾಂದ್ಯೇನ ಎಂದು ಪಾಠಾಂತರ ಮಂದವಾದ ನೀರಿನಿಂದ ಮಾಘಮಾಸದಲ್ಲಿ (೧. ಮಾಘೇ ನೈವ ೨. ಮಾಂದ್ಯೇನ್ನೈವ ೩. ನಾದ್ಯೇನ್ನೈವ ಹೀಗೆ ಮೂರು ಪಾಠಗಳಿವೆ) ನೀರು ತುಂಬಬಾರದು ಎಂದರ್ಥ. (ನಾದ್ಯೇನ್ನೈವ ನದಿಯ ನೀರಿನಿಂದಲೇ ತುಂಬಬೇಕು) ಬೇರೆ ಕಾಲದಲ್ಲಿ ಬೇರೆ ನೀರುಗಳಿಂದ ಸರಿಯಾದ ಜ್ಞಾನವಾಗದ ಕಾರಣ ವಸಂತಕಾಲದಲ್ಲಿ ಪ್ರಯಾಗದಲ್ಲಿಯ ನೀರಿನಿಂದಲೇ

ನಾಡಿಯ ಶುದ್ಧವಾದ ಪರೀಕ್ಷೆಯಾಗುವುದು. ಇಲ್ಲವಾದರೆ ಸರಿಯಾಗಿ ಆಗಲಾರದು ಎಂದು ಪಾದ್ಮ ಪುರಾಣದಲ್ಲಿದೆ. ಪ್ರಯಾಗದಿಂದ ನೀರು ದೊರೆಯದಿರುವಾಗ ನಿರ್ಮಲವಾದ ಸಮಶೀತೋಷ್ಣವಾದ ಭಾರವಿಲ್ಲದ, ದಿನವೂ ಸೂರ್ಯನ ಕಿರಣ ಬೀಳುವ ಪ್ರವಾಹದ ನೀರಿನಿಂದ ಶುದ್ಧವಾದ ಕಾಲವನ್ನು ತಿಳಿಯಬೇಕು ಎಂದು ಬ್ರಹ್ಮಾಂಡದಲ್ಲಿ ಹೇಳಿದೆ ॥೯॥

**ಯಾಮಾಶ್ಚತ್ವಾರಶ್ಚತ್ವಾರೋ ಮರ್ತ್ಯಾನಾಮಹನೀ ಉಭೇ ।**
**ಪಕ್ಷಃ ಪಂಚಾದಶಾಹಾನಿ ಶುಕ್ಲಃ ಕೃಷ್ಣಶ್ಚ ಮಾನದ ॥೧೦॥**

ಹೇ ಮಾನದ=ವಿದುರನೇ ಚತ್ವಾರಃ ಚತ್ವಾರಃ ಯಾಮಾಃ=ನಾಲ್ಕು ನಾಲ್ಕು ಯಾಮಗಳು ಮರ್ತ್ಯಾನಾಂ=ಮನುಷ್ಯರ ಉಭೇ ಅಹನೀ=ಹಗಲು ರಾತ್ರಿಗಳು (ನಾಲ್ಕು ಯಾಮ ರಾತ್ರಿ, ನಾಲ್ಕು ಯಾಮ ಹಗಲು ಎಂದು ಭಾವ) ಪಂಚಾದಶ ಅಹಾನಿ=ಹದಿನೈದು ದಿನಗಳು ಪಕ್ಷಃ ಶುಕ್ಲಃ ಕೃಷ್ಣಃ ಚ=ಶುಕ್ಲ ಮತ್ತು ಕೃಷ್ಣಪಕ್ಷಗಳೆರಡೂ ಪ್ರತ್ಯೇಕ ಹದಿನೈದು ದಿವಸಗಳಿಂದ ಕೂಡಿದವು.

ಇಲ್ಲಿ ಅಹನೀ ಎಂಬ ದ್ವಿವಚನದಿಂದಲೇ ಎರಡು ಎಂಬ ಅರ್ಥ ಬರುತ್ತಿರುವಾಗ ಉಭೇ ಎಂಬ ಪದ ವ್ಯರ್ಥ ಎಂಬ ಶಂಕೆಯನ್ನು ಅದಕ್ಕೆ ಸಾರ್ಥಕ್ಯ ಹೇಳುವ ಪ್ರಮಾಣದಿಂದ ಪರಿಹರಿಸುವರು –

**ಯತ್ರೋಭಯೋಃ ಸ ಶಬ್ದ ಸ್ಯಾತ್ತತ್ರ ದ್ವಿವಚನೇಽಪ್ಯುಭೇ । ಇತ್ಯಭಿಧಾನಂ ।**

ಯಾವ ವಾಕ್ಯದಲ್ಲಿ ವಿಜಾತೀಯವಾದ ಎರಡನೆ ವಸ್ತುಗಳನ್ನು ತಿಳಿಸಲು ಒಂದೇ ಶಬ್ದವನ್ನು ಪ್ರಯೋಗಿಸಿದಲ್ಲಿ ಉಭೇ ಎಂದು ಪುನಃ ಪ್ರಯೋಗಿಸಲೇಬೇಕು ಎಂದು ಭಾವ. ಅಂದರೆ ಅಹನೀ ಎಂದರೆ ಎರಡು ಹಗಲು ಎಂದರ್ಥವೂ ಆಗಬಹುದು. ಕಾರಣ ಹಗಲೂ ರಾತ್ರಿಗಳು ಎಂಬರ್ಥ ಬರಬೇಕಾದರೆ ಉಭೇ ಎನ್ನಲೇಬೇಕು.

**ತಯೋಃ ಸಮುಚ್ಚಯೇ ಮಾಸಃ ಪಿತೃಣಾಂ ತದಹರ್ನಿಶಂ ।**
**ದ್ವೌ ತಾವೃತುಃ ಷಡಯನಂ ದಕ್ಷಿಣಂ ಚೋತ್ತರಂ ದಿವಿ ॥೧೧॥**

ತಯೋಃ ಸಮುಚ್ಚಯೇ=ಶುಕ್ಲ ಕೃಷ್ಣಪಕ್ಷಗಳನ್ನು ಒಟ್ಟುಗೂಡಿಸಿದರೆ ಮಾಸಃ= ಒಂದು ತಿಂಗಳು ಎನಿಸುವುದು. ತತ್=ಆ ಒಂದು ತಿಂಗಳು ಪಿತೃಣಾಂ=ಪಿತೃಗಳ ಅಹರ್ನಿಶಂ=ಹಗಲು ರಾತ್ರಿಗಳು ಒಂದು ದಿನ. ತೌ ದ್ವೌ=ಆ ಎರಡು ತಿಂಗಳುಗಳು ಋತುಃ=ಋತು ಎನಿಸುವವು. ಷಟ್=(ಆ ತಿಂಗಳುಗಳು) ಪ್ರತ್ಯೇಕ ಆರಾದರೇ ದಕ್ಷಿಣಂ ಚ ಉತ್ತರಂ ಚ ಅಯನಂ=ದಕ್ಷಿಣಾಯನ ಉತ್ತರಾಯಣವೆನಿಸುವುವು. ದಿವಿ ಎಂಬುದಕ್ಕೆ ಮುಂದೆ ಅನ್ವಯ ॥೧೧॥

**ಅಯನೇ ಅಹನೀ ಪ್ರಾಹುರ್ವತ್ಸರೋ ದ್ವಾದಶಸ್ಮೃತಃ ।**
**ಸಂವತ್ಸರಶತಂ ನೃಣಾಂ ಪರಮಾಯುರ್ನಿರೂಪಿತಂ ॥೧೨॥**

ದಿವಿ=ಸ್ವರ್ಗದಲ್ಲಿ ಅರ್ಥಾತ್ ದೇವತೆಗಳಿಗೆ ಅಹನೀ=ಹಗಲು ರಾತ್ರಿಗಳು ಅಯನೇ=ನಮ್ಮ ಎರಡು ಅಯನಗಳು. ರಾತ್ರಿ ಹಗಲು ಎರಡೂ ಸಮಾನವೆಂದು ತಿಳಿಸುವುದಕ್ಕಾಗಿ ಉಭೇ ಎನ್ನಲಿಲ್ಲ. ದ್ವಾದಶ=ಮನುಷ್ಯರ ಹನ್ನೆರಡು ತಿಂಗಳು ವತ್ಸರಃ=ಒಂದು ವರ್ಷವು. ಸಂವತ್ಸರಶತಂ=ನೂರು ವರ್ಷಗಳು ನೃಣಾಂ= ಮನುಷ್ಯರ ಪರಮಾಯುಃ=ಉತ್ತಮ ಆಯುಷ್ಯವು ಎಂದು ನಿರೂಪಿತಂ= ಹೇಳಲ್ಪಟ್ಟಿದೆ. ॥೧೨॥

ಆದಿತ್ಯಾದಿ ಜ್ಯೋತಿಶ್ಚಕ್ರವು ಪರಮಾಣ್ವಾದಿಕಾಲವೂ ತಮ್ಮ ಪರಿಭ್ರಮಣದಿಂದ ಮನುಷ್ಯರ ಆಯುಷ್ಯವನ್ನು (ತದಂತಸ್ಥನಾದ ಶ್ರೀಹರಿಯ ಪ್ರೇರಣೆಯಿಂದ) ಪ್ರವರ್ತಿಸುವವು ಎಂದು ಹೇಳುವರು –

**ಗ್ರಹರ್ಕ್ಷತಾರಾಚಕ್ರಸ್ಥಃ ಪರಮಾಣ್ವಾದಿನಾ ಜಗತ್ ।**
**ಸಂವತ್ಸರಾವಸಾನೇನ ಪರ್ಯೇತ್ಯನಿಮಿಷೋ ವಿಭುಃ ॥೧೩॥**

ಗ್ರಹಾಃ=ಸೂರ್ಯಮುಂತಾದವು ಋಕ್ಷಾಣಿ=ಅಶ್ವಿನೀ ಮೊದಲಾದವು ತಾರಾಃ= ಧ್ರುವ ಮೊದಲಾದವು ಇವುಗಳ ಚಕ್ರಸ್ಥಃ=ಮಂಡಲದಲ್ಲಿರುವ ಅನಿಮಿಷಃ ವಿಭುಃ= ಸಮರ್ಥನಾದ ಅನಿಮಿಷನಾಮಕ ಪರಮಾತ್ಮನು ಪರಮಾಣ್ವಾದಿನಾ=ಪರಮಾಣು ಆರಂಭ ಮಾಡಿ ಸಂವತ್ಸರಾವಸಾನೇನ=ವರ್ಷಪರ್ಯಂತವಾದ ಕಾಲ ಸಹಿತನಾಗಿ ಪರ್ಯೇತಿ=ಸಂಚರಿಸುವನು ಅನಿಮಿಷಶಬ್ದಾರ್ಥ ಮುಂದೆ ಹೇಳುವರು. ಶ್ರೀಹರಿಯೇ ಸೂರ್ಯ ಮುಂತಾದವರ ಮಂಡಲಗಳಲ್ಲಿ ಇದ್ದು ಪರಮಾಣು ಮುಂತಾದ ಕಾಲಗಳನ್ನು ಸೃಷ್ಟಿಸಿ ಅವುಗಳಿಗೆ ನಿಯಾಮಕನಾಗಿ ಆ ಹೆಸರಿನ ತನ್ನ ರೂಪವಿಶೇಷಗಳಿಂದ ಸಹಿತನಾಗಿ ಮನುಷ್ಯರ ಆಯುಷ್ಯವನ್ನು ಪ್ರವರ್ತಿಸುವನು. ಕೇವಲ ಸೂರ್ಯಾದಿಗಳಲ್ಲ, ಅವರು ಅಸ್ವತಂತ್ರರು. ॥೧೩॥

ಶ್ರೀಹರಿಯು ಕಾಲವಿಶೇಷವಾಚಕ ಪರಮಾಣು ಮುಂತಾದ ಶಬ್ದವಾಚ್ಯ ಎಂಬ ವಿಷಯದಲ್ಲಿ ಯುಕ್ತಿಯನ್ನು ಹೇಳುವರು –

**ಸಂವತ್ಸರಃ ಪರಿವತ್ಸರ ಇಡಾವತ್ಸರ ಏವ ಚ ।**
**ಅನುವತ್ಸರೋ ವತ್ಸರಶ್ಚ ವಿದುರೈವಂ ಪ್ರಭಾಷ್ಯತೇ ॥೧೪॥**

ವಿದುರ=ಹೇ ವಿದುರನೇ ! ಸಂವತ್ಸರಃ=ಸೂರ್ಯಸಂಬಂಧಿಯಾದ ಸಂಕ್ರಮಣ ಭೇದದಿಂದ ಹನ್ನೆರಡು ಸಂಖ್ಯಾಕವಾದ ತಿಂಗಳುಗಳಲ್ಲಿ ನಿಯಾಮಕನಾಗಿರುವವನು ಸಂವತ್ಸರ ಎಂಬ ನಾಮವುಳ್ಳವನು. ಪರಿವತ್ಸರಃ=ಬೃಹಸ್ಪತಿಯು ಮೇಷಾದಿ ರಾಶಿಗಳಲ್ಲಿ ತಿರುಗಲು ಹನ್ನೆರಡು ವರ್ಷಗಳು ಬೇಕು ಅದಕ್ಕೆ ಗುರ್ವಾವೃತ್ತ ಎನ್ನುವರು. ಅದರ ಹನ್ನೆರಡನೆ ಭಾಗದಲ್ಲಿರುವವನು ಪರಿವತ್ಸರನಾಮಕನು ಇಡಾವತ್ಸರಃ=ಅಶ್ವಿನೀ ಮುಂತಾದ ಇಪ್ಪತ್ತೇಳು ನಕ್ಷತ್ರಗಳು ಹನ್ನೆರಡು ಸಲ ಸುತ್ತಲು ಬೇಕಾಗುವ ಕಾಲದಲ್ಲಿ ನಿಯಾಮಕನಾಗಿರುವವನು ಇಡಾವತ್ಸರನು. ಚ=ಮತ್ತು ಅನುವತ್ಸರಃ=ಮೂವತ್ತು ತಿಥಿಗಳು ಹನ್ನೆರಡು ಸಲ ಸುತ್ತಲು ಬೇಕಾಗುವ ಕಾಲದಲ್ಲಿ ನಿಯಾಮಕನಾದವನು ಅನುವತ್ಸರನು.ವತ್ಸರಃ=ಮೂರುನೂರಾರವತ್ತು ದಿವಸಗಳಿಗೆ ನಿಯಾಮಕನು ವತ್ಸರನು. ಎಂದು ಪ್ರಭಾಷ್ಯತೇ=ವೇದಾದಿಗಳಲ್ಲಿ ಕರೆಯಲ್ಪಡು-ವನು. ಇದರಂತೆ ಕಾಲಸ್ಥನಾದವನು ಕಾಲನಾಮಕನು ಸರ್ವದಾ ದರ್ಶನ ಮಾಡುವುದರಿಂದ ಸತತ ಗಮನವಿರುವುದರಿಂದಲೂ ಕಾಲಸ್ಥನಾದವನಿಗೆ ಅನಿಮಿಷನೆಂದು ಕರೆಯುವರು.

“ಹರಿಃ ಪರಮಾಣ್ವಾದಿಕಾಲವಿಶೇಷವಾಚಕಪದಾಭಿಧೇಯಃ ತತ್ಸಮಾನ-ಯೋಗಕ್ಷೇಮವತ್ಸರಾದಿಶಬ್ದವಾಚ್ಯತ್ವಾತ್” ಎಂಬ ಯುಕ್ತಿ ಸೂಚಿತವಾಯಿತು.

ಕಣ್ಣು ಮುಚ್ಚುವುದು ನಿಮಿಷ, ಅದಿಲ್ಲದಿದ್ದವನು ಅನಿಮಿಷ. ಹಾಗು ಮಿಷ ಗತೌ ಎಂಬ ಧಾತುವಿರುವುದರಿಂದ ನಿ=ನಿಕೃಷ್ಟವಾದ ಮಿಷಃ=ಗಮನವು ನಿಮಿಷ. ಅದಿಲ್ಲದವನು ನಿಕೃಷ್ಟಗಮನವಿಲ್ಲದವನು ಅರ್ಥಾತ್ ಸಂತತ ಗಮನವುಳ್ಳವನು ಎಂದರ್ಥ. ಇದನ್ನು ಹಿಂದಿನ ಶ್ಲೋಕದಲ್ಲೇ ಹೇಳಬೇಕಿದ್ದರೂ ಇಲ್ಲಿ ಕರ್ತೃ ಸಮರ್ಪಕವಾದ್ದರಿಂದ ಇಲ್ಲಿ ವ್ಯಾಖ್ಯಾನಿಸಿರುವರು.

ಮೂಲದಲ್ಲಿರುವ ಶಬ್ದಗಳ ಅರ್ಥವಿಶೇಷವನ್ನೂ ಭಗವತ್ಪರತ್ವವನ್ನೂ ಹೇಳುವ ಪ್ರಮಾಣ ಹೇಳುವರು –

“ಇಡಾವತ್ಸರನಾಮಾಽಸೌ ನಕ್ಷತ್ರದ್ವಾದಶೇ ಸ್ಥಿತಃ ।
ತಿಥೀನಾಂ ದ್ವಾದಶಾವೃತ್ತೇ ಯೋ ಹರಿಃ ಸೋಽನುವತ್ಸರಃ ॥
ವತ್ಸರೋ ಯಃ ಸ್ಥಿತಸ್ತ್ವಹ್ನಾಂ ಷಷ್ಟ್ಯುತ್ತರಶತತ್ರಯೇ ।
ಗುರ್ವಾವರ್ತದ್ವಾದಶಾಂಶೇ ಯಃ ಸ್ಥಃ ಸ ಪರಿವತ್ಸರಃ ॥
ಸೌರದ್ವಾದಶಕೇ ಮಾಸೇ ಯಃ ಸ್ಥಃ ಸಂವತ್ಸರೋ ಹರಿಃ ।
ಏವಂ ಸ ಕಾಲನಾಮಾಽಪಿ ಕಾಲಸ್ಥಃ ಪರಮೇಶ್ವರಃ” ॥ ಇತಿ ಬ್ರಹ್ಮತರ್ಕೇ ।

**ಸರ್ವದಾ ದರ್ಶನಾತ್ ತಸ್ಯಾನಿಮಿಷತ್ವಂ ವಿದುರ್ಬುಧಾಃ ।**
**ಸತತಂ ಗಮನಾದ್ವಾಪಿ ಕಾಲಸ್ಥಸ್ಯ ಮಹಾತ್ಮನಃ ॥ ಇತಿ ಚ ।**

(ಮೂಲಾರ್ಥ ಬರೆದುದರಿಂದಲೇ ತಾತ್ಪರ್ಯಾರ್ಥ ಬರದಂತಾಗಿದೆ. ಕಾರಣ ಪ್ರತ್ಯೇಕ ಬರಿಯಬೇಕಿಲ್ಲ ಕಾರಣ ಬರೆದಿಲ್ಲ) ॥೧೪॥

ಈ ವಿಧಕಾಲನಿಯಾಮಕನಾದ ಹರಿಯು ಪರಮೋಪಕಾರಿಯಾದುದುರಿಂದ ಎಲ್ಲರಿಂದ ಪೂಜನೀಯನು ಎಂದು ಹೇಳುವರು –

**ಯಃ ಸೃಜ್ಯಶಕ್ತಿಮುರುಧೋಚ್ಛ್ವಸಯನ್ ಸ್ವಶಕ್ತ್ಯಾ**
**ಪುಂಸೋಽಭ್ರಮಾಯ ದಿವಿಧಾವತಿ ಭೂತಭೇದಃ ।**
**ಕಾಲಾಖ್ಯಯಾ ಗುಣಮಯೀಂ ಕ್ರತುಭಿರ್ವಿತನ್ವಂ-**
**ಸ್ತಸ್ಮೈ ಬಲಿಂ ಹರತ ವತ್ಸರಪಂಚಕಾಯ ॥೧೫॥**

ಯಃ=ಯಾವ ಕಾಲಾಂತರ್ಯಾಮಿಯಾದ ಶ್ರೀಹರಿಯು ಸೃಜ್ಯಶಕ್ತಿಂ= ಸೃಷ್ಟಿವಿಷಯಗಳಾದ(ಹುಟ್ಟಲು ಯೋಗ್ಯವಾದ) ಅಂಕುರಾದಿಗಳಿಗೆ ಪ್ರತಿದಿನ ಬೆಳೆಯುವ ಶಕ್ತಿಯನ್ನು ಕಾರಣಗಳಿಗೆ ಸೃಜಿಸುವ ಶಕ್ತಿಯನ್ನು ಉರುಧಾ=ಅನೇಕ ರೀತಿಯಿಂದ ಉಚ್ಛ್ವಸಯನ್=ಉದ್ಬೋಧಗೊಳಿಸುತ್ತ ಪುಂಸಃ=ವಿಹಿತಕರ್ಮಾ- ನುಷ್ಠಾನ ಮಾಡುವ ಅಧಿಕಾರಿಗಳಿಗೆ ಅಭ್ರಮಾಯ=ಯಜ್ಞಾದಿಕರ್ಮಗಳಿಗೆ ಬೇಕಾಗುವ ಕಾಲದ ಭ್ರಮೆ ಬರದಿರುವುದಕ್ಕಾಗಿ (ಕಾಲ ಕಾಲಕ್ಕೆ ಯಜ್ಞಾದಿಗಳು ನಡೆಯುವುದಕ್ಕಾಗಿ) ಮತ್ತು ಭೂತಭೇದಃ=(ಭೂತಭೇದಕನಾದ) ಪ್ರಾಣಿಗಳಿಗೆ ಇವನು ಹಿರಿಯ ಇವನು ಕಿರಿಯನೆಂಬ ಜ್ಞಾನ ಮಾಡಿಕೊಡುವುದಕ್ಕಾಗಿಯೂ ದಿವಿ=ಅಂತರಿಕ್ಷದಲ್ಲಿ ಧಾವತಿ=ಜ್ಯೋತಿಶ್ಚಕ್ರದಲ್ಲಿದ್ದು ಸಂಚರಿಸುವನು. ಕಾಲಾಖ್ಯಯಾ ಸ್ವಶಕ್ತ್ಯಾ=ಕಾಲನಾಮಕವಾದ ಸ್ವರೂಪಶಕ್ತಯಿಂದ ಸಹಕಾರಿಶಕ್ತಿಯಿಂದಲೂ ಗುಣಮಯೀಂ=ಸತ್ವಾದಿಗುಣಾತ್ಮಕಪ್ರಕೃತಿಯನ್ನು ಕ್ರತುಭಿಃ=ತನ್ನ ಪ್ರಜ್ಞಾಗಳಿಂದ ವಿತನ್ವನ್=ಸೃಷ್ಟಿಕಾಲದಲ್ಲಿ ರಜೋಮಯಪ್ರಕೃತಿಯನ್ನು ಸ್ಥಿತಿಕಾಲದಲ್ಲಿ ಸತ್ವಮಯ- ಪ್ರಕೃತಿಯನ್ನು ಸಂಹಾರಕಾಲದಲ್ಲಿ ತಮೋಮಯಪ್ರಕೃತಿಯನ್ನೂ ವಿಸ್ತಾರಗೊಳಿಸು- ವನಾಗಿ ವರ್ತತೇ=ಇರುವನೋ ತಸ್ಮೈ=ಅಂಥ ಪರಮಾತ್ಮನಿಗೆ ಬಲಿಂ ಹರತ= ಪೂಜೆಯನ್ನು ಮಾಡಿರಿ.

ಪದಚ್ಛೇದ ತಿಳಿಸುವರು –

**ಅಭ್ರಮಾಯ ।** ಕಾಲಭ್ರಮ ಬರದಿರಲು ಎಂದರ್ಥ.

ಭೂತಾನಾಂ ಭೇದಃ ಎಂದು ಷಷ್ಠಿತತ್ಪುರುಷ ಮಾಡಿದರೆ ಅರ್ಥ ಬಾಧಿತವಾಗುವುದು ಕಾರಣ ಭೂತಾನಾಂ ಭೇದಃ ಯಸ್ಮಾತ್ ಎಂದು ವ್ಯಧಿಕರಣ ಬಹುವ್ರೀಹಿ ಅಭಿಪ್ರಾಯದಿಂದ ವ್ಯಾಖ್ಯಾನಿಸುವರು.

**ಭೂತಭೇದಕಃ ।** ಜೀವರಲ್ಲಿ ಕಾಲಕೃತವಾದ ವ್ಯತ್ಯಾಸ ತಿಳಿಸುವವನು.

ಕ್ರತುಭಿಃ ಎಂಬುದಕ್ಕೆ ಯಜ್ಞ ಎಂಬರ್ಥ ಅಸಂಗತ ಕಾರಣ ವ್ಯಾಖ್ಯಾನಿಸುವರು -

**ಕ್ರತುಭಿಃ ಸ್ವಪ್ರಜ್ಞಾಭಿಃ ।** ತನ್ನ ಜ್ಞಾನಗಳಿಂದ ಎಂದರ್ಥ.

ಭೂತಬೇದವು ಸ್ವತಃಸಿದ್ಧವಾದುದರಿಂದ ಭೂತಬೇಧಕತ್ವ ಇವನಿಗೆ ಹೇಗೆ ಮತ್ತು ಅಭ್ರಮವು ಪ್ರಯೋಜನ ಹೇಗೆ ಎಂದರೆ ಸಮಗ್ರ ಶ್ಲೋಕತಾತ್ಪರ್ಯ ಹೇಳುವರು ಪ್ರಮಾಣದಿಂದ -

**"ಭೂತಾನಾಂ ಜ್ಯೈಷ್ಠ್ಯಕಾನಿಷ್ಠ್ಯಜ್ಞಪ್ತ್ಯೈ ಯಜ್ಞಾದಿವೃತ್ತಯೇ ।**
**ಬೋಧಯನ್ ಸೃಜ್ಯಶಕ್ತಿಂ ಚ ಕಾಲಸ್ಥೋ ವರ್ತತೇ ಹರಿಃ" ॥**

**ಇತಿ ತಂತ್ರಪ್ರಕಾಶಿಕಾಯಾಂ ।**

ಭೇದಪದವು ಜ್ಯೇಷ್ಠ್ಯ ಕಾನಿಷ್ಠ್ಯ ಎಂಬ ಧರ್ಮ ಬೋಧಕವು. ಉಪಲಕ್ಷಣಯಾ ಜ್ಞಾನವನ್ನು ಸ್ವೀಕರಿಸಬೇಕು ಎಂದಂತಾಯಿತು. ಅಭ್ರಮಾಯ ಎಂಬುದರ ತಾತ್ಪರ್ಯವೇ ಯಜ್ಞಾದಿವೃತ್ತಯೇ ಎಂಬುದು. ಆದಿಪದದಿಂದ ಪ್ರಾತರಾದಿಗಳಲ್ಲಿ ವಿಹಿತಕರ್ಮ ಸ್ವೀಕರಿಸಬೇಕು. ಕಾಲಗಳ ಸರಿಯಾದ ಜ್ಞಾನವಾಗದಿದ್ದಲ್ಲಿ ಪ್ರಾತಃಸಂಗವ ಮಧ್ಯಾಹ್ನ ಸಾಯಾಹ್ನ ಅಪಾರಾಹ್ನ ಇವುಗಳಲ್ಲಿ ಒಂದನ್ನು ಮತ್ತೊಂದು ಎಂದು ಭ್ರಮಿಸಿದರೆ ಆ ಆಕಾಲಕ್ಕೆ ವಿಹಿತ ಕರ್ಮಾನುಷ್ಠಾನ ಸರಿಯಾಗಿ ಆಗುವುದಿಲ್ಲ ಕಾರಣ ಭ್ರಮೆಯನ್ನು ನಿವಾರಿಸಿ ಸರಿಯಾಗಿ ಯಜ್ಞಾದಿಗಳನ್ನು ನೆರವೇರಿಸುವುದಕ್ಕಾಗಿ ಎಂದು ಭಾವ. ಪ್ರಾಣಿಗಳ ಹಿರಿತನಕಿರಿತನಗಳ ಜ್ಞಾನಕ್ಕಾಗಿಯೂ, ವಿಹಿತಕಾಲದಲ್ಲಿ ಕ್ರಿಯೆಗಳು ನಡೆಯುವುದಕ್ಕಾಗಿಯೂ ಕಾರ್ಯಕಾರಣಗಳಲ್ಲಿ ಬೆಳೆಯುವ, ಉತ್ಪಾದಿಸುವ, ಶಕ್ತಿಯನ್ನು ಪ್ರೇರಿಸುತ್ತ ಕಾಲದಲ್ಲಿ ನಿಯಾಮಕನಾಗಿರುವನು, ಇಂಥವನಿಗೆ ಪೂಜಿಸಬೇಕು. ಎಂದು ಭಾವ. ॥೧೮॥

ವಿದುರ ಉವಾಚ

**ಪಿತೃದೇವಮನುಷ್ಯಾಣಾಮಾಯುಃ ಪರಮಿದಂ ಸ್ಮೃತಂ ।**
**ಪರೇಷಾಂ ಗತಿಮಾಚಕ್ಷ್ವ ಯೇ ಸ್ಯುಃ ಕಲ್ಪಾದ್ ಬಹಿರ್ವಿದಃ ॥೧೯॥**

ಇದಂ=ನೂರುವರ್ಷಾತ್ಮಕವಾದ ಆಯುಃ=ಆಯುಷ್ಯವು ಪರಂ ಸ್ಮೃತಂ ಪಿತೃದೇವಮನುಷ್ಯಾಣಾಂ=ಮನುಷ್ಯರಿಗೆ ಸಂಪೂರ್ಣ ಆಯುಷ್ಯ, ದೇವತೆಗಳಿಗೆ ಮತ್ತು ಪಿತೃಗಳಿಗೆ ಇದು, ದಿನಮಾನವೆಂದು ಹೇಳಲ್ಪಟ್ಟಿತು ಯೇ ವಿದಃ=ಯಾವ ಜ್ಞಾನಿಗಳು ಕಲ್ಪಾದ್ ಬಹಿಃಸ್ಯುಃ=ಪ್ರತಿದಿನ ಸೃಷ್ಟವಾಗುವುದರಿಂದ ಕಲ್ಪವೆನಿಸಿದ ತ್ರೈಲೋಕ್ಯದ ಹೊರಗೆ ಮಹರಾದಿಲೋಕದಲ್ಲಿರುವರೋ ತೇಷಾಂಪರೇಷಾಂ ಗತಿಂ ಆಚಕ್ಷ್ವ=ಆ ಉತ್ತಮರ ಸ್ಥಿತಿಯನ್ನು ಹೇಳಿರಿ. ॥೧೬॥

**ಭಗವಾನ್ ವೇದಕಾಲಸ್ಯ ಗತಿಂ ಭಗವತೋ ನನು ।**
**ವಿಶ್ವಂ ವಿಚಕ್ಷತೇ ಧಿರಾ ಯೋಗರಾದ್ಧೇನ ಚಕ್ಷುಷಾ ॥೧೭॥**

ಧೀರಾಃ=ಜ್ಞಾನಿಗಳಾದ ನಿಮ್ಮಂಥವರು ಯೋಗರಾದ್ಧೇನ= ಯೋಗಸಿದ್ಧವಾದ ಚಕ್ಷುಷಾ=ಜ್ಞಾನದೃಷ್ಟಿಯಿಂದ ವಿಶ್ವಂ=ಎಲ್ಲವನ್ನು ವಿಚಕ್ಷತೇ=ತಿಳಿಯುವರು, ಕಾರಣ ಕಾಲಸ್ಯ=ಕಾಲಾಂತರ್ಯಾಮಿಯಾದ ಭಗವತಃ=ಪರಮಾತ್ಮನ ಗತಿಂ=ಸ್ಥಿತಿಯನ್ನು ಪರಿಮಾಣವನ್ನು ಭಗವಾನ್=ಪೂಜ್ಯರಾದ ತಾವು ವೇದ= ತಿಳಿದಿರುವಿರಿ ॥೧೭॥

ಮಹರಾದಿಲೋಕದಲ್ಲಿರುವವರ ದಿನಮಾನ ಹೇಳಲು ಮೊದಲು ನಾಲ್ಕು ಯುಗಗಳ ಮತ್ತು ಸಂಧಿಕಾಲದ ಪರಿಮಾಣ ಹೇಳುವರು.

**ಮೈತ್ರೇಯ ಉವಾಚ**

**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಮ್ ।**
**ದಿವ್ಯೈರ್ದ್ವಾದಶಸಾಹಸ್ರೈಃ ಸಾವಧಾನಂ ನಿರೂಪಿತಂ ॥೧೮॥**

ದಿವ್ಯೈಃ=ದೇವತೆಗಳಿಗಿರುವ ದ್ವಾದಶಸಾಹಸ್ರೈಃ=ಹನ್ನೆರಡು ಸಾವಿರ ವರ್ಷಗಳಿಂದ ಸೇರಿದ ಕೃತ, ತ್ರೇತಾ, ದ್ವಾಪರ, ಕಲಿ ಇತಿ ಎಂಬ ಚತುರ್ಯುಗಂ=ನಾಲ್ಕು ಯುಗಗಳು ಸಾವಧಾನಂ=ಮನಃಸಮಾಧಾನವಾಗುವಂತೆ ನಿರೂಪಿತಂ=ಜ್ಞಾನಿಗಳಿಂದ ಹೇಳಲ್ಪಟ್ಟಿವೆ ॥೧೮॥

ಮೂರು ಮೂರು ಸಾವಿರ ವರ್ಷ ಪ್ರತ್ಯೇಕಯುಗಗಳಿಗೆ ಸಮಾನವಾಗಿ ಹೇಳಿರುವರೆ ? ಎಂದರೆ ಅಲ್ಲವೆಂದು ಹೇಳುವರು –

**ಚತ್ವಾರಿ ತ್ರೀಣಿ ದ್ವೇ ಚೈಕಂ ಕೃತಾದಿಷು ಯಥಾಕ್ರಮಾತ್ ।**
**ಸಂಖ್ಯಾತಾನಿ ಸಹಸ್ರಾಣಿ ದ್ವಿಗುಣಾನಿ ಶತಾನಿ ಚ ॥೧೯॥**

ಕೃತಾದಿಷು=ಕೃತ ಮೊದಲಾದ ಯುಗಗಳಲ್ಲಿ ಕ್ರಮಾತ್=ಕ್ರಮವಾಗಿ ಚತ್ವಾರಿ= ಕೃತಯುಗಕ್ಕೆ ನಾಲ್ಕು, ತ್ರೀಣಿ=ತ್ರೇತಾಯುಗಕ್ಕೆ ಮೂರು, ದ್ವೇ=ದ್ವಾಪರಕ್ಕೆ ಎರಡು

ಚ=ಮತ್ತು ಏಕಂ=ಕಲಿಯುಗಕ್ಕೆ ಒಂದು ಹೀಗೆ ಸಹಸ್ರಾಣಿ ಸಂಖ್ಯಾತಾನಿ=ಹತ್ತು ಸಾವಿರಗಳು ಹೇಳಲ್ಪಟ್ಟಿವೇ ಇನ್ನುಳಿದ ಎರಡು ಸಾವಿರದಲ್ಲಿ ೨೦ ನೂರು ಉಳಿದಿರುವುವು. ಅವುಗಳನ್ನು ಸಂಧಿಕಾಲಕ್ಕೆ ವಿನಿಯೋಗಿಸಬೇಕು. ಅದು ಹೇಗೆ ಅಂದರೆ ದ್ವಿಗುಣಾನಿ ಶತಾನಿಚ ಎಂದಿರುವರು. ಒಟ್ಟು ನಾಲ್ಕು ಯುಗಗಳ ಸಂಧ್ಯಂಶಗಳಿಗೆ ವಿನಿಯೋಗಿಸಬೇಕು. ಕಲಿಯುಗ ಪೂರ್ವಾಪರ ಸಂಧಿಯನ್ನು ಆರಂಭಿಸಿ ದ್ವಿಗುಣವೆಂದು ತಿಳಿಯಬೇಕು ಅರ್ಥಾತ್ ಕಲಿಯುಗ ಪೂರ್ವಸಂಧಿ ಒಂದುನೂರು. ಅಪರ ಸಂಧಿ ಒಂದುನೂರು. ದ್ವಾಪರದ ಸಂದಿಕಾಲಪೂರ್ವ ಅಪರ ಎರಡರೆಡುನೂರು. ಕೃತಯುಗ ಪೂರ್ವಾಪರ ಸಂಧಿಗಳು ಮೂರು ಮೂರು ನೂರುಗಳು. ಕೃತಯುಗ ಪೂರ್ವಾಪರ ಸಂಧಿಕಾಲ ನಾಲ್ಕು ನಾಲ್ಕು ನೂರು ವರ್ಷಗಳು. ಹೀಗೆ ೨೦ ನೂರು ವರ್ಷಗಳಾಗುವುವು. ಇಲ್ಲಿ ದ್ವಿಗುಣಾನಿಶತಾನಿ ಎಂದರೆ ಒಂದಕ್ಕಿಂತ ಒಂದಕ್ಕೆ ದ್ವಿಗುಣ ಎಂದರ್ಥ ಮಾಡಿದರೆ ತ್ರೇತಾಯುಗಕ್ಕೆ ಹೇಳುವಾಗ ದ್ವಿಗುಣವಾಗಲಾರದು ಕಾರಣ ಯಾವ ಯುಗಕ್ಕೆ ಎಷ್ಟು ಸಾವಿರ ವರ್ಷ ಹೇಳಿದೆಯೋ ಆ ಸಾವಿರದ ದ್ವಿಗುಣಶತಗಳು ಸಂಧಿಕಾಲ ಎಂದು ಅರ್ಥೈಸಬೇಕು. ಕಲಿಗೆ ೧ ಸಾವಿರ ಅದರ ದ್ವಿಗುಣನೂರು ಎಂದರೆ ಎರಡು ನೂರಾಗುವುದು. ಇದರಂತೆ ದ್ವಾಪರ ೨೦೦೦. ಸಂಧಿ ೪೦೦. ತ್ರೇತಾ ೩೦೦೦ ದ್ವಿಗುಣ ೬೦೦. ಕೃತ ೪೦೦೦. ದ್ವಿಗುಣ ಶತ ೮೦೦ ಹೀಗಾಗುವುದು ॥೧೯॥

ಹಾಗಾದರೆ ಕೃತ ಮುಂತಾದಯುಗಗಳ ಕಾಲ ಎಷ್ಟು ಎಂಬ ಶಂಕೆಗೆ ಉತ್ತರ ಹೇಳುವರು -

**ಸಂಧ್ಯಾಸಂಧ್ಯಾಂಶಯೊರಂತರ್ಯಃ ಕಾಲಃ ಶತಸಂಖ್ಯಯೋಃ ।**
**ತಮೇವಾಹುರ್ಯುಗಂ ತಜ್ಞಾ ಯತ್ರ ಧರ್ಮೋ ವಿಧೀಯತೇ ॥೨೦॥**

ಶತಸಂಖ್ಯಯೋಃ=ಹಿಂದೆ ಹೇಳಿದ ಪ್ರಕಾರ ೨-೪-೬-೮ ನೂರು ಸಂಖ್ಯಾ ಕಾಲವುಳ್ಳ ಸಂಧ್ಯಾಸಂಧ್ಯಾಂಶಯೋಃ=ಸಂಧ್ಯಾ ಮತ್ತು ಸಂಧ್ಯಾಂಶಗಳ ಅಂತಃ= ಮಧ್ಯದಲ್ಲಿರುವ ಯಃ=ಯಾವ ಕಾಲಃ=ಕಾಲವಿದೆಯೋ ತಂ ಏವ=ಅದನ್ನೇ ಯುಗಂ ಆಹುಃ=ಯುಗವೆಂದು ಹೇಳುವರು ಯತ್ರ=ಯಾವ ಕಾಲದಲ್ಲಿ ಧರ್ಮಃ=ಆ ಆ ಯುಗಧರ್ಮವು ವಿಧೀಯತೇ=ಹೇಳಲ್ಪಡುವುದೋ ಅದನ್ನೇ ತಜ್ಞಾಃ=ಯುಗಮಾನ-ವನ್ನರಿತವರು ಯುಗವೆಂದು ಹೇಳುವರು.

ಕೃತಾದಿಯುಗಗಳ ಪೂರ್ವಾವಧಿ ಕಾಲವು ಸಂಧ್ಯಾಕಾಲವು. ಯುಗಗಳ ಉತ್ತರಾವಧಿಕಾಲವು ಸಂಧ್ಯಾಂಶಕಾಲವು. ಅಂದರೆ ಕೃತಯುಗದ ಕಾಲವು

ಪ್ರತ್ಯೇಕವಾದ ನಾಲ್ಕುಸಾವಿರ ವರ್ಷ. ಇದರ ಪೂರ್ವಾವಧಿವರ್ಷ ನಾಲ್ಕುನೂರು ವರ್ಷ, ಇದು ಸಂಧಿಕಾಲ. ನಾಲ್ಕುಸಾವಿರದ ಅನಂತರದ ನಾಲ್ಕುನೂರುವರ್ಷ ಉತ್ತರಾವಧಿಕಾಲ. ಈ ಕಾಲ ಸಂಧ್ಯಂಶ ಎಂದು ಹೆಸರು.

ಈ ಸಂಧ್ಯಾಸಂಧ್ಯಂಶಗಳ ಮಧ್ಯದಲ್ಲಿರುವ ಕೇವಲ ನಾಲ್ಕುಸಾವಿರ ವರ್ಷಗಳು ಮಾತ್ರ ಕೃತಯುಗಶಬ್ದದಿಂದ ಕರೆಸಿಕೊಳ್ಳುತ್ತವೆ. ಮೊದಲಿನ ನಾಲ್ಕುನೂರು ವರ್ಷಗಳನ್ನು ಸಂಧಿಕಾಲವೆಂದೂ ಆಮೇಲಿನ ನಾಲ್ಕುನೂರು ವರ್ಷಗಳನ್ನು ಸಂಧ್ಯಂಶವೆಂದೇ ಕರೆಯಬೇಕು. ಇವು ಯುಗವಲ್ಲ. ಹೀಗೆ ತ್ರೇತಾಯುಗ, ೩೦೦ಸಂಧಿ, ೩೦೦೦ ಯುಗ, ೩೦೦ ಸಂಧ್ಯಂಶ. ದ್ವಾಪರಯುಗ, ೨೦೦ ಸಂಧಿ, ೨೦೦೦ಯುಗ ೨೦೦ ಸಂಧ್ಯಂಶ. ಕಲಿಯುಗ, ೧೦೦ ಸಂಧಿ ೧೦೦೦ಯುಗ ೧೦೦ ಸಂಧ್ಯಂಶ ಎಂದು ತಿಳಿಯಬೇಕು. ॥೨೦॥

ಯುಗಧರ್ಮಗಳ ಸ್ಥಿತಿಯನ್ನು ತಿಳಿಸುವರು -

**ಧರ್ಮಶ್ಚತುಷ್ಪಾನ್ಮನುಜಾನ್ ಕೃತೇ ಸಮನುವರ್ತತೇ ।**
**ಸ ಏವಾನ್ಯೇಷ್ವಧರ್ಮೇಣ ವ್ಯೇತಿ ಪಾದೇನ ವರ್ಧತಾ ॥೨೧॥**

ಕೃತೇ=ಕೃತಯುಗದಲ್ಲಿ ಮನುಜಾನ್ ಉದ್ದಿಶ್ಯ=ಮನುಷ್ಯರನ್ನು ಕುರಿತು ಚತುಷ್ಪಾತ್ ಧರ್ಮಃ =ತಪಸ್ಸು, ಸತ್ಯ, ದಯಾ, ಶೌಚ, ಎಂಬ ನಾಲ್ಕು ಪಾದಗಳಿಂದ ಕೂಡಿದ ಧರ್ಮವು ಸಮನುವರ್ತತೇ=ಚೆನ್ನಾಗಿ ಅನುಸರಿಸಿರುವುದು. (ನಾಲ್ಕೂ ಧರ್ಮ ಪಾದಗಳು ಜನರಲ್ಲಿ ಇರುವುವು ಕೃತಯುಗದಲ್ಲಿ) ಸ ಏವ=ಆ ಧರ್ಮವೇ ಅನ್ಯೇಷು=ತ್ರೇತಾದಿಯುಗಗಳಲ್ಲಿ ವರ್ಧತಾ=ಬೆಳೆಯುತ್ತಿರುವ, ಅಧರ್ಮೇಣ= ತಪಸ್ಸು ಸತ್ಯಮುಂತಾದವುಗಳಿಗೆ ವಿರೋಧಿಯಾದ ಅಸತ್ಯ ಮುಂತಾದವುಗಳಿಂದ ಪಾದೇನ=ತಮ್ಮ ಹೆಸರಿಗೆ ತಕ್ಕಂತೆ ಕ್ರಮವಾಗಿ ಒಂದೊಂದು ಪಾದವಾಗಿ ವ್ಯೇತಿ= ಹ್ರಾಸವಾಗುವುದು. (ಕಡಿಮೆಯಾಗುವುದು) ॥೨೧॥

ಇಲ್ಲಿವರೆಗೆ ಉಪಯುಕ್ತ ವಿಷಯವನ್ನು ಹೇಳಿ ಈಗ ಮಹರಾದಿ ಲೋಕದಲ್ಲಿರುವವರ ಸ್ಥಿತಿಯನ್ನು ಹೇಳಿರಿ ಎಂದು ಪ್ರಶ್ನಿಸಿದ್ದಕ್ಕೆ ಉತ್ತರಿಸುವರು-

**ತ್ರೈಲೋಕ್ಯಾದ್ ಯುಗಸಾಹಸ್ರಂ ಬಹಿರಾಬ್ರಹ್ಮಣೋ ದಿನಂ ।**
**ತಾವತ್ಯೇವ ನಿಶಾ ತಾತ ಯನ್ನಿಮೀಲತಿ ವಿಶ್ವಸೃಕ್ ॥೨೨॥**

ತ್ರೈಲೋಕ್ಯಾತ್ ಬಹಿಃ=ಮೂರು ಲೋಕಗಳ ಹೊರಗೆ ಅಂದರೆ ಮಹರ್ಲೋಕ- ವನ್ನಾರಂಭಿಸಿ ಆಬ್ರಹ್ಮಣಃ=ಬ್ರಹ್ಮದೇವರ ಲೋಕವಾದ ಸತ್ಯಲೋಕದ ಪರ್ಯಂತ

ಯುಗಸಾಹಸ್ರಂ=ನಾಲ್ಕೂ ಯುಗಗಳ ಸಾವಿರವು (ಒಂದು ಸಾವಿರ ಮಹಾಯುಗ) ಬ್ರಹ್ಮಣಃ=ಬ್ರಹ್ಮದೇವರ ದಿನಂ=ಒಂದು ಹಗಲು. ತಾವತೀ ಏವ= ಅಷ್ಟೇ ನಾಲ್ಕು ಸಾವಿರ ಯುಗಗಳು ನಿಶಾ=ರಾತ್ರಿಯು. ವಿಶ್ವಸೃಕ್=ಬ್ರಹ್ಮನು ಯತ್=ಯಾವ ರಾತ್ರಿಯಲ್ಲಿ ನಿಮೀಲತಿ=ಕಣ್ಣು ಮುಚ್ಚುವನು; ನಿದ್ರಿಸುವನೆಂದರ್ಥ, ಮಲಗುವನು ಎಂದು ಭಾವ ॥೨೨॥

ದಿನದ ಸ್ಥಿತಿಯನ್ನು ಹೇಳುವರು ನಾಲ್ಕು ಶ್ಲೋಕದಿಂದ-

**ನಿಶಾವಸಾನ ಆರಬ್ಧೋ ಲೋಕಕಲ್ಪೋಽನುವರ್ತತೇ ।**
**ಯಾವದ್ ದಿನಂ ಭಗವತೋ ಮನೂನ್ ಭುಂಜಂಶ್ಚತುರ್ದಶ ॥೨೩॥**

ನಿಶಾವಸಾನೇ=ನಾಲ್ಕುಯುಗ ಸಹಸ್ರಾತ್ಮಕ ರಾತ್ರಿಯು ಮುಗಿದ ಮೇಲೆ ಆರಬ್ಧಃ= ಪ್ರಾರಂಭವಾದ ಲೋಕಕಲ್ಪಃ=ಜನರ ಹಾಗೂ ಭೂರಾದಿಲೋಕಗಳ ಸೃಷ್ಟಿಯು ಚತುರ್ದಶ=ಹದಿನಾಲ್ಕು ಮನೂನ್=ಮನುಗಳನ್ನು ಭುಂಜನ್=ಅನುಭವಿಸುವ ಭಗವತಃ=ಬ್ರಹ್ಮದೇವರ ದಿನಂ ಯಾವತ್=ಹಗಲು ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ಅನುವರ್ತತೇ=ನಡೆಯುವುದು.

ಜಡವಾದ ದಿನಕ್ಕೆ ಭೋಕ್ತೃತ್ವ ಕೂಡುವುದಿಲ್ಲ ಕಾರಣ ಹೇಳುವರು –

**ದಿನಸ್ಥೋ ಭಗವಾನ್ ಭೋಕ್ತಾ ।**

ದಿನದಲ್ಲಿ ನಿಯಾಮಕನಾಗಿರುವ ಶ್ರೀಹರಿಯ ಅಭಿಪ್ರಾಯದಿಂದಲೇ ಭೋಗವನ್ನು ಹೇಳಿದ್ದು ಆದ್ದರಿಂದಲೇ ಭುಂಜನ್ ಎಂದು ಪುಲ್ಲಿಂಗ ಪ್ರಯೋಗ ಮಾಡಿರುವರು. ಭೋಗ ಎಂದರೆ ಅನುಭವ ಅಥವಾ ಪ್ರಾಪ್ತಿ ಎಂದರ್ಥ. ॥೨೩॥

ಯದ್ಯಪಿ ಬ್ರಹ್ಮದೇವರ ಒಂದು ದಿನದಲ್ಲಿ ೧೪ ಮನುಗಳು ಆಗಿ ಹೋಗುವರು. ಅವರು ಏಕ ಕಾಲದಲ್ಲಿ ಇರುವರೋ ? ಕ್ರಮವಾಗಿಯೋ ? ಮತ್ತು ಒಬ್ಬೊಬ್ಬ ಮನುವಿನ ಕಾಲ ಎಷ್ಟು ? ಎಂದರೆ ಹೇಳುವರು –

**ಸ್ವಂ ಸ್ವಂ ಕಾಲಂ ಮನುರ್ಭುಂಕ್ತೇ ಸಾಧಿಕಾ ಹ್ಯೇಕಸಪ್ತತಿ ।**
**ಮನ್ವಂತರೇಷು ಮನವಸ್ತದ್ವಂಶ್ಯಾ ಋಷಯಃ ಸುರಾಃ ।**
**ಭವಂತಿ ಚೈತೇ ಯುಗಪತ್ ಸುರೇಶಾಶ್ಚಾನು ಯೇ ಚ ತಾನ್॥೨೪॥**

ಸ್ವಂ ಸ್ವಂ ಕಾಲಂ=ತಮ್ಮ ತಮ್ಮ ಕಾಲವನ್ನು ಮನುಃ=ಆ ಆ ಮನುವು ಭುಂಕ್ತೇ= ಅನುಭವಿಸುವನು. (ಇದರಿಂದ ಏಕಕಾಲಕ್ಕೆ ಇರುವುದಿಲ್ಲ, ಕ್ರಮವಾಗಿರುವರು ಎಂದು ಹೇಳಿದಂತಾಯಿತು.)ಇನ್ನು ಒಬ್ಬ ಮನುವಿನ ಕಾಲ ಎಷ್ಟೆಂದು ಹೇಳುವರು–

ಸಾಧಿಕಾಏಕಸಪ್ತತಿಃ=ಎಪ್ಪತ್ತೊಂದು ಮಹಾಯುಗಗಳು ಸ್ವಲ್ಪ ಅಧಿಕ ಕಾಲದಿಂದ ಸಹಿತವಾದುದು. ಅಂದರೆ ಎಪ್ಪತ್ತೊಂದು ಮಹಾಯುಗಗಳ ಮೇಲೆ ಹದಿನೆಂಟು ಲಕ್ಷ ಐವತ್ತು ಸಾವಿರ ವರ್ಷಗಳು ಒಬ್ಬ ಮನುವಿನ ಭುಕ್ತಿಕಾಲವೆಂದು ತಿಳಿಯಬೇಕು. ಮನ್ವಂತರೇಷು=ಮನ್ವಂತರಗಳಲ್ಲಿ ಮನವಃ=ಆ ಆ ಮನುಗಳು ತದ್ವಂಶ್ಯಾಃ= ಮನುವಂಶದಲ್ಲಿ ಜನಿಸಿದ ರಾಜರುಗಳು ಕ್ರಮವಾಗಿರುವರು. ಋಷಯಃ=ಋಷಿಗಳು ಸುರಾಃ=ದೇವತೆಗಳು ಸುರೇಶಾಃ=ಇಂದ್ರಾದಿಗಳು ಯೇ ಚ ತಾನ್ ಅನು=ಯಾರು ಅವರನ್ನು ಅನುಸರಿಸುವ ಗಂಧರ್ವಾದಿಗಳೊ ತೇ=ಅವರೆಲ್ಲ ಯುಗಪತ್ ಭವಂತಿ= ಏಕಕಾಲದಲ್ಲಿರುವರು. ॥ ೨೪॥

ಆಧಿಕ್ಯ ಎಷ್ಟೆಂದು ಪ್ರಮಾಣದಿಂದ ಹೇಳುವರು.

**''ಯುಗೈಕಸಪ್ತತೇರೂರ್ಧ್ವಂ ಸಾರ್ಧಾಷ್ಟಾದಶಲಕ್ಷಕಂ ।**
**ವತ್ಸರಾಣಾಂ ಮನೋರ್ಭುಕ್ತಿಃ ಸಹಸ್ರಂ ಚತುರುತ್ತರಂ ॥**
**ಶತಾನಾಂ ಪ್ರಳಯಶ್ಚೈವ ಪಂಚೋತ್ತರಮಥಾಪಿ ಚ ।**
**ಆದ್ಯೇಷು ಷಟ್ಸು ಪ್ರಥಮೇ ದ್ವಿಸಹಸ್ರಂ ಪ್ರಕೀರ್ತಿತಂ ॥**
**ವತ್ಸರಾಣಾಂ ಮನೋರಂತರೇವಮಿಂದ್ರಾದಿನಾಂ ಭವೇತ್''॥**

**ಇತಿ ಮಹಾವಾರಾಹೇ ।**

ಹದಿನೆಂಟು ಲಕ್ಷ ಐವತ್ತು ಸಾವಿರ ವರ್ಷಗಳಿಂದ ಅಧಿಕವಾದ ಎಪ್ಪತ್ತೊಂದು ಮಹಾಯುಗಗಳು ಪ್ರತಿಮನ್ವಂತರದ ಕಾಲವು. ಇಲ್ಲಿ ಸಾಧಿಕಾ ಎಂದು ಹೇಳಿದ್ದು ಮನುವಿನ ಪ್ರಳಯಕಾಲಕ್ಕೂ ಸಂಬಂಧಿಸಿದೆ ಎಂದಿಟ್ಟುಕೊಂಡು ಮನುಗಳ, ಪ್ರಳಯಕಾಲಗಳ ಪರಿಮಾಣವನ್ನೂ ಹೇಳಿರುವರು. ಒಂದುಸಾವಿರದ ನಾಲ್ಕು ನೂರುವರ್ಷ ಮನ್ವಂತರ ಪ್ರಳಯ ಕಾಲವು. ಮೊದಲನೆ ಆರು ಮನ್ವಂತರಗಳಲ್ಲಿ ಸಾವಿರದ ಐನೂರು ವರ್ಷಗಳು ಪ್ರಳಯ ಕಾಲವು. ಅಥಾಪಿ ಚ ಎಂಬ ನಿಪಾತ ಸಮುದಾಯವು ತ್ರಿಶತೋತ್ತರವೆಂಬ ಪಕ್ಷಾಂತರ ದ್ಯೋತಕವಾಗಿದೆ. ಆ ಆರರಲ್ಲಿಯೂ ಮೊದಲನೆಯದಾದ ಸ್ವಾಯಂಭುವಮನ್ವಂತರದ ಪ್ರಳಯಕಾಲ ಎರಡು ಸಾವಿರ ವರ್ಷಗಳು ಎಂದು ತಿಳಿಯಬೇಕು. ಇದರಂತೆ ಇಂದ್ರಾದಿಗಳ ದೇವತೆಗಳ ಋಷಿಗಂಧರ್ವರುಗಳ ಭುಕ್ತಿಕಾಲ ಪ್ರಳಯಕಾಲವನ್ನು ತಿಳಿಯಬೇಕು. ಎರಡನೆ ಮನ್ವಂತರ ಪ್ರಳಯಕಾಲ ಸಾವಿರದ ಐನೂರು ವರ್ಷ, ಮೂರನೆ ಮನ್ವಂತರ ಪ್ರಳಯಕಾಲ ಸಾವಿರದ ನಾನೂರು ವರ್ಷಗಳು. ಉಳಿದೆಲ್ಲ ಮನ್ವಂತರಗಳ ಪ್ರಳಯಕಾಲವು ಸಾವಿರದ ಮುನ್ನೂರು ವರ್ಷಗಳು ಎಂದು ತಿಳಿಯಬೇಕು ಎಂದು ಮಹಾವರಾಹದಲ್ಲಿ ಹೇಳಿದೆ ॥೨೪॥

**ಏಷ ದೈನಂದಿನಃ ಸರ್ಗೋ ಬ್ರಾಹ್ಮಸ್ತ್ರೈಲೋಕ್ಯವರ್ತನಃ ।**
**ತಿರ್ಯಙ್‌ನೃಪಿತೃದೇವಾನಾಂ ಸಂಭವೋ ಯತ್ರ ಕರ್ಮಭಿಃ ॥೨೫॥**

ಯತ್ರ=ಯಾವ ದೈನಂದಿನಸೃಷ್ಟಿಯಲ್ಲಿ ತಿರ್ಯಙ್‌ನೃಪಿತೃದೇವಾನಾಂ=ಪಶು, ಮನುಷ್ಯ, ಪಿತೃಗಳ, ದೇವತೆಗಳ ಸಂಭವಃ=ಉತ್ಪತ್ತಿಯು ಕರ್ಮಭಿಃ=ಕರ್ಮಾನು-ಸಾರ ಆಗುವುದೋ ಏಷಃ=ಇದು ತ್ರೈಲೋಕ್ಯವರ್ತನಃ=ಮೂರು ಲೋಕಗಳನ್ನು ಪ್ರವರ್ತಿಸುವ ಬ್ರಾಹ್ಮಃ=ಬ್ರಹ್ಮ ಕೃತವಾದ ದೈನಂದಿನಃ ಸರ್ಗಃ=ಬ್ರಹ್ಮದೇವರ ಒಂದು ದಿನದಲ್ಲಿ ಆಗುವಸೃಷ್ಟಿಯು. (ಇದಕ್ಕೆ ದೈನಿಂದಿನ ಕಲ್ಪ ಎನ್ನುವರು) ॥೨೫॥

ಮನುಮುಂತಾದವರಿಗೆ ಜಗತ್ಪಾಲಕತ್ವವು ಅಮುಖ್ಯವಾದುದು ಮುಖ್ಯವಾಗಿ ಇವರಲ್ಲಿದ್ದು ಭಗವಂತನೇ ಜಗತ್ತನ್ನು ಪರಿಪಾಲಿಸುವನು ಎಂದು ಹೇಳುವರು–

**ಮನ್ವಂತರೇಷು ಭಗವಾನ್ ಬಿಭ್ರತ್ ಸತ್ವಂ ಸ್ವಮೂರ್ತಿಭಿಃ ।**
**ಮನ್ವಾದಿಭಿರಿದಂ ವಿಶ್ವಮವತ್ಯುದಿತಪೌರುಷಃ ॥೨೬॥**

ಉದಿತಪೌರುಷಃ=ನಿತ್ಯದಲ್ಲಿಯೂ ಉದಿಸಿದ ಪರಕ್ರಾಮವುಳ್ಳ ಭಗವಾನ್= ಶ್ರೀಹರಿಯು ಸತ್ವಂ=ಸತ್ವಗುಣವನ್ನು ಬಿಭ್ರತ್=ಕಾರ್ಯೋನ್ಮುಖ ಮಾಡಿ ಸ್ವಮೂರ್ತಿಭಿಃ=ತನ್ನ ಸ್ವರೂಪವಿಶೇಷಾವೇಶವುಳ್ಳ ತನ್ನ ಪ್ರತಿಮಾಸ್ಥಾನೀಯರಾದ (ಸ್ವಸ್ಯ ಮೂರ್ತಿಃ ಯೇಷು ತೈಃ) ಮನ್ವಾದಿಭಿಃ=ಮನು ಇಂದ್ರ ಮುಂತಾದವರು-ಗಳಿಂದ (ಅವರದ್ವಾರಾ)ಅಥವಾ ಯಜ್ಞ, ತಾಪಸ ಮುಂತಾದ ತನ್ನ ಅವತಾರಗಳಿಂದ ಇದಂ ವಿಶ್ವಂ=ಈ ಪ್ರಪಂಚವನ್ನು ಅವತಿ=ರಕ್ಷಿಸುವನು. ॥೨೬॥

ಇನ್ನು ಐದು ಶ್ಲೋಕಗಳಿಂದ ರಾತ್ರಿಯ ಸ್ಥಿತಿಯನ್ನು ಹೇಳುವರು –

**ತಮೋಮಾತ್ರಮುಪಾದಾಯ ಪ್ರತಿಸಂರುದ್ಧವಿಕ್ರಮಃ ।**
**ಕಾಲೇನಾನುಗತಃ ಶೇಷ ಆಸ್ತೇ ತೂಷ್ಣೀಂ ದಿನಾತ್ಯಯೇ ॥೨೭॥**

ಭಗವಾನ್=ಪರಮಾತ್ಮನು ದಿನಾತ್ಯಯೇ=ರಾತ್ರಿಯಲ್ಲಿ ಪ್ರತಿಸಂರುದ್ಧವಿಕ್ರಮಃ= ಪಾಲನಾನುಕೂಲ ವಿಕ್ರಮವನ್ನು (ವ್ಯಾಪಾರ) ಹಿಂತೆಗೆದುಕೊಂಡವನಾಗಿ ತಮೋಮಾತ್ರಂ=ತಮೋಗುಣವನ್ನು ಉಪಾದಾಯ=ಕಾರ್ಯೋನ್ಮುಖ ಮಾಡಿ ಕಾಲೇನ ಅನುಗತಃ=ಕಾಲನಾಮಕ ಬ್ರಹ್ಮದೇವರೊಡನೆ ಶೇಷೇ=ಪ್ರಳಯಜಲದಲ್ಲಿ-ರುವ ಅನಂತಭೋಗಪರ್ಯಂಕದಲ್ಲಿ ತೂಷ್ಣಿಂ ಆಸ್ತೇ=ಸುಮ್ಮನಿರುವನು, ಅಂದರೆ ಮಲಗುವನು ಎಂದರ್ಥ.

ಈ ಶ್ಲೋಕದ ಉತ್ತರಾರ್ಧದ ಅರ್ಥ ಪ್ರಮಾಣದಿಂದ ಹೇಳುವರು -

**"ಬ್ರಹ್ಮಣಾ ಕಾಲನಾಮ್ನಾ ತು ಸಹ ಶೇತೇ ಹರಿರ್ನಿಶಿ" ॥ ಇತಿ ಬ್ರಾಹ್ಮೇ ।**

ರಾತ್ರಿಯಲ್ಲಿ ಕಾಲನಾಮಕ ಬ್ರಹ್ಮದೇವರ ಜೊತೆಗೆ ಶ್ರೀಹರಿಯು ಮಲಗುವನು ಎಂದು ಬ್ರಾಹ್ಮದಲ್ಲಿರುವದು ॥೨೭॥

**ತಮೇವಾನುವಿಲೀಯಂತೇ ಲೋಕಾ ಭೂರಾದಯಸ್ತ್ರಯಃ ।**
**ನಿಶಾಯಾಮನುವೃತ್ತಾಯಾಂ ನಿರ್ಮುಕ್ತಶಶಿಭಾಸ್ಕರೇ ॥೨೮॥**

ನಿರ್ಮುಕ್ತಶಶಿಭಾಸ್ಕರೇ=ಸೂರ್ಯಚಂದ್ರರು ಇಲ್ಲದಾಗುತ್ತಿರಲು ನಿಶಾಯಾಂ ಅನುವೃತ್ತಾಯಾಂ=ಅಂಧಕಾರವುಳ್ಳ ರಾತ್ರಿಯು ಮುಂದುವರಿದಾಗ ತಂ ಅನು ಏವ=ಮಲಗಿರುವ ಶ್ರೀಹರಿಯನ್ನನುಸರಿಸಿ ಅವನ ಸಂಕಲ್ಪಾನುಸಾರ ಭೂರಾದಯಃ ತ್ರಯಃ ಲೋಕಾಃ=ಭೂಃ ಭುವಃ, ಸ್ವ ಎಂಬ ಮೂರು ಲೋಕಗಳು ವಿಲೀಯಂತೇ=ನಾಶವಾಗುವವು. ॥೨೮॥

**ತ್ರಿಲೋಕ್ಯಾಂ ದಹ್ಯಮಾನಾಯಾಂ ಶಕ್ತ್ಯಾ ಸಂಕರ್ಷಣಾಗ್ನಿನಾ ।**
**ಯಾಂತ್ಯೂಷ್ಮಣಾ ಮಹರ್ಲೋಕಾಜ್ಜನಂ ಋಭ್ವಾದಯೋಽರ್ದಿತಾಃ ॥**

ಸಂಕರ್ಷಣಾಗ್ನಿನಾ ಶಕ್ತ್ಯಾ=ಸಂಕರ್ಷಣನ ಮುಖದಿಂದ ಹೊರಟ ಅಗ್ನಿಯ ಜ್ವಾಲೆಯಿಂದ ತ್ರಿಲೋಕ್ಯಾಂ=ಮೂರುಲೋಕಗಳು ದಹ್ಯಮಾನಾಯಾಂ=ಸುಡುತ್ತಿರಲು ಊಷ್ಮಣಾ=ಉಷ್ಣತೆಯಿಂದ ಅರ್ದಿತಾಃ=ಪೀಡಿತರಾದ ಋಭ್ವಾದಯಃ=ಮಹರ್ಲೋಕ-ದಲ್ಲಿರುವ ಋಭು ಮುಂತಾದ ದೇವತೆಗಳು ಮಹರ್ಲೋಕಾತ್ ಮಹರ್ಲೋಕ-ದಿಂದ ಜನಂ=ಜನ ಲೋಕವನ್ನು ಕುರಿತು ಯಾಂತಿ=ಹೋಗುವರು. ॥೨೯॥

**ತಾವತ್ ತ್ರಿಭುವನಂ ಸದ್ಯಃ ಕಲ್ಪಾಂತೇ ವಿಷಸಿಂಧವಃ ।**
**ಪ್ಲಾವಂತ್ಯುತ್ಕಟಾಟೋಪಚಂಡವಾತೇರಿತೋರ್ಮಯಃ ॥೩೦॥**

ತಾವತ್=ಆಗ ಕಲ್ಪಾಂತೇ=ದಿನಕಲ್ಪದ ಕೊನೆಗೆ ಉತ್ಕಟ=ಉತ್ಕೃಷ್ಟಗಳಾದ ಆಟೋಪ=ವೇಗವುಳ್ಳದ್ದರಿಂದಲೇ ಚಂಡ=ಕ್ರೂರವಾದ ವಾತ=ಗಾಳಿಯಿಂದ ಈರಿತ=ಎಬ್ಬಿಸಲ್ಪಟ್ಟ ಊರ್ಮಯಃ=ತೆರೆಗಳುಳ್ಳ ವಿಷಸಿಂಧವಃ=ಸಂಕರ್ಷಣನ ಮುಖದಿಂದ ಹೊರಟ ವಿಷದಿಂದ ಮಿಶ್ರವಾದ ಸಪ್ತಸಮುದ್ರಗಳು ತ್ರಿಭುವನಂ= ಮೂರುಲೋಕಗಳನ್ನು ಪ್ಲಾವಯಂತಿ=ಮುಳಗಿಸುವವು ॥೩೦॥

**ಅಂತಃ ಸ ತಸ್ಮಿನ್ ಸಲಿಲ ಆಸ್ತೇಽನಂತಾಸನೋ ಹರಿಃ ।**
**ಯೋಗನಿದ್ರಾಮೀಲಿತಾಕ್ಷಃ ಸ್ತೂಯಮಾನೋ ಜನಾಲಯೈಃ ॥೩೧॥**

ತಸ್ಮಿನ್ ಸಲಿಲೇ ಅಂತಃ=ಆ ಪ್ರಳಯಜಲದ ಮಧ್ಯದಲ್ಲಿ ಅನಂತಾಸನಃ= ಶೇಷಶಾಯಿಯಾಗಿ ಸಃ ಹರಿಃ=ಆ ಶ್ರೀಹರಿಯು ಯೋಗನಿದ್ರಾಮೀಲಿತಾಕ್ಷಃ=ಯೋಗ-ನಿದ್ರೆಯಿಂದ ಕಣ್ಣುಮುಚ್ಚಿಕೊಂಡು ಜನಾಲಯ್ಯೈಃ=ಮಹರ್ಲೋಕದಿಂದ ಬಂದ ಹಾಗೂ ಇನ್ನಿತರ ಜನಲೋಕದಲ್ಲಿರುವ ಜನರಿಂದ ಸ್ತೂಯಮಾನಃ=ಸ್ತೋತ್ರ ಮಾಡಿಸಿಕೊಳ್ಳುತ್ತ ಆಸ್ತೇ=ಇರುವನು. ॥೩೧॥

ಇಲ್ಲಿವರೆಗೆ ಬ್ರಹ್ಮದೇವರ ಹಗಲು ರಾತ್ರಿಗಳ ಸ್ಥಿತಿಯನ್ನು ಹೇಳಿ ಈಗ ಅವರ ಆಯುಃಪ್ರಮಾಣ ಹೇಳುವರು ಈ ಶ್ಲೋಕದಲ್ಲಿ.

**ಏವಂವಿಧೈರಹೋರಾತ್ರೈಃ ಕಾಲಗತ್ಯೋಪಲಕ್ಷಿತೈಃ ।**
**ಅಪೇಕ್ಷಿತಮಿವಾಸ್ಯಾಪಿ ಪರಮಾಯುರ್ವಯಃ ಶತಂ ॥೩೨॥**

ಏವಂ ವಿಧೈಃ=೨೮ ಮನ್ವಂತರದಷ್ಟೇ (ಕಿಂಚಿದಧಿಕ) ಸ್ಥೂಲವಾದ ಕಾಲಗತ್ಯಾ ಉಪಲಕ್ಷಿತೈಃ=ಸೂರ್ಯಾಂತರ್ಗತ ಶ್ರೀಹರಿಯಿಂದ ಜಾತವಾದ (ವಿಜಯಧ್ವಜಿ) ಕಾಲಗತಿಯಿಂದ ಜ್ಞಾತವಾದ ಅಹೋರಾತ್ರೈಃ=ಹಗಲುರಾತ್ರಿಗಳಿಂದ ಶತಂ ವಯಃ=ನೂರು ವರ್ಷಗಳು ಅಸ್ಯ=ಬ್ರಹ್ಮದೇವರ ಪರಮಾಯುಃ=ಪರನಾಮಕ ಸಂಪೂರ್ಣ ಆಯುಷ್ಯವು. ಅಪೇಕ್ಷಿತಮಿವ=ಹರಿಸೇವೆಗಾಗಿ ಅಪೇಕ್ಷಿತವು. ವಸ್ತುತಃ ಪರಮವಿರಕ್ತನಾದುದರಿಂದ ಅನಪೇಕ್ಷಿತವಾದ್ದರಿಂದ 'ಇವ' ಎಂದಿರುವರು.

ಇಲ್ಲಿ ಅಸ್ಯ ಎಂಬುದಕ್ಕೆ ಪ್ರಕೃತನಾದ ಶ್ರೀಹರಿಯೆಂದು ಅರ್ಥ ಮಾಡಿದರೆ ಹೇಳುವ ಆಯುರ್ಮಾನ ಬಾಧಿತವಾಗುವುದು. ಶ್ರೀಹರಿಗೆ ಆಯುರ್ಮಾನ-ವಿಲ್ಲವೆಂದು ಮುಂದೆ ಹೇಳುವರು. ಕಾರಣ ಅಸ್ಯ ಎಂಬುದರಿಂದ ಏನನ್ನು ಪರಾಮರ್ಶ ಮಾಡಬೇಕೆಂದು ತಿಳಿಸುವರು –

**ಅಸ್ಯ ಬ್ರಹ್ಮಣಃ । ಬ್ರಹ್ಮಣೋ ದಿನಮಿತ್ಯುಕ್ತತ್ವಾತ್ ।**

ಅಸ್ಯ ಎಂದರೆ ಚತುರ್ಮುಖಬ್ರಹ್ಮನ ಎಂದರ್ಥ. ಇವನು ಅಪ್ರಕೃತನೇನಲ್ಲ, 'ಬಹಿರಾಬ್ರಹ್ಮಣೋದಿನಂ' ಎಂದು ಪೂರ್ವಪ್ರಸಕ್ತನಾಗಿರುವನು, ಮತ್ತು 'ಯಾವದ್ದಿನಂ ಭಗವತಃ' ಎಂಬಲ್ಲಿ ಭಗವತ್‌ಶಬ್ದದಿಂದಲೂ ಪ್ರಕೃತನಾಗಿರುವನು.

**ಯದರ್ಧಮಾಯುಷಸ್ತಸ್ಯ ಪರಾರ್ಧಮಭಿಧೀಯತೇ ।**
**ಪೂರ್ವಃ ಪರಾರ್ಧೋಽಪಕ್ರಾಂತೋಹ್ಯಪರಾರ್ಧೋಽದ್ಯ ವರ್ತತೇ ॥**

ತಸ್ಯ=ಬ್ರಹ್ಮದೇವರ ಆಯುಷಃ=ಆಯುಷ್ಯದ ಯದರ್ಧಂ=ಅರ್ಧವೇನಿದೆಯೋ ಅದು ಪರಾರ್ಧಂ ಅಭಿಧೀಯತೇ=ಪರಾರ್ಧಎಂದು ಕರೆಸಿಕೊಳ್ಳುವುದು ಪೂರ್ವಃ=

ಮೊದಲಿನ ಪರಾರ್ಧಃ=ಐವತ್ತು ವರ್ಷಗಳು ಅಪಕ್ರಾಂತಃ=ಕಳೆದುಹೋಗಿದೆ. ಅದ್ಯ= ಈಗ ಅಪರಾರ್ಧಃ ವರ್ತತೇ=ಎರಡನೆ ಐವತ್ತುವರ್ಷಗಳು ನಡೆದಿವೆ ॥೩೩॥

**ಪೂರ್ವಸ್ಯಾದೌ ಪರಾರ್ಧಸ್ಯ ಬ್ರಾಹ್ಮೋ ನಾಮ ಮಹಾನಭೂತ್ ।**
**ಕಲ್ಪೋ ಯತ್ರಾಭವದ್ ಬ್ರಹ್ಮಾ ಶಬ್ದಬ್ರಹ್ಮೇತಿ ಯಂ ವಿದುಃ ॥೩೪॥**

ಪೂರ್ವಸ್ಯಪರಾರ್ಧಸ್ಯ ಆದೌ=ಮೊದಲನೆ ಪರಾರ್ಧದ ಆದಿಯಲ್ಲಿ ಮಹಾನ್ ದೊಡ್ಡದಾದ ಬ್ರಾಹ್ಮಃ ಕಲ್ಪಃ=ಬ್ರಹ್ಮಕಲ್ಪವು ಆಭೂತ್=ಆಯಿತು ಯತ್ರ=ಯಾವ ಬ್ರಹ್ಮಕಲ್ಪದಲ್ಲಿ ಬ್ರಹ್ಮಾ ಅಭವತ್=ವಿರಾಟ್‌ನಾಮಕ ಬ್ರಹ್ಮದೇವರು ಅಭವತ್ ಉತ್ಪನ್ನರಾದರು. ಯಂ=ಯಾರನ್ನು ಶಬ್ದಬ್ರಹ್ಮ ಇತಿ ವಿದುಃ=ವೇದ ಪ್ರತಿಪಾದ್ಯನೆಂದು ಜ್ಞಾನಿಗಳು ತಿಳಿದರು. ॥೩೪॥

**ತಸ್ಯೈವ ಚಾಂತೇ ಕಲ್ಪೋಽಭೂತ್ ಯಂ ಪಾದ್ಮಮಭಿಚಕ್ಷತೇ ।**
**ಯದ್ಧರೇರ್ನಾಭಿಸರಸಃ ಆಸೀಲ್ಲೋಕಸರೋರುಹಂ ॥೩೫॥**

ತಸ್ಯೈವ=ಆ ಬ್ರಹ್ಮಕಲ್ಪದ ಅಂತೇ=ಕೊನೆಯಲ್ಲಿ ಕಲ್ಪಃ ಅಭೂತ್=ಸೃಷ್ಟಿಯು ನಡೆಯಿತು. ಯಂ=ಯಾವ ಸೃಷ್ಟಿಯನ್ನು ಪಾದ್ಮಂ ಅಭಿಚಕ್ಷತೇ=ಪಾದ್ಮಸೃಷ್ಟಿ ಪಾದ್ಮಕಲ್ಪ ಎನ್ನುವರು. ಯತ್=ಯಾವ ಕಾರಣ ಯತ್=ಯಾವಕಲ್ಪದಲ್ಲಿ ಹರೇಃ=ಶ್ರೀಮನ್ ನಾರಾಯಣನ ನಾಭಿಸರಸಃ=ಹೊಕ್ಕಳೆಂಬ ಸರೋವರದಿಂದ ಲೋಕಸರೋರುಹಂ= ಹದಿನಾಲ್ಕು ಲೋಕಾತ್ಮಕವಾದ ಕಮಲವು ಆಸೀತ್=ಉತ್ಪನ್ನವಾಯಿತು. ಕಾರಣ ಪಾದ್ಮಕಲ್ಪ ಎನ್ನುವರು ಎಂದು ಭಾವ ॥೩೫॥

**ಅಯಂ ತು ಕಥಿತಃ ಕಲ್ಪೋ ದ್ವಿತೀಯಸ್ಯಾಪಿ ಭಾರತ ।**
**ವಾರಾಹ ಇತಿ ವಿಖ್ಯಾತೋ ಯತ್ರಾಸೀತ್ ಸೂಕರೋ ಹರಿಃ ॥೩೬॥**

ಭಾರತ=ವಿದುರನೇ ಯತ್ರ=ಯಾವ ಕಲ್ಪದಲ್ಲಿ ಹರಿಃ=ಶ್ರೀಹರಿಯು ಸೂಕರಃ ಆಸೀತ್=ಮೊದಲಿಗೆ ವರಾಹನಾಗಿ ಅವತರಿಸಿದನು. ಕಾರಣ ದ್ವಿತೀಯಸ್ಯಾಪಿ= ಎರಡನೆಯ ಪರಾರ್ಧದಲ್ಲಿಯೇ ವಾರಾಹ ಇತಿ ವಿಖ್ಯಾತಃ=ವಾರಾಹ ಕಲ್ಪವೆಂದು ಪ್ರಸಿದ್ಧವಾದ ಅಯಂ ಕಲ್ಪಃ=ಈ ಕಲ್ಪವು ಕಥಿತಃ= ಹೇಳಲ್ಪಟ್ಟಿದೆ. ಪ್ರಥಮ ಪರಾರ್ಧ ಬ್ರಾಹ್ಮಕಲ್ಪ ದ್ವಿತೀಯಪರಾರ್ಧದಲ್ಲಿ ಮೊದಲು ವಾರಾಹಕಲ್ಪ ನಂತರ ಪಾದ್ಮಕಲ್ಪವೆಂದು ತಿಳಿಯಬೇಕು ॥೩೬॥

ಇಲ್ಲಿಯವರೆಗೆ ಭಗವಂತನಿಂದ ಸೃಷ್ಟವಾದುವುಗಳಿಗೆ ಕಾಲನಿಮಿತ್ತಕವಾದ ಆಯುರ್ಮಾನವನ್ನು ಹೇಳಿ ಈಗ ಹಿಂದೆ ಭಗವಂತನಿಗೆ ತ್ರಿವಿಧಾನಂತ್ಯ-

ರೂಪವಾದ ಪರಮಮಹತ್ಪರಿಮಾಣತ್ವವನ್ನೇನು ಹೇಳಿದೆಯೋ ಅದನ್ನು ಉಪಪಾದನೆ ಮಾಡುತ್ತ ಮೊದಲಿಗೆ ಕಾಲಾನಂತ್ಯ ಹೇಳಲು ಕಾಲ ನಿಮಿತ್ತಕವಾದ ಆಯುರ್ಮಾನ ಶ್ರೀಹರಿಗೆ ಇಲ್ಲವೆಂದು ಹೇಳುವರು -

**ಕಾಲೋಽಯಂ ದ್ವಿಪರಾರ್ಧಾಖ್ಯೋ ನಿಮೇಷ ಉಪಚರ್ಯತೇ ।**
**ಅವ್ಯಾಕೃತಸ್ಯಾನಂತಸ್ಯ ಹ್ಯನಾದೇರ್ಜಗದಾತ್ಮನಃ ॥೩೭॥**

ಜಗದಾತ್ಮನಃ=ಸಮಸ್ತ ಜಗತ್ತಿನ ಅಂತರ್ಯಾಮಿಯಾದ ಕಾರಣನಾದ ಅನಾದೇಃ= ಉತ್ಪತ್ತಿರಹಿತನಾದ (ಕಾರಣಾಂತರರಹಿತನಾದ) ಅನಂತಸ್ಯ=ತ್ರಿವಿಧ ಆನಂತ್ಯಯುಕ್ತನಾದ ಅವ್ಯಾಕೃತಸ್ಯ=ವಿಕಾರನಿಮಿತ್ತಕಬರುವ ಮಧ್ಯಾವಸ್ಥಾರಹಿತನಾದ ಶ್ರೀಹರಿಗೆ ದ್ವಿಪರಾ-ರ್ಧಾಖ್ಯಃ ಅಯಂ ಕಾಲಃ=ಪರನಾಮಕವಾದ ಬ್ರಹ್ಮದೇವರ ಆಯುಷ್ಯವು ನಿಮೇಷಃ ಉಪಚರ್ಯತೇ=ಮೂರುಲವಾತ್ಮಕವಿದ್ದಂತೆ ಎಂದು ಔಪಚಾರಿಕವಾಗಿ ಹೇಳಲ್ಪಡು-ವುದು. ಯತ್ರಾಸೀತ್ ಸೂಕರಃ' ಮುಂತಾಗಿ ಹೇಳುವುದರಿಂದ ವರಾಹಾದಿರೂಪ-ಗಳಿಗೆ ಕಾಲ ಪರಿಮಿತಿ ಇದೆ, ಮೂಲರೂಪಕ್ಕೆ ಮಾತ್ರ ಆಯುರ್ಮಾನವಿಲ್ಲವೇನೋ ಎಂದು ಶಂಕೆ ಬರುವುದು ಕಾರಣ ಪ್ರಮಾಣದಿಂದ ಶ್ಲೋಕತಾತ್ಪರ್ಯ ಹೇಳುವರು.

**ನಾಯುರ್ಮಾನಂ ಭಗವತಃ ಕಸ್ಮಿನ್ ರೂಪೇಽಪಿ ವಿದ್ಯತೇ ।**
**ಅನಾದಿತ್ವಾತ್ ಅಮಧ್ಯತ್ವಾತ್ ಅನಂತತ್ವಾತ್ ಚ ಸೋಽವ್ಯಯಃ ॥**

ಆದಿ, ಮಧ್ಯ, ಅಂತ (ತ್ರಿವಿಧ) ರಹಿತನಾದುದರಿಂದ ಪರಮಾತ್ಮನಿಗಾಗಲೀ ಅವನ ಯಾವುದೇ ರೂಪಗಳಿಗಾಗಲಿ ಆಯುಷ್ಯದ ಪರಿಮಿತಿ ಇರುವುದಿಲ್ಲ, ಅವನು ನಾಶರಹಿತನು ಎಂದು ಭಾವ ॥೩೭॥

ಶ್ರೀಹರಿಗೆ ಕಾಲನಿಮಿತ್ತಕವಾದ ಆಯುರ್ಮಾನವಿಲ್ಲವೆಂದು ಹೇಳಿ ಕಾಲಾ-ಧೀನತ್ವವು ಅವನಿಗೆ ಇಲ್ಲ ಎಂದು ಹೇಳುವರು-

**ಕಾಲೋಽಯಂ ಪರಮಾಣ್ವಾದಿರ್ದ್ವಿಪರಾರ್ಧಾಂತ ಈರಿತಃ ।**
**ನೈವೇಶಿಷ್ಟೇ ಸ ಪ್ರಭುರ್ಭೂಮ್ನ ಈಶ್ವರೋ ಧಾಮ ಮಾನಿನಾಂ॥೩೮॥**

ಯಃ=ಯಾವ ಪರಮಾಣ್ವಾದಿದ್ವಿಪರಾರ್ಧಾಂತಃ ಅಯಂ ಕಾಲಃ=ಪರಮಾಣು ವಿನಿಂದ ಆರಂಭ ಮಾಡಿ ಎರಡು ಪರಾರ್ಧಕಾಲವು ಅಂದರೆ ಪರನಾಮಕ ಕಾಲಾಭಿಮಾನಿನಿಯಾದ ಸರ್ವಸಂಹಾರಕಳಾದ ದುರ್ಗಾದೇವಿಯು ಈರಿತಃ= ನಿನಗೆ ಹೇಳಲ್ಪಟ್ಟಿರುವಳೋ (ಇವಳು ಹಿಂದೆ ದಾರ್ಷ್ಟಾಂತಿಕದಲ್ಲಿ ಸೇರಿರುವಳು) ಯಃ=ಯಾರು ಧಾಮಮಾನಿನಾಂ=ಲೋಕಾಭಿಮಾನಿಗಳಿಗೆ ಈಶ್ವರಃ=ನಿಯಾಮಕಳು

ಸಃ=ಆ ದುರ್ಗಾದೇವಿಯು ಭೂಮ್ನಃ=ಪೂರ್ಣಗುಣನಾದ ಶ್ರೀಹರಿಯನ್ನು ಪ್ರೇರಣೆ ಮಾಡಲು ನೈವ ಈಷ್ಟೇ= ಸಮರ್ಥಳಲ್ಲ.

ಇಲ್ಲಿ ಕಾಲಶಬ್ದಕ್ಕೆ ಜಡಕಾಲ ಎಂದರ್ಥ ಮಾಡಿದರೆ ಈಶಿತೃತ್ವ ಕೂಡಲಾರದು. ನಿಯಾಮಕನಾದ ಶ್ರೀಹರಿಯೆಂದೂ ಹೇಳಲಾಗದು. ಭೂಮ್ನಃ ಎಂದು ಪ್ರತ್ಯೇಕ ಹೇಳಿದೆ. ಯಮ ಮುಂತಾದವರನ್ನೂ ಹೇಳಲಾಗದು, ಲೋಕಾಭಿಮಾನಿ ನಿಯಾಮಕತ್ವ ಕೂಡಲಾರದು. ಕಾರಣ ಇಲ್ಲಿ ವಿವಕ್ಷಿತ ಕಾಲವನ್ನು ತಿಳಿಸಲು ಶ್ಲೋಕ ತಾತ್ಪರ್ಯ ಹೇಳುವರು –

**ಯಮಃ ಕಾಲೋ ಮಾನುಷಾಣಾಂ ತಸ್ಯ ಕಾಲಃ ಸುದರ್ಶನಃ ।**
**ತಸ್ಯಾಪಿ ರುದ್ರಸ್ತತ್ಕಾಲೋ ಬ್ರಹ್ಮಾ ದುರ್ಗಾಪಿ ತಸ್ಯ ತು ॥**
**ಸಾ ಬ್ರಹ್ಮಪ್ರಳಯೇ ದೇವೀ ವರ್ತತೇ ಚಕ್ರರೂಪಿಣೀ ।**
**ಸಂಹರಂತೀ ಸದಾ ಲೋಕಾನ್ ಸೈವ ಬ್ರಹ್ಮಾದಿಷು ಸ್ಥಿತಾ ।**
**ತಸ್ಯಾ ನಿಯಾಮಕೋ ವಿಷ್ಣುಃ ಪರಃ ಕಾಲಃ ಸ ಉಚ್ಯತೇ ॥**
**ಕಾಲಾಭಿಮಾನಿನೀ ಸೈವ ಪ್ರಭುರ್ನ ಜಗದೀಶಿತುಃ ।**
**ತಸ್ಯಾಃ ಪ್ರಭುಃ ಸ ಏವೇಶೋ ವಿಷ್ಣುಃ ಸರ್ವೇಶ್ವರೇಶ್ವರಃ ॥ ಇತಿಚ**

ಮನುಷ್ಯರಿಗೆ ಸಂಹಾರಕನು ಯಮನು. ಯಮನಿಗೆ ಸುದರ್ಶನಾಭಿಮಾನಿ ಕಾಮನು. ಕಾಮನಿಗೆ ರುದ್ರನು. ರುದ್ರನಿಗೆ ಬ್ರಹ್ಮನು. ಬ್ರಹ್ಮನಿಗೆ ದುರ್ಗೆಯು ಸಂಹಾರಕಳು. ಇವಳು ಬ್ರಹ್ಮಪ್ರಳಯದಲ್ಲಿ ಚಕ್ರರೂಪದಿಂದ ಇರುವಳು. ಅವಳೇ ಬ್ರಹ್ಮಾದಿಗಳಲ್ಲಿದ್ದು ಯಾವಾಗಲೂ ಜನರನ್ನು ಸಂಹರಿಸುವಳು. ಅವಳಿಗೆ ನಿಯಾಮಕನು ಶ್ರೀ ವಿಷ್ಣುವು. ಅವನು ಪರಃ ಕಾಲಃ=ಮುಖ್ಯ ಸಂಹಾರಕನು ಕಾಲಾಭಿಮಾನಿನಿಯಾದ ದುರ್ಗಾದೇವಿಯು ಜಗದೊಡೆಯನಾದ ಶ್ರೀಹರಿಯನ್ನು ನಿಯಮಿಸಲು ಸಮರ್ಥಳಲ್ಲ. ಅವಳಿಗೂ ನಿಯಾಮಕನು ಸರ್ವೇಶ್ವರರಿಗೂ ಈಶ್ವರನಾದ ಶ್ರೀ ವಿಷ್ಣುವು ॥೩೮॥

ಈ ರೀತಿ ಕಾಲಾನಂತ್ಯವನ್ನು ಹೇಳಿ ದೇಶಾನಂತ್ಯವನ್ನು ಹೇಳುವರು–

**ವಿಕಾರೈಃ ಷೋಡಶೈರ್ಯುಕ್ತೋ ವಿಶೇಷಾದಿಭಿರಾವೃತಃ ।**
**ಅಂಡಕೋಶೋ ಬಹಿರಯಂ ಪಂಚಾಶತ್‌ಕೋಟಿವಿಸ್ತೃತಃ ॥೩೯॥**

**ದಶೋತ್ತರಾಧಿಕೈರ್ಯತ್ರ ಪ್ರವಿಷ್ಟಃ ಪರಮಾಣುವತ್ ।**
**ಲಕ್ಷ್ಯತೇಽಂತರ್ಗತಾಶ್ಚಾನ್ಯೇ ಕೋಟಿಶೋ ಹ್ಯಂಡರಾಶಯಃ ॥೪೦॥**

ಷೋಡಶೈಃ ವಿಕಾರೈಃ ಯುಕ್ತಃ=ವಿಕೃತವಾಗುವುದರಿಂದ ವಿಕಾರಗಳೆನಿಸಿದ ಹನ್ನೊಂದು ಇಂದ್ರಿಯಗಳು ಪಂಚಮಹಾಭೂತಗಳೆಂಬ ಹದಿನಾರು ವಿಕಾರಗಳಿಂದ ಕೂಡಿದ ಅಂದರೆ ಅವುಗಳಿಂದ ವಿಕೃತವಾದ ವಿಶೇಷಾದಿಭಿಃ=ಅಂಡದ್ವಿಗುಣಿತ ಪೃಥಿವಿಯೇ ಮೊದಲಾದ ಬಹಿಃ=ಬ್ರಹ್ಮಾಂಡದ ಹೊರಗಿರುವ ಒಂದಕ್ಕಿಂತ ಒಂದು ದಶೋತ್ತರಾಧಿಕಃ=ಹತ್ತ ಪಟ್ಟು ಹೆಚ್ಚಾಗಿರುವ ಅಬಾದಿ ಆವರಣಗಳಿಂದ ಆವೃತಃ= ಆವರಿಸಲ್ಪಟ್ಟ ಪಂಚಾಶತ್‌ಕೋಟಿವಿಸ್ತೃತಃ=ಐವತ್ತು ಕೋಟಿ ವಿಸ್ತಾರವುಳ್ಳ ಅಯಂ ಅಂಡಕೋಶಃ=ಈ ಬ್ರಹ್ಮಾಂಡವು ಯತ್ರ ಪ್ರವಿಷ್ಟಃ=ಯಾವ ಪರಮಾತ್ಮನಲ್ಲಿ ಪ್ರವಿಷ್ಟವಾದುದಾಗಿ ಪರಮಾಣುವತ್ ಲಕ್ಷ್ಯತೇ=ಪರಮಾಣುವಿನಂತೆ ತಿಳಿಯಲ್ಪಡು-ವುದು ಅನ್ಯೇ=ಇನ್ನೂ ಅನೇಕ ಕೋಟಿಶಃ ಅಂಡರಾಶಯಃ=ಬ್ರಹ್ಮಾಂಡಗಳು ಲಕ್ಷ್ಯಂತೇ=ಬ್ರಹ್ಮದೇವರಿಂದ ನೋಡಲ್ಪಡುವುವು.

ವಿಕಾರಶಬ್ದದಿಂದ ಮತ್ತು ವಿಶೇಷಶಬ್ದದಿಂದಲೂ ಭೂತಾದಿಗಳನ್ನು ತೆಗೆದು-ಕೊಂಡರೆ ಬ್ರಹ್ಮಾಂಡಕ್ಕೆ ಅವುಗಳಿಂದ ಕೂಡಿದ್ದು ಎಂಬುದು ಅವುಗಳಿಂದಲೇ ಆವೃತ ಎಂಬುದು ವಿರುದ್ಧವಾಗುವುದು ಕಾರಣ ಅದನ್ನು ಕೂಡಿಸಲು ಪ್ರಮಾಣ ಹೇಳುವರು –

**ದಶೇಂದ್ರಿಯಾಣಿ ಚ ಮನೋ ಭೂತಾನ್ಯಂಡಗತಾನಿ ತು ।**
**ವಿಕಾರಾ ಇತಿ ವಿಜ್ಞೇಯಾ ಭೂತಾಹಂಮಹತಃ ಪರೇ ॥ ಇತಿ ಚ ।**

ಹತ್ತು ಇಂದ್ರಿಯಗಳು ಮತ್ತು ಮನಸ್ಸು ಪಂಚಭೂತಗಳು ಈ ಹದಿನಾರು ಉಪಾದಾನವಾಗಿ ಬ್ರಹ್ಮಾಂಡದ ಒಳಗೆ ಸೇರಿರುವುವುಗಳನ್ನು ವಿಕಾರಗಳೆಂದು ತಿಳಿಯಬೇಕು. ಉಪಾದಾನವಾಗದಿರುವ ಭೂತಗಳು ಅಹಂಕಾರತತ್ವ ಮಹತ್ತ್ವಗಳು ಬ್ರಹ್ಮಾಂಡದ ಹೊರಗೂ ಇವೆ. ಅಂದ ಮೇಲೆ ಉಪಾದಾನವಾಗಿ ಅನುಸ್ಯೂತಗಳಾದ ಭೂತಾದಿಗಳಿಂದ ಯುಕ್ತವು ಹೊರಗಿರುವುವುಗಳಿಂದ ಆವೃತವು ಆಗುವುದು ಕಾರಣ ವಿರೋಧವಿಲ್ಲವೆಂದು ಭಾವ.

ಮೂಲದಲ್ಲಿ ವಿಶೇಷಶಬ್ದದ ಅರ್ಥವೇನು ? ಪೃಥಿವೀ ಎನ್ನುವುದಾದರೆ ಅದಕ್ಕೆ ವಿಶೇಷ ಎಂಬ ಹೆಸರು ಬರಲು ಕಾರಣವೇನು ? ಮತ್ತು ಪೃಥಿವಿಯ ಹಾಗು ಆದಿಶಬ್ದದಿಂದ ಸ್ವೀಕರಿಸಿದ ಜಲಾದಿಗಳ ಪರಿಮಾಣ ಸಮವಾಗಿಯೋ ವಿಷಮವೋ ಎಂಬ ಶಂಕೆ ಪರಿಹರಿಸಲು ಪ್ರಮಾಣವನ್ನೇ ಪಠಿಸುವರು:–

**ಪೃಥವೀಂ ವಿಶೇಷ ಇತ್ಯಾಹುಃ ಶಬ್ದಾದೀನಾಂ ಬಹುತ್ವತಃ ।**
**ಸಾ ಸೂಕ್ಷ್ಮತ್ವಾತ್ ವೃಣೋತ್ಯಂಡಂ ದ್ವಿಗುಣಾ ತು ದಶೋತ್ತರಾ ।**
**ಅಬಾದಯಃ ಪ್ರಕೃತ್ಯಂತಾ ಅಷ್ಟಪ್ರಕೃತಯಃ ಸ್ಮೃತಾಃ ॥ ಇತಿ ಚ ।**

ಪರಾನ್ವಯದಿಂದ ಅಂದರೆ ಹಿಂದಿನ ಹಿಂದಿನ ಕಾರಣಗಳು ಮುಂದಿನ ಕಾರ್ಯದಲ್ಲಿ ಅನೂಸ್ಯೂತವಾಗುವುದರಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದೂ ಗುಣಗಳು ಇರುವುದರಿಂದ ಪೃಥಿವಿಯನ್ನು ವಿಶೇಷವೆನ್ನುವರು. ಆ ಪೃಥಿವಿಯು ಬ್ರಹ್ಮಾಂಡದ ಎರಡು ಪಟ್ಟು ಪರಿಮಾಣವುಳ್ಳದ್ದು ಅಂಡಕಟಾಹವು ಪೃಥವಿಗಿಂತ ಸೂಕ್ಷ್ಮವಾದ್ದರಿಂದ ಅದನ್ನು ಆವರಿಸುವುದು ಯುಕ್ತವೇ ಅಥವಾ ಅಸೂಕ್ಷ್ಮತ್ವಾತ್ ಎಂದು ಪದವಿಭಾಗಮಾಡಿ ಬ್ರಹ್ಮಾಂಡದಕಿಂತ ಸೂಕ್ಷ್ಮವಲ್ಲದ್ದರಿಂದ (ಸ್ಥೂಲವಾದುದರಿಂದ)ಆವರಿಸಿರುವುದು ಯುಕ್ತ ಹೀಗೂ ಅರ್ಥ ಮಾಡಬಹುದು. ಆದಿಪದ ಗೃಹೀತ ಆಬಾದಿ ಪ್ರಕೃತಿ ಪರ್ಯಂತ ತತ್ವಗಳು ಒಂದಕ್ಕಿಂತ ಒಂದು ಹತ್ತು ಪಟ್ಟು ಹೆಚ್ಚು ಪರಿಮಾಣವುಳ್ಳವುಗಳು ಇವುಗಳಿಗೆ ಅಷ್ಟ ಪ್ರಕೃತಿಗಳು ಎನ್ನುವರು ಕಾರಣ ಗ್ರಂಥಾಂತರಗಳಲ್ಲಿ ಅಷ್ಟ ಪ್ರಕೃತಿಯಿಂದ ಆವೃತ ಎಂದು ಹೇಳಿದ್ದಕ್ಕೆ ವಿರೋಧವಿಲ್ಲ. ಪಂಚಭೂತಗಳು, ಅಹಂಕಾರತತ್ವ ಮಹತ್ತತ್ವ ಅವ್ಯಕ್ತತತ್ವ ಹೀಗೆ ಎಂಟು ಭಾಗವತದಲ್ಲಿ ಏಕಕಾಲದಲ್ಲಿ ಅನೇಕ ಬ್ರಹ್ಮಾಂಡಗಳನ್ನು ಹೇಳಿರುವರು ಅದನ್ನು ಉಪಪಾದಿಸಲು ಅಪೇಕ್ಷಿತ ಅಧ್ಯಾಹಾರ ಮಾಡಿರುವರು;

**ಅಂತರ್ಗತಾಃ ಶರೀರಾಣಿ ॥**

**ಶರೀರಾಣಾಂ ಬಹುತ್ವೇನ ಅತೀತಾನಗತೈಸ್ತಥಾ ।**
**ಅಸ್ಯೈವ ದೇವಕಾಯೇಷು ಪ್ರತಿ ಪ್ರತಿ ಚ ದರ್ಶನಾತ್ ।**
**ವಿಷ್ಣುಸಾಮರ್ಥ್ಯತೋಽಂಡಾನಾಂ ಬಹುತ್ವಂ ನಾನ್ಯಥಾ ಭವೇತ್ ॥**
**ಇತಿ ಬ್ರಹ್ಮತರ್ಕೇ ।**

**''ಏಕಮಂಡಂ ಬಹುತ್ವೇನ ಪ್ರತ್ಯೇಕಂ ರೋಮಕೂಪಗಂ ।**
**ಬ್ರಹ್ಮಾಽಪಶ್ಯತ್ತಥಾಽಽತ್ಮಾನಂ ಹರೇಃ ತೇಷು ಪೃಥಕ್ ಪೃಥಕ್'' ॥**
**ಇತಿ ಬ್ರಹ್ಮಾಂಡೇ ।**

ಭಗವಂತನ ಬಹು ಶರೀರಗಳನ್ನು ಬ್ರಹ್ಮಾಂಡಗಳು ಪ್ರವೇಶಿಸಿರುವುವು. ಶರೀರಗಳು ಬಹುವಾದುದರಿಂದ ಅವುಗಳಲ್ಲಿ ಪ್ರವಿಷ್ಟವಾದ ಬ್ರಹ್ಮಾಂಡಕ್ಕೆ ಬಹುತ್ವವೆಂದು ಭಾವ. ಇದು ಒಂದು ಸಮಾಧಾನ. ಹಿಂದಿನ ಮತ್ತು ಮುಂದಿನ ಬ್ರಹ್ಮಾಂಡಗಳ ವಿವಕ್ಷಯಾ ಅನೇಕ ಎಂದು ಹೇಳಿರುವರು. ಎರಡನೆ ಸಮಾಧಾನ ಶರೀರಗಳು ಬಹಳವಾದರೂ ಬ್ರಹ್ಮಾಂಡಗಳು ಬಹಳ ಹೇಗೆ ಎಂದರೆ ಇದೇ ಒಂದು ಬ್ರಹ್ಮಾಂಡ ವಿಷ್ಣುವಿನ ಪ್ರತಿಯೊಂದು ರೂಪದಲ್ಲಿಯೂ ಶ್ರೀಹರಿಯ ಸಾಮರ್ಥ್ಯ-ದಿಂದ ಕಾಣಿಸುವುದರಿಂದ ಬ್ರಹ್ಮಾಂಡಗಳಿಗೆ ಬಹುತ್ವವು ಹೊರತು ಘಟಾದಿಗಳಂತೆ ಭಿನ್ನವಾದವುಗಳಿಗೆ ಬಹುತ್ವವು ಬಹುತ್ವೋಕ್ತಿಗೆ ಅರ್ಥವಲ್ಲ. ಅನೇಕ ರೂಪಗಳಲ್ಲಿ

ಕಾಣಿಸುವುದರಿಂದ ಬಹುತ್ವವಿದ್ದಂತೆ ಒಂದೇ ರೂಪದಲ್ಲಿ ಒಂದೊಂದು ರೋಮ-ಕೂಪಗಳಲ್ಲಿ ಒಂದೇ ಬ್ರಹ್ಮಾಂಡವನ್ನು ಬ್ರಹ್ಮದೇವರು ನೋಡುವುದರಿಂದಲೂ ಬ್ರಹ್ಮಾಂಡದ ಬಹುತ್ವ ತಿಳಿಯಬಹುದು. ಬ್ರಹ್ಮಾಂಡದ ಜೊತೆಗೆ ತನ್ನನ್ನು ಪ್ರಪ್ರತ್ಯೇಕವಾಗಿ ಹರಿಯ ಶರೀರದಲ್ಲಿ  ರೋಮಕೂಪದಲ್ಲಿ ಕಂಡನು. ಒಂದೇ ಬ್ರಹ್ಮಾಂಡವು ಅನೇಕವಾಯಿತು ಎಂದು ಭಾರತದಲ್ಲಿಯೂ ಹೇಳಿದೆ ॥೩೯-೪೦॥

ಈಗ ಗುಣತಃ ಅನಂತ್ಯವನ್ನು ಶ್ರೀಹರಿಗೆ ತಿಳಿಸುತ್ತ ಬ್ರಹ್ಮಾಂಡಕ್ಕೆ ಆಧಾರವಾದ ಶ್ರೀಹರಿಗೆ ಬ್ರಹ್ಮಾಂಡಂತರ್ಗತತ್ವವೂ ಇದೆ ಎಂದು ಹೇಳುವರು –

**ಯಮಾಹುರಕ್ಷರಂ ಬ್ರಹ್ಮ ಸರ್ವಕಾರಣಕಾರಣಂ ।**
**ವಿಷ್ಣೋರ್ಧಾಮ ಪರಂ ಸಾಕ್ಷಾತ್ ಪುರುಷಸ್ಯ ಮಹಾತ್ಮನಃ ॥೪೧॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ದ್ವಾದಶೋಽಧ್ಯಾಯಃ ॥*

ಯಂ=ಯಾವಾತನನ್ನು ಅಕ್ಷರಂ=ದೇಹನಾಶರಹಿತನೆಂದು ಸರ್ವಕಾರಣ-ಕಾರಣಂ=ಎಲ್ಲ ಪ್ರಪಂಚಕಾರಣರಾದ ಬ್ರಹ್ಮಾದಿಗಳಿಗೆ ಕಾರಣನು ಬ್ರಹ್ಮ ಗುಣಪೂರ್ಣನು ಎಂದು ಆಹುಃ=ಹೇಳುವರೋ ಅಂಥ ಮಹಾತ್ಮನಃ=ಮಹಾ-ಪರಿಮಾಣೋಪೇತನಾದ ಸಾಕ್ಷಾತ್ ಪುರುಷಸ್ಯ=ಅಂತಂತ ಸೂಕ್ಷ್ಮ ಶರೀರದಲ್ಲಿ ಇರುವುದರಿಂದ ಪುರುಷನಾಮಕನಾದ ವಿಷ್ಣೋಃ=ಶ್ರೀಹರಿಯ, ಧಾಮ=ಮನೆ-ಯಿದ್ದಂತೆ ಅಂಡರಾಶಯಃ ಬ್ರಹ್ಮಾಂಡಗಳು ಆದ್ದರಿಂದ ಬ್ರಹ್ಮಾಂಡದ ಹೊರಗೂ ಒಳಗೂ ಇರುವುದರಿಂದ ದೇಶತ ಆನಂತ್ಯವು ಶ್ರೀಹರಿಗೆ ಎಂದು ಸಿದ್ಧವಾಯಿತು ॥೪೧॥

*ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು ಮುಗಿಯಿತು.*

## ಹನ್ನೆರಡನೆಯ ಅಧ್ಯಾಯದ ತಾತ್ಪರ್ಯ

ವಿದುರ, ಕಾಲರೂಪಿಯಾದ ಶ್ರೀಹರಿಯ ಲಕ್ಷಣವನ್ನು ತಿಳಿಸೆಂದು ಕೇಳಿದೆಯಲ್ಲವೇ. ಕಾಲವು ಅತಿಸೂಕ್ಷ್ಮವೂ, ಅನಂತವೂ ಆಗಿರುವುದು. ಪ್ರಪಂಚ-ದಲ್ಲಿರುವ ವಸ್ತುಗಳಲ್ಲಿ ಅತಿ ಸೂಕ್ಷ್ಮವಾದ ಭಾಗವನ್ನು ಪರಮಾಣುವೆಂದು ಕರೆದಿರುವರು. ಆದರೆ ಇದರಲ್ಲಿಯೂ ಅನೇಕ ಭಾಗಗಳಿವೆ. ಅದರಲ್ಲಿರುವ ಸೂಕ್ಷ್ಮ ಭಾಗವನ್ನು ತಿಳಿಯಲು ಆಗದೆ ಭ್ರಾಂತರಾದ ಮನುಷ್ಯರು ಅದನ್ನೇ ಪರಮಾಣು-ವೆಂದು ವ್ಯವಹರಿಸಿದರು. ಸತ್ ಎಂಬ ಶಬ್ದದ ಮುಖ್ಯಾರ್ಥವೆನಿಸುವ ಶ್ರೀಹರಿಯು ಸರ್ವತ್ರ ವ್ಯಾಪಿಸಿ ಕೇವಲವೆನಿಸುವ ಉದಾಸೀನ ಭಾವದಲ್ಲಿರುವನು. ಅವನ ಈ ರೂಪವು ಮತ್ತೊಂದರಲ್ಲಿ ಅಧಿಷ್ಠಿತವಲ್ಲ. ಇದರಲ್ಲಿ ರೂಪವಿಶೇಷಗಳನ್ನು ತೋರಿಸುವುದಿಲ್ಲ, ಅಲ್ಪಪ್ರದೇಶವ್ಯಾಪ್ತಿ ಮೊದಲಾದ ವಿಭಾಗಗಳನ್ನೂ ಹೇಳುವಂತಿಲ್ಲ ಅಂತಹ ಈ ರೂಪಕ್ಕೆ ನಾರಾಯಣ, ಶೂನ್ಯ, ಬ್ರಹ್ಮ ಎಂಬ ಹೆಸರುಗಳಿರುವುವು. ಈ ರೂಪವು ಅನಂತಕಾಲ ರೂಪಿಣಿಯಾದ ಲಕ್ಷ್ಮೀಯಲ್ಲಿರುವುದು. ಆದರೂ ಈ ರೂಪಕ್ಕೆ ಸ್ವರೂಪಾಧಿಷ್ಠಿತವೆಂದೇ ಹೆಸರು. ಇಂತಹ ಶ್ರೀಹರಿಯ ರೂಪವು ಪರಮ ಮಹತ್ತೆನಿಸುವುದು. ಶ್ರೀಹರಿಯು ದೇಶ, ಕಾಲ ಮತ್ತು ಗುಣಗಳಿಂದ ಅನಂತನು. ಆದರೆ ಕೆಲವೆಡೆ ದೇಶದಿಂದ ಅಂತವಿದ್ದಂತೆ ತೋರಿಸುವನು. ಆದರೆ ಕಾಲಗುಣಗಳಿಂದ ಅಂತತೆಯನ್ನು ಎಂದೂ ತೋರಿಸುವುದಿಲ್ಲ.

ಕಾಲದಲ್ಲಿಯೂ ಹೀಗೆಯೇ ಪರಮಾಣು ಪರಮಮಹತ್ಕಾಲಗಳಿರುವುವು. ಇದನ್ನು ಶಾಸ್ತ್ರ, ಸಾಕ್ಷಿ, ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಜ್ಞಾನಿಗಳು ತಿಳಿದಿರುವರು. ಶ್ರೀಹರಿಯು ಅವ್ಯಕ್ತನಾಗಿ ಈ ಎಲ್ಲ ಕಾಲಗಳಲ್ಲಿಯೂ ಅಂತರ್ಯಾಮಿಯಾಗಿ ಅದೇ ಹೆಸರಿನಿಂದ ಕರೆಸಿಕೊಳ್ಳುತ್ತಾ ಆಯಾ ಕಾಲದಲ್ಲಿ ಜಗತ್ತನ್ನು ಸೃಷ್ಟಿಸುವನು, ಪಾಲಿಸುವನು ಮತ್ತು ಸಂಹರಿಸುವನು. ಲಕ್ಷ್ಮೀ ಬ್ರಹ್ಮಾದಿ ದೇವತೆಗಳೂ ತಮ್ಮ ತಮ್ಮ ವ್ಯಾಪ್ತಿಗೆ ತಕ್ಕಂತೆ ಕಾಲದ ಅವಯವಗಳಿಗೆ ಅಂತರ್ಯಾಮಿಗಳಾಗಿರುವರು. ಆದರೆ ಪರಮ ಮಹತ್ಕಾಲಾಂತರ್ಯಾಮಿತ್ವವು ಶ್ರೀಹರಿಗೆ ಮಾತ್ರವೇ ಸಲ್ಲುವುದು. ಹಿಂದೆ

ಹೇಳಿದಂತೆ ಸೂಕ್ಷ್ಮಕಾಲ ಲಕ್ಷಣಗಳನ್ನು ಹೊಂದಿರುವ ಸೂಕ್ಷ್ಮಕಾಲಕ್ಕೆ ಪರಮಾಣು ಕಾಲವೆಂದು ಹೆಸರು. ಹೀಗೆಯೇ ಪರಮಮಹತ್ ಪದಾರ್ಥದ ಲಕ್ಷಣದಿಂದ ಕೂಡಿರುವ ಕಾಲವು ಪರಮಮಹತ್ಕಾಲ. ಇವುಗಳ ಅಂತರ್ಯಾಮಿ ಶ್ರೀಹರಿಯ ರೂಪಗಳಿಗೂ ಅದೇ ಹೆಸರು. ಎರಡು ಪರಮಾಣುಗಳು ಸೇರಿದ ಕಾಲಕ್ಕೆ ದ್ವ್ಯಣುಕವೆಂದೂ, ಮೂರು ದ್ವ್ಯಣುಕಕಾಲಕ್ಕೆ ತ್ರ್ಯಣುಕಯೆಂದೂ ಹೆಸರು. ಈ ಕಾಲವು ಸಾಮಾನ್ಯರ ಪ್ರತ್ಯಕ್ಷಕ್ಕೂ ವಿಷಯವಾಗಿರುವುದು. ಮೂರು ತ್ರ್ಯಣುಕಕಾಲಕ್ಕೆ ತ್ರುಟಿ, ಮೂರು ತ್ರುಟಿಗಳು ವೇಧ, ಮೂರು ವೇಧಗಳು ಲವ, ಮೂರು ಲವಗಳು ನಿಮೇಷ, ಮೂರು ನಿಮೇಷಗಳು ಕ್ಷಣ, ಐದು ಕ್ಷಣಗಳು ಕಾಷ್ಠಾ, ಹದಿನೈದು ಕಾಷ್ಠಗಳು ಲಘು, ಹದಿನೈದು ಲಘುಗಳು ನಾಡಿಕೆ (ಘಳಿಗೆ), ಎರಡು ನಾಡಿಕೆಗಳು ಒಂದು ಮುಹೂರ್ತವೆನಿಸುವುವು. ಅಹೋರಾತ್ರ ಪ್ರಮಾಣಗಳಿಗೆ ತಕ್ಕಂತೆ ಆರು ಅಥವಾ ಏಳು ಅಥವಾ ಎಂಟು ನಾಳಿಕೆಗಳು ಜಾವವೆನಿಸುವುವು. ಸರಿಯಾದ ಘಳಿಗೆಯನ್ನು ಪರೀಕ್ಷಿಸಬೇಕಾದರೆ ಘಳಿಗೆ ಪಾತ್ರೆಯು ಸರಿಯಾಗಿರಬೇಕು. ಆರು ಪಲಗಳಷ್ಟು ತೂಕವುಳ್ಳ ಪ್ರಸ್ಥ (ಬಳ್ಳಾ)ದಷ್ಟು ನೀರು ಹಿಡಿಯುವ ಪಾತ್ರೆಯು ನಾಲ್ಕು ಮಾಷಗಳ ತೂಕವುಳ್ಳ ನಾಲ್ಕು ಅಂಗುಲ ಉದ್ದದ ಬಂಗಾರದ ಸಲಾಕೆಯಷ್ಟು ದಪ್ಪದ ನಾಲ್ಕು ತೂತುಗಳಲ್ಲಿ ಶುದ್ಧವಾದ ನೀರನ್ನು ತೆಗೆದುಕೊಂಡು ಮುಳುಗುವ ಕಾಲವೇ ಘಳಿಗೆಯೆನಿಸುವುದು.

ನಾಲ್ಕು ಜಾವಗಳು ಹಗಲು ಮತ್ತು ನಾಲ್ಕು ಜಾವಗಳು ರಾತ್ರಿ. ಇವು ಹದಿನೈದು ಆದರೆ ಒಂದು ಪಕ್ಷ-ಸೂರ್ಯಾಸ್ತಮಾನವಾದಕೂಡಲೆ ಚಂದ್ರನು ಕಾಣುವ ಪಕ್ಷಕ್ಕೆ ಶುಕ್ಲಪಕ್ಷವೆಂದೂ, ಕ್ರಮವಾಗಿ ಕೆಲವು ಘಳಿಗೆಗಳ ನಂತರ ಚಂದ್ರೋದಯವಾಗುವ ಪಕ್ಷಕ್ಕೆ ಕೃಷ್ಣಪಕ್ಷವೆಂದೂ ಹೆಸರು. ಈ ಎರಡು ಪಕ್ಷಗಳೂ ಸೇರಿದರೆ ಒಂದು ಮಾಸ. ಈ ಮನುಷ್ಯಮಾನದ ಮಾಸವು ಪಿತೃಗಳಿಗೆ ಒಂದು ದಿನ. ಮಾಸಗಳು ಎರಡಕ್ಕೆ ಋತು. ಆರಕ್ಕೆ ಅಯನವೆಂದು ಹೆಸರು. ಸೂರ್ಯನು ದಕ್ಷಿಣಕ್ಕೆ ಹೋಗುವ ಕಾಲ ದಕ್ಷಿಣಾಯನ, ಉತ್ತರಕ್ಕೆ ಹೋಗುವ ಕಾಲ ಉತ್ತರಾಯಣ. ಮನುಷ್ಯಮಾನದ ಈ ಎರಡು ಅಯನಗಳು ದೇವಮಾನದಿಂದ ಒಂದು ದಿನ. ಮನುಷ್ಯಮಾನದ ಹನ್ನೆರಡು ತಿಂಗಳುಗಳು ಒಂದು ವತ್ಸರ. ಇಂತಹ ನೂರು ವತ್ಸರಗಳು ಮನುಷ್ಯರ ಪೂರ್ಣಾಯುಸ್ಸು. ಶ್ರೀಹರಿಯು ಈ ಎಲ್ಲ ಕಾಲಗಳಲ್ಲಿಯೂ ಅಂತರ್ಯಾಮಿ-ಯಾಗಿದ್ದು ಆಯಾಯಾ ಹೆಸರಿನಿಂದಲೇ ಕರೆಸಿಕೊಳ್ಳುವನು. ಸೂರ್ಯ ಮೊದಲಾದ ನವಗ್ರಹಗಳಲ್ಲಿಯೂ, ಅಶ್ವಿನೀ ಮೊದಲಾದ ತಾರೆಗಳಲ್ಲಿಯೂ, ಧ್ರುವ ಮೊದಲಾದ ನಕ್ಷತ್ರಗಳಲ್ಲಿಯೂ ಇದ್ದುಕೊಂಡು ಶ್ರೀಹರಿಯು ಜಗತ್ತನ್ನು ಮತ್ತೆ

ಮತ್ತೆ ಸುತ್ತುತ್ತಿರುವನು. ಸೌರಮಾನದ ವರ್ಷವು ಸಂವತ್ಸರ; ಬೃಹಸ್ಪತಿಯ ಚಾರಕ್ಕನುಗುಣವಾದ ವರ್ಷ ಪರಿವತ್ಸರ; ನಕ್ಷತ್ರಮಾನದ ವರ್ಷ ಇಡಾವತ್ಸರ; ತಿಥಿಮಾನ (ಚಾಂದ್ರ)ದ ವರ್ಷ ಅನುವತ್ಸರ; ಮುನ್ನೂರ ಅರವತ್ತು ದಿನಗಳ ಕಾಲ ವತ್ಸರ. ಈ ಕಾಲಗಳಲ್ಲಿ ವ್ಯಾಪ್ತವಾಗಿರುವ ಶ್ರೀಹರಿಯ ರೂಪಗಳಿಗೂ ಇವೇ ಹೆಸರುಗಳು. ಶ್ರೀಹರಿಯು ಈ ಎಲ್ಲ ಕಾಲಗಳಲ್ಲಿಯೂ ಇದ್ದುಕೊಂಡು ತನ್ನ ಇಚ್ಛೆಗನುಸಾರವಾಗಿ ತನ್ನ ಸಾಮರ್ಥ್ಯದಿಂದಲೇ ಆಯಾ ಪದಾರ್ಥಗಳ ಸ್ವಭಾವವನ್ನು ಅನೇಕ ಪ್ರಕಾರವಾಗಿ ಪ್ರಕಟಪಡಿಸುವನು. ಈ ಸೃಷ್ಟಿ ಮೊದಲಾದ ಕಾರ್ಯಗಳನ್ನು ಸಚ್ಚೇತನರ ಮೋಕ್ಷಕ್ಕಾಗಿ ನಡೆಸುವನು. ಇದರಿಂದ ಜೀವರ ತಾರತಮ್ಯವನ್ನೂ ತೋರಿಸಿಕೊಡುತ್ತಿರುವನು. ಈ ಕಾಲರೂಪನಾದ ಶ್ರೀಹರಿಯೇ ಸೂರ್ಯನಲ್ಲಿದ್ದು ವೇಗವಾಗಿ ತಿರುಗುತ್ತಿರುವನು. ನಾವು ಮಾಡುವ ಪ್ರತಿಯೊಂದು ಕೆಲಸವೂ ಅವನ ಪೂಜೆಯೆಂದು ಮಾಡಬೇಕು. ಆಗಲೇ ನಮ್ಮ ಜನ್ಮ ಸಾರ್ಥಕವಾಗುವುದು.

ವಿದುರರು - ಮನುಷ್ಯರ, ಪಿತೃಗಳ ಮತ್ತು ದೇವತೆಗಳ ಪೂರ್ಣವಾದ ಆಯುಸ್ಸನ್ನು ತಿಳಿಸಿದಿರಿ. ಮಹರ್ಲೋಕಾದಿಗಳಲ್ಲಿರುವ ಜ್ಞಾನಿಗಳ ಸ್ಥಿತಿಯನ್ನೂ ದಯವಿಟ್ಟು ತಿಳಿಸಬೇಕು. ಮೈತ್ರೇಯರೇ, ಪೂಜ್ಯರಾದ ತಾವು ಜ್ಞಾನಿಗಳು. ಜ್ಞಾನಿಗಳು ಯೋಗಸಿದ್ಧಿಯಿಂದ ಎಲ್ಲವನ್ನೂ ತಿಳಿಯಬಲ್ಲರು. ಆದ್ದರಿಂದ ಕಾಲಾಂತರ್ಯಾಮಿಯಾದ ಶ್ರೀಹರಿಯ ವಿಷಯಗಳು ತಮಗೆ ತಿಳಿದೇ ಇರುವುವು. ದಯವಿಟ್ಟು ತಿಳಿಸಿರಿ.

ಮೈತ್ರೇಯರು - ಈ ದೇವಮಾನದ ಹನ್ನೆರಡು ಸಾವಿರ ವರ್ಷಗಳು ಚತುರ್ಯುಗಗಳೆನಿಸುವುವು. ಕ್ರಮವಾಗಿ ಕೃತ, ತ್ರೇತಾ, ದ್ವಾಪರ ಮತ್ತು ಕಲಿಯುಗಗಳೆಂದು ಕರೆಯುವರು. ದೇವಮಾನದ ನಾಲ್ಕು ಸಾವಿರ ವರ್ಷಗಳು ಕೃತಯುಗ, ಮೂರು ಸಾವಿರ ವರ್ಷಗಳು ತ್ರೇತಾಯುಗ, ಎರಡು ಸಾವಿರ ವರ್ಷಗಳು ದ್ವಾಪರಯುಗ ಮತ್ತು ಒಂದು ಸಾವಿರ ವರ್ಷಗಳು ಕಲಿಯುಗ. ಈ ಸಂಖ್ಯೆಯಷ್ಟು ನೂರು ವರ್ಷಗಳು ಆಯಾಯಾ ಯುಗಗಳ ಹಿಂದಿನ ಸಂಧಿಕಾಲ ಮತ್ತು ಅಷ್ಟೇ ನೂರು ವರ್ಷಗಳು ಮುಂದಿನ ಸಂಧಿಕಾಲ. ಅಂದರೆ ನಾಲ್ಕುನೂರು ವರ್ಷಕೃತಯುಗದ ಹಿಂದೆ ಮತ್ತು ನಾಲ್ಕುನೂರು ವರ್ಷ ಮುಂದೆ ಸಂಧಿ ಕಾಲವಿರುವುದು. ಹೀಗೆಯೇ ಮುನ್ನೂರು ವರ್ಷಗಳು ಹಿಂದೆ ಮತ್ತು ಮುನ್ನೂರು ವರ್ಷಗಳು ಮುಂದೆ ತ್ರೇತಾಯುಗದ ಸಂಧಿ ಕಾಲ; ಇನ್ನೂರು ವರ್ಷಗಳು ಹಿಂದೆ ಮತ್ತು ಇನ್ನೂರು ವರ್ಷಗಳು ಮುಂದೆ ದ್ವಾಪರ ಯುಗದ ಸಂಧಿ ಕಾಲ.

ಒಂದುನೂರು ವರ್ಷಗಳು ಹಿಂದೆ ಒಂದುನೂರು ವರ್ಷಗಳು ಮುಂದೆ ಕಲಿಯುಗದ ಸಂಧಿಕಾಲ. ಈ ಸಂಧಿಕಾಲಗಳ ಮಧ್ಯದಲ್ಲಿರುವ ಸಾವಿರ ಸಂಖ್ಯೆಯ ಕಾಲಗಳೇ ಆಯಾಯಾ ಯುಗದ ಕಾಲಗಳು. ಆಯಾಯಾ ಯುಗಗಳಲ್ಲಿ ಹೇಳಿರುವ ಧರ್ಮಗಳು ಪೂರ್ಣವಾಗಿ ಇರುವುದು ಆ ಕಾಲಗಳಲ್ಲಿಯೇ. ಆದ್ದರಿಂದ ಕಾಲಜ್ಞರಾದ ಜ್ಞಾನಿಗಳು ಆ ಕಾಲವನ್ನೇ ಆಯಾಯಾ ಯುಗದ ಹೆಸರಿನಿಂದ ಕರೆಯುವರು. (ಕಲಿಯುಗಕ್ಕೂ ಕೃತಯುಗಕ್ಕೂ ಮಧ್ಯೆ ಇರುವ ಒಟ್ಟು ಸಂಧಿಕಾಲ ಐದುನೂರು ವರ್ಷಗಳು. ಕೃತಯುಗಕ್ಕೂ ತ್ರೇತಾಯುಗಕ್ಕೂ ಮಧ್ಯೆ ಏಳುನೂರು ವರ್ಷಗಳು. ತ್ರೇತಾಯುಗಕ್ಕೂ ದ್ವಾಪರಯುಗಕ್ಕೂ ಮಧ್ಯೆ ಐದುನೂರು ವರ್ಷಗಳು ಮತ್ತು ದ್ವಾಪರಯುಗಕ್ಕೂ ಕಲಿಯುಗಕ್ಕೂ ಮಧ್ಯೆ ಮುನ್ನೂರು ವರ್ಷಗಳು. ಆಯಾಯಾ ಯುಗದ ಸಂಧಿಕಾಲಗಳಲ್ಲಿ ಆಯಾಯಾ ಯುಗಧರ್ಮದ ಛಾಯೆಯು ಕಂಡುಬರುವುದು. ಆದ್ದರಿಂದ ಆಯಾಯಾ ಯುಗದ ಸಂಧಿಕಾಲಗಳೆನಿಸಿಕೊಳ್ಳುವುವು. ಉದಾ. ಕಲಿಯುಗ ಕೃತಯುಗಗಳ ಮಧ್ಯದ ಸಂಧಿಕಾಲದಲ್ಲಿ ಮೊದಲ ನೂರು ವರ್ಷಗಳಲ್ಲಿ ಕಲಿ ಧರ್ಮದ ಛಾಯೆ, ಉಳಿದ ನಾಲ್ಕುನೂರು ವರ್ಷಗಳಲ್ಲ ಕೃತಯುಗ ಧರ್ಮದ ಛಾಯೆ ಕಾಣುವುದು. ಹೀಗೆಯೇ ಉಳಿದ ಸಂಧಿಕಾಲದಲ್ಲಿಯೂ ತಿಳಿಯಬೇಕು.)

ಧರ್ಮಕ್ಕೆ ತಪಸ್ಸು, ಸತ್ಯ, ದಯೆ ಮತ್ತು ಶೌಚವೆಂಬ ನಾಲ್ಕು ಪಾದಗಳು. ಕೃತಯುಗದಲ್ಲಿ ಈ ನಾಲ್ಕು ಪಾದಗಳೂ ಇದ್ದು ಧರ್ಮವು ಪೂರ್ಣವಾಗಿರುವುದು. ತ್ರೇತೆಯಲ್ಲಿ ಒಂದು ಪಾದ ಅಧರ್ಮ. ಉಳಿದ ಮೂರು ಪಾದ ಧರ್ಮ. ದ್ವಾಪರದಲ್ಲಿ ಎರಡು ಪಾದ ಅಧರ್ಮ ಎರಡು ಪಾದ ಧರ್ಮ. ಕಲಿಯುಗದಲ್ಲಿ ಮೂರು ಪಾದ ಅಧರ್ಮ, ಒಂದು ಪಾದ ಧರ್ಮ. ಇಂತಹ ಒಂದು ಸಾವಿರ ಚತುರ್ಯುಗಗಳು ಬ್ರಹ್ಮ ದೇವರಿಗೆ ಒಂದು ಹಗಲು; ಅಷ್ಟೇ ರಾತ್ರಿ; ಇದೇ ಒಂದು ದಿನ. ಈ ರಾತ್ರಿಯಲ್ಲಿ ಬ್ರಹ್ಮದೇವರು ನಿದ್ರಿಸುವರಂತೆ ಸೃಷ್ಟಿ ಮೊದಲಾದ ಕಾರ್ಯಗಳಿಂದ ದೂರವಾಗಿರುವರು ಮತ್ತೆ ಹಗಲಿನಲ್ಲಿ ಲೋಕಗಳ ಸೃಷ್ಟಿಯು ನಡೆಯುವುದು. ಬ್ರಹ್ಮದೇವರ ಒಂದು ಹಗಲಿನಲ್ಲಿ ಲೋಕಗಳ ಸೃಷ್ಟಿಯು ನಡೆಯುವುದು. ಬ್ರಹ್ಮದೇವರ ಒಂದು ಹಗಲಿನಲ್ಲಿ ಹದಿನಾಲ್ಕು ಮನುಗಳು ರಾಜ್ಯಭಾರ ನಡೆಸುವರು. ಎಪ್ಪತ್ತೊಂದು ಮಹಾಯುಗದ ಮೇಲೆ ಹದಿನೆಂಟು ಲಕ್ಷಐವತ್ತು ಸಾವಿರ ವರ್ಷಗಳು ಒಬ್ಬೊಬ್ಬ ಮನುವಿನ ಕಾಲ. ಒಂದೊಂದು ಮನ್ವಂತರದಲ್ಲಿಯೂ ಆ ಮನುವಿನ ವಂಶದ ರಾಜರು, ಬೇರೆಬೇರೆ ಸಪ್ತಋಷಿಗಳು, ಬೇರೆ ಹೆಸರಿನ ದೇವತೆಗಳು, ಬೇರೆ ಹೆಸರಿನ ಇಂದ್ರರು,

ಗಂಧರ್ವರು. ಹೀಗೆ ಒಂದಾದ ಮೇಲೊಂದು ಮನ್ವಂತರವು ನಡೆಯುತ್ತ ಹೋಗುವುದು. ಮೊದಲನೆಯ ಮನ್ವಂತರದ ನಂತರ ಎರಡು ಸಾವಿರ (ಮನುಷ್ಯಮಾನ) ವರ್ಷಗಳು ಪ್ರಳಯಕಾಲ. ಎರಡರಿಂದ ಏಳನೆಯ ಮನ್ವಂತರದವರೆಗೆ ಒಂದುಸಾವಿರ ಐನೂರು ವರ್ಷಗಳು ಒಂದೊಂದಕ್ಕೂ ಪ್ರಳಯಕಾಲ. ಮುಂದಿನ ಏಳು ಮನ್ವಂತರಗಳಲ್ಲಿ ಒಂದು ಸಾವಿರದ ನಾಲ್ಕುನೂರು ವರ್ಷಗಳು ಒಂದೊಂದಕ್ಕೂ ಪ್ರಳಯಕಾಲ. ಹೀಗೆ ಪ್ರತಿ ದಿನದಲ್ಲಿಯೂ ಸೃಷ್ಟಿ ಕಾರ್ಯವು ನಡೆಯುವುದು. ಜೀವರು ಅವರವರ ಕಾರ್ಯಕ್ಕೆ ತಕ್ಕಂತೆ ಜನ್ಮವೆತ್ತುವರು. ಶ್ರೀಹರಿಯ ಆಯಾಯಾ ಮನ್ವಂತರಗಳಲ್ಲಿ ಅವತರಿಸಿ ತನ್ನ ಸಾಮರ್ಥ್ಯವನ್ನು ಪ್ರಕಟಿಸಿ ಮನುಗಳೊಂದಿಗೆ ಜಗತ್ತನ್ನು ಪಾಲಿಸುವನು. ಹಗಲು ಮುಗಿದು ರಾತ್ರಿಯು ಬಂದಾಗ ಶ್ರೀಹರಿಯು ತನ್ನ ಸಾಮರ್ಥ್ಯವನ್ನು ಅಡಗಿಸಿಟ್ಟುಕೊಂಡು ಶೇಷಶಾಯಿಯಾಗಿ ಮಲಗುವನು. ಬ್ರಹ್ಮದೇವರೂ ಅವನನ್ನು ಪ್ರವೇಶಿಸಿ ಸುಮ್ಮನಿರುವರು. ಆಗ ಸೂರ್ಯಚಂದ್ರರು ಯಾರೂ ಕಾಣುವುದಿಲ್ಲ. ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳು ಶೇಷದೇವರ ಮುಖದಿಂದ ಹೊರಟ ಬೆಂಕಿಯಿಂದ ಸುಟ್ಟುಹೋಗುವುವು. ಈ ಶಾಖವು ಮಹರ್ಲೋಕಕ್ಕೂ ತಗಲುವುದು. ಅಲ್ಲಿ ವಾಸಿಸುವ ಋಭುಗಳೇ ಮೊದಲಾದ ದೇವತೆಗಳು ಮಹರ್ಲೋಕವನ್ನು ಬಿಟ್ಟು ಜನಲೋಕವನ್ನು ಸೇರುವರು. ಆಗ ಭಯಂಕರ ಗಾಳಿಯೆದ್ದು ಏಳು ಸಮುದ್ರಗಳೂ ಉಕ್ಕಿ ಈ ಮೂರು ಲೋಕಗಳನ್ನೂ ನೀರಿನಲ್ಲಿ ಮುಳಿಗಿಸುವುವು. ಆ ದಿನಪ್ರಳಯದ ನೀರಿನಲ್ಲಿ ಶ್ರೀಹರಿಯು ಶೇಷಶಾಯಿಯಾಗಿರುವನು. ಯೋಗನಿದ್ರಾಸಕ್ತನಾಗಿ ಕಣ್ಣು ಮುಚ್ಚಿರುವನು. ಜನೋಲೋಕದಿಂದ ಹಿಡಿದು ಉಳಿದ ಲೋಕಗಳಲ್ಲಿನ ಜೀವರು ಶ್ರೀಹರಿಯನ್ನು ಸ್ತೋತ್ರಮಾಡುತ್ತ ಇರುವರು.

ವಿದುರ, ಹೀಗೆ ಬ್ರಹ್ಮದೇವರಿಗೆ ಒಂದು ದಿನ ಕಳೆಯುವುದು. ಇಂತಹ ದಿನಗಳು ಮುನ್ನೂರ ಅರವತ್ತು ಒಂದು ವರ್ಷ. ಇಂತಹ ನೂರು ವರ್ಷಗಳು ಬ್ರಹ್ಮದೇವರ ಆಯುಸ್ಸು. ಈ ಆಯುಸ್ಸಿನ ಅರ್ಧಕ್ಕೆ ಪರಾರ್ಧವೆಂದು ಹೆಸರು. ಈಗಾಗಲೇ ಮೊದಲನೆಯ ಪರಾರ್ಧವು ಕಳೆದುಹೋಗಿದೆ. ಎರಡನೆಯ ಪರಾರ್ಧವು ಪ್ರಾರಂಭವಾಗಿದೆ. ಮೊದಲನೆಯ ಪರಾರ್ಧದ ಪ್ರಾರಂಭದಲ್ಲಿ ದೀರ್ಘವಾದ ಬ್ರಾಹ್ಮಕಲ್ಪವು ನಡೆಯಿತು. ಅಲ್ಲಿ ಮೊದಲು ಉತ್ಪನ್ನರಾದವರೇ ಬ್ರಹ್ಮದೇವರು. ಇವರನ್ನೇ ವೇದಗಳು ಹೊಗಳುವುವು. ಆ ಪರಾರ್ಧದ ಕೊನೆಯಲ್ಲಿ ಪಾದ್ಮಕಲ್ಪವು ಕಳೆಯಿತು. ಈ ಕಲ್ಪದಲ್ಲಿಯೇ ಶ್ರೀಹರಿಯ ನಾಭೀಸರೋವರದಿಂದ ಕಮಲವು ಉತ್ಪನ್ನವಾಗಿ ಅದರಲ್ಲಿ ಚತುರ್ಮುಖ ಬ್ರಹ್ಮದೇವರು ವ್ಯಕ್ತರಾದರು.

ಜ್ಞಾನಿಗಳು ಈಗ ನಡೆಯುತ್ತಿರುವ ಕಲ್ಪವನ್ನು ದ್ವಿತೀಯಪರಾರ್ಧದ ಮೊದಲನೆಯದಾದ ಶ್ವೇತವರಾಹಕಲ್ಪವೆಂದು ಹೇಳುತ್ತಾರೆ. ಈ ಕಲ್ಪದಲ್ಲಿ ಶ್ರೀಹರಿಯ ವರಾಹರೂಪದಿಂದ ಮೊದಲು ಅವತರಿಸಿದನು. ವಿಕಾರವಿಲ್ಲದ, ದೇಶ, ಕಾಲ, ಗುಣಗಳಿಂದ ಅಂತವಿಲ್ಲದ, ಆದಿಯಿಲ್ಲದ, ಜಗತ್ಸ್ವಾಮಿಯಾದ ಶ್ರೀಹರಿಗೆ ಈ ಪರಕಾಲವು ರೆಪ್ಪೆಹಾಕುವ ಸಮಯವೆಂದು ಔಪಚಾರಿಕವಾಗಿ ಹೇಳುತ್ತಾರೆ. ಬ್ರಹ್ಮಾದಿದೇವತೆಗಳ ಮೇಲೆ ತನ್ನ ಪ್ರಭಾವವನ್ನು ಬೀರುವ ಈ ಕಾಲಾಭಿಮಾನಿಯಾದ ಲಕ್ಷ್ಮೀದೇವಿಯು ಪರಿಪೂರ್ಣನಾದ ಶ್ರೀಹರಿಯಮೇಲೆ ಯಾವ ಪ್ರಭಾವವನ್ನೂ ಬೀರಲಾರಳು. ಅವನು ಸರ್ವೋತ್ತಮನು.

ಈ ಬ್ರಹ್ಮಾಂಡವು ಐವತ್ತು ಕೋಟಿ (ಯೋಜನ) ವಿಸ್ತಾರವಾದುದು. ಇದರ ಒಳಗೆ ಉಪಾದಾನಕಾರಣಗಳಾದ ಹತ್ತು ಇಂದ್ರಿಯಗಳು, ಪಂಚಭೂತಗಳು ಮತ್ತು ಮನಸ್ಸೆಂಬ ಹದಿನಾರು ತತ್ವಗಳಿವೆ. ಹೊರಗಡೆ ಭೂಮಿ, ನೀರು, ಬೆಂಕಿ, ವಾಯು ಆಕಾಶ ಅಹಂಕಾರ ಮಹತ್ ಮತ್ತು ಪ್ರಕೃತಿ ತತ್ವಗಳು ಆವರಿಸಿಕೊಂಡಿವೆ. ಇವುಗಳಲ್ಲಿ ಭೂತತ್ವವು ಬ್ರಹ್ಮಾಂಡದ ಎರಡರಷ್ಟಿದ್ದು ಉಳಿದತತ್ವಗಳು ಕ್ರಮವಾಗಿ ಹತ್ತು ಹತ್ತು ಯೋಜನ ಅಧಿಕ ಪರಿಮಾಣವನ್ನು ಹೊಂದಿರುವುವು. ಈ ಆವರಣಸಹಿತವಾದ ಬ್ರಹ್ಮಾಂಡವು ಶ್ರೀಹರಿಯ ದೇಹದಲ್ಲಿ ಅತ್ಯಂತ ಸೂಕ್ಷ್ಮಪದಾರ್ಥದಂತೆ ಕಾಣುವುದು. ಶ್ರೀಹರಿಯ ರೂಪಗಳು ಅನಂತವಿರುವುದರಿಂದ ಅವುಗಳಲ್ಲಿ ಪ್ರವೇಶಿಸಿದ ಬ್ರಹ್ಮಾಂಡವೂ ಅನಂತವಾಗಿ ಕಾಣುವುದು. ಹೀಗೆ ಬ್ರಹ್ಮಾಂಡಕ್ಕೆ ಆಶ್ರಯನಾದ ಶ್ರೀಹರಿಯೇ ಅತ್ಯಂತದೊಡ್ಡವನೂ ಅತ್ಯಂತಸೂಕ್ಷ್ಮನೂ ಆಗಿರುವನು. ಈ ಬ್ರಹ್ಮಾಂಡವು ಅವನ ಆವಾಸಸ್ಥಾನವು. ಇವನಲ್ಲಿ ಭಕ್ತಿಮಾಡಿ ಇವನ ಅನುಗ್ರಹದಿಂದ ಮೋಕ್ಷವನ್ನು ಪಡೆಯಬೇಕು.



# ಅಥ ತ್ರಯೋದಶೋಽಧ್ಯಾಯಃ

ಶ್ರೀಹರಿಯ ಪ್ರೀತಿಜನಕವಾದುದರಿಂದ ಅವನ ಆನಂತ್ಯ ಜ್ಞಾನ ಹೇಗೆ ಮುಕ್ತಿ ಸಾಧನವೋ ಅದರಂತೆ ತಾರತಮ್ಯ ಜ್ಞಾನವೂ ಮುಕ್ತಿ ಸಾಧನವು. ಅದನ್ನು ತಿಳಿಸಲು ಸೃಷ್ಟಿ ಪ್ರಕಾರವನ್ನು ಈ ಅಧ್ಯಾಯದಲ್ಲಿ ಹೇಳುವರು. ಅದರಲ್ಲಿಯೂ ಹೇಯಗಳಲ್ಲಿ ಮೊದಲನೆಯದಾದ ಅವಿದ್ಯೆಯ ಸೃಷ್ಟಿಯನ್ನು ಹೇಳಲು ಹಿಂದೆ ನಡೆದದ್ದನ್ನು ಹೇಳಿ ಮುಂದೆ ಹೇಳುವುದನ್ನು ಪ್ರತಿಜ್ಞೆ ಮಾಡುವರು.

**ಮೈತ್ರೇಯ ಉವಾಚ**

**ಇತಿ ತೇ ವರ್ಣಿತಃ ಕ್ಷತ್ತಃ ಕಾಲಾಖ್ಯಪರಮಾತ್ಮನಃ ।**
**ಮಹಿಮಾ ವೇದಗರ್ಭೋಽಥ ಯದಸ್ರಾಕ್ಷೀನ್ನಿಬೋಧ ಮೇ ॥**

ಹೇ ಕ್ಷತ್ತಃ=ವಿದುರನೇ ಇತಿ=ಈ ರೀತಿಯಾಗಿ (ಇಲ್ಲಿಯವರೆಗೆ) ಕಾಲಾಖ್ಯ-ಪರಮಾತ್ಮನಃ=ಕಾಲನಾಮಕ ಪರಮಾತ್ಮನ ಮಹಿಮಾ=ಮಹಾಮಹಾತ್ಮ್ಯವು ವರ್ಣಿತಃ=ಹೇಳಲ್ಪಟ್ಟಿತು. ಅಥ=ವೈಕಾರಿಕದೇವತೆಗಳ ದೇಹಸೃಷ್ಟಿಯ ನಂತರ ವೇದಗರ್ಭಃ=ವಿರಾಣ್ಣಾಮಕ ಬ್ರಹ್ಮದೇವರು ಯತ್ ಅಸ್ರಾಕ್ಷೀತ್=ಯಾವುದನ್ನು ಸೃಷ್ಟಿಸಿದನು ಎಂಬುದನ್ನು ಮೇ=ನನ್ನಿಂದ ನಿಬೋಧ=ತಿಳಿ, ಅದನ್ನು ಹೇಳುವೆ-ನೆಂದರ್ಥ. ॥೧॥

**ಸಸರ್ಜಾಗ್ರೇಽಂಧತಾಮಿಸ್ರಮಥ ತಾಮಿಸ್ರಮಾದಿಕೃತ್ ।**
**ಮಹಾಮೋಹಂ ಚ ಮೋಹಂ ಚ ತಮಶ್ಚಾಜ್ಞಾನವೃತ್ತಯಃ ॥೨॥**

ಆದಿಕೃತ್=ಬ್ರಹ್ಮದೇವರು ಅಗ್ರೇ=ವೈಕಾರಿಕ ಸೃಷ್ಟಿಯ ಮೊದಲು ಅಂಧ-ತಾಮಿಸ್ರಂ=ಅಂಧತಾಮಿಸ್ರವನ್ನು ತಾಮಿಸ್ರಂ=ತಾಮಿಸ್ರವನ್ನು ಮಹಾಮೋಹಂ=ಮಹಾಮೋಹವನ್ನು ಮೋಹಂ=ಮೋಹವನ್ನೂ ಚ=ಮತ್ತು ತಮಃ=ತಮಸ್ಸು ಇವುಗಳನ್ನು ಸಸರ್ಜ=ಸೃಷ್ಟಿಸಿದನು ಇವುಗಳು ಅಜ್ಞಾನವೃತ್ತಯಃ=ಭಾವರೂಪ ಅವಿದ್ಯೆಯ ಕಾರ್ಯಗಳು.

ಮೂಲದಲ್ಲಿಯ ಅಂಧತಾಮಿಸ್ರಾದಿಶಬ್ದಾರ್ಥಗಳನ್ನು ಪ್ರಮಾಣದಿಂದ ಹೇಳುವರು –

''ತಮಸ್ತು ಶಾರ್ವರಂ ಪ್ರೋಕ್ತಂ ಮೋಹಶ್ಚೈವ ವಿಪರ್ಯಯಃ ।
ತದಾಗ್ರಹೋ ಮಹಾಮೋಹಸ್ತಾಮಿಸ್ರಃ ಕ್ರೋಧ ಉಚ್ಯತೇ ।
ಮರಣಂ ತ್ವಂಧತಾಮಿಸ್ರಮವಿದ್ಯಾ ಪಂಚಪರ್ವಿಕಾ'' ॥ ಇತಿ ಭಾರತೇ ।
''ತಮೋಽಜ್ಞಾನಂ ವಿಪರ್ಯಾಸೋ ಮೋಹೋಽನ್ಯೇತು ತದಾಗ್ರಹಾಃ''॥
ಇತಿ ಹರಿವಂಶೇಷು ।

ಕಾರ್ಯದ ಪ್ರಾಬಲ್ಯಕ್ರಮಾನುಸಾರ ಮೂಲದಲ್ಲಿ ಅಂಧತಾಮಿಸ್ರವನ್ನು ಮೊದಲು ಹೇಳಿರುವರು. ದೌರ್ಬಲ್ಯಕ್ರಮಾನುಸಾರ ತಮವನ್ನು ಮೊದಲು ಭಾರತದಲ್ಲಿ ಹೇಳಿರುವರು ಎಂದು ತಿಳಿಯಬೇಕು.

ರಾತ್ರಿಯಲ್ಲಿ ಉಂಟಾಗುವ ಕತ್ತಲೆಗೆ ತಮ ಎನ್ನುವರು. ಕತ್ತಲೆ ತಮ ಎಂದು ಹೇಳಲ್ಪಟ್ಟಿದೆ. ಮೋಹ ಎಂದರೆ ವಿಪರೀತಜ್ಞಾನ, ವಿಪರೀತಜ್ಞಾನದ ಆಗ್ರಹವೇ ಮಹಾಮೋಹವೆನಿಸಿಕೊಳ್ಳುವುದು. ಸಿಟ್ಟು (ಕೋಪ) ತಾಮಿಸ್ರ ಎನಿಸಿಕೊಳ್ಳುವುದು. ಮರಣಕಾಲದಲ್ಲಿ ಆಗುವ ದುಃಖನಿಮಿತ್ತವಾದ ಮೂರ್ಛೆಯು ಅಂಧತಾಮಿಸ್ರ ವೆನಿಸಿಕೊಳ್ಳುವುದು ಹೀಗೆ ಅವಿದ್ಯೆಯು ಐದು ವೃತ್ತಿಗಳಿಂದ ಕೂಡಿದ್ದು ಎಂದು ಭಾರತದಲ್ಲಿ ಹೇಳಿದೆ. ಹರಿವಂಶದಲ್ಲಿ ರೀತ್ಯಂತರದಿಂದ ಇವುಗಳನ್ನು ಹೇಳಿರುವರು. ಅದು ಹೀಗೆ - ತಮ ಎಂದರೆ ಯಥಾರ್ಥಜ್ಞಾನನಾಶ, (ಅವಿದ್ಯಾಕಾರ್ಯವೇ ಪ್ರಕೃತವಾದ್ದರಿಂದ ತಾತ್ಪರ್ಯದಲ್ಲಿ ತಮೋ ಅಜ್ಞಾನಂ ಎಂದು ಹೇಳಿದ್ದರೂ ಕೂಡ ಅಜ್ಞಾನಶಬ್ದಕ್ಕೆ ಯಥಾರ್ಥಜ್ಞಾನನಾಶ ಎಂದೇ ಅರ್ಥಮಾಡಬೇಕು.) ಮೋಹವೆಂದರೆ ವಿಪರೀತ ಜ್ಞಾನವು, ಉಳಿದವು ಅಂದರೆ ೧.ಮಹಾಮೋಹ ೨.ತಾಮಿಸ್ರ ೩.ಅಂಧತಾಮಿಸ್ರಗಳು ಕ್ರಮವಾಗಿ ೧.ವಿಪರ್ಯಾಸದ ಆಗ್ರಹ ೨.ವಿಪರ್ಯಾಸಾ-ಗ್ರಹತರ ೩.ವಿಪರ್ಯಾಸಾಗ್ರಹತಮಗಳೆಂದು ತಿಳಿಯಬೇಕು ॥೨॥

ಅವಿದ್ಯೆಯು ಹೇಯವೆಂದು ಹೇಳುವರು -

**ದೃಷ್ಟ್ವಾ ಪಾಪೀಯಸೀಂ ಸೃಷ್ಟಿಂ ನಾತ್ಮಾನಂ ಬಹ್ವಮನ್ಯತ ।**
**ಭಗವದ್ಧ್ಯಾನಪೂತೇನ ಮನಸಾಽನ್ಯಾಂಸ್ತತೋಽಸೃಜತ್ ॥೩॥**

**ಸನಕಂ ಚ ಸನಂದಂ ಚ ಸನಾತನಮಥಾಽತ್ಮಭೂಃ ।**
**ಸನತ್ಕುಮಾರಂ ಚ ಮುನಿಂ ನಿಷ್ಕ್ರಿಯಾನೂರ್ಧ್ವರೇತಸಃ ॥೪॥**

ಆತ್ಮಭೂಃ=ಬ್ರಹ್ಮದೇವರು ಪಾಪೀಯಸೀಂ ಸೃಷ್ಟಿಂ ದೃಷ್ಟ್ವಾ=ಪಾಪಿಷ್ಠವಾದ (ವಿಪರೀತಜ್ಞಾನಾದಿಗಳಿಗೆ ಕಾರಣವಾದ್ದರಿಂದ) ಅವಿದ್ಯಾಸೃಷ್ಟಿಯನ್ನು ಕಂಡು ಆತ್ಮಾನಂ=ತನ್ನ ವಿಷಯದಲ್ಲಿ, ನ ಬಹ್ವಮನ್ಯತ=ಸಂತೋಷಪಡಲಿಲ್ಲ (ಅಂದರೆ ಸೃಷ್ಟಿಯಿಂದ ನಿವೃತ್ತನಾಗಲಿಲ್ಲ) ತತಃ=ನಂತರ ಭಗವದ್ಧ್ಯಾನಪೂತೇನ ಮನಸಾ= ಶ್ರೀಹರಿಯ ಧ್ಯಾನದಿಂದ ಪವಿತ್ರವಾದ ಮನಸ್ಸಿನಿಂದ ಅನ್ಯಾನ್=ಪುಣ್ಯವಂತರಾದ ನಿಷ್ಕ್ರಿಯಾನ್=ಯಜ್ಞಾದಿಕ್ರಿಯಾರಹಿತರಾದ ಪರಮಹಂಸರಾದ ಊರ್ಧ್ವರೇತಸಃ= ಸನ್ಯಾಸಿಗಳಾದ ಸನಕಂ, ಸನಂದಂ, ಸನಾತನಂ, ಮುನಿಂ ಸನತ್ಕುಮಾರಂ ಅಸೃಜತ್= ಈ ನಾಲ್ಕು ಹೆಸರಿನ ಜ್ಞಾನಿಗಳನ್ನು ಸೃಷ್ಟಿಸಿದನು.

ಧ್ಯಾನವು ಸರ್ವಪ್ರಾಯಶ್ಚಿತ್ತ. ಪವಿತ್ರಮನಸ್ಸಿನಿಂದ ಸೃಷ್ಟರಾದ ಇವರು ಹಿಂದಿನಂತೆ ಅಸಾಧುಗಳಲ್ಲ.

ಮೇಲಿನ ಶ್ಲೋಕಗಳಲ್ಲಿ ಸನಕಾದಿಗಳ ಉತ್ಪತ್ತಿಯನ್ನು ಮೊದಲು ಹೇಳಿ ನಂತರ ರುದ್ರದೇವರ ಉತ್ಪತ್ತಿಯನ್ನು ಮುಂದೆ ಹೇಳುವರು. ಸೃಷ್ಟಿಕ್ರಮವೇ ತಾರತಮ್ಯ ಜ್ಞಾಪಕವಾದ್ದರಿಂದ ರುದ್ರದೇವರಿಗಿಂತ ಸನಕಾದಿಗಳು ಉತ್ತಮರು ಎಂಬ ಶಂಕೆ ಬರುವುದು. ಸೃಷ್ಟಿಕ್ರಮ ತಾರತಮ್ಯ ಜ್ಞಾಪಕವೆಂಬುದು ನಿಜ. ಆದರೆ ಮೊದಲಿನ ಆದಿಸೃಷ್ಟಿಕ್ರಮವೇ ತಾರತಮ್ಯ ಜ್ಞಾಪಕವೇ ಹೊರತು (ಹೊಸ) ಈಗಿನ ಎರಡನೆ-ಯದಲ್ಲ. ಇದಾದರು ಆದಿ ಸೃಷ್ಟಿಯಲ್ಲ ಆದ್ದರಿಂದ ವಿರೋಧವಿಲ್ಲ ಎಂಬ ಪರಿಹಾರವನ್ನು ಮನಸ್ಸಿನಲ್ಲಿಟ್ಟುಕೊಂಡು ದೇವತೆಗಳ ತಾರತಮ್ಯವನ್ನೂ ಅದಕ್ಕೆ ಜ್ಞಾಪಕವಾದ ಆದಿಸೃಷ್ಟಿಯ ಕ್ರಮವನ್ನೂ ಪ್ರಮಾಣದಿಂದ ಹೇಳುವರು–

''ಕಾಲತೋ ಬಲತಶ್ಚೈವ ಜ್ಞಾನಾನಂದಾದಿಕೈರಪಿ ।
ಸರ್ವೈಃ ಗುಣೈರ್ವಿಷ್ಣುರೇವ ಶ್ರೇಷ್ಠಸ್ತದವಮಾ ರಮಾ ॥
ಅನಂತಾಂಶೇನ ಕಾಲಾತ್ತು ಸಮಾ ತಸ್ಯಾಶ್ಚತುರ್ಮುಖಃ ।
ಅವರೋ ಬಹುಲಾಂಶೇನ ತತ್ಸಮೋ ವಾಯುರುಚ್ಯತೇ ॥
ನಿಯಮಾದ್ವಾಯುರೇವೈಕೋ ಬ್ರಹ್ಮತ್ವಂ ಯಾತಿ ನಾಪರಃ ।
ತಸ್ಮಾತ್ಸಮಾನತಾ ಮುಕ್ತೌ ವಾಯುತ್ವೇ ಕಿಂಚಿದೂನತಾ ॥
ದಶವರ್ಷಂ ತು ತತ್ಪಶ್ಚಾಜ್ಜನನಂ ತತ್ಸ್ತ್ರಿಯೋರಪಿ ।
ಆನಂದಾದಿಸ್ತದ್ದಶಾಂಶಾಃ ಕಾಲಃ ಸಂವಂತ್ಸರಾತ್ಪರಃ ॥
ಯಾವತ್ಪಶ್ಚಾಜ್ಜನಿಸ್ತಾವತ್ಪೂರ್ವಂ ದೇಹಕ್ಷಯೋ ಭವೇತ್ ॥
ಬ್ರಹ್ಮವಾಯ್ವೋಸ್ತು ಯೇ ದೇವ್ಯೌ ತದ್ದಶಾಂಶಃ ಸುಖಾದಿಕಃ ।
ಶೇಷಸ್ಯ ಗರುಡಸ್ಯಾಪಿ ಕಾಲೋ ದಿವ್ಯಸಹಸ್ರಕಃ ॥
ಶೇಷರುದ್ರೌ ಬ್ರಹ್ಮವಾಯೂ ಯಥಾ ತದ್ವತ್ಪರಸ್ಪರಂ ।
ತದ್ದೇವ್ಯಸ್ತದ್ದಶಾಂಶಾಃ ಸ್ಯುಸ್ತತಸ್ತ್ವಿಂದ್ರಾದಯೋ ಮತಾಃ ॥
ಏವಂ ಮುಕ್ತೌ ಚ ಪೂರ್ವಂ ಚ ನಾನ್ಯಥಾ ಕ್ವಚಿದಿಷ್ಯತೇ ।
ಅನ್ಯಥೋಕ್ತಿರ್ಯತ್ರ ಚ ಸ್ಯಾತ್ತನ್ಮೋಹಾರ್ಥಂ ಭವಿಷ್ಯತಿ ।
ಪೂರ್ವಾಪರವಿಪರ್ಯಾಸೋ ಬಹುರೂಪತ್ವಹೇತುತಃ ॥

ಇತಿ ವಿಷ್ಣುಕೃತತತ್ವವಿವೇಕೇ ।

'ಅಥಾತ ಆನಂದಸ್ಯ ಮೀಮಾಂಸಾ'। 'ದೇವಾಸುರೇಭ್ಯೋ ಮಘವಾನ್ಪ್ರಧಾನಃ'। ಇತ್ಯಾದಿ ಚ ।

"ಇಂದ್ರಾಂದ್ಯಾಃ ಸನಕಾದ್ಯಾಶ್ಚ ದಕ್ಷಾದ್ಯಾ ಯೇಽಪಿ ಚಾಪರೇ ।
ಋಷಯೋ ಮನವೋ ದೇವಾಸ್ತದ್ವಶಾ ಯೇ ಚ ಕೇಚನ ॥
ಉಮಾಯಾ ಅವರಾ ಸರ್ವೇ ಗುಣೈಃ ಸರ್ವೈರ್ನ ಸಂಶಯಃ ।
ತತ್ಸಮೋ ನ ಭವಿಷ್ಯೋ ವಾ ನ ಭೂತೋಽದ್ಯತನೋಽಪಿ ವಾ ॥
ಋತೇ ಹರಿಂ ಬ್ರಹ್ಮವಾಯೂ ಶೇಷವೀಂದ್ರಾನ್ ಸಭಾರ್ಯಕಾನ್ ।
ಶಂಕರಂ ಚೇತಿ ವೇತ್ತವ್ಯಂ ಅನ್ಯನ್ಮೋಹಾರ್ಥಮುಚ್ಯತೇ" ॥

ಇತಿ ವಿಷ್ಣುಕ್ತತ ತತ್ತ್ವನಿರ್ಣಯೇ ।

ಕಾಲ, ಬಲ, ಜ್ಞಾನ ಆನಂದ ಮುಂತಾದ ಎಲ್ಲ ಗುಣಗಳಿಂದ ವಿಷ್ಣುವೇ ಶ್ರೇಷ್ಠನು. ಅನಂತಾಂಶಗಳಿಂದ ಎಲ್ಲ ವಿಷಯದಲ್ಲಿ ಶ್ರೀಹರಿಗಿಂತ ಹೀನಳು, ಕಾಲ ದೇಶಗಳಿಂದ ಮಾತ್ರ ಸಮಳು ರಮಾ. ಅವಳಿಗಿಂತ ಕೋಟಿಗುಣ ಹೀನನು ಚತುರ್ಮುಖನು. ಅವನಿಗೆ ಸಮಾನನಾದವನು ವಾಯುವು. ಇವನೇ ನಿಯಮೇನ ಬ್ರಹ್ಮಪದವಿಗೆ ಬರುವನು. ಬೇರೆ ಯಾರೂ ಬರುವುದಿಲ್ಲ, ಕಾರಣ ಸಮನು. ಯೋಗ್ಯತೆ ಸಮಾನವಾಗಿರವುದರಿಂದ ಮುಕ್ತಿಯಲ್ಲಿ ಆನಂದಾದಿಗಳಲ್ಲಿ ಸಮಾನತೆ ಉಂಟು. ವಾಯುವಾಗಿದ್ದಾಗ ಪದವಿಗೆ ಸ್ವಲ್ಪ ಹೀನತೆಯುಂಟು. ಮತ್ತು ವಾಯುವಿನ ಉತ್ಪತ್ತಿಯು ಬ್ರಹ್ಮೋತ್ಪತ್ತಿಯ ನಂತರ ದೇವತಾಮಾನದಿಂದ ಹತ್ತು ವರ್ಷವಾದ ಮೇಲೆ ಆಗಿದೆ ಈ ಕಾರಣದಿಂದ ಸ್ವಲ್ಪ ಕಡಿಮೆ (ವಯಸ್ಸಿನಲ್ಲಿ). ಬ್ರಹ್ಮವಾಯುಪತ್ನಿಯರಾದ ಸರಸ್ವತೀಭಾರತಿಯರಿಗೆ ಆನಂದಾದಿಗಳು ಬ್ರಹ್ಮ-ವಾಯುಗಳ ಆನಂದಾದಿಗಳಿಗಿಂತ ನೂರುಗುಣ (ಅಂಶ) ಕಡಿಮೆ ಆನಂದಾದಿಗಳು ಇರುವುವು. ಇವರು ವಾಯುವಿನ ನಂತರ ಒಂದು ವರ್ಷದ ನಂತರ ಜನಿಸಿರುವರು.

ಉತ್ಪತ್ತಿಕ್ರಮದಂತೆ ಅದಕ್ಕೆ ವಿಪರೀತ ಲಯಕ್ರಮವು ತಾರತಮ್ಯಜ್ಞಾಪಕವೆಂಬ ಅಭಿಪ್ರಾಯದಿಂದ ಮಧ್ಯದಲ್ಲಿ ಲಯಕ್ರಮವನ್ನೂ ಹೇಳಿರುವರು. ಮಹಾಪ್ರಳಯ-ಕಾಲದಲ್ಲಿ ಯಾರು ಯಾರಿಗಿಂತ ಎಷ್ಟು ತಡವಾಗಿ ಹುಟ್ಟಿರುವರೋ ಅವರು (ತಡವಾಗಿ ಹುಟ್ಟಿದವರು) ಅಷ್ಟು ಕಾಲ ಮುಂಚಿತವಾಗಿ ದೇಹನಾಶವನ್ನು ಪಡೆಯುವರು. ಶೇಷಗರುಡರಿಗೆ ಬ್ರಹ್ಮವಾಯುಪತ್ನಿಯರಾದ ಸರಸ್ವತೀಭಾರತಿಯ-ರಿಗಿಂತ ನೂರುಗುಣ (ಅಂಶ) ಕಡಿಮೆ ಆನಂದಾದಿಗಳು ಇರುವುವು. ಭಾರತೀ-ಸರಸ್ವತಿಯರ ಜನನವಾದ ಮೇಲೆ ದೇವಮಾನದಿಂದ ಒಂದು ಸಾವಿರ ವರ್ಷದ ನಂತರ ಇವರ ಜನನ ಕಾಲವು.

ಬ್ರಹ್ಮದೇವರು ವಾಯುದೇವರು ಹೇಗೆ ಪರಸ್ಪರ ಸಮರು ಮತ್ತು ವಾಯುಪದವಿಪ್ರಯುಕ್ತ ಸ್ವಲ್ಪ ಊನತೆ ಉಳ್ಳವರೋ, ಅದರಂತೆ ಶೇಷದೇವರು ರುದ್ರದೇವರು ಯೋಗ್ಯತೆಯಲ್ಲಿ ಸಮರು. ರುದ್ರಪದವಿಪ್ರಯುಕ್ತ ಕಿಂಚಿತ್ ಊನತೆವುಳ್ಳವರು. ಆದಕಾರಣ ಶೇಷದೇವರನ್ನು ಹೇಳಿದರೆ ರುದ್ರದೇವರನ್ನು ಹೇಳಿದಂತೆಯೇ ಕಾರಣ ಪ್ರತ್ಯೇಕ ಹೇಳಿಲ್ಲ ಎಂದು ತಿಳಿಯಬೇಕು. (ಈ ತಾತ್ಪರ್ಯ ಹೊರಟಿದ್ದೇ ರುದ್ರದೇವರು ಸನಕಾದಿಗಳಿಗಿಂತ ಉತ್ತಮರು ಎಂದು ಹೇಳಲು) ಗರುಡಶೇಷರುದ್ರಪತ್ನಿಯರು ತಮ್ಮ ಪತಿಗಳಿಗಿಂತ ನೂರು ಅಂಶ ಕಡಿಮೆಯಾದ ಆನಂದಾದಿಗಳುಳ್ಳವರು. ಇವರುಗಳಕಿಂತ ನೂರು ಅಂಶ ಕಡಿಮೆಯಾದವರು ಇಂದ್ರಾದಿದೇವತೆಗಳು. ಇದೇ ರೀತಿ ಮುಕ್ತಿಯಲ್ಲಿ ಸಂಸಾರದಲ್ಲಿ ತಾರತಮ್ಯ-ವಿರುವುದು. ಯಾವ ಕಾಲದೇಶಗಳಲ್ಲಿಯೂ ಇದಕ್ಕೆ ವ್ಯತ್ಯಾಸವಿಲ್ಲ. ಇದಕ್ಕೆ ವ್ಯತಿರಿಕ್ತ ಎಲ್ಲಿಯಾದರೂ ಹೇಳಿದರೆ ಅದು ಅಯೋಗ್ಯರಿಗೆ ಮೋಹಗೊಳಿಸಲೆಂದು ತಿಳಿಯಬೇಕು. ಆದಿಸೃಷ್ಟಿಯಲ್ಲಿ ಮೊದಲು ಜನಿಸಿದವರನ್ನು ದ್ವಿತೀಯಾದಿ ಸೃಷ್ಟಿಯಲ್ಲಿ ನಂತರ ಹುಟ್ಟಿದರು ಎಂದ ಹೇಳುವುದು ಬಹುರೂಪ ನಿಮಿತ್ತಕವು. ಅಂದರೆ ಆದಿ ಸೃಷ್ಟಿಯಲ್ಲಿ ಪೂರ್ವದಲ್ಲಿ ಜನಿಸಿ ರೂಪಾಂತರದಿಂದ ಎರಡನೆ ಸೃಷ್ಟಿಯಲ್ಲಿ ಉತ್ತಮನೂ ಅಧಮನಿಗಿಂತ ನಂತರ ಹುಟ್ಟಬಹದು. ಅದು ತಾರತಮ್ಯಕ್ಕೆ ಭಂಜಕವಲ್ಲವೆಂದು ಶ್ರೀವಿಷ್ಣು ರಚಿಸಿದ ತತ್ವವಿವೇಕದಲ್ಲಿ ಹೇಳಿದೆ.

'ಅಥಾತ ಆನಂದಸ್ಯ ಮೀಮಾಂಸಾ' ಎಂಬ ತೈತ್ತಿರೀಯದ ವಾಕ್ಯದಿಂದ ಮತ್ತು 'ದೇವಾಸುರೇಭ್ಯೋ ಮಘವಾನ್ ಪ್ರಧಾನಃ' ಎಂಬ ಭಾಗವತ ವಾಕ್ಯದಲ್ಲಿಯೂ ಇದೇ ರೀತಿ ತಾರತಮ್ಯ ತಿಳಿದು ಬರುವುದರಿಂದ ಸನಕಾದಿಗಳಿಗಿಂತ ರುದ್ರದೇವರು ಉತ್ತಮರು.

ಇಂದ್ರಾದಿದೇವತೆಗಳು, ಸನಕಾದಿಪರಮಹಂಸರು, ದಕ್ಷಾದಿಪ್ರಜಾಪತಿಗಳು, ಇನ್ನುಳಿದ ಋಷಿಗಳು, ದೇವತೆಗಳು, ಅವರ ಅಧೀನರಾದವರು. ಎಲ್ಲರೂ ಎಲ್ಲ ಗುಣಗಳಿಂದ ಪಾರ್ವತಿಗಿಂತ ಕಡಿಮೆಯವರು. ಅಂದ ಮೇಲೆ ರುದ್ರನಿಗಿಂತ ಕಡಿಮೆ ಎಂದು ಹೇಳುವುದೇನು ! ಸಿದ್ಧವೇ. ಶ್ರೀಹರಿಯನ್ನು, ಬ್ರಹ್ಮವಾಯುಗಳನ್ನು, ಶೇಷಗರುಡರನ್ನು, ಅವರ ಪತ್ನಿಯರನ್ನು ಹಾಗೂ ರುದ್ರನನ್ನು ಬಿಟ್ಟು ಉಮಾದೇವಿಗೆ ಸಮನಾದವರು ಈಗಾಗಲಿ ಹಿಂದಾಗಲಿ ಮುಂದಾಗಲಿ ಇರುವುದಿಲ್ಲ. ಈ ರೀತಿ ರುದ್ರದೇವರನ್ನೂ ತಿಳಿಯಬೇಕು. ಪಾರ್ವತಿಯೇ ಸರ್ವೋತ್ತಮಳು ಮುಂತಾಗಿ ಹೇಳುವುದು ಮೋಹಗೊಳಿಸಲು ಎಂದು ಶ್ರೀವಿಷ್ಣುಕೃತ ತತ್ವನಿರ್ಣಯದಲ್ಲಿದೆ ॥೪॥

**ತಾನ್ ಬಭಾಷೇ ಸ್ವಭೂಃ ಪುತ್ರಾನ್ ಪ್ರಜಾಃ ಸೃಜತ ಪುತ್ರಕಾಃ ।**
**ತನ್ನೈಚ್ಛನ್ ಮೋಕ್ಷಧರ್ಮಾಣೋ ವಾಸುದೇವಪರಾಯಣಾಃ ॥೫॥**

ಸ್ವಭೂಃ=ಸ್ವತಂತ್ರನಾದ ಶ್ರೀಹರಿಯಿಂದ ಜನಿಸಿದ ಬ್ರಹ್ಮದೇವರು ತಾನ್ ಪುತ್ರಾನ್= ಆ ಮಕ್ಕಳಾದ ಸನಕಾದಿಗಳನ್ನು ಕುರಿತು ಹೇ ಪುತ್ರಕಾಃ=ಮಕ್ಕಳೇ ಪ್ರಜಾಃ ಸೃಜತ=ಪ್ರಜೆಗಳನ್ನು ಸೃಷ್ಟಿಸಿರಿ ಎಂದು ಬಭಾಷೇ=ಹೇಳಿದರು. ವಾಸುದೇವ-ಪರಾಯಣಾಃ=ಶ್ರೀಹರಿಯೇ ಮುಖ್ಯ ಆಶ್ರಯವಾಗಿವುಳ್ಳ ಮೋಕ್ಷಧರ್ಮಾಣಃ= ಮೋಕ್ಷಜನಕವಾದ ಜ್ಞಾನವೇ ಧರ್ಮವಾಗಿವುಳ್ಳ (ಜ್ಞಾನ ಮಾರ್ಗದಲ್ಲಿರುವ) ಅವರು ತತ್=ಸೃಷ್ಟಿಮಾಡುವದನ್ನು ನ ಐಚ್ಛನ್=ಇಚ್ಛಿಸಲಿಲ್ಲ॥೫॥

**ಸೋಽವಜ್ಞಾತಃ ಸುತೈರೇವಂ ಪ್ರತ್ಯಾಖ್ಯಾತಾನುಶಾಸನೈಃ ।**
**ಕ್ರೋಧಂ ದುರ್ವಿಷಹಂ ಜಾತಂ ನಿಯಂತುಮುಪಚಕ್ರಮೇ ॥೬॥**

ಪ್ರತ್ಯಾಖ್ಯಾತಾನುಶಾಸನೈಃ=ನಿರಾಕರಿಸಲ್ಪಟ್ಟ ಆಜ್ಞೆಯುಳ್ಳ ಸುತೈಃ=ಮಕ್ಕಳಿಂದ ಏವಂ=ಈರೀತಿ ಅವಜ್ಞಾತಃ=ಅವಮಾನಿತನಾದ ಸಃ=ಬ್ರಹ್ಮದೇವನು ಜಾತಂ= ಉತ್ಪನ್ನವಾದ ದುರ್ವಿಷಹಂ=ಸಹಿಸಲಾಗದ ಕ್ರೋಧಂ=ಸಿಟ್ಟನ್ನು ನಿಯಂತುಂ ಉಪಚಕ್ರಮೇ=ತಡೆಯಲು ಪ್ರಾರಂಭಿಸಿದನು ॥೫॥

**ಧಿಯಾ ನಿಗೃಹ್ಯಮಾಣೋಽಪಿ ಭ್ರುವೋರ್ಮಧ್ಯಾತ್ ಪ್ರಜಾಪತೇಃ ।**
**ಸದ್ಯೋಽಜಾಯತ ತನ್ಮನ್ಯುಃ ಕುಮಾರೋ ನೀಲಲೋಹಿತಃ ॥೭॥**

ಧಿಯಾ=ಬುದ್ಧಿಯಿಂದ ನಿಗೃಹ್ಯಮಾಣೋಽಪಿ=ತಡೆಯಲ್ಪಟ್ಟರೂ ಪ್ರಜಾಪತೇಃ ಬ್ರಹ್ಮದೇವರ ಭ್ರುವೋಃ ಮಧ್ಯಾತ್=ಹುಬ್ಬುಗಳ ನಡುವಿನಿಂದ ಸದ್ಯಃ= ತಡೆಯುವುದಕ್ಕೆ ಮೊದಲೇ ತನ್ಮನ್ಯುಃ=ಆ ಕೋಪವು ನೀಲಲೋಹಿತಃ=ನೀಲಿ ಮತ್ತು ಕೆಂಪಾದ(ರುದ್ರನು) ಕುಮಾರಃ=ಮಗುವಾಗಿ ಅಜಾಯತ=ಹುಟ್ಟಿದನು. ಇದರಿಂದ ಸದ್ಯೋಜಾತ ನೀಲಲೋಹಿತ ಎಂಬ ಎರಡು ರುದ್ರದೇವರನಾಮ ಹೇಳಿದಂತಾ-ಯಿತು. ಸಿಟ್ಟು ಬಂದಾಗ ಕಣ್ಣು ಕೆಂಪು ಹುಬ್ಬುಗಳು ನೀಲಿಯ ನರವುಳ್ಳವಾದುದ-ರಿಂದ ನೀಲಲೋಹಿತನಾಗಿ ಜನಿಸಿದನು. ಕಾರಣದ ಗುಣ ಕಾರ್ಯದಲ್ಲಿ ಬರಬೇಕಲ್ಲವೇ ! ॥೭॥

**ಸ ವೈ ರುರೋದ ದೇವಾನಾಂ ಪೂರ್ವಜೋ ಭಗವಾನ್ ಭವಃ ।**
**ನಾಮಾನಿ ಕುರು ಮೇ ಧಾತಃ ಸ್ಥಾನಾನಿ ಚ ಜಗದ್ಗುರೋ ॥೮॥**

ದೇವಾನಾಂ=ದೇವತೆಗಳ ಪೂರ್ವಜಃ=ಮೊದಲಿಗೆ ಜನಿಸಿದ ಭಗವಾನ್=ಪೂಜ್ಯನಾದ ಭವಃ=ಶಂಕರನು, ಜಗದ್ಗುರೋ=ಎಲ್ಲರ ಗುರುವೇ ಹೇ ಧಾತಃ=ಜನಕನಾದ ಬ್ರಹ್ಮನೇ, ಮೇ=ನನಗೆ ಸ್ಥಾನಾನಿ=ಇರಲು ಸ್ಥಳಗಳನ್ನು, ನಾಮಾನಿ=ಹೆಸರುಗಳನ್ನು, ಕುರು=ಕಲ್ಪಿಸು ಎಂದು, ರುರೋದ=ಅತ್ತನು ॥೮॥

**ಇತಿ ತಸ್ಯ ವಚಃ ಪಾದ್ಮೋ ಭಗವಾನ್ ಪರಿಪಾಲಯನ್ ।**
**ಅಭ್ಯಧಾತ್ ಭದ್ರಯಾ ವಾಚಾ ಮಾರೋದೀಸ್ತತ್ ಕರೋಮಿ ತೇ ॥**

ಭಗವಾನ್=ಸ್ವಯೋಗ್ಯ ಐಶ್ವರ್ಯವಂತನಾದ, ಪಾದ್ಮಃ=ಬ್ರಹ್ಮದೇವರು, ಇತಿ= ಈ ರೀತಿಯಾದ,ತಸ್ಯ=ಕುಮಾರನ,(ಮಗನ) ವಚಃ=ಮಾತನ್ನು, ಪರಿಪಾಲಯನ್= ನಡೆಸುವವನಾಗಿ, ಭದ್ರಯಾ ವಾಚಾ=ಮಂಗಳಕರಮಾತುಗಳಿಂದ, ಮಾರೋದೀಃ= ಅಳಬೇಡ,ತತ್ ಕರೋಮಿ=ಸ್ಥಾನನಾಮಗಳನ್ನು ಕೊಡುವೆನು ಎಂದು, ಅಭ್ಯದಾತ್= ಹೇಳಿದರು ॥೯॥

**ಯದರೋದೀಃ ಸುರಶ್ರೇಷ್ಠ ಸೋದ್ವೇಗ ಇವ ಬಾಲಕಃ ।**
**ತತಸ್ತ್ವಾಮಭಿಧಾಸ್ಯಂತಿ ನಾಮ್ನಾ ರುದ್ರ ಇತಿ ಪ್ರಜಾಃ ॥೧೦॥**

ಹೇ ಸುರಶ್ರೇಷ್ಠ=ಎಲೋ ದೇವತಾಶ್ರೇಷ್ಠನೇ ಸೋದ್ವೇಗಃ ಬಾಲಕಃ ಇವ= ದುಃಖಿತನಾದ ಮಗುವಿನಂತೆ ಯತ್=ಯಾವ ಕಾರಣ ಅರೋದೀಃ=ಅತ್ತಿಯೋ ತತ್=ಆದ ಕಾರಣ ತ್ವಾಂ=ನಿನ್ನನ್ನು ನಾಮ್ನಾ ರುದ್ರಃ ಇತಿ=ರುದ್ರನೆಂಬ ಹೆಸರಿನಿಂದ ಪ್ರಜಾಃ=ಜನರು ಅಭಿಧಾಸ್ಯಂತಿ=ಕರೆಯುವರು ॥೧೦॥

**ಹೃದಿಂದ್ರಿಯಾಣ್ಯಸುರ್ವ್ಯೋಮ ವಾಯುರಗ್ನಿರ್ಜಲಂ ಮಹೀ ।**
**ಸೂರ್ಯಶ್ಚಂದ್ರಸ್ತಪಶ್ಚೈವ ಸ್ಥಾನಾನ್ಯೇಕಾದಶೈವ ತೇ ॥೧೧॥**

ತೇ=ನಿನಗೆ ಹೃತ್=ಮನಸ್ಸು, ಇಂದ್ರಿಯಾಣಿ=ಇಂದ್ರಿಯಗಳು, ಅಸುಃ=ಪ್ರಾಣಗಳು ವ್ಯೋಮ=ಆಕಾಶವು ಚಂದ್ರಃ=ಚಂದ್ರನು ಸೂರ್ಯಃ=ಸೂರ್ಯನು ತಪಃ=ತಪಸ್ಸು ವಾಯುಃ=ಗಾಳಿಯು ಅಗ್ನಿಃ=ಬೆಂಕಿಯು ಜಲಂ=ನೀರು ಮಹೀ=ಭೂಮಿಯು ಈರೀತಿ ಏಕಾದಶ ಸ್ಥಾನಾನಿ=ಹನ್ನೊಂದು ಸ್ಥಾನಗಳು ॥೧೧॥

**ಮನ್ಯುರ್ಮನುರ್ಮಹಾನಾಸೋ ಮಹಾಂಚ್ಛಿವ ಋತಧ್ವಜಃ ।**
**ಮರುರೇತಾಃ ಭವಃ ಕಾಲೋ ವಾಮದೇವೋ ಧೃತವ್ರತಃ ॥೧೨॥**

(ತೇ=ನಿನಗೆ) ಮನ್ಯುಃ, ಮಹಾನಾಸಃ, ಮನುಃ, ಮಹಾಶಿವಃ, ಋತಧ್ವಜಃ, ಮರುರೇತಃ, ಭವಃ, ಕಾಲಃ, ವಾಮದೇವಃ, ಧೃತವ್ರತಃ ಎಂದು ಹತ್ತು ಹೆಸರುಗಳು.

**ಧೀರ್ವೃತ್ತಿರಶಲೋ(ಅಸಹೋ)ಮಾ ಚ ನಿಯುತ್‌ಸರ್ಪಿರಿಲಾಂಬಿಕಾ ।**
**ಇರಾವತೀ ಸುಧಾ ದೀಕ್ಷಾ ರುದ್ರಾಣ್ಯೋ ರುದ್ರ ತೇ ಸ್ತ್ರಿಯಃ ॥೧೩॥**

ಧೀಃ, ವೃತ್ತಿಃ, ಅಸಹಾ ಅಥವಾ ಅಶಲಾ, ಉಮಾ, ನಿಯುತ್, ಸರ್ಪಿಃ, ಇಲಾ, ಅಂಬಿಕಾ, ಇರಾವತೀ, ಸುಧಾ, ದೀಕ್ಷಾ, ಈ ಸ್ತ್ರಿಯಃ=ಹೆಣ್ಣು ಮಕ್ಕಳು ಹೇ ರುದ್ರ=ಎಲೋ ರುದ್ರನೇ ತೇ ನಿನಗೆ ದತ್ತಾಃ=ಕೊಡಲ್ಪಟ್ಟಿರುವರು ಕಾರಣ ರುದ್ರಾಣ್ಯಃ ಭವಿಷ್ಯಂತಿ=ರುದ್ರಾಣಿಯರು ಎನಿಸುವರು. (ರುದ್ರಪತ್ನಿಯರಾಗುವರು) ॥೧೩॥

**ಗೃಹಾಣೈತಾನಿ ನಾಮಾನಿ ಸ್ಥಾನಾನಿ ಚ ಸಯೋಷಣಂ ।**
**ಆಭಿಃ ಸೃಜ ಪ್ರಜಾ ಬಹ್ವೀಃ ಪ್ರಜಾನಾಮಸಿ ಯತ್ಪತಿಃ ॥೧೪॥**

ಏತಾನಿ ನಾಮಾನಿ=(ಹಿಂದೆ ಹೇಳಿದ) ಈ ಹೆಸರುಗಳನ್ನು ಚ=ಮತ್ತು ಸ್ಥಾನಾನಿ= ಸ್ಥಳಗಳನ್ನು ಸಯೋಷಣಂ=ಹೆಂಡತಿಯರುಗಳಿಂದ ಸಹಿತವಾಗಿ ಗೃಹಾಣ=ಸ್ವೀಕರಿಸು ಯತ್=ಯಾವ ಕಾರಣ ಪ್ರಜಾನಾಂ ಪತಿಃ ಅಸಿ=ಪ್ರಜೆಗಳಿಗೆ ಸ್ವಾಮಿಯಾಗಿರುವಿ ಆದ್ದರಿಂದ ಆಭಿಃ=ಈ ಪತ್ನಿಯರಿಂದ ಬಹ್ವೀಃ=ಬಹಳ ಪ್ರಜಾಃ=ಪ್ರಜೆಗಳನ್ನು ಸೃಜ= ಸೃಷ್ಟಿಸು, ಪ್ರಜೆಗಳೇ ಇಲ್ಲದಿದ್ದರೆ ನಿನ್ನ ಪ್ರಜಾಪತಿತ್ವ ಎಂಬುದು ಸುಳ್ಳಾಗುವುದು ಎಂದು ಭಾವ ॥೧೪॥

**ಇತ್ಯಾದಿಷ್ಟಃ ಸ ಗುರುಣಾ ಭಗವಾನ್ ನೀಲಲೋಹಿತಃ ।**
**ಸತ್ವಾಕೃತಿಸ್ವಭಾವೇನ ಸಸರ್ಜಾತ್ಮಸಮಾಃ ಪ್ರಜಾಃ ॥೧೫॥**

ಗುರುಣಾ=ತಂದೆಯಾದ ಬ್ರಹ್ಮದೇವರಿಂದ ಇತಿ ಆದಿಷ್ಟಃ=ಈ ರೀತಿ ಆಜ್ಞಪ್ತನಾದ ಭಗವಾನ್=ಪೂಜ್ಯನಾದ ಸಃ ನೀಲಲೋಹಿತಃ=ಆ ರುದ್ರದೇವರು ಸತ್ವಾಕೃತಿ-ಸ್ವಭಾವೇನ=ಬಲ, ಆಕೃತಿ, ಸ್ವಭಾವ ಉಗ್ರತೆಗಳಿಂದ ಆತ್ಮಸಮಾಃ ಪ್ರಜಾಃ=ತನಗೆ ಸಮಾನರಾದ ಪ್ರಜೆಗಳನ್ನು ಸಸರ್ಜ=ಸೃಷ್ಟಿಸಿದನು ॥೧೫॥

**ರುದ್ರಾಣ್ಯಾಂ ರುದ್ರಸೃಷ್ಟಾನಾಂ ಸಮಂತಾದ್ ಗ್ರಸತಾಂ ಜಗತ್ ।**
**ನಿಶಾಮ್ಯಾಸಂಖ್ಯಶೋ ಯೂಥಾನ್ ಪ್ರಜಾಪತಿರಶಂಕತ ॥೧೬॥**

ರುದ್ರಾಣ್ಯಾಂ=ರುದ್ರಪತ್ನಿಯಲ್ಲಿ ರುದ್ರಸೃಷ್ಟಾನಾಂ=ರುದ್ರನಿಂದ ಸೃಷ್ಟಿಸಲ್ಪಟ್ಟ ರುದ್ರಾಣಾಂ=ಕ್ರೂರರಾದ ಸಮಂತಾತ್=ಸುತ್ತಲೂ ಜಗತ್=ಪ್ರಪಂಚವನ್ನು ಗ್ರಸತಾಂ= ನುಂಗುವ ಅಸಂಖ್ಯಶಃ=ಲೆಕ್ಕವಿಲ್ಲದ ಯೂಥಾನ್=ಗಣಗಳನ್ನು ಪ್ರಜಾಪತಿಃ= ಬ್ರಹ್ಮದೇವರು ನಿಶಾಮ್ಯ=ನೋಡಿ ಅಶಂಕತ=ಆಕ್ಷೇಪಿಸಿದನು ॥೧೬॥

**ಅಲಂ ಪ್ರಜಾಭಿಃ ಸೃಷ್ಟಾಭಿರೀದೃಶೀಭಿಃ ಸುರೋತ್ತಮ ।**
**(ತ್ವ)ಮಯಾ ಸಹ ದಹಂತೀಭಿರ್ದಿಶಶ್ಚಕ್ಷುರ್ಭಿರುಲ್ಬಣೈಃ ॥೧೭॥**

ಹೇ ಸುರೋತ್ತಮ=ರುದ್ರನೇ ಉಲ್ಬಣೈಃ=ಕ್ರೂರರಾದ ಚಕ್ಷುರ್ಭಿಃ=ಕಣ್ಣುಗಳಿಂದ ಮಯಾ ಸಹ=ನನ್ನಿಂದ ಸಹಿತವಾಗಿ ದಿಶಃ=ದಿಕ್ಕುಗಳನ್ನು ದಹಂತೀಭಿಃ=ಸುಡುತ್ತಿರುವ ತ್ವಯಾ ಸೃಷ್ಟಾಭಿಃ=ನಿನ್ನಿಂದ ಸೃಷ್ಟಿಸಲ್ಪಟ್ಟ ಈದೃಶೀಭಿಃ ಪ್ರಜಾಭಿಃ ಅಲಂ=ಈ ವಿಧ ಪ್ರಜೆಗಳು ಸಾಕು.

ತ್ವಯಾ ಎಂಬ ಪಾಠದಲ್ಲಿ ತ್ವಯಾ ಸಹ ದಹಂತೀಭಿಃ=ಎಂದಾಗಲಿ ತ್ವಯಾ ಸೃಷ್ಟಾಭಿಃ ಎಂದಾಗಲಿ ಅನ್ವಯ ಮಾಡಬೇಕು. ತ್ವಯಾ ಎಂಬುದು ಕರ್ತೃಪದ. ಮಯಾ ಸಹ ಎಂಬ ಪಾಠವಿದ್ದಾಗ ಮಯಾ ಸಹ ಜಗತ್ ದಹಂತೀಭಿಃ ಎಂದು ಮಯಾ ಎಂಬುದು ಕರ್ಮವಾಚಕವೆಂದು ತಿಳಿಯಬೇಕು. ॥೧೭॥

**ತಪ ಆತಿಷ್ಠ ಭದ್ರಂ ತೇ ಸರ್ವಭೂತಸುಖಾವಹಂ ।**
**ತಪಸೈವ ಯಥಾಪೂರ್ವಂ ಸ್ರಷ್ಟಾ ವಿಶ್ವಮಿದಂ ಭವಾನ್ ॥೧೮॥**

ತಪಃ ಆತಿಷ್ಠ=ತಪಸ್ಸನ್ನು ಮಾಡು. ತೇ=ನಿನಗೆ ಭದ್ರಂ=ಮಂಗಳವಾಗಲಿ. ಭವಾನ್=ನೀನು ಸರ್ವಭೂತಸುಖಾವಹಂ=ಎಲ್ಲ ಪ್ರಾಣಿಗಳಿಗೆ ಸುಖವನ್ನುಂಟು ಮಾಡುವ ಇದಂ ವಿಶ್ವಂ=ಈ ಪ್ರಪಂಚವನ್ನು ತಪಸಾ ಏವ=ತಪಸ್ಸಿನಿಂದಲೇ ಯಥಾಪೂರ್ವಂ ತಥಾ=ಹಿಂದಿನಂತೆ ಸ್ರಷ್ಟಾ=ಸೃಷ್ಟಿಸುವವನಾಗುವಿ ॥೧೮॥

**ತಪಸೈವ ಪರಂಜ್ಯೋತಿರ್ಭಗವಂತಮಧೋಕ್ಷಜಂ ।**
**ಸರ್ವಭೂತಗುಹಾವಾಸಮಂಜಸಾ ವಿಂದತೇ ಪುಮಾನ್ ॥೧೯॥**

ಪುಮಾನ್=ಅಧಿಕಾರಿಯು ತಪಸಾ ಏವ=ಆಲೋಚನಧ್ಯಾನರೂಪವಾದ ತಪಸ್ಸಿನಿಂದಲೇ ಪರಂಜ್ಯೋತಿಃ=ಎಲ್ಲ ಜ್ಯೋತಿಗಳಿಗೆ ಜ್ಯೋತಿಯನ್ನು ದಯಪಾಲಿಸಿದ ವಿಲಕ್ಷಣ ಅಥವಾ ಸರ್ವೋತ್ತಮ ಪ್ರಕಾಶರೂಪನಾದ ಅಧೋಕ್ಷಜಂ= ಬಾಹ್ಯೇಂದ್ರಿಯ ಗೋಚರನಾಗದ ಸರ್ವಭೂತಗುಹಾವಾಸಂ=ಎಲ್ಲರ ಹೃದಯ-ಗುಹಾದಲ್ಲಿರುವ ಭಗವಂತಂ=ಶ್ರೀಹರಿಯನ್ನು ಅಂಜಸಾ ವಿಂದತೇ=ಚೆನ್ನಾಗಿ ಹೊಂದುವವನು ॥೧೯॥

**ಮೈತ್ರೇಯ ಉವಾಚ**

**ಏವಮಾತ್ಮಭುವಾಽಽದಿಷ್ಟಃ ಪರಿಕ್ರಮ್ಯ ಗಿರಾಂ ಪತಿಂ ।**
**ಬಾಢಮಿತ್ಯಮುಮಾಮಂತ್ರ್ಯ ವಿವೇಶ ತಪಸೇ ವನಂ ॥೨೦॥**

ಏವಂ=ಈ ರೀತಿಯಾಗಿ ಆತ್ಮಭುವಾ=ಬ್ರಹ್ಮದೇವರಿಂದ ಆದಿಷ್ಟಃ=ಆಜ್ಞಪ್ತರಾದ ರುದ್ರದೇವರು ಬಾಢಂ ಇತಿ=ಹಾಗೇ ಆಗಲಿ ಎಂದು ಅಮುಂ=ಬ್ರಹ್ಮದೇವರನ್ನು ಕುರಿತು ಆಮಂತ್ರ್ಯ=ಹೇಳಿ ಗಿರಾಂಪತಿಂ=ಸರಸ್ವತೀಪತಿಯಾದ ಬ್ರಹ್ಮನನ್ನು ಪರಿಕ್ರಮ್ಯ=ಪ್ರದಕ್ಷಿಣೆ ಮಾಡಿ ತಪಸೇ=ತಪಸ್ಸು ಮಾಡಲು ವನಂ ವಿವೇಶ=ಅಡವಿ-ಯನ್ನು ಪ್ರವೇಶಿಸಿದನು ಅಥವಾ ನೀರನ್ನು ಪ್ರವೇಶಿಸಿದನು ॥೨೦॥

ರುದ್ರನೇ ತಪಸ್ಸು ಮಾಡಿಬಂದು ಸೃಷ್ಟಿಸುವನೆಂದು ಬ್ರಹ್ಮನು ಸುಮ್ಮನೇ ಕೂಡಲಿಲ್ಲವೆಂದು ಹೇಳುವರು –

**ಅಥಾಭಿಧ್ಯಾಯತಃ ಸರ್ಗಂ ದಶ ಪುತ್ರಾಃ ಪ್ರಜಜ್ಞಿರೇ ।**
**ಭಗವಚ್ಛಕ್ತಿಯುಕ್ತಸ್ಯ ಲೋಕಸಂತಾನಹೇತವಃ ॥೨೧॥**

ಅಥ=ರುದ್ರದೇವರು ತಪಸ್ಸಿಗೆ ಹೋದನಂತರ ಸರ್ಗಂ=ಸೃಷ್ಟಿಯನ್ನು ಅಭಿಧ್ಯಾ-ಯತಃ=ಇಚ್ಛಿಸುವ ಭಗವಚ್ಛಕ್ತಿಯುಕ್ತಸ್ಯ=ಶ್ರೀಹರಿಯ ರಜೋಮಿಶ್ರ ಸತ್ವಶಕ್ತಿಯಿಂದ ಕೂಡಿದ ಬ್ರಹ್ಮದೇವರ ಅಂಗೇಭ್ಯಃ=ಅವಯವಗಳಿಂದ ಲೋಕಸಂತಾನಹೇತವಃ= ಜನರ ಸಂತಾನಕ್ಕೆ ಕಾರಣರಾದ ದಶ ಪುತ್ರಾಃ=ಹತ್ತು ಜನ ಮಕ್ಕಳು ಪ್ರಜಜ್ಞಿರೇ= ಹುಟ್ಟಿದರು ॥೨೧॥

**ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ।**
**ಭೃಗುರ್ವಸಿಷ್ಠೋ ದಕ್ಷಶ್ಚ ದಶಮಸ್ತತ್ರ ನಾರದಃ ॥೨೨॥**

ಮರೀಚಿಃ, ಅತ್ರಿಃ, ಅಂಗಿರಾಃ, ಪುಲಸ್ತ್ಯಃ, ಪುಲಹಃ, ಕ್ರತುಃ, ಭೃಗುಃ ವಸಿಷ್ಠಃ, ದಕ್ಷಃ, ನಾರದಃ ಹೀಗೆ ಹತ್ತು ಜನ ಮಕ್ಕಳು ಜನಿಸಿದರು. ಹತ್ತನೆಯವನು ನಾರದನು ಎಂದು ತಿಳಿಯಬೇಕು ॥೨೨॥

ಯಾವ ಯಾವ ಅವಯವದಿಂದ ಯಾರು ಯಾರು ಜನಿಸಿದರೆಂದು ಹೇಳುವರು –

**ಉತ್ಸಂಗಾನ್ನಾರದೋ ಜಜ್ಞೇ ದಕ್ಷೋಽಂಗುಷ್ಠಾತ್ ಸ್ವಯಂಭುವಃ ।**
**ಪ್ರಾಣಾದ್ ವಸಿಷ್ಠಃ ಸಂಜಾತೋ ಭೃಗುಸ್ತ್ವಚಿ ಕರಾತ್ ಕ್ರತುಃ ॥೨೩॥**

ಸ್ವಯಂಭುವಃ=ಬ್ರಹ್ಮದೇವರ ಉತ್ಸಂಗಾತ್=ತೊಡೆಯಿಂದ ನಾರದಃ= ನಾರದನು ಅಂಗುಷ್ಠಾತ್=ಹೆಬ್ಬೆರಳಿನಿಂದ ದಕ್ಷಃ=ದಕ್ಷ ಪ್ರಜಾಪತಿಯು ಪ್ರಾಣಾತ್= ಅಸುಗಳಿಂದ ವಸಿಷ್ಠಃ=ವಸಿಷ್ಠನು ತ್ವಚಿ=ತ್ವಗಿಂದ್ರಿಯದಿಂದ ಭೃಗುಃ=ಭೃಗು

ಋಷಿಯು ಕರಾತ್=ಕೈಯಿಂದ ಕ್ರತುಃ=ಕ್ರತುವು ಜಜ್ಞೇ=ಹುಟ್ಟಿದನು ಸಂಜಾತಃ= ಹುಟ್ಟಿದನು. ಜಜ್ಞೇ ಅಥವಾ ಸಂಜಾತಃ ಎಂದು ಪ್ರತ್ಯೇಕ ಅನ್ವಯ ಮಾಡಬೇಕು ॥೨೩॥

**ಪುಲಹೋ ನಾಭಿತೋ ಜಜ್ಞೇ ಪುಲಸ್ತ್ಯಃ ಕರ್ಣಯೋ ಋಷಿಃ ।**
**ಅಂಗಿರಾ ಮುಖತೋಽಕ್ಷ್ಣೋಽತ್ರಿರ್ಮರೀಚಿರ್ಮನಸೋಽಭವತ್ ॥**

ನಾಭಿತಃ=ಹೊಕ್ಕಳಿನಿಂದ, ಪುಲಹಃ=ಪುಲಹರು, ಕರ್ಣಯೋಃ=ಕಿವಿಗಳಿಂದ ಪುಲಸ್ತ್ಯಃ=ಪುಲಸ್ತ್ಯರು ಜಜ್ಞೇ=ಹುಟ್ಟಿದರು ಮುಖತಃ=ಮುಖದಿಂದ ಅಂಗಿರಾಃ ಋಷಿಃ=ಅಂಗಿರಸಋಷಿಯು ಅಕ್ಷ್ಣೋಃ=ಕಣ್ಣುಗಳಿಂದ ಅತ್ರಿಃ=ಅತ್ರಿಯು ಮನಸಾ= ಮನಸ್ಸಿನಿಂದ ಮರೀಚಿಃ=ಮರಿಚಿಯು ಅಭವತ್=ಜನಿಸಿದನು ॥೨೪॥

**ಧರ್ಮಃ ಸ್ತನಾದ್ ದಕ್ಷಿಣತೋ ಯತ್ರ ನಾರಾಯಣಃ ಸ್ವಯಂ ।**
**ಅಧರ್ಮಃ ಪೃಷ್ಠತೋ ಯಸ್ಮಾನ್ಮೃತ್ಯುರ್ಲೋಕಭಯಂಕರಃ ॥೨೫॥**

ಯತ್ರ=ಯಾವ ಧರ್ಮದಿಂದ ಸ್ವಯಂ ನಾರಾಯಣಃ ಪ್ರಸನ್ನೋ ಭವತಿ= ಸಾಕ್ಷಾತ್ ನಾರಾಯಣನು ಸಂತುಷ್ಟನಾಗುವನು ಸಃ ಧರ್ಮಃ=ಅಂಥ ಧರ್ಮವು (ಪುಣ್ಯ) ದಕ್ಷಿಣತಃ ಸ್ತನಾತ್=ಎದೆಯ ಬಲಭಾಗದಿಂದ ಜನಿಸಿತು. ಯಸ್ಮಾತ್= ಯಾವ ಅಧರ್ಮದಿಂದ ಲೋಕಭಯಂಕರಃ= ಜನರಿಗೆ ಭಯವನ್ನುಂಟುಮಾಡುವ ಮೃತ್ಯುಃ=ನರಕಾದ್ಯನರ್ಥಗಳಾಗುವುವೋ (ಮರಣವಾಗುವುದೋ) ಅಂಥ ಅಧರ್ಮಃ=ಪಾಪವು ಪೃಷ್ಠತಃ=ಬೆನ್ನಿನಿಂದ ಜನಿಸಿತು ಅಥವಾ ಯಾವ ಧರ್ಮನ ಮನೆಯಲ್ಲಿ ನಾರಾಯಣನು ಹರಿ, ನಾರಾಯಣ, ಕೃಷ್ಣ ಎಂಬ ಹೆಸರಿನಿಂದ ಜನಿಸಿದನು ಅಂಥ ಧರ್ಮನು ದಕ್ಷಿಣತಃ ಸ್ತನಾತ್=ಎದೆಯ ಬಲಭಾಗದಿಂದ ಜನಿಸಿದನು.॥೨೫॥

**ಹೃದಿ ಕಾಮೋ ಭ್ರುವೋಃ ಕ್ರೋಧೋ ಲೋಭಶ್ಚಾಧರಚ್ಛದಾತ್ ।**
**ಆಸ್ಯಾದ್ ವಾಕ್ ಸಿಂಧವೋ ಮೇಢ್ರಾನ್ನಿರ್ಋತಿಃ ಪಾಯೋರಘಾಶ್ರಯಃ ॥**

ಹೃದಿ=ಮನಸ್ಸಿನಲ್ಲಿ ಕಾಮಃ=ಕಾಮನು ಭ್ರುವೋಃ=ಹುಬ್ಬುಗಳಿಂದ ಕ್ರೋಧಃ= ಕೋಪವು ಅಧರಚ್ಛದಾತ್=ಕೆಳದುಟಿಯಿಂದ ಲೋಭಃ=ಲೋಭವು ಆಸ್ಯಾತ್= ಬಾಯಿಯಿಂದ ವಾಕ್=ಮನುಷ್ಯರ ಮಾತುಗಳು ಮೇಢ್ರಾತ್=ಗುಹ್ಯೇಂದ್ರಿಯ- ದಿಂದ ಸಿಂಧವಃ=ಸಮುದ್ರಾಭಿಮಾನಿ ವರುಣನು ಪಾಯೋಃ=ಗುದದಿಂದ ಅಘಾಶ್ರಯಃ=ಅಧರ್ಮಾಭಿಮಾನಿ ನಿರ್ಋತಿಃ=ನಿರ್ಋತಿಯು ಜನಿಸಿದನು ॥೨೬॥

**ಛಾಯಾಯಾಃ ಕರ್ದಮೋ ಜಜ್ಞೇ ದೇವಹೂತ್ಯಾಃ ಪತಿಃ ಪ್ರಭುಃ ।**
**ಮನಸೋ ದೇಹತಶ್ಚೇದಂ ಜಜ್ಞೇ ವಿಶ್ವಕೃತೋ ಜಗತ್ ॥೨೭॥**

ವಿಶ್ವಕೃತಃ=ಬ್ರಹ್ಮದೇವರ ಛಾಯಾಯಾಃ=ನೆರಳಿನಿಂದ ಪ್ರಭುಃ=ಸಮರ್ಥನಾದ ದೇವಹೂತ್ಯಾಃ ಪತಿಃ=ದೇವಹೂತಿದೇವಿಯ ಗಂಡನಾದ ಕರ್ದಮಃ=ಕರ್ದಮ-ಪ್ರಜೇಶ್ವರನು ಜಜ್ಞೇ=ಹುಟ್ಟಿದನು ಈ ರೀತಿಯಾಗಿ ಮನಸಃ=ಮನಸ್ಸಿನಿಂದಲೂ ದೇಹತಃ=ದೇಹದಿಂದಲೂ ಇದಂ ಜಗತ್=ಈ ಪ್ರಪಂಚವು ಜಜ್ಞೇ=ಜನಿಸಿತು ॥೨೭॥

ಬ್ರಹ್ಮದೇವರು ಅಸುರಜನಮೋಹನಕ್ಕಾಗಿ ಕಾಮಿಜನರ ಅನುಕರಣ ಮಾಡಿದ ಪ್ರಕಾರವನ್ನು ಹೇಳುವರು –

**ವಾಚಂ ದುಹಿತರಂ ತನ್ವೀಂ ಸ್ವಯಂಭೂರ್ಹರತೀಂ ಮನಃ ।**
**ಅಕಾಮಾಂ ಚಕಮೇ ಕ್ಷತ್ತಃ ಸಕಾಮ ಇತಿ ನಃ ಶ್ರುತಂ ॥೨೮॥**

ಸ್ವಯಂಭೂಃ=ಬ್ರಹ್ಮದೇವರು ಮನಃ ಹರತೀಂ=ಮನಸ್ಸನ್ನು ಸೆಳೆಯುವ ತನ್ವೀಂ=ಸುಂದರಳಾದ ದುಹಿತರಂ=ಮಗಳಾದ ವಾಚಂ=ಮನುಷ್ಯರ ವಾಗಭಿಮಾನಿ-ನಿಯನ್ನು ಅಕಾಮಾಂ=ಇಚ್ಛಿಸದಿರುವ ಇವಳನ್ನು ಸಕಾಮಃ ಇವ=ಕಾಮುಕನಂತೆ ಚಕಮೇ=ಇಚ್ಛಿಸಿದನು ಇತಿ=ಎಂದು ನಃ=ನಮ್ಮಿಂದ ಶ್ರುತಂ=ಕೇಳಲ್ಪಟ್ಟಿದೆ (ಸುದ್ದಿಯಷ್ಟೇ ನಿಜವಲ್ಲವೆಂದು ಭಾವ).ಅಥವಾ ಅಕಾಮಾಂ=ನಿಂದಿತಳಲ್ಲದ ದುಹಿತರಂ=ಶೃಂಗಾರರಸವನ್ನು ದೋಹನ ಮಾಡುವ ಹೀಗೂ ಅರ್ಥ ॥೨೮॥

**ತಮಧರ್ಮೇ ಕೃತಮತಿಂ ವಿಲೋಕ್ಯ ಪಿತರಂ ಸುತಾಃ ।**
**ಮರೀಚಿಮುಖ್ಯಾ ಮುನಯೊ ವಿಸ್ರಂಭಾತ್ ಪ್ರತ್ಯಷೇಧಯನ್ ॥೨೯॥**

ಅಧರ್ಮೇ=ಪಾಪವಿಷಯದಲ್ಲಿ ಕೃತಮತಿಂ=ಮನಸ್ಸು ಮಾಡಿದ ತಂ ಪಿತರಂ= ತಂದೆಯಾದ ಬ್ರಹ್ಮದೇವರನ್ನು ವಿಲೋಕ್ಯ ನೋಡಿ ಸುತಾಃ=ಮಕ್ಕಳಾದ ಮರೀಚಿ-ಮುಖ್ಯಾಃ ಮುನಯಃ=ಮರೀಚಿ ಮುಂತಾದ ಋಷಿಗಳು ವಿಸ್ರಂಭಾತ್ ವಿಶ್ವಾಸದಿಂದ ಪ್ರತ್ಯಷೇಧಯನ್=ನಿರಾಕರಿಸಿದರು ॥೨೯॥

**ನೈತತ್ ಪೂರ್ವೈಃ ಕೃತಂ ತ್ವದ್ಯ ನ ಕರಿಷ್ಯಂತಿ ಯೇಽಪರೇ ।**
**ಯಃ ಸ್ವಾಂ ದುಹಿತರಂ ಗಚ್ಛೇದನಿಗೃಹ್ಯಾಂಗಜಂ ಪ್ರಭುಃ ॥೩೦॥**

ಯಃ=ಯಾವ ಪ್ರಭುಃ=ಬ್ರಹ್ಮದೇವರು ಅಂಗಜಂ=ಕಾಮನನ್ನು ಅನಿಗೃಹ್ಯ= ನಿಗ್ರಹಿಸದೇ ಸ್ವಾಂ ದುಹಿತರಂ ಗಚ್ಛೇತ್=ತನ್ನ ಮಗಳನ್ನು ಹಿಂಬಾಲಿಸಿದನೋ ಏತತ್=ಈವಿಧವಾದ ಕಾರ್ಯವು ಪೂರ್ವೈಃ=ಹಿಂದಿನವರಿಂದ ನ ಕೃತಂ=

ಮಾಡಲ್ಪಟ್ಟಿಲ್ಲ. ಅಧ್ಯ ನ ಕುರ್ವಂತಿ= ಈಗಿನವರಾರೂ ಮಾಡುವುದಿಲ್ಲ ಯೇ ಅಪರೇ=ಮುಂದಿನವರು ನ ಕರಿಷ್ಯಂತಿ=ಮಾಡಲಾರರು ॥೩೦॥

ನಾನು ಅಪರೋಕ್ಷಜ್ಞಾನಿಯು, ಕಾರಣ ನನಗೆ ಯಾವ ಲೇಪವೂ ಆಗುವದಿಲ್ಲ ಎಂದರೆ ಅದಕ್ಕೆ ಉತ್ತರ ಹೇಳುತ್ತಾರೆ –

**ತೇಜೀಯಸಾಮಪಿ ಹ್ಯೇತನ್ನ ಸುಶ್ಲೋಕ್ಯಂ ಜಗದ್ಗುರೋ ।**
**ಯದ್ವೃತ್ತಮನುತಿಷ್ಠನ್ ವೈ ಲೋಕಃ ಕ್ಷೇಮಾಯ ಕಲ್ಪತೇ ॥೩೧॥**

ಜಗದ್ಗುರೋ=ಸರ್ವಲೋಕಕ್ಕೂ ಗುರುವಾದ ಹೇ ಬ್ರಹ್ಮನೇ ಯದ್‌ವೃತ್ತಂ= ಯಾವ ನಿನ್ನ ಆಚರಣೆಯನ್ನು, ಅನುತಿಷ್ಠನ್=ಅನುಕರಿಸುವ, ಲೋಕಃ=ಜನರು, ಕ್ಷೇಮಾಯ ಕಲ್ಪತೇ=ಕ್ಷೇಮಹೊಂದುತ್ತಾರೆ. ಆಕಾರಣ ತೇಜೀಯಸಾಮಪಿ= ಅಪರೋಕ್ಷಜ್ಞಾನಿಗಳಿಗೂ ಸಹ, ಏತತ್=ಮಗಳನ್ನು ಮೋಹಿಸುವುದು, ನಸುಶ್ಲೋಕ್ಯಂ= ಕೀರ್ತಿಯನ್ನು ಕೊಡುವುದಿಲ್ಲ.

ನೀನಾದರೂ ಎಲ್ಲರಿಗೂ ಗುರುವಾಗಿರುವಿ, ನೀನೇ ಹೀಗೆ ಮಾಡಿದರೆ ಉಳಿದವರ ಪಾಡೇನು! ದೊಡ್ಡವರ ಆಚರಣೆಯನ್ನು ಉಳಿದವರು ಅನುಸರಿಸುತ್ತಾರೆ. ಅವರೂ ನಿನ್ನಂತೇ ಆದರೆ ಹೇಗೆ ? ಕಾರಣ ನೀನು ಮಾಡುತ್ತಿರುವುದು ಒಳ್ಳೆಯದಲ್ಲ.

ಬ್ರಹ್ಮದೇವರಿಗೆ ಭಯದಿಂದ ಪ್ರಾರ್ಥಿಸುತ್ತಾರೆ –

**ತಸ್ಮೈ ನಮೋ ಭಗವತೇ ಯ ಇದಂ ಸ್ವೇನ ರೋಚಿಷಾ ।**
**ಆತ್ಮಸ್ಥಂ ವ್ಯಂಜಯಾಮಾಸ ಸಧರ್ಮಂ ಪಾತುಮರ್ಹತಿ ॥೩೨॥**

ಯಃ=ಯಾವನು ಸ್ವೇನರೋಚಿಷಾ=ತನ್ನ ಜ್ಞಾನದಿಂದ ಆತ್ಮಸ್ಥಂ=ಪರಮಾತ್ಮನಲ್ಲಿರುವ ಇದಂ=ಈ ಜಗತ್ತನ್ನು ವ್ಯಂಜಯಾಮಾಸ=ಸೃಷ್ಟಿಸಿದನೋ, ತಸ್ಮೈ ಭಗವತೇ=ಆ ಬ್ರಹ್ಮನಿಗೆ ನಮಃ=ನಮಸ್ಕಾರವು ಸಃ=ಆ ನೀವು ಧರ್ಮಂ=ಧರ್ಮವನ್ನು ಪಾತುಂ ಅರ್ಹತಿ=ರಕ್ಷಿಸಲರ್ಹರು.

**ಸ ಇತ್ಥಂ ಗೃಣತಃ ಪುತ್ರಾನ್ ಪುರೋ ದೃಷ್ಟ್ವಾ ಪ್ರಜಾಪತೀನ್ ।**
**ಪ್ರಜಾಪತಿಪತಿಸ್ತನ್ವಿಂ ತತ್ಯಾಜ ವ್ರೀಡಿತಸ್ತದಾ ॥೩೩॥**

ಸಃ ಪ್ರಜಾಪತಿಪತಿಃ=ಪ್ರಜಾಪತಿಗಳಿಗೆ ಜನಕನಾದ ಆ ಬ್ರಹ್ಮನು ತದಾ=ಆಗ ಪುರಃ=ಎದುರಿನಲ್ಲಿ ಇತ್ಥಂ=ಹೀಗೆ ಗೃಣತಃ=ಸ್ತೋತ್ರಮಾಡುತ್ತಿರುವ ಪುತ್ರಾನ್=

ಮಕ್ಕಳಾದ ಪ್ರಜಾಪತೀನ್=ದಕ್ಷಕರ್ದಮ ಮೊದಲಾದವರನ್ನು ದೃಷ್ಟ್ವಾ=ನೋಡಿ ವ್ರೀಡಿತಃ=ನಾಚಿಕೆಗೊಂಡವನಾಗಿ ತನ್ವೀಂ=ದುಶ್ಶಾಸ್ತ್ರಾಭಿಮಾನಿದಯೆಯನ್ನು ತತ್ಯಾಜ=ಬಿಟ್ಟನು. ಬ್ರಹ್ಮದೇವರು ಸರಸ್ವತೀಯನ್ನೇ ತ್ಯಾಗ ಮಾಡಿಲ್ಲ. ಕಿಂತು ದುಃಶಾಸ್ತ್ರಕ್ಕೆ ಅಭಿಮಾನಿಯಾದ ಮನುಷ್ಯರ ಮಾತಿನ ಅಭಿಮಾನಿಯನ್ನು ಬಿಟ್ಟಿರುವನು, ಹೊರತು ತನ್ನ ಮಡದಿಯಾದ ಸರಸ್ವತಿಯನ್ನಲ್ಲ. ಎನ್ನುವುದನ್ನೇ ಪ್ರಮಾಣದಿಂದ ನಿರೂಪಿಸುವರು-

**"ಯಾಂ ತತ್ಯಾಜ ವಿಭುರ್ಬ್ರಹ್ಮಾ ಮಾನುಷೀ ವಾಕ್ ಚ ಸಾ ಸ್ಮೃತಾ ।**
**ಸರಸ್ವತೀ ನಿಜಾ ಭಾರ್ಯಾ ದೈವೀಂ ವಾಚಂ ತು ತಾಂ ವಿದುಃ ॥ ಇತಿ ಚ ।**

ಸಮರ್ಥನಾದ ಬ್ರಹ್ಮನು ಯಾವಳನ್ನು ಬಿಟ್ಟನೋ ಅವಳು ಕಣಾದಾದಿಗಳು ಮಾಡಿದ ಕುಶಾಸ್ತ್ರಗಳಿಗೆ ಅಭಿಮಾನಿನಿಯಾದವಳು ಮನುಷ್ಯ ಸಂಬಂಧಿಯಾದ ವಾಕ್ ಎನಿಸುವಳು. ಯಾವಳು ಸ್ವಾಭಾವಿಕ ಬ್ರಹ್ಮಪತ್ನಿಯೋ ಅವಳು ದೇವ ಸಂಬಂಧಿವಾಗಭಿಮಾನಿನಿಯು ಎಂದು ಜ್ಞಾನಿಗಳು ತಿಳಿಯುವರು (ವೇದಾಭಿ-ಮಾನಿನಿ ಸರಸ್ವತಿಯು ಅವಳನ್ನು ತ್ಯಜಿಸಿಲ್ಲ) ॥೩೩॥

**ತಾಂ ದಿಶೋ ಜಗೃಹುರ್ಘೋರಾಂ ನೀಹಾರಂ ಯದ್ ವಿದುಸ್ತಮಃ ।**
**ಕದಾಚಿದ್ ಧ್ಯಾಯತಃ ಸ್ರಷ್ಟುರ್ವೇದಾ ಆಸಂಶ್ಚತುರ್ಮುಖಾತ್ ॥೩೪॥**

ನೀಹಾರಂ=ಮಂಜಿನಂತೆ ಸರಿಯಾದ ಜ್ಞಾನಕ್ಕೆ ಪ್ರತಿಬಂಧಕವಾದ ತಮಃ= ಮಿಥ್ಯಾಜ್ಞಾನವು ಯತ್=ಯಾವುದರಿಂದ ಆಗುವುದೆಂದು ವಿದುಃ=ಜ್ಞಾನಿಗಳು ತಿಳಿಯುವರೋ ಘೋರಾಂ=ಕ್ರೂರವಾದ ತಾಂ=ಆ ಮಾನುಷವಾಗಭಿಮಾನಿನಿ-ಯನ್ನು ದಿಶಃ=ದಿಕ್ಕುಗಳಲ್ಲಿರುವ ಜನರು ಜಗೃಹುಃ=ಸ್ವೀಕರಿಸಿದರು. ಕದಾಚಿತ್= ಒಂದು ಸಲ ಧ್ಯಾಯತಃ=ಧ್ಯಾನ ಮಾಡುತ್ತಿರುವ ಸ್ರಷ್ಟುಃ=ಬ್ರಹ್ಮದೇವರ ಚತುರ್ಮುಖಾತ್=ನಾಲ್ಕು ಮುಖಗಳಿಂದ ವೇದಾಃ ಆಸನ್=ನಾಲ್ಕು ವೇದಗಳು ಅಭಿವ್ಯಕ್ತವಾದವು. (ವೇದಾಭಿಮಾನಿಗಳು ಜನಿಸಿದರು) ಪಾದ್ಮಕಲ್ಪದಲ್ಲಿಯೂ ಇದೇ ರೀತಿ ವೇದಾದಿ ಸೃಷ್ಟಿಯು ಎಂದು ತಿಳಿಸಲು ಈ ರೀತಿ ಹೇಳಿರುವರು ॥೩೪॥

ಧ್ಯಾನದ ರೀತಿಯನ್ನು ಹೇಳುವರು.

**ಕಥಂ ಸ್ರಕ್ಷ್ಯಾಮ್ಯಹಂ ಲೋಕಾನ್ ಸಮವೇತಾನ್ ಯಥಾ ಪುರಾ ।**
**ಚಾತುರ್ಹೋತ್ರಂ ಕರ್ಮತಂತ್ರಮುಪವೇದನಯೈಃ ಸಹ ।**
**ಧರ್ಮಸ್ಯ ಪಾದಾಶ್ಚತ್ವಾರಸ್ತಥೈವಾಶ್ರಮವೃತ್ತಯಃ ॥೩೫॥**

ಯಥಾ ಪುರಾ=ಹಿಂದಿನಂತೆ ಸಮವೇತಾನ್=ಅವರವರಿಗೆ ವಿಹಿತವಾದ ಕರ್ಮಗಳಿಂದ ಕೂಡಿದ ಲೋಕಾನ್=ಜನರನ್ನು ಅಹಂ ನಾನು ಕಥಂ ಸ್ರಕ್ಷ್ಯಾಮಿ= ಹೇಗೆ ಸೃಷ್ಟಿಸುವೆನು ? ಎಂದು ಧ್ಯಾನಿಸುವ ಬ್ರಹ್ಮದೇವರಿಂದ ಚಾತುರ್ಹೋತ್ರಂ ಕರ್ಮತಂತ್ರಂ=ಹೋತೃ, ಪೋತೃ, ಉದ್ಗಾತೃ, ಅಧ್ವರ್ಯು ಈ ನಾಲ್ಕು ಮಂದಿಗೆ ಸಂಬಂಧಿಸಿದ ಯಜ್ಞವಿಸ್ತಾರವು ಉಪವೇದನಯೈಃ ಸಹ=ಗಾಂಧರ್ವ ಹಾಗೂ ನೀತಿಶಾಸ್ತ್ರ ಸಹಿತವಾಗಿ, ಧರ್ಮಸ್ಯ ಚತ್ವಾರಃ ಪಾದಾಃ=ಧರ್ಮದ ನಾಲ್ಕು ಪಾದಗಳು ಸತ್ಯ, ತಪಃ, ದಾನಂ, ಶೌಚಃ, ತಥಾ=ಹಾಗೂ ಆಶ್ರಮವೃತ್ತಯಃ= ಬ್ರಹ್ಮಚರ್ಯಾದಿ ಆಶ್ರಮಗಳು ಹಾಗೂ ಅವುಗಳ ಆಚಾರ ಅಥವಾ ಜೀವನೋಪಾಯಗಳು ಆಸನ್=ಹುಟ್ಟಿದವು ॥೩೫॥

**ವಿದುರ ಉವಾಚ**

**ಸ ವೈ ವಿಶ್ವಸೃಜಾಮೀಶೋ ವೇದಾದೀನ್ ಮುಖತೋಽಸೃಜತ್ ।**
**ಯದ್‌ಯದ್ ಯೇನಾಸೃಜದ್ ದೇವಸ್ತನ್ಮೇ ಬ್ರೂಹಿ ತಪೋಧನ ॥**

ಹೇ ತಪೋಧನ=ತಪಸ್ಸೇ ಧನವಾಗಿವುಳ್ಳ ಮೈತ್ರೇಯರೇ ವಿಶ್ವಸೃಜಾಂ ಈಶಃ= ಪ್ರಪಂಚ ಸೃಷ್ಟಿಸುವವರಿಗೆ ಒಡೆಯನಾದ ಸಃ=ಬ್ರಹ್ಮದೇವರು ವೇದಾದೀನ್=ವೇದ ಮುಂತಾದುವನ್ನು ಮುಖತಃ=ಮುಖದಿಂದ ಅಸೃಜತ್=ಸೃಷ್ಟಿಸಿದನು ಎಂದು ಹೇಳಿದಿರಷ್ಟೇ ಆದರೆ ದೇವಃ=ಬ್ರಹ್ಮದೇವರು ಯತ್ ಯತ್=ಯಾವ ಯಾವುದನ್ನು ಯೇನ=ಯಾವ ಮುಖದಿಂದ ಅಸೃಜತ್=ಸೃಷ್ಟಿಸಿದನು ತತ್=ಅದನ್ನು ಮೇ=ನನಗೆ ಬ್ರೂಹಿ=ಹೇಳಿರಿ ॥೩೬॥

**ಮೈತ್ರೇಯ ಉವಾಚ**

**ಋಗ್ಯಜುಃಸಾಮಾಥರ್ವಾಖ್ಯಾನ್‌ವೇದಾನ್ ಪೂರ್ವಾದಿಭಿರ್ಮುಖೈಃ ।**
**ಶಸ್ತ್ರಮಿಜ್ಯಾಂ ಸ್ತುತಿಸ್ತೋಮಂ ಪ್ರಾಯಶ್ಚಿತ್ತಂ ವ್ಯಧಾತ್ ಕ್ರಮಾತ್ ॥೩೭॥**

ಋಗ್ಯಜುಃಸಾಮಾಥರ್ವಾಖ್ಯಾನ್ ವೇದಾನ್=ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಗಳನ್ನು ಕ್ರಮಾತ್=ಕ್ರಮವಾಗಿ ಪೂರ್ವಾದಿಭಿಃ= ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕಿಗಿರುವ ಮುಖಗಳಿಂದ, ಅಸೃಜತ್= ಸೃಷ್ಟಿಸಿದನು ಶಸ್ತ್ರಂ=ಋಗ್ವೇದಮಂತ್ರವನ್ನು ಹೇಳುವುದೆಂಬ ಹೋತೃವಿನ ಕರ್ಮವನ್ನು ಇಜ್ಯಾಂ=ಅಧ್ವರ್ಯುಕರ್ಮವಾದ ಯಾಗವನ್ನೂ, ಸ್ತುತಿಸ್ತೋಮಂ= ಉದ್ಗಾತೃವಿನ ಕರ್ಮವಾದ ಸಾಮವೇದದಲ್ಲಿರುವ ಸ್ತುತಿಸ್ತೋಮ ಎಂಬ ಹೆಸರಿನ ಸ್ತೋತ್ರವಿಶೇಷಗಳನ್ನು, ಪ್ರಾಯಶ್ಚಿತ್ತಂ=ಬ್ರಹ್ಮನ ಕರ್ಮವನ್ನೂ ಕ್ರಮವಾಗಿ ಪೂರ್ವಾದಿ ಮುಖಗಳಿಂದ ವ್ಯಧಾತ್= ಸೃಷ್ಟಿಸಿದನು. ॥೩೭॥

**ಆಯುರ್ವೇದಂ ಧನುರ್ವೇದಂ ಗಾಂಧರ್ವಂ ವೇದಮಾತ್ಮನಃ ।**
**ಸ್ಥಾಪತ್ಯಂ ಚಾಸೃಜತ್ ವೇದಂ ಕ್ರಮಾದ್‌ಪೂರ್ವಾದಿಭಿರ್ಮುಖೈಃ ॥೩೮॥**

ಆತ್ಮನಃ=ತನ್ನ ಪೂರ್ವಾದಿಭಿಃ ಮುಖೈಃ=ಪೂರ್ವಮೊದಲಾದ ಮುಖಗಳಿಂದ ಕ್ರಮಾತ್=ಕ್ರಮವಾಗಿ ಆಯುರ್ವೇದಂ=ವೈದ್ಯಶಾಸ್ತ್ರವನ್ನು ಧನುರ್ವೇದಂ= ಆಯುಧವಿದ್ಯೆಯನ್ನು, ಗಾಂಧರ್ವಂವೇದಂ=ಭರತಶಾಸ್ತ್ರವನ್ನು (ನಾಟ್ಯಕಲಾ), ಸ್ಥಾಪತ್ಯಂವೇದಂ=ಶಿಲ್ಪಶಾಸ್ತ್ರವನ್ನು , ಅಸೃಜತ್= ಸೃಷ್ಟಿಸಿದನು ॥೩೮॥

**ಇತಿಹಾಸಪುರಾಣಂ ಚ ಪಂಚಮಂ ವೇದಮೀಶ್ವರಃ ।**
**ಸರ್ವೇಭ್ಯ ಏವ ವಕ್ತ್ರೇಭ್ಯಃ ಸಸೃಜೇ ಸರ್ವದರ್ಶನಃ ॥೩೯॥**

ಸರ್ವದರ್ಶನಃ=ಸರ್ವಜ್ಞನಾದ ಬ್ರಹ್ಮದೇವನು ಸರ್ವೇಭ್ಯಃ ವಕ್ತ್ರೇಭ್ಯಃ ಏವ=ಎಲ್ಲ ಮುಖಗಳಿಂದಲೇ ಪಂಚಮಂ ವೇದಂ=ಐದನೇ ವೇದವೆನ್ನಿಸುವ, ಇತಿಹಾಸ-ಪುರಾಣಂಚ=ಇತಿಹಾಸ ಸಹಿತವಾದ ಪುರಾಣವನ್ನು ಸಸೃಜೇ=ಸೃಷ್ಟಿಸಿದನು. ॥೩೯॥

**ಷೋಡಶ್ಯುಕ್ಥೌ ಪೂರ್ವವಕ್ತ್ರಾತ್ ಪುರೀಷ್ಯಾಗ್ನಿಷ್ಟುತಾವಥ ।**
**ಆಪ್ತೋರ್ಯಾಮಾತಿರಾತ್ರೌ ಚ ವಾಜಪೇಯಂ ಸಗೋಸವಂ ॥೪೦॥**

ಷೋಡಶ್ಯುಕ್ಥೌ=ಈ ಹೆಸರಿನ ಯಜ್ಞಗಳನ್ನು ಪೂರ್ವವಕ್ತ್ರಾತ್=ಪೂರ್ವದ ಮುಖದಿಂದ ಪುರೀಷ್ಯ ಅಗ್ನಿಷ್ಟುತ್ ಎಂಬ ಯಜ್ಞಗಳನ್ನು ದಕ್ಷಿಣಮುಖದಿಂದ ಆಪ್ತೋರ್ಯಾಮ ಅತಿರಾತ್ರೌ=ಎಂಬ ಯಾಗಗಳನ್ನು ಪಶ್ಚಿಮಮುಖದಿಂದ ಸಗೋಸವಂ ವಾಜಪೇಯಂ=ಗೊಸವಸಹಿತವಾದ (ಪಶುಯಾಗ) ವಾಜಪೇಯ-ವನ್ನು ಉತ್ತರ ಮುಖದಿಂದ ಸಸೃಜೇ=ಸೃಷ್ಟಿಸಿದನು ॥೪೦॥

**ತಪಃ ಶೌಚಂ ದಯಾ ಸತ್ಯಂ ಧರ್ಮಸ್ಯೇತಿ ಪದಾನಿ ಚ ।**
**ಆಶ್ರಮಾಂಶ್ಚ ಯಥಾಸಂಖ್ಯಮಸೃಜತ್ಸಹ ವೃತ್ತಿಭಿಃ ॥೪೧॥**

ಧರ್ಮಸ್ಯ=ಧರ್ಮದ ತಪಃ=ತಪಸ್ಸು ಶೌಚಂ=ಶುದ್ಧಿಯು ದಯಾ=ಕೃಪೆಯು ಸತ್ಯಂ=ಯಥಾರ್ಥವಕ್ತೃತೆ (ಸಜ್ಜನರಿಗೆ ಹಿತಮಾಡುವುದು) ಇತಿ=ಎಂಬ ಪದಾನಿ= ಪಾದಗಳನ್ನು ಚ=ಮತ್ತು ಆಶ್ರಮಾನ್=ಬ್ರಹ್ಮಚರ್ಯ, ಗೃಹಸ್ಥ ವಾನಪ್ರಸ್ಥ-ಸನ್ಯಾಸಗಳೆಂಬ ಆಶ್ರಮಗಳನ್ನು ವೃತ್ತಿಭಿಃ ಸಹ=ಭಿಕ್ಷೆಬೇಡುವುದು, ಬಿಕ್ಷೆ ಹಾಕುವುದು, ಅತಿಥಿ ಪೂಜಾ, ವನವಾಸ, ಸರ್ವಸಂಗಪರಿತ್ಯಾಗ, ಮುಂತಾದ ಅವರವರ ಆಚಾರ ಜೀವಿಕಾ ಸಹಿತವಾಗಿ ಯಥಾಸಂಖ್ಯಂ= ಕ್ರಮವಾಗಿ ಪೂರ್ವಾದಿ ಮುಖಗಳಿಂದ ಅಸೃಜತ್=ಹುಟ್ಟಿಸಿದನು.

ವೇದಗಳು ಅಪೌರುಷೇಯವಾದುದರಿಂದ ಅವುಗಳನ್ನು ಸೃಷ್ಟಿಸುವುದೆಂದರೇನು ? ಇತಿಹಾಸ ಪುರಾಣಗಳನ್ನು ಮೂಲರೂಪಿಯಾದ ಶ್ರೀಹರಿಯು ಮತ್ತು ವೇದವ್ಯಾಸನೂ ನಿರ್ಮಿಸಿರುವುದರಿಂದ ಬ್ರಹ್ಮನು ನಿರ್ಮಿಸಿದನೆಂದು ಹೇಳಿದ್ದು ಹೇಗೆ ಎಂದರೆ ಪ್ರಮಾಣದಿಂದಲೇ ಉತ್ತರಿಸುವರು –

**"ಅಭಿಮಾನಿನಃ (ತಃ) ಶಬ್ದತಶ್ಚ ಬ್ರಹ್ಮಾ ವೇದಾನ್ ಸಸರ್ಜ ಹ ।**
**ಯಜ್ಞಾದೀಂಶ್ಚಕ್ಲೃಪೇ ವಾಚಾ ತಥಾ ಸರ್ವಾಭಿಮಾನಿನಃ ॥**
**ಇತಿಹಾಸಪುರಾಣೇ ತು ಶ್ರುತ್ವಾ ಹರಿಮುಖಾತ್ ಸ್ವಯಂ ।**
**ಭಾರತಾದೀನ್ವಿನಾ ಪಶ್ಚಾದ್ಧರಿಣಾಽನ್ಯೈಶ್ಚ ನಿರ್ಮಿತಾನ್" ॥ ಇತಿ ।**

ಬ್ರಹ್ಮದೇವರು ವೇದವನ್ನು ಸೃಷ್ಟಿಸುವುದು ಎಂದರೆ ವೇದಾಭಿಮಾನಿ ದೇವತೆಗಳ ದೇಹವನ್ನು ಸೃಷ್ಟಿಸುವುದೆಂದರ್ಥವೇ ಹೊರತು ಇತರ ಶಾಸ್ತ್ರಗಳಂತೆ ಶಬ್ದರಚನೆಯಲ್ಲ. ಚ ಮತ್ತು ಶಬ್ದತಃ ಎಂದರೆ ಪೂರ್ವಕಲ್ಪದ ವೇದಕ್ಕೆ ಸಮಾನವಾದ ಕ್ರಮದಿಂದ ವೇದವು ಬ್ರಹ್ಮದೇವರ ಬುದ್ಧಿಕ್ರಮಾನುಸಾರ ಜನಿಸಿತು ಹೀಗೂ ಅರ್ಥ. (ವರ್ಣಗಳು ನಿತ್ಯವಾದರೂ ಅನಿತ್ಯ, ಬುದ್ಧಿಕ್ರಮಸಾಪೇಕ್ಷ ಕ್ರಮ ಅನಿತ್ಯವಾದ್ದರಿಂದ ಜನಿಸಿತು ಎನ್ನಬಹುದು) ಷೋಡಶೀ ಮುಂತಾದ ಯಜ್ಞ ತಪಸ್ಸು ಮುಂತಾದುವನ್ನು ಅವುಗಳನ್ನು ಪ್ರತಿಪಾದಿಸುವ ಶಾಸ್ತ್ರವನ್ನು ರಚಿಸಿ ತಿಳಿಸಿದನೆಂದರ್ಥ ಮತ್ತು ಅವುಗಳ ಅಭಿಮಾನಿಗಳನ್ನು ನಿರ್ಮಿಸಿದನು ಎಂದೂ ಅರ್ಥ.

ಶ್ರೀಹರಿಯು ಮೊದಲೇ ರಚಿಸಿದ ಇತಿಹಾಸ ಪುರಾಣಗಳನ್ನು ಶ್ರೀಹರಿಯ ಮುಖದಿಂದ ತಾನು ಕೇಳಿ ಪುನಃ ವ್ಯಾಸರೂಪಿಯಾದ ಶ್ರೀಹರಿಯಿಂದ ನಿರ್ಮಿಸಿದ ಭಾರತ ಭಾಗವತಗಳನ್ನು ಬಿಟ್ಟು ಮಾರ್ಕಾಂಡೇಯಾದಿಗಳಿಂದ ರಚಿಸಿದವುಗಳನ್ನೂ ಬಿಟ್ಟು ಉಳಿದ ಮೂಲರಾಮಾಯಣ ಪಂಚರಾತ್ರಾದಿಗಳನ್ನು ಸೃಷ್ಟಿಸಿದನೆಂದು ಭಾವ ॥೪೧॥

ಬ್ರಹ್ಮಚರ್ಯಾಶ್ರಮದ ಅವಾಂತರ ಪ್ರಭೇದಗಳ ಉತ್ಪತ್ತಿಯನ್ನು ಹೇಳುವರು–

**ಸಾವಿತ್ರಂ ಪ್ರಾಜಾಪತ್ಯಂ ಚ ಬ್ರಾಹ್ಮಂ ಚಾಥ ಬೃಹತ್ ತಥಾ ।**
**ವಾರ್ತಾಽಸಂಚಯಶಾಲೀನಂ ಶಿಲೋಂಛ ಇತಿ ವೈ ಗೃಹೇ ॥೪೨॥**

ಸಾವಿತ್ರಂ=ಉಪನಯನವಾದಾಗಿನಿಂದ ವೇದಗ್ರಹಣ ಮಾಡುವವರೆಗೆ ಗಾಯತ್ರಿಯನ್ನು ಅಧ್ಯಯನ ಮಾಡುವವನ ವ್ರತ. ಇದು ಒಂದು ಬ್ರಹ್ಮ ಚರ್ಯ, ಬ್ರಾಹ್ಮಂ=ಹನ್ನೆರಡು ವರ್ಷ ಗುರುಕುಲದಲ್ಲಿ ವೇದವನ್ನು ಅಧ್ಯಯನ ಮಾಡುವವನ ವ್ರತ ಇದು ಎರಡನೆಯದು. ಇನ್ನು ಬೃಹತ್=ಬದುಕುವವರೆಗೆ ಬ್ರಹ್ಮಚಾರಿ–

ಯಾಗಿರುವುದು ನೈಷ್ಠಿಕಬ್ರಹ್ಮಚರ್ಯ ಮೂರನೆಯದು. ಇನ್ನು ನಾಲ್ಕನೆಯದು ಪ್ರಾಜಾಪತ್ಯಂ=ಎಂದರೆ ಯಾವ ಗೃಹಸ್ಥನಿಗೆ ಒಬ್ಬಳೇ ಹೆಂಡತಿಯಿದ್ದು ಅವಳನ್ನೂ ಋತುಕಾಲದಲ್ಲಿ ಮಾತ್ರ ಸಂಪರ್ಕಿಸುವುದು ಇದೂ ಒಂದುವಿಧ ಬ್ರಹ್ಮಚರ್ಯವೇ. ಹೀಗೆ ನಾಲ್ಕು ರೀತಿ ಬ್ರಹ್ಮಚರ್ಯಗಳು. ಗೃಹಸ್ಥಾಶ್ರಮದಲ್ಲಿ ವಾರ್ತಾ=ಭಿಕ್ಷೆ ಬೇಡುವುದು (ದಾಸಪಂಥದಲ್ಲಿ ಪ್ರಸಿದ್ಧವಾದ ಯಾಯಾವರ) ಅಸಂಚಯಃ=ಆ ದಿನ ಸಂಪಾದಿಸಿದ್ದನ್ನು ಅದೇ ದಿನ ಖರ್ಚು ಮಾಡುವುದು, ಶಾಲೀನಂ=ಒಂದು ವರ್ಷ ತನ್ನ ಜೀವನಕ್ಕಾಗುವಷ್ಟು ಧಾನ್ಯ ಮುಂತಾದವನ್ನು ಸಂಗ್ರಹಿಸುವುದು ಶಿಲೋಂಛ=ಭೂಮಿಯಲ್ಲಿ ಬಿದ್ದ ಧಾನ್ಯಗಳಿಂದ ಜೀವಿಸುವುದು ಇತಿ ಹೀಗೆ ಗೃಹೇ= ಗೃಹಸ್ಥಾಶ್ರಮದಲ್ಲಿ ನಾಲ್ಕು ವಿಧವಿರುವುದು.

ಪ್ರಜಾಪತ್ಯ ಬ್ರಹ್ಮಚರ್ಯವೆಂದರೇನೆಂದು ಹೇಳುವರು–

**ಪ್ರಾಜಾಪತ್ಯಂ ಬ್ರಹ್ಮಚರ್ಯಮೇಕಭಾರ್ಯರ್ತುಗಾಮಿತಾ ।ಇತಿ ವ್ಯಾಸ ಸ್ಮೃತೌ ।**
**ವಾರ್ತಾ ಯಾಯಾವರಂ ಜ್ಞೇಯಮೇಕಾಹಿತ್ವಮಸಂಚಯಃ ।ಇತಿ ಚ ।**

ಈ ತಾತ್ಪರ್ಯದ ಭಾವ ಶ್ಲೋಕಾರ್ಥದಲ್ಲಿಯೇ ಬಂದಿದೆ.

ವೃತ್ತಿಭೇದದಿಂದ ವಾನಪ್ರಸ್ಥಾಶ್ರಮದಲ್ಲಿ ಹಾಗೂ ಸನ್ಯಾಸದಲ್ಲೂ ನಾಲ್ಕು ವಿಧ ಇದೆ ಎಂದು ಹೇಳುವರು–

**ವೈಖಾನಸಾ ವಾಲಖಿಲ್ಯೋದಂಬರಾಃ ಫೇನಪಾ ವನೇ ।**
**ನ್ಯಾಸೇ ಕುಟೀಚಕಃ ಪೂರ್ವಂ ಬಹೂದೋ ಹಂಸನಿಷ್ಕ್ರಿಯೌ ॥೪೩॥**

ವೈಖಾನಸಾಃ=ಗಡ್ಡೆ-ಗೆಣಸುಗಳನ್ನು ತಿನ್ನುವವರು, ಉದುಂಬರಾಃ=ಹಣ್ಣು ತಿಂದು ಜೀವಿಸುವವರು, ವಾಲಖಿಲ್ಯಾಃ=ಎಲ್ಲವನ್ನೂ ತಿನ್ನುವವರು ಫೇನಪಾಃ= ಆಕಳ ಕರುವಿನ ಬಾಯಿಯಿಂದ ಬಿದ್ದ ಹಾಲಿನ ನೊರೆಯನ್ನು ತಿಂದು ಬದುಕು-ವವರು, ಹೀಗೆ ವನೇ=ವಾನಪ್ರಸ್ಥಾಶ್ರಮದಲ್ಲಿ ಇರುವವರು ನಾಲ್ಕು ವಿಧ ಎಂದು ತಿಳಿಯಬೇಕು.

ಇನ್ನು ನ್ಯಾಸೇ=ಸನ್ಯಾಸಾಶ್ರಮದಲ್ಲಿ ಇರುವವರೊಳಗೆ ಪೂರ್ವಃ ಮೊದಲನೆಯ-ವರು ಕುಟೀಚಕಃ=ಮನೆಯಲ್ಲಿಯೇ ತನ್ನ ಮಕ್ಕಳು ಕೊಟ್ಟ ಅನ್ನಾದಿಗಳಿಂದ ತೃಪ್ತಿ ಪಡುವವರು ಬಹೂದಃ=ತೀರ್ಥಯಾತ್ರಾ ಮಾಡುವ ತ್ರಿದಂಡಿಯು ಎರಡನೆಯವನು. (ಮೂರು ಹೊತ್ತು ಸ್ನಾನ ಮಾಡುವುದಲ್ಲದೆ ಅಕಾಲದಲ್ಲಿ ತೀರ್ಥಗಳು ಕಂಡರೆ ಸ್ನಾನ ಮಾಡುವವನು, ಎಂದು ವಿಜಯಧ್ವಜರು) ಹಂಸನಿಷ್ಕ್ರಿಯೌ=ಹಂಸ ಎಂದರೆ

ಏಕದಂಡಿ ಯಜ್ಞೋಪವೀತವುಳ್ಳವನು, ನಿಷ್ಕ್ರಿಯ ಎಂದರೆ ಹಿಂಸೆ ಮಾಡದಿರುವ ಯಜ್ಞಾದಿ ಕ್ರಿಯಾರಹಿತನಾದ ಏಕದಂಡಿ ಯಜ್ಞೋಪವೀತರಹಿತನಾದ ಪರಮಹಂಸನು, ಹೀಗೆ ನಾಲ್ಕು ರೀತಿಯಿರುವರು.

ಇಲ್ಲಿ ಅಕೃಷ್ಟಪಚ್ಯವೃತ್ತಯಃ ವೈಖಾನಸಾಃ ಅಂದರೆ ಊಳದಿರುವ ಭೂಮಿಯಲ್ಲಿ ಬೆಳೆದ ಆಹಾರದಿಂದ ಜೀವಿಸುವವರು ವೈಖಾನಸರು, ವಾಲಖಿಲ್ಯಾಃ ವಾಲಖಿಲ್ಯರು ಹೊಸ ಅನ್ನ ಸಿಕ್ಕಾಗ ಮೊದಲು ಸಂಗ್ರಹಿಸಿದ ಅನ್ನುವನ್ನು ಬಿಡುವವರು ಉದುಂಬರರು ಅಂದರೆ ಬೆಳಿಗ್ಗೆ ಎದ್ದು ಯಾವ ದಿಕ್ಕನ್ನು ಮೊದಲು ನೋಡುವದೋ ಆ ದಿಕ್ಕಿನಿಂದ ತಂದ ಹಣ್ಣು ಮುಂತಾದವುಗಳಿಂದ ಜೀವಿಸುವವರು, ಫೇನಪ ಎಂದರೆ ತಾನೇ ಯಾವುದನ್ನು ನೋಡುವನೋ ಆ ಹಣ್ಣಿನಿಂದ ಜೀವಿಸುವನು (ಅಥವಾ ತಾನೇ ಉದುರಿದ ಹಣ್ಣಿನಿಂದ ಜೀವಿಸುವವನು) ಎಂಬ ವ್ಯಾಖ್ಯಾನವು ಪ್ರಮಾಣ ವಿರುದ್ಧ ಎಂಬ ಅಭಿಪ್ರಾಯದಿಂದ ಈ ಶಬ್ದಗಳನ್ನು ಪ್ರಮಾಣದಿಂದ ವ್ಯಾಖ್ಯಾನಿಸುವರು.

**''ವೈಖಾನಸಾಃ ಮೂಲಭಕ್ಷಾಃ ಫಲಭಕ್ಷಾಃ ಉದುಂಬರಾಃ ।**
**ವಾಲಖಿಲ್ಯಾಃ ಸರ್ವಭಕ್ಷಾ ಫೇನಪಾ ವತ್ಸಫೇನಪಾಃ ॥ ಇತಿ ಚ ।**

ಶ್ಲೋಕಾರ್ಥದಿಂದಲೇ ತಾತ್ಪರ್ಯದರ್ಥವಾಗುವುದು. ಅದರಿಂದಲೇ ತಿಳಿಯುವುದು ॥೪೩॥

ಬ್ರಾಹ್ಮಣ ಮುಂತಾದವರ್ಣಗಳ ವೃತ್ತಿಗಳು (ಜೀವನೋಪಾಯಗಳು) ಬ್ರಹ್ಮದೇವರ ಪೂರ್ವಾದಿಮುಖಗಳಿಂದ ಜನಿಸಿದವು ಎಂದು ಹೇಳುವರು.

**ಆನ್ವೀಕ್ಷಿಕೀ ತ್ರಯೀ ವಾರ್ತಾ ದಂಡನೀತಿಸ್ತಥೈವ ಚ ।**
**ಏವಂ ವ್ಯಾಹೃತಯಶ್ಚಾಸನ್ ಪ್ರಣವೇನಾಸ್ಪದಂ ಗತಾಃ ॥೪೪॥**

ಆನ್ವೀಕ್ಷಿಕೀ=ವೇದಾನುಸಾರಿಯಾದ ವಿಷ್ಣುವಿನಿಂದ ಹೇಳಲ್ಪಟ್ಟ ಬ್ರಹ್ಮ ತರ್ಕವು ಮತ್ತು ತ್ರಯೀ=ವೇದಗಳು ಇವುಗಳಿಂದ ಜೀವಿಸುವುದು ಬ್ರಾಹ್ಮಣರಿಗೆ ವಾರ್ತಾ= ವಾಣಿಜ್ಯವು ಇದರಿಂದ ವೈಶ್ಯರು ಜೀವಿಸುವುದು ದಂಡನೀತಿಃ=ರಾಜನೀತಿಯಿಂದ ಕ್ಷತ್ರಿಯರು ಜೀವಿಸುವರು ಈ ಎಲ್ಲಾ ವೃತ್ತಿಗಳು ತಥಾ=ಹಾಗೂ ಪ್ರಣವೇನ ಸಹ=ಓಂಕಾರದೊಂದಿಗೆ ವ್ಯಾಹೃತಯಃಶ್ಚ=ಭೂಃ ಭುವಃ ಸ್ವಃ ಎಂಬ ವ್ಯಾಹೃತಿಗಳು ಆಸ್ಪದಂಗತಾಃ ಬ್ರಹ್ಮದೇವರ ಪೂರ್ವಾದಿ ಮುಖಗಳೆಂಬ ಸ್ಥಾನವನ್ನು ಪಡೆದು ಆಸನ್=ಅಭಿವ್ಯಕ್ತವಾದವು.

ಈ ಶ್ಲೋಕದಲ್ಲಿಯ ಆನ್ವೀಕ್ಷಿಕೀ, ಮುಂತಾದ ಶಬ್ದಗಳನ್ನು ಪ್ರಕೃತೋಪಯುಕ್ತ-ವಾಗಿ ವ್ಯಾಖ್ಯಾನಿಸುವರು –

**"ಆನ್ವೀಕ್ಷಿಕೀ ತಂತ್ರವಿದ್ಯಾ ಸಾ ಚ ವೇದಾನುಸಾರಿಣೀ ।**
**ವಿಷ್ಣುಪ್ರೋಕ್ತಾ ಶಿವಾದ್ಯುಕ್ತಾ ಜ್ಞೇಯಾ ವೇದಬಹಿಷ್ಕೃತಾ ॥**
**ದಂಡನೀತೀ ರಾಜಧರ್ಮಸ್ತ್ರಯೀ ವೇದಾಃ ಪ್ರಕೀರ್ತಿತಾಃ ।**
**ವಾರ್ತಾ ವಾಣಿಜ್ಯಕಾದಿಃ ಸ್ಯಾದೇತಾಭಿರ್ಯತ್ತು ಜೀವನಂ ॥**
**ತದಾನ್ವೀಕ್ಷಿಕ್ಯಾದಿ ನಾಮ ಬ್ರಹ್ಮಣಾ ನಿರ್ಮಿತಂ ಪುರಾ ॥ ಇತಿ ಚ ॥**
**ಪ್ರಣವಃ ಪೂರ್ವವಕ್ತ್ರಾತ್,**
**'ಪ್ರಣವಃ ಪೂರ್ವಕ್ತ್ರೇಣ ಭೂರಾದ್ಯಾಶ್ಚ ಮುಖತ್ರಯಾತ್ ।**
**ಪ್ರದಕ್ಷಿಣಮವರ್ತಂತ ವೇದಾಶ್ಚೈವಾಶ್ರಮಾಸ್ತಥಾ ॥ ಇತಿ ಬ್ರಾಹ್ಮೇ ॥**

ವಿಷ್ಣುವಿನಿಂದ ಹೇಳಲ್ಪಟ್ಟ ವೇದಾನುಸಾರಿಯಾದ ತಂತ್ರವಿದ್ಯೆ (ಪಂಚರಾತ್ರ) (ತರ್ಕವಿದ್ಯೆ) ಆನ್ವೀಕ್ಷಿಕೀ ಎನಿಸುವುದು. ಶಿವಾದಿಗಳಿಂದ ಹೇಳಲ್ಪಡುವ ತಂತ್ರವಿದ್ಯೆಯು ವೇದವಿರುದ್ಧವಾದುದು ಆದ ಕಾರಣ ಅದು ಇಲ್ಲಿ ಗ್ರಾಹ್ಯವಲ್ಲ. ದಂಡನೀತಿ ಎಂದರೆ ರಾಜಧರ್ಮವು, ತ್ರಯೀ ಎಂದರೆ ವೇದಗಳು. ವಾರ್ತಾ ಎಂದರೆ ವಾಣಿಜ್ಯ (ವ್ಯಾಪಾರ) ಇವುಗಳಿಂದ ಜೀವಿಸುವುದಕ್ಕೂ ಆನ್ವೀಕ್ಷಿಕೀ ಮೊದಲಾದ ಹೆಸರುಗಳುಳ್ಳವುಗಳು ಬ್ರಹ್ಮನಿಂದ ನಿರ್ಮಿತವಾದವು. ಪ್ರಣವವು ಪೂರ್ವಮುಖದಿಂದ ಜನಿಸಿತು. ಭೂರಾದಿ ವ್ಯಾಹೃತಿಗಳು ಉಳಿದ ಮೂರು ಮುಖಗಳಿಂದ ಪ್ರದಕ್ಷಿಣವಾಗಿ ಜನಿಸಿದವು. ವೇದಗಳೂ ಹಾಗೂ ಆಶ್ರಮಗಳೂ ಜನಿಸಿದವು. ಎಂದು ಬ್ರಾಹ್ಮಪುರಾಣದಲ್ಲಿ ಹೇಳಿರುವರು ॥೪೪॥

**ತಸ್ಯೋಷ್ಣಿಗಾಸೀಲ್ಲೋಮಭ್ಯೋ ಗಾಯತ್ರೀ ಚ ತ್ವಚೋ ವಿಭೋಃ ।**
**ತ್ರಿಷ್ಟುಪ್ ಮಾಂಸಾತ್ ಸ್ನುತೋಽನುಷ್ಟುಬ್ ಜಗತ್ಯಸ್ಥ್ನಃ ಪ್ರಜಾಪತೇಃ ।**
**ಮಜ್ಜಾಯಾ ಪಂಕ್ತಿರುತ್ಪನ್ನಾ ಬೃಹತೀ ಪ್ರಾಣತೋಽಭವತ್ ॥೪೫॥**

ತಸ್ಯ=ಬ್ರಹ್ಮದೇವರ ಲೋಮಭ್ಯಃ=ಕೂದಲುಗಳಿಂದ ಉಷ್ಣಿಕ್=ಎಂಬ ಛಂದಸ್ಸು ವಿಭೋಃ=ಬ್ರಹ್ಮನ ತ್ವಚಃ=ಚರ್ಮದಿಂದ ಗಾಯತ್ರೀ ಎಂಬ ಛಂದಸ್ಸು ಮಾಂಸಾತ್= ಮಾಂಸದಿಂದ ತ್ರಿಷ್ಟುಪ್ ಎಂಬ ಛಂದಸ್ಸು ಸ್ನುತಃ=ಸ್ನಾಯುವಿನಿಂದ ಅನುಷ್ಟುಪ್ ಎಂಬ ಛಂದಸ್ಸು ಅಸ್ಥ್ನಃ=ಅಸ್ಥಿಗಳಿಂದ ಜಗತೀ ಎಂಬ ಛಂದಸ್ಸು ಆಸೀತ್ ಹುಟ್ಟಿತು (ಎಂದು ಪ್ರತ್ಯೇಕ ಅನ್ವಯ) ಪ್ರಜಾಪತೇಃ ಬ್ರಹ್ಮದೇವರ ಮಜ್ಜಾಯಾಃ ಮಜ್ಜಾದಿಂದ ಪಂಕ್ತಿಃ ಎಂಬ ಛಂದಸ್ಸು ಉತ್ಪನ್ನಾ ಜನಿಸಿತು ಪ್ರಾಣತಃ=ಪ್ರಾಣಗಳಿಂದ ಬೃಹತೀ ಎಂಬ ಛಂದಸ್ಸು ಅಭವತ್=ಉತ್ಪನ್ನವಾಯಿತು ॥೪೫॥

**ಸ್ಪರ್ಶಾಸ್ತಸ್ಯಾಭವನ್ ಜೀವಾತ್ ಸ್ವರೋ ದೇಹ ಉದಾಹೃತಃ ।**
**ಊಷ್ಮಾಣ ಇಂದ್ರಿಯಾಣ್ಯಾಹುರಂತಸ್ಥಾ ಬಲಮಾತ್ಮನಃ ॥೪೬॥**

ತಸ್ಯ=ಬ್ರಹ್ಮದೇವರ ಜೀವಾತ್=ಚೈತನ್ಯದಿಂದ ಸ್ಪರ್ಶಾಃ=ವರ್ಗೀಯವರ್ಣಗಳು (ಕಾದಯೋಮಾವಸಾನಾಃ ಸ್ಪರ್ಶಾಃ "ಕ" ಕಾರದಿಂದ "ಮ" ಕಾರದವರೆಗೆ) ದೇಹಃ=ದೇಹದಿಂದ ಸ್ವರಾಃ=ಅಕಾರಾದಿಸ್ವರವರ್ಣಗಳು ಜನಿಸಿದವು ಕಾರಣ ಸ್ವರಗಳು ದೇಹಃ ಉದಾಹೃತಾಃ=ದೇಹವೆನಿಸಲ್ಪಟ್ಟಿವೆ. ಊಷ್ಮಾಣಃ=ಶ,ಷ,ಸ,ಹಗಳನ್ನು ಇಂದ್ರಿಯಾಣಿ ಆಹುಃ=ಇಂದ್ರಿಯಗಳಿಂದ ಜನಸಿದ ಕಾರಣ ಇಂದ್ರಿಯವೆನ್ನುವರು ಆತ್ಮನಃ=ಬ್ರಹ್ಮದೇವರ ಬಲಂ=ಬಲದಿಂದ ಅಂತಸ್ಥಾಃ ಯ, ರ, ಲ, ವಗಳು ಜನಿಸಿದವು.

"ಸಪ್ತಸು ಪ್ರಥಮಾ"ಎಂಬ ಸೂತ್ರಾನುಸಾರ ಈ ಶ್ಲೋಕದಲ್ಲಿ ದೇಹ ಮುಂತಾದ ಶಬ್ದಗಳು ಪಂಚಮೀ ಅರ್ಥವುಳ್ಳವುಗಳು ಎಂಬ ಅಭಿಪ್ರಾಯದಿಂದ ಸಮಾಖ್ಯಾ ಪ್ರಮಾಣ ಹೇಳುವರು. ಮತ್ತು ಪಂಚಮೀ ಅರ್ಥವುಳ್ಳದ್ದಾಗದಿದ್ದರೂ ಪ್ರಥಮಾಂತ ದೇಹಾದಿಶಬ್ದಗಳು ದೇಹಜನ್ಯ ಎಂಬರ್ಥದಲ್ಲಿ ಉಪಯೋಗಿಸುವುದು ಪ್ರಮಾಣ ಸಿದ್ಧವಾದ್ದರಿಂದ ದೇಹಃ ಸ್ವರಃ ಎಂದು ವಿಶೇಷಣವಿಶೇಷ್ಯ ಭಾವ ಹೇಳಿದ್ದು ಸರಿಯೇ ಎಂದೂ ಹೇಳುವರು –

**ಸ್ಪರ್ಶಾಸ್ತಸ್ಯಾಭವನ್ ಜೀವಾತ್ ಸ್ವರಾ ದೇಹಾತ್ ಪ್ರಜಜ್ಞಿರೇ ।**
**ಊಷ್ಮಾಣಮಿಂದ್ರಿಯೇಭ್ಯಶ್ಚ ಅಂತಸ್ಥಾ ಬಲತೋ ವಿಭೋಃ ॥**
**ಯಸ್ಮಾದ್ಯಜ್ಜಾಯತೇ ಚಾಂಗಾತ್ ತತ್ತದಂಗಾಭಿಧಂ ಭವೇತ್ ॥**

ವರ್ಣಗಳು ನಿತ್ಯವಾದ್ದರಿಂದ ವ್ಯಕ್ತವಾದವು ಎಂದು ತಿಳಿಯಬೇಕು. ಬ್ರಹ್ಮನ ಚೈತನ್ಯದಿಂದ ವರ್ಗೀಯವರ್ಣಗಳು, ದೇಹದಿಂದ ಸ್ವರಗಳು, ಇಂದ್ರಿಯಗಳಿಂದ ಶ,ಷ,ಸ,ಹಗಳು, ಬಲದಿಂದ ಯ, ರ, ಲ, ವಗಳು ಜನಿಸಿದವು. ಯಾವ ಸ್ವರಾದಿಗಳು. ಯಾವ ಅವಯವದಿಂದ ಜನಿಸುವುವೋ ಅವು ಆ ಅಂಗವಾಚಕ ಶಬ್ದಗಳಿಂದ ಕರೆಸಿಕೊಳ್ಳುವುವು. ಕಾರಣ ಸ್ವರಃ ದೇಹಃ ಎಂದರೆ ದೇಹಜನ್ಯ ಎಂಬರ್ಥ ವಿವಕ್ಷಿತವಾದ್ದರಿಂದ ಯಾವ ಅನುಪತ್ತಿಯಿಲ್ಲವೆಂದು ಭಾವ ॥೪೬॥

**ಸ್ವರಾಃ ಸಪ್ತ ವಿಹಾರೇಣ ಭವಂತಿ ಸ್ಮ ಪ್ರಜಾಪತೇಃ ।**
**ಶಬ್ದಬ್ರಹ್ಮಾತ್ಮನಸ್ತಾತ ವ್ಯಕ್ತಾವ್ಯಕ್ತಾತ್ಮನಃ ಪ್ರಭೋಃ ॥೪೭॥**

ಹೇ ತಾತ=ಎಲೋ ನಾರದನೇ ಶಬ್ದಬ್ರಹ್ಮಾತ್ಮನಃ= ನಾರಾಯಣ ಮುಂತಾದ ಕೇವಲ ವಿಷ್ಣುವಾಚಕಶಬ್ದಗಳಿಂದ ಭಿನ್ನವಾದ ಎಲ್ಲ ವೈದಿಕಶಬ್ದಪ್ರತಿಪಾದ್ಯನಾದ

ವ್ಯಕ್ತಾವ್ಯಕ್ತಾತ್ಮನಃ=ಬ್ರಹ್ಮಾಂಡ ಮತ್ತು ಮಹದಾದಿತತ್ತ್ವಗಳಲ್ಲಿ ವ್ಯಾಪ್ತನಾದ ಪ್ರಭೋಃ= ಸಮರ್ಥನಾದ ಪ್ರಜಾಪತೇಃ=ಬ್ರಹ್ಮದೇವರ ವಿಹಾರೇಣ ಶರೀರದ ಸಂಚಾರವಿಶೇಷ-ದಿಂದ ಸಪ್ತಸ್ವರಾಃ ಭವಂತಿ ಸ್ಮ=ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ ಧೈವತ, ನಿಷಾದ, ಎಂಬ ಏಳು (ಸಂಗೀತದ) ಸ್ವರಗಳು ಉತ್ಪನ್ನವಾದವು.

ಇಲ್ಲಿ ಶಬ್ದಗಳಿಂದ ಮತ್ತು ವ್ಯಕ್ತಾವ್ಯಕ್ತಜಗತ್ತಿನಿಂದ ಅಬೇಧವು ಬ್ರಹ್ಮನಿಗೆ ತೋರುವುದು ಕಾರಣ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು–

**ಶಬ್ದಬ್ರಹ್ಮಾತ್ಮಕೋ ಬ್ರಹ್ಮಾ ಸರ್ವಶಬ್ದಾಭಿಧೋ ಯತಃ ।**
**ಋತೇ ನಾರಾಯಣಾದೀನಿ ನಾಮ್ನಾಂ ಸ ವಿಷಯೋ ಯತಃ ॥**
**ವ್ಯಕ್ತಂ ಬ್ರಹ್ಮಾಂಡಮುದ್ದಿಷ್ಟಮವ್ಯಕ್ತಂ ಮಹದಾದಿ ಚ ।**
**ತದ್ವ್ಯಾಪಕತ್ವಾದ್ ಬ್ರಹ್ಮಾ ತು ವ್ಯಕ್ತಾವ್ಯಕ್ತಾತ್ಮಕಃ ಸ್ಮೃತಃ ॥**

ನಾರಾಯಣ ಮುಂತಾದ ಶ್ರೀಹರಿಮಾತ್ರವಾಚಕ ಶಬ್ದಗಳನ್ನು ಹೊರತುಪಡಿಸಿ ಎಲ್ಲ ನಾಮಗಳಿಗೆ ವಿಷಯನಾದುದರಿಂದ ಸರ್ವ ಶಬ್ದಾಭಿದೇಯತ್ವವಿರುವುದ-ರಿಂದ ಬ್ರಹ್ಮದೇವನು ಶಬ್ದಬ್ರಹ್ಮಾತ್ಮಕನೆಂದು ಕರೆಯಲ್ಪಡುವನು. ಬ್ರಹ್ಮಾಂಡ ಮತ್ತು ಮಹದಾದಿತತ್ತ್ವಗಳನ್ನು ವ್ಯಾಪಿಸಿರುವುದರಿಂದ ವಕ್ತಾವ್ಯಕ್ತಾತ್ಮಕನೆನಿಸುವನು.

ವಕ್ತಾವ್ಯಕ್ತಂ ವ್ಯಾಪ್ನೋತೀತಿ ವ್ಯಕ್ತಾವ್ಯಕ್ತಾತ್ಮಾ । ತಸ್ಯ । ಶಬ್ದಬ್ರಹ್ಮ ಆಪ್ನೋತೀತಿ ಶಬ್ದ ಬ್ರಹ್ಮಾತ್ಮಾ ತಸ್ಯ । ಎಂದು ವಿಗ್ರಹ ತಿಳಿಯಬೇಕು ॥೪೭॥

ಈ ರೀತಿ ಬ್ರಹ್ಮದೇವರು ತನ್ನ ದೇಹದಿಂದ ಮತ್ತು ಅವಯವಗಳಿಂದ ಸೃಷ್ಟಿಯನ್ನು ಮಾಡಿದನು ಎಂದು ಹೇಳಿ ಈಗ ಬೇರೆ ರೀತಿಯಿಂದ ಸೃಷ್ಟಿಸಲು ಇಚ್ಛಿಸಿದನೆಂದು ಹೇಳಿದರು–

**ಬ್ರಹ್ಮಾನುಭಾವವಿತತೋ ನಾನಾಶಕ್ತ್ಯುಪಬೃಂಹಿತಃ ।**
**ತತೋಽಪರಾಮುಪಾದಾಯ ಸ ಸರ್ಗಾಯ ಮನೋ ದಧೇ ॥೪೮॥**

ಬ್ರಹ್ಮಾನುಭಾವವಿತತಃ=ಪರಬ್ರಹ್ಮನಾದ ಶ್ರೀಹರಿಯ ಧ್ಯಾನದಿಂದ ಅಥವಾ ಅನುಗ್ರಹದಿಂದ ಪೂರ್ಣನಾದ ಆದ್ದರಿಂದಲೇ ನಾನಾಶಕ್ತ್ಯುಪಬೃಂಹಿತಃ=ಅನೇಕ ಸೃಷ್ಟಿಮಾಡುವ ಸಾಮರ್ಥ್ಯಪೂರ್ಣನಾದ ಸಃ=ಬ್ರಹ್ಮದೇವರು ತತಃ ಅಪರಾಂ= ಹಿಂದೇ ಹೇಳಿದ ಸೃಷ್ಟಿಯಿಂದ ಭಿನ್ನವಾದ ಸ್ತ್ರೀಪುರುಷರಿಂದಾಗುವ ಸೃಷ್ಟಿಶಕ್ತಿಯನ್ನು ಉಪಾದಾಯ=ಸ್ವೀಕಾರ ಮಾಡಿ (ಕಾರ್ಯೋನ್ಮುಖ ಮಾಡಿ) ಸರ್ಗಾಯ= ನಾನಾವಿಧ ಜಗತ್ತನ್ನು ಸೃಷ್ಟಿಸಲು ಮನಃ ದಧೇ=ಮನಸ್ಸು ಮಾಡಿದನು ॥೪೮॥

**ಋಷೀಣಾಂ ಭೂರಿವೀರ್ಯಾಣಾಮಪಿ ಸರ್ಗಮವಿಸ್ತೃತಂ ।**
**ಜ್ಞಾತ್ವಾತದ್ ಹೃದಯೇ ಭೂಯಶ್ಚಿಂತಯಾಮಾಸ ಕೌರವ ॥೪೯॥**

ಭೂರಿವೀರ್ಯಾಣಾಂ ಅಪಿ=ಬಹಳಸಮರ್ಥರಾಗಿದ್ದರೂ ಋಷೀಣಾಂ= ಮರೀಚಿ ಮುಂತಾದ ಋಷಿಗಳು ಮಾಡಿದ ಸರ್ಗಂ=ಸೃಷ್ಟಿಯನ್ನು ಅವಿಸ್ತೃತಂ= ವಿಸ್ತಾರವಾಗದಿರುವುದನ್ನು ಜ್ಞಾತ್ವಾ=ತಿಳಿದು ಹೇ ಕೌರವ=ರಾಜನೇ ಹೃದಯೇ= ಮನಸ್ಸಿನಲ್ಲಿ ಭೂಯಃ=ಮತ್ತೇ ಚಿಂತಯಾಮಾಸ=ವಿಚಾರ ಮಾಡಿದನು ॥೪೯॥

**ಅಹೋ ಅದ್ಭುತಮೇತನ್ಮೇ ವ್ಯಾಪೃತಸ್ಯಾಪಿ ನಿತ್ಯದಾ ।**
**ನ ಹ್ಯೇಧಂತೇ ಪ್ರಜಾ ನೂನಂ ದೈವಮತ್ರ ವಿಘಾತಕಂ ॥೫೦॥**

ನಿತ್ಯದಾ=ಯಾವಾಗಲೂ ವ್ಯಾಪೃತಸ್ಯ=ಸೃಷ್ಟಿಯಲ್ಲಿ ಆಸಕ್ತನಾಗಿದ್ದರೂ ಮೇ=ನನ್ನ ದಶೆಯಿಂದ ಪ್ರಜಾಃ=ಪ್ರಜೆಗಳು ನ ಹಿ ಏಧಂತೇ=ಹೆಚ್ಚು ಬೆಳೆಯುತ್ತಿಲ್ಲ ಏತತ್= ಇದು ಅದ್ಭತಂ=ಆಶ್ಚರ್ಯವು ಅತ್ರ=ಈ ವಿಷಯದಲ್ಲಿ ದೈವಂ=ದೇವಾನುಗ್ರಹವು ವಿಘಾತಕಂ= ಪ್ರತಿಬಂಧಕವು ॥೫೦॥

**ಏವಂ ಯುಕ್ತಿಮತಸ್ತಸ್ಯ ದೈವಂ ಚಾವೇಕ್ಷತಸ್ತದಾ ।**
**ಕಸ್ಯ ರೂಪಮಭೂದ್ವೇಧಾ ಯತ್ಕಾಯಮಭಿಚಕ್ಷತೇ ॥೫೧॥**

ಏವಂ=ಈ ರೀತಿಯಾಗಿ ಯುಕ್ತಿಮತಃ=ಧ್ಯಾನಮಾಡುವ ದೈವಂ ಚ ಅವೇಕ್ಷತಃ=ದೈವಾನುಗ್ರಹವನ್ನು ಎದುರು ನೋಡುವ (ಅಪೇಕ್ಷಿಸುವ) ತಸ್ಯ ಕಸ್ಯ=ಆ ಬ್ರಹ್ಮದೇವರ ರೂಪಂ=ದೇಹವು ದ್ವೇಧಾ ಅಭೂತ್=ಸರಸ್ವತೀ ಮತ್ತು ಬ್ರಹ್ಮದೇಹಗಳೆರಡಾಗಿ ಪರಿಣಮಿಸಿತು. ಯತ್ ಯಾವರೂಪದ್ವಯವನ್ನು ಕಾಯಂ ಅಬಿಚಕ್ಷತೇ=ಕಾಯವೆಂದು ಕರೆಯುವರು. ನಿರುಕ್ತಿಯನ್ನು ತಿಳಿದವರು ಎಂದರ್ಥ.

೪೯ನೇ ಶ್ಲೋಕದಲ್ಲಿ ಹೇಳಿದ ವಿಷಯವನ್ನು ಮರೀಚಿ ಮುಂತಾದವರು ಜನಿಸಿದರು ಎಂದು ಹೇಳಿದ ನಂತರವೇ ''ಅವರು ಮಾಡಿದ ಸೃಷ್ಟಿ ವಿಸ್ತೃತವಾಗಲಿಲ್ಲ'' ಮುಂತಾದವನ್ನೇ ಪ್ರಸ್ತುತವಾದುದರಿಂದ ಹೇಳಬೇಕಿತ್ತು. ಹಾಗೆ ಮಾಡದೇ ಕದಾಚಿತ್‌ಧ್ಯಾಯತಃ ಮುಂತಾಗಿ ೩೪ನೇ ಶ್ಲೋಕದಿಂದ ವೇದಾದಿಸೃಷ್ಟಿಗಳನ್ನು ಹೇಳಿ ಅಪ್ರಸ್ತುತವಾದ ಮಾತನ್ನು ಈಗ ಹೇಳಿದುದು ಏಕೆ (ಹೇಗೆ) ಎಂದರೆ ಹೇಳುವರು–

**''ಋಷೀಣಾಂ ಭೂರಿವೀರ್ಯಾಣಾ''ಮಿತಿ ಸಿಂಹಾವಲೋಕನಂ ।**
**ಯತ್ರ ಪಶ್ಚಾತ್ತನಃ ಶ್ರೇಷ್ಠಸ್ತತ್ರ ಸಿಂಹಾವಲೋಕನಂ ॥ ಇತಿ ಬ್ರಹ್ಮತರ್ಕೇ ।**

ಹಿಂದೆಯೇ ಈ ವಿಷಯ ಹೇಳಬೇಕೆಂಬುದು ನಿಜವೇ ಆದರೂ ಬೇರೆ ವಿಷಯಗಳನ್ನು ಮಧ್ಯದಲ್ಲಿ ಹೇಳಿ ಸಿಂಹಾವಲೋಕನದಂತೇ ಋಷಿಗಳ ಸೃಷ್ಟಿಯನ್ನು ನೋಡಿ ಬ್ರಹ್ಮದೇವರು ಮಾಡಿದ ವಿಚಾರವನ್ನು ಇಲ್ಲಿ ಹೇಳಿದೆ. ಆದ್ದರಿಂದ ಅಪ್ರಸ್ತುತವಾದುದನ್ನು ಹೇಳಿದಂತಲ್ಲ. ಹೀಗೇಕೆ ಸಿಂಹಾವಲೋಕನನ್ಯಾಯದಿಂದ ಹಿಂದಿನದನ್ನು ಏಕೆ ಹೇಳುವುದು ಎಂದರೇ ಯಾವುದನ್ನು ಹೇಳುವಾಗ ಮುಂದಿನದು ಶ್ರೋತೃಗಳ ಅಪೇಕ್ಷೆಯಂತೆ ಮಧ್ಯದಲ್ಲಿ ಹೇಳಬೇಕಾಗುವುದೋ ಅಂಥ ಸಂದರ್ಭದಲ್ಲಿ ಹಿಂದಿನ ವಿಷಯವನ್ನು ವಿಸ್ತಾರಗೊಳಿಸಬೇಕಾದರೆ ಸಿಂಹಾವಲೋಕನವು ಆವಶ್ಯಕವು ಎಂದು ಬ್ರಹ್ಮ ತರ್ಕದಲ್ಲಿ ಹೇಳಿದೆ.

ಎರಡು ರೂಪಗಳಿಗೆ ಕಾಯವೆಂದು ಕರೆಯಲು ನಿಮಿತ್ತ ಹೇಳುವರು–

**ಕೇನ ಪ್ರಾಪ್ತತ್ವಾತ್ ಕಾಯಃ ।**

ಕನಾಮಕ ಬ್ರಹ್ಮದೇವರಿಂದ ಜಾತವಾದುದರಿಂದ ದೇಹಸಮುದಾಯಕ್ಕೆ ಕಾಯವೆಂದು ಹೆಸರು ಎಂದು ಭಾವ ॥೫೧॥

**ತಾಭ್ಯಾಂ ರೂಪವಿಭಾಗಾಭ್ಯಾಂ ಮಿಥುನಂ ಸಮಪದ್ಯತ ।**
**ಯಸ್ತು ತತ್ರ ಪುಮಾನ್ ಸೋಽಭೂತ್ ಮನುಃ ಸ್ವಾಯಂಭುವಃ ಸ್ವರಾಟ್॥**

ತಾಭ್ಯಾಂ ರೂಪವಿಭಾಗಾಭ್ಯಾಂ=ಬ್ರಹ್ಮದೇವರ ದೇಹವಿಭಾಗವಾದ ಬ್ರಹ್ಮಸರಸ್ವತೀ ದೇಹಗಳಿಂದ ಮಿಥುನಂ ಸಮಪದ್ಯತ=ಸ್ತ್ರೀಪುರುಷದ್ವಂದ್ವವು ಜನಿಸಿತು ತತ್ರ= ಅವುಗಳಲ್ಲಿ ಯಃ ಪುಮಾನ್=ಯಾವನು (ದು) ಪುರುಷನೋ ಸಃ=ಅವನು ಸ್ವರಾಟ್=ಚಕ್ರವರ್ತಿಯಾದ ಸ್ವಾಯಂಭುವಃ ಮನುಃ ಅಭೂತ್=ಸ್ವಾಯಂಭುವ-ಮನುವಾದನು ॥೫೨॥

**ಸ್ತ್ರೀ ಯಾಽಽಸೀಚ್ಛತರೂಪಾಖ್ಯಾ ಮಹಿಷ್ಯಸ್ಯ ಮಹಾತ್ಮನಃ ।**
**ತದಾ ಮೈಥುನದರ್ಮೇಣ ಪ್ರಜಾ ಏಧಾಂಬಭೂವಿರೇ ॥೫೩॥**

ಯಾವಳು ಸ್ತ್ರೀ ಆಸೀತ್=ಹೆಣ್ಣಾಗಿದ್ದಳೋ ಸಾ=ಅವಳು ಶತರೂಪಾಖ್ಯಾ=ಶತರೂಪಾ ಎಂಬ ಹೆಸರಿನವಳು. ಅಸ್ಯ ಮಹಾತ್ಮನಃ=ಈ ಮಹಾಪುರಷನಾದ ಸ್ವಾಯಂಭುವಿನ ಮಹಿಷೀ ಆಸೀತ್=ಹೆಂಡತಿಯಾದಳು. ತದಾ=ಮಿಥುನಸೃಷ್ಟಿಯು ಪ್ರಾರಂಭ-ವಾದಾಗ ಮೈಥುನಧರ್ಮೇಣ=ಸ್ತ್ರೀಪುರುಷರ ಸಂಬಂಧದಿಂದ ಪ್ರಜಾಃ=ಪ್ರಜೆಗಳು ಏಧಾಂಬಭೂವಿರೇ=ಬಹಳ ವೃದ್ಧಿಯನ್ನು ಹೊಂದಿದರು ॥೫೩॥

**ಸ ಚಾಪಿ ಶತರೂಪಾಯಾಂ ಪಂಚಾಪತ್ಯಾನ್ಯಜೀನತ್ ।**
**ಪ್ರಿಯವ್ರತೋತ್ತಾನಪಾದೌ ತಿಸ್ರಃ ಕನ್ಯಾಶ್ಚ ಭಾರತ ॥೫೪॥**

ಸ ಚಾಪಿ=ಸ್ವಾಯಂಭುವಮನುವಾದರೂ ಶತರೂಪಾಯಾಂ=ತನ್ನ ಪತ್ನಿಯಾದ ಶತರೂಪಾಳಲ್ಲಿ ಪ್ರಿಯವ್ರತೋತ್ತಾನಪಾದೌ=ಪ್ರಿಯವ್ರತ ಉತ್ತಾನಪಾದ ಎಂಬ ಎರಡು ಗಂಡು ಮಕ್ಕಳನ್ನೂ ಚ=ಮತ್ತು ತ್ರಿಸ್ರಃ=ಮೂರು ಕನ್ಯಾಃ=ಕನ್ಯೆಯರನ್ನು ಹೀಗೆ ಪಂಚ=ಐದು ಜನ. ಅಪತ್ಯಾನ್ ಮಕ್ಕಳನ್ನು ಅಜೀಜನತ್=ಹುಟ್ಟಿಸಿದನು ॥೫೪॥

**ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ಸತ್ತಮ ।**
**ಆಕೂತಿಂ ರುಚಯೇ ಪ್ರಾದಾತ್ ಕರ್ದಮಾಯ ತು ಮಧ್ಯಮಾಂ ।**
**ದಕ್ಷಾಯಾದಾತ್ಪ್ರಸೂತಿಂ ಚ ಯತ ಆಪೂರಿತಂ ಜಗತ್ ॥೫೫॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ತ್ರಯೋದಶೋಽಧ್ಯಾಯಃ ॥*

ಸತ್ತಮ=ವಿದುರನೇ ಆಕೂತಿಃ ದೇವಹುತಿಃ ಪ್ರಸುತಿಃ ಇತಿ=ಹೀಗೆ ಮೂರು ಜನ ಹೆಣ್ಣು ಮಕ್ಕಳು. ಅವರಲ್ಲಿ ಆಕೂತಿಂ=ಆಕೂತಿಯನ್ನು ರುಚಯೇ=ರುಚಿಪ್ರಜಾಪತಿಗೆ ಮಧ್ಯಮಾಂ=ದೇವಹೂತಿಯನ್ನುಕರ್ದಮಾಯ=ಕರ್ದಮಪ್ರಜೆಶ್ವರರಿಗೆ ಪ್ರಸೂತಿಂ= ಪ್ರಸೂತಿಯನ್ನು ದಕ್ಷಾಯ=ದಕ್ಷಪ್ರಜಾಪತಿಗೆ ಅದಾತ್=ವಿವಾಹ ಮಾಡಿ ಕೊಟ್ಟನು.

ಯತಃ=ಯಾವ ಕನ್ಯಾತ್ರಯದಿಂದ ಜಗತ್=ಪ್ರಪಂಚವು ಆಪೂರಿತಂ= ಪ್ರಜೆಗಳಿಂದ ಪೂರ್ಣವಾಯಿತು.

**ಇಲ್ಲಿಗೆ ಹದಿಮೂರನೆಯ ಅಧ್ಯಾಯ ಮುಕ್ತಾಯವಾಯಿತು**

# ಹದಿಮೂರನೆಯ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ವಿದುರ, ಇದುವರೆಗೆ ಶ್ರೀಹರಿಯ ಕಾಲವೆಂಬ ಮಹಿಮೆಯನ್ನು ಹೇಳಿದೆ. ಇನ್ನುಮುಂದೆ ಬ್ರಹ್ಮದೇವರು ಸೃಷ್ಟಿಸಿದ ವಸ್ತುಗಳನ್ನು ಹೇಳುತ್ತೇನೆ. ಮೊದಲು ಕತ್ತಲೆ (ಅಜ್ಞಾನ), ವಿಪರೀತಜ್ಞಾನ (ಮೋಹ), ಅದರಲ್ಲಿ ಆಗ್ರಹ (ಮಹಾಮೋಹ), ಕ್ರೋಧ (ತಾಮಿಸ್ರ), ಮತ್ತು ಮರಣ (ಅಂಧತಾಮಿಸ್ರ) ವೆಂಬ ಐದು ಅಜ್ಞಾನದ ವೃತ್ತಿಗಳನ್ನು ಸೃಷ್ಟಿಸಿದರು. ಇವೆಲ್ಲವೂ ಪಾಪಕ್ಕೆ ಕಾರಣ-ಗಳಾದ್ದರಿಂದ ಬ್ರಹ್ಮದೇವರಿಗೆ ಅಷ್ಟೇನೂ ತೃಪ್ತಿಯಾಗಲಿಲ್ಲ. ಅವರು ಮತ್ತೆ ಶ್ರೀಹರಿಯನ್ನು ವಿಶೇಷವಾಗಿ ಧ್ಯಾನಮಾಡಿದರು. ಪವಿತ್ರವಾದ ಮನಸ್ಸಿನಿಂದ ಉಳಿದ ಪದಾರ್ಥಗಳನ್ನು ಸೃಷ್ಟಿಸಿದರು. ಸನಕ, ಸನಂದ, ಸನತ್ಸುಜಾತ ಮತ್ತು ಸನತ್ಕುಮಾರರನ್ನು ಸೃಷ್ಟಿಸಿದರು. ಇವರೆಲ್ಲರೂ ಬ್ರಹ್ಮಚಾರಿಗಳೂ ಮತ್ತು ಸನ್ಯಾಸಿಗಳು. ತಿಳಿದಿದ್ದೂ ಬ್ರಹ್ಮದೇವರು ಮುಂದಿನ ಸೃಷ್ಟಿಗೆ ಅನುಕೂಲಿಸುವಂತೆ ಅವರನ್ನು ಕುರಿತು 'ಮಕ್ಕಳಿರಾ, ಪ್ರಜೆಗಳನ್ನು ಸೃಷ್ಟಿಸಿರಿ' ಎಂದು ಆಜ್ಞೆಮಾಡಿದರು. ನಿವೃತ್ತಿಧರ್ಮ-ರತರಾದ ಈ ಭಗವದ್ಭಕ್ತರು ಆ ಕಾರ್ಯಕ್ಕೆ ಒಪ್ಪಲಿಲ್ಲ. ಮಕ್ಕಳು ಅಪ್ಪಣೆಯನ್ನು ಮೀರಿದ್ದರಿಂದ ಬ್ರಹ್ಮದೇವರಿಗೆ ಕೋಪಬಂದಿತು. ಕ್ಷಣಿಕವಾಗುವಂತೆ ಅದನ್ನು ಬ್ರಹ್ಮದೇವರು ತಡೆಹಿಡಿದರು. ಅಷ್ಟರಲ್ಲಿ ಕೋಪದಫಲವಾಗಿ ಅವರ ಹುಬ್ಬುಗಳ ಮಧ್ಯದಿಂದ ಕೂಡಲೇ ಕಪ್ಪು-ಕೆಂಪು ಬಣ್ಣದ ಬಾಲಕನು ಜನಿಸಿದನು. ಆದ್ದರಿಂದ ಇವನ್ನು 'ಸದ್ಯೋಜಾತ' 'ನೀಲಲೋಹಿತ'ನೆಂದು ಕರೆದರು. ಇಂದ್ರಾದಿಗಳಿಗಿಂತ ಮೊದಲೇ ಹುಟ್ಟಿದ ಈ ಬಾಲಕನು ಅಳುತ್ತಾ 'ನನಗೆ ಹೆಸರುಗಳನ್ನೂ ಸ್ಥಾನಗಳನ್ನೂ ಕಲ್ಪಿಸಿಕೊಡು' ಎಂದು ಕೇಳಿದನು. ಆಗ ಬ್ರಹ್ಮದೇವರು ಆ ಹುಡುಗನ ಮಾತನ್ನು ನಡೆಸಿಕೊಡುವವರಾಗಿ 'ಅಳಬೇಡ ಮಗು! ನೀನು ಕೇಳಿದುದನ್ನು ಮಾಡಿಕೊಡುತ್ತೇನೆ' ಎಂದು ಮಂಗಳಕರ ಮಾತುಗಳಿಂದ ನುಡಿದರು. 'ಮಗು ! ನೀನು ದೇವತೆಗಳಲ್ಲಿ

ಉತ್ತಮನು. ಉದ್ವೇಗಗೊಂಡವನಂತೆ ಅತ್ತೆಯಾದ್ದರಿಂದ (ರೋದನಮಾಡಿದ್ದರಿಂದ) ನಿನ್ನನ್ನು ರುದ್ರನೆಂದು ಜನರು ಕರೆಯುವರು. ಹೃದಯ, ಇಂದ್ರಿಯಗಳು, ಪ್ರಾಣ, ಆಕಾಶ, ವಾಯು, ಅಗ್ನಿ, ನೀರು, ಭೂಮಿ, ಸೂರ್ಯ, ಚಂದ್ರ ಮತ್ತು ತಪಸ್ಸುಗಳು ನಿನಗೆ ಸ್ಥಾನಗಳು. ಮನ್ಯು, ಮನು, ಮಹಾನಾಸ, ಮಹಾಶಿವ, ಋತಧ್ವಜ, ಅಗ್ನಿವೀರ್ಯ, ಭವ, ಕಾಲ, ವಾಮದೇವ ಮತ್ತು ಧೃತವ್ರತನೆಂದು ಹೆಸರುಗಳು. ನಿನ್ನ ಹೆಂಡತಿಯರಾದ ಈ ಸ್ತ್ರೀಯರನ್ನೂ ನಿನಗೆ ಕೊಡುತ್ತೇನೆ - ಧೀ, ವೃತ್ತಿ, ಅಶಲಾ, ಉಮಾ, ನಿಯುತ್ಸರ್ಪಿ, ಇಲಾ, ಅಂಬಿಕಾ, ಇರಾವತೀ, ಸುಧಾ, ದೀಕ್ಷಾ ಎಂದು ಇವರ ಹೆಸರುಗಳು. ನೀನು ಈ ಸ್ತ್ರೀಯರನ್ನೂ, ಮೇಲೆ ಹೇಳಿದ ಸ್ಥಾನಗಳನ್ನೂ ಹೆಸರುಗಳನ್ನೂ ತೆಗೆದುಕೊಂಡು ಇವರ ಮೂಲಕ ಪ್ರಜೆಗಳನ್ನು ಸೃಷ್ಟಿಮಾಡು. ಇಲ್ಲದಿದ್ದರೆ ನಿನ್ನನ್ನು ಪ್ರಜೆಗಳ ಪತಿಯೆಂದು ಕರೆಯಲಾಗುವುದಿಲ್ಲ ಎಂದು ಬ್ರಹ್ಮದೇವರು ನುಡಿದರು. ರುದ್ರದೇವರು ಸ್ವಾಭಾವಿಕವಾಗಿ ಸಾತ್ವಿಕರು, ಬಲಶಾಲಿಗಳು. ತಂದೆಯಾದ ಬ್ರಹ್ಮದೇವರ ಅಪ್ಪಣೆಯಂತೆ ತಮ್ಮಂತೆಯೇ ಉಗ್ರರಾದ ಅನೇಕ ರುದ್ರಗಣಗಳನ್ನು ಸೃಷ್ಟಿಸಿದರು. ಉಗ್ರರಾದ ಈ ರುದ್ರರು ಜಗತ್ತನ್ನೇ ನುಂಗುತ್ತಬಂದರು. ಬ್ರಹ್ಮದೇವರು ಈ ಬಗೆಯ ಪ್ರಜಾಸೃಷ್ಟಿಯಿಂದ ತಮ್ಮ ಸೃಷ್ಟಿಕಾರ್ಯಕ್ಕೆ ಅನುಕೂಲವಿಲ್ಲವೆಂದು ಆಶಂಕಿಸಿ 'ದೇವಶ್ರೇಷ್ಠ ! ಈ ಬಗೆಯ ಪ್ರಜೆಗಳ ಸೃಷ್ಟಿಯನ್ನು ಸಾಕುಮಾಡು. ದಿಕ್ಕುಗಳೇ ಕಣ್ಣುಗಳಾಗಿರುವ ಕ್ರೂರಿಗಳಾದ ಇವರು ನನ್ನನ್ನೂ ಜಗತ್ತನ್ನೂ ಸುಡುತ್ತಿದ್ದಾರೆ. ನೀನು ಶ್ರೀಹರಿಯನ್ನು ಸ್ಮರಿಸದೆ ಸೃಷ್ಟಿಸಿದ್ದರಿಂದ ಇಂತಹ ಪ್ರಜೆಗಳ ಸೃಷ್ಟಿಯಾಯಿತು. ನೀನು ಶ್ರೀಹರಿಯನ್ನು ಕುರಿತು ತಪಸ್ಸುಮಾಡು. ಇದರಿಂದ ಎಲ್ಲಭೂತಗಳಿಗೂ ಸುಖವುಂಟಾಗುವುದು. ತಪಸ್ಸು-ಮಾಡದೆ ಹಿಂದಿನಂತೆ ಜಗತ್ತನ್ನು ನೀನು ಸೃಷ್ಟಿಸಲು ಸಾಧ್ಯವಿಲ್ಲ. ತಪಸ್ಸಿನಿಂದಲೇ ಶ್ರೀಹರಿಯ ಅನುಗ್ರಹವನ್ನು ಪಡೆದು ಹಿಂದಿನಂತೆ ಜಗತ್ತನ್ನು ಸೃಷ್ಟಿಸುವವನಾಗುತ್ತೀ. ಶ್ರೀಹರಿಯು ಎಲ್ಲ ಜ್ಯೋತಿಗಳಿಗಿಂತ ವಿಲಕ್ಷಣನು, ಐಶ್ವರ್ಯಾದಿ ಗುಣಗಳೇ ದೇಹವಾಗಿ ಉಳ್ಳವನು. ಬಾಹ್ಯೇಂದ್ರಿಯಗಳಿಗೆ ಗೋಚರನಾಗದಿರುವನು. ಎಲ್ಲರ ಹೃದಯಗುಹೆಗಳಲ್ಲಿಯೂ ವಾಸವಾಗಿರುವನು. ಸ್ವತಂತ್ರನಾದ್ದರಿಂದ ಅವನನ್ನೇ ಮುಖ್ಯವಾಗಿ 'ತತ್ವ'ವೆಂದು ಕರೆಯುವರು. ಇಂತಹ ಶ್ರೀಹರಿಯನ್ನು ಅಧಿ ಕಾರಿಚೇತನನು ತಪಸ್ಸಿನಿಂದಲೇ ಹೊಂದಲಾಗುವುದು' ಎಂದು ನುಡಿದರು. ಹೀಗೆ ಬ್ರಹ್ಮದೇವರಿಂದ ಆಜ್ಞಪ್ತರಾದ ರುದ್ರದೇವರು ಅವರಿಗೆ ಪ್ರದಕ್ಷಿಣೆಮಾಡಿ 'ಹಾಗೆಯೇ ಆಗಲಿ' ಎಂದು ಹೇಳಿ ತಪಸ್ಸುಮಾಡುವುದಕ್ಕಾಗಿ ನೀರನ್ನು ಪ್ರವೇಶಿಸಿದರು.

ಇತ್ತ ಬ್ರಹ್ಮದೇವರು ಸೃಷ್ಟಿಯನ್ನೇ ಆಲೋಚಿಸುತ್ತಿದ್ದರು. ಶ್ರೀಹರಿಯು ಸೃಷ್ಟಿಶಕ್ತಿಯನ್ನು ಇವರಲ್ಲಿಯೂ ಇಟ್ಟನು. ರಜೋಗುಣಮಿಶ್ರವಾದ ಸತ್ವಗುಣದ ಶಕ್ತಿಯಿಂದ ಕೂಡಿದ ಇವರ ದೇಹದ ಅವಯವಗಳಿಂದ ಲೋಕದ ಪ್ರಜಾಸಂತತಿಗೆ ಕಾರಣರಾದ ಹತ್ತು ಪ್ರಜೇಶ್ವರರು ಅವತರಿಸಿದರು. ಅವರ ತೊಡೆಯಿಂದ ನಾರದರು, ಅಂಗುಷ್ಠದಿಂದ ದಕ್ಷರು, ಪ್ರಾಣದಿಂದ ವಸಿಷ್ಠರು, ಚರ್ಮದಿಂದ ಭೃಗುಋಷಿಗಳು, ಕೈಯಿಂದ ಕ್ರತು ಎಂಬುವರು, ನಾಭಿಯಿಂದ ಪುಲಹರು, ಕಿವಿಗಳಿಂದ ಪುಲಸ್ತ್ಯರು, ಮುಖದಿಂದ ಆಂಗೀರಸರು, ಕಣ್ಣುಗಳಿಂದ ಅತ್ರಿಗಳು, ಮನಸ್ಸಿನಿಂದ ಮರೀಚಿಗಳು ಹುಟ್ಟಿದರು. (ಈ ಸೃಷ್ಟಿಯಲ್ಲಿ ಮೊದಲು ಸನಕಾದಿಗಳು ಹುಟ್ಟಿದ್ದರೂ ಅವರು ರುದ್ರದೇವರಿಗಿಂತ ಉತ್ತಮರಲ್ಲ. ರುದ್ರದೇವರ ಹೆಂಡತಿಯಾದ ಪಾರ್ವತಿಗಿಂತಲೂ ಕಡಿಮೆಯಾದವರು. ಮೊದಲಸೃಷ್ಟಿಯಲ್ಲಿ ಮಾತ್ರ ಉತ್ತಮರ ಕ್ರಮದಲ್ಲಿ ಸೃಷ್ಟಿಯಾಗುವುದು. ಅನಂತರದ ಸೃಷ್ಟಿಗಳಲ್ಲಿ ಇದು ವ್ಯತ್ಯಾಸವಾಗುವುದೂ ಉಂಟು. ಅಂದಮಾತ್ರಕ್ಕೆ ತಾರತಮ್ಯಕ್ಕೆ ಎಂದೂ ಭಂಗ-ವಿಲ್ಲೆಂದು ತಿಳಿಯಬೇಕು.) ಬ್ರಹ್ಮದೇವರ ಬಲಸ್ತನದಿಂದ ಧರ್ಮದೇವತೆಯೂ, ಬೆನ್ನಿನಿಂದ ಅಧರ್ಮದೇವತೆಯೂ ಹೃದಯದಿಂದ ಕಾಮಾಭಿಮಾನಿಯೂ, ಹುಬ್ಬುಗಳಿಂದ ಕ್ರೋಧಾಭಿಮಾನಿಯೂ, ಕೆಳಗಿನ ತುಟಿಯಿಂದ ಲೋಭಾಭಿಮಾನಿಯೂ, ಮುಖದಿಂದ ಮನುಷ್ಯರಿಗೆ ಸಂಬಂಧಿಸಿದ ವಾಕ್ಕಿಗೆ ಅಭಿಮಾನಿಯೂ, ಗುಹ್ಯೇಂದ್ರಿಯದಿಂದ ಸಮುದ್ರಾಭಿಮಾನಿಯೂ, ಪಾಯುವಿನಿಂದ ನಿರ್ಋತಿಯೂ ಹುಟ್ಟಿದರು. ಇವರಲ್ಲಿ ಧರ್ಮನ ಮನೆಯಲ್ಲಿ ಶ್ರೀಹರಿಯು ಹರಿ, ಕೃಷ್ಣ ನಾರಾಯಣನೆಂಬ ಸ್ವಾಂಶಾವತಾರಗಳನ್ನೂ ನರನೆಂಬ ಆವೇಶಾವತಾರವನ್ನೂ ಮಾಡುವನು. ಅಧರ್ಮದೇವತೆಯೇ ಎಲ್ಲರ ಮರಣಕ್ಕೂ ಕಾರಣವಾದ ಮೃತ್ಯುವಿಗೆ ಆಶ್ರಯನು. ನಿರ್ಋತಿಯ ದುಃಖ ಮೊದಲಾದ ಪಾಪಫಲಗಳಿಗೆ ಆಶ್ರಯನು. ಬ್ರಹ್ಮದೇವರ ಶರೀರಚ್ಛಾಯೆಯಿಂದ ದೇವಹೂತೀಪತಿಯಾದ ಕರ್ದಮರು ಹುಟ್ಟಿದರು. ಹೀಗೆ ಬ್ರಹ್ಮದೇವರ ಅವಯವಗಳಿಂದಲೂ ಮನಸ್ಸಿನಿಂದಲೂ ಎಲ್ಲ ಜಗತ್ತಿನ ಸೃಷ್ಟಿಯಾಯಿತು.

ವಿದುರ, ಇಚ್ಛಾವಂತರಾದ ಬ್ರಹ್ಮದೇವರು ಶೃಂಗಾರಮೊದಲಾದ ರಸಭರಿತವೂ, ಸುಂದರವೂ, ಮನೋಹರವೂ, ಅಕುತ್ಸಿತವೂ ಆದ ಮನುಷ್ಯಸಂಬಂಧಿಯಾದ ಮಾತನ್ನು (ಅದಕ್ಕೆ ಅಭಿಮಾನಿಯಾದ ದೇವತೆಯನ್ನು) ಅಪೇಕ್ಷಿಸಿದರೆಂದು ನಾವು ಕೇಳುತ್ತೇವೆ. ಇದು ವಾರ್ತೆಯೇ ಹೊರತು ಸತ್ಯವಲ್ಲ. ಹೀಗೆ ಕಾಮವನ್ನು ತೋರಿಸಿದುದೂ ಅಸುರಜನ ಮೋಹಕ್ಕಾಗಿಯೇ. ಇದನ್ನು ಅರಿತ ಮರೀಚಿ ಮೊದಲಾದ ಮಕ್ಕಳು ತಮ್ಮ ತಂದೆಯು ಅಧರ್ಮದಲ್ಲಿ ಮನಸ್ಸು ಮಾಡಿದರೆಂದು

ತೋರಿಸುತ್ತಾ 'ಕಾಮವನ್ನು ಗೆಲ್ಲಬಲ್ಲವನು ತನ್ನ ಇಚ್ಛೆಯನ್ನು ತಡೆಹಿಡಿಯದೆ ತನ್ನ ಮಗಳನ್ನೇ ಹೊಂದುವನು ಅಧಮನೆನಿಸುವನು. ಅವನು ಮಾಡುವಂತಹ ಅಧರ್ಮವನ್ನು ನಿಮ್ಮ ಹೊರತು ಹಿಂದಿನವರಾರು ಮಾಡಲಿಲ್ಲ, ಮುಂದಿನವರು ಮಾಡುವುದಿಲ್ಲ, ನೀವು ಮಾತ್ರ ಮಾಡುತ್ತೀರಿ. ಎಂತಹ ತೇಜಸ್ವಿಯಾದರೂ ಈ ಕೆಲಸವು ಅವನಿಗೆ ಕೀರ್ತಿಯನ್ನು ತರುವುದಲ್ಲ. ಅದರಲ್ಲಿಯೂ ನೀವು ಜಗದ್ಗುರುಗಳು. ನೀವು ಮಾಡಿದುದನ್ನೇ ಜನರು ಮಾಡಿ ಕ್ಷೇಮವನ್ನು ಸಂಪಾದಿಸುವರು. ಪೂಜ್ಯರಾದ ತಮಗೆ ನಮಸ್ಕಾರ. ತಾವು ತಮ್ಮ ಜ್ಞಾನದಿಂದ ಶ್ರೀಹರಿಯಲ್ಲಿ ಅಡಗಿದ್ದ ಈ ಜಗತ್ತನ್ನು ಸೃಷ್ಟಿಸಿ ವ್ಯಕ್ತಗೊಳಿಸಿದ್ದೀರಿ. ತಾವೇ ಧರ್ಮವನ್ನು ಕಾಪಾಡಲು ಅರ್ಹರು' ಎಂದು ಸ್ತೋತ್ರ ಮಾಡುತ್ತಾ ಪ್ರತಿಷೇಧಿಸಿದರು. ಹೀಗೆ ತಮ್ಮ ಮಕ್ಕಳಾದ ಪ್ರಜೇಶ್ವರರು ಮಾಡುತ್ತಿರುವುದನ್ನು ನೋಡಿ ಬ್ರಹ್ಮದೇವರು ನಾಚಿಕೆಗೊಂಡವರಂತೆ ಆ ಮಾನುಷ ವಾಗಭಿಮಾನಿ ದೇವತೆಯನ್ನು ಬಿಟ್ಟು ಬಿಟ್ಟರು. ಆ ವಾಕ್ಕನ್ನು ದಿಕ್ಕುಗಳಲ್ಲಿ ವಾಸಿಸುತ್ತಿದ್ದ ಜನರು ಪರಿಗ್ರಹಿಸಿದರು. ಈ ಲೌಕಿಕ ವಾಗ್ದೇವಿಯಿಂದ ಲೋಕವ್ಯವಹಾರವು ನಡೆಯುವುದೇ ಹೊರತು ಶ್ರೀಹರಿಯ ಜ್ಞಾನವು ಬರುವುದಿಲ್ಲ. ಆದ್ದರಿಂದ ಇದು ನರಕ ಮೊದಲಾದ ಅನರ್ಥಫಲಕ್ಕೆ ಕಾರಣವಾಗಿ ಘೋರವೆನಿಸುವುದು.

ಶ್ರೀಹರಿಯ ಉದರಲ್ಲಿ ಇದ್ದ ಈ ಜೀವರನ್ನು ಕರ್ಮಯುಕ್ತರನ್ನಾಗಿ ನಾನು ನೋಡುವುದಾದರೂ ಹೇಗೆ ? ಎಂದು ಒಂದುಸಲ ಆಲೋಚಿಸುತ್ತಿದ್ದ ಬ್ರಹ್ಮದೇವರ ನಾಲ್ಕು ಮುಖಗಳಿಂದ ವೇದಗಳು ವ್ಯಕ್ತವಾದುವು. ವೇದಾಭಿಮಾನಿಗಳೂ, ಅವರ ಮಾತಿನಿಂದ ಯಜ್ಞ ಯಾಗಾದಿ ಕರ್ಮಗಳೂ, ಸ್ಮೃತಿಗಳಿಂದ ಕೂಡಿದ ಕರ್ಮ ಶಾಸ್ತ್ರಗಳೂ ಸತ್ಯ, ದಯೆ, ತಪಸ್ಸು ಮತ್ತು ಶೌಚವೆಂಬ ನಾಲ್ಕು ಧರ್ಮಪಾದಗಳೂ, ಬ್ರಹ್ಮಚರ್ಯ ಮೊದಲಾದ ಆಶ್ರಮಗಳೂ, ಅವುಗಳ ಆಚಾರಗಳೂ ಇವುಗಳ ಅಭಿಮಾನಿಗಳೂ ಸೃಷ್ಟರಾದರು.

ವಿದುರರು - ತಪೋಧನರಾದ ಮೈತ್ರೇಯರೆ, ಆ ಬ್ರಹ್ಮದೇವರು ಜಗತ್ತನ್ನು ಸೃಷ್ಟಿಸುವ ಜೀವರಲ್ಲಿ ಶ್ರೇಷ್ಠರಲ್ಲವೆ ! ಅವರ ಮುಖಗಳಿಂದ ವೇದಗಳನ್ನು ಸೃಷ್ಟಿಸಿದರೆಂದು ಹೇಳಿದಿರಿ. ಯಾವ ಯಾವ ಮುಖದಿಂದ ಏನೇನು ಸೃಷ್ಟಿಸಿದರು ವಿವರವಾಗಿ ಅಪ್ಪಣೆಕೊಡಿಸಬೇಕು.

ಮೈತ್ರೇಯರು - ಬ್ರಹ್ಮದೇವರು ಪೂರ್ವ, ದಕ್ಷಿಣ, ಪಶ್ಚಿಮ, ಮತ್ತು ಉತ್ತರ ದಿಕ್ಕಿನ ಮುಖಗಳಿಂದ ಕ್ರಮವಾಗಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳನ್ನು ವ್ಯಕ್ತಪಡಿಸಿದರು. ಈ ಕ್ರಮದಲ್ಲಿಯೇ ಋಗ್ವೇದದ 'ಶಸ್ತ್ರ'

ಮಂತ್ರಗಳನ್ನೂ ಯಜುರ್ವೇದದ 'ಇಜ್ಯಾ' ಮಂತ್ರಗಳನ್ನೂ, ಸಾಮವೇದದ 'ಸ್ತುತಿ' ಮತ್ತು 'ಸ್ತೋಮ' ಮಂತ್ರಗಳನ್ನೂ, ಅಥರ್ವಣವೇದದ 'ಪ್ರಾಯಶ್ಚಿತ್ತ' ಮಂತ್ರಗಳನ್ನೂ' ವಿಭಾಗಿಸಿ ಉದ್ಧರಿಸಿದರು. ಆಯುರ್ವೇದ, ಧನುರ್ವೇದ, (ಭರತ) ನಾಟ್ಯಶಾಸ್ತ್ರ ಮತ್ತು ಶಿಲ್ಪಶಾಸ್ತ್ರಗಳನ್ನು ಸೃಷ್ಟಿಸಿದರು. ಮುಂದೆ ವೇದವ್ಯಾಸರು ಬರೆಯುವ ಭಾರತ ಮೊದಲಾದುವನ್ನೂ ಮಾರ್ಕಂಡೇಯ ಮೊದಲಾದ ಋಷಿಗಳು ಮಾಡುವ ಪುರಾಣಗಳನ್ನು ಬಿಟ್ಟು ಉಳಿದ ಇತಿಹಾಸ ಪುರಾಣಗಳನ್ನೂ ಮೂಲರೂಪಿಯಾದ ಶ್ರೀಹರಿಯಿಂದ ತಾವು ಕೇಳಿ ತಿಳಿದುದನ್ನು ಎಲ್ಲ ಮುಖಗಳಿಂದಲೂ ರಚಿಸಿದರು. ಪೂರ್ವಮುಖದಿಂದ 'ಷೋಡಶೀ''ಉಕ್ಥ'ಗಳೆಂಬ ಯಜ್ಞಗಳನ್ನೂ, ದಕ್ಷಿಣಮುಖದಿಂದ 'ಪುರೀಷ್ಯ' 'ಅಗ್ನಿಷ್ಟುತಿ' ಎಂಬುವನ್ನೂ ಪಶ್ಚಿಮಮುಖದಿಂದ 'ಆಪ್ತೋರ್ಯಾಮ' ಅತಿರಾತ್ರ ಉತ್ತರಮುಖದಿಂದ 'ಗೋಸವ' 'ವಾಜಪೇಯ' ಯಾಗಗಳನ್ನೂ ಸೃಷ್ಟಿಸಿದರು. ಧರ್ಮದ ತಪಸ್ಸು, ಶೌಚ, ದಯಾ ಮತ್ತು ಸತ್ಯಗಳೆಂಬ ಪಾದಗಳನ್ನು ಕ್ರಮವಾಗಿ ಪೂರ್ವಾದಿಮುಖಗಳಿಂದ ಸೃಷ್ಟಿಸಿದರು. ಸಾವಿತ್ರ, ಪ್ರಾಜಾಪತ್ಯ, ಬ್ರಾಹ್ಮ ಮತ್ತು ಬೃಹತ್ತೆಂಬ ನಾಲ್ಕು ಬ್ರಹ್ಮಚರ್ಯಾಶ್ರಮಗಳನ್ನು ಪೂರ್ವಮುಖದಿಂದಲೂ; ವಾರ್ತಾ, ಅಸಂಚಯ, ಶಾಲೀನ ಮತ್ತು ಶಿಲೋಂಛವೆಂಬ ನಾಲ್ಕು ಬಗೆಯ ಗೃಹಸ್ಥಾಶ್ರಮಗಳನ್ನು ದಕ್ಷಿಣ ಮುಖದಿಂದಲೂ; ವೈಖಾನಸ, ವಾಲಖಿಲ್ಯ, ಉದುಂಬರ ಮತ್ತು ಫೇನಪವೆಂಬ ನಾಲ್ಕು ಬಗೆಯ ವಾನಪ್ರಸ್ಥಾಶ್ರಮಗಳನ್ನು ಪಶ್ಚಿಮಮುಖದಿಂದಲೂ; ಕುಟೀಚಕ, ಬಹೂದಸ, ಹಂಸ ಮತ್ತು ಪರಮಹಂಸರೆಂಬ ನಾಲ್ಕು ಬಗೆಯ ಸನ್ಯಾಸಾಶ್ರಮಗಳನ್ನು ಉತ್ತರಮುಖದಿಂದಲೂ ಸೃಷ್ಟಿಸಿದರು. ಬ್ರಾಹ್ಮಣರು ಜೀವಿಸುವ ವೇದಗಳು ಮತ್ತು ಅವುಗಳಿಗೆ ಅನುಸಾರಿಯಾದ ಶ್ರೀಹರಿಯಿಂದ ನಿರ್ಮಿತವಾದ ತರ್ಕವಿದ್ಯೆಯನ್ನು ಕ್ರಮವಾಗಿ ಪೂರ್ವ ದಕ್ಷಿಣ ಮುಖಗಳಿಂದ; ರಾಜರು ಜೀವಿಸುವ ದಂಡನೀತಿಯನ್ನು ಪಶ್ಚಿಮಮುಖದಿಂದ, ವೈಶ್ಯ ಮೊದಲಾದವರು ಜೀವಿಸುವ ವ್ಯಾಪಾರ, ಕೃಷಿ ಮೊದಲಾದ ಶಾಸ್ತ್ರಗಳನ್ನು ಉತ್ತಮುಖದಿಂದ ಸೃಷ್ಟಿಸಿದರು. ಹೀಗೆ ಓಂಕಾರ, ಭೂಃ, ಭುವಃ, ಸುವಃ ಎಂಬ ಪ್ರಣವ ಸಹಿತವಾದ ವ್ಯಾಹೃತಿಗಳನ್ನು ಸೃಷ್ಟಿಸಿದರು. ಬ್ರಹ್ಮದೇವರ ರೋಮಗಳಿಂದ 'ಉಷ್ಣಿಕ್', ಚರ್ಮದಿಂದ 'ಗಾಯತ್ರೀ', ಮಾಂಸದಿಂದ 'ತ್ರಿಷ್ಟುಪ್', ಸ್ನಾಯುವಿನಿಂದ 'ಅನುಷ್ಟುಪ್', ಅಸ್ಥಿಯಿಂದ 'ಜಗತೀ', ಮಜ್ಜೆಯಿಂದ 'ಪಂಙ್ತಿ', ಪ್ರಾಣದಿಂದ 'ಬೃಹತೀ', ಛಂದಸ್ಸುಗಳೂ ಜೀವದಿಂದ 'ಸ್ಪರ್ಶ', ವರ್ಣಗಳೂ, ದೇಹದಿಂದ 'ಸ್ವರ' ವರ್ಣಗಳೂ, ಇಂದ್ರಿಯಗಳಿಂದ 'ಊಷ್ಮ' ವರ್ಣಗಳೂ, ಬಲದಿಂದ 'ಅಂತಸ್ಥ'

ವರ್ಣಗಳೂ ವ್ಯಕ್ತವಾದುವು. ಅವರ ದೇಹ ಸಂಚಾರ ವಿಶೇಷದಿಂದ ಸಪ್ತಸ್ವರಗಳು ಹುಟ್ಟಿದುವು. ಬ್ರಹ್ಮದೇವರು ನಾರಾಯಣ ಮೊದಲಾದ ಹೆಸರುಗಳನ್ನು ಬಿಟ್ಟು ಮಿಕ್ಕ ಎಲ್ಲ ಶಬ್ದಗಳಿಂದಲೂ ವೇದದಿಂದ ಪ್ರತಿಪಾದ್ಯರು. ಬ್ರಹ್ಮಾಂಡ ಮತ್ತು ಮಹತ್ತತ್ತ್ವ ಮೊದಲಾದ ತತ್ವಗಳನ್ನು ವ್ಯಾಪಿಸಿರುವವರು. ಅತ್ಯಂತ ಸಮರ್ಥರು. ಆದ್ದರಿಂದ ಈ ಬಗೆಯ ಸೃಷ್ಟಿ ಅವರಿಗೇನೂ ಅತಿಶಯವಲ್ಲ.

ಹೀಗೆ ಶ್ರೀಹರಿಯ ಅನುಗ್ರಹದಿಂದ ಪೂರ್ಣರಾಗಿ ನಾನಾ ಬಗೆಯ ಸೃಷ್ಟಿಮಾಡುವ ಸಾಮರ್ಥ್ಯವನ್ನು ಪಡೆದಿರುವ ಬ್ರಹ್ಮದೇವರು ಮತ್ತೊಂದು ಬಗೆಯ ಸೃಷ್ಟಿಸಾಮರ್ಥ್ಯವನ್ನು ಸ್ವೀಕರಿಸಿ ಸೃಷ್ಟಿಯನ್ನುಮುಂದುವರಿಸಬೇಕೆಂದು ಮನಸ್ಸು ಮಾಡಿದರು. ಮರೀಚಿ ಮೊದಲಾದ ಋಷಿಗಳು ಸೃಷ್ಟಿಸಾಮರ್ಥ್ಯವನ್ನು ಅತಿಶಯವಾಗಿ ಹೊಂದಿದ್ದರು. ಆದರೂ ಅವರು ಮಾಡಿದ ಸೃಷ್ಟಿಯು ಅತಿಶಯವಾಗಿ ಬೆಳೆಯಲಿಲ್ಲ. ಇದನ್ನು ಗಮನಿಸಿದ ಬ್ರಹ್ಮದೇವರು ಸೃಷ್ಟಿಯು ಅತಿಶಯವಾಗಿ ಬೆಳೆಯುವಂತೆ ಮತ್ತೆ ಈ ರೀತಿ ಆಲೋಚಿಸಿದರು. 'ಏನಿದು ಆಶ್ಚರ್ಯವು. ಯಾವಾಗಲೂ ಸೃಷ್ಟಿಕಾರ್ಯಧಲ್ಲಿಯೇ ತೊಡಗಿದ್ದರೂ ಪ್ರಜೆಗಳು ಪುಂಖಾನುಪುಂಖವಾಗಿ ಬೆಳೆಯುತ್ತಿಲ್ಲ. ಶ್ರೀಹರಿಯ ಅನುಗ್ರಹವಿಲ್ಲದೆ ಈ ಕಾರ್ಯವನ್ನು ಪೂರೈಸಲು ಸಾಧ್ಯವಿಲ್ಲ.' ವೆಂದು ಆಲೋಚಿಸಿ ಶ್ರೀಹರಿಯ ಅನುಗ್ರಹವನ್ನೇ ಅಪೇಕ್ಷಿಸುತ್ತಿದ್ದ ಬ್ರಹ್ಮದೇವರ ರೂಪವು ಎರಡು ಭಾಗವಾಯಿತು. ಎರಡು ಬಗೆಯ ಶರೀರಗಳು ಉತ್ಪನ್ನವಾದವು. ಒಂದು ಗಂಡು ಮತ್ತೊಂದು ಹೆಣ್ಣು. ಗಂಡುಸಾಗಿ ಬಂದವರೇ ಚಕ್ರವರ್ತಿಗಳಾದ ಸ್ವಾಯಂಭುವಮನುರಾಜರು. ಹೆಂಗಸಾಗಿ ಬಂದವರೇ ಈ ಮನುರಾಜರ ಹೆಂಡತಿ ಶತರೂಪಾದೇವಿ. ಇವರಿಬ್ಬರೂ ದಂಪತಿಗಳಾದರು. ಅಂದಿನಿಂದ ಪ್ರಜೆಗಳು ಮೈಥುನಕ್ರಮದಿಂದ ಉತ್ಪತ್ತಿಯನ್ನು ಹೊಂದುತ್ತ ಬಂದರು. ಸೃಷ್ಟಿಯು ಅತಿಶಯವಾಗಿ ಬೆಳೆಯಿತು. ಈ ಮನುರಾಜರು ಶತರೂಪಾದೇವಿಯಲ್ಲಿ ಪ್ರಿಯವ್ರತ, ಉತ್ತಾನಪಾದರೆಂಬ ಇಬ್ಬರು ಗಂಡುಮಕ್ಕಳನ್ನೂ ಆಕೂತಿ, ದೇವಹೂತಿ ಮತ್ತು ಪ್ರಸೂತಿಯರೆಂಬ ಮೂವರು ಹೆಣ್ಣು ಮಕ್ಕಳನ್ನೂ ಹೀಗೆ ಐದು ಮಕ್ಕಳನ್ನು ಪಡೆದರು. ರುಚಿಗಳಿಗೆ ಆಕೂತಿಯನ್ನೂ, ಕರ್ದಮರಿಗೆ ದೇವಹೂತಿಯನ್ನೂ, ದಕ್ಷರಿಗೆ ಪ್ರಸೂತಿಯನ್ನೂ ಕೊಟ್ಟು ವಿವಾಹ ಮಾಡಿದರು. ಈ ಕನ್ಯೆಯರ ಮಕ್ಕಳಿಂದ ಜಗತ್ತು ತುಂಬಿತು.



## ಅಥ ಚತುರ್ದಶೋಽಧ್ಯಾಯಃ

ಈ ಅಧ್ಯಾಯದಲ್ಲಿ ಶ್ರೀಹರಿಯ ಕಥಾಶ್ರವಣಾದಿಗಳಿಂದ ಮುಖ್ಯಪುರುಷಾರ್ಥವಾಗುವುದೆಂದು ಹೇಳುವರು. ಶುಕಾಚಾರ್ಯರು ಪರೀಕ್ಷಿತರಾಜನಿಗೆ ಮತ್ತೆ ವಿದುರನು ಮತ್ತೆ ಏನು ಪ್ರಶ್ನೆ ಮಾಡಿದನೆಂದು ಹೇಳುವರು–

**ಶುಕ ಉವಾಚ**

**ನಿಶಮ್ಯ ವಾಚಂ ವದತೋ ಮುನೇಃ ಪುಣ್ಯತಮಾಂ ನೃಪ ।**
**ಭೂಯಃ ಪಪ್ರಚ್ಛ ಕೌರವ್ಯೋ ವಾಸುದೇವಕಥಾದೃತಃ ॥೧॥**

ಹೇ ನೃಪ=ಪರೀಕ್ಷಿತನೇ ವದತಃ=ಹೇಳುತ್ತಿರುವ ಮುನೇಃ=ಮೈತ್ರೇಯರ ಪುಣ್ಯತಮಾಂ=ಅತ್ಯಂತ ಪುಣ್ಯಜನಕವಾದ ವಾಚಂ=ಮಾತನ್ನು ನಿಶಮ್ಯ=ಕೇಳಿ ವಾಸುದೇವಕಥಾದೃತಃ=ಭಗವತ್ಕಥಾದಲ್ಲಿ ಆದರವುಳ್ಳ ಕೌರವ್ಯಃ=ವಿದುರನು ಭೂಯಃ=ಮತ್ತೆ ಪ್ರಪ್ರಚ್ಛ=ಪ್ರಶ್ನಿಸಿದನು ॥೧॥

**ವಿದುರ ಉವಾಚ**

**ಸ ವೈ ಸ್ವಾಯಂಭುವಃ ಸಮ್ರಾಟ್ ಪ್ರಿಯಃ ಪುತ್ರಃ ಸ್ವಯಂಭುವಃ ।**
**ಪ್ರತಿಲಭ್ಯ ಪ್ರಿಯಾಂ ಪತ್ನೀಂ ಕಿಂ ಚಕಾರ ತತೋ ಮುನೇ ॥೨॥**

ಹೇ ಮುನೇ=ಮೈತ್ರೇಯರೇ ಸ್ವಯಂಭುವಃ=ಬ್ರಹ್ಮದೇವರ ಪ್ರಿಯಃ ಪುತ್ರಃ=ಪ್ರೀತಿಪಾತ್ರಮಗನಾದ ಸಮ್ರಾಟ್=ಚಕ್ರವರ್ತಿಯಾದ ಸಃ ಸ್ವಾಯಂಭುವಃ=ಆ ಸ್ವಾಯಂಭುವಮನುವು ಪ್ರಿಯಾಂ ಪತ್ನೀಂ ಪ್ರತಿಲಭ್ಯ=ಪತಿಯನ್ನು ತನ್ನ ಧರ್ಮಾಚರಣೆಯಿಂದ ಉತ್ತಮ ಗತಿಗೆ ಕರೆದೊಯ್ಯುವುದರಿಂದ ಪತ್ನೀ ಎನಿಸಿದ (ಪತಿಂ ನಯತೀತಿ ಪತ್ನೀ) ಆದ್ದರಿಂದಲೇ ಪ್ರಿಯಳಾದ ಶತರೂಪಾದೇವಿಯನ್ನು ಪಡೆದು ಕಿಂ=ಚಕಾರ ಏನು ಮಾಡಿದನು ತತಃ=ಮದುವೆಯ ನಂತರ ಎಂದುದರಿಂದ ಬೇರೆ ವ್ಯಾಪಾರವನ್ನು ನಿಷೇಧಿಸುವನು ॥೨॥

**ಚರಿತಂ ತಸ್ಯ ರಾಜರ್ಷೇರಾದಿರಾಜಸ್ಯ ಸತ್ತಮ ।**
**ಬ್ರೂಹಿ ಮೇ ಶ್ರದ್ದಧಾನಾಯ ವಿಷ್ವಕ್ಸೇನಾಶ್ರಯೋ ಹ್ಯಸೌ ॥೩॥**

ಹೇ ಸತ್ತಮ=ಸಜ್ಜನಶ್ರೇಷ್ಠರಾದ ಮೈತ್ರೇಯರೇ ಶ್ರದ್ಧಧಾನಾಯ=ಆಸ್ತಿಕ್ಯ ಬುದ್ಧಿಯುಳ್ಳ ಮೇ=ನನಗೆ ಹಿ=ಯಾವ ಕಾರಣ ಅಸೌ=ಸ್ವಾಯಂಭುವ ಮನುವು ವಿಷ್ವಕ್‌ಸೇನಾಶ್ರಯಃ=ಸುತ್ತಲೂ ಸೇನೆಯುಳ್ಳ ಶ್ರೀಹರಿಗೆ ಆಶ್ರಯನು ಹರಿಭಕ್ತನು ಆದ್ದರಿಂದ ಆದಿರಾಜಸ್ಯ=ಮೊದಲನೆಯ ರಾಜನಾದ ರಾಜರ್ಷೇಃ=ರಾಜಋಷಿ-ಯಾದ ತಸ್ಯ=ಸ್ವಾಯಂಭುವಿನ ಚರಿತಂ=ಚರಿತ್ರೆಯನ್ನು ಬ್ರೂಹಿ=ಹೇಳಿರಿ ॥೩॥

ಭಗವಂತ ಮತ್ತು ಭಗವದ್ಭಕ್ತರ ಚರಿತ್ರೆಯನ್ನು ಮುಮುಕ್ಷುವು ಅವಶ್ಯವಾಗಿ ಕೇಳಲೇಬೇಕು ಅದರಿಂದ ಸಮಸ್ತ ವೇದವನ್ನು ಶ್ರವಣ ಮಾಡಿದ ಫಲ ಬರುವುದು ಎಂದು ಹೇಳಿರುವರು ಎಂದು ಹೇಳುವರು-

**ಶ್ರುತಸ್ಯ ಪುಂಸಃ ಸುಚಿರಶ್ರಮಸ್ಯ**
**ನನ್ವಂಜಸಾ ಸೂರಿಭಿರೀಡಿತೋಽರ್ಥಃ ।**
**ಯತ್ ತದ್ ಗುಣಾನುಶ್ರವಣಂ ಮುಕುಂದ-**
**ಪಾದಾರವಿಂದಂ ಹೃದಯೇಷು ಯೇಷಾಂ ॥೪॥**

ಸುಚಿರಶ್ರಮಸ್ಯ ಪುಂಸಃ=ಬಹುಕಾಲದಿಂದ ದೇಹಾಯಾಸವುಳ್ಳ ಮನುಷ್ಯನಿಗೆ ಶ್ರುತಸ್ಯ=ಕರ್ಮಪರವಾದ ವೇದಶ್ರವಣಕ್ಕೆ ಅಂಜಸಾ=ಮುಖ್ಯವಾಗಿ ತದ್ಗುಣಾನು-ಶ್ರವಣಂ=ಶ್ರೀಹರಿಯ ಗುಣಶ್ರವಣವೂ ಮತ್ತು ಯೇಷಾಂ=ಯಾರ ಹೃದಯೇಷು= ಮನಸ್ಸಿನಲ್ಲಿ ಮುಕುಂದಪಾದಾರಾವಿಂದಂ=ಪರಮಾತ್ಮನ ಪಾದಕಮಲವು ಶೋಭಿಸುವುದೋ ತದ್ಗುಣಶ್ರವಣಂ=ಅಂಥ ಭಗವದ್ಭಕ್ತರ ಗುಣಶ್ರವಣವು ಸೂರಿಭಿಃ= ಜ್ಞಾನಿಗಳಿಂದ ಈಡಿತಃ=ಸ್ತುತವಾದ ಅರ್ಥಃ=ಫಲವು ಯತ್=ಯಾವ ಕಾರಣ ತತ್=ಆದ್ದರಿಂದ ಬ್ರೂಹಿ=ಹೇಳಿರಿ. ಸಮಸ್ತವೇದಾದಿಗಳನ್ನು ಶ್ರವಣ- ಮಾಡುವುದು ಅದರಂತೆ ಕರ್ಮಾನುಷ್ಠಾನಮಾಡಿ ಶ್ರಮಪಡುವುದು, ಇದಕ್ಕೆಲ್ಲ ಮುಖ್ಯಫಲ ಶ್ರೀಹರಿ ಹರಿಭಕ್ತರ ಕಥಾ ಶ್ರವಣವೇ ಎಂದು ಜ್ಞಾನಿಗಳು ಸ್ತುತಿಸಿರುವುದರಿಂದ ಹರಿಭಕ್ತನಾದ ಮನುವಿನಚರಿತೆ ಹೇಳಿರಿ ಎಂಬ ಭಾವ ॥೪॥

**ಶುಕ ಉವಾಚ**

**ಇತಿ ಬ್ರುವಾಣಂ ವಿದುರಂ ವಿನೀತಂ**
**ಸಹಸ್ರಶೀರ್ಷ್ಣಶ್ಚರಣೋಪಧಾನಂ ।**

**ಪ್ರಹೃಷ್ಟರೋಮಾ ಭಗವತ್ ಕಥಾಯಾಂ**
**ಪ್ರಣೀಯಮಾನೋ ಮುನಿರಭ್ಯಚಷ್ಟ ॥೫॥**

ಇತಿ=ಈ ರೀತಿಯಾಗಿ ಬ್ರುವಾಣಂ=ಪ್ರಶ್ನಿಸುವ ವಿನೀತಂ=ನಮ್ರನಾದ ಸಹಸ್ರಶೀರ್ಷ್ಣ=ಶ್ರೀಹರಿಯ ಚರಣೋಪಧಾನಂ=ಪಾದಪೀಠದಂತಿರುವ ಅಥವಾ ಶ್ರೀಕೃಷ್ಣನ ಪಾದಗಳು ಯಾವನಲ್ಲಿ ಇಡಲ್ಪಡುವವೋ ಅಂಥ (ಶ್ರೀಕೃಷ್ಣನು ಪ್ರೀತಿಯಿಂದ ವಿದುರನ ತೊಡೆಯ ಮೇಲೆ ಕಾಲುಗಳನ್ನಿಡುತ್ತಿದ್ದನೆಂದು ಭಾವ) ವಿದುರಂ=ವಿದುರನನ್ನು ಕುರಿತು ಭಗವತ್ಕಥಾಯಾಂ=ಶ್ರೀಹರಿಯ ಕಥೆಯನ್ನು ಹೇಳಲು ಪ್ರಣೀಯಮಾನಃ=ಪ್ರೇರಿತನಾಗಿ ಪ್ರಹೃಷ್ಟರೋಮಾ=ರೋಮಾಂಚಿತನಾಗಿ ಮುನಿಃ=ಮೈತ್ರೇಯರು ಅಭ್ಯಚಷ್ಟ=ಹೇಳಿದರು ॥೫॥

**ಮೈತ್ರೇಯ ಉವಾಚ**

**ಯದಾ ಸ್ವಭಾರ್ಯಯಾ ಸಾಕಂ ಜಾತಃ ಸ್ವಾಯಂಭುವೋ ಮನುಃ ।**
**ಪ್ರಾಂಜಲಿಃ ಪ್ರಣತಶ್ಚೇದಂ ವೇದಗರ್ಭಮಭಾಷತ ॥೬॥**

ಯದಾ=ಯಾವಾಗ ಸ್ವಾಯಂಭುವಃ ಮನುಃ=ಸ್ವಾಯಂಭುವಮನುವು ಸ್ವಭಾರ್ಯಯಾ ಸಾಕಂ=ಹೆಂಡತಿಯೊಡನೆ ಜಾತಃ=ಹುಟ್ಟಿದನೋ ತದಾ=ಆಗ ಪ್ರಣತಃ=ನಮಸ್ಕಾರಮಾಡಿ ಪ್ರಾಂಜಲಿಃ=ಕೈಜೋಡಿಸಿ ವೇದಗರ್ಭಂ=ಬ್ರಹ್ಮದೇವರನ್ನು ಕುರಿತು ಇದಂ=ಮುಂದೆ ಹೇಳುವುದನ್ನು ಅಭಾಷತ=ಮಾತನಾಡಿದನು ॥೬॥

**ತ್ವಮೇಕಃ ಸರ್ವಭೂತಾನಾಂ ಜನ್ಮಕೃತ್ ವೃತ್ತಿದಃ ಪಿತಾ ।**
**ಅಥಾಪಿ ನಃ ಪ್ರಜಾನಾಂ ತೇ ಶುಶ್ರೂಷಾ ಕೇನ ವಾ ಭವೇತ್ ॥೭॥**

**ತದ್ ವಿಧೇಹಿ ನಮಸ್ತುಭ್ಯಂ ಕರ್ಮಸ್ವಿಜ್ಯಾತ್ಮಶಕ್ತಿಷು ।**
**ಯತ್ ಕೃತ್ವೇಹ ಯಶೋ ವಿಷ್ವಗಮುತ್ರ ಚ ಭವೇದ್ ಗತಿಃ ॥೮॥**

ತ್ವಂ=ನೀನು ಸರ್ವಭೂತಾನಾಂ=ಎಲ್ಲ ಪ್ರಾಣಿಗಳಿಗೆ ಜನ್ಮಕೃತ್=ಉತ್ಪತ್ತಿಯನ್ನು ನೀಡಿದವನು ಕಾರಣ ಪಿತಾ=ತಂದೆಯು.ವೃತ್ತಿದಃ=ಪೋಷಕನು ಏಕಃ=ನೀನೊಬ್ಬನೇ ನಿನಗಾರಪೇಕ್ಷೆಯೂ ಇಲ್ಲ, ಆದರೂ ನಃ=ನಮಗೆ ಇಜ್ಯಾತ್ಮಶಕ್ತಿಷು ಕರ್ಮಸು= ಭಗವಂತನ ಪೂಜಾರೂಪವಾದ ನಮ್ಮ ಶಕ್ತಿಗೆ ವಿಷಯವಾಗುವ(ನಮ್ಮಿಂದ ಮಾಡಲು ಸಾಧ್ಯವಾದ) ಕ್ರಿಯೆಗಳಲ್ಲಿ ಕೇನ ತೇ ಶುಶ್ರೂಷಾ ಭವೇತ್=ಯಾವುದನ್ನು ಮಾಡುವದರಿಂದ ನಿನ್ನ ಸೇವೆಯಾಗುವುದೋ, ಯತ್ ಕೃತ್ವಾ=ಯಾವುದನ್ನು ಮಾಡಿ ಇಹ ವಿಷ್ವಕ್=ಈ ಲೋಕದಲ್ಲಿ ಎಲ್ಲ ಕಡೆಯಲ್ಲಿಯೂ ಯಶಃ=

ಕೀರ್ತಿಯೂ ಅಮುತ್ರ=ಪರಲೋಕದಲ್ಲಿ ಗತಿಃ=ಆತ್ಯಂತಿಕಸುಖಪ್ರಾಪ್ತಿಯೂ ಭವೇತ್=ಆಗುವುದೋ, ತತ್=ಅದನ್ನು ವಿಧೇಹಿ=ಆಜ್ಞಾಪಿಸು ॥೭-೮॥

ಬ್ರಹ್ಮೋವಾಚ

**ಪ್ರೀತಸ್ತುಭ್ಯಮಹಂ ತಾತ ಸ್ವಸ್ತಿ ಸ್ಯಾದ್ ವಾಂ ಕ್ಷಿತೀಶ್ವರ ।**
**ಯನ್ನಿರ್ವ್ಯಲೀಕೇನ ಹೃದಾ ಶಾಧಿ ಮೇತ್ಯಾತ್ಮನಾಽರ್ಪಿತಂ ॥೯॥**

ಯತ್=ಯಾವ ಕಾರಣ ನಿರ್ವ್ಯಲೀಕೇನ ಹೃದಾ=ನಿಷ್ಕಪಟವಾದ ಮನಸ್ಸಿನಿಂದ ಮಾ=ನನ್ನನ್ನು ಶಾಧಿ=ಆಜ್ಞಾಪಿಸು (ಕಲಿಸು) ಇತಿ=ಎಂದು ಆತ್ಮನಾ=(ನಿನ್ನಿಂದಲೇ) ನೀನಾಗಿಯೇ ಅರ್ಪಿತಂ=ನಿವೇದಿಸಿದಿಯೋ, (ನಿವೇದಿಸಲ್ಪಟ್ಟಿತೋ) ಅತಃ= ಆದ್ದರಿಂದ ಅಹಂ=ನಾನು ತುಭ್ಯಂ=ನಿನ್ನ ಮೇಲೆ ಪ್ರೀತಃ ಅಸ್ಮಿ=ಪ್ರೀತನಾಗಿದ್ದೇನೆ. ಹೇ ತಾತ ಕ್ಷಿತೀಶ್ವರ=ಮಗುವಾದ ಚಕ್ರವರ್ತಿಯೇ ವಾಂ= ನಿಮಗೆ (ಗಂಡಹೆಂಡರಿಗೆ) ಸ್ವಸ್ತಿ ಸ್ಯಾತ್=ಕಲ್ಯಾಣವಾಗಲಿ ॥೯॥

**ಏತಾವತ್ಯಾತ್ಮಜೈರೇವಂ ಕಾರ್ಯಾಽಥಾಪಚಿತಿರ್ಗುರೌ ।**
**ಶಕ್ತ್ಯಾಽಪ್ರಮತ್ತೈರ್ಗೃಹ್ಯೇತ ಶಾಸನಂ ಗತಮತ್ಸರೈಃ ॥೧೦॥**

ಗತಮತ್ಸರೈಃ=ಮಾತ್ಸರ್ಯವಿಲ್ಲದೆ ಶಕ್ತ್ಯಾ ಅಪ್ರಮತ್ತೈಃ=ಶಕ್ತಿಯನ್ನು ವಂಚಿಸದೆ ಶಾಸನಂ ಗೃಹ್ಯೇತ ಇತಿ ಯತ್=ಆಜ್ಞೆಯನ್ನು ಸ್ವೀಕರಿಸುವುದು ಎಂದೇನಿದೆಯೋ (ಆಜ್ಞೆಯಂತೆ ನಡೆಯುವುದು) ಏತಾವತೀ=ಇದಿಷ್ಟೇ ಗುರೌ=ತಂದೆಗೆ ಆತ್ಮಜೈಃ= ಮಕ್ಕಳಿಂದ ಮಾಡುವ ಅಪಚಿತಿಃ=ಪೂಜೆಯು. ಹಿರಿಯರ ಆಜ್ಞೆಯನ್ನು ನಡೆಸುವುದೇ ಅವರ ಪೂಜೆ ಎಂದು ಭಾವ ॥೧೦॥

**ಸ ತ್ವಮಸ್ಯಾಮಪತ್ಯಾನಿ ಸದೃಶಾನ್ಯಾತ್ಮನೋ ಗುಣೈಃ ।**
**ಉತ್ಪಾದ್ಯ ಶಾಧಿ ಧರ್ಮೇಣ ಗಾಂ ಯಜ್ಞೈಃ ಪುರುಷಂ ಯಜ ॥೧೧॥**

ಸಃ ತ್ವಂ=ನನ್ನ ಮಗನಾದ ನೀನು ಅಸ್ಯಾಂ=ಶತರೂಪಾಳಲ್ಲಿ ಗುಣೈಃ= ಗುಣಗಳಿಂದ ಆತ್ಮನಃ=ನಿನಗೆ ಸದೃಶಾನಿ=ಸಮಾನರಾದ ಅಪತ್ಯಾನಿ=ಮಕ್ಕಳನ್ನು ಉತ್ಪಾದ್ಯ=ಹುಟ್ಟಿಸಿ ಗಾಂ=ಭೂಮಿಯನ್ನು ಧರ್ಮೇಣ ಶಾಧಿ=ಧರ್ಮದಿಂದ ರಕ್ಷಿಸು ಯಜ್ಞೈಃ=ಯಜ್ಞಗಳಿಂದ ಪುರುಷಂ=ಪರಮಾತ್ಮನನ್ನು ಯಜ=ಪೂಜಿಸು ॥೧೧॥

**ಪರಂ ಶುಶ್ರೂಷಣಂ ಮಹ್ಯಂ ಸ್ಯಾತ್ ಪ್ರಜಾರಕ್ಷಯಾ ನೃಪ ।**
**ಭಗವಾಂಸ್ತೇ ಪ್ರಜಾಭರ್ತುಃ ಹೃಷೀಕೇಶೋಽನುತುಷ್ಯತಿ ॥೧೨॥**

**ಪ್ರಹೃಷ್ಟರೋಮಾ ಭಗವತ್ ಕಥಾಯಾಂ**
**ಪ್ರಣೀಯಮಾನೋ ಮುನಿರಭ್ಯಚಷ್ಟ ॥೫॥**

ಇತಿ=ಈ ರೀತಿಯಾಗಿ ಬ್ರುವಾಣಂ=ಪ್ರಶ್ನಿಸುವ ವಿನೀತಂ=ನಮ್ರನಾದ ಸಹಸ್ರಶೀರ್ಷ್ಣಃ=ಶ್ರೀಹರಿಯ ಚರಣೋಪಧಾನಂ=ಪಾದಪೀಠದಂತಿರುವ ಅಥವಾ ಶ್ರೀಕೃಷ್ಣನ ಪಾದಗಳು ಯಾವನಲ್ಲಿ ಇಡಲ್ಪಡುವವೋ ಅಂಥ (ಶ್ರೀಕೃಷ್ಣನು ಪ್ರೀತಿಯಿಂದ ವಿದುರನ ತೊಡೆಯ ಮೇಲೆ ಕಾಲುಗಳನ್ನಿಡುತ್ತಿದ್ದನೆಂದು ಭಾವ) ವಿದುರಂ=ವಿದುರನನ್ನು ಕುರಿತು ಭಗವತ್ಕಥಾಯಾಂ=ಶ್ರೀಹರಿಯ ಕಥೆಯನ್ನು ಹೇಳಲು ಪ್ರಣೀಯಮಾನಃ=ಪ್ರೇರಿತನಾಗಿ ಪ್ರಹೃಷ್ಟರೋಮಾ=ರೋಮಾಂಚಿತನಾಗಿ ಮುನಿಃ=ಮೈತ್ರೇಯರು ಅಭ್ಯಚಷ್ಟ=ಹೇಳಿದರು ॥೫॥

**ಮೈತ್ರೇಯ ಉವಾಚ**

**ಯದಾ ಸ್ವಭಾರ್ಯಯಾ ಸಾಕಂ ಜಾತಃ ಸ್ವಾಯಂಭುವೋ ಮನುಃ ।**
**ಪ್ರಾಂಜಲಿಃ ಪ್ರಣತಶ್ಚೇದಂ ವೇದಗರ್ಭಮಭಾಷತ ॥೬॥**

ಯದಾ=ಯಾವಾಗ ಸ್ವಾಯಂಭುವಃ ಮನುಃ=ಸ್ವಾಯಂಭುವಮನುವು ಸ್ವಭಾರ್ಯಯಾ ಸಾಕಂ=ಹೆಂಡತಿಯೊಡನೆ ಜಾತಃ=ಹುಟ್ಟಿದನೋ ತದಾ=ಆಗ ಪ್ರಣತಃ=ನಮಸ್ಕಾರಮಾಡಿ ಪ್ರಾಂಜಲಿಃ=ಕೈಜೋಡಿಸಿ ವೇದಗರ್ಭಂ=ಬ್ರಹ್ಮದೇವರನ್ನು ಕುರಿತು ಇದಂ=ಮುಂದೆ ಹೇಳುವುದನ್ನು ಅಭಾಷತ=ಮಾತನಾಡಿದನು ॥೬॥

**ತ್ವಮೇಕಃ ಸರ್ವಭೂತಾನಾಂ ಜನ್ಮಕೃತ್ ವೃತ್ತಿದಃ ಪಿತಾ ।**
**ಅಥಾಪಿ ನಃ ಪ್ರಜಾನಾಂ ತೇ ಶುಶ್ರೂಷಾ ಕೇನ ವಾ ಭವೇತ್ ॥೭॥**

**ತದ್ ವಿಧೇಹಿ ನಮಸ್ತುಭ್ಯಂ ಕರ್ಮಸ್ವಿಜ್ಯಾತ್ಮಶಕ್ತಿಷು ।**
**ಯತ್ ಕೃತ್ವೇಹ ಯಶೋ ವಿಷ್ವಗಮುತ್ರ ಚ ಭವೇದ್ ಗತಿಃ ॥೮॥**

ತ್ವಂ=ನೀನು ಸರ್ವಭೂತಾನಾಂ=ಎಲ್ಲ ಪ್ರಾಣಿಗಳಿಗೆ ಜನ್ಮಕೃತ್=ಉತ್ಪತ್ತಿಯನ್ನು ನೀಡಿದವನು ಕಾರಣ ಪಿತಾ=ತಂದೆಯು.ವೃತ್ತಿದಃ=ಪೋಷಕನು ಏಕಃ=ನೀನೊಬ್ಬನೇ ನಿನಗಾರಪೇಕ್ಷೆಯೂ ಇಲ್ಲ, ಆದರೂ ನಃ=ನಮಗೆ ಇಜ್ಯಾತ್ಮಶಕ್ತಿಷು ಕರ್ಮಸು= ಭಗವಂತನ ಪೂಜಾರೂಪವಾದ ನಮ್ಮ ಶಕ್ತಿಗೆ ವಿಷಯವಾಗುವ(ನಮ್ಮಿಂದ ಮಾಡಲು ಸಾಧ್ಯವಾದ) ಕ್ರಿಯೆಗಳಲ್ಲಿ ಕೇನ ತೇ ಶುಶ್ರೂಷಾ ಭವೇತ್=ಯಾವುದನ್ನು ಮಾಡುವದರಿಂದ ನಿನ್ನ ಸೇವೆಯಾಗುವುದೋ, ಯತ್ ಕೃತ್ವಾ=ಯಾವುದನ್ನು ಮಾಡಿ ಇಹ ವಿಷ್ವಕ್=ಈ ಲೋಕದಲ್ಲಿ ಎಲ್ಲ ಕಡೆಯಲ್ಲಿಯೂ ಯಶಃ=

ಕೀರ್ತಿಯೂ ಅಮುತ್ರ=ಪರಲೋಕದಲ್ಲಿ ಗತಿಃ=ಆತ್ಯಂತಿಕಸುಖಪ್ರಾಪ್ತಿಯೂ ಭವೇತ್=ಆಗುವುದೋ, ತತ್=ಅದನ್ನು ವಿಧೇಹಿ=ಆಜ್ಞಾಪಿಸು ॥೭-೮॥

**ಬ್ರಹ್ಮೋವಾಚ**

**ಪ್ರೀತಸ್ತುಭ್ಯಮಹಂ ತಾತ ಸ್ವಸ್ತಿ ಸ್ಯಾದ್ ವಾಂ ಕ್ಷಿತೀಶ್ವರ ।**
**ಯನ್ನಿರ್ವ್ಯಲೀಕೇನ ಹೃದಾ ಶಾಧಿ ಮೇತ್ಯಾತ್ಮನಾಽರ್ಪಿತಂ ॥೯॥**

ಯತ್=ಯಾವ ಕಾರಣ ನಿರ್ವ್ಯಲೀಕೇನ ಹೃದಾ=ನಿಷ್ಕಪಟವಾದ ಮನಸ್ಸಿನಿಂದ ಮಾ=ನನ್ನನ್ನು ಶಾಧಿ=ಆಜ್ಞಾಪಿಸು (ಕಲಿಸು) ಇತಿ=ಎಂದು ಆತ್ಮನಾ=(ನಿನ್ನಿಂದಲೇ) ನೀನಾಗಿಯೇ ಅರ್ಪಿತಂ=ನಿವೇದಿಸಿದಿಯೋ, (ನಿವೇದಿಸಲ್ಪಟ್ಟಿತೋ) ಅತಃ= ಆದ್ದರಿಂದ ಅಹಂ=ನಾನು ತುಭ್ಯಂ=ನಿನ್ನ ಮೇಲೆ ಪ್ರೀತಃ ಅಸ್ಮಿ=ಪ್ರೀತನಾಗಿದ್ದೇನೆ. ಹೇ ತಾತ ಕ್ಷಿತೀಶ್ವರ=ಮಗುವಾದ ಚಕ್ರವರ್ತಿಯೇ ವಾಂ= ನಿಮಗೆ (ಗಂಡಹೆಂಡರಿಗೆ) ಸ್ವಸ್ತಿ ಸ್ಯಾತ್=ಕಲ್ಯಾಣವಾಗಲಿ ॥೯॥

**ಏತಾವತ್ಯಾತ್ಮಜೈರೇವಂ ಕಾರ್ಯಾಥಾಪಚಿತಿರ್ಗುರೌ ।**
**ಶಕ್ತ್ಯಾಽಪ್ರಮತ್ತೈರ್ಗೃಹ್ಯೇತ ಶಾಸನಂ ಗತಮತ್ಸರೈಃ ॥೧೦॥**

ಗತಮತ್ಸರೈಃ=ಮಾತ್ಸರ್ಯವಿಲ್ಲದೆ ಶಕ್ತ್ಯಾ ಅಪ್ರಮತ್ತೈಃ=ಶಕ್ತಿಯನ್ನು ವಂಚಿಸದೆ ಶಾಸನಂ ಗೃಹ್ಯೇತ ಇತಿ ಯತ್=ಆಜ್ಞೆಯನ್ನು ಸ್ವೀಕರಿಸುವುದು ಎಂದೇನಿದೆಯೋ (ಆಜ್ಞೆಯಂತೆ ನಡೆಯುವುದು) ಏತಾವತೀ=ಇದಿಷ್ಟೇ ಗುರೌ=ತಂದೆಗೆ ಆತ್ಮಜೈಃ= ಮಕ್ಕಳಿಂದ ಮಾಡುವ ಅಪಚಿತಿಃ=ಪೂಜೆಯು. ಹಿರಿಯರ ಆಜ್ಞೆಯನ್ನು ನಡೆಸುವುದೇ ಅವರ ಪೂಜೆ ಎಂದು ಭಾವ ॥೧೦॥

**ಸ ತ್ವಮಸ್ಯಾಮಪತ್ಯಾನಿ ಸದೃಶಾನ್ಯಾತ್ಮನೋ ಗುಣೈಃ ।**
**ಉತ್ಪಾದ್ಯ ಶಾಧಿ ಧರ್ಮೇಣ ಗಾಂ ಯಜ್ಞೈಃ ಪುರುಷಂ ಯಜ ॥೧೧॥**

ಸಃ ತ್ವಂ=ನನ್ನ ಮಗನಾದ ನೀನು ಅಸ್ಯಾಂ=ಶತರೂಪಾಳಲ್ಲಿ ಗುಣೈಃ= ಗುಣಗಳಿಂದ ಆತ್ಮನಃ=ನಿನಗೆ ಸದೃಶಾನಿ=ಸಮಾನರಾದ ಅಪತ್ಯಾನಿ=ಮಕ್ಕಳನ್ನು ಉತ್ಪಾದ್ಯ=ಹುಟ್ಟಿಸಿ ಗಾಂ=ಭೂಮಿಯನ್ನು ಧರ್ಮೇಣ ಶಾಧಿ=ಧರ್ಮದಿಂದ ರಕ್ಷಿಸು ಯಜ್ಞೈಃ=ಯಜ್ಞಗಳಿಂದ ಪುರುಷಂ=ಪರಮಾತ್ಮನನ್ನು ಯಜ=ಪೂಜಿಸು ॥೧೧॥

**ಪರಂ ಶುಶ್ರೂಷಣಂ ಮಹ್ಯಂ ಸ್ಯಾತ್ ಪ್ರಜಾರಕ್ಷಯಾ ನೃಪ ।**
**ಭಗವಾಂಸ್ತೇ ಪ್ರಜಾಭರ್ತುಃ ಹೃಷೀಕೇಶೋಽನುತುಷ್ಯತಿ ॥೧೨॥**

ನೃಪ=ಮನುವೇ ಪ್ರಜಾರಕ್ಷಯಾ=ಪ್ರಜೆಗಳನ್ನು ರಕ್ಷಿಸುವುದರಿಂದ ಮಹ್ಯಂ=ನನ್ನ ಪರಂ ಶುಶ್ರೂಷಣಂ ಸ್ಯಾತ್=ಮುಖ್ಯ ಸೇವೆಯಾಗುವುದು. ಪ್ರಜಾಭರ್ತುಃ ತೇ= ಪ್ರಜಾರಕ್ಷಕನಾದ ನಿನಗೆ ಭಗವಾನ್=ಷಡ್ಗುಣಸಂಪನ್ನನಾದ ಹೃಷೀಕೇಶಃ=ಇಂದ್ರಿಯ ನಿಯಾಮಕನಾದ ಶ್ರೀಹರಿಯು ಅನುತುಷ್ಯತಿ=ಸಂತುಷ್ಟನಾಗುವನು ॥೧೨ ॥

**ಯೇಷಾಂ ನ ತುಷ್ಟೋ ಭಗವಾನ್ ಯಜ್ಞಲಿಂಗೋ ಜನಾರ್ದನಃ ।**
**ತೇಷಾಂ ಶ್ರಮೋಪ್ಯಪಾರ್ಥಾಯ ಯದಾತ್ಮಾ ನಾದೃತಃ ಸ್ವಯಂ ॥೧೩॥**

ಯೇಷಾಂ=ಯಾರಿಗೆ ಯಜ್ಞಲಿಂಗಃ=ಯಜ್ಞಪ್ರವರ್ತಕ ದೇಹವುಳ್ಳ ಭಗವಾನ್ ಜನಾರ್ದನಃ=ಭಗವಂತನಾದ ಶ್ರೀಹರಿಯು ನ ತುಷ್ಟಃ=ಸಂತುಷ್ಟನಾಗಿಲ್ಲವೋ ತೇಷಾಂ=ಅವರಿಗೆ ಶ್ರಮಃ=ಯಜ್ಞಾನುಷ್ಠಾನಮಾಡಿದ್ದರ ಆಯಾಸವು ಅಪಾರ್ಥಾಯ= ಪ್ರಯೋಜನರಹಿತವಾದುದು ಯತ್=ಯಾವ ಕಾರಣ ಆತ್ಮಾ=ಪರಮಾತ್ಮನು ಸ್ವಯಂ=ತನ್ನಿಂದ ನ ಅದೃತಃ=ಗೌವರಿಸಲ್ಪಡಲಿಲ್ಲ ಆದ್ದರಿಂದ ಕೇವಲ ಶ್ರಮವಷ್ಟೇ.

**ಮನುರುವಾಚ**

**ಆದೇಶೇऽಹಂ ಭಗವತೋ ವರ್ತಯಾಮ್ಯರಿಸೂದನ ।**
**ಸ್ಥಾನಂ ತ್ವಿಹಾನುಜಾನೀಹಿ ಪ್ರಜಾನಾಂ ಮಮ ಚ ಪ್ರಭೋ ॥೧೪॥**

ಅರಿಸೂದನ=ಶತ್ರುನಾಶಕನಾದ ಬ್ರಹ್ಮದೇವನೇ ಭಗವತಃ=ಪೂಜ್ಯರಾದ ತಮ್ಮ ಆದೇಶೇ=ಅಪ್ಪಣೆಯಲ್ಲಿ ವರ್ತಯಾಮಿ=ಇರುವೆನು (ಆಜ್ಞೆಯಂತೆ ನಡೆಯುವೆನು) ಪ್ರಜಾನಾಂ=ಪ್ರಜೆಗಳಿಗೂ ಚ=ಮತ್ತು ಮಮ=ನನಗೂ ಇಹ ಸ್ಥಾನಂ ಅನುಜಾನೀಹಿ= "ಇಲ್ಲಿರು"ಎಂದು ಆಜ್ಞಾಪಿಸು.(ಎಲ್ಲಿರುವುದೆಂದು ಆಜ್ಞಾಪಿಸು) ॥೧೫॥

**ಯದೋಕಃ ಸರ್ವಸತ್ವಾನಾಂ ಮಹೀ ಮಗ್ನಾ ಮಹಾಂಭಸಿ ।**
**ಅಸ್ಯಾ ಉದ್ಧರಣೆ ಯತ್ನೋ ದೇವ ದೇವ್ಯಾ ವಿಧೀಯತಾಂ ॥೧೫॥**

ಸರ್ವಸತ್ವಾನಾಂ=ಎಲ್ಲ ಪ್ರಾಣಿಗಳಿಗೆ ಯದೋಕಃ=ಯಾವುದು ಆವಾಸಸ್ಥಾನವೋ ಸಾ ಮಹೀ=ಆ ಭೂಮಿಯು ಮಹಾಂಭಸಿ=ಪ್ರಲಯಜಲದಲ್ಲಿ ಮಗ್ನಾ=ಮುಳುಗಿ ಹೋಗಿದೆ. ಹೇ ದೇವ=ಬ್ರಹ್ಮನೇ ಅಸ್ಯಾಃ ದೇವ್ಯಾಃ=ಈ ಭೂಮಿಯನ್ನು ಉದ್ಧರಣೇ= ಮೇಲೆತ್ತಲು ಯತ್ನಃ=ಪ್ರಯತ್ನವು ವಿಧೀಯತಾಂ= ಮಾಡಲ್ಪಡಲಿ ॥೧೫॥

**ಮೈತ್ರೇಯ ಉವಾಚ**

**ಪರಮೇಷ್ಠೀ ತ್ವಪಾಂ ಮಧ್ಯೇ ತಥಾ ಸನ್ನಾಮವೇಕ್ಷ್ಯ ಗಾಂ ।**
**ಕಥಮೇನಾಂ ಸಮುನ್ನೇಷ್ಯೇ ಇತಿ ದಧ್ಯೌ ಧಿಯಾ ಚಿರಮ್ ॥೧೬॥**

ಪರಮೇಷ್ಠೀ ತು=ಬ್ರಹ್ಮದೇವರಾದರೂ ಅಪಾಂ ಮಧ್ಯೇ=ನೀರಿನಲ್ಲಿ ತಥಾ= ಮೇಲೆತ್ತಲಾಗದಂತೆ ಸನ್ನಾಂ=ಮುಳುಗಿದ ಗಾಂ=ಭೂಮಿಯನ್ನು ಅವೇಕ್ಷ್ಯ=ನೋಡಿ ಏನಾಂ=ಈ ಭೂಮಿಯನ್ನು ಕಥಂ=ಹೇಗೆ ಸಮುನ್ನೇಷ್ಯೇ=ಮೇಲೆ ಎತ್ತುವೆನು ಇತಿ= ಎಂದು ಚಿರಂ=ಬಹಳ ಕಾಲ ಧಿಯಾ ಧಧ್ಯೌ=ಬುದ್ಧಿಯಿಂದ ಧ್ಯಾನ ಮಾಡಿದನು. (ವಿಚಾರಮಾಡಿದನು ॥೧೬॥

ವಿಚಾರದ ರೀತಿಯನ್ನು ಹೇಳುವರು-

**ಪೀತಂ ಮಯಾ ಜಲಂ ಸರ್ವಂ ಪೃಥಿವೀ ಚ ನಿವೇಶಿತಾ ।**
**ತಥಾಪಿ ಕಿಮಿದಂ ಸಾಽದ್ಯ ಪ್ಲಾವ್ಯತೇ ಪುನರಂಬುಭಿಃ ॥೧೭॥**

ಮಯಾ=ನನ್ನಿಂದ ಜಲಂ ಸರ್ವಂ ಪೀತಂ=ಬಹುತರವಾಗಿ ಎಲ್ಲ ನೀರು ಕುಡಿಯಲ್ಪಟ್ಟಿತು ಪೃಥವೀಚ ನಿವೇಶಿತಾ=ಭೂಮಿಯೂ ಸ್ಥಾಪಸಿಲ್ಪಟ್ಟಿತು ತಥಾಪಿ= ಆದರೂ ಪುನಃ=ಮತ್ತೆ ಅದ್ಯ=ಈಗ ಸಾ=ಭೂಮಿಯು ಅಂಬುಭಿಃ=ನೀರಿನಿಂದ ಪ್ಲಾವ್ಯತೇ=ತೇಲಾಡುವುದು ॥೧೭॥

**ಪ್ರಜಾ ದೇವಾಸುರಪಿತೃಮನುಷ್ಯಪಶುಪಕ್ಷಿಣಃ ।**
**ಸರೀಸೃಪಾನ್ ನಗಾನ್ ನಾಗಾನ್ ಭೂತಾನ್ಯುಚ್ಚಾವಚಾನಿ ಚ ॥೧೮॥**

**ಸೃಜತೋ ಮೇ ಕ್ಷಿತಿರ್ವಾರ್ಭಿಃ ಪ್ಲಾವ್ಯಮಾನಾ ಲಯಂ ಗತಾ ।**
**ಅಥಾತ್ರ ಕಿಮನುಷ್ಠೇಯಮಸ್ಮಾಭಿಃ ಸರ್ಗಯೋಜಿತೈಃ ॥೧೯॥**

ದೇವಾಸುರಪಿತೃಮನುಷ್ಯಪಶುಪಕ್ಷಿಣಃ=ದೇವತೆಗಳು, ದೈತ್ಯರು, ಪಿತೃಗಳು, ಮನುಷ್ಯರು, ಪಶುಗಳು, ಪಕ್ಷಿಗಳನ್ನು ,ಸರೀಸೃಪಾನ್=ಹಾವುಗಳನ್ನೂ ನಾಗಾನ್= ಆನೆಗಳನ್ನು, ನಗಾನ್=ಪರ್ವತಗಳನ್ನು, ವೃಕ್ಷಗಳನ್ನೂ ಉಚ್ಚಾವಚಾನಿ=ಚಿಕ್ಕ ದೊಡ್ಡ ಭೂತಾನಿ=ಪ್ರಾಣಿಗಳನ್ನು ಪ್ರಜಾಃ=ಪ್ರಜೆಗಳನ್ನು ಸೃಜತಃ ಸತಃ=ಸೃಷ್ಟಿಸುತ್ತಿರುವ ನನಗೆ ಅಧಿಷ್ಠಾನವಾದ ಕ್ಷಿತಿಃ=ಭೂಮಿಯು ವಾರ್ಭಿಃ=ನೀರಿನಿಂದ ಪ್ಲಾವ್ಯಮಾನಾ= ಚಂಚಲಗೊಳಿಸುವುದಾಗಿ ಲಯಂ ಗತಾ=ರಸಾತಲಕ್ಕೆ ಹೋಗಿದೆ ಅಥ=ಆದ್ದರಿಂದ ಅತ್ರ=ಈ ಸಂದರ್ಭದಲ್ಲಿ ಸರ್ಗೇ ಯೋಜಿತೈಃ=ಶ್ರೀಹರಿಯಿಂದ ಸೃಷ್ಟಿಮಾಡಲು ಆಜ್ಞಪ್ತರಾದ ಅಸ್ಮಾಭಿಃ=ನಮ್ಮಿಂದ ಕಿಂ ಅನುಷ್ಠೇಯಂ=ಏನು ಮಾಡಲ್ಪಡಬೇಕು ಎಂದು ವಿಚಾರಿಸಿದನು ॥೧೮-೧೯॥

**ಯಸ್ಯಾಹಂ ಹೃದಯಾದಾಸಂ ಸ ಈಶೋ ವಿದಧಾತು ಮೇ(ಶಂ)।**
**ಇತ್ಯಭಿಧ್ಯಾಯತೋ ನಾಸಾವಿವರಾತ್ ಸಹಸಾऽನಘ ॥**
**ವರಾಹತೋಕೋ ನಿರಗಾದಂಗುಷ್ಠಪರಿಮಾಣತಃ ॥೨೦॥**

ಅನಘ=ಪಾಪರಹಿತನಾದ ವಿದುರನೇ, ಅಹಂ=ನಾನು ಯಸ್ಯ=ಯಾರ, ಹೃದಯಾತ್=ಹೃದಯದಿಂದ, ಆಸಂ=ಉತ್ಪನ್ನನೋ, ಸಃ ಈಶಃ=ಆ ಸ್ವಾಮಿಯೇ, ಮೇ=ನಮಗೆ ಶಂ=(ಪಾಠಾಂತರ) ಸುಖವನ್ನು ವಿಧದಾತು=ಸಂಪಾದಿಸಲಿ ಉಂಟುಮಾಡಲಿ ಇತಿ=ಎಂದು ಅಭಿಧ್ಯಾಯತಃ=ವಿಚಾರಮಾಡುತ್ತಿರುವ ಬ್ರಹ್ಮ-ದೇವರ ನಾಸಾವಿವರಾತ್=ಮೂಗಿನ ಹೊರಳಿಯಿಂದ ಸಹಸಾ=ತತ್‌ಕ್ಷಣದಲ್ಲಿ ವರಾಹತೋಕಃ=ಸೂಕ್ಷ್ಮವರಾಹವು(ಹಂದಿ) ಅಗುಂಷ್ಠಪರಿಮಾಣತಃ=ಹೆಬ್ಬರಳಿನಳತೆ-ಯದು ನಿರಗಾತ್=ಹೊರಹೊರಟಿತು ॥೨೦॥

**ತಸ್ಯಾಭಿಪಶ್ಯತಃ ಖಸ್ಥಃ ಕ್ಷಣೇನ ಕಿಲ ಭಾರತ ।**
**ಗಜಮಾತ್ರಃ ಪ್ರವವೃಧೇ ತದದ್ಭುತಮಭೂನ್ಮಹತ್ ॥೨೧**

ಭರತ=ವಿದುರನೇ ತಸ್ಯ ಅಭಿಪಶ್ಯತಃ=ಬ್ರಹ್ಮದೇವರು ನೋಡುತ್ತಿದ್ದಂತೆಯೇ ಖಿಸ್ಥಃ=ಆಕಾಶದಲ್ಲಿರುವ ಆ ವರಾಹವು ಕ್ಷಣೇನ=ಒಂದೇ ಕ್ಷಣದಲ್ಲಿ ಗಜಮಾತ್ರಃ ಪ್ರವವೃಧೇ=ಆನೆಯಷ್ಟು ಬೆಳೆಯಿತು. ತತ್=ಅದು ಮಹಾನ್ ಅದ್ಭುತಂ ಅಭೂತ್= ದೊಡ್ಡ ಆಶ್ಚರ್ಯವೇ ಆಯಿತು ॥೨೧॥

**ಮರೀಚಿಮುಖ್ಯೈರ್ವಿಪ್ರೈಶ್ಚ ಕುಮಾರೈರ್ಮನುನಾ ಸಹ ।**
**ದೃಷ್ಟ್ವಾ ತತ್ ಸೂಕರಂ ರೂಪಂ ತರ್ಕಯಾಮಾಸ ಚಿತ್ರಧಾ ॥೨೨॥**

ಮರೀಚಿಮುಖ್ಯೈಃ ವಿಪ್ರೈಃ=ಮರೀಚಿ ಮುಂತಾದ ಬ್ರಾಹ್ಮಣರಿಂದಲೂ ಕುಮಾರೈಃ=ಸನಕಾದಿಗಳಿಂದ ಮತ್ತು ಮನುನಾ=ಸ್ವಾಯಂಭುವ ಮನುವಿ-ನಿಂದಲೂ ಸಹ ಕೂಡಿಕೊಂಡು ತತ್ ಸೂಕರಂ ರೂಪಂ=ಆ ವರಾಹರೂಪವನ್ನು ದೃಷ್ಟ್ವಾ=ನೋಡಿ ಚಿತ್ರಧಾ=ಅನೇಕ ರೀತಿಯಾಗಿ ತರ್ಕಯಮಾಸ=ಬ್ರಹ್ಮದೇವರು ವಿಚಾರಿಸಿದರು ॥ ೨೨॥

**ಕಿಮೇತತ್ ಸೌಕರವ್ಯಾಜಂ ಸತ್ವಂ ದಿವ್ಯಮವಸ್ಥಿತಂ ।**
**ಅಹೋ ಬತಾಶ್ಚರ್ಯಮಿದಂ ನಾಸಾಯಾ ಮೇ ವಿನಿಃಸೃತಂ ॥೨೩॥**

**ದೃಷ್ಟೋऽಂಗುಷ್ಠಶಿರೋ ಮಾತ್ರಃ ಕ್ಷಣಾದ್ ಗಂಡಶಿಲೋಪಮಃ ।**
**ಅಪಿಸ್ವಿದ್ ಭಗವಾನೇಷ ಯಜ್ಞೋ ಮೇ ಖೇದಯನ್ಮನಃ ॥೨೪॥**

ಅಹೋ ಬತ=ಆಶ್ಚರ್ಯ ಕಿಂ ಏತತ್=ಇದೇನು ? ಸೌಕರವ್ಯಾಜಂ=ವರಾಹ-ವೇಷದ ದಿವ್ಯಂ ಸತ್ವಂ=ಮಂಗಲಮಯವಾದ ಪ್ರಾಣಿಯು ಅವಸ್ಥಿತಂ=ಎದುರಿಗೆ ನಿಂತಿದೆ. ಇದಂ=ಇದು ಮೇ=ನನ್ನ ನಾಸಾಯಾಃ=ಮೂಗಿನಿಂದ ವಿನಿಃಸೃತಂ=ಹೊರ-ಬಂದಿದೆ. ಅಂಗುಷ್ಠಶಿರೋಮಾತ್ರಃ ದೃಷ್ಟಃ=ಹೆಬ್ಬೆರಳಿನ ತುದಿಯಷ್ಟು ಕಾಣಿಸಿ-ಕೊಂಡಿತು, ಕ್ಷಣಾತ್=ಕ್ಷಣದಲ್ಲಿ ಗಂಡಶಿಲೋಪಮಃ=ಪರ್ವತದಿಂದ ಬಿದ್ದ ದೊಡ್ಡ ಬಂಡೆಗಲ್ಲಿನಂತಾಯಿತು,ಆಶ್ಚರ್ಯಂ=ಆಶ್ಚರ್ಯವು.ಮೇ=ನನ್ನ ಮನಃ=ಮನಸ್ಸನ್ನು ಖೇದಯನ್=ಅಲುಂಬುದ್ಧಿ ಉಂಟಾಗದಂತೆ ಮಾಡಿರುವ ಏಷಃ=ಇದು ಯಜ್ಞಃ ಅಪಿಸ್ವಿತ್=ವಿಷ್ಣುವೇ ಆಗಿರಬೇಕಲ್ಲವೇ? ಎಂದು ವಿಚಾರ ಮಾಡಿದನು ॥೨೩,೨೪॥

**ಇತಿ ಮೀಮಾಂಸತಸ್ತಸ್ಯ ಬ್ರಹ್ಮಣಃ ಸಹ ಸೂನುಭಿಃ ।**
**ಭಗವಾನ್ ಯಜ್ಞಪುರುಷೋ ಜಗರ್ಜಾಗೇಂದ್ರಸನ್ನಿಭಃ ॥೨೫॥**

ಇತಿ=ಈ ರೀತಿಯಾಗಿ ಸೂನುಭಿಃ ಸಹ=ಮರಿಚ್ಯಾದಿಗಳಿಂದ ಸಹಿತನಾಗಿ ಮೀಮಾಂಸತಃ=ವಿಚಾರ ಮಾಡುವ ತಸ್ಯ ಬ್ರಹ್ಮಣಃ=ಆ ಬ್ರಹ್ಮದೇವರ, ಸಮಕ್ಷಂ=ಎದುರಿಗೆ, ಅಗೇಂದ್ರಸನ್ನಿಭಃ=ಪರ್ವತಸಮಾನವಾದ ಭಗವಾನ್ ಯಜ್ಞಪುರುಷಃ=ಭಗವಾನ್ ಯಜ್ಞವರಾಹನು ಜಗರ್ಜ=ಗರ್ಜಿಸಿದನು ॥೨೫॥

**ಬ್ರಹ್ಮಾಣಂ ಹರ್ಷಯಾಮಾಸ ಹರಿಸ್ತಾಂಶ್ಚ ದ್ವಿಜೋತ್ತಮಾನ್ ।**
**ಸ್ವಗರ್ಜಿತೇನ ಕಕುಭಃ ಪ್ರತಿಸ್ವನಯತಾ ವಿದುಃ ॥೨೬॥**

ಹರಿಃ = ವರಾಹನು ಕಕುಭಃ=ದಿಕ್ಕುಗಳನ್ನು ಪ್ರತಿಸ್ವನಯತಾ=ಪ್ರತಿಧ್ವನಿ-ಗೊಳಿಸುವ ಸ್ವಗರ್ಜಿತೇನ=ತನ್ನ ಗರ್ಜನದಿಂದ ಬ್ರಹ್ಮಾಣಂ=ಬ್ರಹ್ಮದೇವರನ್ನು ತಾನ್ ದ್ವಿಜೋತ್ತಮಾನ್=ಮರೀಚಿಮುಂತಾದವರನ್ನುಹರ್ಷಯಾಮಾಸ=ಸಂತೋಷಗೊಳಿಸಿದನು ಎಂದು ವಿದುಃ=ತಿಳಿದರು ೨೬॥

**ನಿಶಮ್ಯ ತದ್ ಘರ್ಘರಿತಂ ಸ್ವಖೇದ ಕ್ಷಯಿಷ್ಣು ಮಾಯಾಮಯಸೂಕರಸ್ಯ ।**
**ಜನಸ್ತಪಃಸತ್ಯನಿವಾಸಿನಸ್ತೇ ತ್ರಿಭಿಃ ಪವಿತ್ರೈರ್ಮುನಯೋಽಗೃಣನ್ ಸ್ಮ ॥**

ಸ್ವಖೇದಕ್ಷಯಿಷ್ಣು=ತನ್ನ ದುಃಖನಾಶಕವಾದ ಸ್ವಭಾವವುಳ್ಳ ಮಾಯಾಮಯ ಸೂಕರಸ್ಯ=ಮಹಿಮಾಪೂರ್ಣವಾದ ವರಾಹದ ತದ್ ಘರ್ಘರಿತಂ=ವರಾಹಾನು-ಕರಣರೂಪವಾದ ಘುರಘುರು ಶಬ್ದವನ್ನು ನಿಶಮ್ಯ=ಕೇಳಿ ಜನಸ್ತಪಃಸತ್ಯನಿವಾಸಿನಃ=ಜನಲೋಕ, ತಪೋಲೋಕ, ಸತ್ಯಲೋಕದಲ್ಲಿ ವಾಸಿಸುವ ತೇ ಮುನಯಃ=ಋಷಿಗಳು ಪವಿತ್ರೈಃ=ನಿರ್ದೋಷಗಳಾದ ತ್ರಿಭಿಃ=ಮೂರುವೇದಗಳಿಂದ ಅಗೃಣನ್ ಸ್ಮ=ಸ್ತೋತ್ರ ಮಾಡಿದರು ॥೨೭॥

**ತೇಷಾಂ ಸತಾಂ ವೇದವಿತಾನಮೂರ್ತಿಃ**
**ಬ್ರಹ್ಮಾವಧಾರ್ಯಾತ್ಮಗುಣಾನುವಾದಂ ।**
**ನನರ್ದ ಭೂಯೋ ವಿಬುಧೋದಯಾಯ**
**ಗಜೇಂದ್ರಲೀಲೋ ಜಲಮಾವಿವೇಶ ॥೨೮॥**

ತೇಷಾಂ ಸತಾಂ=ಆ ಸಜ್ಜನರ ವೇದವಿತಾನಮೂರ್ತಿಃ=ವೇದಗಳಿಂದ ವಿಸ್ತರಿಸಲ್ಪಡುವ ಸ್ವರೂಪವುಳ್ಳ ವರಾಹದೇವರು ಆತ್ಮಗುಣಾನುವಾದಂ=ತನ್ನ ಗುಣ ಪ್ರತಿಪಾದಕವಾದ ಬ್ರಹ್ಮಸ್ತುತಿರೂಪವಾದ ವೇದವನ್ನು ಅವಧಾರ್ಯ=ಕೇಳಿ ಭೂಯಃ= ಮತ್ತೆ ನನರ್ದ=ಕುಣಿದನು ವಿಬುಧೋದಯಾಯ=ದೇವತೆಗಳ ಹಿತಕ್ಕಾಗಿ ಗಜೇಂದ್ರಲೀಲಃ=ಆನೆಯಂತೆ ಕ್ರೀಡೆಯುಳ್ಳವನಾಗಿ ಜಲಂ ಆವಿವೇಶ= ನೀರನ್ನು ಪ್ರವೇಶಿಸಿದನು ॥೨೮॥

ಜಲವನ್ನು ಪ್ರವೇಶಿಸುವ ವರಾಹವನ್ನು ಪರ್ವತಸಾಮ್ಯದಿಂದ ಬಣ್ಣಿಸುವರು–

**ಉತ್‌ಕ್ಷಿಪ್ತವಾಲಃ ಖಚರಃ ಕಠೋರ-**
**ಸಟಾ ವಿಧುನ್ವನ್ ಖರರೋಮಶತ್ವಕ್ ।**
**ಖುರಾಹತಾಭ್ರಃ ಸಿತಶೃಂಗ ಈಕ್ಷಾ-**
**ಜ್ಯೋತಿರ್ವಿಭಾಸೋ ಭಗವಾನ್ ಮಹೀಧ್ರಃ ॥೨೯॥**

ಉತ್‌ಕ್ಷಿಪ್ತವಾಲಃ=ಬಾಲವನ್ನು ಎತ್ತಿಕೊಂಡ (ಎತ್ತಿದಬಾಲವುಳ್ಳ) ಪರ್ವತಪಕ್ಷದಲ್ಲಿ ಎತ್ತಲ್ಪಟ್ಟ ಹ್ರೀಬೇರ ಉಳ್ಳ (ಕನ್ನಡದಲ್ಲಿ ಮುಡಿವಾಳುಅನ್ನುವರು) ಖಚರಃ= ಆಕಾಶದಲ್ಲಿ ಸಂಚರಿಸುವ ಕಠೋರಸಟಾಃ=ಕಠಿಣವಾದ ಕುತ್ತಿಗೆ ಮೇಲಿರುವ ಕೂದಲನ್ನು ವಿಧುನ್ವನ್=ಝಾಡಿಸುತ್ತ (ಪರ್ವತಕ್ಕೆ ಬಳ್ಳಿಗಳೇ ಸಟಾ ಇದ್ದಂತೆ) ಖರರೋಮಶತ್ವಕ್=ಒರಟಾದ ಕೂದಲು ಮತ್ತು ಚರ್ಮವುಳ್ಳ (ದೃಷ್ಟಾಂತದಲ್ಲಿ ಬೇವಿನಮರದ ತೊಗಟೆ) ಖುರಾಹತಾಭ್ರಃ=ಖುರಗಳಿಂದ ತಾಡಿತವಾದ ಮೋಡಗಳುಳ್ಳ (ಪರ್ವತವು ತನ್ನ ಶೃಂಗಗಳಿಂದ ಮೋಡವನ್ನು ತಡೆಯುವುದು) ಸಿತಶೃಂಗಃ=ಬೆಳ್ಳಗಿನ ಕೋರೆಹಲ್ಲುಗಳುಳ್ಳ (ಪರ್ವತವು ಬಿಳಿಯ ಸಾನುವುಳ್ಳದ್ದು) (ಸಮಪ್ರದೇಶ) ಈಕ್ಷಾಜ್ಯೋತಿಃ=ನೋಟವೆಂಬ ಜ್ಯೋತಿವುಳ್ಳ (ಪರ್ವತ ಅಗ್ನಿ ಜ್ವಾಲೆ ಉಳ್ಳದ್ದು) ವಿಭಾಸಃ=ಪ್ರಕಾಶವುಳ್ಳ ಭಗವಾನ್ ಮಹೀಧ್ರಃ= ವರಾಹನೆಂಬ ಪರ್ವತವು ಕಂ=ನೀರನ್ನು ಆವಿಶತ್=ಪ್ರವೇಶಿಸಿದನು ॥೨೯॥

**ಘ್ರಾಣೇನ ಪೃಥ್ವ್ಯಾಃ ಪದವೀಂ ವಿಜಿಘ್ರನ್**
**ಕ್ರೋಡಾಪದೇಶಃ ಸ್ವಯಮಧ್ವರಾಂಗಃ ।**

**ಕರಾಲದಂಷ್ಟ್ರೋಽಪ್ಯಕರಾಲದೃಗ್ಭ್ಯಾ-**
**ಮುದ್ವೀಕ್ಷ್ಯ ವಿಪ್ರಾನ್ ಗೃಣತೋಽವಿಶತ್ ಕಮ್ ॥೩೦॥**

ಘ್ರಾಣೇನ=ಮೂಗಿನಿಂದ ಪೃಥ್ವ್ಯಾಃಪದವೀಂ=ಭೂಮಿಯ ಮಾರ್ಗವನ್ನು ವಿಜಿಘ್ರನ್=ವಾಸನೆ ನೋಡುತ್ತ (ಹಂದಿಗಳು ವಾಸನೆ ನೋಡುತ್ತ ಹುಡುಕುವುವು ಅದರ ಅನುಕರಣವಿದು) ಕ್ರೀಡಾಪದೇಶಃ=ದೇವಕಾರ್ಯದ ನೆಪದಿಂದ ವರಾಹ-ವೇಷಧರಿಸಿದ ಸ್ವಯಂ ಅಧ್ವರಾಂಗಃ=ಸ್ವತಃ ಯಜ್ಞಸಾಧನಗಳಾದ ದರ್ಭೆ, ಎಳ್ಳು ಮುಂತಾದವುಗಳಿಗೆ ಜನಕವಾದ ಅವಯವಗಳುಳ್ಳವನು ಕರಾಲದಂಷ್ಟ್ರೋಽಪಿ= ಕ್ರೂರವಾದ ಕೋರೆ ಹಲ್ಲುಳ್ಳವನಾದರೂ ಅಕರಾಲದೃಗ್ಭ್ಯಾಂ=ಅಕ್ರೂರವಾದ (ಸೌಮ್ಯವಾದ) ದೃಷ್ಟಿಯಿಂದ ಗೃಣತಃ ವಿಪ್ರಾನ್=ಸ್ತುತಿಸುವ ಬ್ರಾಹ್ಮಣರನ್ನು ಉದ್ವೀಕ್ಷ್ಯ=ಅನುಗ್ರಹದಿಂದ ನೋಡಿ ಕಂ=ನೀರನ್ನು ಆವಿಶತ್=ಪ್ರವೇಶಿಸಿದನು ॥೩೦॥

ಆಗಿನ ಸಮುದ್ರವನ್ನು ಉತ್ಪ್ರೇಕ್ಷಿಸುವರು –

**ಸ ವಜ್ರಕೂಟಾಂಗನಿಪಾತವೇಗ**
**ವಿಶೀರ್ಣಕುಕ್ಷಿಃ ಸ್ತನಯನ್ನುದನ್ವಾನ್ ।**
**ಉತ್ಸೃಷ್ಟದೀರ್ಘೋರ್ಮಿಕರೈರಿವಾರ್ತ-**
**ಶ್ಚುಕ್ರೋಶ ಯಜ್ಞೇಶ್ವರ ಪಾಹಿ ಮೇತಿ ॥೩೧॥**

ವಜ್ರಕೂಟಾಂಗನಿಪಾತವೇಗವಿಶೀರ್ಣಕುಕ್ಷಿಃ=ಕಬ್ಬಿಣದಂತೆ ಕಠಿಣವಾದ ಶರೀರವು ಬೀಳುವ ವೇಗದಿಂದ ಒಡೆದು ಹೋದ ಹೊಟ್ಟೆಯುಳ್ಳ ಸಃ ಉದನ್ವಾನ್= ಆ ಸಮುದ್ರವು ಸ್ತನಯನ್=ಶಬ್ದಮಾಡುತ್ತ ಉತ್ಸೃಷ್ಟದೀರ್ಘೋರ್ಮಿಕರೈಃ= ಎತ್ತರವಾದ ತೆರೆಗಳೆಂಬ ಕೈಗಳನ್ನೆತ್ತಿ ಆರ್ತಃ ಇವ=ದುಃಖಿತನಂತೆ ಹೇ ಯಜ್ಞೇಶ್ವರ ಮಾ ಪಾಹಿ=ಸ್ವಾಮಿಯೇ ನನ್ನನ್ನು ರಕ್ಷಿಸು ಇತಿ=ಎಂದು ಚುಕ್ರೋಶ=ಕಿರುಚಿತು. ಇದು ಜಡ ಸಮುದ್ರದ ಉತ್ಪ್ರೇಕ್ಷೆ. ಅಭಿಮಾನಿಯು ಶ್ರೀಹರಿಯನ್ನು ಸ್ತುತಿಸಿದನು ಎಂದು ತಿಳಿಯಬೇಕು.

ಹೊಟ್ಟೆ ಸೀಳಿದಾಗ ದುಃಖಿತನಾದ ಮನುಷ್ಯನು ಕೈಯೆತ್ತಿ ಸೀಳುವವನನ್ನು ಕುರಿತು ನನ್ನನ್ನು ರಕ್ಷಿಸೆಂದು ಕೂಗುವಂತೆ ಸಮುದ್ರವು ತೋರುತ್ತಿತ್ತು ಎಂದು ಭಾವ ॥೩೧॥

**ಖುರೈಃ ಕ್ಷುರಪ್ರೈರ್ದರಯಂಸ್ತದಾಪ**
**ಉತ್ಪಾರಪಾರಂ ತ್ರಿಪರೂ ರಸಾಯಾಂ ।**

**ದದರ್ಶ ಗಾಂ ತತ್ರ ಸುಷುಪ್ಸುರಗ್ರೇ**
**ಯಾಂ ಜೀವಧಾನೀಂ ಸ್ವಯಮಭ್ಯಧತ್ತ ॥೩೨॥**

ಕ್ಷುರಪ್ರೈಃ=ಖಡ್ಗದಂತೆ ನಿಶಿತವಾದ ಅರ್ಧಚಂದ್ರದಂತೆ ಇರುವ ಖುರೈಃ= ಗೊರಸುಗಳಿಂದ ತದಾಪಃ=ಸಮುದ್ರದ ನೀರನ್ನು ಉತ್ಪಾರವಾರಂ ದರಯನ್= ಆಚೆದಂಡೆಯ ನೀರು ಮೇಲೇಳುವಂತೆ ದರಯನ್=ಸೀಳುತ್ತ ತ್ರಿವರುಃ=ಮೂರು ಯುಗಗಳಲ್ಲಿ ಅವತರಿಸುವ, ಮೂರು ಸ್ಥಾನಗಳನ್ನು ಸ್ವೀಕರಿಸುವ, ಮೂರುವೇದ- ಗಳಿಂದ ವಿವರಿಸಲ್ಪಡುವ ಶ್ರೀವರಾಹನು (ತ್ರಿಷು ಅವತಾರಂ ವೃಣೋತಿ ಇತಿ ವಾ, ಸ್ಥಾನತ್ರಯಂ ವೃಣೋತೀತಿವಾ,ತ್ರಿಭಿಃ ವಿವ್ರಿಯತೇತಿ ವಾ) ತತ್ರ=ನೀರಿನಲ್ಲಿ ಸುಷುಪ್ಸುಃ=ಯೋಗ ನಿದ್ರೆ ಮಾಡಬೇಕೆಂದು ಇಚ್ಛೆಯುಳ್ಳವನಾಗಿ ಅಗ್ರೇ=ಪೂರ್ವ- ದಲ್ಲಿ ಯಾಂ=ಯಾವ ಜೀವಧಾನೀಂ=ಎಲ್ಲ ಪ್ರಾಣಿಗಳಿಗೆ ಆಧಾರವಾದ ಗಾಂ= ಭೂಮಿಯನ್ನು ಸ್ವಯಂ=ತಾನೇ ಅಭ್ಯಧತ್ತ=ಪ್ರಲಯ ಜಲದ ಮೇಲೆ ಇಟ್ಟನೋ ತಾಂ ಗಾಂ=ಭೂಮಿಯನ್ನು ರಸಾಯಾಂ=ರಸಾತಲದಲ್ಲಿ ದದರ್ಶ=ನೋಡಿದನು .

**ಸ್ವದಂಷ್ಟ್ರಯೋದ್ಧೃತ್ಯ ಮಹೀಂ ವಿಲಗ್ನಾಂ**
**ಸ ಉತ್ಥಿತಃ ಸಂರುರುಹೇ ರಸಾಯಾಃ ।**
**ತತ್ರಾಪಿ ದೈತ್ಯಂ ಗದಯಾಽಽಪತಂತಂ**
**ಸುನಾಭಸಂದೀಪಿತತೀವ್ರಮನ್ಯುಃ ॥೩೩॥**

**ಜಘಾನ ರುಂಧಾನಮಸಹ್ಯವಿಕ್ರಮಃ**
**ಸಲೀಲಯೇಭಂ ಮೃಗರಾಡಿವಾಂಭಸಿ ।**
**ತದ್ರಕ್ತಪಂಕಾಂಕಿತತುಂಡಗಂಡೋ**
**ಯಥಾ ಗಜೇಂದ್ರೋ ಜಗತೀಂ ವಿಭಿಂದನ್ ॥೩೪॥**

ವಿಲಗ್ನಾಂ=ರಸಾತಲಕ್ಕೆ ಅಂಟಿಕೊಂಡಿರುವ ಮಹೀಂ=ಭೂಮಿಯನ್ನು ಸ್ವದಂಷ್ಟ್ರಯಾ=ತನ್ನ ಹಲ್ಲಿನಿಂದ ರಸಾಯಾಃ ಉದ್ಧೃತ್ಯ=ರಸಾತಲದಿಂದ ಮೇಲೆತ್ತಿ ಉತ್ಥಿತಃ=ಮೇಲೆ ಬಂದು ಸಂರುರುಹೇ=ಮೇಲಿನ ಪ್ರದೇಶಕ್ಕೆ ಬಂದನು (ಏರಿದನು) ತತ್ರಾಪಿ=ಮೇಲೇರುವಾಗ ಗದಯಾ ಸಹ ಆಪತಂತಂ=ಗದೆಯನ್ನು ಎತ್ತಿಕೊಂಡು ಬರುತ್ತಿರುವ ರುಂಧಾನಂ=ತನ್ನನ್ನು ತಡೆಯುತ್ತಿರುವ ದೈತ್ಯಂ=ಆದಿಹಿರಣ್ಯಾಕ್ಷನನ್ನು ಸುನಾಭಸಂದೀಪಿತತೀವ್ರಮನ್ಯುಃ=ತನ್ನ ಸುದರ್ಶನ ಚಕ್ರಕ್ಕೆ ಬಹಳವಾದ ಕೋಪವನ್ನು ತರಿಸಿದವನಾಗಿ (ಭಗವಂತನು ಚಕ್ರ ತೆಗೆದುಕೊಳ್ಳದೇ ತನ್ನ ಹಲ್ಲಿನಿಂದ ದೈತ್ಯ ಸಂಹಾರ ಮಾಡಿದ್ದರಿಂದ ನನಗೇನು ಕೆಲಸವಿಲ್ಲ ಎಂದು ಆ ಸಮಯದಲ್ಲಿ

ಕೋಪ ಉಂಟಾಯಿತು ಎಂದು ಭಾವ) ಅಸಹ್ಯವಿಕ್ರಮಃ=ಸಹಿಸಲಾಗದ ಪ್ರರಾಕ್ರಮವುಳ್ಳ ಸಃ=ವರಾಹದೇವರು ಗಜೇಂದ್ರಃ=ಆನೆಯು ಜಗತೀಂ= ಭೂಮಿಯನ್ನು ಕ್ರೀಡಯಾ=ಆಟವಾಡುತ್ತ ಸ್ವದಂಷ್ಟ್ರಯಾ=ತನ್ನ ದಂತದಿಂದ ವಿಭಿಂದನ್=ಭೇದಿಸುತ್ತ ಯಥಾ=ಹೇಗೆ ಕೆಂಪಾದ ಕೆಸರಿನಿಂದ ಕೂಡಿದ ಗಂಡಸ್ಥಲ, ಮುಖಉಳ್ಳದ್ದಾಗುವುದೋ ತಥಾ=ಹಾಗೆ ತದ್ರಕ್ತಪಂಕಾಂಕಿತತುಂಡಗಂಡಃ=ರಾಕ್ಷಸನ ರಕ್ತವೆಂಬ ಕೆಸರಿನಿಂದ ಚಿಹ್ನಿತವಾದ, ಗಂಡತುಂಡಃ=ಕಪೋಲ ಮುಖಗಳುಳ್ಳವನಾಗಿ ಅಂಭಸಿ=ನೀರಿನಲ್ಲಿ ಮೃಗರಾಟ್=ಸಿಂಹವು ಇಭಂ ಇವ=ಆನೆಯನ್ನು ಕೊಲ್ಲುವಂತೆ ಲೀಲಯಾ ಅನಾಯಾಸವಾಗಿ ಜಘಾನ=ಸಂಹರಿಸಿದನು ||೩೩-೩೪||

**ತಮಾಲನೀಲಂ ಸಿತದಂತಕೋಟ್ಯಾ**
**ಕ್ಷ್ಮಾಮುತ್ಕ್ಷಿಪಂತಂ ಗಜಲೀಲಯಾಂಽಗ ।**
**ಪ್ರಜ್ಞಾಯ ಬದ್ಧಾಂಜಲಯೋಽನುವಾಕೈ-**
**ರ್ವಿರಿಂಚಮುಖ್ಯಾ ಉಪತಸ್ಥುರೀಶಂ ||೩೫||**

ಹೇ ಅಂಗ=ವಿದುರನೇ ತಮಾಲನೀಲಂ=ಹೊಂಗೆ ಮರದಂತೆ ಕಪ್ಪಾದ ಸಿತದಂತಕೋಟ್ಯಾ=ಶುಭ್ರವಾದ ಹಲ್ಲಿನ ತುದಿಯಿಂದ ಕ್ಷ್ಮಾಂ=ಭೂಮಿಯನ್ನು ಗಜಲೀಲಯಾ=(ಆನೆಯಂತೆ) ಅನಾಯಾಸವಾಗಿ ಉತ್ಕ್ಷಿಪಂತಂ=ಮೇಲೆತ್ತು-ತ್ತಿರುವವನನ್ನು ಪ್ರಜ್ಞಾಯ=ಸಾಮಾನ್ಯವರಾಹವಲ್ಲ ಶ್ರೀಹರಿಯೇ ಎಂದು ತಿಳಿದು ಬದ್ಧಾಂಜಲಯಃ=ಕೈಜೋಡಿಸಿದವರಾಗಿ ವಿರಿಂಚಮುಖ್ಯಾಃ=ಬ್ರಹ್ಮದೇವರೇ ಮೊದಲಾದ ದೇವತೆಗಳು ಅನುವಾಕೈಃ=ವೇದವಾಕ್ಯಗಳಿಂದ ಈಶಂ=ಸ್ವಾಮಿಯಾದ ಶ್ರೀಪರಮಾತ್ಮನನ್ನು ಉಪತಸ್ಥುಃ=ಸ್ತುತಿಸಿದರು ||೩೫||

**ದೇವಾ ಊಚುಃ**

**ಜಿತಂ ಜಿತಂ ತೇಽಜಿತ ಯಜ್ಞ(ಲೋಕ)ಭಾವನ**
**ತ್ರಯೀತನುಂ ಸ್ವಾಂ ಪರಿಧುನ್ವತೇ ನಮಃ ।**
**ಯಲ್ಲೋಮಗರ್ತೇಷು ನಿಲಿಲ್ಯುರಬ್ಧಯಃ**
**ತಸ್ಮೈ ನಮಃ ಕಾರಣಸೂಕರಾಯ ತೇ ||೩೬||**

ಭೋ ಅಜಿತ=ಯಾರಿಂದಲೂ ಗೆಲ್ಲಲಾಗದವನೇ ತೇ=ನಿನ್ನಿಂದ ಜಿತಂ ಜಿತಂ= ಎಲ್ಲವೂ ಗೆಲ್ಲಲ್ಪಟ್ಟಿದೆ ಸ್ವಾಂ=ಸ್ವರೂಪಭೂತವಾದ ತ್ರಯೀತನುಂ=ವೇದಪ್ರತಿಪಾದ್ಯ ದೇಹವನ್ನು ಪರಿಧುನ್ವತೇ=ಕೂದಲಿನಲ್ಲಿರುವ ನೀರನ್ನು ಹೋಗಲಾಡಿಸಲು ನಡುಗಿಸುವ (ಮೈಯನ್ನು ಝಾಡಿಸುವ ಎಂದರ್ಥ) ಯಲ್ಲೋಮಗರ್ತೇಷು=

ಯಾವನ ರೋಮಕೂಪಗಳಲ್ಲಿ ಅಬ್ಧಯಃ=ಸಮುದ್ರಗಳು ನಿಲಿಲ್ಯುಃ=ಅಡಗಿರು-ವವೋ ತಸ್ಮೈ=ಅಂಥ ಕಾರಣಸೂಕರಾಯ=ಭೂಮಿಯನ್ನು ಮೇಲೆತ್ತುವ ಕಾರಣಕ್ಕಾಗಿ ವರಾಹ ರೂಪತಾಳಿದ ತೇ=ನಿನಗೆ ನಮಃ=ನಮಸ್ಕಾರವು ॥೩೬॥

**ರೂಪಂ ತವೈತನ್ನನು ದುಷ್ಕೃತಾನಾಂ**
**ದುರ್ದರ್ಶನಂ ದೇವ ಯದಧ್ವರಾತ್ಮಕಂ ।**
**ಛಂಧಾಂಸಿ ಯಸ್ಯ ತ್ವಚಿ ಬರ್ಹಿರೋಮ-**
**ಸ್ವಾಜ್ಯಂ ದೃಶಿ ತ್ವಂಘ್ರಿಷು ಚಾತುರ್ಹೋತ್ರಂ ॥೩೭॥**

ಹೇ ದೇವ=ಎಲೋ ಸ್ವಾಮಿಯೇ ಅಧ್ವರಾತ್ಮಕಂ=ಯಜ್ಞಸಾಧನ ಜನಕವಾದ ಏತತ್=ಈ ತವ=ನಿನ್ನ ರೂಪಂ=ರೂಪವು ದುಷ್ಕೃತಾನಾಂ=ಪಾಪಿಗಳಿಗೆ ದುರ್ದರ್ಶನಂ= ಕಾಣಿಸಲಾರದು. ಯಸ್ಯ=ಯಾವನ ತ್ವಚಿ=ತ್ವಗಿಂದ್ರಿಯದಲ್ಲಿ ಛಂದಾಂಸಿ= ವೇದಗಳು, ಗಾಯತ್ರೀ ಮೊದಲಾದ ಛಂದಸ್ಸುಗಳು ಜನಿಸಿದವು ಆಶ್ರಯಿಸಿದವು, ಬರ್ಹಿಃ=ದರ್ಭೆಗಳು ರೋಮ=ಕೂದಲಿನಿಂದ ಜನಿಸಿದವು, ದೃಶಿ=ಕಣ್ಣಿನಲ್ಲಿ ಸ್ವಾಜ್ಯಂ= ಒಳ್ಳೆ ತುಪ್ಪವು, ಅಂಘ್ರಿಷು=ಕಾಲಿನಿಂದ,ಚಾತುರ್ಹೋತ್ರಂ=ನಾಲ್ಕು ಜನ ಹೋತಾ, ಉದ್ಗಾತಾ, ಅಧ್ವರ್ಯು, ಪೋತೃಗಳಿಂದ ಮಾಡಲ್ಪಡುವ ಕ್ರಿಯೆಗಳು ಜನಿಸಿದವು ॥೩೭॥

**ಸ್ರುಕ್ ತುಂಡ ಆಸೀತ್ ಸ್ರುವ ಈಶ ನಾಸಯೋ -**
**ರಿಡೋದರೇ ಚಮಸಃ ಕರ್ಣರಂಧ್ರೇ ।**
**ಪ್ರಾಶಿತ್ರಮಾಸ್ಯೇ ರಸನೇ ಗ್ರಹಾಸ್ತು**
**ಯಚ್ಚರ್ವಣಂ ತೇ ಭಗವನ್ನಗ್ನಿಹೋತ್ರಂ ॥೩೮॥**

ಹೇ=ಭಗವನ್ ಈಶ=ಭಗವಂತನಾದ ಸ್ವಾಮಿಯೇ, ಸ್ರುಕ್=ತುಪ್ಪವನ್ನು ಹೋಮ ಮಾಡುವ ಸವಟು, ತೇ=ನಿನ್ನ ತುಂಡೇ ಆಸೀತ್=ಮುಖದಿಂದ ಜನಿಸಿತು, ಸ್ರುವಃ=ಚರುಹಾಕುವ ಸವಟು ನಾಸಯೋಃ=ಮೂಗಿನಿಂದ,ಇಡಾ=ತಿನ್ನುವ ಪಾತ್ರವು ಉದರೇ=ಹೊಟ್ಟೆಯಲ್ಲಿ, ಚಮಸಃ=ನಾಲ್ಕು ಕೋಣವುಳ್ಳ ಯಜ್ಞಪಾತ್ರವು ಕರ್ಣರಂಧ್ರೇ=ಕಿವಿಯಲ್ಲಿ, ಪ್ರಾಸಿತ್ರಂ=ಬ್ರಹ್ಮನಿಗೆ ಭಾಗ ಕೊಡುವ ಪಾತ್ರವು ಆಸ್ಯೇ=ಬಾಯಲ್ಲಿ ಗ್ರಹಾಃ=ಹನ್ನೆರಡು ಸೋಮಪಾತ್ರಗಳು ರಸನೇ=ನಾಲಿಗೆಯ ವ್ಯಾಪಾರದಲ್ಲಿ ಯತ್ ಚರ್ವಣಂ=ಅಗಿಯುವುದು (ಹಲ್ಲಿನಿಂದ ಪುಡಿಮಾಡು-ವುದು) ಅಗ್ನಿಹೋತ್ರಂ=ಅಗ್ನಿಹೋತ್ರವು. ಅಂದರೆ ಆ ಆ ಸ್ಥಾನಗಳಲ್ಲಿ ಜನಿಸಿ ಅಲ್ಲಿಯೇ ಇರುವುವು.

**ದೀಕ್ಷಾತ್ಮಜನ್ಮೋಪಸದಃ ಶಿರೋಧ-**
**ಸ್ತ್ವಂ ಪ್ರಾಯಣೀಯೋದಯನೀಯದಂಷ್ಟ್ರಃ ।**
**ಜಿಹ್ವಾ ಪ್ರವರ್ಗ್ಯಸ್ತವ ಶೀರ್ಷಣಂ ಕ್ರತೋಃ**
**ಸಭ್ಯಾವಸಥ್ಯೌ ಚಿತಯೋಽಸವೋ ಹಿ ತೇ ॥೩೯॥**

ಆತ್ಮಜನ್ಮ=ನಿನ್ನ ಅಭಿವ್ಯಕ್ತಿಯು ದೀಕ್ಷಾ=ವ್ರತಸಂಗ್ರಹಣವು ಅಥವಾ ದೀಕ್ಷಣೀಯ ಇಷ್ಟಿಯು. ಉಪಸದಃ=ಉಪಸತ್ ಎಂಬ ಹೆಸರಿನ ಕೆಲವು ಯಜ್ಞಗಳು ಶಿರೋಧಃ= ಕುತ್ತಿಗೆಯು, (ಉಪಸತ್ತಿ ವಿಶೇಷ ಎಂದು ಅರ್ಥ) ತ್ವಂ=ನೀನು ಪ್ರಾಯಣೀ-ಯೋದಯನೀಯದಂಷ್ಟ್ರಃ=ದೀಕ್ಷಾಸ್ವೀಕಾರವಾದಮೇಲೆ ಉಪಕ್ರಮದಲ್ಲಿ ಮಾಡುವ ಇಷ್ಟಿ 'ಪ್ರಾಯಣೀಯ', ಕೊನೆಗೆ ಮಾಡುವ ಇಷ್ಟಿಯು 'ಉದಯನೀಯ' ಇವೆರಡು ನಿನ್ನ ಹಲ್ಲಿನಲ್ಲಿ ಆಶ್ರಯಿಸಿವೆ, ಪ್ರವರ್ಗ್ಯಃ=ಮಹಾವೀರನು ಪ್ರತಿಯೊಂದು ಉಪಸನ್ನಾಮಕ ಯಜ್ಞದ ಪೂರ್ವದಲ್ಲಿ ಮಾಡುವ ಅಂಗಭೂತವಾದ ಯಾಗವು ಜಿಹ್ವಾ=ನಾಲಿಗೆಯು, ಸಭ್ಯಃ=ಹೋಮರಹಿತವಾದ ಅಗ್ನಿಯು, ಆವಸಥ್ಯಃ= ಔಪಾಸನಾಗ್ನಿಯು, ಕ್ರತೋಃ=ಜ್ಞಾನರೂಪನಾದ ತವ=ನಿನ್ನ ಶೀರ್ಷಣಂ=ತಲೆಯು (ಶಿರವು) ಚಿತಯಃ=ಇಟ್ಟಿಗೆಗಳ ಕಟ್ಟಡಗಳು (ಯಜ್ಞಕ್ಕೆ ಹಾಕುವ ಕಟ್ಟೆಯಂತಹವು) ತೇ ಅಸವಃ=ನಿನ್ನ ಪಂಚ ಪ್ರಾಣಗಳು, ಕ್ರತುಃ ಎಂಬ ಪಾಠವಿದ್ದಾಗ ಕ್ರತುಃ=ಸಂಕಲ್ಪವು ಶೀರ್ಷಣಃ=ಶಿರವು ಸಭ್ಯಅವಸಥ್ಯೌ ಚಿತಯಶ್ಚ ಅಸವಃ ಎಲ್ಲವೂ ಪ್ರಾಣಗಳು ಎಂದು ವ್ಯಾಖ್ಯಾನಿಸಬೇಕು ॥೩೯॥

**ಸೋಮಸ್ತು ರೇತಃ ಸವನಾನ್ಯವಸ್ಥಿತಿಃ**
**ಸಂಸ್ಥಾವಿಭೇದಾಸ್ತವ ದೇಹಧಾತವಃ ।**
**ಸತ್ರಾಣಿ ಸರ್ವಾಣಿ ಶರೀರಸಂಧಿಃ**
**ತ್ವಂ ಸರ್ವಯಜ್ಞಕ್ರತುರಿಷ್ಟಿಬಂಧನಃ ॥೪೦॥**

ಸೋಮಃ=(ಅಮೃತ) ಬಳ್ಳಿಯು ರೇತಃ=ನಿನ್ನ ವೀರ್ಯವು, ಅವಸ್ಥಿತಿಃ= ನಿಶ್ಚಲವಾಗಿ ಒಂದೆಡೆ ನಿಲ್ಲುವುದು ಸವನಾನಿ=ಪ್ರಾತರ್ಮಧ್ಯಸಾಯಂ ಎಂಬ ಮೂರು ಸವನಗಳು, ಸಂಸ್ಥಾವಿಭೇದಾಃ=ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ ಷೋಡಶೀ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ, ಎಂಬ ಏಳು ಸಂಸ್ಥಾನಗಳು ತವ=ನಿನ್ನ ದೇಹಧಾತವಃ=ತ್ವಗಾದಿ ಏಳು ದೇಹಧಾತುಗಳು, ರಸ, (ಅನ್ನರಸ) ರಕ್ತ, ಮಾಂಸ, ಮೇದ, ಅಸ್ಥಿ ಮಜ್ಜಾ ಶುಕ್ರ ಇವು ಏಳು ಧಾತುಗಳು. ಸತ್ರಾಣಿ=ಅನೇಕ ಜನರು ಕೂಡಿ ಮಾಡುವ ಯಜ್ಞಗಳು ಶರೀರಸಂಧಿಃ=ದೇಹಸಂಧಿ

ಗಳು,ತ್ವಂ=ನೀನು ಸರ್ವಯಜ್ಞಕ್ರತುಃ=ಸೋಮರಹಿತವಾದುದು ಯಜ್ಞ, ಸೋಮ ಸಹಿತವಾದುದು ಕ್ರತು, ಅವೆಲ್ಲವೂ ನೀನೇ ಇಷ್ಟಿ=ಪ್ರತಿಪತ್ ತಿಥಿಯಲ್ಲಿ ಮಾಡುವ ಕರ್ಮವು ಬಂಧನಂ=ದೇಹ ಸಂಹನನವಾಗಿ ಉಳ್ಳವನು ॥೪೦॥

"ಯಸ್ಮಾದ್ಯಜ್ಜಾಯತೇ ಚಾಂಗಾತ್ತತ್ತದಂಗಾಭಿದಂ ಭವೇತ್" ಎಂದು ಹಿಂದೆ ಪ್ರಮಾಣ ಉದಾಹರಿಸಿದ ಪ್ರಕಾರ ದೀಕ್ಷಾದಿಗಳೇ ಭಗವಂತನ ಅವಯವ ಎಂಬಂತೆ ವ್ಯವಹರಿಸಿದ್ದರೂ ಆ ಆ ಅವಯವಗಳಿಂದ ಜನಿಸಿದವು ಎಂದೇ ವ್ಯಾಖ್ಯಾನಿಸಬೇಕು ॥೪೦॥

**ನಮೋ ನಮಸ್ತೇಽಖಿಲಮಂತ್ರದೇವತಾ-**
**ದ್ರವ್ಯಾಯ ಸರ್ವಕ್ರತವೇ ಕ್ರಿಯಾತ್ಮನೇ ।**
**ವೈರಾಗ್ಯಭಕ್ತ್ಯಾಽಽತ್ಮಜಯಾನುಭಾವಿತ -**
**ಜ್ಞಾನಾಯ ವಿದ್ಯಾಗುರವೇ ನಮೋ ನಮಃ ॥೪೧॥**

ಅಖಿಲಮಂತ್ರದೇವತಾದ್ರವ್ಯಾಯ=ಎಲ್ಲ ಮಂತ್ರಗಳಲ್ಲಿ ದೇವತೆಗಳಲ್ಲಿ ದ್ರವ್ಯಗಳಲ್ಲಿದ್ದು ಆ ಆ ಹೆಸರಿನಿಂದ ಕರೆಸಿಕೊಳ್ಳುವ ಸರ್ವಕ್ರತವೇ=ಸರ್ವವಿಷಯಕ ಜ್ಞಾನರೂಪನಾದ ಕ್ರಿಯಾತ್ಮನೇ=ವಿಹಿತಕ್ರಿಯೆಗಳನ್ನು ಸ್ವೀಕರಿಸುವನೇ, ವೈರಾಗ್ಯ-ಭಕ್ತ್ಯಾಽತ್ಮಜಯ=ವೈರಾಗ್ಯ, ಭಕ್ತಿ, ಆತ್ಮಜಯ=ಮನೋಜಯ ಇವುಗಳಿಂದ ಅನುಭಾವಿತ=ಯೋಗ್ಯತಾನುಸಾರ ಉತ್ಪಾದಿಸಲ್ಪಟ್ಟ ಜ್ಞಾನಾಯ=ತನ್ನ ಸಾಕ್ಷಾತ್ಕಾರ-ವುಳ್ಳ ಆದ್ದರಿಂದ ವಿದ್ಯಾಗುರುವೇ=ಗುರುವಾದ. ಅಥವಾ ವಿದ್ಯೆಗಳನ್ನು ಮೊದಲಿಗೆ ಹೇಳಿದ ತೇ=ನಿನಗೆ ನಮೋ ನಮಃ=ನಮಸ್ಕಾರವು ॥೪೧॥

**ದಂಷ್ಟ್ರಾಗ್ರಕೋಟ್ಯಾ ಭಗವಂಸ್ತ್ವಯಾ ಧೃತಾ**
**ವಿರಾಜತೇ ಭೂಧರ ಭೂಃ ಸಭೂಧರಾ ।**
**ಯಥಾ ವನಾನ್ನಿಸ್ಸರತೋ ದತಾ ಧೃತಾ**
**ಮತಂಗಜೇಂದ್ರಸ್ಯ ಸಪತ್ರಪದ್ಮಿನೀ ॥೪೨॥**

ಹೇಭಗವನ್ ಭೂಧರ=ವರಾಹರೂಪಿಯೇ ತ್ವಯಾ=ನಿನ್ನಿಂದ ದಂಷ್ಟ್ರಾಗ್ರ-ಕೋಟ್ಯಾ=ಹಲ್ಲಿನ ತುದಿಯಿಂದ ಧೃತಾ=ಧರಿಸಲ್ಪಟ್ಟ ಸಭೂಧರಾ=ಪರ್ವತ ಸಹಿತವಾದ ಭೂಃ=ಭೂಮಿಯು ಯಥಾ=ಹೇಗೆ ವನಾತ್=ನೀರಿನಿಂದ ನಿಸ್ಸರತಃ= ಹೊರಬರುವ ಮತಂಗಜೇಂದ್ರಸ್ಯ=ಆನೆಯ (ಮತಂಗಋಷಿಯಿಂದ ಜನಿಸಿದ) ದತಾ=ಹಲ್ಲಿನಿಂದ ಧೃತಾ=ಧರಿಸಿದ ಸಪತ್ರಪದ್ಮಿನೀ=ಎಲೆಗಳಿಂದ ಸಹಿತವಾದ ಸರೋವರದಂತೆ ವಿರಾಜತೇ= ಶೋಭಿಸುವುದು ॥೪೨॥

ನೀನು ಉದ್ಧರಿಸಿದ ಭೂಮಿಯಿಂದ ನಿನ್ನ ರೂಪವು ಶೋಭಿಸುವುದು ಎಂದು ಹೇಳುವರು –

**ತ್ರಯೀಮಯಂ ರೂಪಮಿದಂ ಚ ಸೌಕರಂ**
**ಭೂಮಂಡಲಂ ನಾಥ ದತಾ ಧೃತೇನ ತೇ ।**
**ಚಕಾಸ್ತಿ ಶೃಂಗೋಢಘನೇನ ಭೂಯಸಾ**
**ಕುಲಾಚಲೇಂದ್ರಸ್ಯ ಯಥೈವ ವಿಭ್ರಮಃ ॥೪೩॥**

ಶೃಂಗೋಢಘನೇನ=ಬೆಟ್ಟದಶಿಖರಗಳಿಂದಧರಿಸಲ್ಪಟ್ಟಮೋಡಗಳಿಂದ ಕುಲಾಚಲೇಂದ್ರಸ್ಯ=ಕುಲಪರ್ವತದ ವಿಭ್ರಮಃ ಯಥಾ=ವಿಲಾಸದಂತೆ ದತಾ= ಹಲ್ಲಿನಿಂದ ಧೃತೇನ=ಧರಿಸಲ್ಪಟ್ಟ ಭೂಮಂಡಲೇನ=ಭೂಮಂಡಲದಿಂದ ತ್ರಯೀ-ಮಯಂ= ವೇದಪ್ರತಿಪಾದ್ಯವಾದ ತೇ=ನಿನ್ನ ಇದಂ ಸೌಕರಂ ರೂಪಂ=ಈ ವರಾಹ ರೂಪವು ಭೂಯಸಾ ಚಕಾಸ್ತಿ=ಬಹಳವಾಗಿ ಶೋಭಿಸುವುದು ॥೪೩॥

**ಸಂಸ್ಥಾಪಯೈನಾಂ ಜಗತಾಂ ಸತಸ್ಥುಷಾಂ**
**ಲೋಕಾಯ ಪತ್ನೀಮಸಿ ಮಾತರಂ ಪಿತಾ ।**
**ವಿಧೇಮ ಯಸ್ಯೈ ನಮಸಾ ಸಹ ತ್ವಯಾ**
**ಯಸ್ಯಾಂ ಸ್ವತೇಜೋಽಗ್ನಿಮಿವಾರಣಾವಧಾಃ ॥೪೪॥**

ಯಸ್ಯಾಂ=ಯಾವ ಭೂದೇವಿಯಲ್ಲಿ ಸ್ವತೇಜಃ=ನಿನ್ನ ವೀರ್ಯವನ್ನು ಅರಣೌ= ಅಗ್ನಿಯನ್ನುಕಡೆಯುವ ಕಟ್ಟಿಗೆಯಲ್ಲಿ ಅಗ್ನಿಂ ಇವ=ಯಾಜ್ಞಿಕರು ಮಂತ್ರಗಳಿಂದ ಅಗ್ನಿಯನ್ನು ಇಡುವಂತೆ ಅಧಾಃ=ಆಧಾನ ಮಾಡಿರುವಿ (ಇಟ್ಟಿರುವಿ) ಆದ್ದರಿಂದ ಪಿತಾ ಅಸಿ=ನೀನು ತಂದೆಯಾಗಿರುವಿ ಸತಸ್ಥುಷಾಂ ಜಗತಾಂ=ಸ್ಥಾವರ ಸಹಿತವಾದ ಜಗತ್ತಿಗೆ ಮಾತರಂ=ತಾಯಿಯಾದ ಪತ್ನೀಂ=ನಿನ್ನ ಹೆಂಡತಿಯಾದ ಏನಾಂ= ಭೂಮಿಯನ್ನು ಲೋಕಾಯ=ಲೋಕ ಕಲ್ಯಾಣಕ್ಕಾಗಿ ಸಂಸ್ಥಾಪಯ=ನೀರಿನ ಮೇಲೆ ತಂದಿರಿಸು ॥೪೪॥

ಕಃ ಶ್ರದ್ಧಧೀತಾನ್ಯತಮಸ್ತವ ಪ್ರಭೋ
ರಸಾಂ ಗತಾಯಾ ಭುವ ಉದ್ವಿಬರ್ಹಣಂ ।
ನ ವಿಸ್ಮಯೋಽಸೌ ತ್ವಯಿ ವಿಶ್ವವಿಸ್ಮಯೇ
ಯೋ ಮಾಯಯೇದಂ ಸಸೃಜೇತಿ ವಿಸ್ಮಯಃ ॥೪೫॥

ಹೇ ಪ್ರಭೋ=ಸ್ವಾಮಿಯೇ ತವ=ನಿನ್ನ ರಸಂ ಗತಾಯಾಃ=ರಸಾತಲಕ್ಕೆ ಹೋಗಿರುವ ಭುವಃ=ಭೂಮಿಯ ಉದ್ವಿಬರ್ಹಣಂ=ಉದ್ಧರಣವನ್ನು ಅನ್ಯತಮಃ ಕಃ ಶ್ರದ್ಧಧೀತ=ನಿನ್ನ ಹೊರತು ಬೇರೆ ಯಾರು ತಾನೇ ಮಾಡುವನೆಂದು ನಿಶ್ಚಯಿಸುವರು? ಯಾರೂ ಇಲ್ಲ (ಈ ಕಾರ್ಯವನ್ನು ಮನಸಾಪಿ ತಿಳಿಯಲಾರರು ಮಾಡುವುದಂತು ದೂರ ಉಳಿಯಿತು) ವಿಶ್ವವಿಸ್ಮಯೇ=ಸರ್ವಾಶ್ಚರ್ಯವುಳ್ಳ ತ್ವಯಿ ನಿನ್ನಲ್ಲಿ ಅಸೌ=ಇದು ನ ವಿಸ್ಮಯಃ=ಆಶ್ಚರ್ಯವೇನಲ್ಲ. ಯಃ=ಯಾವನು ಮಾಯಯಾ=ತನ್ನ ಇಚ್ಛೆಯಿಂದ ಇದಂ=ಜಗತ್ತನ್ನು ಸಸೃಜೇ=ಸೃಷ್ಟಿಸಿದನು ಆದ್ದರಿಂದ ಅತಿವಿಸ್ಮಯಃ=ಅತ್ಯಂತ ಆಶ್ಚರ್ಯವುಳ್ಳವನು ॥೪೫॥

**ವಿಧುನ್ವತಾ ವೇದಮಯಂ ನಿಜಂ ವಪು-**
**ರ್ಜನಸ್ತಪಸ್ಸತ್ಯನಿವಾಸಿನೋ ವಯಂ ।**
**ಸಟಾಶಿಖೋದ್ಧೂತಶಿವಾಂಬುಬಿಂದುಭಿಃ**
**ವಿಮೃಜ್ಯಮಾನಾ ಭೃಶಮಿಶ ಪಾವಿತಾಃ ॥೪೬॥**

ವೇದಮಯಂ=ವೇದಪ್ರತಿಪಾದ್ಯವಾದ ನಿಜಂ ವಪುಃ=ನಿನ್ನ ದೇಹವನ್ನು ವಿಧುನ್ವತಾ=ಕಂಪಿಸುವ ನಿನ್ನಿಂದ ಜನಸ್ತಪಸ್ಸತ್ಯನಿವಾಸಿನಃ ವಯಂ=ಜನೋಲೋಕ, ತಪೋಲೋಕ,ಸತ್ಯಲೋಕಗಳಲ್ಲಿ ವಾಸಿಸುವ ನಾವೆಲ್ಲ ದೇವತೆಗಳು ಸಟಾಶಿಖೋದ್ ಭೂತಶಿವಾಂಬುಬಿಂದುಭಿಃ=ಮೈಮೇಲಿನ ಕೂದಲುಗಳ ತುದಿಯಿಂದ ಹೊರಟ ಪವಿತ್ರವಾದ ನೀರಿನ ಹನಿಗಳಿಂದ ವಿಮೃಜ್ಯಮಾನಾಃ=ಸಿಂಪಡಿಸಿಲ್ಪಟ್ಟವರಾಗಿ ಹೇ ಈಶ=ಸ್ವಾಮಿಯೇ ಭೃಶಂ ಪಾವಿತಾಃ=ಅತ್ಯಂತ ಪುನೀತರಾದೆವು. ಎಲ್ಲ ಕರ್ಮಾಧಿ ಕಾರವು ಪ್ರಾಪ್ತವಾಯಿತು ॥೪೬॥

**ಸ ವೈ ಬತ ಭ್ರಷ್ಟಮತಿಸ್ತವೈಷತೇ**
**ಯಃ ಕರ್ಮಣಾಂ ಪಾರಮಪಾರಕರ್ಮಣಃ ।**
**ತ್ವದ್ಯೋಗಮಾಯಾಗುಣ(ಯೋಗಮೋಹತೋ)ಮೋಹಿತಾತ್ಮನಾಂ**
**ವಿಸ್ರಂಸತಾಂ ನೋ ಭಗವಾನ್ ವಿಧೇಹಿ ಶಂ ॥೪೭॥**

ಅಪಾರಕರ್ಮಣಃ=ಕೊನೆಯಿಲ್ಲದ ಕರ್ಮವುಳ್ಳ ನಿನ್ನ ಕರ್ಮಣಾಂ ಪಾರಂ= ಕರ್ಮಗಳ ಅಂತವನ್ನು ಯಃ=ಯಾವನು ಏಷತೇ=ತಿಳಿಯಲಿಚ್ಛಿಸುವನೋ ಸಃ= ಅವನು ಭ್ರಷ್ಟಮತಿಃ ವೈ ಬತ=ಮೂರ್ಖನೇ ಸರಿ ! ಎಂಬುದು ಪ್ರಮಾಣಸಿದ್ಧ, ತ್ವದ್ಯೋಗಮಾಯಾಗುಣಮೋಹಿತಾತ್ಮನಾಂ=ನಿನ್ನ ಬಂಧಕಶಕ್ತಿಯ ಸಾಮರ್ಥ್ಯದಿಂದ ಮೋಹಗೊಂಡ ಮನಸುಳ್ಳ ಆದ್ದರಿಂದಲೇ ವಿಸ್ರಂಸತಾಂ=ದೃಢವಾದ ಜ್ಞಾನವಿಲ್ಲದಿರುವ

ನಃ=ನಮಗೆ ಹೇ ಭಗವಾನ್=ಪರಮಾತ್ಮನೇ ಶಂ ವಿಧೇಹಿ=ದೃಢವಾದ ಜ್ಞಾನವನ್ನಿತ್ತು ಸುಖವನ್ನುಂಟು ಮಾಡು ॥೪೭॥

**ಮೈತ್ರೇಯ ಉವಾಚ**

**ಪ್ರತ್ಯುಪಸ್ಥೀಯಮಾನಸ್ತೈರ್ಮುನಿಭಿರ್ಬ್ರಹ್ಮವಾದಿಭಿಃ ।**
**ಸಲಿಲೇ ಸ್ವಖುರಾಕ್ರಾಂತ ಉಪಾಧತ್ತಾವಿತಾಽವನಿಂ ॥೪೮॥**

ಅವಿತಾ=ರಕ್ಷಕನಾದ ಶ್ರೀವರಾಹಸ್ವಾಮಿಯು ಬ್ರಹ್ಮವಾದಿಭಿಃ=ಬ್ರಹ್ಮಜ್ಞಾನಿಗಳಾದ ತೈಃ ಮುನಿಭಿಃ=ಬ್ರಹ್ಮಾದಿ ಜ್ಞಾನಿಗಳಿಂದ ಪ್ರತ್ಯುಪಸ್ಥೀಯಮಾನಃ=ಸ್ತುತಿಸಲ್ಪಟ್ಟವನಾಗಿ ಸ್ವಖುರಾಕ್ರಾಂತೇ ಸಲಿಲೇ=ತನ್ನ ಗೊರಸುಗಳಿಂದ ಆಕ್ರಮಿಸಲ್ಪಟ್ಟ ನೀರಿನಲ್ಲಿ ಅವನಿಂ=ಭೂಮಿಯನ್ನು ಉಪಾಧತ್ತ=ಇರಿಸಿದನು ॥೪೮॥

**ಸ ಇತ್ಥಂ ಭಗವಾನುರ್ವೀಂ ವಿಷ್ವಕ್ಸೇನಃ ಪ್ರಜಾಪತಿಃ ।**
**ರಸಾಯಾ ಲೀಲಯೋನ್ನೀತಾಮಪ್ಸು ನ್ಯಸ್ಯ ಯಯೌ ಹರಿಃ ॥೪೯॥**

ವಿಶ್ವಕ್‌ಸೇನಃ=ಸುತ್ತಲೂ ಸೇನೆಯುಳ್ಳ ಪ್ರಜಾಪತಿಃ=ಸಮಸ್ತ ಪ್ರಜೆಗಳಿಗೆ ಸ್ವಾಮಿಯಾದ ಭಗವಾನ್‌ಹರಿಃ=ಷಡ್ಗುಣಸಂಪನ್ನನಾದ ಆ ವರಾಹಾವತಾರಿಯಾದ ಹರಿಯು ಇತ್ಥಂ=ಈ ರೀತಿ ರಸಾಯಾಃ=ರಸಾತಲದಿಂದ ಲೀಲಯಾ=ಅನಾಯಾಸವಾಗಿ ಉನ್ನೀತಾಂ=ಉದ್ಧರಿಸಿದ ಉರ್ವೀಂ=ಭೂಮಿಯನ್ನು ಅಪ್ಸು=ನೀರಿನ ಮೇಲೆ ನ್ಯಸ್ಯ=ಇಟ್ಟು ಯಯೌ= ಹೊರಟನು ॥೪೯॥

**ಯ ಏವಮೇತಾಂ ಹರಿಮೇಧಸೋ ಹರೇಃ**
**ಕಥಾಂ ಸುಭದ್ರಾಂ ಕಥನೀಯಮಾಯಿನಃ ।**
**ಶ್ರುಣ್ವೀತ ಭಕ್ತ್ಯಾ ಶ್ರವಯೇತ ವೋಶತೀಂ**
**ಜನಾರ್ದನೋಽಸ್ಯಾಶು ಹೃದಿ ಪ್ರಸೀದತಿ ॥೫೦॥**

ಯಃ=ಯಾರು ಏವಂ=ಈ ರೀತಿ ಹರಿಮೇಧಸಃ ಪರಾಮಾತ್ಮನ ಜ್ಞಾನಜನಕವಾದ ಕಥನೀಯಮಾಯಿನಃ=ಅವಶ್ಯ ಹೇಳಲೇಬೇಕಾದ ಮಾಹಾತ್ಮ್ಯವುಳ್ಳ ಹರೇಃ=ಹರಿಯ ಅವತಾರವಾದ ವರಾಹದೇವರ ಏತಾಂ=ಈ ಉಶತೀಂ=ಕಮನೀಯವಾದ (ಸುಂದರಮನೋಹರ) ಸುಭದ್ರಾಂ=ಮಂಗಳಕರವಾದ ಕಥಾಂ=ಕಥೆಯನ್ನು ಭಕ್ತ್ಯಾ=ಭಕ್ತಿಯಿಂದ ಶ್ರುಣ್ವೀತ=ಕೇಳುವನೋ ಶ್ರವಯೇತ=(ಶ್ರಾವಯೇತ್ ಹ್ರಸ್ವ ಛಾಂದಸ) ಕೇಳಿಸುವನೋ ಅಸ್ಯ=ಅವನಿಗೆ ಜನಾರ್ದನಃ=ಶ್ರೀಹರಿಯು ಆಶು=ಬೇಗನೇ ಹೃದಿ=ಹೃದಯಲ್ಲಿ ಪ್ರಸೀದತಿ=ಪ್ರಸನ್ನನಾಗುವನು ॥೫೦॥

**ತಸ್ಮಿನ್ ಪ್ರಸನ್ನೇ ಸಕಲಾಶಿಷಾಂ ಪ್ರಭೌ**
**ಕಿಂ ದುರ್ಲಭಂ ತಾಭಿರಲಂ ಲವಾತ್ಮಭಿಃ ।**
**ಅನನ್ಯ ಭಕ್ತ್ಯಾ ಭಜತಾಂ ಗುಹಾಶಯಃ**
**ಸ್ವಯಂ ವಿಧತ್ತೇ ಸ್ವಗತಿಂ ಪರಃ ಪುಮಾನ್ ॥೫೦॥**

ಸಕಲಾಶಿಷಾಂ ಪ್ರಭೌ=ಎಲ್ಲ ಅಪೇಕ್ಷೆಗಳನ್ನು ಕೊಡಲು ಸಮರ್ಥನಾದ ತಸ್ಮಿನ್=ಶ್ರೀಹರಿಯು ಪ್ರಸನ್ನೇ=ಸಂತುಷ್ಟನಾದಾಗ ಕಿಂ ದುರ್ಲಭಂ=ಯಾವುದು ದುರ್ಲಭವು ? ಯಾವುದೂ ದುರ್ಲಭವಲ್ಲ ಎಲ್ಲವೂ ದೊರೆಯುವುದು. ಆದರೆ ಲವಾತ್ಮಭಿಃ=ತುಚ್ಛವಾದ, ತಾಭಿಃ=ಅಭಿಲಾಷೆಗಳಿಂದ ಅಲಂ=ಸಾಕು. ಅವುಗಳನ್ನು ಪ್ರಾರ್ಥಿಸಬಾರದು ಎಂದು ಭಾವ. ಹಾಗಾದರೆ ಭಗವದ್ಭಜನ ವ್ಯರ್ಥವೇ ? ಅಲ್ಲ ಪರಃ ಪುಮಾನ್=ಸರ್ವೋತ್ತಮನಾದ ಶ್ರೀಹರಿಯು ಗುಹಾಶಯಃ=ಹೃದಯಲ್ಲಿದ್ದು ಅನನ್ಯಭಕ್ತ್ಯಾ ಭಜತಾಂ=ಅನನ್ಯಭಾವದಿಂದ ಭಜಿಸುವರಿಗೆ ಸ್ವಗತಿಂ=ತನ್ನ ಲೋಕವನ್ನು ಅಥವಾ ತನ್ನನ್ನೇ ಸ್ವಯಂ ವಿಧತ್ತೇ=ತಾನೇ ಕೊಡುವನು ॥೫೦॥

ಸಾರಜ್ಞನಾದವನು ಅವಶ್ಯವಾಗಿ ಆದರದಿಂದ ಈ ಕಥೆಯನ್ನು ಕೇಳಲೇಬೇಕು ಎಂದು ಹೇಳುವರು –

**ಕೋ ನಾಮ ಲೋಕೇ ಪುರುಷಾರ್ಥಸಾರವಿತ್**
**ಪುರಾಕಥಾನಾಂ ಭಗವತ್ಕಥಾಸುಧಾಂ ।**
**ಆಪೀಯ ಕರ್ಣಾಂಜಲಿಭಿರ್ಭವಾಪಹಾ-**
**ಮಹೋ ವಿರಜ್ಯೇತ ವಿನಾ ನರೇತರಮ್ ॥೫೧॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಚತುರ್ದಶೋಽಧ್ಯಾಯಃ ॥*

ಪುರಾಕಥಾನಾಂ=ಪೂರ್ವದಲ್ಲಿ ನಡೆದ ಕಥಾಗಳಲ್ಲಿ ಇರುವ ಭವಾಪಹಾಂ= ಸಂಸಾರ ಮೋಚಕವಾದ ಭಗವತ್ಕಥಾಸುಧಾಂ=ಶ್ರೀಹರಿಯ ಕಥಾಮೃತವನ್ನು ಕರ್ಣಾಂಜಲಿಭಿಃ=ಕಿವಿಗಳೆಂಬ ಬೊಗಸೆಯಿಂದ ಆಪೀಯ=ಆದರದಿಂದ ಕೇಳಿ ನರೇತರಂ ವಿನಾ ಕಃ ವಿರಜ್ಯೇತ=ಪಶುವನ್ನು ಬಿಟ್ಟು ಯಾರು ವಿರಕ್ತರಾದಾರು? ಯಾರೂ ಆಗಲಾರರು. ಯಾರು ವಿರಕ್ತರಾಗುವರೋ ಅವರು ಪಶುಗಳೆಂದರ್ಥ.

ಇಲ್ಲಿ ವರಾಹದೇವರಿಂದ ಕೊಲ್ಲಲ್ಪಟ್ಟ ಹಿರಣ್ಯಾಕ್ಷನಾರು ? ಅದಿಸೃಷ್ಟಿಯಲ್ಲಿ ಬ್ರಹ್ಮದೇವರಿಂದ ಜನಿಸಿದವನೋ ? ಅಥವಾ ಈ ಮನ್ವಂತರದಲ್ಲಿ ಕಶ್ಯಪರಿಂದ ದಿತಿಯಲ್ಲಿ ಜನಿಸಿದವನೋ ? ಮೊದಲನೆಯವನಲ್ಲ, ಏಕೆಂದರೆ ಮುಂದಿನ

ಅಧ್ಯಾಯದಲ್ಲಿ ವಿದುರನ ಪ್ರಶ್ನೆಗೆ ಉತ್ತರಿಸುತ್ತ ಹಿರಣ್ಯಾಕ್ಷನು ಕಶ್ಯಪರ ಮಗನೆಂದು ಹೇಳಿದೆ. ಎರಡನೆಯವನೂ ಅಲ್ಲ ''ತಮಾದಿದೈತ್ಯಂ ಗದಯಾಽಽಪತಂತಂ'' ಎಂದು ಈ ಅಧ್ಯಾಯದಲ್ಲಿ, ಮುಂದೂ ಸಹ ''ಆದಿದೈತ್ಯೋ ಹಿರಣ್ಯಾಕ್ಷಃ'' ಎಂದು ಆದಿದೈತ್ಯ ಹಿರಣ್ಯಾಕ್ಷ ಎಂದು ಹೇಳಿದೆ ಮತ್ತು ಇಲ್ಲಿ ಹಲ್ಲಿನಿಂದ ಕೊಂದನೆಂದು ಹೇಳುತ್ತದೆ ಆದ್ದರಿಂದಲೇ ''ತದ್ರಕ್ತಪಂಕಾಂಕಿತತುಂಡಗಂಡಃ'' ಎಂದಿದ್ದಾರೆ. ಹಲ್ಲಿನಿಂದ ಕೊಲ್ಲದಿದ್ದರೆ ಮುಖವುರಕ್ತಾಂಕಿತವಾಗಬೇಕಿಲ್ಲವಷ್ಟೇ ! ಮುಂದಿನ ಅಧ್ಯಾಯದಲ್ಲಿ ಕೈಯಿಂದ ಕಿವಿಗೆ ಹೊಡೆದನೆಂದು ಹೇಳಿದೆ. ಒಬ್ಬನನ್ನೇ ಒಂದೇ ಕಾಲದಲ್ಲಿ ಹಲ್ಲಿನಿಂದ ಕೊಲ್ಲುವುದು ಮತ್ತು ಕೈಯಿಂದ ಕಿವಿಯ ಮೂಲದಲ್ಲಿ ಹೊಡೆದು ಕೊಲ್ಲುವುದು ಕೂಡಲಾರದು. ಅಲ್ಲದೇ ಈ ಅಧ್ಯಾಯದಲ್ಲಿ ಪ್ರಳಯ ಜಲದಲ್ಲಿ ಮುಳುಗಿದ ಭೂಮಿಯ ಉದ್ಧರಣ ಹೇಳಿದೆ. ಇದು ಕಶ್ಯಪ ಪುತ್ರನಾದ ಹಿರಣ್ಯಾಕ್ಷನೆಂದರೆ ಸಮಂಜಸವಾಗಲಾರದು. ಆಗ ಪ್ರಳಯಜಲ ಇರಲಿಲ್ಲವಷ್ಟೇ ! ಆದ್ದರಿಂದ ಹೇಗೆ ತಿಳಿಯಬೇಕು ಎಂಬ ಶಂಕೆ ಬಂದಾಗ ಅಧ್ಯಾಯದ ತಾತ್ಪರ್ಯವನ್ನು ಆಚಾರ್ಯರು ಪ್ರಮಾಣದಿಂದಲೇ ಹೇಳುವರು -

ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂ ದಂಷ್ಟ್ರಯಾ ಹತಃ ।
ಸ ಏವ ಪಾರ್ಷದಾವಿಷ್ಟಃ ದ್ವಿತೀಯಃ (ಯಂ) ಕರ್ಣತಾಡನಾತ್ ॥
ಪೂರ್ವಂ ಲಯೋದಕೇ ಮಗ್ನಾಂ ದ್ವಿತೀಯಂ ತೇನ ಮಜ್ಜಿತಾಂ ।
ಭುವಮುದ್ಧರತ್ಯೈವಾಸೌ ಹರಿಣಾ ಕ್ರೋಡಮೂರ್ತಿನಾ'' ॥ಇತಿ ಬ್ರಹ್ಮಾಂಡೇ

ಬ್ರಹ್ಮನಿಂದ ಹುಟ್ಟಿದ ಹಿರಣ್ಯಾಕ್ಷನೇ (ಕಾಶ್ಯಪನಲ್ಲ) ಮೊದಲಿಗೆ ಹಲ್ಲಿನಿಂದ ಕೊಲ್ಲಲ್ಪಟ್ಟನು. (ಈ ಅಧ್ಯಾಯದ ತಾತ್ಪರ್ಯವಿದು) ಅವನೇ ವಿಜಯನೆಂಬ ಶ್ರೀಹರಿಯ ದ್ವಾರಪಾಲಕನಲ್ಲಿ ಆವಿಷ್ಟನಾದನು. ಅವನನ್ನು ಕಿವಿಗೆ ಹೊಡೆದು ಕೊಂದನು. ಅಂತು ಆದಿಸೃಷ್ಟಿಯಲ್ಲಿ ಬ್ರಹ್ಮನಿಂದ ಜನಿಸಿದ ಹಿರಣ್ಯಾಕ್ಷನನ್ನೇ ವರಾಹದೇವರಿಂದ ಹಲ್ಲಿನಿಂದ ಕೊಲ್ಲಲ್ಪಟ್ಟನೆಂದು ಈ ಅಧ್ಯಾಯದಲ್ಲಿ ಹೇಳಿದೆ. ಮುಂದಿನ ಅಧ್ಯಾಯದಲ್ಲಿ ಭಗವಂತನ ಪಾರ್ಷದ ವಿಜಯನಲ್ಲಿ ಆವಿಷ್ಟನಾದವನಿಗೆ ಮತ್ತೊಮ್ಮೆ ಕೈಯಿಂದ ಹನನ ಹೇಳಿದೆ. ಆದ್ದರಿಂದ ಒಂದೇ ವ್ಯಕ್ತಿಗೆ ದೇಹಭೇದದಿಂದ ಎರಡು ಸಲ ಸಂಹಾರ ಎರಡು ಅಧ್ಯಾಯಗಳಲ್ಲಿ ವಿವಕ್ಷಿತವಾಗಿದೆ. ಆದ್ದರಿಂದ ವಿರೋಧವಿಲ್ಲ. ಇನ್ನು ಎರಡನೇ ಸಲ ಪ್ರಳಯೋದಕವಿಲ್ಲ ಎಂಬ ಶಂಕೆಗೆ ಉತ್ತರ:- ಮೊದಲಿಗೆ ಪ್ರಳಯಜಲದಲ್ಲಿ ಮುಳುಗಿದ ಭೂಮಿಯನ್ನು ಉದ್ಧರಿಸುವ ವರಾಹರೂಪಿ ಹರಿಯಿಂದ ಬ್ರಹ್ಮಜ ಹಿರಣ್ಯಾಕ್ಷ ಸಾಯಿಸಲ್ಪಟ್ಟನು. ಎರಡನೆಯ ಸಲ ಹಿರಣ್ಯಾಕ್ಷನು ಸಮುದ್ರಲ್ಲಿ ಭೂಮಿಯನ್ನು ಮುಳುಗಿಸಿದ್ದನು. ಅದನ್ನು ಉದ್ಧರಿಸುವ

ವರಾಹರೂಪಿ ಹರಿಯಿಂದ ಕೈಯಿಂದ ಹೊಡೆಸಿಕೊಂಡು ಸತ್ತನು ಎಂದು ಭಾವ. ಕಾರಣ ಪ್ರಳಯಜಲವಿಲ್ಲದಿದ್ದರೂ ವಿರೋಧವಿಲ್ಲ.

ಹೀಗೆ ಸ್ಪಷ್ಟ ಏಕೆ ಹೇಳುವುದಿಲ್ಲ ಎಂದರೆ ಹೇಳುವರು–

**ವ್ಯತ್ಯಾಸೇನಾಪಿ ಚೋಚ್ಯಂತೇ ಅವಿವೇಕೇನ ಕುತ್ರಚಿತ್ ।**
**ದುಷ್ಟಾನಾಂ ಮೋಹನಾರ್ಥಾಯ ತತ್ರ ತತ್ರ ಕಥಾಃ ಕ್ವಚಿತ್ ॥ಇತಿ ಸ್ಕಾಂದೇ**
**ಅವಿವೇಕೇನ ಇತ್ಯಸ್ಯ ವಿವಿಚ್ಯ ನೋಚ್ಯತೇ ಇತ್ಯರ್ಥಃ । ನ ತು ಕರ್ತುರವಿವೇಕಃ ।**

**"ಸರ್ವಜ್ಞಸ್ಯ ಕುತೋಽಜ್ಞಾನಂ ವ್ಯಾಸಸ್ಯೋದಾರಕರ್ಮಣಃ"**
**(ಇತ್ಯುಕ್ತತ್ವಾತ್) ಇತ್ಯುತ್ತರಾತ್ । "ದುಷ್ಟಾನಾಂ ಮೋಹನಾರ್ಥಾಯ"**
**ಇತಿ ಚ ।**

ಕೆಲವು ಗ್ರಂಥಗಳಲ್ಲಿ ಅಲ್ಲಲ್ಲಿ ಕಾಲವ್ಯತ್ಯಾಸದಿಂದ ಪುರುಷವ್ಯತ್ಯಾಸದಿಂದಲೂ ಹೇಳಲ್ಪಡುವುದು. (ಉದಾಹರಣೆ :- ಶ್ರೀಕೃಷ್ಣನು ಹೋದಮೇಲೆ ಭೀಮಸೇನನು ದುರ್ಯೋಧನನನ್ನು ನೋಡಿ ನಕ್ಕನೆಂದು ಕೆಲವು ಕಡೆ ಹೇಳುವರು. ಇಲ್ಲಿಯೇ ಹತ್ತನೇ ಸ್ಕಂಧದಲ್ಲಿ ರಾಜಸೂಯ ಯಾಗವನ್ನು ಹೇಳುವಾಗ ದಿಗ್ವಿಜಯವನ್ನು ಹೇಳಿದ ಮೇಲೆ ಜರಾಸಂಧನ ವಧೆ ಹೇಳಿರುವರು ಇದು ಕಾಲವ್ಯತ್ಯಾಸ. ಶ್ರೀಕೃಷ್ಣನು ದ್ರೌಪದಿಗೆ ಅರ್ಜುನನ ಬಾಣದಿಂದ ಹತರಾದ ದುರ್ಯೋಧನಾದಿಗಳನ್ನು ತೋರಿಸುವೆನು ಎಂದು ಹೇಳುವನು ಇದು ಪುರುಷವ್ಯತ್ಯಾಸಕ್ಕೆ ಉದಾಹರಣೆ ತಿಳಿಯಬೇಕು) ಎಂದು ಸ್ಕಾಂದದಲ್ಲಿದೆ. ಅವಿವೇಕೇನ ಎಂಬುದಕ್ಕೆ ವಿವೇಕ ಮಾಡಿ ಸ್ಪಷ್ಟವಾಗಿ ಕೆಲವು ಕಡೆ ಹೇಳುವುದಿಲ್ಲ ಎಂದರ್ಥ ಹೊರತು ಪುರಾಣ ಮಾಡುವರಿಗೆ ಸರಿಯಾದ ಜ್ಞಾನವಿಲ್ಲದ್ದರಿಂದ ಎಂದರ್ಥವಲ್ಲ. ಸ್ಕಾಂದಪುರಾಣದಲ್ಲಿಯೇ ಮುಂದಿನ ವಾಕ್ಯದಲ್ಲಿ ಸರ್ವಜ್ಞನಾದ ಉತ್ಕೃಷ್ಟ ಕ್ರಿಯೆಗಳುಳ್ಳ ವ್ಯಾಸನಿಗೆ ಎಲ್ಲಿಯ ಅಜ್ಞಾನವೆಂದು ಹೇಳಿ ನಿಷೇಧಿಸಿದೆ. ಈ ರೀತಿ ಹೇಳಲು ದುಷ್ಟಜನ ಮೋಹನವೇ ಮುಖ್ಯ ಕಾರಣವೆಂದು ತಿಳಿಯಬೇಕು.

ಇಲ್ಲಿಗೆ ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು.

## ಹದಿನಾಲ್ಕನೆಯ ಅಧ್ಯಾಯದ ತಾತ್ಪರ್ಯ

ಶುಕಾಚಾರ್ಯರು - ಮೈತ್ರೇಯರು ಹೇಳಿದ ಪವಿತ್ರವಾದ ಮಾತನ್ನು ಕೇಳಿದ ವಿದುರರು ಪರಮಾತ್ಮನ ಕಥೆಯನ್ನು ಕೇಳುವುದರಲ್ಲಿ ಆದರವುಳ್ಳವರಾಗಿ ಮತ್ತೆ ಪ್ರಶ್ನೆ ಮಾಡಿದರು.

ವಿದುರ - ಚಕ್ರವರ್ತಿಗಳಾದ ಸ್ವಾಯಂಭುವಮನುರಾಜರು ಬ್ರಹ್ಮದೇವರಿಗೆ ಅತ್ಯಂತ ಪ್ರಿಯರಾದ ಮಕ್ಕಳು. ಶತರೂಪಾದೇವಿಯನ್ನು ಹೆಂಡತಿಯಾಗಿ ಮಾಡಿಕೊಂಡರು. ಅವರ ಚರಿತ್ರೆಯನ್ನು ವಿಸ್ತಾರವಾಗಿ ತಿಳಿಸಿರಿ. ಅವರು ಮುಂದೇನು ಮಾಡಿದರು ? ಮೊದಲನೆಯ ರಾಜರಾದ ಅವರ ಚರಿತ್ರೆಯನ್ನು ಕುತೂಹಲಿಯಾದ ನನಗೆ ವಿವರಿಸಿರಿ. ಭಗವದ್ಭಕ್ತರಾದ ಅವರ ಚರಿತ್ರೆಯನ್ನು ಅವಶ್ಯ ಹೇಳಬೇಕು. ಮೋಕ್ಷಾಪೇಕ್ಷಿಗಳು ಬಹುಕಾಲ ಶ್ರಮಪಟ್ಟು ಶಾಸ್ತ್ರಾರ್ಥವನ್ನು ಶ್ರವಣಮಾಡುವರು. ಇದರ ಪ್ರಯೋಜನವೇ ಶ್ರೀಹರಿಯ ಗುಣಶ್ರವಣ ಮತ್ತು ಶ್ರೀಹರಿಯನ್ನು ತಮ್ಮ ಹೃದಯದಲ್ಲಿ ಕಾಣುವ ಭಗವದ್ಭಕ್ತರ ಕಥಾಶ್ರವಣ. ಹೀಗೆಂದು ಜ್ಞಾನಿಗಳು ಪ್ರಶಂಸಿರುವರು.

ಶುಕಾಚಾರ್ಯರು - ಹೀಗೆ ವಿದುರರಿಂದ ಶ್ರೀಹರಿಯ ಕಥೆಯಲ್ಲಿ ಪ್ರೇರಿತರಾದ ಮೈತ್ರೇಯರು ಹೊಗಳಿದರು. ವಿನೀತರೂ, ಭಗವದ್ಭಕ್ತರೂ ಆದ ವಿದುರರಿಗೆ ಕಥೆ ಹೇಳತೊಡಗಿದರು.

ಮೈತ್ರೇಯರು - ತಮ್ಮ ಹೆಂಡತಿಯೊಂದಿಗೆ ಸೃಷ್ಟರಾದ ಸ್ವಾಯಂಭುವ ಮನುರಾಜರು ಅಂಜಲಿಯನ್ನು ಮುಗಿದು ಭಕ್ತಿಯಿಂದ ಬ್ರಹ್ಮದೇವರಿಗೆ ನಮಸ್ಕರಿಸಿ 'ಬ್ರಹ್ಮ, ತಾವು ಎಲ್ಲ ಜೀವರಿಗೂ ಜನ್ಮದಾತರು, ವೃತ್ತಿಯನ್ನು ಕಲ್ಪಿಸಿಕೊಡುವವರು, ಪಾಲಕರು. ತಮ್ಮ ಮಕ್ಕಳಾದ ನಾವು ತಮ್ಮನ್ನು ಸೇವಿಸಲೇಬೇಕು. ಯಾವ ಬಗೆಯಿಂದ ತಮ್ಮನ್ನು ಸೇವಿಸೋಣ ? ನಾವು ಮಾಡುವ ಕೆಲಸ ಈ ಲೋಕದಲ್ಲಿ ವಿಶಾಲವಾದ ಕೀರ್ತಿಯನ್ನೂ ಪರಲೋಕದಲ್ಲಿ ಸದ್ಗತಿಯನ್ನೂ ತಂದುಕೊಡು-ವಂತಹುದಾಗಬೇಕು. ನಾವು ಮಾಡುವ ನಿತ್ಯನೈಮಿತ್ತಿಕ ಕರ್ಮಗಳೇ ಹರಿಪೂಜೆ-ಯಾಗುವುವು. ಅಂತಹ ಕರ್ಮಗಳನ್ನು ನಮಗೆ ಆಜ್ಞಾಪಿಸಿರಿ. ತಮಗೆ ನಮಸ್ಕಾರ' ಎಂದು ಪ್ರಾರ್ಥಿಸಿದರು. ಆಗ ಬ್ರಹ್ಮದೇವರು 'ಮಗು, ನಿನ್ನ ವಿನಯದಿಂದ ನನಗೆ ಅತ್ಯಂತ ಪ್ರೀತಿಯಾಗಿರುವುದು. ನೀವಿಬ್ಬರೂ ಸುಕ್ಷೇಮಿಗಳಾಗಿ ಬಾಳಿರಿ. ನೀವು ನಿರ್ವ್ಯಾಜವಾದ ಮನಸ್ಸಿನಿಂದ ಸ್ವತಃ ನಿಮ್ಮನ್ನೇ ನನಗೆ ಒಪ್ಪಿಸಿರುವಿರಿ. ಮಕ್ಕಳಾದರೂ ತಂದೆಗೆ ಮಾಡುವ ಸೇವೆಯೇ ಇದು. ಮಾತ್ಸರ್ಯವಿಲ್ಲದೆ ತಂದೆಯ ಅಪ್ಪಣೆಯಂತೆ ನಡೆಯುವವರಾಗಬೇಕು. ನೀನು ಈಕೆಯಲ್ಲಿ ನಿನ್ನಂತೆಯೇ ಗುಣಶಾಲಿಗಳಾದ ಮಕ್ಕಳನ್ನು ಪಡೆ, ಧರ್ಮದಿಂದ ಭೂಮಿಯನ್ನು ಪಾಲನೆ-ಮಾಡು. ಸರ್ವೋತ್ತಮನಾದ ಶ್ರೀಹರಿಯನ್ನು ಯಜ್ಞಯಾಗಗಳಿಂದ ಪೂಜಿಸು.

ಇದರೊಂದಿಗೆ ರಾಜನಾದ ನೀನು ಮಾಡುವ ಪ್ರಜಾಪಾಲನೆ ನನಗೆ ನೀನು ಮಾಡುವ ಅತ್ಯುತ್ತಮವಾದ ಶುಶ್ರೂಷೆ ಇದರಿಂದ ಶ್ರೀಹರಿಯೂ ಪ್ರಸನ್ನ-ನಾಗುವನು. ಪ್ರತಿಯೊಬ್ಬರೂ ತಾವು ಮಾಡುವ ಕೆಲಸದಿಂದ ಶ್ರೀಹರಿಯನ್ನು ಪ್ರಸನ್ನೀಕರಿಸಿಕೊಳ್ಳಬೇಕು. ಹಾಗಿಲ್ಲದೆ ಹೋದಲ್ಲಿ ಅವರ ಕೆಲಸಗಳು ಕೇವಲ ಆಯಾಸಕ್ಕೆ ಕಾರಣವೇ ಹೊರತು ಯಾವ ಪ್ರಯೋಜನಕ್ಕೂ ಕಾರಣಗಳಾಗು-ವುದಿಲ್ಲ. ಶ್ರೀಹರಿಯನ್ನೇ ತಿರಸ್ಕರಿಸಿದ ಮೇಲೆ ಶ್ರೇಯಸ್ಸೆಲ್ಲಿ ಬಂತು ! ಎಂದು ನುಡಿದರು.

ಆಗ ಮನುರಾಜರು 'ಬ್ರಹ್ಮದೇವ, ತಾವು ನಮ್ಮ ಮನಸ್ಸಿನ ದೋಷಗಳನ್ನೆಲ್ಲ ದೂರ ಮಾಡುವಿರಿ. ಸಮರ್ಥರಾದ ತಮ್ಮ ಅಪ್ಪಣೆಯಂತೆ ನಡೆಯುತ್ತೇನೆ. ಆದರೆ ನನಗಾಗಲಿ ನನ್ನ ಪ್ರಜೆಗಳಿಗಾಗಲಿ ವಾಸಕ್ಕೆ ಅಗತ್ಯವಾದ ಸ್ಥಳವನ್ನು ಮೊದಲು ಮಾಡಿಕೊಡಿ. ಎಲ್ಲ ಪ್ರಾಣಿಗಳಿಗೂ ನಿವಾಸಕ್ಕೆ ಯೋಗ್ಯವಾದ ಭೂಮಿಯು ದಿನ ಪ್ರಳಯದ ನೀರಿನಲ್ಲಿ ಮುಳುಗಿಹೋಗಿದೆ. ಅದನ್ನು ಮೇಲಕ್ಕೆ ತರುವ ಪ್ರಯತ್ನ ಮಾಡಬೇಕಾಗಿದೆ.' ಎಂದು ಮತ್ತೆ ವಿಜ್ಞಾಪಿಸಿಕೊಂಡರು.

ಹೀಗೆ ಪ್ರಾರ್ಥಿತರಾದ ಬ್ರಹ್ಮದೇವರು 'ಭೂಮಿಯು ನೀರಿನಲ್ಲಿ ಮುಳುಗಿ ಹೋಗಿದೆ. ಇದನ್ನು ಮೇಲಕ್ಕೆ ತರುವುದೆಂತು ?' ಎಂದು ಸಾಮಾನ್ಯ ಜನರಂತೆ ವಿಡಂಬನೆ ಮಾಡುತ್ತ ಆಲೋಚಿಸಿದರು. ಸರ್ವಜ್ಞರಾದ ಅವರಿಗೆ ವಿಷಯವು ತಿಳಿಯದೆ ಇಲ್ಲ. ಈ ಹಿಂದೆಯೇ ನಾನು ಉಕ್ಕಿ ಬಾರದಿರುವಂತೆ ನೀರನ್ನು ಶೋಷಿಸಿರುತ್ತೇನೆ. ಭೂಮಿಯನ್ನು ಅದರ ಮೇಲೆ ನಿಲ್ಲಿಸಿದ್ದೇನೆ. ಆದರೂ ನೀರು ಮತ್ತೆ ಉಕ್ಕಿ ಬಂದು ಭೂಮಿಯನ್ನು ಅಲ್ಲಾಡಿಸುತ್ತಿದೆ. ಇದೋ ದೇವತೆಗಳು, ಅಸುರರು, ಪಿತೃಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ಹಾವುಗಳು, ಬೆಟ್ಟಗಳು ಇವೇ ಮೊದಲಾದ ಎಲ್ಲ ಬಗೆಯ ಉತ್ತಮ ಅಧಮ ಪ್ರಾಣಿಗಳನ್ನು ನಾನು ಸೃಷ್ಟಿಸುತ್ತಿರುವಂತೆಯೇ ಭೂಮಿಯು ಪ್ರಜೆಗಳ ಭಾರದಿಂದ ನೀರಿನಲ್ಲಿ ಮುಳುಗಿಹೋಯಿತು. ಶ್ರೀಹರಿಯಿಂದ ಸೃಷ್ಟಿಯಲ್ಲಿ ನಿಯುಕ್ತನಾದ ನಾನು ಸೃಷ್ಟಿಯನ್ನು ಮುಂದುವರಿಸುವುದೆಂತು ? ಈಗ ನಾನು ಮಾಡಬೇಕಾದುದಾರೂ ಏನು ? ಯಾವ ಶ್ರೀಹರಿಯಿಂದ ನಾನು ವ್ಯಕ್ತನಾದೆನೋ ಆ ಸರ್ವೇಶ್ವರನೇ ನನಗೆ ದಾರಿ ತೋರಬೇಕು' ಎಂದು ಬ್ರಹ್ಮದೇವರು ಆಲೋಚಿಸುತ್ತಿದ್ದಂತೆಯೇ ಅವರ ಮೂಗಿನ ಹೊಳ್ಳೆಯಿಂದ ಹೆಬ್ಬೆರಳಿನ ಗಾತ್ರದ ಒಂದು ಹಂದಿ (ವರಾಹ) ಮರಿಯು ಹೊರಬಂತು. ಅಲ್ಲಿದ್ದ ಮರೀಚಿಗಳೇ ಮೊದಲಾದ ಬ್ರಾಹ್ಮಣರೂ, ಸ್ವಾಯಂಭುವ ಮನುರಾಜರೂ, ಸನತ್ಕುಮಾರರೇ ಮೊದಲಾದ ಮುನಿಗಳೂ, ಬ್ರಹ್ಮದೇವರೂ ಎಲ್ಲರೂ ನೋಡುತ್ತಿದ್ದಂತೆಯೇ ಆಕಾಶದಲ್ಲಿದ್ದ ಆ ಮರಿಯು ಆನೆಯಂತೆ ದೊಡ್ಡದಾಗಿ ಬೆಳೆಯಿತು. ಇದಕ್ಕಿಂತ ಹೆಚ್ಚಿನ ಆಶ್ಚರ್ಯವುಂಟೆ ? ಆ ಸೂಕರ ರೂಪವನ್ನು ನೋಡಿ ಬ್ರಹ್ಮದೇವರು 'ನಮ್ಮೆದುರಿಗಿರುವ ಈ ದಿವ್ಯ ಸೂಕರವು ಯಾರಿರಬಹುದು ? ಋಷಿಗಳೇ, ನಾನು ಏನು ಮಾಡಬೇಕೆಂದು ಖೇದಗೊಂಡಿದ್ದಾಗ ಈ ಪ್ರಾಣಿಯು ನನ್ನ ಮೂಗಿನಿಂದ ಹೊರಬಂದಿರುವುದು. ಬಂದಾಗ ಕೇವಲ ಹೆಬ್ಬೆರಳಿನ ಕೊನೆಯಷ್ಟಿದ್ದ ಇದು ಒಂದೇ ಕ್ಷಣದಲ್ಲಿ ದೊಡ್ಡ ಬಂಡೆಯಷ್ಟು ದೊಡ್ಡದಾಗಿ ಹೋಯಿತು. ನನ್ನ ಮನಸ್ಸಿಗೆ ಈ ಬಗೆಯ ಆಲೋಚನೆಗಳನ್ನು ತಂದೊಡ್ಡಿ ಖೇದಗೊಳಿಸಿದ ಈ ವರಾಹವು ಸರ್ವೋತ್ತಮನಾದ ಯಜ್ಞವರಾಹ-ರೂಪಿಯಾದ ಶ್ರೀಹರಿಯೇ ಇರಬೇಕು.' ಎಂದು ಮಕ್ಕಳೊಂದಿಗೆ ವಿಮರ್ಶೆ ಮಾಡುತ್ತಿದ್ದಾಗಲೇ ಆ ದೊಡ್ಡ ಬೆಟ್ಟದ ಆಕಾರದ ಯಜ್ಞವರಾಹ ರೂಪಿಯಾದ ಶ್ರೀಹರಿಯು ಒಂದು ಗರ್ಜನೆ ಮಾಡಿದನು. ಈ ಗರ್ಜನೆಯು ದಿಕ್ಕುಗಳಲ್ಲೆಲ್ಲ ಮರುದನಿಯನ್ನು ತುಂಬಿತು. ಈ ಮಹಾಶಬ್ದದಿಂದ ಈ ವರಾಹವು ಸಾಮಾನ್ಯ-ವರಾಹವಲ್ಲವೆಂದೂ, ಶ್ರೀಹರಿಯೇ ಈ ತನ್ನ ರೂಪದಿಂದ ವ್ಯಕ್ತನಾಗಿರುವನೆಂದೂ ತಿಳಿದ ಬ್ರಹ್ಮದೇವರೂ ಅಲ್ಲಿದ್ದ ಋಷಿಗಳೂ ಎಲ್ಲರೂ ಸಂತೋಷಪಟ್ಟರು.

ಶ್ರೀಹರಿಯು ತನ್ನ ಇಚ್ಛೆಯಿಂದಲೇ ಈ ರೂಪದಿಂದ ಕಾಣಿಸಿಕೊಂಡನು. ಅವನ ಗುರಗರಾಶಬ್ದವು ಎಲ್ಲರ ಮನಸ್ಸಿನ ಸಂದೇಹವನ್ನು ಹೋಗಲಾಡಿಸಿತು. ಈ ಸಮಯದಲ್ಲಿ ತಮ್ಮ ರಕ್ಷಣೆಗಾಗಿ ಬಂದ ಶ್ರೀಹರಿಯನ್ನು ಜನೋಲೋಕ, ತಪೋಲೋಕ ಮತ್ತು ಸತ್ಯಲೋಕ ನಿವಾಸಿಗಳಾದ ಅವರೆಲ್ಲರೂ ವೇದ ಮಂತ್ರಗಳಿಂದ ಸ್ತೋತ್ರ ಮಾಡಲಾರಂಭಿಸಿದರು. ಆ ವೇದ ವಾಕ್ಯಗಳನ್ನು ಸರ್ವವೇದ ಪ್ರತಿಪಾದ್ಯನಾದ ಶ್ರೀಹರಿಯು ಕೇಳುತ್ತ ಮತ್ತೆ ಅವರಿಗೆ ಆನಂದವನ್ನುಂಟು ಮಾಡಲು ಒಂದು ಸಲ ಗರ್ಜಿಸಿ ಮದ್ದಾನೆಯು ಕೊಳವನ್ನು ಪ್ರವೇಶಿಸುವಂತೆ ಆ ಪ್ರಳಯೋದಕವನ್ನು ಪ್ರವೇಶಿಸಿದನು. ಬಾಲವನ್ನೆತ್ತಿ ಆಕಾಶದಲ್ಲಿಯೇ ನುಗ್ಗಿಬರುತ್ತಾ, ಒರಟಾದ ತನ್ನ ಕೇಸರಗಳನ್ನು ಕಂಪನಮಾಡುತ್ತಾ, ಗೊರಸುಗಳಿಂದ ಮೋಡಗಳನ್ನು ಖಂಡಿಸುತ್ತಾ, ಬಿಳಿಯ ಕೋರೆಹಲ್ಲೆಂಬ ಕೋಡುಗಲ್ಲಿನಿಂದ ಕೂಡಿದ ಆ ಪರ್ವತಾಕಾರದ ವರಾಹಮೂರ್ತಿಯು ಪ್ರಕಾಶಮಾನಗಳಾದ ಕಣ್ಣುಗಳಿಂದ ಸುತ್ತಲೂ ನೋಡಿ ಮೂಗಿನಿಂದ ಭೂಮಿಯು ಇರುವ ಸ್ಥಳವನ್ನು ಮೂಸಿನೋಡುತ್ತಾ ಅಲ್ಲಿದ್ದ ಜನರು ಸ್ತೋತ್ರ ಮಾಡುತ್ತಿದ್ದಂತೆಯೇ ಅವರ ಕಡೆಗೆ ಕೃಪಾದೃಷ್ಟಿಯನ್ನು ಬೀರಿ ನೀರಿನೊಳಹೊಕ್ಕನು. ವಜ್ರಕೂಟದಂತೆ ಘಟ್ಟಿಯಾದ ಆ ದೇಹದಿಂದ ವೇಗವಾಗಿ ಶ್ರೀಹರಿಯು ಮುನ್ನುಗ್ಗಿದ್ದರ ಫಲವಾಗಿ ಆ ಜಲನಿಧಿಯು ಹೊಟ್ಟೆಯೊಡೆದು ಅರಚಿಕೊಳ್ಳುತ್ತ ಕೈಗಳನ್ನೆತ್ತಿ ಕೂಗಿಕೊಳ್ಳುವ ಆರ್ತನಂತೆ ದೊಡ್ಡ ದೊಡ್ಡ ಅಲೆಗಳ ಧ್ವನಿಯಿಂದ 'ಯಜ್ಞಮೂರ್ತಿಯೇ, ನನ್ನನ್ನು ಕಾಪಾಡು' ಎಂದು ಅಂಗಲಾಚಿದನು. ಸಕಲ ವೇದ ವೇದ್ಯನಾದ ಶ್ರೀಹರಿಯು ತೀಕ್ಷ್ಣಗಳಾದ ತನ್ನ ಗೊರಸುಗಳಿಂದ ಆ ಪ್ರಳಯ ಜಲವನ್ನು ಭೇದಿಸುತ್ತಾ ಒಳಗಿದ್ದ ಪ್ರಾಣಿಗಳೆಲ್ಲ ದಡಕ್ಕೆ ಹೊಡೆದುಕೊಂಡು ಬರುವಂತೆ ನೀರನ್ನು ಕಲಕಿ ಪಾತಾಳದಲ್ಲಿ (ಮುಳುಗಿದ್ದ) ಭೂಮಿಯನ್ನು ಕಂಡನು. ಹಿಂದೆ ಶ್ರೀಹರಿಯು ಪ್ರಳಯಕಾಲದಲ್ಲಿ ಮಲಗಲಿಚ್ಛೆ-ಪಟ್ಟು ಈ ಭೂಮಿಯನ್ನೇ ಎಲ್ಲ ಪ್ರಾಣಿಗಳ ವಾಸಕ್ಕಾಗಿ ನೀರಿನ ಮೇಲೆ ತಂದಿಟ್ಟಿದ್ದನು. ಈಗ ಮತ್ತೆ ಆ ಭೂಮಿಯನ್ನು ತನ್ನ ಕೋರೆಹಲ್ಲಿನಿಂದೆತ್ತಿಕೊಂಡು ರಸಾತಳದಿಂದ ಮೇಲಕ್ಕೆ ಬರುತ್ತಿದ್ದನು. ಆಗ ಆದಿ ಹಿರಣ್ಯಾಕ್ಷನೆಂಬ ದೈತ್ಯನು ಗದಾಯುಧವನ್ನು ಹಿಡಿದು ಈ ವರಾಹನ ಮೇಲೆ ನುಗ್ಗಿಬಂದನು. ಚಕ್ರಾಯುಧದಂತೆ ಶ್ರೀಹರಿಯು ಕುಪಿತನಾಗಿ ತನ್ನನ್ನು ತಡೆಯುತ್ತಿದ್ದ ಆ ದೈತ್ಯನನ್ನು ಸಿಂಹವು ಲೀಲಾಜಾಲವಾಗಿ ಆನೆಯನ್ನು ಸಂಹರಿಸುವಂತೆ ನೀರಿನಲ್ಲಿಯೇ ಸಂಹರಿಸಿದನು. ಶ್ರೀಹರಿಯ ಪರಾಕ್ರಮವನ್ನು ಸಹಿಸುವವರಾರು ? ದಡವನ್ನು ಕೋರೆಹಲ್ಲುಗಳಿಂದ ಕೆರೆದ ಆನೆಯು ಕದಡಿದ ಕೆಸರಿನಿಂದ ಲಿಪ್ತವಾಗುವಂತೆ ಆ ಹಿರಣ್ಯಾಕ್ಷನ ರಕ್ತದಿಂದ ವರಾಹನ ಮೂತಿ ಮತ್ತು ಗಲ್ಲಗಳು ಕೆಂಪಾದವು. (ಇದು ಆದಿವರಾಹನು

ಆದಿಹಿರಣ್ಯಾಕ್ಷನನ್ನು ಕೊಂದ ವಿಷಯ.) ನೀಲವರ್ಣದ ಈ ವರಾಹನು ಬೆಳ್ಳಗಿರುವ ತನ್ನ ದಂತದ ಕೊನೆಯಿಂದ ಭೂಮಿಯನ್ನು ಹೊತ್ತು ತರುತ್ತಿರುವುದನ್ನು ಕಂಡ ಬ್ರಹ್ಮದೇವರೇ ಮೊದಲಾದ ಎಲ್ಲ ದೇವತೆಗಳೂ ಸರ್ವೋತ್ತಮನಾದ ಶ್ರೀಹರಿಯ ಅವತಾರ ಲೀಲೆಯನ್ನು ಅರ್ಥಮಾಡಿಕೊಂಡು ಕೈಮುಗಿದು ವೇದ ಮಂತ್ರಗಳಿಂದ ಅವನನ್ನು ಸ್ತೋತ್ರಮಾಡಿದರು.

'ದೇವದೇವ, ನಿನ್ನನ್ನು ಯಾರೂ ಗೆಲ್ಲಲಾರರು. ನೀನು ಯಾಗ ಮೊದಲಾದ ಸತ್ಕಾರ್ಯಗಳಿಂದ ಸೇವಿಸಲ್ಪಡುವವನು. ಈ ನಿನ್ನ ವರಾಹಾಕಾರವು ಅಪ್ರಾಕೃತ-ವಾದುದು. ನಿನ್ನ ದೇಹಕ್ಕೆ ಅಂಟಿಕೊಂಡಿರುವ ನೀರು ಬಿದ್ದುಹೋಗುವಂತೆ ನಿನ್ನ ದೇಹವನ್ನು ಕೊಡುವುತ್ತಿದ್ದಿ. ನಿನ್ನ ಒಂದೊಂದು ರೋಮಕೂಪಗಳಲ್ಲಿಯೂ ಸಮುದ್ರಗಳು ಅಡಗಿಕೊಂಡಿವೆ. ನಿಮಿತ್ತಕ್ಕಾಗಿ ನೀನು ಈ ರೂಪವನ್ನು ತೆಗೆದು ಕೊಂಡಿರುವೆ. ನಿನ್ನ ಈ ರೂಪವನ್ನು ಪಾಪಿಗಳು ಕಾಣಲಾರರು. ಪುಣ್ಯವಂತರು ಸುಲಭವಾಗಿ ಕಾಣುವರು. ನಿನ್ನ ಈ ದೇಹವು ಯಜ್ಞಕ್ಕೆ ಬೇಕಾದ ಎಲ್ಲ ಸಾಮಗ್ರಿಗಳಿಗೂ ಆಶ್ರಯವಾದ್ದರಿಂದ ಯಜ್ಞಾತ್ಮಕವೆನಿಸುವುದು. ಯಜ್ಞನೆಂದು ಪ್ರಸಿದ್ಧನಾದ ವಿಷ್ಣುವೇ ನೀನು. ನಿನ್ನ ಚರ್ಮದಲ್ಲಿ ವೇದಗಳೂ, ಕೂದಲಲ್ಲಿ ದರ್ಭೆಯೂ, ಕಣ್ಣಿನಲ್ಲಿ ತುಪ್ಪವೂ, ಪಾದಗಳಲ್ಲಿ ಚಾತುರ್ಹೋತ್ರವೆಂಬ ಯಜ್ಞವೂ, ಬಾಯಿಯಲ್ಲಿ ಸ್ರುಕ್‌ಪಾತ್ರೆಯೂ, ಮೂಗಿನಲ್ಲಿ ಸ್ರುವವೆಂಬ ಪಾತ್ರೆಯೂ, ಉದರದಲ್ಲಿ ಇಡಾ ಎಂಬ ಪಾತ್ರೆಯೂ, ಕಿವಿಗಳಲ್ಲಿ ಚಮಸವೆಂಬ ಪಾತ್ರೆಯೂ, ಮುಖದಲ್ಲಿ ಪ್ರಾಶಿತ್ರವೆಂಬ ಯಜ್ಞಪಾತ್ರೆಯೂ, ಹವಿಸ್ಸುಗಳೂ, ನಾಲಗೆಯಲ್ಲಿ ಸೋಮರಸದ ಬಟ್ಟಲುಗಳೂ, ಅಗಿಯುವಿಕೆಯಲ್ಲಿ ಅಗ್ನಿಹೋತ್ರವೂ, ಹುಟ್ಟಿನಲ್ಲಿ ಯಜ್ಞದೀಕ್ಷೆಯೂ, ಕತ್ತಿನಲ್ಲಿ ಉಪಸದಗಳೆಂಬ ಯಾಗಗಳೂ, ಹಲ್ಲುಗಳಲ್ಲಿ ಪ್ರಾಯಣೀಯ ಮತ್ತು ಉದಯನೀಯಗಳೆಂಬ ಇಷ್ಟಿಗಳೂ, ಜಿಹ್ವೆಯಲ್ಲಿ ಪ್ರವರ್ಗವೆಂಬ ಇಷ್ಟಿಯೂ, ಶಿರಸ್ಸಿನಲ್ಲಿ ಸಂಕಲ್ಪವೂ, ಪ್ರಾಣಗಳಲ್ಲಿ ಸಭ್ಯ ಮತ್ತು ಅವಸಥ್ಯಗಳೂ, ಅಗ್ನಿ ಚಿತಿ ಮೊದಲಾದ ಏಳು ಚಯನಗಳೂ, ರೇತಸ್ಸಿನಲ್ಲಿ ಸೋಮರಸವೂ, ಇರುವಿಕೆಯಲ್ಲಿ ತ್ರಿಷವಣಗಳೂ, ದೇಹದ ಸಪ್ತಧಾತುಗಳಲ್ಲಿ ಅಗ್ನಿಷ್ಟೋಮ ಮೊದಲಾದ ಯಾಗಗಳೂ, ದೇಹದ ಸಂಧಿಗಳಲ್ಲಿ ಎಲ್ಲ ಬಗೆಯ ಸತ್ರ ಯಾಗಗಳೂ, ಹೆಚ್ಚೇನು ನಿನ್ನ ಇಚ್ಛೆಯಲ್ಲಿ ಎಲ್ಲ ಯಜ್ಞಗಳನ್ನೂ ಸ್ಥಾಪಿಸುವಿಕೆಯೂ, ನಿನ್ನ ದೇಹಜೋಡಣೆಯಲ್ಲಿಯೇ ಎಲ್ಲ ತಿಥಿಗಳಲ್ಲಿ ಮಾಡುವ ಇಷ್ಟಿಗಳೂ ಇರುವುವು. ಇಂತಹ ಯಜ್ಞಮೂರ್ತಿಯಾದ ನಿನಗೆ ನಮಸ್ಕಾರ. ಎಲ್ಲ ಮಂತ್ರಗಳಲ್ಲಿಯೂ, ದೇವತೆಗಳಲ್ಲಿಯೂ, ದ್ರವ್ಯಗಳಲ್ಲಿಯೂ ಇದ್ದು ಅವುಗಳನ್ನು

ಇರುವಂತೆ ಮಾಡಿರುವೆ. ಎಲ್ಲ ಸಂಕಲ್ಪಗಳೂ ಎಲ್ಲ ಕ್ರಿಯೆಗಳೂ ನಿನ್ನಿಂದಲೇ ಆಗುವುವು. ಇವುಗಳಲ್ಲೆಲ್ಲಾ ನೀನು ವ್ಯಾಪ್ತನು. ನಿನ್ನ ಅನುಗ್ರಹದಿಂದಲೇ ಜನರಿಗೆ ವೈರಾಗ್ಯ ಭಕ್ತಿಗಳು ಬರುವುವು. ಅವರವರ ಯೋಗ್ಯತೆಗೆ ತಕ್ಕಂತೆ ನಿನ್ನ ಜ್ಞಾನವನ್ನು ಕೊಡುವ ಗುರುವೂ ನೀನೇ ಆಗಿರುವೆ. ನಿನಗೆ ನಮಸ್ಕಾರವು. ಬೆಟ್ಟಗಳಿಂದ ಕೂಡಿದ ಭೂಮಿಯನ್ನು ನೀನು ನಿನ್ನ ಕೋರೆಹಲ್ಲಿನ ಕೊನೆಯಿಂದ ಧರಿಸಿರುವೆ. ಈಗ ಸನಾಥೆಯಾದ ಭೂದೇವಿಯು ಪ್ರಕಾಶಮಾನಳಾಗಿರುವಳು. ಆನೆಯು ತಾವರೆಲೆ-ಯಿಂದ ಕೂಡಿದ ತಾವರೆ ಹೂವನ್ನು ಹೊತ್ತಿರುವಂತೆ ನೀನು ಅನಾಯಾಸವಾಗಿ ಈ ಭೂಮಿಯನ್ನು ಹೊತ್ತಿರುವೆ. ಕುಲಪರ್ವತದ ಕೋಡುಗಲ್ಲಿನ ಮೇಲೆ ಮೋಡವಿದ್ದಂತೆ ನಿನ್ನ ಈ ವೇದಪ್ರತಿಪಾದ್ಯವಾದ ದೇಹದ ಹಲ್ಲಿನ ಮೇಲೆ ಭೂಮಿಯು ಪ್ರಕಾಶಿಸುತ್ತಿದೆ. ನೀನು ಜಗತ್ತಿನ ಎಲ್ಲ ಪ್ರಾಣಿಗಳಿಗೂ ತಂದೆಯು, ಜಗತ್ತಿನ ತಾಯಿಯಾದ ಈ ನಿನ್ನ ಪತ್ನಿಯಾದ ಭೂಮಿಯನ್ನು ಜನರಿಗಾಗಿ ನೀರಿನ ಮೇಲೆ ನಿಲ್ಲಿಸು. ಅಗ್ನಿಯು ಅರಣಿಯಲ್ಲಿರುವಂತೆ ಈ ಭೂಮಿಯಲ್ಲಿ ನಿನ್ನ ತೇಜಸ್ಸನ್ನು ತುಂಬಿರುವೆ. ನಿನಗೂ ನಿನ್ನ ಜೊತೆಯಲ್ಲಿ ಇರುವ ಭೂಮಿಗೂ ನಮಸ್ಕಾರವು. ಪಾತಾಳವನ್ನು ಸೇರಿದ್ದ ಭೂಮಿಯನ್ನು ಮೇಲಕ್ಕೆ ಹೊತ್ತುತಂದ ಈ ನಿನ್ನ ಕಾರ್ಯವನ್ನು ನಿನ್ನ ಹೊರತು ಮತ್ತೊಬ್ಬನು ಊಹಿಸಲೂ ಸಮರ್ಥನಲ್ಲ. ಮಾಡುವುದೆಲ್ಲಿ ಬಂತು ? ಆದರೆ ನಿನಗಿದು ಆಶ್ಚರ್ಯವೇನಲ್ಲ. ನಿನ್ನ ಇಚ್ಛೆಯಿಂದಲೇ ಈ ವಿಚಿತ್ರ ಜಗತ್ತನ್ನೇ ಸೃಷ್ಟಿಸುವ ಸಮರ್ಥನು ನೀನು. ನಿನ್ನ ಕೆಲಸಗಳು ಉಳಿದವರಿಗೆ ಅತ್ಯಂತ ಆಶ್ಚರ್ಯಕರಗಳಾಗಿರುವುವು. ಪ್ರಭುವೇ, ವೇದಪ್ರತಿಪಾದ್ಯವಾದ ಈ ನಿನ್ನ ಅಪ್ರಾಕೃತದೇಹವನ್ನು ಕೊಡುವುತ್ತಾ ಇರುವಾಗ ನಿನ್ನ ಈ ಕೇಸರಗಳ ಕೊನೆಗಳಿಂದ ಬಂದ ಪವಿತ್ರಗಳಾದ ನೀರಿನ ಕಣಗಳಿಂದ ಈ ನಾವು ಸ್ನಾನಮಾಡಿಸಲ್ಪಟ್ಟವರಾಗಿ ಶುದ್ಧರಾಗಿರುವೆವು.

ಶ್ರೀಹರಿಯ ಪರಾಕ್ರಮವು ಅಪರಿಮಿತವಾದುದು. ಅವನ ಕರ್ಮಗಳು ಪರಿಮಿತಗಳೆಂದು ತಿಳಿಯುವವನು ಬುದ್ಧಿಹೀನನು. ಅವನಿಗೆ ನರಕವೇ ಫಲ. ಶ್ರೀಹರಿಯೇ, ನಿನ್ನ ಬಂಧಕಶಕ್ತಿಯಿಂದ ನಾವು ಬುದ್ಧಿಹೀನರಾಗಿ ತತ್ವಜ್ಞಾನವಿಲ್ಲ-ದವರಾಗಿದ್ದೇವೆ. ನೀನು ನಮಗೆ ಜ್ಞಾನವನ್ನು ಕೊಟ್ಟು ಸುಖಮಯವಾದ ವೈಕುಂಠ ಲೋಕವನ್ನು ಅನುಗ್ರಹಿಸು.

ಹೀಗೆಂದು ಆ ಬ್ರಹ್ಮಜ್ಞಾನಿಗಳಾದ ದೇವತೆಗಳು ಶ್ರೀಹರಿಯನ್ನು ಸ್ತೋತ್ರ ಮಾಡಿದರು. ಜಗದ್ರಕ್ಷಕನಾದ ಶ್ರೀಹರಿಯು ತನ್ನ ಗೊರಸಿನಿಂದ ಆಕ್ರಾಂತವಾದ ಆ ಪ್ರಳಯೋದಕದ ಮೇಲೆ ಭೂಮಿಯನ್ನು ಸ್ಥಾಪಿಸಿದನು. ಎಲ್ಲೆಲ್ಲಿಯೂ ಭಕ್ತರು

ಶ್ರೀಹರಿಯನ್ನು ಸುತ್ತುವರೆದಿರುವರು. ಅವರನ್ನು ರಕ್ಷಿಸುವುದೇ ಶ್ರೀಹರಿಯ ಕೆಲಸ. ಯಾವ ಆಯಾಸವೂ ಇಲ್ಲದೆ ರಸಾತಳದಿಂದ ಮೇಲಕ್ಕೆ ತಂದಿದ್ದ ಭೂಮಿಯನ್ನು ನೀರಿನ ಮೇಲಿರಿಸಿ ಶ್ರೀವರಾಹನು ಅಂತರ್ಧಾನವನ್ನು ಹೊಂದಿದನು.

ಶ್ರೀಹರಿಯು ಯಾವಾಗಲೂ ಭಕ್ತರನ್ನು ಸಂಸಾರದುಃಖದಿಂದ ದೂರವಿಡಲು ಬಯಸುವನು. ಅವನ ಸಾಮರ್ಥ್ಯವು ವರ್ಣನೀಯವಾದುದು. ಅವನ ಈ ಕಥೆಯು ಮೋಕ್ಷವನ್ನು ಕೊಡುವುದಲ್ಲದೆ ಕೇಳಿದವರ ಅಭೀಷ್ಟವನ್ನು ಪೂರೈಸುವುದು. ಅವನ ಸರ್ವೋತ್ತಮತ್ವಕ್ಕೆ ಹಾನಿಯಾಗದಂತೆ ಈ ಕಥೆಯನ್ನು ಭಕ್ತಿಯಿಂದ ಹೇಳಿ ಕೇಳುವವರು ಹುಟ್ಟು ಸಾವುಗಳಿಗೆ ದೂರರಾಗುವರು. ಶ್ರೀಹರಿಯು ತಡಮಾಡದೆ ಪ್ರಸನ್ನನಾಗಿ ಅವರ ಮನಸ್ಸಿನಲ್ಲಿ ಹೊಳೆಯುವನು. ಶ್ರೀಹರಿಯು ಕೊಡದಿರುವ ಸಂಪತ್ತಿಲ್ಲ. ಅವನು ಪ್ರಸನ್ನನಾದರೆ ಯಾವುದೂ ದುರ್ಲಭವಲ್ಲ. ಸ್ವರ್ಗಾದಿ ಫಲಗಳು ಅನಿತ್ಯಗಳಾದ್ದರಿಂದ ಅವುಗಳಿಂದ ಪ್ರಯೋಜನವಿಲ್ಲ. ಶ್ರೀಹರಿಯು ಭಕ್ತರ ಹೃದಯ ಗುಹೆಯಲ್ಲಿಯೇ ಇದ್ದು ಪುರುಷನಾಮಕನಾಗಿ ಬಿಂಬನಾಗಿರುವನು. ಅವನಲ್ಲಿ ಸರ್ವೋತ್ತಮ ಭಕ್ತಿಯನ್ನುಂಟುಮಾಡಿ ಸೇವಿಸುವ ಭಕ್ತರನ್ನು ಶ್ರೀಹರಿಯು ತಾನೇ ಒಲಿದು ಸಾಧನೆಯನ್ನು ಮಾಡಿಸಿ ಶಾಶ್ವತವಾದ ತನ್ನ ಲೋಕಕ್ಕೆ ಸೇರಿಸಿಕೊಳ್ಳುವನು. ಹಿಂದಿನ, ಇಂದಿನ ಮತ್ತು ಮುಂದಿನ ಕಥೆಗಳಲ್ಲೆಲ್ಲಾ ಶ್ರೀಹರಿಯ ಕಥಾಮೃತವು ಸಾರಭೂತವಾದದು. ಸಂಸಾರದುಃಖವನ್ನು ಹೋಗಲಾಡಿಸಿ ಮೋಕ್ಷರೂಪವಾದ ಮಂಗಳವನ್ನುಂಟುಮಾಡುವುದು. ಇಂತಹ ಕಥೆಯನ್ನು ಭಕ್ತಿಯಿಂದ ಶ್ರವಣಮಾಡಿ ತೃಪ್ತನಾದ ಮನುಷ್ಯನು ಪುರುಷಾರ್ಥಸಾರವನ್ನು ಬಲ್ಲವನು. ಈ ಕಥಾಶ್ರವಣದಲ್ಲಿ ವಿರಕ್ತನಾಗುವುದಿಲ್ಲ. ಹಾಗೆ ವಿರಕ್ತನಾದಲ್ಲಿ ಅವನು ಪಶುವೇ ಹೊರತು ಬೇರೆಯಲ್ಲ. ಇಂತಹ ಕುತ್ಸಿತ ನರರಿರುವುದು ಆಶ್ಚರ್ಯವು.



# ಅಥ ಪಂಚದಶೋಽಧ್ಯಾಯಃ

ರುದ್ರಾದಿದೇವತೆಗಳೆಲ್ಲರೂ ಶ್ರೀಹರಿಯ ಆಜ್ಞಾಧಾರಕರಾದುದರಿಂದ ಅವನ ಅಧೀನರು. ಅವನೊಬ್ಬನೇ ನಿರುಪಚರಿತ ಸ್ವತಂತ್ರನು, ಗುಣಪೂರ್ಣನು, ದೋಷದೂರನು ಆದುದರಿಂದ ಶ್ರೀಹರಿಯಲ್ಲಿ ಅಧಿಕಾರಿಯು ಅವಶ್ಯಕವಾಗಿ ಮನಸ್ಸನ್ನಿಡಬೇಕು ಎಂದು ಹೇಳುವರು ಈ ಅಧ್ಯಾಯದಲ್ಲಿ. ಮೊದಲಿಗೆ ವಿದುರನು ಮೈತ್ರೇಯರಿಂದ ವರಾಹಚರಿತ್ರೆಯನ್ನು ಕೇಳಿ ಶ್ರೀಹರಿಕಥಾ ಕೇಳುವುದರಲ್ಲಿ ಅಲಂಬುದ್ಧಿ ಇಲ್ಲದೆ ವಿಶೇಷವಾಗಿ ಕೇಳುವ ಇಚ್ಛೆಯಿಂದ ಮೈತ್ರೇಯರನ್ನು ಕೇಳುವನೆಂದು ಶುಕಾಚಾರ್ಯರು ಪರೀಕ್ಷಿತನಿಗೆ ಹೇಳುವರು –

**ಶುಕ ಉವಾಚ**

**ನಿಶಮ್ಯ ಕೌಶಾರವಿಣೋಪವರ್ಣಿತಾಂ**
**ಹರೇಃ ಕಥಾಂ ಕಾರಣಸೂಕರಾತ್ಮನಃ ।**
**ಪುನಃ ಸ ಪಪ್ರಚ್ಛ ಸಮುದ್ಯತಾಂಜಲಿ-**
**ರ್ನಚಾತಿತೃಪ್ತೋ ವಿದುರೋ ಧೃತವ್ರತಃ ॥೧॥**

ಧೃತವ್ರತಃ=ಕಥಾಶ್ರವಣಕ್ಕೆ ವಿಘ್ನಬರಬಾರದೆಂದು ವ್ರತವನ್ನು ಸ್ವೀಕರಿಸಿದ ವಿದುರಃ=ವಿದುರನು ಕೌಶಾರವಿಣಾ=ಮೈತ್ರೇಯರಿಂದ ಉಪವರ್ಣಿತಾಂ=ಹೇಳಲ್ಪಟ್ಟ ಕಾರಣಸೂಕರಾತ್ಮನಃ=ಭೂಮಿಯ ಉದ್ಧಾರಕ್ಕಾಗಿ ವರಾಹಾವತಾರ ತಾಳಿದ ಹರೇಃ ಕಥಾಂ=ಶ್ರೀಹರಿಕಥಾವನ್ನು ನಿಶಮ್ಯ=ಕೇಳಿ, ನಚಾತಿತೃಪ್ತಃ=ಸಂಪೂರ್ಣತೃಪ್ತಿಯನ್ನು ಹೊಂದದೆ, ಸಮುದ್ಯತಾಂಜಲಿಃ=ಶ್ರೀಹರಿಗೆ ತಲೆಯ ಮೇಲೆ ಕೈ ಜೋಡಿಸಿ ನಮಸ್ಕರಿಸಿ (ಅವನ ಪ್ರಸಾದದಿಂದ ಕಥಾಶ್ರವಣವಾಗಲೆಂದು) ಸಃ=ವಿದುರನು ಪುನಃ=ಮತ್ತೆ ಪಪ್ರಚ್ಛ=ಪ್ರಶ್ನಿಸಿದನು ॥೧॥

**ವಿದುರ ಉವಾಚ**

**ತೇನೈವ ಚ ಮುನಿಶ್ರೇಷ್ಠ ಹರಿಣಾ ಯಜ್ಞಮೂರ್ತಿನಾ ।**
**ಆದಿದೈತ್ಯೋ ಹಿರಣ್ಯಾಕ್ಷೋ ಹತ ಇತ್ಯನುಶುಶ್ರುಮ ॥೨॥**

ಹೇಮುನಿಶ್ರೇಷ್ಠ=ಮೈತ್ರೇಯರೇ ತೇನೈವ ಯಜ್ಞಮೂರ್ತಿನಾ ಹರಿಣಾ= ಯಾವನಿಂದ ಪ್ರಳಯಜಲದಲ್ಲಿ ಮುಳುಗಿದ ಭೂಮಿಯನ್ನು ಉದ್ಧರಿಸಿದ ಯಜ್ಞಸಾಧನ ಜನಕವಾದ ಶರೀರವುಳ್ಳ ವರಾಹರೂಪಿಯಾದ ಶ್ರೀಹರಿಯಿಂದ ಆದಿಸೃಷ್ಟಿಯಲ್ಲಿ ಬ್ರಹ್ಮದೇವರಿಂದ ಜನಿಸಿದ ಹಿರಣ್ಯಾಕ್ಷನು ಕೊಲ್ಲಲ್ಪಟ್ಟನೋ ಆ

ಶ್ರೀಹರಿಯಿಂದಲೇ ಆದಿದೈತ್ಯಃ ಹಿರಣ್ಯಾಕ್ಷಃ=ಆ ಹಿರಣ್ಯಾಕ್ಷನೇ ಕಶ್ಯಪರಿಂದ ಜನಿಸಿದ ವಿಜಯನೆಂಬ ಪಾರ್ಷದನಲ್ಲಿ ಆವಿಷ್ಟನಾಗಿ ಮತ್ತೆ ಹತಃ ಇತಿ=ಕೊಲ್ಲಲ್ಪಟ್ಟನೆಂದು ಅನುಶುಶ್ರುಮ=ಗ್ರಂಥಾಂತರದಲ್ಲಿ ಜ್ಞಾನಿಗಳಿಂದ ಕೇಳಲ್ಪಟ್ಟಿರುವೆವು ॥೨॥

**ತಸ್ಯ ಚೋದ್ದರತಃ ಕ್ಷೋಣೀಂ ಸ್ವದಂಷ್ಟ್ರಾಗ್ರೇಣ ಲೀಲಯಾ ।**
**ದೈತ್ಯರಾಜಸ್ಯ ಚ ಬ್ರಹ್ಮನ್ ಕಸ್ಮಾದ್ಧೇತೋರಭೂನ್ಮೃಧಃ ॥೩॥**

ಹೇ ಬ್ರಹ್ಮನ್=ಮೈತ್ರೇಯರೇ ಸ್ವದಂಷ್ಟ್ರಾಗ್ರೇಣ=ತನ್ನ ಕೋರೆ ಹಲ್ಲಿನ ತುದಿಯಿಂದ ಲೀಲಯಾ=ಅನಾಯಾಸವಾಗಿ ಕ್ಷೋಣೀಂ=ಹಿರಣ್ಯಾಕ್ಷನಿಂದ ಸಮುದ್ರದಲ್ಲಿ ಮುಳುಗಿಸಿದ ಭೂಮಿಯನ್ನು ಉದ್ಧರತಃ=ಮೇಲೆತ್ತುವ ತಸ್ಯ= ವರಹಾದೇವನಿಗೆ ದೈತ್ಯರಾಜಸ್ಯ=ವಿಜಯನ ದೇಹದಲ್ಲಿರುವ ದೈತ್ಯಶ್ರೇಷ್ಠನಿಗೂ ಕಸ್ಮಾದ್‌ಹೇತೋಃ=ಯಾವ ಕಾರಣ ಮೃಧಃ=ಯುದ್ಧವು ಅಭೂತ್=ಆಯಿತು ।೩॥

**ಮೈತ್ರೇಯ ಉವಾಚ**

**ಸಾಧು ವೀರ ತ್ವಯಾ ಪೃಷ್ಟಮವತಾರಕಥಾಂ ಹರೇಃ ।**
**ಯತ್ತ್ವಂ ಪೃಚ್ಛಸಿ ಮರ್ತ್ಯಾನಾಂ ಮೃತ್ಯುಪಾಶವಿಶಾತನೀಂ ॥೪॥**

ಹೇ ವೀರ=ಶ್ರೀಹರಿಯ ಇಚ್ಛೆಯಲ್ಲಿ ರಮಿಸುವ ವಿದುರನೇ ಯತ್=ಯಾವ ಕಾರಣ ತ್ವಂ=ನೀನು ಮರ್ತ್ಯಾನಾಂ=ಜನರ ಮೃತ್ಯುಪಾಶವಿಶಾತನೀಂ=ಮರಣ-ಪಾಶನಾಶಕವಾದ ಹರೇಃ=ಶ್ರೀಹರಿಯ ಅವತಾರಕಥಾಂ=ಅವತಾರ ಕಥೆಯನ್ನು ಪೃಚ್ಛಸಿ=ಕೇಳುತ್ತಿರುವಿ ಆದ್ದರಿಂದ ತ್ವಯಾ ಪೃಷ್ಟಂ=ನಿನ್ನಿಂದ ಕೇಳಲ್ಪಟ್ಟುದು ಸಾಧು= ಪುರುಷಾರ್ಥಸಾಧನವಾದುದರಿಂದ ಸಮೀಚಿನವಾದುದು ॥೪॥

ಶ್ರೀಹರಿಯ ಕಥಾ ಮೃತ್ಯುಪಾಶನಾಶಕವಷ್ಟೇ ಅಲ್ಲ ಐಹಿಕ ಆಮುಷ್ಮಿಕ ಸಕಲ ಪುರುಷಾರ್ಥಪ್ರದವೆಂದು ದೃಷ್ಟಾಂತಮುಖದಿಂದ ಹೇಳುವರು –

**ಯಯೋತ್ತಾನಪದಃ ಪುತ್ರೋ ಮುನಿನಾ ಗೀತಯಾಽರ್ಭಕಃ ।**
**ಮೃತ್ಯೋಃ ಕೃತ್ವೈಹ ಮೂರ್ಧ್ನ್ಯಂಘ್ರಿಮಾರುರೋಹ ಹರೇಃ ಪದಂ ॥**

ಮುನಿನಾ=ನಾರದರಿಂದ ಗೀತಯಾ=ಹೇಳಲ್ಪಟ್ಟ ಯಯಾ=ಯಾವ ಹರಿಯ ಕಥಾದಿಂದ ಉತ್ತಾನಪದಃ ಪುತ್ರಃ ಅರ್ಭಕಃ=ಉತ್ತಾನಪಾದನೆಂಬ ರಾಜನ ಕುವರನಾದ ಐದು ವರ್ಷದ ಬಾಲಕನಾದ ಧ್ರುವನು ಇಹ=ಈ ಲೋಕದಲ್ಲಿ ಮೃತ್ಯೋಃ= ಮರಣದ ಮೂರ್ಧ್ನಿ=ತಲೆಯಮೇಲೆ ಅಂಘ್ರಿಂ ಕೃತ್ವಾ=ಕಾಲಿರಿಸಿ ಹರೇಃ ಪದಂ ಆರುರೋಹ=ಶಿಂಶುಮಾರನಿರುವ ಸ್ಥಾನವನ್ನು ಏರಿದನು (ಇದರಿಂದ ಧ್ರುವನು ಸಶರೀರನಾಗಿಯೇ ಧ್ರುವಲೋಕಪಡೆದನು ಎಂದು ತಿಳಿಯುವುದು.) ॥೫॥

ಶ್ರೀ ಹರಿಗೂ ಹಿರಣ್ಯಾಕ್ಷನಿಗೂ ನಡೆದ ಯುದ್ಧಕಾರಣವನ್ನು ಹೇಳಲು ಹಿಂದಿನ ವೃತ್ತಾಂತ ಹೇಳುವರು -

**ಅಥಾತ್ರಾಪೀತಿಹಾಸೋಽಯಂ ಶ್ರುತೋ ಮೇ ವರ್ಣಿತಃ ಪುರಾ ।**
**ಬ್ರಹ್ಮಣಾ ದೇವದೇವೇನ ದೇವಾನಾಮನುಪೃಚ್ಛತಾಮ್ ॥೬॥**

ಅಥ=ನಿನ್ನ ಪ್ರಶ್ನವು ಹರಿಕಥಾವಿಷಯಕವಾದುದರಿಂದ ಅವಶ್ಯ ಉತ್ತರ ಹೇಳಲೇ ಬೇಕಾದುದರಿಂದ (ಅಥವಾ ಕಥಾವಿಶೇಷಾರಂಭಿಸುವೆವು ಎಂದರ್ಥ) ಅತ್ರ=ಈ ವಿಷಯದಲ್ಲಿ ದೇವಾನಾಂ ಅನುಪೃಚ್ಛತಾಂ=ದೇವತೆಗಳು ಪ್ರಶ್ನಿಸಿದಾಗ ದೇವ-ದೇವೇನ=ದೇವೋತ್ತಮನಾದ ಬ್ರಹ್ಮಣಾ=ಚತುರ್ಮುಖನಿಂದ ಪುರಾ=ಹಿಂದೆ ವರ್ಣಿತಃ=ಹೇಳಲ್ಪಟ್ಟ ಅಯಂ=ಮುಂದೆ ಹೇಳುವ ಇತಿಹಾಸೋಽಪಿ=ಇತಿಹಾಸವೂ ಮೇ=ನನ್ನಿಂದ ಶ್ರುತಃ ಅಸ್ತಿ=ಕೇಳಲ್ಪಟ್ಟಿದೆ (ಕೇವಲ ನನ್ನ ಮಾತಷ್ಟೇ ಅಲ್ಲ)ಅದನ್ನೇ ನಿನಗೆ ಉತ್ತರವಾಗಿ ಹೇಳುವೆನು ಎಂದು ಭಾವ ॥೬॥

ಇತಿಹಾಸವನ್ನು ಹೇಳುವರು -

**ದಿತಿರ್ದಾಕ್ಷಾಯಣೀ ಕ್ಷತ್ತರ್ಮಾರೀಚಂ ಕಶ್ಯಪಂ ಪತಿಂ ।**
**ಅಪತ್ಯಕಾಮಾ ಚಕಮೇ ಸಂಧ್ಯಾಯಾಂ ಹೃಚ್ಛಯಾರ್ದಿತಾ ॥೭॥**

ದಾಕ್ಷಾಯಣೀ=ದಕ್ಷಪ್ರಜಾಪತಿಯ ಮಗಳಾದ ದಿತಿಃ=ದಿತಿ ಎಂಬುವಳು ಮಾರೀಚಂ=ಮರೀಚಿಋಷಿಯ ಪುತ್ರನಾದ ಪತಿಂ=ಗಂಡನಾದ ಕಶ್ಯಪಂ=ಕಶ್ಯಪ ಋಷಿಯನ್ನು ಅಪತ್ಯಕಾಮಾ=ಮಕ್ಕಳನ್ನು ಇಚ್ಛಿಸಿ ಹೃಚ್ಛಯಾರ್ದಿತಾ=ಕಾಮ-ಪೀಡಿತಳಾಗಿ ಸಂಧ್ಯಾಯಾಂ=ಸಾಯಂಕಾಲದಲ್ಲಿ ಚಕಮೇ=ಕಾಮಿಸಿದಳು. ರಾಮ-ಬಾಣದಿಂದ ಸತ್ತ ಮಾರೀಚನಲ್ಲವೆನ್ನಲು ಕಶ್ಯಪಂ ಎಂದು, ಯಾವನೋ ಕಶ್ಯಪನೆಂಬ ಹೆಸರಿನವನಲ್ಲ ಎನ್ನುವುದಕ್ಕಾಗಿ ಮಾರೀಚಂ ಎಂದೂ ಹೇಳಿರುವರು ॥೭॥

**ಇಷ್ಟ್ವಾಽಗ್ನಿಜಿಹ್ವಂ ಪಯಸಾ ಪುರುಷಂ ಯಜುಷಾಂ ಪತಿಂ ।**
**ನಿಮ್ಲೋಚತ್ಯರ್ಕ ಆಸೀನಮಗ್ನ್ಯಾಗಾರೇ ಸಮಾಹಿತಂ ॥೮॥**

ಅಗ್ನಿಜಿಹ್ವಂ=ಅಗ್ನಿಯೇ ನಾಲಿಗೆಯಾಗಿಯುಳ್ಳ ಯಜುಷಾಂ ಪತಿಂ=ಯಜುರ್ವೇದ ಪ್ರತಿಪಾದ್ಯನಾದ, ಯಜ್ಞಗಳಿಂದ ಆರಾಧ್ಯನಾದ ಪುರುಷಂ=ಪೂರ್ಣಷಡ್ಗುಣನಾದ ವಿಷ್ಣುವನ್ನು ಪಯಸಾ ಇಷ್ಟ್ವಾ=ಹಾಲಿನಿಂದ ಹೋಮಮಾಡಿ ಅಗ್ನ್ಯಾಗಾರೇ=ಅಗ್ನಿಹೋತ್ರ ಮಾಡುವ ಮನೆಯಲ್ಲಿ ಆಸೀನಂ=ಕುಳಿತಿರುವ ಸಮಾಹಿತಂ=ಸಮಾಧಿನಿರತನಾದ ಕಶ್ಯಪನನ್ನು ಅರ್ಕೇ=ಸೂರ್ಯನು ನಿಮ್ಲೋಚತಿ=ಅಸ್ತಂಗತನಾಗುತ್ತಿರಲು ಕಾಮಿಸಿದಳು ॥೮॥

**ದಿತಿರುವಾಚ**

**ಏಷ ಮಾಂ ತ್ವತ್ಕೃತೇ ವಿದ್ವನ್ ಕಾಮ ಆತ್ತಶರಾಸನಃ ।**
**ದುನೋತಿ ದೀನಾಂ ವಿಕ್ರಮ್ಯ ರಂಭಾಮಿವ ಮತಂಗಜಃ ॥೯॥**

ರಂಭಾಂ=ಬಾಳೆಗಿಡವನ್ನು ಮತಂಗಜ ಇವ=ಆನೆಯು ಪೀಡಿಸುವಂತೆ ಹೇ ವಿದ್ವನ್=ಜ್ಞಾನಿಯೇ ಆತ್ತಶರಾಸನಃ=ಧನಸ್ಸನ್ನು ಹಿಡಿದು ಏಷಃ ಕಾಮಃ=ಈ ಕಾಮನು ದೀನಾಂ=ದುಃಖಿತಳಾದ ಮಾಂ=ನನ್ನನ್ನು ವಿಕ್ರಮ್ಯ=ತನ್ನ ಪರಾಕ್ರಮವನ್ನು ವ್ಯಕ್ತಗೊಳಿಸಿ ತ್ವತ್ಕೃತೇ=ನಿನಗಾಗಿ ದುನೋತಿ=ಪೀಡಿಸುವನು ॥೯॥

ಕೇವಲ ಭೋಗೇಚ್ಛೆಯಿಂದ ಮಾತ್ರ ಬೇಡುತ್ತಿಲ್ಲ ಬೇರೆ ಪ್ರಯೋಜನವೂ ಇದೆ ಎಂದು ಹೇಳುವಳು –

**ತದ್ ಭವಾನ್ ದಹ್ಯಮಾನಾಯಾಂ ಸಪತ್ನೀನಾಂ ಸಮೃದ್ಧಿಭಿಃ ।**
**ಪ್ರಜಾವತೀನಾಂ ಭದ್ರಂ ತೇ ಮಯ್ಯಾಯುಂಕ್ತಾಮನುಗ್ರಹಂ ॥೧೦॥**

ತತ್=ಕಾಮಪೀಡಿತಳಾದುದರಿಂದ ಪ್ರಜಾವತೀನಾಂ=ಮಕ್ಕಳುಗಳುಳ್ಳ ಸಪತ್ನೀನಾಂ=ಸವತಿಯರ ಸಮೃದ್ಧಿಭಿಃ=ಅಭಿವೃದ್ಧಿಯಿಂದ ದಹ್ಯಮಾನಾಯಾಂ= ಸುಡುತ್ತಿರುವ ಮಯಿ=ನನ್ನಲ್ಲಿ ಅನುಗ್ರಹಂ ಆಯುಂಕ್ತಾಂ=ಚೆನ್ನಾಗಿ ಅನುಗ್ರಹ-ಮಾಡಿರಿ ತೇ ಭದ್ರಂ ಅಸ್ತು=ನಿಮಗೆ ಮಂಗಲವಾಗಲಿ ॥೧೦॥

ಅನುಗ್ರಹಸಾಧ್ಯ ಪ್ರಯೋಜನ ಹೇಳುವಳು –

**ಭರ್ತರ್ಯಾಪ್ತೋರುಮಾನಾನಾಂ ಲೋಕಾನಾವಿಶತೇ ಯಶಃ ।**
**ಪತಿರ್ಭವದ್ವಿಧೋ ಯಾಸಾಂ ಪ್ರಜಯಾ ನನು ಜಾಯತೇ ॥೧೧॥**

ಭರ್ತರಿ=(ಭರ್ತುಃ) ಗಂಡನಿಂದ ಆಪ್ತ=ಹೊಂದಲ್ಪಟ್ಟ ಉರುಮಾನಾನಾಂ= ಬಹುಮಾನಉಳ್ಳ ಸ್ತ್ರೀಯರ ಯಶಃ=ಕೀರ್ತಿಯು ಲೋಕಾನ್ ಆವಿಶತೇ=ಎಲ್ಲ ಲೋಕದಲ್ಲಿ ಹರಡುವುದು (ಮಾನವೆಂದರೆ ಬೇರೇನೂ ಅಲ್ಲ ಪುತ್ರಪ್ರಾಪ್ತಿಯೇ) ಭವದ್ವಿಧಃ ಪತಿಃ=ನಿಮ್ಮಂಥ ಗಂಡನು ಯಾಸಾಂ=ಯಾವಸ್ತ್ರೀಯರಲ್ಲಿ ಪ್ರಜಯಾ= ಪುತ್ರರೂಪದಿಂದ ಜಾಯತೇ ನನು=ಹುಟ್ಟುವನಷ್ಟೇ. ಗಂಡನಿಂದ ಮಕ್ಕಳನ್ನು ಪಡೆದ ಹೆಣ್ಣಿಗೆ ಜಗತ್ತಿನಲ್ಲಿ ಗೌರವ ದೊರೆಯುವುದು. ಗಂಡನೇ ಒಂದು ರೂಪದಿಂದ ಹೆಂಡತಿಯಲ್ಲಿ ಜನಿಸುವನು ಎಂದು ಶ್ರುತಿ ಇದೆ.'ತಜ್ಜಾಯಾ ಜಾಯಾ ಭವತಿ ಯದಸ್ಯಾಂ ಜಾಯತೇ ಪುನಃ' ॥೧೧॥

**ಪುರಾ ಪಿತಾ ನೋ ಭಗವಾನ್ ದಕ್ಷೋ ದುಹಿತೃವತ್ಸಲಃ ।**
**ಕಂ ವೃಣೀತ ವರಂ ವತ್ಸಾ ಇತ್ಯಪೃಚ್ಛತ ನಃ ಪೃಥಕ್ ॥೧೨॥**

**ಸ ವಿದಿತ್ವಾऽऽತ್ಮಜಾನಾಂ ನೋ ಭಾವಂ ಸಂತಾನಭಾವನಃ ।**
**ತ್ರಯೋದಶಾದದಾತ್ ತಾಸಾಂ ಯಾಸ್ತೇ ಶೀಲಮನುವ್ರತಾಃ ॥೧೩॥**

ಹೇ ಭಗವಾನ್=ಪೂಜ್ಯರೇ ಪುರಾ=ಹಿಂದೆ ದುಹಿತೃವತ್ಸಲಃ=ಹೆಣ್ಣು ಮಕ್ಕಳಲ್ಲಿ ಪ್ರೀತಿಯುಳ್ಳ ನಃ ಪಿತಾ ದಕ್ಷಃ=ನಮ್ಮ ತಂದೆಯಾದ ದಕ್ಷಪ್ರಜೇಶ್ವರನು ನಃ=ನಮ್ಮನ್ನು ಪೃಥಕ್=ಪ್ರತ್ಯೇಕವಾಗಿ ವತ್ಸಾಃ=ಮಕ್ಕಳೇ ಕಂ ವರಂ ವೃಣೀತ=ಯಾವ ವರವನ್ನು ವರಿಸಿರುವಿರಿ ಇತಿ=ಎಂದು ಅಪೃಚ್ಛತ=ಕೇಳಿದನು ಸಃ=ಅವನು ಆತ್ಮಜಾನಾಂ ನಃ ಮಕ್ಕಳಾದ ನಮ್ಮ ಭಾವಂ=ಅಭಿಪ್ರಾಯವನ್ನು ವಿದಿತ್ವಾ=ತಿಳಿದು ಸಂತಾನಭಾವನಃ= ಪ್ರಜೋತ್ಪಾದನೆಯನ್ನಿಚ್ಛಿಸಿ ತಾಸಾಂ=ತನ್ನ ಮಕ್ಕಳಲ್ಲಿ ಯಾಃ=ಯಾರು ತೇ ನಿನ್ನ ಶೀಲಂ=ಸ್ವಭಾವವನ್ನು ಅನುವ್ರತಾಃ=ಅನುಸರಿಸಿದರೋ ಅಂಥ ತ್ರಯೋದಶ= ಹದಿಮೂರು ಜನರನ್ನು ತೇ=ನಿನಗೆ, ಅದದಾತ್=ಕೊಟ್ಟನು ॥೧೨-೧೩॥

**ಅಥ ಮೇ ಕುರು ಕಲ್ಯಾಣ ಕಾಮಂ ಕಂಜವಿಲೋಚನ ।**
**ಆರ್ತೋಪಸರ್ಪಣಂ ಭೂಮನ್ನಮೋಘಂ ಹಿ ಮಹೀಯಸಿ ॥೧೪॥**

ಅಥ=ಆದ್ದರಿಂದ ಕಂಜಲೋಚನ=ಕಮಲದಂತೆ ಕಣ್ಣುಳ್ಳವನೇ ಕಲ್ಯಾಣ= ಮಂಗಳಕರನೇ ಮೇ ಕಾಮಂ ಕುರು=ನನ್ನ ಇಚ್ಛೆಯನ್ನು ಪೂರೈಸು. ಹೇ ಭಗವನ್=ಪೂರ್ಣನೇ ಮಹೀಯಸಿ=ನಿನ್ನಂಥ ಮಹಾಪುರುಷರಲ್ಲಿ ಆರ್ತೋಪ- ಸರ್ಪಣಂ=ಆಪ್ತನೆಂದು ಶರಣಾಗುವುದು ನ ಮೋಘಂ ಹಿ=ವ್ಯರ್ಥವಲ್ಲವಷ್ಟೇ

**ಮೈತ್ರೇಯ ಉವಾಚ**

**ಇತಿ ತಾಂ ವೀರ ಮಾರೀಚಃ ಕೃಪಣಾಂ ಬಹುಭಾಷಿಣೀಮ್ ।**
**ಪ್ರತ್ಯಾಹಾನುನಯನ್ ವಾಚಾ ಪ್ರವೃದ್ಧಾನಂಗಕಶ್ಮಲಾಂ ॥೧೫॥**

ಇತಿ=ಈ ರೀತಿಯಾಗಿ ಬಹುಭಾಷಿಣೀಂ=ಬಹಳಮಾತನಾಡುವ ಕೃಪಣಾಂ= ದೀನಳಾದ ಪ್ರವೃದ್ಧಾನಂಗಕಶ್ಮಲಾಂ=ಅತಿಯಾದ ಕಾಮದಿಂದ ದೂಷಿತಳಾದ ತಾಂ=ದಿತಿಯನ್ನು ಮಾರೀಚಃ=ಕಶ್ಯಪರು ವಾಚಾ=ಮಾತಿನಿಂದ ಅನುನಯನ್= ಮನ ಒಲಿಸುತ್ತ ಪ್ರತ್ಯಾಹ=ಉತ್ತರಿಸಿದರು ॥೧೫॥

**ಏಷ ತೇऽಹಂ ವಿಧಾಸ್ಯಾಮಿ ಪ್ರಿಯಂ ಭೀರು ಯದಿಚ್ಛಸಿ ।**
**ತಸ್ಯಾಃ ಕಾಮಂ ನ ಕಃ ಕುರ್ಯಾತ್ ಸಿದ್ಧಿಸ್ತ್ರೈವರ್ಗಿಕೀ ಯತಃ ॥೧೬॥**

ಯತಃ=ಯಾವ ಹೆಂಡತಿಯಿಂದ ತ್ರೈವರ್ಗಿಕೀ ಸಿದ್ಧಿಃ=ಧರ್ಮಾರ್ಥಕಾಮಗಳ ಪ್ರಾಪ್ತಿಯಾಗುವುದೋ ತಸ್ಯಾಃ=ಆ ಹೆಂಡತಿಯ ಕಾಮಂ=ಅಭಿಲಾಷೆಯನ್ನು ಕಃ ನ ಕುರ್ಯಾತ್=ಯಾವನು ಪೂರ್ಣಗೊಳಿಸದಿರುವನು ? ಬೀರುಃ ಏಷಃ ಅಹಂ= ಭಯಸ್ವಭಾವದ ಈ ನಾನು ಯತ್=ಪ್ರಿಯಂ ಇಚ್ಛಸಿ=ಏನನ್ನು ಅಪೇಕ್ಷಿಸುವಿಯೋ ಅದನ್ನು ತೇ ವಿಧಾಸ್ಯಾಮಿ=ನಿನಗೆ ಪೂರೈಸುವೆನು ॥೧೬॥

**ಸರ್ವಾಶ್ರಮಾನುಪಾದಾಯ ಸ್ವಾಶ್ರಮೇಣ ಕಲತ್ರವಾನ್ ।**
**ವ್ಯಸನಾರ್ಣವಮತ್ಯೇತಿ ಜಲಯಾನೈರ್ಯಥಾರ್ಣವಂ ॥೧೭॥**

ಕಲತ್ರವಾನ್=ಹೆಂಡತಿಯಿದ್ದವನು ಸ್ವಾಶ್ರಮೇಣ=ಗೃಹಸ್ಥಾಶ್ರಮಾನುಷ್ಠಾನದಿಂದ ಸರ್ವಾಶ್ರಮಾನ್=ಬ್ರಹ್ಮಚರ್ಯ, ವಾನಪ್ರಸ್ಥ ಸನ್ಯಾಸಗಳಲ್ಲಿರುವರನ್ನು ಉಪಾದಾಯ= ಅನ್ನದಾನಾದಿಗಳಿಂದ ಗೌರವಿಸಿ ಜಲಯಾನೈಃ=ನೌಕೆಯಿಂದ ಅರ್ಣವಂ ಯಥಾ= ಸಮುದ್ರವನ್ನು ದಾಟುವಂತೆ ವ್ಯಸನಾರ್ಣವಂ=ದುಃಖಸಮುದ್ರವನ್ನು ಅತ್ಯೇತಿ= ದಾಟುವನು ॥೧೭॥

**ಯಾಮಾಹುರಾತ್ಮನೋ ಹ್ಯರ್ಧಂ ಶ್ರೇಯಸ್ಕಾಮಸ್ಯ ಭಾಮಿನಿ ।**
**ಯಸ್ಯಾಂ ಸ್ವಧುರಮಧ್ಯಸ್ಯ ಪುಮಾಂಶ್ಚರತಿ ವಿಜ್ವರಃ ॥೧೮॥**

ಹೇ ಭಾಮಿನಿ=ಕೋಪಯುಕ್ತಳಾದಾಗ ಸುಂದರಿಯೇ ಯಾಂ ಯಾವಳನ್ನು ಶ್ರೇಯಸ್ಕಾಮಸ್ಯ=ಶ್ರೇಯಸ್ಸನ್ನು ಇಚ್ಛಿಸುವನಿಗೆ ಆತ್ಮನಃ=ದೇಹದ ಅರ್ಧಂ= ಅರ್ಧವೆಂದು ಆಹುಃ=ಹೇಳುವರು,(ಅಗ್ನಿಹೋತ್ರಾದಿ ಕರ್ಮಗಳಲ್ಲಿ ಇಬ್ಬರಿಗೂ ಸೇರಿ ಅಧಿಕಾರವಿರುವುದರಿಂದ) ಪುಮಾನ್=ಪುರುಷನು ಯಸ್ಯಾಂ=ಯಾವಳಲ್ಲಿ ಸ್ವಧುರಂ=ದೃಷ್ಟಾದೃಷ್ಟಕಾರ್ಯಗಳ ಭಾರವನ್ನು ಅಧ್ಯಸ್ಯ=ಇರಿಸಿ ವಿಜ್ವರಃ= ನಿಶ್ಚಿಂತನಾಗಿ ಚರತಿ=ಸಂಚರಿಸುವನೋ ತಾಂ ತ್ವಾಂ=ಅಂಥ ನಿನ್ನನ್ನು ಎಂದನ್ವಯ (೨೦ನೇಶ್ಲೋಕ) ॥೧೮॥

**ಯಾಮಾಶ್ರಿತ್ಯೇಂದ್ರಿಯಾರಾತೀನ್ ದುರ್ಜಯಾನಿತರಾಶ್ರಮೈಃ ।**
**ವಯಂ ಜಯೇಮ ಹೇಲಾಭಿರ್ದಸ್ಯೂನ್‌ದುರ್ಗಪತಿರ್ಯಥಾ ॥೧೯॥**

ಯಥಾ=ಹೇಗೆ ದುರ್ಗಪತಿಃ=ಕೋಟೆಯ ಒಡೆಯನು ದಸ್ಯೂನ್=ಕಳ್ಳರನ್ನು ಗೆಲ್ಲುವನೋ ತಥಾ=ಹಾಗೆ ಇತಾರಾಶ್ರಮೈಃ=ಬೇರೆ ಆಶ್ರಮಿಗಳಿಂದ ದುರ್ಜಯಾನ್= ಗೆಲ್ಲಲಾಗದ ಇಂದ್ರಿಯಾರಾತೀನ್=ಇಂದ್ರಿಯಗಳೆಂಬ ಶತ್ರುಗಳನ್ನು ವಯಂ=ನಾವು ಯಾಂ ಆಶ್ರಿತ್ಯ=ಯಾವ ಪತ್ನಿಯನ್ನು ಆಶ್ರಯಿಸಿ ಹೇಲಾಭಿಃ=ಲೀಲೆಯಿಂದ

ಜಯೇಮ=ಗೆಲ್ಲುವೆವೋ ತಾಂ ತ್ವಾಂ=ಅಂಥ ನಿನ್ನನ್ನು ಹೆಂಡತಿ ಇದ್ದವನ ಇಂದ್ರಿಯಗಳು ಪ್ರಾಯಃ ಇತ್ತ ಅತ್ತ ಹೋಗಲಾರವೆಂದು ಭಾವ ॥೧೯॥

**ನ ವಯಂ ಪ್ರಭವಸ್ತಾಂ ತ್ವಾಮನುಕರ್ತುಂ ಗೃಹೇಶ್ವರಿ ।**
**ಅಪ್ಯಾಯುಷಾ ವಾ ಕಾರ್ತ್ಸ್ನ್ಯೇನ ಯೇ ಚಾನ್ಯೇ ಗುಣಗೃಧ್ರವಃ ॥೨೦॥**

ತಾಂ ತ್ವಾಂ=ಅನೇಕ ಉಪಕಾರ ಮಾಡುವ ಅಂಥ ನಿನ್ನನ್ನು ಹೇ ಗೃಹೇಶ್ವರಿ= ಮನೆಯೊಡತಿಯೇ,ವಯಂ=ನಾವು ಅನುಕರ್ತುಂ=ಪ್ರತ್ಯುಪಕಾರಮಾಡಿ ಋಣ-ಮುಕ್ತರಾಗಲು ಕಾರ್ತ್ಸ್ನ್ಯೇನ ಆಯುಷಾ ಅಪಿ=ಸಂಪೂರ್ಣ ಆಯುಷ್ಯದಿಂದಲೂ ನ ಪ್ರಭವಃ=ಸಮರ್ಥರಲ್ಲ, ಯೇ ಚ ಅನ್ಯೇ=ಇನ್ನು ನನ್ನಿಂದಭಿನ್ನರಾದ, ಗುಣಗೃಧ್ರವಃ= ಗುಣಲುಬ್ಧರಾದವರೂಸಹನಪ್ರಭವಂತಿ=ಸಮರ್ಥರಲ್ಲ ವಾ=ಜನ್ಮಾಂತರದಲ್ಲಿಯೂ ಸಮರ್ಥರಲ್ಲ ॥೨೦॥

**ಅಥಾಪಿ ಕಾಮಮೇನಂ ತೇ ಪ್ರಜಾಯೈ ಕರವಾಣ್ಯಲಂ ।**
**ಯಥಾ ಮಾಂ ನಾತಿವಾಚಂತಿ ಮೂಹೂರ್ತಂ ಪ್ರತಿಪಾಲಯ॥೨೧॥**

ಅಥಾಪಿ=ನಿನ್ನ ಅನುಕರಣ(ಪ್ರತ್ಯುಪಕಾರ) ಅಶಕ್ಯವಾಗಿದ್ದರೂ ಪ್ರಜಾಯೈ= ಪುತ್ರೋತ್ಪತ್ತಿಗಾಗಿ ಏನಂ ತೇ ಕಾಮಂ=ಈ ನಿನ್ನ ಮನೋಭಿಲಾಷೆಯನ್ನು ಅಲಂ ಕರವಾಣಿ=ಪೂರ್ಣಗೊಳಿಸುವೆನು ಮಾಂ=ನನ್ನನ್ನು ಯಥಾ ನ ಅತಿವಾಚಂತಿ= ಜ್ಞಾನಿಗಳು ನಿಂದಿಸುವುದಿಲ್ಲವೋ ಯಥಾ ಮುಹೂರ್ತಂ ಪ್ರತಿಪಾಲಯ=ಯಾವ ಮುಹೂರ್ತವನ್ನು ಪರಿಪಾಲಿಸುವುದರಿಂದ ನಿಂದಿಸುವುದಿಲ್ಲವೋ ಆ ಒಂದು ಮುಹೂರ್ತದವರೆಗೆ ಧೈರ್ಯ ಮಾಡು. ಒಂದು ಮೂಹೂರ್ತ ಕಳೆಯುವವರೆಗೆ ತಡೆದುಕೊಳ್ಳು ಪ್ರತೀಕ್ಷಿಸು ಎಂದು ಭಾವ ॥೨೧॥

**ಏಷಾ ಘೋರತಮಾ ವೇಲಾ ಘೋರಾಣಾಂ ಘೋರದರ್ಶನಾ ।**
**ಚರಂತಿ ಯಸ್ಯಾಂ ಭೂತಾನಿ ಭೂತೇಶಾನುಚರಾಣಿ ಹ ॥೨೨॥**

ಏಷಾ=ಈ,ವೇಲಾ=ವೇಳೆಯು(ಸಂಧ್ಯಾಕಾಲವು) ಘೋರಾಣಾಂ=ಕ್ರೂರರಾದ-ವರ, ಘೋರತಮಾ=ಅತಿಕ್ರೂರವಾದ, ಘೋರದರ್ಶನಾ=ಕ್ರೂರದೃಷ್ಟಿಯುಳ್ಳದ್ದು ಯಸ್ಯಾಂ=ಯಾವ ಈ ವೇಳೆಯಲ್ಲಿ ಭೂತೇಶಾನುಚರಾಣಿ=ರುದ್ರದೇವರ ಸೇವಕರಾದ ಭೂತಾನಿ=ಪಿಶಾಚಿಗಳು ಚರಂತಿ=ಸಂಚರಿಸುವರು ॥೨೨।

ಅವೇನು ನಮಗೆ ಮಾಡಿಯಾವು ಎಂದರೆ ಹೇಳುವರು –

**ಏತಸ್ಯಾಂ ಸಾಧ್ವಿ ಸಂಧ್ಯಾಯಾಂ ಭಗವಾನ್ ಭೂತಭಾವನಃ ।**
**ಪರಿತೋ ಭೂತಪಾರ್ಷದ್ಭಿರ್ವೃಷೇಣಾಟತಿ ಭೂತರಾಟ್ ॥೨೩॥**

ಹೇ ಸಾಧ್ವಿ=ಎಲೆ ಪತಿವ್ರತೆಯೇ ಏತಸ್ಯಾಂ ಸಂಧ್ಯಾಯಾಂ=ಈ ಸಂಧಿಕಾಲದಲ್ಲಿ ಭಗವಾನ್=ಪೂಜ್ಯನಾದ ಭೂತಭಾವನಃ=ಭೂತೋತ್ಪಾದಕನಾದ ಭೂತರಾಟ್=ರುದ್ರದೇವನು ಭೂತಪಾರ್ಷದ್ಭಿಃ=ಭೂತಗಳೆಂಬ ಭೃತ್ಯರಿಂದ ಕೂಡಿಕೊಂಡು ವೃಷೇಣ=ಎತ್ತನ್ನೇರಿ ಪರಿತಃ= ಸುತ್ತಲೂ ಅಟತಿ=ಸಂಚರಿಸುವನು. ರುದ್ರಾದಿ ಅಧಿಕಾರಿಗಳು ನಮ್ಮನ್ನು ಶಿಕ್ಷಿಸುವರು ಎಂದು ಭಾವ ॥೨೩॥

ಹಾಗಾದರೆ ಅವರಿಗೆ ತಿಳಿಯದಂತಾಗುವೆನು ಎಂದರೆ ಅದು ಅಶಕ್ಯವೆಂದು ಹೇಳುವರು –

**ಶ್ಮಶಾನಚಕ್ರಾನಿಲಧೂಲಿಧೂಮ್ರವಿಕೀರ್ಣವಿದ್ಯೋತಜಟಾಕಲಾಪಃ ।**
**ಭಸ್ಮಾವಕುಂಠಾಮಲರುಕ್ಮದೇಹೋ ದೇವಸ್ತ್ರಿಭಿಃ ಪಶ್ಯತಿ ದೇವರಸ್ತೇ ॥**

ಶ್ಮಶಾನಚಕ್ರಾನಿಲಧೂಲಿಧೂಮ್ರವಿಕೀರ್ಣವಿದ್ಯೋತಜಟಾಕಲಾಪಃ=ಶ್ಮಶಾನದಲ್ಲಿರುವ ಚಕ್ರಾಕಾರವಾದ ಗಾಳಿಯಿಂದುಂಟಾದ ಧೂಳಿಯಿಂದ ಹೊಗೆಯ ಬಣ್ಣಉಳ್ಳ, ಹರವಿದ,ವಿಶಿಷ್ಟಕಾಂತಿಯಿಂದಕೂಡಿದ ಜಟಾಉಳ್ಳ ಭಸ್ಮಾವಕುಂಠಾಮಲರುಕ್ಮದೇಹಃ= ಭಸ್ಮಲೇಪನದಿಂದ ನಿರ್ಮಲವಾದ ಬೆಳ್ಳಿಯಂತೆ ಬಿಳಿಯಾದ ದೇಹವುಳ್ಳ ತೇ=ನಿನ್ನ ದೇವರಃ=ಸಹೋದರಿಯಾದ ಸತೀದೇವಿಯ ಪತಿಯಾದ ದೇವಃ= ರುದ್ರದೇವನು ತ್ರಿಭಿಃ=ಮೂರು ಕಣ್ಣುಗ್ಗಳಿಂದ ಪಶ್ಯತಿ=ನೋಡುವನು. ಅವರ ದರ್ಶನ ಭಯಪ್ರದವೆಂದು ತಿಳಿಸಲು ವಿಶೇಷಣಗಳು ಲಜ್ಜಾ ಹುಟ್ಟಿಸಲು 'ದೇವರಃ ಪಶ್ಯತಿ'ಎಂದಿರುವರು ॥೨೪॥

ಸ್ವಜನರಾದ ನಮಗೆ ಅವನು ದಂಡ ಮಾಡಲಾರನು ಎಂದರೆ ಹೇಳುವರು–

**ನ ಯಸ್ಯ ಲೋಕೇ ಸ್ವಜನಃ ಪರೋ ವಾ**
**ನಾತ್ಯಾದೃತೋ ನೋತ ಕಶ್ಚಿದ್ವಿಗರ್ಹ್ಯಃ ।**
**ವಯಂ ವ್ರತೈರ್ಯಚ್ಚರಣಾಪವಿದ್ಧಾ-**
**ಮಾಶಾಸ್ಮಹೇಽಜಾಂ ಬತ ಭುಕ್ತಭೋಗಾಂ ॥೨೫॥**

ಯಸ್ಯ=ಯಾವನಿಗೆ ಲೋಕೇ=ಜಗತ್ತಿನಲ್ಲಿ ಸ್ವಜನಃ=ನನ್ನವರು ಪರಃ=ಪರಕೀ-ಯನು ಅತ್ಯಾದೃತಃ=ಬಹಳ ಆದರಣೀಯನು ಉತ ಕಶ್ಚಿತ್ ವಿಗರ್ಹ್ಯಃ= ವಿಶೇಷವಾಗಿ ನಿಂದ್ಯನು ಯೋಗ್ಯತೆ ಮೀರಿ ಯಾರೂ ಇಲ್ಲ. ವಯಂ=ನಾವಾದರೂ

ವ್ರತೈಃ=ಅವನ ಆರಾಧನೆಗಳಿಂದ ಯಚ್ಚರಣಾಪವಿದ್ಧಾಂ=ಯಾವನ ಕಾಲಿನಿಂದ ಕೆಳಗೆ ಹಾಕಲ್ಪಟ್ಟ ಭುಕ್ತಭೋಗಾಂ=ಅನುಭವಿಸಿಬಿಟ್ಟ ಅಜಾಂ=ಮನೆ, ಮಡದಿ ಮುಂತಾದ ಪ್ರಕೃತಿಯನ್ನು ಆಶಾಸ್ಮಹೇ ಇಚ್ಛಿಸುವೆವಷ್ಟೇ ! ಬತ=ಖೇದವು ಅಂದರೆ ನಮಗೆ ಅವರಂತೆ ವೈರಾಗ್ಯವಿಲ್ಲ ಆದ್ದರಿಂದ ಅವನ ಭಯ ನಮಗಿದೆ ಎಂದು ಭಾವ ॥೨೫॥

ಈ ರುದ್ರದೇವರು ಪಿಶಾಚಿಗಳಂತೆ ಸಂಚರಿಸುವರು ಆದ್ದರಿಂದ ಅವುಗಳಂತೆಯೇ ನಮಗೇನು ಮಾಡಲಾರರು ಎಂದರೆ ಹೇಳುವರು –

**ಯಸ್ಯಾನವದ್ಯಾಚರಿತಂ ಮನೀಷಿಣೋ**
**ಗೃಹ್ಣಂತ್ಯವಿದ್ಯಾಪಟಲಂ ಬಿಭಿತ್ಸವಃ ।**
**ನಿರಸ್ತಸಾಮ್ಯಾತಿಶಯೋ ಹರೇಃ ಸ್ವಯಂ**
**ಪಿಶಾಚಚರ್ಯಾಮಚರತ್ ಸತಾಂ ಗತಿಃ ॥೨೬॥**

ಯಸ್ಯ=ಯಾವ ರುದ್ರದೇವರ ಅನವದ್ಯಾಚರಿತಂ=ವಿಷಯರಾಗಾದಿದೋಷ-ವಿಲ್ಲದ ಹರಿಧ್ಯಾನಮುಂತಾದ ಆಚರಣೆಗಳನ್ನು ಮನೀಷಿಣಃ=ನಾರದಾದಿ ಜ್ಞಾನಿಗಳು ಅವಿದ್ಯಾಪಟಲಂ=ಅಪರೋಕ್ಷಜ್ಞಾನಕ್ಕೆ ಪ್ರತಿಬಂಧಕವಾದ ಅವಿದ್ಯೆ ಎಂಬ ತೆರೆಯನ್ನು ಬಿಭಿತ್ಸವಃ ಸಂತಃ=ಭೇದಿಸಲಿಚ್ಛಿಸಿದವರಾಗಿ, ಗೃಹ್ಣಂತಿ=ಸ್ವೀಕರಿಸುವರೋ ಅಂಥ ನಿರಸ್ತಸಾಮ್ಯಾತಿಶಯಃ=ಇಂದ್ರಾದಿಸರ್ವಜೀವರಲ್ಲಿ ಸಮಾಧಿಕರಹಿತನಾದ ರುದ್ರ-ದೇವರು ಹರೇಃ=ಪರಮಾತ್ಮನ ಆಜ್ಞೆಯಿಂದ ಸತಾಂ=ನಾರದಾದಿಗಳಿಗೆ ಗತಿಃ= ಉಪದೇಶಕ್ಕಾಗಿ ಗಮ್ಯನಾದವನು ಸ್ವಯಂ=ತಾನು ಪಿಶಾಚಚರ್ಯಾಂ ಅಚರತ್= ಪಿಶಾಚದಂತೆ ವ್ಯವಹಾರ ಮಾಡುವನು. ಯಃಹರಿಃ ನಿರಸ್ತಸಾಮ್ಯಾತಿಶಯಃ ತಸ್ಯ ಹರೇಃ ಹೀಗೂ ಅನ್ವಯ ಮಾಡಿ ಸಂಪೂರ್ಣವಾಗಿ ಸಾಮ್ಯಾಧಿಕರಹಿತನಾದ ಹರಿಯ ಆಜ್ಞೆಯಿಂದ ಎಂದೂ ಅರ್ಥ ಮಾಡಬಹುದು. ಕಾರಣ ಅವನು ಹರಿಪ್ರಿಯನಾದುದರಿಂದ ರುದ್ರನಿಗೆ ಅಪ್ರಿಯವಾದುದು ಹರಿಗೂ ಅಪ್ರಿಯವೇ ಕಾರಣ ಏನೂ ಮಾಡಲಾರ ಎನ್ನುವಂತಿಲ್ಲ ॥೨೬॥

ಹಾಗಾದರೆ ಕೆಲವರು ಇವನನ್ನು ನೋಡಿ ನಗುವರಲ್ಲ ಎಂದರೆ ಹೇಳುವರು –

**ಹಸಂತಿ ಯಸ್ಯಾಚರಿತಂ ಹಿ ದುರ್ಭಗಾಃ**
**ಸ್ವಾತ್ಮನ್ ರತಸ್ಯಾವಿದುಷಃ ಸಮೀಹಿತಂ ।**
**ಯೈರ್ವಸ್ತ್ರಮಾಲ್ಯಾಭರಣಾನುಲೇಪನೈಃ**
**ಶ್ವಭೋಜನಂ ಸ್ವಾತ್ಮತಯೋಪಲಾಲಿತಂ ॥೨೭॥**

ಯೈಃ=ಯಾರಿಂದ ಶ್ವಭೋಜನಂ=ನಾಯಿಗೆ ಅನ್ನವಾದ ಈ ಶರೀರವು ವಸ್ತ್ರಮಾಲ್ಯಾಭರಣಾನುಲೇಪನ್ಯೈಃ=ಬಟ್ಟೆ ಮಾಲೆ, ಆಭರಣ, ಗಂಧಗಳಿಂದ ಸ್ವಾತ್ಮತಯಾ=ತಾನೇ ಎಂದು ತಿಳಿದು ಉಪಲಾಲಿತಂ=ಪೋಷಿತವಾಗಿದೆಯೋ ತೇ= ಅಂಥ ದುರ್ಭಗಾಃ=ದುಃಖರೂಪವಾದ ತಮಸ್ಸನ್ನು ಹೊಂದಲು ಯೋಗ್ಯರಾದವರು ಸ್ವಾತ್ಮನ್ ರತಸ್ಯ=ತನ್ನ ಅಂತರ್ಯಾಮಿಯಲ್ಲಿ ಆಸಕ್ತನಾದ ರುದ್ರದೇವರ ಸಮೀಹಿತಂ= ಅಭಿಪ್ರಾಯವನ್ನು ಅವಿದುಷಃ=ತಿಳಿಯದವರು ಯಸ್ಯ ಆಚರಿತಂ ಹಸಂತಿ= ರುದ್ರದೇವರ ಆಚರಣೆಯನ್ನು ನೋಡಿ ನಗುವರು. (ಅಯೋಗ್ಯರೆಂದು ಭಾವ) ಅಥವಾ ಸಮೀಹಿತಂ=ವಿಡಂಬನವನ್ನು ಅವಿದುಷಃ=ತಿಳಿಯದವರು ಸ್ವಾತ್ಮನಿ= ಸ್ವರೂಪದಲ್ಲೆ ರತಸ್ಯಬತ=ರತನಾದ ಶ್ರೀಹರಿಯ ಆಚರಿತಂ=ಉಪನಯನಕ್ಕಿಂತಲೂ, ಅಣ್ಣನ ಮದುವೆಗಿಂತಲೂ ಮೊದಲು ವಿವಾಹ, ಪುತ್ರೋತ್ಪತ್ತಿ ಮುಂತಾದವನ್ನು ಕೇಳಿ ಹಸಂತಿಬತ=ನಗುವರು ತಮೋಯೋಗ್ಯರು ಹೀಗೂ ಅರ್ಥ ॥೨೭॥

**ಬ್ರಹ್ಮಾದಯೋ ಯತ್ಕೃತಸೇತುಪಾಲಾಃ**
**ಯತ್ಕಾರಣಂ ವಿಶ್ವಮಿದಂ ಹಿ ಮಾಯಯಾ ।**
**ಆಜ್ಞಾಕರೀ ತಸ್ಯ ಪಿಶಾಚಚರ್ಯಾ**
**ಅಹೋ ವಿಭೂಮ್ನಶ್ಚರಿತಂ ವಿಡಂಬನಂ ॥೨೮॥**

ಬ್ರಹ್ಮಾದಯಃ=ಬ್ರಹ್ಮಾದಿದೇವತೆಗಳು ಯತ್ಕೃತಸೇತುಪಾಲಾಃ=ಯಾವ ಶ್ರೀಹರಿ- ಯಿಂದ ಮಾಡಲ್ಪಟ್ಟ ಧರ್ಮಮರ್ಯಾದೆಯನ್ನು ನಡೆಸುವರೋ ಇದಂ ವಿಶ್ವಂ= ಈ ಜಗತ್ತು ಮಾಯಯಾ=ಇಚ್ಛೆಯಿಂದ ಯತ್ಕಾರಣಂ=ಯಾವ ಹರಿಯೇ ಕಾರಣವಾಗಿವುಳ್ಳದ್ದೋ ತಸ್ಯ=ಆ ಹರಿಯ ಆಜ್ಞಾಕರೀ=ಗರ್ಭಿಣಿಯವಧೆ- ಯಿಂದುಂಟಾದ ಪಾಪಪರಿಹಾರಕ್ಕೆ ವಿಷ್ಣುವಿನಿಂದ ಮಾಡಲ್ಪಟ್ಟ ಆಜ್ಞೆಯನ್ನು ನಡೆಸುವುದಕ್ಕಾಗಿಯೇ,ರುದ್ರಸ್ಯ=ರುದ್ರದೇವರ ಪಿಶಾಚಚರ್ಯಾ=ಪಿಶಾಚವೃತ್ತಿಯು ವಿಭೂಮ್ನಃ=ವಿಶೇಷವಾಗಿ ಪೂರ್ಣನಾದ ವಿಷ್ಣುವಿನ ಚರಿತಂ=ರುದ್ರಾದಿಗಳಿಗೆ ಆಜ್ಞಾಪಿಸುವ ಚರಿತೆಯು, ವಿಡಂಬನಂ=ಲೋಕಾನುಕರಣವು ಅಹೋ=ಆಶ್ಚರ್ಯ

ರುದ್ರದೇವರು ಯಾವುದೊ ಕಾರಣದಿಂದ ಪಿಶಾಚಚರ್ಯೆ ನಡೆಸಿದರು, ಆ ಕಾರಣವೇನೆಂದು ಹೇಳುವ ಈ ಶ್ಲೋಕದಲ್ಲಿ ಯಚ್ಛಬ್ದಗಳಿಂದ ರುದ್ರನನ್ನು ತೆಗೆದುಕೊಂಡರೆ ಬ್ರಹ್ಮಾದಿಗಳು ಅವನಿಂದ ಮಾಡಿದ ಧರ್ಮಮರ್ಯಾದಾ- ಪಾಲಕರೆನ್ನುವದು ಯುಕ್ತವಾಗಲಾರದು. ಮತ್ತು ತಸ್ಯ ರುದ್ರನ ಆಜ್ಞಾಕರಣರೂಪ ಪಿಶಾಚಚರ್ಯೆಯು ಮತ್ತಾರದೋ ಎಂದರ್ಥವಾಗುವುದು ಕಾರಣ ಪ್ರಮಾಣದಿಂದ ವಿವಕ್ಷಿತ ಅರ್ಥ ತಿಳಿಸುವರು–

**ಪಿಶಾಚಚರ್ಯಾಮಚರದ್ರುದ್ರೋ ವಿಷ್ಣ್ವಾಜ್ಞಯೈವ ತು ।**
**ಗರ್ಭಿಣೀವಧನೋದಾರ್ಥಮಹೋ ವಿಷ್ಣುರ್ವಿಡಂಬಕೃತ್ ॥**

**ಇತಿ ವಾರಾಹೇ**

ಒಬ್ಬ ಗರ್ಭಿಣಿಯ ವಧದಿಂದುಂಟಾದ ಪಾಪಪರಿಹಾರಕ್ಕಾಗಿ ವಿಷ್ಣುವಿನ ಆಜ್ಞೆಯಿಂದಲೇ ಭಕ್ತಿ ಪೂರ್ವಕವಾಗಿ ಪಿಶಾಚಚರ್ಯೆ ನಡೆಸಿದನು ರುದ್ರದೇವನು. ವಿಷ್ಣುವು ಲೋಕಾನುಕರಣ ಮಾಡುವನು ಎಂದು ವರಾಹದಲ್ಲಿದೆ. ರುದ್ರದೇವರು ಅಪರೋಕ್ಷಜ್ಞಾನಿಗಳಾದುದರಿಂದ ಗರ್ಭಿಣೀ ವಧದಿಂದ ಪಾಪ ಬರುವ ಪ್ರಸಕ್ತಿಯೇ ಇಲ್ಲ. ಕಾರಣ ಆದರ ಅಭಿಪ್ರಾಯ ಹೀಗೆ – ಲೋಕದಲ್ಲಿ ಭೃತ್ಯರು ಪಾಪಮಾಡಿದರೆ ಅದರ ಪ್ರಾಯಶ್ಚಿತ್ತಕ್ಕಾಗಿ ಒಡೆಯನು ಯಾವುದಾದರೊಂದು ವ್ರತವನ್ನು ಮಾಡೆಂದು ಹೇಳುವನು ಹಾಗೆಯೇ ರುದ್ರದೇವರಿಗೆ ಪಾಪವಿಲ್ಲದಿದ್ದರೂ ಲೋಕಶಿಕ್ಷಾರ್ಥವಾಗಿ ಒಡೆಯನಾದ ಶ್ರೀಹರಿಯು ಭೃತ್ಯನಾದ ರುದ್ರನಿಗೆ ಪಿಶಾಚಚರ್ಯೆಯನ್ನು ವಿಧಿಸಿದನು. ಅದನ್ನು ರುದ್ರನು ಭಕ್ತಿಯಿಂದ ಆಚರಿಸಿದನು ಎಂದು ತಿಳಿಯಬೇಕು ॥೨೮॥

**ಮೈತ್ರೇಯ ಉವಾಚ**

**ಏವಂ ಸಂವೇದಿತಾ ಭರ್ತ್ರಾ ಮನ್ಮಥೋನ್ಮಥಿತೇಂದ್ರಿಯಾ ।**
**ಜಗ್ರಾಹ ವಾಸೋ ಬ್ರಹ್ಮರ್ಷೇರ್ವೃಷಲೀವ ಗತತ್ರಪಾ ॥೨೯॥**

ಭರ್ತ್ರಾ=ಗಂಡನಿಂದ ಏವಂ=ಈ ರೀತಿ ಸಂವೇದಿತಾ=ಚೆನ್ನಾಗಿ ತಿಳಿಸಲ್ಪಟ್ಟರೂ ಮನ್ಮಥೋನ್ಮಥಿತೇಂದ್ರಿಯಾ=ಕಾಮಪೀಡಿತವಾದ ಇಂದ್ರಿಯವುಳ್ಳವಳಾಗಿ ಗತತ್ರಪಾ=ಲಜ್ಜೆತೊರೆದು ವೃಷಲೀವ=ವೇಶ್ಯೆಯಂತೆ ಬ್ರಹ್ಮರ್ಷೇಃ=ಕಶ್ಯಪರ ವಾಸಃ ಜಗ್ರಾಹ=ವಸ್ತ್ರವನ್ನು ಹಿಡಿದಳು ॥೨೯॥

**ಸಂವಿದಿತ್ವಾಥ ಭಾರ್ಯಾಯಾಸ್ತನ್ನಿರ್ಬಂಧಂ ವಿಕರ್ಮಣಿ ।**
**ನತ್ವಾ ದಿಷ್ಟಾಯ ರಹಸಿ ತಯಾ ಚೋಪವಿವೇಶ ಹ ॥೩೦॥**

ವಿಕರ್ಮಣಿ=ನಿಷಿದ್ಧಕಾರ್ಯದಲ್ಲಿ ಭಾರ್ಯಾಯಾಃ=ಹೆಂಡತಿಯ ತನ್ನಿರ್ಬಂಧಂ=ಆ ನಿರ್ಬಂಧವನ್ನು ಸಂವಿದಿತ್ವಾ=ಚೆನ್ನಾಗಿ ಅರ್ಥಮಾಡಿಕೊಂಡು ದಿಷ್ಟಾಯ ನತ್ವಾ=ಕರ್ಮಸಾಕ್ಷಿಯಾದ ದೇವನಿಗೆ ನಮಸ್ಕರಿಸಿ, ರಹಸಿ=ಏಕಾಂತದಲ್ಲಿ, ಉಪವಿವೇಶ=ಅವಳೊಡನೆ ಮೈಥುನ ಮಾಡಿದನು, ಹ=ಹರಿಸಂಕಲ್ಪವೇ ಹೀಗಿತ್ತು ॥೩೦॥

**ಅಥೋಪಸ್ಪೃಶ್ಯ ಸಲಿಲಂ ಪ್ರಾಣಾನಾಯಮ್ಯ ವಾಗ್ಯತಃ ।**
**ಧ್ಯಾಯನ್ ಜಜಾಪ ವಿರಜಂ ಬ್ರಹ್ಮ ಜ್ಯೋತಿಃ ಸನಾತನಮ್ ॥೩೧॥**

ಅಥ=ನಂತರ ಸಲಿಲಂ ಉಪಸ್ಪೃಶ್ಯ=ಸ್ನಾನಮಾಡಿ ಪ್ರಾಣಾನಾಯಮ್ಯ=ಶ್ವಾಸವನ್ನು ನಿರೋಧಿಸಿ ವಾಗ್ಯತಃ=ಮೌನವಾಗಿ ಸನಾತನಂ=ಪುರಾತನನಾದ ಜ್ಯೋತಿಃ=ಪ್ರಕಾಶರೂಪನಾದ ವಿರಜಂ=ದೋಷರಹಿತನಾದ ಬ್ರಹ್ಮ=ಪರಮಾತ್ಮನನ್ನು ಧ್ಯಾಯನ್=ಧ್ಯಾನ ಮಾಡುತ್ತ ಜಜಾಪ=ಗಾಯತ್ರಿಯನ್ನು ಜಪಿಸಿದನು ॥೩೧॥

**ದಿತಿಸ್ತು ವ್ರೀಡಿತಾ ತೇನ ಕರ್ಮಾವದ್ಯೇನ ಭಾರತ ।**
**ಉಪಸಂಗಮ್ಯ ವಿಪ್ರರ್ಷಿಮಧೋಮುಖ್ಯಭ್ಯಭಾಷತ ॥೩೨॥**

ಹೇ ಭಾರತ=ವಿದುರನೇ ತೇನ ಕರ್ಮಾವದ್ಯೇನ=ಆ ಕಾರ್ಯದಿಂದುಂಟಾದ ದೋಷದಿಂದ ವ್ರೀಡಿತಾ=ಲಜ್ಜಿತಳಾದ ದಿತಿಃ ತು=ದಿತಿದೇವಿಯಾದರೂ ವಿಪ್ರರ್ಷಿಂ=ಬ್ರಾಹ್ಮಣ ಶ್ರೇಷ್ಠನಾದ ಕಶ್ಯಪನನ್ನು ಉಪಸಂಗಮ್ಯ=ಸಮೀಪಿಸಿ ಅಧೋಮುಖೀ=ಕೆಳಗೆ ಮುಖಮಾಡಿ ಅಭ್ಯಭಾಷತ=ಮಾತನಾಡಿದಳು ॥೩೨॥

**ನ ಮೇ ಗರ್ಭಮಿಮಂ ಬ್ರಹ್ಮನ್ ಭೂತಾನಾಮೃಷಭೋಽವಧೀತ್ ।**
**ರುದ್ರಃ ಪತಿರ್ಹಿ ಭೂತಾನಾಂ ಯಸ್ಯಾಕರವಮಂಹಸಂ ॥೩೩॥**

ಹೇ ಬ್ರಹ್ಮನ್=ಪತಿಯೇ ಯಸ್ಯ=ಯಾವ ರುದ್ರದೇವರಿಗೆ ಅಂಹಸಂ=ಪಾಪವನ್ನು ಅಕರವಂ=ಮಾಡಿದೆನೋ, ಭೂತಾನಾಂ ಋಷಭಃ=ಪ್ರಾಣಿಗಳಿಗೆ ಶ್ರೇಷ್ಠರಾದ, ಭೂತಾನಾಂ ಪತಿಃ ಸಃ ರುದ್ರಃ=ಭೂತನಾಥನಾದ ಆ ರುದ್ರದೇವರು, ಮೇ=ನನ್ನ ಇಮಂ ಗರ್ಭಂ=ಈ ಗರ್ಭವನ್ನು ನ ಅವಧೀತ್=ಕೊಲ್ಲದಿರಲಿ ॥೩೩॥

ಎಲ್ಲ ಅಪರಾಧಗಳಿಗೆ ನಮಸ್ಕಾರ ಬಿಟ್ಟು ಬೇರೆ ಪ್ರಾಯಶ್ಚಿತ್ತವಿಲ್ಲ ಎಂದು ತಿಳಿದು ತಾನು ಮಾಡಿದ ದೋಷಪರಿಹಾರವಾಗುವಂತೆ ನಮಸ್ಕಾರ ಮಾಡುವಳು–

**ನಮೋ ರುದ್ರಾಯ ಮಹತೇ ದೇವಾಯೋಗ್ರಾಯ ಮೀಢುಷೇ ।**
**ಶಿವಾಯ ನ್ಯಸ್ತದಂಡಾಯ ಧೃತದಂಡಾಯ ಮನ್ಯವೇ ॥೩೪॥**

ಮಹತೇ=ಉತ್ತಮನಾದ ದೇವಾಯ=ಪ್ರಕಾಶಮಾನನಾದ ಉಗ್ರಾಯ=ದುಷ್ಟರಿಗೆ ಅತಿಕ್ರೂರನಾದ ಮೀಢುಷೇ=ಭಕ್ತಾಭೀಷ್ಟಪ್ರದನಾದ ನ್ಯಸ್ತದಂಡಾಯ=ಸಜ್ಜನರ ವಿಷಯದಲ್ಲಿ ದಂಡವನ್ನು ಕೆಳಗಿರಿಸಿದ (ಶಿಕ್ಷಿಸದ) ಧೃತದಂಡಾಯ=ದುಷ್ಟರಿಗಾಗಿ ದಂಡವನ್ನು ಧರಿಸಿದ ಮನ್ಯವೇ=ಕ್ರೋಧವುಳ್ಳ ರುದ್ರಾಯ=ಭಕ್ತಾಪರಾಧವೆಂಬ ರೋಗಪರಿಹಾರಕನಾದ ಶಿವಾಯ=ಮಂಗಳಕರನಾದ ಈಶ್ವರನಿಗೆ ನಮಃ=ನಮಸ್ಕಾರವು ॥೩೪॥

**ಸ ನಃ ಪ್ರಸೀದತಾದ್ ಭೀಮೋ ಭಗವಾನುರ್ವನುಗ್ರಹಃ ।**
**ವ್ಯಾಧಸ್ಯಾಪ್ಯನುಕಂಪ್ಯಾನಾಂ ಸ್ತ್ರೀಣಾಂ ದೇವ ಸತೀಪತಿಃ ॥೩೫॥**

ಉರ್ವನುಗ್ರಹಃ=ಬಹಳ ಅನುಗ್ರಹ ಮಾಡುವ ಭೀಮಃ=ಭಯವನ್ನುಂಟು ಮಾಡದ (ಮಾ ಭೀಃ ಯಸ್ಮಾದಸೌ ಭೀಮಃ) ಭಗವಾನ್=ಪೂಜ್ಯನಾದ ಸತೀಪತಿಃ= ನನ್ನ ತಂಗಿಯ ಪತಿಯಾದ ದೇವಃ ಸಃ=ದ್ಯೋತಮಾನನಾದ ರುದ್ರದೇವನು ವ್ಯಾಧಸ್ಯಾಪಿ=ಹಿಂಸಕನಾದ ಬೇಡನಿಗೂ ಅನುಕಂಪ್ಯಾನಾಂ=ದಯನೀಯರಾದ ಸ್ತ್ರೀಣಾಂ ನಃ=ಸ್ತ್ರೀಯರಾದ ನಮ್ಮ ಮೇಲೆ ಪ್ರಸೀದತಾತ್=ಪ್ರಸನ್ನನಾಗಲಿ ॥೩೫॥

**ಮೈತ್ರೇಯ ಉವಾಚ**

**ಸ್ವಗರ್ಭಸ್ಯಾಶಿಷಂ ಲೋಕ್ಯಾಮಾಶಾಸಾನಾಂ ಪ್ರವೇಪತೀಂ ।**
**ನಿವೃತ್ತಸಂಧ್ಯಾನಿಯಮೋ ಭಾರ್ಯಾಮಾಹ ಪ್ರಜಾಪತಿಃ ॥೩೬॥**

ಸ್ವಗರ್ಭಸ್ಯ=ತನ್ನ ಗರ್ಭಕ್ಕೆ ಲೋಕ್ಯಾಂ=ಲೋಕನೀತಿಗನುಗುಣವಾದ (ಗರ್ಭವನ್ನು ಎಲ್ಲ ರೀತಿಯಿಂದ ರಕ್ಷಿಸುವುದು ಲೋಕನೀತಿ) ಆಶಿಷಂ ಆಶಾಸಾನಾಂ=ಶುಭವನ್ನು ಕೋರುವ ಪ್ರವೇಪತೀಂ=ಭಯದಿಂದ ನಡುಗುವ ಭಾರ್ಯಾಂ=ಹೆಂಡತಿಯನ್ನು ಕುರಿತು ನಿವೃತ್ತಸಂಧ್ಯಾನಿಯಮಃ=ಸಂಧ್ಯಾಕಾಲದ ನಿಯಮಗಳನ್ನು ಮುಗಿಸಿದವ-ನಾಗಿ ಪ್ರಜಾಪತಿಃ=ಕಶ್ಯಪರು ಆಹ=ಹೇಳಿದರು ॥೩೬॥

**ಕಶ್ಯಪ ಉವಾಚ**

**ಅಪ್ರಾಯತ್ಯಾದಾತ್ಮನಸ್ತೇ ದೋಷಾನ್ಮೌಹೂರ್ತಿಕಾದುತ ।**
**ಮನ್ನಿರ್ದೇಶಾತಿಚಾರೇಣ ದೇವಾನಾಂ ಚೈವ ಹೇಲನಾತ್ ॥೩೭॥**

ತೇ=ನಿನ್ನ ಆತ್ಮನಃ=ಮನಸ್ಸನ್ನು ಅಪ್ರಾಯತ್ಯಾತ್=ನಿಗ್ರಹಿಸಲು ಸರಿಯಾಗಿ ಪ್ರಯತ್ನ ಮಾಡದಿರುವುದರಿಂದ ಉತ=ಮತ್ತು ಮೌಹೂರ್ತಿಕಾತ್‌ದೋಷಾತ್= =ಸಂಧ್ಯಾಕಾಲವೆಂಬ ಮುಹೂರ್ತಸಂಬಂಧಿ ಮೈಥುನಜನಿತ ದೋಷದಿಂದಲೂ ಮನ್ನಿರ್ದೇಶಾತಿಚಾರೇಣ=ನನ್ನ ಆಜ್ಞೆಯ ಉಲ್ಲಂಘನದಿಂದಲೂ, ದೇವಾನಾಂ ಹೇಲನಾತ್ ಚ=ರುದ್ರಾದಿದೇವತೆಗಳಿಗೆ ಅವಮಾನ ಮಾಡಿದ್ದರಿಂದಲೂ ॥೩೭॥

**ಭವಿಷ್ಯತಸ್ತವಾಭದ್ರಾವಭದ್ರೇ ಜಾತರಾಧಮೌ ।**
**ಲೋಕಾನ್ ಸಪಾಲಾಂಸ್ತ್ರೀಂಶ್ಚಂಡಿ ಮುಹುರಾಕ್ರಂದಯಿಷ್ಯತಃ ॥೩೮॥**

ಹೇ ಅಭದ್ರೇ=ಅಮಂಗಲಳೇ ಚಂಡಿ=ಕ್ರೂರಳೇ ತವ=ನಿನಗೆ ಅಭದ್ರೌ= ಅಮಂಗಲರಾದ ಜಾತರಾಧಮೌ=ನೀಚರಾದ ಈರ್ವರು ಮಕ್ಕಳು ಭವಿಷ್ಯತಃ=

ಜನಿಸುವರು. ಸಪಾಲಾನ್=ಪಾಲಕರಿಂದ ಸಹಿತವಾದ ತ್ರೀನ್‌ಲೋಕಾನ್=ಮೂರು ಲೋಕಗಳನ್ನು ಮುಹುಃ=ಪುನಃ ಪುನಃ ಆಕ್ರಂದಯಿಷ್ಯತಃ=ಆಕ್ರಮಿಸಿ ಆಳಿಸುವರು. ರುದ್ರದೇವರ ಸಮಯದಲ್ಲಿ ಜನಿಸಿದ್ದರಿಂದ ರೋದನ ಮಾಡಿಸುವರು ಎಂದು ಭಾವ. ತಾಯಿಯ ದೋಷದಿಂದ ಮಕ್ಕಳಲ್ಲಿ ದೋಷ ಬರುವುದು ಎಂದು ತಿಳಿಸಲು ಅಭದ್ರೇ ಎಂದಿರುವರು. ಮಾತಾ ಭಸ್ತ್ರಂ ಪಿತುಃ ಪುತ್ರಃ ಎಂದಿರುವುದರಿಂದ ಬೀಜ ನಿರ್ದುಷ್ಟವಾದ ಮೇಲೆ ಅವರಿಗೆ ಹೇಗೆ ದೋಷವೆಂದರೆ ಹೇಳುವರು ಜಾತರಾಧಮೌ ಎಂದು ಉತ್ತಮಬೀಜವಾದರೂ ಶೂದ್ರಳಲ್ಲಿ ಪ್ರವಿಷ್ಟವಾದರೆ ಶೂದ್ರನಾಗುವಂತೆ ನಿನ್ನ ಜಠರದಲ್ಲಿ ಜನಿಸಿದ್ದರಿಂದ ಅಧಮರಾಗುವರು ॥೩೮॥

**ಪ್ರಾಣಿನಾಂ ಹನ್ಯಮಾನಾನಾಂ ದೀನಾನಾಮಕೃತಾಗಸಾಂ ।**
**ಸ್ತ್ರೀಣಾಂ ನಿಗೃಹ್ಯಮಾಣಾನಾಂ ಕೋಪಿತೇಷು ಮಹಾತ್ಮಸು ॥೩೯॥**

ಅಕೃತಾಗಸಾಂ=ಅಪರಾಧ ಮಾಡದಿರುವ ದೀನಾನಾಂ=ದಯನೀಯರಾದ ಪ್ರಾಣಿನಾಂ=ಜನರುಗಳು ಹನ್ಯಮಾನಾನಾಂ=ನಿನ್ನ ಮಕ್ಕಳಿಂದ ಕೊಲ್ಲಲ್ಪಡುತ್ತಿರಲು ಸ್ತ್ರೀಣಾಂ=ಸ್ತ್ರೀಯರುಗಳು ನಿಗೃಹ್ಯಮಾಣಾನಾಂ=ತೊಂದರೆಗೀಡಾಗುತ್ತಿರಲು ಮಹಾತ್ಮಸು=ಜ್ಞಾನಿಗಳು ಕೋಪಿತೇಷು ಸತ್ಸು=ಕುಪಿತರಾಗಲು ॥೩೯॥

**ತದಾ ವಿಶ್ವೇಶ್ವರಃ ಕ್ರುದ್ಧೋ ಭಗವಾನ್ ಲೋಕಭಾವನಃ ।**
**ಹನಿಷ್ಯತ್ಯವತೀರ್ಯಾಸೌ ಯಥಾದ್ರೀಂಶ್ಶತಪರ್ವಧೃಕ್ ॥೪೦॥**

ತದಾ=ಆಗ ಲೋಕಭಾವನಃ=ಜಗದುತ್ಪಾದಕನಾದ ಭಗವಾನ್=ಷಡ್ಗುಣೈಶ್ವರ್ಯ-ಶಾಲಿಯಾದ ವಿಶ್ವೇಶ್ವರಃ=ಜಗದೀಶ್ವರನಾದ ಶ್ರೀಹರಿಯು ಕ್ರುದ್ಧಃ=ಕುಪಿತನಾಗಿ ಅವತೀರ್ಯ=ಅವತಾರ ಮಾಡಿ ಅಸೌ=ಹರಿಯು ಶತಪರ್ವಧೃಕ್=ವಜ್ರಧಾರಿ-ಯಾದ ಇಂದ್ರನು ಅದ್ರೀನ್ ಯಥಾ=ಪರ್ವತವನ್ನು ಭೇದಿಸಿದಂತೆ ಹನಿಷ್ಯತಿ=ಸಂಹರಿಸುವನು ॥೪೦॥

**ದಿತಿರುವಾಚ**

**ವಧಂ ಭಗವತಾ ಸಾಕ್ಷಾತ್ ಸುನಾಭೋದಾರಬಾಹುನಾ ।**
**ಆಶಾಸೇ ಪುತ್ರಯೋರ್ಮಹ್ಯಂ ಮಾಕ್ರುದ್ಧಾದ್ ಬ್ರಾಹ್ಮಣಾತ್ ಪ್ರಭೋ ॥**

ಹೇ ಪ್ರಭೋ=ಸ್ವಾಮಿಯೆ ಮಹ್ಯಂ=ನನ್ನ ಪುತ್ರಯೋಃ=ಮಕ್ಕಳಿಗೆ ಸುನಾಭೋ-ದಾರಬಾಹುನಾ=ಸುದರ್ಶನ ಚಕ್ರದಿಂದ ಕೂಡಿದ ಉತ್ಕೃಷ್ಟವಾದ ಬಾಹುವುಳ್ಳ ಸಾಕ್ಷಾತ್ ಭಗವತಾ=ಶ್ರೀಹರಿಯಿಂದ ವಧಂ=ಸಂಹಾರವನ್ನು ಆಶಾಸೇ=ಇಚ್ಛಿಸುವೆನು

ಕ್ರುದ್ಧಾತ್ ಬ್ರಾಹ್ಮಣಾತ್ ಮಾ=ಸಿಟ್ಟಾದ ಬ್ರಾಹ್ಮಣರ ಶಾಪದಿಂದ ಮಾತ್ರ ಆಗುವುದು ಬೇಡ. 'ಕೋಪಿತೇಷು ಮಹಾತ್ಮಸು' ಎಂದದ್ದರಿಂದ ಶಂಕಿಸಿ ಈ ರೀತಿ ಪ್ರಾರ್ಥಿಸುವಳು ॥೪೧॥

ಬ್ರಹ್ಮಶಾಪದಿಂದ ಹತನಾದವನಿಗೆ ಆಗುವ ಅನಿಷ್ಟವನ್ನು ಹೇಳುವಳು-

**ನ ಬ್ರಹ್ಮದಂಡದಗ್ಧಸ್ಯ ನ ಭೂತಭಯದಸ್ಯ ಚ ।**
**ನಾರಕಾಶ್ಚಾನುಗೃಹ್ಣಂತಿ ಯಾಂ ಯಾಂ ಯೋನಿಮಸೌ ಗತಃ ॥೪೨॥**

ಬ್ರಹ್ಮದಂಡದಗ್ಧಸ್ಯ=ಬ್ರಾಹ್ಮಣರ ಶಾಪದಿಂದ ಸುಟ್ಟವ್ಯಕ್ತಿಗೆ ಭೂತಭಯದಸ್ಯ= ಪ್ರಾಣಿಗಳಿಗೆ ಭಯಜನಕನಾದವನಿಗೆ ನಾರಕಃ ಚ=ನರಕದಲ್ಲಿ ಬಿದ್ದವರೂ ಸಹ ನ ಅನುಗೃಣ್ಣಂತಿ=ದಯೆಮಾಡಲಾರರು ಅಸೌ=ಇವನು ಯಾಂ ಯಾಂ=ಯಾವ ಯಾವ ಯೋನಿಂ ಗತಃ=ಯೋನಿಯಲ್ಲಿ ಜನಿಸುವನೋ ಅಲ್ಲಿರುವವರೂ ನ ಅನುಗೃಹ್ಣಂತಿ=ದಯೆಮಾಡಲಾರರು ॥೪೨॥

**ಕಶ್ಯಪ ಉವಾಚ**

**ಕೃತಶೋಕಾನುತಾಪೇನ ಸದ್ಯಃ ಪ್ರತ್ಯವಮರ್ಶನಾತ್ ।**
**ಭಗವತ್ಯುರುಮಾನಾಚ್ಚ ಭವೇ ಮಯ್ಯಪಿ ಚಾದರಾತ್ ॥೪೩॥**

ಕೃತಶೋಕಾನುತಾಪೇನ=ಮಾಡಿದ ಪಾಪದಿಂದುಂಟಾದ ದುಃಖದಿಂದಾದ ಪಶ್ಚಾತ್ತಾಪದಿಂದಲೂ ಸದ್ಯಃ=ತತ್‌ಕ್ಷಣದಲ್ಲಿಯೇ ಪ್ರತ್ಯವಮರ್ಶನಾತ್=ಯುಕ್ತಾಯುಕ್ತ ವಿಚಾರಬಂದುದರಿಂದಲೂ ಭಗವತಿ=ಪರಮಾತ್ಮನಲ್ಲಿ ಉರುಮಾನಾತ್=ಅಂತ್ಯಂತ ಗೌರವವಿರುವುದರಿಂದಲೂ ಭವೇ=ರುದ್ರದೇವರಲ್ಲಿ ಮಯಿ ಚ ನನ್ನಲ್ಲಿಯೂ ಆದರಾತ್=ವಿಶ್ವಾಸವಿರುವುದರಿಂದಲೂ ॥೪೩॥

**ಪುತ್ರಸ್ಯೈವ ಚ ಪುತ್ರಾಣಾಂ ಭವಿತೈಕಃ ಸತಾಂ ಮತಃ ।**
**ಗಾಯಂತಿ ಯದ್ ಯಶಃ ಶುದ್ಧಂ ಭಗವದ್ಯಶಸಾ ಸಮಮ್ ॥೪೪॥**

ಪುತ್ರಸ್ಯ=ಹಿರಣ್ಯಕಶಿಪುವಿನ ಪುತ್ರಾಣಾಂ ಮಧ್ಯೇ=ಮಕ್ಕಳಲ್ಲಿ ಏಕಃ=ಒಬ್ಬನು ಸತಾಂ ಮತಃ=ಸಜ್ಜನರಿಗೆ ಸಮ್ಮತನು ಭವಿತಾ=ಆಗುವನು. ಯದ್ಯಶಃ=ಯಾವನ ಕೀರ್ತಿಯನ್ನು ಭಗವದ್ಯಶಸಾ ಸಮಂ=ಶ್ರೀಹರಿಯ ಕೀರ್ತಿಯ ಜೊತೆಗೆ ಗಾಯಂತಿ=ಮುಂದೆ ಗಾನ ಮಾಡುವರು ॥೪೪॥

**ಯೋಗೈರ್ಹೇಮೇವ ದುರ್ವರ್ಣಂ ಭಾವಯಿಷ್ಯಂತಿ ಸಾಧವಃ ।**
**ನಿರ್ವೈರಾದಿಭಿರಾತ್ಮಾನಂ ಯಚ್ಛೀಲಮನುವರ್ತಿತುಂ ॥೪೫॥**

ಸಾಧವಃ=ಸಜ್ಜನರು ಯಚ್ಛೀಲಂ=ಯಾವ ನಿನ್ನ ಮೊಮ್ಮಗನ ಶಮದಮಾದಿ ಸ್ವಭಾವವನ್ನು ಅನುವರ್ತಿತುಂ=ಅನುಸರಿಸಲು (ಪಡೆಯಲು) ನಿರ್ವೈರಾದಿಭಿಃ ಯೋಗೈಃ=ನಿರ್ವೈರಮುಂತಾದ ಉಪಾಯಗಳಿಂದ ಆತ್ಮಾನಂ=ಅಂತಃಕರಣವನ್ನು ದುರ್ವರ್ಣಂ=ಹೀನಬಣ್ಣದ ಹೇಮ ಇವ=ಚಿನ್ನವನ್ನು ಯೋಗೈಃ=ಪುಟಕ್ಕೆ ಹಾಕುವುದೇ ಮೊದಲಾದ ಉಪಾಯಗಳಿಂದ ಶುದ್ಧಗೊಳಿಸುವಂತೆ ಭಾವಯಿಷ್ಯಂತಿ= ಶುದ್ಧಗೊಳಿಸಿಕೊಳ್ಳುವರು ॥೪೫॥

**ಯತ್ಪ್ರಸಾದಾದಿದಂ ವಿಶ್ವಂ ಪ್ರಸೀದತಿ ಯದಾತ್ಮಕಂ ।**
**ಶಶ್ವದ್ದೃಕ್ ಭಗವಾನ್ ಯಸ್ಯ ತೋಷ್ಯತೇಽನನ್ಯಯಾ ದೃಶಾ ॥೪೬॥**

ಯತ್ಪ್ರಸಾದಾತ್=ಯಾವ ಭಗವಂತನ ಪ್ರಸಾದದಿಂದ ವಿಶ್ವಂ=ಬ್ರಹ್ಮಾದಿ ಪ್ರಪಂಚವು ಪ್ರಸೀದತಿ=ಪ್ರಸನ್ನವಾಗುವುದು ಆದ್ದರಿಂದ ಯದಾತ್ಮಕಂ=ಯಾವ ಭಗವತ್ಸ್ವಾಮಿಕವಾಗಿದೆಯೋ ಯಃ=ಯಾವನು ಶಶ್ವತ್‌ದೃಕ್=ಸರ್ವದಾ ಏಕಪ್ರಕಾರವಾದ ಜ್ಞಾನವುಳ್ಳವನೋ ಸಃ ಭಗವಾನ್=ಶ್ರೀಹರಿಯು ಯಸ್ಯ=ನಿನ್ನ ಮೊಮ್ಮಗನ ಅನನ್ಯಯಾ ದೃಶಾ=ಸರ್ವೋತ್ತಮನು ಶ್ರೀಹರಿಯೇ ಅವನ ಸಮ ಮತ್ತೊಬ್ಬರಿಲ್ಲವೆಂಬ ಜ್ಞಾನದಿಂದ ತೋಷ್ಯತೇ= ಸಂತೋಷವನ್ನು ಹೊಂದುವನು (ಪ್ರೀತನಾಗುವನು ಎಂದು ಭಾವ) ॥೪೭॥

ಭಗವಂತನ ಸಂತೋಷಕ್ಕೆ ಇನ್ನು ಕೆಲವು ಕಾರಣ ಹೇಳುವರು –

**ಸ ವೈ ಮಹಾಭಾಗವತೋ ಮಹಾತ್ಮಾ**
**ಮಹಾನುಭಾವೋ ಮಹತಾಂ ಮಹಿಷ್ಠಃ ।**
**ಪ್ರವೃದ್ಧಭಕ್ತ್ಯಾ ಹ್ಯನುಭಾವಿತಾಶಯೇ**
**ವಿವೇಶ್ಯ ವೈಕುಂಠಮತದ್ ವಿಹಾಸ್ಯತಿ ॥೪೩॥**

ಸಃ=ನಿನ್ನ ಮೊಮ್ಮಗನು ಮಹಾಭಾಗವತಃ=ಪರಮಭಗವದ್ಭಕ್ತನು ಮಹಾತ್ಮಾ= ಶ್ರೇಷ್ಠವಾದ ಅಂತಃಕರಣವುಳ್ಳವನು ಮಹಾನುಭಾವಃ=ಬಹಳವಾದ ಪ್ರಭಾವವುಳ್ಳ-ವನು ಮಹತಾಂ ಮಹಿಷ್ಠಃ=ಶ್ರೇಷ್ಠರಾದವರಲ್ಲಿ ಅತಿಶಯ ಶ್ರೇಷ್ಠನು ಅನುಭಾವಿ-ತಾಶಯೇ=ಶೋಧಿತವಾದ ಮನಸ್ಸಿನಲ್ಲಿ ವೈಕುಂಠಂ=ನಾರಾಯಣನನ್ನು ವಿವೇಶ್ಯ= ಇಟ್ಟುಕೊಂಡು ಪ್ರವೃದ್ಧಭಕ್ತ್ಯಾ=ಅಭಿವೃದ್ಧವಾದ ಭಕ್ತಿಯಿಂದ, ಅತತ್=ಹರಿಯಿಂದ ಭಿನ್ನವಾದುದನ್ನು ವಿಹಾಸ್ಯತಿ="ಆಬ್ರಹ್ಮಸ್ತಂಬಪರ್ಯಂತಂ ಅಸಾರಂ ಚಾಪಿ ಅನಿತ್ಯಕಂ" ಎಂದು ತಿಳಿದು ತ್ಯಜಿಸುವನು ॥೪೭।

**ಅಲಂಪಟಃ ಶೀಲಧರೋ ಗುಣಾಕರೋ**
**ಹೃಷ್ಟಃ ಪರಾರ್ಧೇ ವ್ಯಥಿತೇಷು ದುಃಖಿತಃ ।**
**ಅಭೂತಶತ್ರುರ್ಜಗತಃ ಶೋಕಹರ್ತಾ**
**ನೈದಾಘಿಕಂ ತಾಪಮಿವೋಡುರಾಜಃ ॥೪೮॥**

ಅಲಂಪಟಃ=ವಿಷಯಾಸಕ್ತಿ ಇಲ್ಲದವನು ಶೀಲಧರಃ=ಸಮಾಧಿಯನ್ನಾಚರಿಸು-ವವನು ಗುಣಾಕರಃ=ಶಮದಮಾದಿಗುಣಗಳಿಗೆ ಆಶ್ರಯನು ಪರಾರ್ಧೇ=ಪರರಿಗೆ ಪ್ರಯೋಜನ ದೊರೆತರೆ ಸ್ವಯಂ=ಹೃಷ್ಟಃ ಸಂತೋಷಪಡುವವನು ವ್ಯಥಿತೇಷು= ಪರರು ದುಃಖಿತರಾದರೆ ದುಃಖಿತಃ= ಸ್ವಯಂ ದುಃಖ ಪಡುವನು ಅಭೂತಶತ್ರುಃ= ಅಜಾತಶತ್ರುವು ಉಡುರಾಜಃ=ಚಂದ್ರನು ನೈದಾಘಿಕಂ=ಬಿಸಿಲುಕಾಲದ ತಾಪಂ ಇವ=ಸಂತಾಪವನ್ನು ಕಳೆಯುವಂತೆ, ಶೋಕಹರ್ತಾ=ತತ್ವೋಪದೇಶಮಾಡಿ ದುಃಖವನ್ನು ಪರಿಹರಿಸುವವನು ॥೪೮॥

**ಅಂತರ್ಬಹಿಶ್ಚಾಮಲಮಬ್ಜನೇತ್ರಂ**
**ಸ್ವಪೂರುಷೇಚ್ಛಾನುಗೃಹೀತರೂಪಂ ।**
**ಪೌತ್ರಸ್ತವ ಶ್ರೀಲಲನಾಲಲಾಮಂ**
**ದ್ರಷ್ಟಾ ಸ್ಫುರತ್ಕುಂಡಲಮಂಡಿತಾನನಂ ।। ೪೯॥**

ಅಂತಃ=ಒಳಗೂ ಬಹಿಃ=ಹೊರಗೂ ಅಮಲಂ=ನಿರ್ದೋಷನಾದ ಅಬ್ಜನೇತ್ರಂ= ಕಮಲದಂತೆ ಕಣ್ಣುಳ್ಳ, ಸ್ವಪೂರುಷೇಚ್ಛಾನುಗೃಹಿತರೂಪಂ=ತನ್ನ ಭಕ್ತರಿಗೆ ತನ್ನ ಇಚ್ಛೆಯಿಂದ ತೋರಿಸುವ ರೂಪವುಳ್ಳ ಸ್ಫುರತ್ಕುಂಡಲಮಂಡಿತಾನನಂ= ಹೊಳೆಯುವ ಕುಂಡಲಗಳಿಂದ ಅಲಂಕೃತವಾದ ಮುಖವುಳ್ಳ, ಶ್ರೀಲಲನಾಲ-ಲಾಮಂ=ಶ್ರೀ ಎಂಬಲಲನೆಗೆ (ಸ್ತ್ರೀ) ಅಲಂಕಾರಪ್ರಾಯನಾದ ಪತಿಯಾದ ಶ್ರೀಹರಿಯನ್ನು, ತವ ಪೌತ್ರಃ=ನಿನ್ನ ಮೊಮ್ಮಗನು ದ್ರಷ್ಟಾ=ನೋಡುವನು ॥೪೯॥

**ಮೈತ್ರೇಯ ಉವಾಚ**

**ಶ್ರುತ್ವಾ ಭಾಗವತಂ ಪೌತ್ರಮಮೋದತ ದಿತಿರ್ಭೃಶಂ ।**
**ಪುತ್ರಯೋಶ್ಚ ವಧಂ ಕೃಷ್ಣಾದ್ ವಿದಿತ್ವಾऽಸೀನ್ಮಹಾಮನಾಃ ॥೫೦॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಪಂಚದಶೋಽಧ್ಯಾಯಃ ॥*

ದಿತಿಃ=ದಿತಿಯು ಭಾಗವತಂ ಪೌತ್ರಂ ಶ್ರುತ್ವಾ ಭೃಶಃ ಅಮೋದತ= ಭಗವದ್ಭಕ್ತನಾದ ಮೊಮ್ಮಗನಾಗುವನೆಂದು ಕೇಳಿ ಬಹಳ ಸಂತೋಷಿಸಿದಳು. ಕೃಷ್ಣಾತ್=

ಹರಿಯಿಂದ ಪುತ್ರಯೋಃ ವಧಂ=ಮಕ್ಕಳಸಾವನ್ನು ವಿದಿತ್ವಾ=ತಿಳಿದು ಮಹಾಮನಾಃ ಆಸೀತ್=(ಸದ್ಗತಿಯಾಗುವುದೆಂದು ತಿಳಿದು) ಉತ್ಸಾಹಸಹಿತವಾದ ಮನಸ್ಸುಳ್ಳವಳಾದಳು.

ಇಲ್ಲಿ ಶ್ರೀಕೃಷ್ಣನ ಹಸ್ತದಿಂದ ಮರಣ ಹೊಂದುವ ಮಾತ್ರದಿಂದ ಸದ್ಗತಿಯಾಗುವದು ಎಂದು ಹೇಳುವರೆಂದು ತೋರುವುದು ಆದ್ದರಿಂದ ತಾತ್ಪರ್ಯ ಹೇಳುವರು–

**ವಿಷ್ಣುಹಸ್ತವಧಾಲ್ಲೋಕೋ ಭಕ್ತಸ್ಯಾನ್ಯಸ್ಯ ನ ಕ್ವಚಿತ್ ।**
**ತಥಾಪ್ಯಸುರಮೋಹಾಯ ನ ವಿವಿಕ್ತಂ ಕ್ವಚಿತ್ ಕ್ವಚಿತ್ ॥ ಇತಿ ಸ್ಕಾಂದೇ ।**
**ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ । ಇತಿ ಚ ।**
**ಸ್ವತಃ ಸದ್ಗತಿಯೋಗ್ಯಸ್ಯ ಪುತ್ರಾದೇರ್ಹೇತುತಾ ಭವೇತ್ ।**
**ಯೋಗ್ಯತಾಽಽನಾದಿಭಕ್ತಿಃ ಸ್ಯಾದಯೋಗ್ಯಸ್ಯ ಕುತೋ ಗತಿಃ ॥**
**ಇತಿ ಬ್ರಹ್ಮತರ್ಕೇ ।**

ಶ್ರೀವಿಷ್ಣುವಿನ ಹಸ್ತದಿಂದ ಸಂಹಾರವಾಗುವುದರಿಂದ ಒಳ್ಳೆಯ ಲೋಕ ಪ್ರಾಪ್ತಿಯಾಗುವುದು ಭಕ್ತನಿಗೆ ಮಾತ್ರ ಹೊರತು ಅಭಕ್ತನಿಗಲ್ಲ. ಹೀಗಿದ್ದರೂ ಅಸುರಜನ ಮೋಹನಕ್ಕಾಗಿ ಸ್ಪಷ್ಟವಾಗಿ ವಿವೇಕ ಮಾಡಿ ಹೇಳುವುದಿಲ್ಲ ಎಂದು ಸ್ಕಾಂದ ಪುರಾಣದಲ್ಲಿದೆ. ಅಭಕ್ತನಿಗೂ ಸದ್ಗತಿಯಾಗುವುದಾದರೆ ಹಿರಣ್ಯಕಶಿಪುವಿಗೆ ತಮಃಪ್ರವೇಶ ಪ್ರಸಕ್ತಿಯನ್ನು ಭಾಗವತದಲ್ಲಿ ಹೇಳಿದ್ದು ಅನುಪಪನ್ನವಾಗುವುದು. 'ಶ್ರುತ್ವಾ ಭಾಗವತಂ ಪೌತ್ರಂ' ಎಂದು ಹೇಳಿದ್ದರಿಂದ ತನ್ನ ಮಕ್ಕಳಿಗೆ ಮೊಮ್ಮಗನಿಂದ ಸದ್ಗತಿಯಾಗುವುದು ಎಂದು ಸಂತೋಷಿಸಿದಳೆಂಬ ಅಭಿಪ್ರಾಯ ಕಂಡು ಬರುವುದು. ಅದೂ ಸಹ ಅಭಕ್ತರಿಗಲ್ಲ ಎಂಬುದನ್ನು ಬ್ರಹ್ಮತರ್ಕ ತಿಳಿಸುವುದು "ಸ್ವಾಭಾವಿಕ-ವಾಗಿಯೇ (ಹೊರತು ದಕ್ಷಿಣಾದಿಗಳಿಂದ ತೃಪ್ತರಾದ ವೈಷ್ಣವ ಋತ್ವಿಕರ ಅನುಗ್ರಹದಿಂದಲ್ಲ) ಸದ್ಗತಿಯೋಗ್ಯನಾದ ತಂದೆಗೆ ಸದ್ಗತಿಯಾಗಲು ಮಕ್ಕಳು ಮುಂತಾದವರು ಕಾರಣರಾಗುತ್ತಾರೆ. ಯೋಗ್ಯತೆ ಎಂದರೆ ಅನಾದಿಭಕ್ತಿಯೇ. ಅಯೋಗ್ಯನಿಗೆ ಸದ್ಗತಿ ಹೇಗಾದೀತು ? ಆಗಲೇಬಾರದು." ಹೀಗಿರುವುದರಿಂದ ತನ್ನ ಮಕ್ಕಳಲ್ಲಿ ಜೀವದ್ವಯ ಸಮಾವೇಶವಿರುವುದರಿಂದ ಅನಾದಿಭಕ್ತಿಯುಳ್ಳ ಜಯ ವಿಜಯರಿಗೆ ಪ್ರಹ್ಲಾದನಿಂದ ಸದ್ಗತಿಯಾಗುವದೆಂದು ಸಂತೋಷಿಸಿದಳು ಎಂದು ತಿಳಿಯಬೇಕು. ಆವಿಷ್ಟರಾದ ದೈತ್ಯರಿಗೆ ತಮಸ್ಸೇ ಆಗುವುದು ॥೫೦॥

ಇಲ್ಲಿಗೆ ಹದಿನೈದನೆಯ ಅಧ್ಯಾಯ ಮುಗಿಯಿತು.

## ಹದಿನೈದನೆಯ ಅಧ್ಯಾಯದ ತಾತ್ಪರ್ಯ

ಶುಕಾಚಾರ್ಯರು – ಪರೀಕ್ಷಿದ್ರಾಜ ! ಮೈತ್ರೇಯರು ವರ್ಣಿಸಿದ ವರಾಹ ರೂಪಿಯಾದ ಶ್ರೀಹರಿಯ ಕಥೆಯನ್ನು ಕೇಳಿದ ವಿದುರರು ಅಷ್ಟರಿಂದಲೇ ತೃಪ್ತರಾಗದೆ ಶ್ರೀಹರಿಗೆ ಕೈಗಳನ್ನು ಮುಗಿದು, ಹರಿಕಥಾಶ್ರವಣದಲ್ಲಿ ನಿಯಮವುಳ್ಳವರಾಗಿ ಮತ್ತೆ ಮೈತ್ರೇಯರನ್ನು ಪ್ರಶ್ನಿಸಿದರು.

ವಿದುರ– ಮುನಿವರ್ಯ ! ಹಿಂದೆ ಹೇಳಿದಂತೆ ಭೂಮಿಯನ್ನು ಮೇಲಕ್ಕೆ ತಂದ ಶ್ರೀಹರಿಯೇ ಮತ್ತೊಂದು ರೂಪದಿಂದ ದಿತಿದೇವಿಯ ಮಗನಾದ ಹಿರಣ್ಯಾಕ್ಷನನ್ನು ಕೊಂದನೆಂದು ಕೇಳಿದ್ದೇವೆ. ಆ ರೂಪದಲ್ಲಿಯೂ ಶ್ರೀಹರಿಯು ಭೂಮಿಯನ್ನು ಅನಾಯಾಸವಾಗಿ ಹಲ್ಲಿನ ಕೊನೆಯಿಂದ ಮೇಲಕ್ಕೆ ತರುತ್ತಿರುವಾಗ ಈ ಹಿರಣ್ಯಾಕ್ಷನೊಂದಿಗೆ ಯುದ್ಧಮಾಡಿದನೆಂದು ಕೇಳಿದ್ದೇವೆ. ಯಾವ ಅಪರಾಧಕ್ಕಾಗಿ ಶ್ರೀಹರಿಯು ಅವನೊಂದಿಗೆ ಯುದ್ಧದಲ್ಲಿ ತೊಡಗಿದನು ?

ಮೈತ್ರೇಯ – ವಿದುರ, ನೀನು ಶ್ರೀಹರಿಯ ಇಚ್ಛೆಯನ್ನು ತಿಳಿದು ಆನಂದಿಸುವವನು. ನೀನು ಕೇಳುವ ಶ್ರೀಹರಿಯ ಕಥೆಯು ಸಂಸಾರಿಚೇತನರ ಮೃತ್ಯುವನ್ನೇ ಹೋಗಲಾಡಿಸುವುದು. ಇದು ಸಜ್ಜನ ಸಮ್ಮತವಾದುದು. ನಾರದರು ಹೇಳಿದ ಈ ಕಥೆಯನ್ನು ಕೇಳಿ ಐದು ವರುಷದ ಹಸುಳೆ ಉತ್ತಾನಪಾದರಾಜನ ಮಗ ಧ್ರುವರಾಜನು ಮೃತ್ಯುವನ್ನು ಗೆದ್ದು ಅತ್ಯುನ್ನತ ಪದವನ್ನು ಸೇರಿ ಮುಕ್ತನಾದನು. ಅಂತಹ ಶ್ರೀಹರಿಯ ಕಥೆಯನ್ನು ನೀನು ಕೇಳಿರುವೆ. ಬಹಳ ಸಂತೋಷ. ಈ ವಿಷಯದಲ್ಲಿ ಹಿಂದೆ ನಡೆದ ಒಂದು ಇತಿಹಾಸವನ್ನು ಹೇಳುತ್ತೇನೆ. ದೇವತೆಗಳು ದೇವದೇವನಾದ ಬ್ರಹ್ಮದೇವನನ್ನು ಪ್ರಶ್ನಿಸಿದಾಗ ಅವನೇ ವರ್ಣಿಸಿರುವನು. ನಾನು ಕೇಳಿರುವ ಈ ಕಥೆಯನ್ನು ನಿನಗೆ ಹೇಳುತ್ತೇನೆ –

ವಿದುರ ! ಅಂದು ಸಂಧ್ಯಾಕಾಲ. ದಕ್ಷನ ಮಗಳಾದ ದಿತಿದೇವಿಗೆ ಮಕ್ಕಳನ್ನು ಪಡೆಯಬೇಕೆಂಬ ಆಶೆ ಹುಟ್ಟಿತು. ಮನ್ಮಥನಿಂದ ಪೀಡಿತಳಾದ ಆಕೆ ಪತಿಯಾದ ಕಶ್ಯಪರಲ್ಲಿಗೆ ಬಂದಳು. ಆಗ ತಾನೇ ಯಜುರ್ವೇದ ಮಂತ್ರಗಳಿಂದ ಅಗ್ನಿಯಲ್ಲಿ ಹಾಲನ್ನು ಶ್ರೀಹರಿಗಾಗಿ ಹೋಮಿಸಿ ಕಶ್ಯಪರು ಸೂರ್ಯನು ಅಸ್ತಂಗತನಾಗುತ್ತಿರಲು ಅಲ್ಲಿಯೇ ಅಗ್ನಿಸಮೀಪದಲ್ಲಿ ಧ್ಯಾನಾಸಕ್ತರಾಗಿದ್ದರು. ಸಮೀಪಿಸಿದ ದಿತಿಯು 'ಬ್ರಹ್ಮಜ್ಞಾನಿಗಳಾದ ಕಶ್ಯಪರನ್ನು ಕುರಿತು, ಪತಿದೇವ ! ಧನುಸ್ಸನ್ನು ಹಿಡಿದ ಈ ಮನ್ಮಥನು ಅಸಮರ್ಥಳಾದ ನನ್ನನ್ನು ತಮ್ಮ ಉದ್ದೇಶದಿಂದ ಪೀಡಿಸುತ್ತಿರುವನು. ಆನೆಯ ಕೈಯಲ್ಲಿ ಸಿಕ್ಕಿದ ಬಾಳೆಯ ಗಿಡದಂತೆ ಆಗಿದೆ ನನ್ನ ಅವಸ್ಥೆ. ನನ್ನ ಸವತಿಯರೆಲ್ಲರಿಗೂ ಮಕ್ಕಳಾಗಿ ಅವರು ಆನಂದದಿಂದಿದ್ದಾರೆ. ಅವರನ್ನು ನೋಡುತ್ತಿದ್ದಂತೆಯೇ ನನಗೆ ಮಕ್ಕಳಿಲ್ಲವೆಂದು ನನ್ನ ಮನಸ್ಸು ಬೇಗುದಿಗೊಳಗಾಗಿದೆ. ತಾವು ನನ್ನಲ್ಲಿ ಅನುಗ್ರಹಮಾಡಬೇಕು. ತಮಗೆ ಒಳ್ಳೆಯದಾಗುವುದು. ಪತಿದೇವನಿಂದ ಮಕ್ಕಳನ್ನು ಪಡೆದ ಹೆಂಡತಿಯರ ಯಶಸ್ಸು ಎಲ್ಲೆಲ್ಲೂ ಹಬ್ಬುವುದು. ತಮ್ಮಂತಹ ಗುಣವಂತನಾದ ಪುತ್ರನು ಹುಟ್ಟಿದ ಮೇಲೆ ಮತ್ತೆ ಯಾವ ಮಾನ್ಯತೆ ಬೇಕು ? ತಮ್ಮ ಗುಣಗಳಿಗೆ ನಾನು ಮಾರುಹೋಗಿದ್ದೇನೆ. ಹಿಂದೆ ನಮ್ಮ ತಂದೆಯು ನಮ್ಮೆಲ್ಲರನ್ನೂ ಕರೆದು ನಿಮಗೆ ಯಾವ ವರಬೇಕು. ಎಂದು ಕೇಳಿದಾಗ ನಾವೆಲ್ಲರೂ ಒಕ್ಕೊರಲಿನಿಂದ ಗುಣವಂತರಾದ ತಮ್ಮನ್ನೇ ವರಿಸಿದೆವು. ನಮ್ಮ ತಂದೆಗೆ ಮೊಮ್ಮಕ್ಕಳನ್ನು ನೋಡುವ ಆಶೆ. ನಮ್ಮ ಅಭಿಪ್ರಾಯವನ್ನರಿತು ಈ ಹದಿಮೂರು ಜನ ಅಕ್ಕತಂಗಿಯರನ್ನೂ ನಿಮಗೇ ಮದುವೆಮಾಡಿಕೊಟ್ಟನು. ಸುಂದರರೂ ಮಂಗಳಕರರೂ ಆದ ತಾವು ನನ್ನ ಇಚ್ಛೆಯನ್ನು ಸಲ್ಲಿಸಬೇಕು. ತಮ್ಮಂತಹ ಮಹನೀಯರನ್ನು ಶರಣುಹೊಂದಿದ ಮೇಲೆ ಇಚ್ಛೆಯು ವ್ಯರ್ಥವಾಗುವುದುಂಟೆ !' ಎಂದು ನುಡಿದಳು. ಶ್ರೀಹರಿಯ ಇಚ್ಛೆಯನ್ನು ಅರಿತು ಆನಂದಿಸುವ ಕಶ್ಯಪರು ಬಹುವಾಗಿ ಬೇಡಿಕೊಳ್ಳುತ್ತಿರುವ ದೀನಳಾದ ದಿತಿದೇವಿಯು ಅತಿಶಯವಾದ ಮನ್ಮಥನ ಹೊಡೆತಕ್ಕೆ ಸಿಕ್ಕಿರುವಳೆಂದು ತಿಳಿದು ಸಮಾಧಾನಪಡಿಸುತ್ತಾ ಉತ್ತರ ಕೊಟ್ಟರು. 'ಪ್ರಿಯೆ, ಮಕ್ಕಳಿಲ್ಲವೆಂದು ನೀನು ಭಯಪಡಬೇಡ. ನಿನಗೆ ಪ್ರಿಯವಾದುದನ್ನು ಮಾಡಲು ನಾನು ಸಿದ್ಧನಿರುವೆನು. ಪತ್ನಿಯರಿಂದಲೇ ಗಂಡಂದಿರಿಗೆ ಧರ್ಮ, ಅರ್ಥ ಮತ್ತು ಕಾಮಗಳು ಸಿದ್ಧಿಸುವಾಗ ಪತ್ನಿಯ ಇಚ್ಛೆಯನ್ನು ಯಾವ ಗಂಡನು ತಾನೇ ನಡೆಸಿಕೊಡದಿರುವನು ? ಉತ್ತಮಳಾದ ಹೆಂಡತಿಯನ್ನು ಪಡೆದ ಪುರುಷನು ಎಲ್ಲ ಆಶ್ರಮದವರಿಗೂ ಆಶ್ರಯನಾಗಿ-ರುವನು. ಅವನಿಗೆ ಅಪಾರವಾದ ಸಂಸಾರ ಸಾಗರವನ್ನು ದಾಟುವುದು ಕಷ್ಟವಲ್ಲ. ದೋಣಿ ಮೊದಲಾದ ಸಾಧನಗಳಿರುವವನು ಸಮುದ್ರವನ್ನು ದಾಟುವನಲ್ಲವೇ !

ಮೋಕ್ಷಾಪೇಕ್ಷಿಗಳಾದ ಪುರುಷರು ಪತ್ನಿಯರನ್ನು ತಮ್ಮ ಅರ್ಧ ದೇಹವೆಂದು ಬಗೆಯುವರು. ತಮ್ಮ ವ್ಯವಹಾರವನ್ನೆಲ್ಲ ಅವರಿಗೆ ವಹಿಸಿಕೊಟ್ಟು ಯಾವ ಆತಂಕವೂ ಇಲ್ಲದೆ ತಮ್ಮ ಸಾಧನೆಯಲ್ಲಿ ಮುಂದುವರಿಯುವರು. ಬ್ರಹ್ಮಚಾರಿಗಳೂ, ವಾನಪ್ರಸ್ಥರೂ ಸನ್ಯಾಸಿಗಳೂ ಜಯಿಸಲಾಗದ ಇಂದ್ರಿಯಗಳನ್ನೂ ಅವುಗಳ ವಿಷಯಗಳನ್ನೂ ಗೃಹಸ್ಥಾಶ್ರಮಿಗಳಾದ ನಾವು ಹೆಂಡತಿಯರ ಲಜ್ಜೆ ಹಾವಭಾವವಿಲಾಸಗಳಿಂದಲೇ ಜಯಿಸುತ್ತಿದ್ದೇವೆ. ತನ್ನ ದುರ್ಗವನ್ನು ಮುತ್ತಿದ ಕಳ್ಳರನ್ನು ರಾಜನು ಸೈನ್ಯದ ಸಹಾಯದಿಂದ ಗೆಲ್ಲುವನಲ್ಲವೇ ! ಮನೆಗೆ ಯಜಮಾನಿಯೆ ! ನಿನ್ನ ಗುಣಗಳಿಂದ ಮುಗ್ಧರಾದ ನಾವು ನಮ್ಮ ಎಲ್ಲ ಆಯುಸ್ಸಿನಿಂದಲೂ ನಿನ್ನನ್ನು ಅನುಕರಿಸಲಾರೆವು. ನಾನೇ ಅಲ್ಲ, ಯಾವ ಗುಣವಂತನೂ ತನ್ನ ಪತ್ನಿಯನ್ನು ಅನುಕರಿಸಲಾರ. ಆದರೂ ನಿನ್ನ ಸಂತಾನದ ಆಶೆಯನ್ನು ಸಂಪೂರ್ಣವಾಗಿ ಪೂರೈಸಿಕೊಡುತ್ತೇನೆ. ಯಾರ ನಿಂದೆಗೂ ಒಳಗಾಗದೆ ಮಾಡಬೇಕೆಂಬುದೇ ನನ್ನ ಇಚ್ಛೆ. ಆದ್ದರಿಂದ ಒಂದು ಮುಹೂರ್ತಕಾಲ ಸುಮ್ಮನಿರು. ಈ ಸಂಧ್ಯಾಕಾಲ ಬಹು ಘೋರವಾದುದು. ಎಲ್ಲೆಲ್ಲಿ ನೋಡಿದರೂ ಭಯಂಕರ ಭೂತಗಳೇ ಕಾಣುವುವು. ಭೂತೇಶನಾದ ರುದ್ರದೇವನ ಪರಿವಾರವಾದ ಭೂತಗಣಗಳು ಸಂಚರಿಸುವ ಕಾಲವಿದು. ಪತಿವ್ರತೆಯೇ ! ಈ ಕಾಲದಲ್ಲಿ ರುದ್ರದೇವನು ಭೂತಗಳೊಂದಿಗೆ ಎತ್ತಿನ ಮೇಲೆ ಕುಳಿತು ಸಂಚರಿಸುತ್ತಿರುವನು. ಅವನ ಜಟೆಗಳು ಶ್ಮಶಾನದ ಗಾಳಿಯಿಂದೆದ್ದ ಧೂಳಿನಿಂದ ಧೂಮ್ರವರ್ಣ ವಾಗಿರುವುವು. ಹರಡಿರುವ ಆ ಜಟೆಗಳು ಪ್ರಕಾಶಮಾನವಾಗಿವೆ ಅವನು ದೇಹಕ್ಕೆಲ್ಲ ಬೂದಿಯನ್ನು ಬಳಿದುಕೊಂಡು ಬೆಳ್ಳಿಯಂತೆ ಬೆಳ್ಳಗಿರುವನು. ಅವನು ನಿನ್ನ ತಂಗಿಯಾದ ಸತೀದೇವಿಯ ಪತಿಯೇ. ಇಂತಹ ರುದ್ರದೇವನು ತನ್ನ ಮೂರು ಕಣ್ಣುಗಳಿಂದಲೂ ನೋಡುತ್ತಿರುವನು. ಹೀಗವನು ಪಿಶಾಚರೀತಿಯಲ್ಲಿದ್ದು ಈ ಕಾಲದಲ್ಲಿ ಗರ್ಭಧರಿಸುವವರ ಗರ್ಭವನ್ನು ಹೋಗಲಾಡಿಸಲು ಸಿದ್ಧನಾಗಿರುವನು. ಅವನ ಈ ಚರ್ಯೆಗೆ ಶ್ರೀಹರಿಯ ಆಜ್ಞೆಯೇ ಕಾರಣ. ಆ ಶ್ರೀಹರಿಗೆ ತನ್ನವರು ಇತರರೆಂಬ ವ್ಯತ್ಯಾಸವಿಲ್ಲ. ಅವನಿಗೆ ಅತ್ಯಂತ ಬೇಕಾದವನಾಗಲಿ ಬೇಡದವನಾಗಲಿ ಇಲ್ಲ. ಅವನ ಇಚ್ಛೆಯಂತೆಯೇ ಅವನನ್ನು ವ್ರತಗಳಿಂದ ಸೇವಿಸುವ ನಾವು ಅವನಿಂದ ತಿರಸ್ಕೃತವಾದ ಪ್ರಕೃತಿಯೆಂಬ ಈ ಮನೆ, ಹೆಂಡತಿ, ಮಕ್ಕಳು ಮೊದಲಾದ ಸಂಸಾರವನ್ನು ಅನುಭವಿಸಿದ್ದರೂ ಮತ್ತೆ ಮತ್ತೆ ಬಯಸುತ್ತಿದ್ದೇವೆ. ಅಜ್ಞಾನವೆಂಬ ದೋಷದಿಂದ ಅವನನ್ನು ನೋಡಲಾರದೆ ಇದ್ದೇವೆ. ಈ ದೃಷ್ಟಿ ದೋಷವನ್ನು ಹೋಗಲಾಡಿಸಿಕೊಳ್ಳಬೇಕೆಂಬುವ ಜ್ಞಾನಿಗಳು ಆ ಶ್ರೀಹರಿಯ ನಿರ್ದೋಷವಾದ ಚರಿತ್ರೆಯನ್ನು ಶ್ರವಣ ಮನನಾದಿಗಳಿಂದ ಗ್ರಹಿಸುತ್ತಾರೆ. ಆ ಶ್ರೀಹರಿಗೆ ಸಮಾನರೂ

ಅಧಿಕರೂ ಯಾರೂ ಇರುವುದಿಲ್ಲ. ಇಂದ್ರಾದಿ ದೇವತೆಗಳಿಗೆ ಆಶ್ರಯನಾದ ರುದ್ರ ದೇವನೂ ಶ್ರೀಹರಿಯ ಅಧೀನನೇ. ಅವನ ಆಜ್ಞೆಯಂತೆಯೇ ತಾನು ಪಿಶಾಚಚರ್ಯೆಯಲ್ಲಿ ತೊಡಗಿರುವನು. ಅಸುರರು ತಮ್ಮ ದೇಹವನ್ನೇ ಆತ್ಮವೆಂದು ಬಗೆದು ಅದನ್ನು ಅಲಂಕರಿಸಿ ಸಂತೋಷಪಡುತ್ತಾರೆ. ಇವರಿಗೆ ಶ್ರೀಹರಿಯ ವಿಡಂಬನವು ಅರ್ಥವಾಗುವುದಿಲ್ಲ. ಅವನ ಚರಿತ್ರೆಯನ್ನು ನಿಂದಿಸುತ್ತಾರೆ. ಸ್ವರತನಾದ ಶ್ರೀಹರಿಗೆ ವಿಷಯಸುಖಗಳ ಅಗತ್ಯವಿಲ್ಲ. ಅವನಲ್ಲಿ ದೋಷವನ್ನು ಕಾಣುವವರು ತಮಸ್ಸಿಗೆ ಹೋಗುವರು. ಬ್ರಹ್ಮ ಮೊದಲಾದ ದೇವತೆಗಳು ಆ ಶ್ರೀಹರಿಯು ಆಜ್ಞೆಯಿಂದ ಅವನೇ ಮಾಡಿದ ಧರ್ಮಸೇತುವೆಯನ್ನು ರಕ್ಷಿಸಿಕೊಂಡು ಬರುತ್ತಿರುವರು. ಈ ಪ್ರಪಂಚಕ್ಕೆ ಅವನೇ ಸ್ವತಂತ್ರವಾದ ನಿಮಿತ್ತಕಾರಣನು. ಅವನಿಗೆ ಕರ್ಮಫಲವೆಲ್ಲಿ ಬಂತು ? ಅವನು ಲೌಕಿಕದಂತೆ ಆಚರಿಸಿ ತೋರಿಸುವನು !' ಎಂದು ಕಶ್ಯಪರು ನುಡಿದರು.

ಪತಿದೇವನು ಹೀಗೆ ಹೇಳುತ್ತಿದ್ದರೂ ದಿತಿಯ ಕಾಮವು ತಗ್ಗಲಿಲ್ಲ. ಕಾಮ ಪೀಡಿತಳಾದ ಅವಳು ನಾಚಿಕೆಯನ್ನು ಬಿಟ್ಟು ಗ್ರಾಮ್ಯ ಸ್ತ್ರೀಯಂತೆ ಕಶ್ಯಪರ ಮೇಲುದವನ್ನು ಹಿಡಿದೆಳೆದಳು. ಕಶ್ಯಪರು ನಿಷಿದ್ಧವಾದ ಈ ಕಾರ್ಯದಲ್ಲಿ ಪತ್ನಿಯ ನಿರ್ಬಂಧವನ್ನು ತಿಳಿದರು. ಎಲ್ಲವೂ ಶ್ರೀಹರಿಯ ಇಚ್ಛೆಯೆಂದವರು ಅದೃಷ್ಟ ನಿಯಾಮಕನಿಗೆ ನಮಸ್ಕರಿಸಿ ದಿತಿಯೊಡನೆ ಏಕಾಂತದಲ್ಲಿ ರಮಿಸಿದರು. ರತಿಯ ನಂತರ ಶುದ್ಧರಾಗಿ ಆಚಮನಮಾಡಿ ಮೌನದಿಂ ಪ್ರಾಣಾಯಾಮ ಪೂರ್ವಕ ಗಾಯತ್ರೀಪ್ರತಿಪಾದ್ಯನಾದ ಶ್ರೀಹರಿಯನ್ನು ಜಪಿಸಿದರು.

ದಿತಿಗಾದರೂ ತನ್ನ ಪಾಪಕರ್ಮಕ್ಕಾಗಿ ನಾಚಿಕೆಯಾಯಿತು. ಜ್ಞಾನಿಯಾದ ಪತಿದೇವನ ಮುಂದೆ ನಿಂತು ಮುಖವನ್ನು ತಗ್ಗಿಸಿಕೊಂಡು 'ಜ್ಞಾನಿವರ್ಯ, ನಾನು ತಮ್ಮ ಮಾತನ್ನು ಲೆಕ್ಕಿಸದೆ ಭೂತಪತಿಯಾದ ರುದ್ರದೇವನಿಗೆ ಅಪರಾಧ ಮಾಡಿರುತ್ತೇನೆ. ಆತನು ನನ್ನ ಗರ್ಭವನ್ನು ನಾಶಮಾದಂತೆ ತಾವು ಅನುಗ್ರಹಿಸಬೇಕು. ರುದ್ರದೇವರು ಅಪರಾಧಗಳನ್ನು ಹೋಗಲಾಡಿಸುವವರು; ಇಂದ್ರಾದಿ ದೇವತೆಗಳಿಗಿಂತ ಹಿರಿಯರು; ಸರ್ವಸಂಹಾರಕರು; ಭಕ್ತರ ಅಭೀಷ್ಟವನ್ನು ಕೊಡುವವರು; ಶ್ರೀಹರಿಯ ಗುಣಗಳನ್ನು ಮನನಮಾಡುತ್ತಾ ಭಗವದ್ಭಕ್ತರನ್ನು ಕ್ಷಮಿಸುವರು; ಕೋಪದಿಂದ ಭಗವದ್ವೇಷಿಗಳನ್ನು ಶಿಕ್ಷಿಸುವವರು, ಯಾವಾಗಲೂ ಶ್ರೀಹರಿಯ ನಾಮಸ್ಮರಣೆಯಿಂದ ಸುಖಿಸಬಯಸುವವರು, ಅವರಿಗೆ ನಾನು ವಂದಿಸುತ್ತೇನೆ. ಹುಟ್ಟು ಹಿಂಸಕರಾದ ಕಿರಾತರೂ ಸ್ತ್ರೀಯರಲ್ಲಿ ದಯೆ ತೋರುವರೆಂದಮೇಲೆ ನನ್ನ ತಂಗಿಯ ಪತಿಯಾದ ರುದ್ರದೇವರು ದಯೆ

ತೋರದಿರುವರೇ? ಭಯರಹಿತರಾದ ಅವರು ನನ್ನ ಭಯವನ್ನು ಪರಿಹರಿಸಿ ಅನುಗ್ರಹಿಸಲಿ ! ಎಂದು ಬೇಡಿಕೊಂಡಳು.

ಸಂಧ್ಯಾಕರ್ಮವನ್ನು ಮುಗಿಸಿದ್ದ ಕಶ್ಯಪರು ದಿತಿಯ ಕಡೆ ನೋಡಿದರು. ಭಯದಿಂದವಳು ನಡುಗುತ್ತಿದ್ದಳು. ಲೋಕದಲ್ಲಿ ಎಲ್ಲ ಸ್ತ್ರೀಯರೂ ಕೇಳುವಂತೆ ತನ್ನ ಗರ್ಭದ ರಕ್ಷಣೆಯನ್ನು ಬೇಡುತ್ತಿದ್ದಳು. ಆಗ ಅವರು 'ಅಮಂಗಳೆ, ನಿನ್ನ ಮನಸ್ಸನ್ನು ನೀನು ಬಿಗಿಹಿಡಿಯಲಾರದೆ ಹೋದೆ. ಈ ಕಾಲವೋ ದೋಷಯುಕ್ತವಾದುದು. ನನ್ನ ಅಪ್ಪಣೆಯನ್ನು ಮೀರಿದೆ. ರುದ್ರಾದಿದೇವತೆಗಳನ್ನು ತಿರಸ್ಕರಿಸಿದೆ ಈ ಕಾರಣಗಳಿಂದ ನಿನಗೆ ಹುಟ್ಟುವ ಇಬ್ಬರು ಮಕ್ಕಳೂ ನೀಚರೇ ಆಗುವರು. ಕ್ರೂರಿಗಳಾದ ಇವರು ಲೋಕಪಾಲಕರನ್ನೂ ಲೋಕಗಳನ್ನೂ ಗೋಳಾಡಿಸುವರು. ನಿರಪರಾಧಿಗಳೂ ದೀನರೂ ಆದ ಪ್ರಾಣಿಗಳನ್ನೂ ಅದರಲ್ಲಿಯೂ ಹೆಂಗಸರನ್ನು ಇವರು ನಿಗ್ರಹಿಸುವರು. ಮಹಾತ್ಮರನ್ನು ಸಿಟ್ಟಿಗೆಬ್ಬಿಸುವರು. ಲೋಕರಕ್ಷಕನಾದ ಶ್ರೀಹರಿಗೆ ಇವರ ವಿಷಯದಲ್ಲಿ ಆಗ ಕೋಪಬರುವುದು. ಅವನು ಅವತಾರಮಾಡಿ ವಜ್ರಧಾರಿಯಾದ ಇಂದ್ರನು ಪರ್ವತಗಳನ್ನು ಸೀಳಿದಂತೆ ಇವರನ್ನು ಸಂಹರಿಸುವನು' ಎಂದು ನುಡಿದರು.

ಭೀತಳಾದ ದಿತಿಯು 'ಪತಿದೇವ, ಚಕ್ರಧಾರಿಯಾದ ಶ್ರೀಹರಿಯು ಸಾಕ್ಷಾತ್ತಾಗಿ ನನ್ನ ಮಕ್ಕಳನ್ನು ಕೊಲ್ಲಲಿ. ಆದರೆ ಬ್ರಾಹ್ಮಣರ ಶಾಪದಿಂದ ಮಾತ್ರ ಅವರು ಅಳಿಯುವುದುಬೇಡ. ಬ್ರಹ್ಮಶಾಪದಗ್ಧನಿಗೂ, ಭೂತಭಯಂಕರನಿಗೂ ನರಕವಾಸಿಗಳೂ ಸಹ ಕನಿಕರ ತೋರುವುದಿಲ್ಲ. ಅವನು ಯಾವ ಯೋನಿಯಲ್ಲಿ ಹುಟ್ಟಿದರೂ ಆ ಬ್ರಾಹ್ಮಣಶಾಪವು ಅವನನ್ನು ಬಿಡುವುದಿಲ್ಲ' ಎಂದು ಮರೆಹೊಕ್ಕಳು.

ಆಗ ಕಶ್ಯಪರು 'ದಿತಿ, ನೀನು ಮಾಡಿದ ಕೆಟ್ಟ ಕೆಲಸಕ್ಕೆ ಪಶ್ಚಾತ್ತಾಪ ಪಡುತ್ತಿರುವೆ. ನೀನು ನಿನ್ನ ದೋಷವನ್ನು ವಿಮರ್ಶಿಸಿ ತಿಳಿದಿರುವೆ. ಶ್ರೀಹರಿಯಲ್ಲಿ ನಿನಗೆ ತುಂಬ ಗೌರವ. ರುದ್ರನಲ್ಲಿಯೂ, ನನ್ನಲ್ಲಿಯೂ ಆದರ ತೋರಿದ್ದಿ. ಈ ಕಾರಣದಿಂದ ನಿನ್ನ ಮಗನ ಮಕ್ಕಳಲ್ಲಿ ಒಬ್ಬನು ಮಾತ್ರ ಸಜ್ಜನಸಮ್ಮತನಾದವನು ಹುಟ್ಟುವನು. ಶ್ರೀಹರಿಯ ಕೀರ್ತಿಯೊಂದಿಗೆ ಅವನ ಕೀರ್ತಿಯನ್ನೂ ಸಜ್ಜನರು ಗಾನಮಾಡು-ವರು. ನಿನ್ನ ಮಗನಾಗಿ ಹುಟ್ಟುವ ಸುಜೀವಿಯು ದುರ್ಜೀವಿಯ ಸಹವಾಸದಿಂದ ಕೊಳೆಯಿಂದ ಕೂಡಿದ ಬಂಗಾರದಂತೆ ದುಷ್ಟನಾಗಿದ್ದರೂ ಸ್ವರೂಪದಿಂದ ಯೋಗ್ಯನಾದ ಆ ಜೀವಿಯು ಆ ನಿನ್ನ ಮೊಮ್ಮಗನ ಪ್ರಭಾವದಿಂದ ಸದ್ಗತಿಯನ್ನು ಹೊಂದುವನು. ಅಯೋಗ್ಯ ಜೀವನು ತಮಸ್ಸಿಗೆ ಸೇರುವನು. ನಿನ್ನ ಮೊಮ್ಮಗನು

ಭಗವದ್ಭಕ್ತರಲ್ಲಿ ವೈರವಿಲ್ಲದಿರುವುದೇ ಮೊದಲಾದ ಗುಣಗಳನ್ನು ಹೊಂದಿರುವನು. ಸಜ್ಜನರು ಅವನಂತೆ ತಾವೂ ಭಾಗವತ ಧರ್ಮಗಳನ್ನು ಹೊಂದಬೇಕೆಂದು ಆಶಿಸುವರು. ಆ ನಿನ್ನ ಮೊಮ್ಮಗನು ಶ್ರೀಹರಿಯನ್ನು ಸರ್ವೋತ್ತಮನೆಂದು ಉಪಾಸಿಸಿ ಅವನ ಅನುಗ್ರಹಕ್ಕೆ ಪಾತ್ರನಾಗುವನು. ಶ್ರೀಹರಿಯು ಪ್ರಸನ್ನನಾದರೆ ಜಗತ್ತೇ ಪ್ರಸನ್ನವಾಗುವುದು. ಅವನು ಸರ್ವ ಜಗತ್ತಿನಲ್ಲಿಯೂ ವ್ಯಾಪ್ತನು. ಅವನ ಜ್ಞಾನವು ಯಾವಾಗಲೂ ಒಂದೇ ಪ್ರಕಾರವಾಗಿರುವುದು. ನಿನ್ನ ಮೊಮ್ಮಗನು ಉತ್ತಮನಾದ ಭಗವದ್ಭಕ್ತನೂ, ಮಹಿಮೋಪೇತನೂ, ಶ್ರೀಹರಿಯ ಸರ್ವೋತ್ತ-ಮತೆಯನ್ನು ದೃಢವಾಗಿ ತಿಳಿದವನೂ, ಮಹನೀಯರಲ್ಲಿ ಮಹನೀಯನೂ ಆಗಿ ದಿನ ದಿನಕ್ಕೆ ಹೆಚ್ಚಿದ ಭಕ್ತಿಯಿಂದ ತನ್ನ ಮನಸ್ಸಿನಲ್ಲಿ ಶ್ರೀಹರಿಯನ್ನೇ ಧ್ಯಾನಿಸುತ್ತ ಅಸಾರವೂ ಅನಿತ್ಯವೂ ಆದ ಈ ಜಗತ್ತನ್ನು (ಶ್ರೀಹರಿಗಿಂತ ಭಿನ್ನವಾದುದನ್ನು) ಬಿಟ್ಟು ಬಿಡುವನು. ಅವನು ಈ ಬಗೆಯ ವೈರಾಗ್ಯದಿಂದ ವಿಷಯಾಸಕ್ತಿ ಇಲ್ಲದವನೂ, ಶೀಲವಂತನೂ, ಗುಣನಿಧಿಯೂ, ಸಜ್ಜನರ ಸುಖದಲ್ಲಿ ಸಂತುಷ್ಟನೂ, ಅವರ ದುಃಖದಲ್ಲಿ ದುಃಖಿತನೂ, ಅಜಾತ ಶತ್ರುವೂ ಆಗಿ ಚಂದ್ರನು ಬಿಸಿಲಿನ ತಾಪವನ್ನು ಹರಿಸುವಂತೆ ಸಜ್ಜನರ ಶೋಕವನ್ನು ಪರಿಹರಿಸುವನು. ದಿತಿ, ಆ ನಿನ್ನ ಮೊಮ್ಮಗನು ಶ್ರೀಹರಿಯನ್ನು ಅಪರೋಕ್ಷದಿಂದ ಕಾಣುವನು. ಶ್ರೀಹರಿಯು ಎಲ್ಲ ರೂಪಗಳ-ಲ್ಲಿಯೂ ದೋಷರಹಿತನು, ಸುಂದರನು, ಅವನ ದೇಹವು ಅಲಂಕಾರಗಳಿಗೆ ಸೊಗಸನ್ನು ಕೊಡುವುದು, ಲಕ್ಷ್ಮೀಯೆಂಬ ಸ್ತ್ರೀಯು ಅವನ ಸೌಂದರ್ಯಕ್ಕೆ ಮಾರು ಹೋಗಿರುವಳು. ಅಂತಹ ಶ್ರೀಹರಿಯನ್ನು ಸಾಕ್ಷಾತ್ತಾಗಿ ಕಾಣುವ ನಿನ್ನ ಮೊಮ್ಮಗನು ಧನ್ಯನು' ಎಂದು ಶುಭವನ್ನು ನುಡಿದರು.

ಮೊಮ್ಮಗನು ಪರಮಭಕ್ತನೆಂದೂ, ತನ್ನ ಮಕ್ಕಳು ಶ್ರೀಹರಿಯಿಂದಲೇ ಸಾಯುವರೆಂದೂ (ಆದ್ದರಿಂದ ಅವರಲ್ಲಿರುವ ಯೋಗ್ಯ ಜೀವನಿಗೆ ಸದ್ಗತಿ-ಯಾಗುವುದೆಂದೂ) ತಿಳಿದು ದಿತಿದೇವಿಯು ಸಂತೋಷಗೊಂಡಳು. ಮುಕ್ತಿ-ಯೋಗ್ಯರಾದ ಜೀವರಿಗೆ ಸಂತೋಷವಾಗುವುದು ಯುಕ್ತವಾಗಿದೆ.



# ಅಥ ಷೋಡಶೋಽಧ್ಯಾಯಃ

ಯಾವ ಭಗವಂತನ ಸಮಾಧಿಯ ಪರಿಪಾಕದಿಂದುಂಟಾದ ಮಾಹಾತ್ಮ್ಯದಿಂದ ಸನಕಾದಿಗಳಿಗೆ ಜಯವಿಜಯರಿಗೆ ಶಾಪ ಮತ್ತು ವಿಮೋಚನೆ ಕೊಡುವ ಸಾಮರ್ಥ್ಯ ಬಂದಿತೋ, ಅಂಥ ಶ್ರೀಹರಿಯು ನಿರುಪಚರಿತ ಮಹಿಮೆಯುಳ್ಳವನು ಎಂದು ಹೇಳುವರು ಈ ಅಧ್ಯಾಯದಲ್ಲಿ. ಮೊದಲಿಗೆ ದಿತಿಯು ಮತ್ತೇನು ಮಾಡಿದಳು ಎಂಬ ವಿದುರನ ಮಾನಸಿಕ ಪ್ರಶ್ನೆಯನ್ನು ಪರಿಹರಿಸುವರು –

**ಮೈತ್ರೇಯ ಉವಾಚ**

**ಪ್ರಾಜಾಪತ್ಯಂ ತು ತತ್ತೇಜಃ ಪರತೇಜೋಹನಂ ದಿತಿಃ ।**
**ದಧಾರ ವರ್ಷಾಣಿ ಶತಂ ಶಂಕಮಾನಾಽಸುರಾರ್ದನಾತ್ ॥೧॥**

ದಿತಿಃ=ದಿತಿಯು ಪರತೇಜೋಹನಂ=ಇತರ ತೇಜಸ್ವಿಗಳ ಸಾಮರ್ಥ್ಯವನ್ನು ನಾಶಮಾಡುವ, ಪ್ರಾಜಾಪತ್ಯಂ=ಕಶ್ಯಪರ, ತತ್ ತೇಜಃ=ವೀರ್ಯವನ್ನು ಅಸುರಾರ್ದ-ನಾತ್ ಶಂಕಮಾನಾ=ದೈತ್ಯನಾಶಕನಾದ ಶ್ರೀಹರಿಯಿಂದ ವಧೆಯನ್ನು ಶಂಕಿಸಿ, ಶತಂ ವರ್ಷಾಣಿ ದಧಾರ=ಒಂದು ನೂರುವರ್ಷ ಗರ್ಭದಲ್ಲಿ ಧಾರಣ ಮಾಡಿದಳು ॥೧॥

**ಲೋಕೇ ತೇನ ಹೃತಾಲೋಕೇ ಲೋಕಪಾಲಾ ಹತೌಜಸಃ ।**
**ನ್ಯವೇದಯನ್ ವಿಶ್ವಸೃಜೇ ಧ್ವಾಂತವ್ಯತಿಕರಂ ದಿಶಾಂ ॥೨॥**

ತೇನ=ಆ ಗರ್ಭದಿಂದ, ಹೃತಾಲೋಕೇ=ಸೂರ್ಯಮುಂತಾದವರ ಪ್ರಕಾಶವು ನಾಶವಾಗುತ್ತಿರಲು,ಅದನ್ನು ಪರಿಹರಿಸಲು ಹತೌಜಸಃ=ಸಾಮರ್ಥ್ಯವನ್ನು ಕಳೆದು-ಕೊಂಡ, ಲೋಕಪಾಲಾಃ=ಇಂದ್ರಾದಿದೇವತೆಗಳು, ದಿಶಾಂ=ದಿಕ್ಕುಗಳ, ಧ್ವಾಂತವ್ಯತಿಕರಂ=ಕತ್ತಲೆಯಿಂದಾದ ವ್ಯತ್ಯಾಸವನ್ನು ಉಪದ್ರವವನ್ನು (ದಿಗ್ಭ್ರಮವನ್ನು) ವಿಶ್ವಸೃಜೇ=ಬ್ರಹ್ಮದೇವರಿಗೆ, ನ್ಯವೇದಯನ್=ಅರುಹಿದರು. ॥೨॥

**ದೇವಾ ಉವಾಚ**

**ತಮ ಏತದ್ ವಿಭೋ ವೇತ್ಥ ಸಂವಿಗ್ನಾ ಯದ್ ವಯಂ ಭೃಶಂ ।**
**ನ ಹ್ಯವ್ಯಕ್ತಂ ಭಗವತಃ ಕಾಲೇನಾಸ್ಪೃಷ್ಟವರ್ತ್ಮನಃ ॥೩॥**

ವಿಭೋ=ಸ್ವಾಮಿಯೇ, ಯತ್=ಯಾವುದರಿಂದ, ವಯಂ=ನಾವು ಭೃಶಂ= ಬಹಳವಾಗಿ, ಸಂವಿಗ್ನಾಃ=ಭ್ರಾಂತರಾಗಿದ್ದೇವೆಯೋ,ಏತದ್‌ತಮಃ=ಈ ಕತ್ತಲೆಯನ್ನು ವೇತ್ಥ=ತಿಳಿದಿರುವಿ, ಕಾಲೇನ=ಕಾಲ ಮುಂತಾದವುಗಳಿಂದ, ಅಸ್ಪೃಷ್ಟವರ್ತ್ಮನಃ= ತಿರೋಹಿತವಾಗದ ಜ್ಞಾನಮಾರ್ಗವುಳ್ಳ, ಭಗವತಃ=ಪೂಜ್ಯರಾದ ತಮಗೆ, ನ ಹಿ ಅವ್ಯಕ್ತಂ=ತಿಳಿಯದಿರುವುದು ಯಾವುದೂ ಇಲ್ಲ ॥೩॥

**ದೇವದೇವ ಜಗದ್ಧಾತರ್ಲೋಕನಾಥಶಿಖಾಮಣೇ ।**
**ಪರೇಷಾಮಪರೇಷಾಂ ವಾ ತ್ವಂ ಭೂತಾನಾಮಸಿ ಭಾವವಿತ್ ॥೪॥**

ದೇವದೇವ=ದೇವೋತ್ತಮನೇ, ಜಗದ್ಧಾತಃ=ಪ್ರಪಂಚಧಾರಕನೇ, ಲೋಕನಾಥ- ಶಿಖಾಮಣೇ=ಲೋಕಪಾಲಕಶ್ರೇಷ್ಠನೇ, ತ್ವಂ=ನೀನು, ಪರೇಷಾಂ=ಉತ್ತಮರಾದ, ಅಪರೇಷಾಂ ವಾ=ಅಧಮರಾದ, ಭೂತಾನಾಂ=ಪ್ರಾಣಿಗಳ, ಭಾವವಿತ್= ಇಂಗಿತವನ್ನು ತಿಳಿದವನು. ಅಂದರೆ ಯಾವ ಅಭಿಪ್ರಾಯದಿಂದ ದಿತಿಯಗರ್ಭ ಬೆಳೆಯುತ್ತಿದೆ ಎಂದು ತಿಳಿದಿರುವಿ ಎಂದು ಭಾವ ॥೪॥

**ನಮೋ ವಿಜ್ಞಾನವೀರ್ಯಾಯ ಮಾಯಯೇದಮುಪೇಯುಷೇ ।**
**ಗೃಹೀತಗುಣಭೇದಾಯ ನಮಸ್ತೇಽವ್ಯಕ್ತಯೋನಯೇ ॥೫॥**

ವಿಜ್ಞಾನವೀರ್ಯಾಯ=ವಿಶೇಷಜ್ಞಾನದಿಂದ ಬಂದ ಪರಾಕ್ರಮವುಳ್ಳ ಮಾಯಯಾ=ಶ್ರೀಹರಿಯ ಇಚ್ಛೆಯಿಂದ ಇದಂ=ಪಾರಮೇಷ್ಠ್ಯಪದವನ್ನು ಉಪೇಯುಷೇ=ಪಡೆದವನೇ ಗೃಹೀತಗುಣಭೇದಾಯ=ಸೃಷ್ಟಿಯನ್ನು ಮಾಡಲು ಉನ್ಮುಖವನ್ನಾಗಿ ಮಾಡಿದ ರಜೋಗುಣವಿಶೇಷವುಳ್ಳವನೇ ಅವ್ಯಕ್ತಯೋನಯೇ= ಪರಬ್ರಹ್ಮನೇ ಕಾರಣವಾಗಿವುಳ್ಳ ತೇ=ನಿನಗೆ ನಮಃ ನಮಃ=ನಮಸ್ಕಾರವು ॥೫॥

ದಿತಿಯ ಗರ್ಭದಿಂದುಂಟಾದ ಅಂಧಕಾರದ ಉಪದ್ರವವು ಎಲ್ಲ ಉಪದ್ರವ ನಾಶಕನಾದ ನಿನ್ನ ಉಪಾಸಕರಿಗೆ ಅವಶ್ಯವಾಗಿ ಪರಿಹಾರವಾಗುವುದು ಎಂದು ಹೇಳುವರು.

**ಯೇ ತ್ವಾಮಾನನ್ಯಭಾವೇನ ಭಾವಯಂತ್ಯಾತ್ಮಭಾವನಂ ।**
**ಆತ್ಮನಿ ಪ್ರೋತಭುವನಂ ಪರಂ ಸದಸದಾತ್ಮಕಮ್ ॥೬॥**

**ತೇಷಾಂ ಸುವ್ಯಕ್ತಯೋಗಾನಾಂ ಜಿತಶ್ವಾಸೇಂದ್ರಿಯಾತ್ಮನಾಂ ।**
**ಲಬ್ಧಯುಷ್ಮತ್ಪ್ರಸಾದಾನಾಂ ನ ಕುತಶ್ಚಿತ್ ಪರಾಭವಃ ॥೭॥**

ಯೇ=ಯಾರು ಪರಂ ಸರ್ವಜೀವೋತ್ತಮನಾದ ಸದಸದಾತ್ಮಕಂ=ಕಾರ್ಯಕಾರಣ-ಪ್ರಪಂಚದಲ್ಲಿ ವ್ಯಾಪ್ತನಾದ ಆತ್ಮನಿ=ಪರಮಾತ್ಮನಲ್ಲಿ ಪ್ರೋತಭುವನಂ=ಸ್ಥಾಪಿತವಾದ ಲೋಕಗಳುಳ್ಳವನೋ (ಪರಮಾತ್ಮನಲ್ಲಿಯೇ ಎಲ್ಲ ಲೋಕಗಳು ಆಶ್ರಿತವಾಗಿವೆ ಎಂದು ತಿಳಿದವನೋ) ಆತ್ಮಭಾವನಂ=ಪರಮಾತ್ಮನ ಧ್ಯಾನಮಾಡುವ ತ್ವಾಂ=ನಿನ್ನನ್ನು ಅನನ್ಯಭಾವೇನಭಾವಯಂತಿ=ಇವನೇ ನಮ್ಮ ಗುರು ಎಂದು ಭಕ್ತಿಯಿಂದ ಭಜಿಸುವರೋ ತೇಷಾಂ=ಅವರಿಗೆ ಸುವ್ಯಕ್ತಯೋಗಾನಾಂ=ಚೆನ್ನಾಗಿ ಅಭಿವ್ಯಕ್ತವಾದ ಶ್ರೀಹರಿಧ್ಯಾನರೂಪಯೋಗವುಳ್ಳವರಿಗೆ ಜಿತಶ್ವಾಸೇಂದ್ರಿಯಾತ್ಮನಾಂ=ಪ್ರಾಣೇಂದ್ರಿಯ ಜಯವುಳ್ಳವರಿಗೆ ಲಬ್ಧಯುಷ್ಮತ್ಪ್ರಸಾದಾನಾಂ=ನಿಮ್ಮ ಅನುಗ್ರಹ ಪಡೆದವರಿಗೆ ಕುತಶ್ಚಿತ್ ಪರಾಭವಃ ನ=ಯಾರಿಂದಲೂ ಸೋಲಿಲ್ಲ. ನಿಮ್ಮನ್ನು ಮುಖ್ಯಗುರು ಎಂದು ಧ್ಯಾನಮಾಡುವುದರಿಂದ ಪ್ರಾಣೇಂದ್ರಿಯಜಯವಾಗಿ ಶ್ರೀಹರಿಧ್ಯಾನ ವ್ಯಕ್ತವಾಗಿ ಅದರಿಂದ ಮೋಕ್ಷಜನಕ ನಿಮ್ಮ ಪ್ರಸಾದವಾಗುವುದು ಎಂದು ಭಾವ.

**ಯಸ್ಯ ವಾಚಾ ಪ್ರಜಾಃ ಸರ್ವಾ ಗಾವಸ್ತಂತ್ಯೇವ ಯಂತ್ರಿತಾಃ ।**
**ಹರಂತಿ ಬಲಿಮಾಯತ್ತಾಸ್ತಸ್ಮೈ ಮುಖ್ಯಾತ್ಮನೇ ನಮಃ ॥೮॥**

ಯಸ್ಯ=ಯಾವ ನಿಮ್ಮ ವಾಚಾ=ವೇದರೂಪವಾದ ವಾಕ್ಯಗಳಿಂದ ಗಾವಃ=ಆಕಳುಗಳು ತಂತ್ಯಾ ಇವ=ಧೀರ್ಘವಾದ ಹಗ್ಗದಿಂದ ಕಟ್ಟಲ್ಪಡುವಂತೆ ಯಂತ್ರಿತಾಃ=ಕಟ್ಟಲ್ಪಟ್ಟವರಾಗಿ ಸರ್ವಾಃ ಪ್ರಜಾಃ=ಬ್ರಾಹ್ಮಣಾದಿ ಎಲ್ಲ ಪ್ರಜೆಗಳು ಆಯತ್ತಾಃ=ನಿಮ್ಮ ಆಧೀನರಾಗಿ ಬಲಿಂ=ತಮಗೆ ವಿಹಿತವಾದ ಭಗವತ್ಪೂಜಾದಿಗಳನ್ನು ಹರಂತಿ=ಮಾಡುವರೋ ತಸ್ಮೈ=ಅಂಥ ಮುಖ್ಯಾತ್ಮನೇ=ಎಲ್ಲ ಜೀವನಿಯಾಮಕರಾದ ತಮಗೆ ನಮಃ=ನಮಸ್ಕಾರವು ॥೮॥

**ಸ ತ್ವಂ ವಿಧತ್ಸ್ವ ಶಂ ಭೂಮನ್ ತಮಸಾ ಲುಪ್ತಕರ್ಮಣಾಂ ।**
**ಅದಭ್ರದಯಯಾ ದೃಷ್ಟ್ಯಾ ಪ್ರಪನ್ನಾನರ್ಹಸೀಕ್ಷಿತುಮ್ ॥೯॥**

ಹೇ ಭೂಮನ್=ಪೂರ್ಣನೇ (ಯಥಾಯೋಗ್ಯ) ತಮಸಾ=ಕತ್ತಲೆಯಿಂದ ಲುಪ್ತಕರ್ಮಣಾಂ=ಹಗಲು ರಾತ್ರಿಗಳು ತಿಳಿಯದೇ ಕರ್ಮಗಳನ್ನು ಮಾಡದಿರುವ ನಮಗೆ ಶಂ ವಿಧತ್ಸ್ವ=ಸುಖವನ್ನುಂಟುಮಾಡು ಸಃ ತ್ವಂ=ಆ ನೀನು ಪ್ರಪನ್ನಾನ್=ಶರಣಾಗತರನ್ನು ಅದಭ್ರದಯಯಾ ದೃಷ್ಟ್ಯಾ=ಪೂರ್ಣವಾದ ಕೃಪಾದೃಷ್ಟಿಯಿಂದ ಈಕ್ಷಿತುಂ ಅರ್ಹಸಿ=ನೋಡಲು ಯೋಗ್ಯನಾಗಿರುವಿ ॥೯॥

ಕತ್ತಲೆಗೆ ಕಾರಣವನ್ನು ತಾವೇ ಉತ್ಪ್ರೇಕ್ಷಿಸಿ ಹೇಳುವರು -

**ಏಷ ದೇವ ದಿತೇರ್ಗರ್ಭ ಓಜಃ ಕಾಶ್ಯಪಮರ್ಪಿತಮ್ ।**
**ದಿಶಸ್ತಿಮಿರಯನ್ ಸರ್ವಾ ಏಧತೇಽಗ್ನಿರಿವೈಧಸಿ ॥೧೦॥**

ಹೇ ದೇವ=ಬ್ರಹ್ಮದೇವನೇ ದಿತೇಃ=ದಿತಿದೇವಿಯ ಗರ್ಭೇ=ಉದರದಲ್ಲಿ ಅರ್ಪಿತಂ=ಸ್ಥಾಪಿತವಾದ ಕಾಶ್ಯಪಂ ಓಜಃ=ಕಶ್ಯಪರ ವೀರ್ಯವು ಏಧಸಿ=ಕಟ್ಟಿಗೆಯಲ್ಲಿ ಇಡಲ್ಪಟ್ಟ ಅಗ್ನಿರಿವ=ಬೆಂಕಿಯಂತೆ ಸರ್ವಾ ದಿಶಃ=ಎಲ್ಲ ದಿಕ್ಕುಗಳನ್ನು ತಿಮಿರಯನ್=ಅಂಧಕಾರಗೈಯುತ್ತ ಏಧತೇ=ಬೆಳೆಯುತ್ತಿದೆ ॥೧೦॥

**ಮೈತ್ರೇಯ ಉವಾಚ**

**ಸ ಪ್ರಹಸ್ಯ ಮಹಾಬಾಹೋ ಭಗವಾನ್ ಶಬ್ದಗೋಚರಃ ।**
**ಪ್ರತ್ಯಾಚಷ್ಟಾತ್ಮಭೂರ್ದೇವಾನ್ ಪ್ರೀಣನ್ ರುಚಿರಯಾ ಗಿರಾ ॥೧೧॥**

ಮಹಾಬಾಹೋ=ವಿದುರನೇ ಶಬ್ದಗೋಚರಃ=ದೇವತೆಗಳ ಸ್ತುತಿಗೆ ವಿಷಯನಾದ ಭಗವಾನ್=ಪೂಜ್ಯನಾದ ಸಃ ಆತ್ಮಭೂಃ=ಬ್ರಹ್ಮದೇವರು ಪ್ರಹಸ್ಯ=ದಿತಿಯ ಕುಕಾರ್ಯವನ್ನರಿತು ನಕ್ಕು ಪ್ರೀಣನ್=ಪ್ರೀತನಾಗಿ ರುಚಿರಯಾ ಗಿರಾ=ಮಧುರವಾದ ಮಾತುಗಳಿಂದ ದೇವಾನ್ ಪ್ರತ್ಯಾಚಷ್ಟ=ದೇವತೆಗಳಿಗೆ ಹೇಳಿದರು.

**ಬ್ರಹ್ಮೋವಾಚ**

**ಮಾನಸಾ ಮೇ ಸುತಾ ಯುಷ್ಮತ್ಪೂರ್ವಜಾ ವೈ ಸನಕಾದಯಃ ।**
**ಚೇರುರ್ವಿಹಾಯಸಾ ಲೋಕಾನ್ ಲೋಕೇಷು ವಿಗತಸ್ಪೃಹಾಃ ॥೧೨॥**

ಯುಷ್ಮತ್ಪೂರ್ವಜಾಃ=ನಿಮಗಿಂತ ಮೊದಲು ಮೇ=ನನ್ನ ಮಾನಸಾಃ ಸುತಾಃ=ಮನಸ್ಸಿನಿಂದ ಉತ್ಪನ್ನರಾದ ಸನಕಾದಯಃ=ಸನಕಾದಿಗಳು ಲೋಕೇಷು=ಲೋಕಗಳಲ್ಲಿರುವ ವಿಷಯಗಳಲ್ಲಿ ವಿಗತಸ್ಪೃಹಾಃ=ಅಭಿಲಾಷೆ ಇಲ್ಲದೆ ಲೋಕಾನ್=ಎಲ್ಲ ಲೋಕಗಳನ್ನು ವಿಹಾಯಸಾ=ಆಕಾಶಮಾರ್ಗದಿಂದ ಚೇರುಃ=ಲೋಕತತ್ವವನ್ನು ತಿಳಿಯುವುದಕ್ಕಾಗಿ ಸಂಚರಿಸಿದರು ॥೧೨॥

**ತ ಏಕದಾ ಭಗವತೋ ವೈಕುಂಠಸ್ಯಾಮಲಾತ್ಮನಃ ।**
**ಯಯುರ್ವೈಕುಂಠನಿಲಯಂ ಸರ್ವಲೋಕನಮಸ್ಕೃತಮ್ ॥೧೩॥**

ತೇ=ಸನಕಾದಿಗಳು ಅಮಲಾತ್ಮನಃ=ನಿರ್ದುಷ್ಟನಾದ ಭಗವತಃ=ಷಡ್ಗುಣಪೂರ್ಣನಾದ ವೈಕುಂಠಸ್ಯ=ವಿಕುಂಠಾಪುತ್ರನಾದ ಶ್ರೀಹರಿಯ ಸರ್ವಲೋಕನಮಸ್ಕೃತಂ=ಎಲ್ಲ

ಜನರಿಂದ ವಂದಿತವಾದ ವಿಕುಂಠನಿಲಯಂ ಯಯುಃ=ವೈಕುಂಠವೆಂಬ ಲೋಕಕ್ಕೆ ಹೋದರು ॥ ೧೩॥

ಹನ್ನೆರಡು ಶ್ಲೋಕಗಳಿಂದ ವೈಕುಂಠವನ್ನು ವರ್ಣಿಸುವರು –

**ವಸಂತಿ ಯತ್ರ ಪುರುಷಾಃ ಸರ್ವೇ ವೈಕುಂಠಮೂರ್ತಯಃ ।**
**ಯೇ ನಿತ್ಯಮನಿಮಿತ್ತೇನ ಧರ್ಮೇಣಾರಾಧಯನ್ ಹರಿಂ ॥೧೪॥**

ಯತ್ರ=ಯಾವ ವೈಕುಂಠದಲ್ಲಿ ಸರ್ವೇ ಪುರುಷಾಃ=ಸಾರೂಪ್ಯಮೋಕ್ಷ ಪಡೆದ ಎಲ್ಲ ಜನರು ವೈಕುಂಠಮೂರ್ತಯಃ=ಶ್ರೀಹರಿಯಂತೆ ರೂಪವುಳ್ಳವರಾಗಿ ವಸಂತಿ=ವಾಸಿಸುವರು ಯೇ=ಯಾರು ನಿತ್ಯಂ=ಯಾವಾಗಲೂ ಅನಿಮಿತ್ತೇನ=ಭಗವದರ್ಪಣ ಬುದ್ಧಿಯಿಂದ ಧರ್ಮೇಣ=ಧರ್ಮದಿಂದ ಹರಿಂ=ಪರಮಾತ್ಮನನ್ನು ಆರಾಧಯನ್=ಪೂಜಿಸುತ್ತ ಇರುವವರು.

ಇಲ್ಲಿ ಅನಿಮಿತ್ತೇನ ಎಂಬುದಕ್ಕೆ ವಿವಕ್ಷಿತ ತಾತ್ಪರ್ಯ ಹೇಳುವರು.

**ಅನಿಮಿತ್ತೇನ ವಿಷ್ಣ್ವರ್ಪಣೇನ ।**

ಅಕಾರವಾಚ್ಯನಾದ ಹರಿಯೇ ಎಲ್ಲ ಕಾರ್ಯ ಮಾಡಿಸುವವನು ಎಲ್ಲ ಕಾರ್ಯಗಳಿಗೂ ಅವನೇ ಉದ್ದೇಶ್ಯನು ಎಂದು ತಿಳಿಯುವುದೇ ಅರ್ಪಣ ತತ್ಪೂರ್ವಕವಾಗಿ ಆರಾಧಿಸುವರು ॥೧೪॥

**ಯತ್ರ ಚಾದ್ಯಃ ಪುಮಾನಾಸ್ತೇ ಭಗವಾನ್ ಶಬ್ದಗೋಚರಃ ।**
**ಸತ್ವಂ ವಿಷ್ಟಭ್ಯ ವಿರಜಂ ಸ್ವಾನಾಂ ನೋ ಮೃಡಯನ್ ವೃಷಃ ॥೧೪॥**

ಯತ್ರ=ಎಲ್ಲಿ ಆದ್ಯಃ=ಸರ್ವಕಾರಣನಾದ ಭಗವಾನ್=ಐಶ್ವರ್ಯಶಾಲಿಯಾದ ಶಬ್ದಗೋಚರಃ=ಮೂರ್ತಿಮತ್ತಾದ ವೇದಗಳಿಂದ ಸ್ತುತನಾದ ಪುಮಾನ್=ಪುರುಷ-ನಾಮಕನು ವಿರಜಂ=ದೋಷರಹಿತವಾದ ಸತ್ವಂ=ಜ್ಞಾನಬಲಸಮೂಹಾತ್ಮಕ ದೇಹವನ್ನು ವಿಷ್ಟಭ್ಯ=ಆಶ್ರಯಿಸಿ ಅಥವಾ ಸತ್ವಗುಣವನ್ನು ಕಾರ್ಯೋನ್ಮುಖ ಮಾಡಿ ನಃ ವೃಷಃ=ನಮ್ಮೆಲ್ಲರಿಗಿಂತ ಶ್ರೇಷ್ಠನಾದ ಸ್ವಾನಾಂ=ಭಕ್ತರಾದ ನಮ್ಮನ್ನು ಮೃಡಯನ್=ರಕ್ಷಿಸುತ್ತ ಆಸ್ತೇ=ಇರುವನು ॥೧೫॥

**ಯತ್ರ ನೈಃಶ್ರೇಯಸಂ ನಾಮ ವನಂ ಕಾಮದುಘೈರ್ದ್ರುಮೈಃ ।**
**ಸರ್ವರ್ತುಶ್ರೀಭಿರ್ವಿಭ್ರಾಜತ್ ಕೈವಲ್ಯಮಿವ ಮೂರ್ತಿಮಾನ್ ॥೧೬॥**

ಯತ್ರ=ಯಾವ ವೈಕುಂಠದಲ್ಲಿ ನೈಃಶ್ರೇಯಸಂ ನಾಮ ವನಂ=ನೈಃಶ್ರೇಯಸವೆಂಬ ಹೆಸರಿನ ವನವು ಸರ್ವರ್ತುಶ್ರೀಭಿಃ=ಎಲ್ಲ ಋತುಗಳಲ್ಲಿ ಇರುವ ಫಲಪುಷ್ಪಾದಿ ಸಂಪದ್ಭರಿತಗಳಾದ ಕಾಮದುಘೈಃ ದ್ರುಮೈಃ=ಅಭೀಷ್ಟಪ್ರದಗಳಾದ ವೃಕ್ಷಗಳಿಂದ ಮೂರ್ತಿಮಾನ್ ಕೈವಲ್ಯಂ ಇವ=ವ್ಯಕ್ತನಾಗಿ ಶ್ರೀಹರಿಯೇ ನಿಂತಂತೆ ವಿಭ್ರಾಜತ್=ಪ್ರಕಾಮಾನವಾಗಿದೆ.

**ವೈಮಾನಿಕಾಃ ಸಲಲನಾಶ್ಚರಿತಾನಿ ಯತ್ರ**
**ಗಾಯಂತಿ ಲೋಕಶಮಲಕ್ಷಪಣಾನಿ ಭರ್ತುಃ ।**
**ಅಂತರ್ಜಲೇ ತು ವಿಲಸನ್ಮಧುಮಾಧವೀನಾಂ**
**ಗಂಧೇನ ಖಂಡಿತಧಿಯೋಽಪ್ಯನಿಲಂ ಕ್ಷಿಪಂತಃ ॥೧೭॥**

ಯತ್ರ=ಯಾವ ವನದಲ್ಲಿ ಸಲಲನಾಃ=ಪತ್ನಿಯರಿಂದ ಸಹಿತರಾಗಿ ವೈಮಾನಿಕಾಃ= ವಿಮಾನದಲ್ಲಿ ಸಂಚರಿಸುವ ಪುರುಷರು ಲೋಕಶಮಲಕ್ಷಪಣಾನಿ=ಜನರ ಪಾಪ-ನಾಶಕವಾದ ಭರ್ತುಃ=ಶ್ರೀಹರಿಯ ಚರಿತಾನಿ=ಚರಿತ್ರೆಗಳನ್ನು ಅಂತರ್ಜಲೇ=ನೀರಿನ ಮಧ್ಯದಲ್ಲಿ ವಿಲಸನ್ಮಧುಮಾಧವೀನಾಂ=ವಿಶೇಷವಾಗಿ ಪ್ರಕಾಶಿಸುವ ಮಕರಂದ-ದಿಂದ ಕೂಡಿದ ವಸಂತಕಾಲದ ಬಳ್ಳಿಗಳ ಗಂಧೇನ=ಗಾಳಿಯಿಂದ ಬಂದ ವಾಸನೆಯಿಂದ ಖಂಡಿತಧಿಯಃ ಅಪಿ=ಶ್ರೀಹರಿಯಿಂದ ವಿಚಲಿತವಾದ ಬುದ್ಧಿವುಳ್ಳವ-ರಾದರೂ ಅನಿಲಂ=ಗಂಧವನ್ನು ತರುವ ಗಾಳಿಯನ್ನು ಕ್ಷಿಪಂತಃ=ತಿರಸ್ಕರಿಸುತ್ತಾ ಗಾಯಂತಿ=ಗಾನಮಾಡುವರು. ಅಂದರೆ ವಿಷಯಸಾನ್ನಿಧ್ಯದಿಂದ ಚಿತ್ತಕ್ಷೋಭ-ವಾದರೂ ಭಗವಂತನಲ್ಲಿ ರತಿಯು ಹೋಗಲಿಲ್ಲವೆಂದು ಭಾವ.

ಇಲ್ಲಿ ಗಂಧದಿಂದ ವಿಚಲಿತವಾದ ಮನಸ್ಸುಳ್ಳವರು ಮುಕ್ತರಾಗಲಾರರು. ಆದ್ದರಿಂದ ಇಲ್ಲಿ ವಿವಕ್ಷಿತರಾದ ವೈಮಾನಿಕಪುರುಷರಾರೆಂದು ಪ್ರಮಾಣದಿಂದ ಹೇಳುವರು –

**"ಮುಕ್ತಾಶ್ಚೈವಾಧಿಕಾರಸ್ಥಾ ದ್ವೇಧಾ ವೈಕುಂಠಲೋಕಗಾಃ ।**
**ಅಮುಕ್ತಾನಾಂ ಭ್ರಮಃ ಕ್ವಾಪಿ ನ ಮುಕ್ತಾನಾಂ ಕ್ವಚಿದ್ಭವೇತ್ ।**
**ಭವಿಷ್ಯತ್ ಪುರಾಣೇ**

**ಕೃಷ್ಣಾತ್ಮನಾಂ ನ ರಜ ಆದಧುಃ ॥ ಇತಿ ಚ ।**

ಮುಕ್ತರು ಮತ್ತು ಅಧಿಕಾರದಲ್ಲಿರುವವರು (ಅಮುಕ್ತರು) ಹೀಗೆ ವೈಕುಂಠ-ದಲ್ಲಿರುವವರು ಎರಡು ವಿಧ. ಅಮುಕ್ತರಾದ ಅಧಿಕಾರದಲ್ಲಿರುವವರಿಗೆ ಕೆಲವು ಸಲ ಭ್ರಮೆ ಎಂದರೆ ಚಿತ್ತ ವಿಕ್ಷೋಭವಾಗುವುದು. ಮುಕ್ತರಿಗೆ ಯಾವ ಕಾಲದಲ್ಲಿಯೂ ಚಿತ್ತವಿಕ್ಷೋಭವಾಗಲಾರದು.

ಇಲ್ಲಿಯೇ ಮುಂದೆ ೨೦ನೇ, ಶ್ಲೋಕದಲ್ಲಿ ಶ್ರೀಕೃಷ್ಣನಲ್ಲಿ ಮನಸ್ಸಿಟ್ಟವರಿಗೆ ವಿಷಯಗಳು ರಾಗವನ್ನುಂಟುಮಾಡಲಾರವು ಎಂದು ಹೇಳಿದೆ, ಅದರ ವಿರೋಧ ಬರುವುದು. ಕಾರಣ ಇಲ್ಲಿ ವೈಮಾನಿಕರು ಎಂದರೆ ಅಮುಕ್ತ ಅಧಿಕಾರಸ್ಥರನ್ನೇ ಸ್ವೀಕರಿಸಬೇಕು ॥೧೭॥

ಗಾಯನವು ಬೇರೆಯವರ ಧ್ವನಿಸಹಿತವಾದರೆ ಅನುಗಾನವಿದ್ದರೆ ಶೋಭಿಸುವುದು ಕಾರಣ ಧ್ವನಿಸಾಹಿತ್ಯವಿದೆ ಎಂದು ಹೇಳುವರು –

**ಪಾರಾವತಾನ್ಯಭೃತಸಾರಸಚಕ್ರವಾಕ-**
**ದಾತ್ಯೂಹಹಂಸಶುಕತಿತ್ತಿರಬರ್ಹಿಣಾದ್ಯೈಃ ।**
**ಕೋಲಾಹಲೇ ವಿರಚಿತೇ ಚಿರಮಾತ್ರಯೋಚ್ಚೈ-**
**ರ್ಭೃಂಗಾಧಿಪೇ ಹರಿಕಥಾಮನುಗಾಯಮಾನೇ ॥೧೮॥**

ಪಾರಾವತ=ಪಾರಿವಾಳ, ಅನ್ಯಭೃತ=ಕೋಕಿಲ, ಸಾರಸಚಕ್ರವಾಕದಾತ್ಯೂಹ=ಚಾತಕ, ಹಂಸ, ಶುಕ=ಗಿಳಿ ತಿತ್ತಿರಬರ್ಹಿಣಾದ್ಯೈಃ=ನವಿಲು ಮುಂತಾದವುಗಳಿಂದ ಚಿರಮಾತ್ರಯಾ= ತ್ರಿಮಾತ್ರಾಸ್ವರದಿಂದ ಉಚ್ಚೈಃ=ಗಟ್ಟಿಯಾಗಿ ಕೋಲಾಹಲೇ ವಿರಚಿತೇ=ಧ್ವನಿ ಮಾಡುತ್ತಿರಲು ಭೃಂಗಾಧಿಪೇ=ಶ್ರೇಷ್ಠಭ್ರಮರವು ಹರಿಕಥಾಂ ಅನುಗಾಯಮಾನೇ ಹರಿಕಥಾವನ್ನು ಹಿಂಬದಿಗಾನ ಮಾಡುತ್ತಿರಲು ಇವರು ಗಾನಮಾಡಿದರು.

ತಿರ್ಯಗ್ಜಂತುಗಳಾದ ಪಾರಿವಾಳ ಮುಂತಾದವು ಪುರುಷರು ಮಾಡುವ ಗಾಯನಕ್ಕೆ ಉಪಯುಕ್ತವಾದ ಧ್ವನಿಮಾಡುವುದು ಲೋಕದಲ್ಲಿ ಕಂಡಿಲ್ಲವಲ್ಲ ಎಂದರೆ ಸಮಾಧಾನವನ್ನು ಪ್ರಮಾಣದಿಂದ ಹೇಳುವರು –

**"ತಿರಶ್ಚೀನಾಃ ಸ್ಥಾವರಾಶ್ಚ ಸರ್ವೇ ಜ್ಞಾನಾದ್ವಿಕುಂಠಗಾಃ ।**
**ಅಮುಕ್ತಾ ಮುಕ್ತಿಮಾಯಾಂತಿ ನಿಯಮಾತ್ ಕರ್ಮಣಃ ಕ್ಷಯೇ" ॥ ಇತಿ ಚ ।**

ಅಮುಕ್ತವಾದ ಪಕ್ಷಿಮುಂತಾದವು, ಮುಂದಿನ ಶ್ಲೋಕದಲ್ಲಿ ಹೇಳುವ ಮಂದಾರ ಮುಂತಾದ ಸ್ಥಾವರಗಳು ಎಲ್ಲವೂ ಶ್ರೀಹರಿಯ ಜ್ಞಾನದಿಂದ ನಿಯಮೇನ ಪ್ರಾರಬ್ಧಕರ್ಮನಾಶವಾದ ಮೇಲೆ ಮುಕ್ತಿ ಪಡೆಯುವವು. ನಂತರ ವೈಕುಂಠ ಲೋಕದಲ್ಲಿರುವವು, ಕಾರಣ ಆ ಮುಕ್ತ ಪಾರಿವಾಳ ಮುಂತಾದವು ಗಾಯನೋಪ-ಯುಕ್ತ ಧ್ವನಿ ಮಾಡಿದವು ಎಂದು ತಿಳಿಯುವುದು ॥೧೮॥

**ಮಂದಾರಕುಂದಕುರಬೋತ್ಪಲಚಂಪಕಾರ್ಣ-**
**ಪುನ್ನಾಗನಾಗಬಕುಲಾಂಬುಜಪಾರಿಜಾತಾಃ ।**

**ಗಂಧೇऽರ್ಚಿತೇ ತುಲಸಿಕಾಭರಣೇನ ತಸ್ಯಾ**
**ಯಸ್ಮಿಂಸ್ತಪಃ ಸುಮನಸೋ ಬಹುಮಾನಯಂತಿ ॥೧೯॥**

ಮಂದಾರ ಮತ್ತು ಪಾರಿಜಾತಗಳೆರಡು ದೇವತಾವೃಕ್ಷಗಳು. ಕುರಬ=ತಿಲಕವೃಕ್ಷ. ಕುಂದ=ಉತ್ಪಲ, ಕಮಲವಿಶೇಷ ಚಂಪಕೋರ್ಣ=ಕರವೀರಪುಷ್ಪ ನಾಗ=ನಾಗಕೇಸರ ಪುನ್ನಾಗಃ=ಸುರಕರ್ಣಿಕಾರ ಬಕುಲ=ಕಮಲ ಮುಂತಾದ ಹೂಗಳು ಮುಕ್ತವಾಗಿ-ವುಳ್ಳ ಸ್ಥಾವರಗಳು ಯಸ್ಮಿನ್=ಯಾವ ವನದಲ್ಲಿ ಅರ್ಚಿತೇ=ಭಗವಂತನು ಭಕ್ತರಿಂದ ತಮ್ಮ ತಮ್ಮ ಹೂಗಳಿಂದ ಮತ್ತು ತುಲಸಿಯಿಂದ ಪೂಜಿಸಲು, ಆ ಹೂವುಗಳನ್ನು ಬಿಟ್ಟು ತುಲಸಿಕಾಭರಣೇನ=ತುಲಸಿಯನ್ನೇ ಆಭರಣವಾಗಿ ಮಾಡಿಕೊಂಡಾಗ ಅದರಿಂದ ತಸ್ಯಾಃ=ತುಲಸಿಯ ಗಂಧೇ=ಶ್ರೀಹರಿಗೆ ಪ್ರಿಯವಾದ ಗಂಧಕ್ಕಾಗಿ ಮಾಡಿದ ತಪಃ=ತಪಸ್ಸನ್ನು ಬಹುಮಾನಯಂತಿ=ಇವಳೇನು ತಪಸ್ಸು ಮಾಡಿರುವಳು? ನಮ್ಮನ್ನು ಬಿಟ್ಟು ಇವಳನ್ನು ಏಕೆ ಆಭರಣ ಮಾಡಿಕೊಂಡನು? ಎಂದು ಗೌರವಿಸುವರು ಅಂಥ ವೈಕುಂಠಕ್ಕೆ ನಡೆದರು.

ಈ ಶ್ಲೋಕದಲ್ಲಿ ಮೇಲ್ನೋಟಕ್ಕೆ ಶ್ರೀಹರಿಯು ತುಲಸೀಗಂಧದಿಂದ ತುಲಸಿಯ ಅರ್ಚನೆ ಮಾಡಿದನು, ಎಂದರ್ಥ ಕಾಣುವುದು. ಅದು ಸರಿಯಲ್ಲ ಕಾರಣ ಅಧ್ಯಾಹಾರ ಮಾಡಿ ಅರ್ಥ ಹೇಳುವರು–

**ಭಕ್ತೈರರ್ಚಿತೇ ಸತಿ ಭಗವತಾ ತುಲಸಿಕಾಭರಣೇ ಕೃತೇ ತಸ್ಯಾ ಗಂಧಾರ್ಥಂ ತಪೋ ಬಹುಮಾನಯಂತಿ ।**

'ಭಗವತಾ ತುಲಸಿಕಾಭರಣೇ ಕೃತೇ' ಎಂದು ಅಧ್ಯಾಹಾರ. ಮತ್ತು ಗಂಧೇ ಎಂಬುದು ನಿಮಿತ್ತಸಪ್ತಮಿ ಎಂದಂತಾಯಿತು. ಈಗ ಭಕ್ತರು ಎಲ್ಲ ಹೂಗಳಿಂದ ಮತ್ತು ತುಲಸಿಯಿಂದಲೂ ಪೂಜಿಸಿದಾಗ ಶ್ರೀಹರಿಯು ಹೂ ಬಿಟ್ಟು ತುಲಸಿಯನ್ನು ಧರಿಸಿದಾಗ ಇವಳೇನು ತಪವಗೈದು ಹರಿಪ್ರಿಯಳಾದಳು ? ಎಂದುಕೊಂಡರು ಎಂದು ಭಾವ ॥೧೯॥

ಮತ್ತೆ ವೈಕುಂಠವನ್ನೇ ವರ್ಣಿಸುವರು –

**ಯತ್ ಸಂಕುಲಂ ಹರಿಪದಾನತಿಮಾತ್ರತೃಪ್ತೈ-**
**ರ್ವೈಡೂರ್ಯಮಾರಕತಹೇಮಮಯೈರ್ವಿಮಾನೈಃ ।**
**ಯೇಷಾಂ ಬೃಹತ್ಕಟಿತಟಾಃ ಸ್ಮಿತಶೋಭಿಮುಖ್ಯಃ**
**ಕೃಷ್ಣಾತ್ಮನಾಂ ನ ರಜ ಆದಧುರುತ್ಸ್ಮಯಾದ್ಯೈಃ ॥೨೦॥**

ಯತ್=ಯಾವ ವೈಕುಂಠವು, ಯೇಷಾಂ=ವಿಮಾನದಲ್ಲಿರುವವರಿಗೆ ಬೃಹತ್-ಕಟಿತಟಾಃ=ದೊಡ್ಡದಾದ ನಿತಂಬಪ್ರದೇಶವುಳ್ಳ ಸ್ಮಿತಶೋಭಿಮುಖ್ಯಃ=ಮಂದಹಾಸ-ದಿಂದ ಶೋಭಿಸುವ ಮುಖವುಳ್ಳ ಸ್ತ್ರೀಯರು ಕೃಷ್ಣಾತ್ಮನಾಂ=ಶ್ರೀಹರಿಯಲ್ಲಿ ಮನಸ್ಸಿಟ್ಟವರಿಗೆ ಉತ್ಸ್ಮಯಾದ್ಯೈಃ=ಉತ್ಕೃಷ್ಟವಾದ ಗರ್ವಪೂರ್ವಕವಾದ ಶೃಂಗಾರ ಚೇಷ್ಟೆಗಳಿಂದ ರಜಃ=ರಾಗವನ್ನು (ಪ್ರೇಮವನ್ನು) ನ ಆದಧುಃ=ಉಂಟು ಮಾಡಲಿಲ್ಲವೋ ಅಂಥ ಹರಿಪದಾನತಿಮಾತ್ರತೃಪ್ತೈಃ=ಪರಮಾತ್ಮನ ಪಾದಗಳಿಗೆ ಭಕ್ತಿಯಿಂದ ನಮಸ್ಕಾರದಿಂದಲೇ ತೃಪ್ತರಾದ ಪುರುಷರಿಂದ ಕೂಡಿದ ವೈಡೂರ್ಯ=ಪದ್ಮರಾಗ ಮರಕತ=ಇಂದ್ರನೀಲ ಹೇಮಮಯ್ಯೈ=ಬಂಗಾರದಿಂದಲೂ ರಚಿತವಾದ ವಿಮಾನೈಃ=ವಿಮಾನಗಳಿಂದ ಸಂಕುಲಂ=ಪೂರ್ಣವಾದ ಎಂದರ್ಥ ॥೨೦॥

**ಶ್ರೀ ರೂಪಿಣೀ ಕ್ವಣಯತೀ ಚರಣಾರವಿಂದಂ**
**ಲೀಲಾಂಬುಜೇನ ಹರಿಸದ್ಮನಿ ಮುಕ್ತದೋಷಾ ।**
**ಸಂಲ್ಲಕ್ಷ್ಯತೇ ಸ್ಫಟಿಕಕುಡ್ಯ ಉಪೇತಹೇಮ್ನಿ**
**ಸಂಮಾರ್ಜತೀವ ಯದನುಗ್ರಹಣೇಽನ್ಯಯತ್ನಾಃ ॥೨೧॥**

ಯದನುಗ್ರಹಣೇ=ಯಾವಲಕ್ಷ್ಮೀದೇವಿಯ ಅನುಗ್ರಹಸಂಪಾದಿಸುವುದಕ್ಕಾಗಿ ಅನ್ಯಯತ್ನಾಃ=ಬ್ರಹ್ಮಾದಿಗಳು ಉಪಾಸನಾದಿಯತ್ನ ಮಾಡುವರೋ ಸಾ=ಆ ಶ್ರೀಃ=ಲಕ್ಷ್ಮೀದೇವಿಯು ರೂಪಿಣೀ=ಪ್ರತ್ಯಕ್ಷ ರೂಪಧರಿಸಿದವಳಾಗಿ ಚರಣಾರವಿಂದಂ=ನೂಪುರಧರಿಸಿದ ಪಾದಕಮಲವನ್ನು ಕ್ವಣಯತೀ=ಧ್ವನಿಮಾಡುತ್ತಾ, ಹರಿಸದ್ಮನಿ=ಪರಮಾತ್ಮನ ಮಂದಿರದಲ್ಲಿ ಮುಕ್ತದೋಷಾ=ಚಾಂಚಲ್ಯವನ್ನು ಬಿಟ್ಟವಳಾಗಿ ಲೀಲಾಂಬುಜೇನ=ಕ್ರೀಡೆಗಾಗಿ ಕೈಯಲ್ಲಿ ಧರಿಸಿದ ಕಮಲದಿಂದ ಸ್ಫಟಿಕಕುಡ್ಯೇ ಉಪೇತಹೇಮ್ನಿ=ಚಿನ್ನದ ಪಟ್ಟಿಗಳಿಂದ ಅಲಂಕೃತವಾದ ಸ್ಫಟಿಕದ ಗೋಡೆಯಲ್ಲಿ ಸಮ್ಮಾರ್ಜತೀವ ಕಸಗೂಡಿಸುವಳಂತೆ ಸಂಲ್ಲಕ್ಷ್ಯತೇ=ತಿಳಿಯಲ್ಪಡುವಳು. ಪರಮಾತ್ಮನ ಮನೆಯಲ್ಲಿ ಕೈಯಲ್ಲಿ ಕಮಲಹಿಡಿದು ತಿರುಗಿಸುತ್ತ ಮೆಲ್ಲನೆ ನಡೆಯುವಳು. ಆಗ ಸ್ವಚ್ಛವಾದ ಸ್ಫಟಿಕದ ಗೋಡೆಯಲ್ಲಿ ಪ್ರತಿಬಿಂಬಿತಳಾಗುವಳು. ಜನರು ಆ ಪ್ರತಿಬಿಂಬ-ವನ್ನು ನೋಡಿ ಲಕ್ಷ್ಮೀದೇವಿಯೇ ಕಮಲವೆಂಬ ಕಸಬರಿಗೆಯಿಂದ ಗೋಡೆಯ ಕಸ ಗುಡಿಸುವಳು ಎಂದು ತಿಳಿಯುವರು ಎಂದು ಭಾವ ॥೨೧॥

**ವಾಪೀಷು ವಿದ್ರುಮತಟಾಸ್ವಮೃತಾಮಲಾಪ್ಸು**
**ಪ್ರೇಷ್ಯಾನ್ವಿತಾ ನಿಜವನೇ ತುಲಸೀಭಿರೀಶಂ ।**
**ಅಭ್ಯರ್ಚತೀ ಸ್ವಲಕಮುನ್ನಸಮೀಕ್ಷ್ಯ ವಕ್ತ್ರ-**
**ಮುಚ್ಛೇಷಿತಂ ಭಗವತೇತ್ಯಮತಾಂಗ ಯಚ್ಛ್ರೀಃ ॥೨೨॥**

ಹೇಅಂಗ=ದೇವತೆಗಳೇ ! ಯತ್=ಯಾವ ಲೋಕದಲ್ಲಿ ವಿದ್ರುಮತಟಾಸು=ಹವಳದ ದಡಗಳುಳ್ಳ ಅಮೃತಾಮಲಾಪ್ಸು=ಅಮೃತದಂತೆ ಸಿಹಿಯಾದ ನಿರ್ಮಲವಾದ ನೀರುಳ್ಳ ವಾಪೀಷು=ಇಳಿಯುವ ಬಾವಿಗಳಲ್ಲಿ ನಿಜವನೇ=ಕಮಲದವನದಲ್ಲಿ ಪ್ರೇಷ್ಯಾನ್ವಿತಾ=ಪರಿಚಾರಿಕೆಯರಿಂದ ಕೂಡಿ ತುಲಸೀಭಿಃ=ತುಳಿಸಿಗಳಿಂದ ಈಶಂ=ತನ್ನ ಪತಿಯನ್ನು ಅಭ್ಯರ್ಚತೀ=ಪೂಜಿಸುತ್ತ ಆ ನೀರಿನಲ್ಲಿ ಪ್ರತಿಬಿಂಬಿತವಾದ ಸ್ವಲಕಂ=ಸುಂದರವಾದ ಕೂದಲುಗಳುಳ್ಳ ಉನ್ನಸಂ=ಉತ್ಕೃಷ್ಟವಾದ ಮೂಗು ಮುಂತಾದ ಎಲ್ಲ ಲಕ್ಷಣಯುತವಾದ ವಕ್ತ್ರಂ=ಮುಖವನ್ನು ಈಕ್ಷ್ಯ=ನೋಡಿ ಶ್ರೀಃ=ಲಕ್ಷ್ಮೀದೇವಿಯು ಭಗವತಾ=ಶ್ರೀಹರಿಯಿಂದ ಉಚ್ಛೇಷಿತಂ ಇತಿ=ಉಚ್ಛಿಷ್ಟವಾಗಿ ಮಾಡಿದ್ದೆಂದು (ಚುಂಬಿತವಾದ್ದೆಂದು) ಅಮತ=ನಾನು ಧನ್ಯಳೆಂದು ತಿಳಿಯುವಳು.

ಸ್ವರ್ಗಾದಿಗಳಂತೆ ಎಲ್ಲರಿಂದ ಗಮ್ಯವಲ್ಲ ಈ ಲೋಕ ಎಂದು ಹೇಳುವರು-

**ಯನ್ನ ವ್ರಜಂತ್ಯಘಭಿದೋಽರಚನಾನುವಾದಾಃ**
**ಶ್ರುಣ್ವಂತಿ ಯೇಽನ್ಯವಿಷಯಾಃ ಕುಕಥಾ ಮತಿಘ್ನೀಃ ।**
**ಯಾಸ್ತು ಶ್ರುತಾ ಹತಭಗೈರ್ನೃಭಿರಾತ್ತವೀರ್ಯಾ-**
**ಸ್ತಾಸ್ತಾನ್ ಕ್ಷಿಪಂತ್ಯಶರಣೇಷು ತಮಸ್ಸು ಹಂತ ॥೨೩॥**

ಅರಚನಾನುವಾದಾಃ=ಜಗತ್ಸೃಷ್ಟ್ಯಾದಿಕರ್ಮಗಳನ್ನು ಸ್ತೋತ್ರ ಮಾಡದಿರುವ ಜನರು ಅಘಭಿದಃ=ಪಾಪನಾಶಕನಾದ ಶ್ರೀಹರಿಯ ಯತ್=ಯಾವ ವೈಕುಂಠವನ್ನು ನ ವ್ರಜಂತಿ=ಹೊಂದಲಾರರು. ಯೇ=ಯಾರು ಮತಿಘ್ನೀಃ ಯಥಾರ್ಥಜ್ಞಾನ ನಾಶಕಗಳಾದ ಅನ್ಯವಿಷಯಾಃ ಕುಕಥಾಃ=ಶೃಂಗಾರದಿ ಕುತ್ಸಿತಕಥಾಗಳನ್ನು ಶೃಣ್ವಂತಿ=ಕೇಳುವರೋ ತೇ ನ ವ್ರಂಜಂತಿ=ವೈಕುಂಠವನ್ನು ಹೊಂದುವುದಿಲ್ಲ. ಅಷ್ಟೇ ಅಲ್ಲ ಹತಭಗೈಃ= ಜ್ಞಾನಭಕ್ತಿ ಮುಂತಾದ ಭಾಗ್ಯರಹಿತರಾದ ನೃಭಿಃ=ಜನರಿಂದ ಶ್ರುತಾಃ ತು ಆದರದಿಂದ ಕೇಳಲ್ಪಟ್ಟ ಯಾಃ=ಯಾವ ಆತ್ತವಿರ್ಯಾಃ=ಅತ್ಯಂತ ಉನ್ನತವಾದ ತಮಸ್ಸಿನಲ್ಲಿ ಕೆಡವಲು ಸಾಮರ್ಥ್ಯವುಳ್ಳ ಅಥವಾ ಸ್ವೀಕೃತವಾದ ಶ್ರೋತೃಗಳ ಪುಣ್ಯವುಳ್ಳ ತಾಃ=ಕುಕುಥಾಗಳು ತಾನ್=ಕೇಳಿದವರನ್ನು ಅಶರಣೇಷು=ರಕ್ಷಕರಹಿತ-ವಾದ ತಮಸ್ಸು=ತಮಸ್ಸಿನಲ್ಲಿ ಕ್ಷಿಪಂತಿ=ಕೆಡವುವು ಹಂತ=ಖೇದವು.

''ರಚನಾನುವಾದಾಃ'' ಎಂಬ ಪದವಿಭಾಗ ಭ್ರಮನಿವಾರಿಸುವರು -

**ಅರಚನಾನುವಾದಾಃ ।**

ಇಲ್ಲವಾದರೆ ಅವರ ನಿಂದನ ಅನುಪಪನ್ನವಾಗುವುದು

ವೈಕುಂಠಕ್ಕೆ ಧರ್ಮಜ್ಞಾನವು, ಅವಶ್ಯವೆಂದು ತಿಳಿಸಲು ಅದಿಲ್ಲದವರನ್ನು ನಿಂದಿಸುವರು ॥೨೩॥

**ಯೇಽಭ್ಯರ್ಥಿತಾಮಪಿ ಚ ನೋ ನೃಗತಿಂ ಪ್ರಪನ್ನಾ**
**ಜ್ಞಾನಂ ಚ ತತ್ತ್ವವಿಷಯಂ ಸಹಧರ್ಮ ಯತ್ರ ।**
**ನಾರಾಧನಂ ಭಗವತೋ ವಿತರಂತ್ಯಮುಷ್ಯ**
**ಸಂಮೋಹಿತಾ ವಿತತಯಾ ನನು ಮಾಯಯಾ ತೇ ॥೨೪॥**

ಯೇ=ಯಾರು ಸಹಧರ್ಮ=ಧರ್ಮದಿಂದ ಸಹಿತವಾಗಿರುವ ತತ್ತ್ವವಿಷಯಂ ಜ್ಞಾನಂ=ತತ್ತ್ವಜ್ಞಾನವು ಯತ್ರ=ಯಾವ ಮನುಷ್ಯಜನ್ಮದಲ್ಲಿ ಹುಟ್ಟಲು ಯೋಗ್ಯವಾಗಿದೆಯೋ ತಾಂ=ಅಂಥ ಅಭ್ಯರ್ಥಿತಾಂ=ಸಜ್ಜನರಿಂದ ಅಪೇಕ್ಷಿತವಾದ ನೃಗತಿಂ=ತತ್ತ್ವಜ್ಞಾನಯೋಗ್ಯವಾದ ಮನುಷ್ಯಜನ್ಮವನ್ನು ನೋ ಪ್ರಪನ್ನಾಃ=ಹೊಂದಿಲ್ಲ. ಅಂದರೆ ಮನುಷ್ಯಜನ್ಮ ಪಡೆದೂ ತತ್ತ್ವಜ್ಞಾನ ಪಡೆಯದಿದ್ದವರು. ತೇ ನೃಗತಿಂ ನೋ ಪ್ರಪನ್ನಾಃ=ಅವರು ಮನುಷ್ಯರೇ ಅಲ್ಲವೆಂದು ಭಾವ. ಅವರ ಜನ್ಮವ್ಯರ್ಥವೆಂದು ಅಭಿಪ್ರಾಯ. ತೇ=ಮನುಷ್ಯಜನ್ಮಪಡೆದವರು ಯತಃ=ಯಾವ ಕಾರಣ ಅಮುಷ್ಯ ಭಗವತಃ=ಈ ಪರಮಾತ್ಮನ ವಿತತಯಾ=ವಿಸ್ತಾರವಾದ ಮಾಯಯಾ ಬಂಧಕಶಕ್ತಿಯಿಂದ ಸಂಮೋಹಿತಾಃ=ಮೋಹಗೊಂಡು ಭಗವತಃ=ಶ್ರೀಹರಿಯ ಆರಾಧನಂ ತತ್ತ್ವಜ್ಞಾನಪೂರ್ವಕವಾದ ತಮಗೆ ವಿಹಿತವಾದ ಪೂಜಾದಿಕರ್ಮವನ್ನು ನ ವಿತರಂತಿ=ಮಾಡುವುದಿಲ್ಲ.

ವಿಜಯಧ್ವಜರ ಪ್ರಕಾರ – ಯಾರು ನಃ ಅಭ್ಯರ್ಥಿತಾಂ=ಜ್ಞಾನಧರ್ಮಪ್ರಾಪ್ತಿಗೆ ಯೋಗ್ಯವಾದ್ದರಿಂದ ದೇವತೆಗಳಾದ ನಮ್ಮಿಂದಲೂ ಅಪೇಕ್ಷಣೀಯವಾದ ಮನುಷ್ಯ ಯೋನಿಯನ್ನು ಹೊಂದಿಯೂ ತತ್ತ್ವಜ್ಞಾನವನ್ನು ಪಡೆದಿರುವರೋ ಅವರು ಭಗವಂತನ ಬಂಧಕಶಕ್ತಿಯಿಂದ ಧರ್ಮಜ್ಞಾನ ಪ್ರಾಪ್ತಿಗೆ ಅಯೋಗ್ಯವೆಂದು ಮೋಹಿತರಾಗಿ ಭಗವಂತನ ಆರಾಧನೆ ಮಾಡುವುದಿಲ್ಲ, ಉಪದೇಶವನ್ನು ಮಾಡುವುದಿಲ್ಲ, ಆದ್ದರಿಂದ ಅಸುರರು, ಮನುಷ್ಯರಲ್ಲ ಎಂದರ್ಥ.

ಮೇಲಿನ ಶ್ಲೋಕದಲ್ಲಿ ನಃ ದೇವತೆಗಳಾದ ನಮ್ಮಿಂದ ಅಭ್ಯರ್ಥಿತಾಂ ನೃಗತಿಂ ಪ್ರಪನ್ನಾಃ=ಅಪೇಕ್ಷಿತವಾದ ಮನುಷ್ಯಜನ್ಮ ಪಡೆದು ಎಂದು ವ್ಯಾಖ್ಯಾನ ಮಾಡಿದರೆ ದೇವತಗಳಿಗೆ ಮನುಷ್ಯಜನ್ಮವೂ ಪ್ರಾರ್ಥನೀಯವಲ್ಲದ್ದರಿಂದಲೂ, ಶಾಪದಿಂದ ಕಥಂಚಿತ್ ಬರುವುದಾದ್ದರಿಂದ ಅರ್ಥ ಸರಿಯಾಗುವುದಿಲ್ಲ ಎಂದು ಆಲೋಚಿಸಿ ವಿವಕ್ಷಿತ ಯೋಜನೆಯನ್ನು ಆಚಾರ್ಯರು ತಿಳಿಸುವರು –

**ಯೇ ನೃಗತಿಂ ಜ್ಞಾನಾದಿಯೋಗ್ಯಾಂ ನ ಪ್ರಪನ್ನಾಃ । ತೇ ಮೋಹಾದ್ಭಗವದಾರಾಧನಂ ನ ಕುರ್ವಂತಿ । ಧರ್ಮಜ್ಞಾನವರ್ಜಿತಾಃ ಮಾನುಷಾ ಏವ ನ ಭವಂತೀತ್ಯರ್ಥಃ॥**

ಹೀಗೆ ಅನ್ವಯಿಸುವುದರಿಂದ ಯಾರು ಮನುಷ್ಯಜನ್ಮ ಪಡೆದಿಲ್ಲ ಅರ್ಥಾತ್ ಪಶುಗಳೋ ಅವು ಮೋಹದಿಂದ ಭಗವದಾರಾಧನ ಮಾಡುವುದಿಲ್ಲ ಎಂದು ಪಶುಗಳ ಸ್ವರೂಪ ಹೇಳಿದಂತಾಯಿತೇ ಹೊರತು ಧರ್ಮಜ್ಞಾನವಿಲ್ಲದ ಮನುಷ್ಯರನ್ನು ನಿಂದಿಸಿದಂತಾಗುವುದಿಲ್ಲ. ಕಾರಣ ಪೂರ್ವಾರ್ಧದ ಅಭಿಪ್ರಾಯ ಹೇಳುವರು- ಧರ್ಮಜ್ಞಾನವಿಲ್ಲದವರು ಮನುಷ್ಯರೇ ಅಲ್ಲವೆಂದು ಅರ್ಥ. ಇದರಿಂದ "ಯತ್ರ ನೃಗತೌ ಸಹಧರ್ಮಜ್ಞಾನಂ ಉತ್ಪತ್ತುಮರ್ಹತಿ ತಾಂ ತತ್ವಜ್ಞಾನಾದಿಯೋಗ್ಯಾಂ ನೃಗತಿಂ ಯೇ ನೋ ಪ್ರಪನ್ನಾಃ"ಎಂದು ವಿಶಿಷ್ಟನಿಷೇಧವು ವಿಶೇಷಣನಿಷೇಧದಲ್ಲಿ ಪರ್ಯವಸಾನವಾಗುವುದರಿಂದ ಬಂದ ಅರ್ಥ ಹೇಳಿರುವರು ನೃಗತಿಂ ನ ಪ್ರಪನ್ನಾಃ ಎಂಬುದಕ್ಕೆ ಆವೃತ್ತಿ. ಚಶಬ್ದ ಅವಧಾರಣಾರ್ಥ ಎಂದು ತಿಳಿಸಿದಂತಾಯಿತು. ಅದರಿಂದ ಮೇಲೆ ಹೇಳಿದಂತೆ ಮೂಲಾರ್ಥ ಲಭಿಸುವುದು ॥೨೪॥

ಧರ್ಮಜ್ಞಾನಾದಿಗಳಿಲ್ಲದವರು ಭಗವನ್ಮಹಿಮಾವರ್ಣನ ಮಾಡದವರು ವೈಕುಂಠ ಪಡೆಯುವುದಿಲ್ಲವಾದರೆ ಯಾರು ಅದನ್ನು ಪಡೆಯುವರು ? ಎಂದರೆ ಹೇಳುವರು –

**ಯತ್ರ ಪ್ರಯಾಂತ್ಯನಿಮಿಷಾಮೃಷಭಾನುವೃತ್ತ್ಯಾ**
**ದೂರೇಯಮಾ ಹ್ಯುಪರಿ ನಃ ಸ್ಪೃಹಣೀಯಶೀಲಾಃ ।**
**ಭರ್ತುರ್ಮಿಥಃ ಸುಯಶಸಃ ಕಥನಾನುರಾಗ-**
**ವೈಕ್ಲವ್ಯಬಾಷ್ಪಕಲಯಾ ಪುಲಕೀಕೃತಾಂಗಾಃ ॥೨೫॥**

ಅನಿಮಿಷಾಂ ದೇವತೆಗಳಿಗೆ ಋಷಭ ಶ್ರೇಷ್ಠನಾದ ಶ್ರೀಹರಿಯ ಅನುವೃತ್ತ್ಯಾ= ನಿರಂತರ ಸೇವೆಯಿಂದ ದೂರೇಯಮಾಃ=ಯಮದೇವರನ್ನು ದೂರೀಕರಿಸಿದ ಆದ್ದರಿಂದಲೇ ಸ್ಪೃಹಣೀಯಶೀಲಾಃ=ಎಲ್ಲರಿಂದಲೂ ಅಪೇಕ್ಷಣೆಯ ಸ್ವಭಾವವುಳ್ಳ ಸುಯಶಸಃ=ಪುಣ್ಯಕೀರ್ತಿಯಾದ ಭರ್ತುಃ=ಸ್ವಾಮಿಯಾದ ಶ್ರೀಹರಿಯ ಕಥನಾ-ನುರಾಗವೈಕ್ಲವ್ಯಬಾಷ್ಪಕಲಯಾ=ಗುಣವನ್ನು ಹೇಳುವುದರಲ್ಲಿರುವ ಅಭಿಲಾಷೆಯಿಂದ ಉಂಟಾದ ಪಾರವಶ್ಯದಿಂದ ಹೊರಹೊಮ್ಮಿದ ಆನಂದಾಶ್ರುಗಳಿಂದ ಪುಲಕೀಕೃತಾಂಗಾಃ= ರೋಮಾಂಚಿತವಾದ ಅವಯವವುಳ್ಳ ನಃ ಉಪರಿ=ನಮ್ಮ ಮೇಲಿರುವ ಯತ್ರ= ಯಾವ ಸ್ಥಾನವನ್ನು ತೇ=ಅವರು ವ್ರಜಂತಿ=ಹೊಂದುವರು ಎಂದು ಹಿಂದಿನ

ಶ್ಲೋಕದಲ್ಲಾಗಲಿ ಅಥವಾ ತತ್=ಆ ಭಗವಂತನ ಸ್ಥಾನವೆಂದರ್ಥ ಎಂದು ಮುಂದಿನ ಶ್ಲೋಕದಿಂದಾಗಲಿ ಅನ್ವಯ ॥೨೫॥

**ತದ್ವಿಶ್ವಗುರ್ವಧಿಕೃತಂ ಭುವನೈಕವಂದ್ಯಂ**
**ದಿವ್ಯಂ ವಿಚಿತ್ರವಿಬುಧಾಗ್ರ್ಯವಿಮಾನಶೋಚಿ ।**
**ಆಪುಃ ಪರಾಂ ಮುದಮಪೂರ್ವಮುಪೇತ್ಯ ಯೋಗ-**
**ಮಾಯಾಬಲೇನ ಮುನಯಸ್ತದಥೋ ವಿಕುಂಠಂ ॥೨೬॥**

ಅಥೋ=ಗಮನಾನಂತರ ಮುನಯಃ=ಸನಕಾದಿಗಳು ಯೋಗಮಾಯಾ-ಬಲೇನ=ಉಪಾಸನೆಯಿಂದ ಉಂಟಾದ ಜ್ಞಾನಸಾಮರ್ಥ್ಯದಿಂದ ತದ್ವಿಶ್ವಗುರ್ವಧಿಕೃತಂ ಪ್ರಸಿದ್ಧನಾದ ಜಗತ್ತಿಗೆ ಮುಖ್ಯಗುರುವಾದ ಶ್ರೀಹರಿಯಿಂದ ರಕ್ಷಿತವಾದ ದಿವ್ಯಂ=ಲೋಕವಿಲಕ್ಷಣವಾದ ವಿಚಿತ್ರ=ನಾನಾವರ್ಣಗಳುಳ್ಳ ವಿಬುಧಾಗ್ರ್ಯ=ದೇವಶ್ರೇಷ್ಠರಾದ ವಿಮಾನಶೋಚಿ=ವಿಮಾನಗಳನ್ನು ಪ್ರಕಾಶಗೊಳಿಸುವ ಅಪೂರ್ವಂ=ಪುನಃ ಪುನಃ ನೋಡಿದರೂ ಹಿಂದೆ ನೋಡದಂತೆಯೇ ಕಾಣುವ ತತ್=ವೈಕುಂಠ-ವನ್ನು ಉಪೇತ್ಯ=ಹೊಂದಿ ಪರಾಂ ಮುದಂ ಅವಾಪುಃ=ಬಹಳ ಸಂತಸವನ್ನು ಹೊಂದಿದರು ॥೨೬॥

**ತಸ್ಮಿನ್ನತೀತ್ಯ ಮುನಯಃ ಷಡಸಜ್ಜಮಾನಾಃ**
**ಕಕ್ಷ್ಯಾಃ ಸಮಾನವಯಸಸ್ತ್ವಥ ಸಪ್ತಮಾಯಾಂ ।**
**ದೇವಾವಚಕ್ಷತ ಗೃಹೀತಗದೌ ಪರಾರ್ಧ್ಯ-**
**ಕೇಯೂರಕುಂಡಲಕಿರೀಟವಿಟಂಕವೇಷೌ ॥೨೭॥**

ತಸ್ಮಿನ್=ಆ ವೈಕುಂಠದಲ್ಲಿ ಸಮಾನವಯಸಃ=ಒಂದೇ ವಯಸ್ಸಿನವರಾದ ಮುನಯಃ=ಸನಕಾದಿಗಳು ಅಸಜ್ಜಮಾನಾಃ=ತಡೆಯಿಲ್ಲದೆ ಷಟ್‌ಕಕ್ಷ್ಯಾಃ=ಆರು ಪ್ರಾಕಾರದ್ವಾರಗಳನ್ನು ಅತೀತ್ಯ=ದಾಟಿ ಸಪ್ತಮಾಯಾಂ=ಏಳನೇ ಪ್ರಾಕಾರದಲ್ಲಿ ಪರಾರ್ಧ್ಯ=ಅತ್ಯಂತ ಬೆಲೆಬಾಳುವ ಕೇಯೂರ=ಕಂಕಣಗಳು ಕುಂಡಲ=ಕರ್ಣ-ಭೂಷಣಗಳು ಕಿರೀಟ=ಮುಂತಾದವುಗಳಿಂದ ವಿಟಂಕ=ಅಲಂಕೃತವಾದ ವೇಷೌ=ವೇಷವುಳ್ಳ ಗೃಹೀತಗದೌ=ಗದೆಯನ್ನು ಧರಿಸಿದ ದೇವೌ=ದ್ವಾರಪಾಲಕರನ್ನು ಅಚಕ್ಷತ=ನೋಡಿದರು ॥೨೭॥

**ಮತ್ತದ್ವಿರೇಫವನಮಾಲಿಕಯಾ ನಿವೀತೌ**
**ವಿನ್ಯಸ್ತಯಾಽಸಿತಚತುಷ್ಟಯಬಾಹುಮಧ್ಯೇ ।**

**ವಕ್ರಭ್ರುವಾ ಕುಟಿಲಯಾ ಸ್ಫುಟನಿರ್ಗತೇನ**
**ರಕ್ತೇಕ್ಷಣೇನ ಚ ಮನಾಗ್ ರಭಸಂ ದಧಾನೌ ॥೨೮॥**

ಅಸಿತ=ನೀಲಿಯಾದ ಚತುಷ್ಟಯಬಾಹುಮಧ್ಯೇ=ನಾಲ್ಕು ಭುಜಗಳ ಮಧ್ಯದಲ್ಲಿ ಅಂದರೆ ಎದೆಯ ಮೇಲೆ ವಿನ್ಯಸ್ತಯಾ=ಇರಿಸಿದ ಮತ್ತು ಸಂತೋಷಯುತವಾದ ದ್ವಿರೇಫ=ಭ್ರಮರಗಳುಳ್ಳ ವನಮಾಲಿಕಯಾ=ಪಾದಾವಲಂಬಿಯಾದ ಮಾಲೆಯಿಂದ ನಿವೀತೌ=ಅಲಂಕೃತರಾದ ಕುಟಿಲಯಾ=ವಕ್ರವಾದ ವಕ್ರಭ್ರುವಾ=ಮುಖದಲ್ಲಿರುವ ಹುಬ್ಬುಗಳಿಂದ ಸಹಿತವಾಗಿ ಸ್ಫುಟನಿರ್ಗತೇನ=ಸ್ಪಷ್ಟವಾಗಿ ಹೊರಹೊರಟ ರಕ್ತೇಕ್ಷಣೇನ ಚ=ಕೆಂಪಾದ ನೋಟದಿಂದ ಮನಾಗ್=ಸ್ವಲ್ಪ ರಭಸಂ=ಕೋಪವನ್ನು ದಧಾನೌ= ಹೊಂದಿದಂತೆ ತಿಳಿಯುವ, ವಕ್ರವಾದ ಹುಬ್ಬುಗಳಿಂದ ಸಹಿತವಾದ ಕೆಂಪಾದ ಕಣ್ಣುಗಳ ನೋಟದಿಂದ ಕೂಡಿದ ಮುಖದಿಂದ ಇವರು ಕೋಪಗೊಂಡವರಾಗಿ ದ್ವಾರಪಾಲಕರನ್ನು ನೋಡಿದರೆಂದು ಭಾವ. ॥೨೮॥

**ದ್ವಾರ್ಯೇತಯೋಃ ಪ್ರವಿವಿಶುರ್ಮಿಷತೋರಪೃಷ್ಟ್ವಾ**
**ಪೂರ್ವಾ ಯಥಾಽಽರಪುಟವಜ್ರಕಪಾಟಿಕಾ ಯಾಃ ।**
**ಸರ್ವತ್ರ ತೇ ಹ್ಯವಿಷಯಾ ಮುನಯಃ ಸ್ವದೃಷ್ಟ್ಯಾ**
**ಯೇ ಸಂಚರಂತ್ಯವಿಹತಾ ವಿಗತಾಭಿಶಂಕಾಃ ॥೨೯॥**

ಸ್ವದೃಷ್ಟ್ಯಾ=ಸ್ವತಂತ್ರನಾದ ಪರಮಾತ್ಮನ ಜ್ಞಾನದಿಂದ ಹಿ=ಯಾವ ಕಾರಣ ಯೇ=ಯಾರು ಸರ್ವತ್ರ=ಎಲ್ಲ ಕಡೆಗೆ ಅವಿಹತಾಃ=ನಿವಾರಿಸಲ್ಪಡದಿರುವವರು ಅದರಿಂದಲೇ ವಿಗತಾಭಿಶಂಕಾಃ=ಸಂದೇಹಪಡದೆ ಸಂಚರಂತಿ=ಸಂಚರಿಸುವರು ಅವಿಷಯಾಃ=ವಿಷಯಾಭಿಲಾಷೆಯಿಲ್ಲದಿರುವವರು ಮುನಯಃ=ಸನಕಾದಿಗಳು ಪೂರ್ವಾಃ ಯಥಾ=ಹಿಂದಿನ ಆರು ಬಾಗಿಲುಗಳಂತೆ ಆರಪುಟವಜ್ರಕಪಾಟಿಕಾಃ ಯಾಃ=ಬಂಗಾರದಿಂದ ಅಲಂಕೃತವಾದ ಮೇಲ್ಭಾಗವುಳ್ಳ ವಜ್ರಗಳಿಂದ ನಿರ್ಮಿಸಿದ ಬಾಗಿಲಗಳುಳ್ಳ ಹಿಂದಿನ ಬಾಗಿಲಂತೆ ಏತಯೋಃ ಮಿಷತೋಃ=ಇವರು ನೋಡುತ್ತಿದ್ದಂತೆಯೇ ಅಪೃಷ್ಟ್ವಾ=ಕೇಳದಲೇ ದ್ವಾರಿ=ಏಳನೇ ದ್ವಾರದಲ್ಲಿ ಪ್ರವಿವಿಶುಃ= ಪ್ರವೇಶಮಾಡಿದರು ॥೨೯॥

**ತಾನ್ ವೀಕ್ಷ್ಯ ವಾತರಶನಾಂಶ್ಚತುರಃ ಕುಮಾರಾನ್**
**ವೃದ್ಧಾನ್ ದಶಾರ್ಧವಯಸೋ ವಿದಿತಾತ್ಮತತ್ತ್ವಾನ್ ।**
**ವೇತ್ರೇಣ ಚಾಸ್ಖಲಯತಾಮತದರ್ಹಣಾಂಸ್ತೌ**
**ತೇಜೋ ವಿಹಸ್ಯ ಭಗವತ್ಪ್ರತಿಕೂಲಶೀಲೌ ॥೩೦॥**

ಭಗವತ್ಪ್ರತಿಕೂಲಶೀಲೌ=ಭಗವಂತನ ವಿರುದ್ಧವಾದ ಬಹುಕಾಲೀನ ನಡವಳಿಕೆ-ಯುಳ್ಳ ತೌ=ಜಯವಿಜಯರು ವಾತರಶನಾನ್=ಗಾಳಿಯೇ ವಸ್ತ್ರವಾಗಿಯುಳ್ಳ ವೃದ್ಧಾನ್=ವಾಸ್ತವಿಕವಾಗಿ ವಯಸ್ಸಾದ ದಶಾರ್ಧವಯಸಃ=ಐದು ವರ್ಷದವರಂತೆ ಕಾಣುವ ವಿದಿತಾತ್ಮತತ್ವಾನ್=ಪರಮಾತ್ಮನನ್ನು ತಿಳಿದಿರುವ ತಾನ್=ಆ ಚತುರಃ ಕುಮಾರಾನ್=ನಾಲ್ಕು ಜನ ಸನತ್ಕುಮಾರಾದಿಗಳನ್ನು ವೀಕ್ಷ=ನೋಡಿ ತೇಜಃ ವಿಹಸ್ಯ=ಅವರ ಪ್ರಭಾವವನ್ನು ಲೆಕ್ಕಿಸದೇ ನೋಡಿದಿರಾ ಇಲ್ಲಿಯೂ ಇವರ ಧಾರ್ಷ್ಟ್ಯವನ್ನು ಎಂದು ಉಪಹಾಸ ಮಾಡಿ ಅತದರ್ಹಣಾನ್=ತಡೆಯಲು ಯೋಗ್ಯರಲ್ಲದವರಾದ ಸನಕಾದಿಗಳನ್ನು ವೇತ್ರೇಣ=ದಂಡದಿಂದ ಚ=ಮತ್ತು ಮಾತಿನಿಂದಲೂ ಅಸ್ಖಲಯತಾಂ=ಪ್ರವೇಶವನ್ನು ಪ್ರತಿಬಿಂಧಿಸಿದರು ॥೩೦॥

ಇಲ್ಲಿ ಭಗವತ್ಪ್ರತಿಕೂಲಶೀಲೌ ಎಂಬಲ್ಲಿ ಶೀಲಶಬ್ದದಿಂದ ಜಯವಿಜಯರಿಗೆ ಭಗವಂತನ ವಿರುದ್ಧ ಆಚರಣೆಯು ಸ್ವಭಾವ ಎಂದು ತೋರುವುದು. ಅದು ಸರಿಯಲ್ಲ, ಅವರು ಭಕ್ತರಷ್ಟೇ. ಆದ್ದರಿಂದ ಪ್ರಮಾಣದಿಂದ ತಾತ್ಪರ್ಯ ತಿಳಿಸುವರು

**''ಜಯಸ್ಯ ವಿಜಯಸ್ಯಾಪಿ ಕದಾಚಿದ್ಬ್ರಹ್ಮಶಾಪತಃ ।**
**ಕೃಷ್ಣಾವತಾರಪರ್ಯಂತಂ ಪ್ರಾತಿಕೂಲ್ಯಂ ಚ ಜಾಯತೇ''॥ಇತಿ ನಾರದೀಯೇ**

ಭಕ್ತರಾದರೂ ಜಯವಿಜಯರಿಗೂ ಬ್ರಹ್ಮದೇವರ ಶಾಪದಿಂದ ಕೆಲವುಸಲ ಶ್ರೀಕೃಷ್ಣಾವತಾರ ಆಗುವವರೆಗೆ ವಿರೋಧಬುದ್ಧಿಯೂ ಉಂಟಾಗುವುದು, ಎಂದು ನಾರದಪುರಾಣದಲ್ಲಿರುವುದರಿಂದ ಭಗವಂತನ ಅನುಕೂಲ ಸ್ವಭಾವದವರೇ. ಯಾವಾಗಲಾದರು ಒಮ್ಮೆ ವಿಪರೀತ ನಡೆದುಕೊಳ್ಳುವುದು ಶಾಪದಿಂದ. ಆದ ಕಾರಣ ಶೀಲಶಬ್ದಕ್ಕೆ ಸ್ವಭಾವವೆಂದರ್ಥವಲ್ಲ ಸ್ವಭಾವದಂತೆ ಬಹುಕಾಲವಿರುವುದ-ರಿಂದ ಗೌಣೀವೃತ್ತಿಯಿಂದ ಶೀಲೌ ಎಂದಿದ್ದಾರೆ ಎಂದು ತಿಳಿಯಬೇಕು ॥೩೦॥

**ತಾಭ್ಯಾಂ ಮಿಷತ್ಸ್ವನಿಮಿಷೇಷು ನಿಷಿಧ್ಯಮಾನಾಃ ।**
**ಸ್ವರ್ಹತ್ತಮಾ ಹ್ಯಪಿ ಹರೇಃ ಪ್ರತಿಹಾರಪಾಭ್ಯಾಂ ॥**
**ಊಚುಃ ಸುಹೃತ್ತಮದಿದೃಕ್ಷಿತಭಂಗ ಈಷತ್-**
**ಕಾಮಾನುಜೇನ ಸಹಸಾ ತ ಉಪಪ್ಲುತಾಕ್ಷಾಃ ॥೩೧॥**

ಸ್ವರ್ಹತ್ತಮಾಃ ಅಪಿ=ಚೆನ್ನಾಗಿ ಪೂಜನೀಯರಾಗಿದ್ದರೂ (ನಿಷೇಧಾನರ್ಹ-ರಾಗಿದ್ದರೂ) ಅನಿಮಿಷೇಷು=ದೇವತೆಗಳು ಮಿಷತ್ಸು=ನೋಡುತ್ತಿರುವಂತೆಯೇ ಹರೇಃ=ಪರಮಾತ್ಮನ ಪ್ರತಿಹಾರಪಾಭ್ಯಾಂ ತಾಭ್ಯಾಂ=ದ್ವಾರಪಾಲಕರಾದ ಜಯ-ವಿಜಯರಿಂದ ನಿಷಿಧ್ಯಮಾನಾಃ=ನಿವಾರಿಸಲ್ಪಟ್ಟ ತೇ=ಮುನಿಗಳು ಸುಹೃತ್ತಮದಿ-

ದೃಕ್ಷಿತಭಂಗೇ=ಶ್ರೀಹರಿಯನ್ನು ನೋಡುವ ಇಚ್ಛೆಯು ಭಗ್ನವಾದಾಗ ಈಷತ್=ಕಾಮಾನುಜೇನ=ಸ್ವಲ್ಪ ಸಿಟ್ಟಿನಿಂದ ಸಹಸಾ=ಒಮ್ಮೆಲೇ ಉಪಪ್ಲುತಾಕ್ಷಾ=ಕ್ಷೋಭೆಗೊಂಡ ಕಣ್ಣುಳ್ಳವರಾಗಿ ಊಚುಃ=ಮಾತನಾಡಿದರು ॥೩೧॥

ಮುನಿಗಳು ಏನು ಹೇಳಿದರೆಂದು ಮೂರು ಶ್ಲೋಕಗಳಿಂದ ಹೇಳುವರು-

**ಕೋ ವಾ ಇಹೈತ್ಯ ಭಗವತ್ಪರಿಚರ್ಯಯೋಚ್ಚೈ-**
**ಸ್ತದ್ಧರ್ಮಿಣಾಮಪಿ ಸತಾಂ ವಿಷಮಸ್ವಭಾವಃ ।**
**ತಸ್ಮಿನ್ ಪ್ರಶಾಂತಪುರುಷೇ ಗತವಿಗ್ರಹೇ ವಾಂ**
**ಕೋವಾಽತ್ಮವತ್ ಕುಹಕಯೋಃ ಪರಿಶಂಕನೀಯಃ ॥೩೨॥**

ಉಚ್ಚೈಃ=ಬಹಳವಾಗಿ (ಉತ್ಕೃಷ್ಟವಾಗಿ) ಭಗವತ್ಪರಿಚರ್ಯಯಾ=ಭಗವಂತನ ಸೇವೆಯಿಂದ ತದ್ಧರ್ಮಿಣಾಂ ಸತಾಂ ಚ ಪರಿಚರ್ಯಯಾ=ಭಗವದ್ಭಕ್ತರಾದ ಸಜ್ಜನರ ಸೇವೆಯಿದಲೂ ಇಹ=ವೈಕುಂಠದಲ್ಲಿ ಏತ್ಯ=ಬಂದು ಇರುವ ಕುಹಕಯೋಃ=ಮಿಥ್ಯಾಜ್ಞಾನಿಗಳಾದ ನಿಮ್ಮಗಳ ವಿಷಮಸ್ವಭಾವಃ=ಬ್ರಾಹ್ಮಣಪ್ರಿಯನಾದ ಶ್ರೀಹರಿಯ ಸ್ವಭಾವಕ್ಕೆ ವಿರುದ್ಧವಾದ ಬ್ರಾಹ್ಮಣರ ಪ್ರವೇಶವನ್ನು ತಡೆಯುವುದೆಂಬ ಸ್ವಭಾವವು ಕೋವಾ=ಕುತ್ಸಿತವು ನಿಮಗೆ ಯೋಗ್ಯವಲ್ಲ. ಗತವಿಗ್ರಹೇ=ಭಕ್ತರೊಡನೆ ವಿರೋಧ-ವಿಲ್ಲದಿರುವ ಪ್ರಶಾಂತಪುರುಷೇ=ಭಕ್ತಾಪರಾಧಸಹಿಷ್ಣುವಾದ ಎಲ್ಲರ ದೇಹದಲ್ಲಿ ನಿಯಾಮಕನಾಗಿರುವ ತಸ್ಮಿನ್=ಭಗವಂತನ ವಿಷಯದಲ್ಲಿ ಆತ್ಮವತ್=ನಿಮ್ಮಗಳಂತೆ ಇಹ=ನಮ್ಮಗಳಲ್ಲಿ ಪರಿಶಂಕನೀಯಃ=ಚೆನ್ನಾಗಿ ಶಂಕಿಸುವ ಭಗವಂತನ ಪ್ರತಿಕೂಲಾ-ಚಾರಣೆ ಯಾವುದೂ ಇಲ್ಲ. ಕಾರಣ ನಮ್ಮನ್ನು ತಡೆಯುವುದು ವ್ಯರ್ಥವೆಂದರ್ಥ. ಜಗತ್ತಿನಲ್ಲಿ ಅಪರಾಧವನ್ನು ಸಹಿಸದಿರುವವನಲ್ಲಿ, ಉಪಕಾರ ಮಾಡದವನಲ್ಲಿ ವಿರೋಧಮಾಡುವವನಲ್ಲಿ ಪ್ರತಿಯಾಗಿ ವಿರೋಧಮಾಡುವುದು ಕಂಡಿದೆ. ಭಗವಂತನಾದರೂ ಅಂಥವನಲ್ಲ ಅಪರಾಧಸಹಿಷ್ಣುವು. ನಮ್ಮ ದೇಹ ನಿಯಮನ ಮಾಡಿ ಉಪಕಾರ ಮಾಡುವವನು, ಆದ್ದರಿಂದಲೇ ಭಕ್ತರಲ್ಲಿ ವಿರೋಧವಿಲ್ಲದವನು. ಕಾರಣ ಅವನ ಭಕ್ತರಾದ ನಾವು ಹೇಗೆ ಅವನ ವಿರೋಧ ಮಾಡುವೆವು ಸಾಧ್ಯವಿಲ್ಲ.

ಮೇಲಿನ ಶ್ಲೋಕದಲ್ಲಿ ಯಾರೊ ಕುಹಕರಿಗೆ ತಮ್ಮಂತೆ ಭಗವಂತನಲ್ಲಿ ಶಂಕನೀಯವಾದ ವಿಷಮಸ್ವಭಾವ ಯಾವುದು. ಹೀಗೆ ಅರ್ಥತೋರುವುದು ಅದನ್ನು ನಿವಾರಿಸಲು ಉತ್ತರಾರ್ಧದ ಭಾವ ತಿಳಿಸುವರು-

**ಯುವಯೋಃ ಯಥಾ ವಿರುದ್ಧಸ್ವಭಾವತ್ವಂ ತದ್ವದ್ ಭಗವದ್ವಿಷಯೇ ಇಹ ಶಂಕನೀಯಃ ಕಃ ? ತಸ್ಮಾನ್ನಿಷೇಧೋ ವ್ಯರ್ಥಃ ಇತ್ಯರ್ಥಃ ।**

ಇದರಿಂದ ಮೂಲದಲ್ಲಿ ಕುಹಕಶಬ್ದದಿಂದ ಜಯವಿಜಯರೇ ವಿವಕ್ಷಿತರು ಎಂದು ತಿಳಿಯುವುದು. ಮತ್ತು 'ಆತ್ಮವತ್ ಎಂಬುದಕ್ಕೆ ಸ್ವಾತ್ಮವತ್ ಎಂದರ್ಥ. ವಿಷಮಸ್ವಭಾವಃ ಎಂಬುದರ ಅರ್ಥವೇ ವಿರುದ್ಧ ಸ್ವಭಾವತ್ವಂ ಎಂಬುದು. ಭಗವದ್ವಿಷಯೇ ಎಂದದ್ದರಿಂದ ತಸ್ಮಿನ್ ಎಂಬುದು ವಿಷಯಸಪ್ತಮಿ ಎಂದು ಸೂಚಿಸುವರು. ಇಹಃ ಶಂಕನೀಯಃ ಎಂದನ್ವಯ. ಅಂತು ಮಿಥ್ಯಾಜ್ಞಾನಿಗಳಾದ ನಿಮ್ಮಂತೆ ಭಕ್ತರಾದ ನಮ್ಮಲ್ಲಿ ಭಗವಂತನ ವಿರುದ್ಧಸ್ವಭಾವವನ್ನು ಶಂಕಿಸಲು ಕಾರಣವಿಲ್ಲವೆಂದು ಭಾವ. ಕಾರಣ ನಮ್ಮನ್ನು ತಡೆಯುವುದು ವ್ಯರ್ಥ ಎಂದು ತಾತ್ಪರ್ಯದ ಭಾವ ॥೩೨॥

ಕುಹಕಯೋಃ ಎಂದು ಹೇಳಿದ ಮಿಥ್ಯಾಜ್ಞಾನಿತ್ವವನ್ನು ಅವರಿಗೆ ಉಪಪಾದಿಸುವರು –

**ನ ಹ್ಯಂತರಂ ಭಗವತೀಹ ಸಮಸ್ತಕುಕ್ಷಾ-**
**ವಾತ್ಮಾನಮಾತ್ಮನಿ ನಭೋ ನಭಸೀವ ಧೀರಾಃ ।**
**ಪಶ್ಯಂತಿ ಯತ್ರ ಯುವಯೋಃ ಸುರಲಿಂಗಿನೋಃ ಕಿಂ**
**ವ್ಯುತ್ಪಾದಿತಂ ಹ್ಯುದರಭೇದಿ ಭಯಂ ಯತೋಽಸ್ಯ ॥೩೩॥**

ಸಮಸ್ತಕುಕ್ಷೌ=ಎಲ್ಲರ ಉದರದಲ್ಲಿ ಸ್ಥಿತೇ=ನಿಯಾಮಕನಾಗಿರುವ ಭಗವತಿ= ಪರಮಾತ್ಮನಲ್ಲಿ ಅಂತರಂ=ಭೇದವು ನಹಿ=ಇಲ್ಲವೆಂಬುದು ಪ್ರಮಾಣಸಿದ್ಧವು. 'ತಸ್ಮಾತ್ ತಸ್ಯ ಕುತೋಪಿ ನ ಭಯಂ ಅಸ್ತಿ'=(ಎಂದು ಶೇಷ) ಆದ್ದರಿಂದ ಅವನಿಗೆ ಯಾರಿಂದಲೂ ಭಯವಿಲ್ಲ. ಯತ್ರ ಭಗವತಿ=ಯಾವ ಭಗವಂತನಲ್ಲಿ ಇಹ=ಈ ಲೋಕದಲ್ಲಿ ಸ್ಥಿತಂ=ಇರುವ ಆತ್ಮಾನಂ=ಭಗವಂತನ ರೂಪವನ್ನು ಆತ್ಮನಿ=ಹೊರಗಿರುವ ಭಗವದ್ರೂಪದಲ್ಲಿ ಅಂದರೆ ಆ ರೂಪದಿಂದ ಅಭಿನ್ನವೆಂದು ನಭಃ=ಘಟದಲ್ಲಿರುವ ಆಕಾಶವನ್ನು ನಭಸೀವ=ಹೊರಗಿರುವ ಆಕಾಶದಿಂದ ಅಭಿನ್ನವೆಂದು ತಿಳಿಯುವಂತೆ ಧೀರಾಃ=ಸ್ಥಾನಭೇದ, ರೂಪಭೇದ ಸಾಧಕಯುಕ್ತಿಯನ್ನು ದುಷ್ಟವೆಂದು ತಿಳಿದ ಜ್ಞಾನಿಗಳು ಪಶ್ಯಂತಿ=ತಿಳಿಯುವರು. ತತ್ರ=ಆ ಭಗವಂತನ ವಿಷಯದಲ್ಲಿ ಸುರಲಿಂಗಿನೋಃ=ದೇವತೆಗಳ ಚಿಹ್ನವನ್ನು ಧರಿಸಿದ ಯುವಯೋಃ=ನಿಮ್ಮಿಂದ ಉದರಭೇಧಿ ಭಯಂ. ಇಲ್ಲಿ ಮೊದಲಿಗೆ ಪ್ರತಿಯೆಂಬ ಪದವನ್ನು ಅಧ್ಯಾಹಾರ ಮಾಡಬೇಕು. ಉತ್ ಉದ್ಗತಗಳಾದ ಅರಾಃ ದೋಷಗಳು ಯಾವನಿಂದ ಅವನು ''ಉದರಂ''ಅಂದರೆ ದೋಷರಹಿತನಾದ ಪರಬ್ರಹ್ಮ. ಭೇದಿಯೆಂದರೆ 'ಭೇದದರ್ಶನಂ ಅಸ್ಯ ಅಸ್ತೀತಿ ಭೇದಿ' ಭೇದಜ್ಞಾನವೇ ಕಾರಣವಾಗಿವುಳ್ಳ ಎಂದರ್ಥ. ಪ್ರತ್ಯುದರ ಭೇದದರ್ಶನನಿಮಿತ್ತಕವಾದ ಎಂದರ್ಥ. ಅಂದರೆ ವೈಕುಂಠದಲ್ಲಿರುವ ಭಗವಂತನ ರೂಪಕ್ಕೆ ಎದುರಾಗಿ ನಿಂತ ನಮ್ಮಲ್ಲಿರುವ ರಾಗಾದಿದೋಷರಹಿತವಾದ

ಭಗವದ್ರೂಪವೆಂಬ ಬ್ರಹ್ಮನೆನಿಸಿರುವನೋ ಅವನ ಭೇದಬುದ್ಧಿಯಿಂದ ಅಂದರೆ ನಮ್ಮೆಲ್ಲರಲ್ಲಿರುವ ಭಗವಂತನ ರೂಪದಿಂದ, ಅಸ್ಯ=ಸರ್ವಾಂತರ್ನಿಯಾಮಕ-ನಾದ್ದರಿಂದ ಭಯರಹಿತನಾದ ವೈಕುಂಠದಲ್ಲಿರುವ ಭಗವದ್ರೂಪಕ್ಕೆ ಭಯಂ ವ್ಯುತ್ಪಾದಿತಂ=ಭಯವಿದೆಯೆಂದು ತಿಳಿಯಲ್ಪಟ್ಟಿತು. ಕಿಂ ಅಹೋ=ಏನಾಶ್ಚರ್ಯ ಪಾಪಿಷ್ಠರೆಂದರ್ಥ. ಹಿಶಬ್ದದಿಂದ ಈ ರೀತಿ ತಿಳಿಯುವುದರಿಂದ ಮಹಾ ಅನರ್ಥವಿದೆ ಎಂಬುದು ಪ್ರಮಾಣಸಿದ್ಧ ಎಂದು ಸೂಚಿಸುವರು. ಯತಃ=ಯಾವ ಕಾರಣ ಈ ರೀತಿ ಅನರ್ಥಕಾರಿಯಾದ ಜ್ಞಾನವು ನಿಮಗಿದೆಯೋ ಆದ ಕಾರಣ ಪಾಪೀಯಸಃ ಲೋಕಾನ್. ವ್ರಜತ=ಪಾಪಿಷ್ಠ ಯೋನಿಗಳಲ್ಲಿ ಜನಿಸಿರಿ ಎಂದು ಮುಂದಿನ ಶ್ಲೋಕದಿಂದ ಅನ್ವಯ.

ಈ ಶ್ಲೋಕದಲ್ಲಿ "ಸಮಸ್ತಕುಕ್ಷೌ ಭಗವತಿ" ಎಂದು ಸಾಮಾನಾಧಿಕರಣ್ಯ ಅಂದರೆ ವಿಶೇಷಣವಿಶೇಷ್ಯಭಾವ (ಏಕವಿಭಕ್ತ್ಯಂತಪದಭೋದ್ಯತ್ವ)ದಿಂದ ಎಲ್ಲರ ಕುಕ್ಷಿಗೂ ಬ್ರಹ್ಮನಿಗೂ ಅಭೇದ ತೋರುವುದು, ಅದನ್ನು ಪರಿಹರಿಸಲು ಆಚಾರ್ಯರು ಹೇಳುವರು –

**ಸಮಸ್ತಕುಕ್ಷೌ ಸ್ಥಿತೇ ಭಗವತಿ ನ ಹಿ ಭೇದಃ ।**

ಸಮಸ್ತಕುಕ್ಷೌ ಎಂಬುದು ಅಧಿಕರಣಸಪ್ತಮಿಯಾದ್ದರಿಂದ ಸ್ಥಿತೇ ಎಂದು ಅಧ್ಯಾಹಾರ ಸುಲಭವಾಗಿದೆ ಎಂದು ಭಾವ. ಎಲ್ಲರ ಕುಕ್ಷಿಯಲ್ಲಿರುವ ಎಂದರ್ಥ. ಪ್ರಕೃತಕ್ಕೆ ಉಪಯುಕ್ತವಾಗಿ ಅಂತರಶಬ್ದಾರ್ಥವನ್ನು ಮಾಡಿ ನ ಹಿ ಭೇದಃ ಎಂದು ಹೇಳಿರುವರು. ನ ಹಿ ಎಂದು ಅನುವಾದ ಮಾಡಿದ್ದು ಅಂತರಶಬ್ದಕ್ಕೆ ಭೇದವೆಂದು ಅರ್ಥ ಮಾಡಿದರೇನೆ ವಾಕ್ಯಾರ್ಥ ಸಂಗತವಾಗುವುದು ಎಂದು ಸೂಚಿಸಲು.

ಇಹ ಎಂಬುದಕ್ಕೆ ಭಗವಂತ ಎಂದರ್ಥವಾದರೆ ಯತ್ರ ಎಂಬ ಪದ ವ್ಯರ್ಥವಾಗುವುದು ಕಾರಣ ಅರ್ಥ ಹೇಳುವರು–

**ಅಸ್ಮಿನ್ ಲೋಕೇ ।**

ಎಂದು ಅಧಿಕರಣಸಪ್ತಮೀಬಲಲಬ್ಧವಾದ ಅರ್ಥವನ್ನು ತಿಳಿಸುತ್ತ ಆತ್ಮಪದ-ಗಳೆರಡೂ ಜೀವನನ್ನು ತಿಳಿಸುವುವು ಎಂಬ ಪ್ರತೀತಿಯನ್ನು ನಿವಾರಿಸಲು ಯೋಜಿಸುವರು–

**ಅಂತಸ್ಥಭಗವದ್ರೂಪಂ ಬಹಿಷ್ಠೈಕ್ಯೇನ ಪಶ್ಯಂತಿ ನಭೋ ನಭಸೀವ ।**

ಆತ್ಮಾನಂ ಎಂಬುದರ ಅರ್ಥ ಭಗವದ್ರೂಪಂ ಎಂಬುದು. ಆತ್ಮನಿ ಎಂಬುದರ ತಾತ್ಪರ್ಯ ಬಹಿಷ್ಯೈಕ್ಯೇನ ಎಂದು. ದೃಷ್ಟಾಂತಬಲದಿಂದಲೇ ತಾತ್ಪರ್ಯ ತಿಳಿಯುವುದು ಎಂಬ ಅಭಿಪ್ರಾಯದಿಂದ ನಭೋ ನಭಸೀವ ಎಂಬ ದೃಷ್ಟಾಂತವನ್ನು ಅನುವಾದ ಮಾಡಿರುವರು.

**ತತ್ರ ಪ್ರತ್ಯುದರಭೇದನಿಮಿತ್ತಂ ಭಯಂ ಯುವಾಭ್ಯಾಂ ವ್ಯತ್ಪಾದಿತಂ ಕಿಂ ?**

ಯತ್ರ ಎಂದಿರುವುದರಿಂದ ತತ್ರ ಎಂದು ಅಧ್ಯಾಹಾರ. ಉದರ ಎಂಬುದಕ್ಕೆ ಮೊದಲು ಪ್ರತಿಶಬ್ದಾಧ್ಯಾಹಾರ ಮಾಡಿ ಇನ್‌ಪ್ರತ್ಯಯದ ಅರ್ಥವನ್ನು ನಿಮಿತ್ತಂ ಎಂದು ಹೇಳಿರುವರು. ಯುವಯೋಃ ಎಂಬದು ಕರ್ತರೀಷಷ್ಠೀ ಎಂಬ ಅಭಿಪ್ರಾಯದಿಂದ ಯುವಾಭ್ಯಾಂ ಎಂದಿರುವರು. ಕಿಂಶಬ್ದವು ಇಲ್ಲಿ ನಿಂದಾರ್ಥಕ ಎಂದು ತಿಳಿಸಲು ವ್ಯತ್ಪಾದಿತಂ ಕಿಂ ಎಂದು ಅನ್ವಯತೋರಿಸಿರುವರು. ಅಸ್ಯ ಎಂಬುದರ ಅರ್ಥವನ್ನು ವಿವರಿಸುವರು –

**ಸರ್ವಾಂತರ್ಯಾಮಿತ್ವೇನಾಭಯಸ್ಯ ಭಯಮಸ್ತೀತಿ ಭಾವಃ ಕುತಃ । ಅನ್ಯಥಾ ಕಿಮಿತಿ ನಿವಾರಣಂ ।**

ಎಲ್ಲರ ಅಂತರ್ನಿಯಾಮಕನಾದುದರಿಂದ ಭಯವಿಲ್ಲದವನಿಗೆ ಭಯವಿದೆ ಎಂಬ ಭಾವನೆ ಏಕೆ. ಇಲ್ಲವಾದರೆ ನಮ್ಮನ್ನು ತಡೆಯುವುದೇಕೆ. ಇದರಿಂದ ಸಮಸ್ತಕುಕ್ಷೌ ಎಂಬುದು ಅಭಯತ್ವವನ್ನು ಸೂಚಿಸಲು ಎಂದು ತಿಳಿಸಿದಂತಾಯಿತು.

ಈ ರೀತಿ ಭಾವನೆ ಇರಲಿ ಬಾಧಕವೇನು ಎಂದರೆ ಅದರಿಂದಾಗುವ ಅನಿಷ್ಟವನ್ನು ಪ್ರಮಾಣದಿಂದಲೇ ಹೇಳವರು –

**"ಸರ್ವೋದರಗತಂ ಬ್ರಹ್ಮ ಯೇ ಭೇದೇನ ವಿಚಕ್ಷತೇ ।**
**ಸರ್ವತ್ರಾಪಿ ಭಯಂ ತೇಷಾಂ ಮೃತಾನಾಂ ತಮ ಏವ ಚ" ॥**

**ಇತಿ ತತ್ವವಿವೇಕೇ ।**

ಎಲ್ಲರ ಹೃದಯದಲ್ಲಿರುವ ಶ್ರೀಹರಿಯನ್ನು ಭಿನ್ನನೆಂದು ಯಾರು ತಿಳಿಯುವರೋ ಅವರಿಗೆ ಇಹಲೋಕದ ಎಲ್ಲೆಡೆ ಭಯವಿರುವುದಲ್ಲದೆ ಮರಣಾ ನಂತರವೂ ತಮಸ್ಸೇ ಆಗುವುದು ಎಂದು ಭಾವ ॥೩೩॥

ಈ ರೀತಿ ಅಪರಾಧವನ್ನು ತಿಳಿಸಿ ಅದಕ್ಕೆ ಯೋಗ್ಯವಾದ ಶಿಕ್ಷೆ ಮಾಡುತ್ತ ಹೇಳುವರು –

**ತದ್ ವಾ ಅಮುಷ್ಯ ಪರಮಸ್ಯ ವಿಕುಂಠಭರ್ತುಃ**
**ಕರ್ತುಂ ನ ಯುಕ್ತಮಿತಿ ಧೀಮಹಿ ಮಂದಧೀಭ್ಯಾಂ ।**
**ಲೋಕಾನಿತೋ ವ್ರಜತಮಂತರಭಾವದೃಷ್ಟ್ಯಾ**
**ಪಾಪೀಯಸಸ್ತ್ರಯ ಇಮೇ ರಿಪವೋಽಸ್ಯ ಯತ್ರ ॥೩೪॥**

ಮಂದಧೀಭ್ಯಾಂ-ಅಲ್ಪಬುದ್ಧಿಯುಳ್ಳ ನಿಮ್ಮಿಂದ ಪರಮಸ್ಯ=ಸರ್ವೋತ್ತಮನಾದ ವಿಕುಂಠಭರ್ತುಃ=ವೈಕುಂಠಕ್ಕೆ ಒಡೆಯನಾದ ಅಮುಷ್ಯ=ಎಲ್ಲ ಜಗದಂತರ್ಗತವಾದ ನಿಯಾಮಕರೂಪದಿಂದ ತತ್=ಭೇದಜ್ಞಾನವು ಕರ್ತುಂ=ಮಾಡಲು ನ ಯುಕ್ತಂ= ಯೋಗ್ಯವಲ್ಲ ವೈ=ಪ್ರಮಾಣಸಿದ್ಧವು ಎಂದು ಧೀಮಹಿ=ತಿಳಿಯುವೆವು. ತತ್‌ಯುವಾಭ್ಯಾಂ ಕೃತಂ=ಭೇದವನ್ನು ನೀವು ತಿಳಿದಿರುವಿರಿ. ಅತಃ=ಆದ್ದರಿಂದ ಅಂತರಭಾವದೃಷ್ಟ್ಯಾ–ಶ್ರೀಹರಿಯಲ್ಲಿ ಭೇದವಿದೆ ಎಂದು ತಿಳಿಯುವುದರಿಂದ ಅಂದರೆ ಅದರಿಂದುಂಟಾದ ಪಾಪದಿಂದ ಇತಃ=ವೈಕುಂಠಲೋಕದಿಂದ ಪಾಪೀಯಸಃ= ಅತ್ಯಂತ ಪಾಪಿಷ್ಟವಾದ ಲೋಕಾನ್=ದೇಹಗಳನ್ನು ವ್ರಜತ=ಹೊಂದಿರಿ ಯತ್ರ= ಯಾವ ಮೂರು ದೇಹಗಳಲ್ಲಿ ಇಮೇ=ಪ್ರಸಿದ್ಧರಾದ ಅಸ್ಯ=ಶ್ರೀಹರಿಯ ತ್ರಯಃ ಅಪಿ ರಿಪವಃ=ದ್ವೇಷಿಗಳು ಇವರು ಅಂಥ ದೇಹಗಳನ್ನು ಪಡೆಯಿರಿಯೆಂದರ್ಥ.

ಇಲ್ಲಿ ಇಬ್ಬರು ಸ್ವಾಭಾವಿಕ ಶತ್ರುಗಳು ಏಕತ್ವೇನ ವಿವಕ್ಷಿತರಾದ ಜಯ ವಿಜಯರಿಗೆ ಅವರ ಸಂಸರ್ಗದಿಂದ ಶತ್ರುತ್ವವು ಎಂದು ತಿಳಿಯಬೇಕು. ಇದರಿಂದ 'ಯೌ ತೌ ತವಾರೀಹ ತಯೋಃ ಪ್ರವಿಷ್ಟೌ' ಎಂಬ ಮಹಾಭಾರತ ತಾತ್ಪರ್ಯ-ನಿರ್ಣಯ ವಿರೋಧ ಬರುವುದಿಲ್ಲವೆಂದು ತಿಳಿಯಬೇಕು. ಸ್ವಾಭಾವಿಕ ಶತ್ರುತ್ವ-ವಿವಕ್ಷೆಯಿಂದ ತಾತ್ಪರ್ಯನಿರ್ಣಯ ಹೊರಟಿದೆ. ಸಂಸರ್ಗನಿಮಿತ್ತಕ ವೈರವು ಜಯವಿಜಯರಿಗೂ ಇದೆ ಎಂದು ಇಲ್ಲಿ ಅಭಿಪ್ರಾಯ. ಇಲ್ಲಿ ಒಟ್ಟಾರೆ ದೇಹಗಳು ಆರು ಆದರೂ ಎರಡೆರಡಕ್ಕೆ ಐಕ್ಯವಿವಕ್ಷೆಯಿಂದ ಮೂರು ಎಂದಿರುವರು. (ಅಂದರೆ ಇಬ್ಬರಿಗೂ ಇಬ್ಬರುಅಸುರರಿಂದ ಆವಿಷ್ಟವಾದ ಮೂರು ಜನ್ಮಗಳು ಎಂದು ಭಾವ).

ಇಲ್ಲಿ ಯತ್ರ ಎಂಬುದಕ್ಕೆ ಯಾವ ಭೂಮಿ ಮೊದಲಾದ ಲೋಕಗಳಲ್ಲಿ ಈ ಶತ್ರುಗಳಿರುವರೋ ಅಂಥ ಲೋಕಗಳನ್ನು ಕುರಿತು ಹೋಗಿರಿ ಎಂದ ಅರ್ಥ ಕಾಣುವುದು ಕಾರಣ ತಾತ್ಪರ್ಯ ಹೇಳವರು –

**ತ್ರಯಃ ರಿಪವಃ ದೇಹತ್ರಯೇ ।**

ಯತ್ರ ಎಂಬುದರ ಅರ್ಥವೇ ದೇಹತ್ರಯೇ ಎಂಬುದು. ಇದರಿಂದ ಲೋಕಶಬ್ದವು ದೇಹವನ್ನು ತಿಳಿಸುವುದೆ ಹೊರತು ಪ್ರಸಿದ್ಧ ಭೂರಾದಿ ಲೋಕಪರವಲ್ಲ ಎಂದು ತಿಳಿಸುವರು.

ಮೂರು ದೇಹಗಳೂ ಅನಿಷ್ಟವೆಂದು ತಿಳಿಸಲೂ ಮೂರು ಹರಿದ್ವೇಷಿಗಳಾದ ಶತ್ರುಗಳಿರುವರೆಂದು ಹೇಳಿರುವರು. ಜಯವಿಜಯರಿಗೆ ಐಕ್ಯವಿವಕ್ಷೆಯಿಂದ ಅವರಲ್ಲಿ ಆವಿಷ್ಟರಾದ ದೈತ್ಯರಿಗೆ ದ್ವಿತ್ವವಿವಕ್ಷೆಯಿಂದ ಮೂರು ಎಂದಿದ್ದಾರೆ ॥೩೪॥

ಶಾಪದಿಂದಾಗಿಯೇ ಜಯವಿಜಯರು ಶ್ರೀಹರಿಯ ವಿರುದ್ಧಾಚರಣೆ ಮಾಡಿದರು ಎಂದು ತಿಳಿಸಲು ಅವರ ಒಳ್ಳೆ ಸ್ವಭಾವವನ್ನು ತಿಳಿಸುವರು–

**ತೇಷಾಮಿತೀರಿತಮುಭಾವವಧಾರ್ಯ ಘೋರಂ**
**ತಂ ಬ್ರಹ್ಮದಂಡಮನಿವಾರಣಮಸ್ತ್ರಪೂಗೈಃ ।**
**ಸದ್ಯೋ ಹರೇರನುಚರಾವುರುಬಿಭ್ಯತಸ್ತತ್-**
**ಪಾದಗ್ರಹಾವಪತತಾಮತಿಕಾತರೇಣ ॥೩೫॥**

ತೌ ಉಭೌ ಹರೇಃ ಅನುಚರೌ=ಆ ಪರಮಾತ್ಮನ ದಾಸರಾದ ಜಯವಿಜಯರು ತೇಷಾಂ=ಸನಕಾದಿಗಳಿಂದ ಇತಿ=ಈ ರೀತಿಯಾಗಿ ಈರಿತಂ=ಹೇಳಲ್ಪಟ್ಟ ಅಸ್ತ್ರಪೂಗೈಃ= ಅಸ್ತ್ರಗಳ ಸಮೂಹದಿಂದ ಅನಿವಾರಣಂ=ನಿವಾರಿಸಲಾಗದ ತಂ=ಆ ಬ್ರಹ್ಮದಂಡಂ= ಬ್ರಾಹ್ಮಣರ ಶಾಪವನ್ನು ಅವಧಾರ್ಯ=ನಿಶ್ಚಯಿಸಿ ಸದ್ಯಃ=ತಕ್ಷಣದಲ್ಲಿಯೇ ಉರು= ಬಹುವಾಗಿ ಬಿಭ್ಯತಃ=ಹೆದರಿದವರಾಗಿ ಅತಿಕಾತರೇಣ=ಬಹಳವಾದ ಭಯದಿಂದ ತತ್‌ಪಾದಗ್ರಹೌ=ಅವರ ಪಾದಗಳನ್ನು ಹಿಡಿದವರಾಗಿ ಅಪತತಾಂ=ದಂಡಾಕಾರವಾಗಿ ಬಿದ್ದರು. ಬ್ರಾಹ್ಮಣರಿಗೆ ಬಹಳ ಹೆದರುವ ಅನುಚರರು ಹೀಗೂ ಅನ್ವಯ ಮಾಡಬಹುದು ॥೩೫॥

ನಮಸ್ಕಾರ ಮಾಡಿದ ನಂತರ ಪಶ್ಚಾತ್ತಾಪದಿಂದ ಅವರು ಮಾಡಿದ ಪ್ರಾರ್ಥನೆಯ ರೀತಿಯನ್ನು ತೋರಿಸುವರು –

**ಭೂಯಾನಘಾದ್ಧಿ ಭಗವದ್ಭಿರಕಾರಿ ದಂಡೋ**
**ಯೋ ನೌ ಹರೇತ ಸುರಹೇಲನಮಪ್ಯಶೇಷಂ ।**
**ಮಾ ವೋಽನುತಾಪಕಲಯಾ ಭಗವತ್ಸ್ಮೃತಿಘ್ನೋ**
**ಮೋಹೋ ಭವೇದಿಹ ತು ನೌ ವ್ರಜತೋರಧೋಽಧಃ ॥**

ಭಗವದ್ಭಿಃ=ಪೂಜ್ಯರಾದ ನಿಮ್ಮಿಂದ ನೌ=ನಮಗೆ ಯಃ ದಂಡಃ=ಯಾವ ಶಿಕ್ಷೆಯು ಅಕಾರಿ=ಮಾಡಲ್ಪಟ್ಟಿದೆಯೋ ಸಃ=ಅದು ಸುರಹೇಲನಮಪಿ ಅಶೇಷಂ ಹರೇತ= ಕೇವಲ ನಿಮಗೆ ಮಾಡಿದ ಅಪಮಾನದಿಂದ ಬಂದ ಪಾಪವನ್ನಷ್ಟೇ ಅಲ್ಲದೆ ಇದೇ ರೀತಿ ಬ್ರಹ್ಮಾದಿದೇವತೆಗಳಿಗೆ ಹಿಂದೆ ಮಾಡಿದ ಅಪಮಾನದಿಂದ ಬಂದ ಪಾಪವನ್ನೆಲ್ಲ

ಪರಿಹರಿಸಲಿ ಎಂದು ನೀವು ಅನುಗ್ರಹಿಸಿರುವಿರಿ ಎಂದರ್ಥ. ಹಿ=ಯಾವ ಕಾರಣ ಅಘಾತ್=ನಾವು ಮಾಡಿದ ಪಾಪಕ್ಕಿಂತ ಭೂಯಾನ್=ಬಹಳವಾಗಿ ಮಾಡಿದ್ದೀರಿ ಕಾರಣ ಹಿಂದಿನ ಪಾಪಕ್ಕೂ ಪ್ರಾಯಶ್ಚಿತ್ತವಾಗಲಿ. ಮತ್ತು ವಃ=ನಿಮ್ಮ ಅನಗ್ರಹದಿಂದ ಅನುತಾಪಕಲಯಾ=ಪಶ್ಚಾತ್ತಾಪದ ಲೇಶದಿಂದ ಅಧೋಽಧೋವ್ರಜತಃ=ಒಂದಂಶ-ದಿಂದ ಅತ್ಯಂತ ನೀಚದೇಹವನ್ನು ಹೊಂದುವ ನೌ=ನಮಗೆ ಅಂಶಿಗಳಿಗೆ ಪುನಃ=ಮತ್ತೆ ಇಹ=ವೈಕುಂಠದಲ್ಲಿರುವಾಗ ಭಗವತ್‌ಸ್ಮೃತಿಘ್ನಃ=ಪರಮಾತ್ಮನ ಸ್ಮರಣವನ್ನು ನಾಶಮಾಡುವ ಮೋಹಃ=ಮಿಥ್ಯಾಜ್ಞಾನವು ಮಾಭವೇತ್=ಬರುವುದು ಬೇಡ. ಈ ಶ್ಲೋಕದಲ್ಲಿ ನಿಚಯೋನಿಯನ್ನು ಹೊಂದುವವರಿಗೆ ವೈಕುಂಠದಲ್ಲಿರುವುದು ಹೇಗೆ ಯುಕ್ತವಾದೀತು ? ವಿರುದ್ಧವಲ್ಲ ಎಂದರೆ ಅಭಿಪ್ರಾಯ ಹೇಳುವರು, ಮತ್ತು ನಾವು ವಿಧಿಸಿದ ದಂಡ ದೇವತೆಗಳಿಗೆ ಮಾಡಿದ ಅಪರಾಧಕ್ಕೆ ಪರಿಹಾರಕವಾಗುವುದು ಅದಕ್ಕಾಗಿ ಕೊಟ್ಟಿಲ್ಲವಲ್ಲ ಎಂದರೆ ಅದಕ್ಕೂ ತಾತ್ಪರ್ಯ ಹೇಳುವರು –

**ಸುರಹೇಲನಸ್ಯಾಪಿ ದಂಡೋ ಭವತಿ । ಅತ್ರ ಸ್ಥಿತಯೋಃ ಪುನಃ ಪೂರ್ವವನ್ಮೋಹೋ ನ ಸ್ಯಾದಂಶಿನೋಃ ।**

ದೇವತೆಗಳಿಗೆ ಮಾಡಿದ ಅಪರಾಧಕ್ಕೂ ದಂಡವಾಗುತ್ತದೆ. ಅಂದರೆ ನಾವು ಸಣ್ಣ ಅಪರಾಧ ಮಾಡಿದ್ದೇವೆ. ನೀವು ಅದಕ್ಕೂ ಮಿಗಿಲಾಗಿ ಮೂರು ನಿಚಯೋನಿ ಬರಲೆಂದು ಶಾಪವಿತ್ತಿರುವಿರಿ ಕಾರಣ ಇದು ನಾವು ಹಿಂದೆ ಮಾಡಿದ ದೇವತೆಗಳ ಅವಮಾನಕ್ಕೂ ಪರಿಹಾರಕವಾಗಲಿ ಎಂದು ಕರುಣಿಸಿರುವಿರಿ ಎಂದು ಭಾವ.

ಇಹ ಎಂಬುದರ ಅರ್ಥವೇ ಅತ್ರ ಎಂಬುದು. ಅಧಿಕರಣಸಪ್ತಮಿಯಿಂದ ಲಬ್ಧಾರ್ಥವನ್ನೇ ಸ್ಥಿತಯೋಃ ಎಂದು ಹೇಳಿರುವರು. ಪುನಃ ಪೂರ್ವವತ್ ಎಂದು ಪ್ರಸಕ್ತಿಯನ್ನು ತಿಳಿಸಿರುವರು. ತುಶಬ್ದಾರ್ಥವನ್ನೇ ಅಂಶಿನೋಃ ಎಂದು ಹೇಳಿರುವರು. ಅಂತು – ಒಂದಶಂದಿಂದ ನೀಚಯೋನಿಯನ್ನು ಹೊಂದುವ ನಮ್ಮ ವೈಕುಂಠದಲ್ಲಿರುವ ಅಂಶಿಗಳಿಗೆ ಹಿಂದಿನಂತೆ ಮಿಥ್ಯಾಜ್ಞಾನ ಬರುವುದು ಬೇಡ ಎಂದು ಭಾವ, ಕಾರಣ ವಿರೋಧವಿಲ್ಲ ॥೩೬॥

**ಏವಂ ತದೈವ ಭಗವಾನರವಿಂದನಾಭಃ**
**ಸ್ವಾನಾಂ ವಿಬುಧ್ಯ ಸದತಿಕ್ರಮಮಾರ್ಯಹೃದ್ಯಃ ।**
**ತಸ್ಮಿನ್ ಯಯೌ ಪರಮಹಂಸಮಹಾಮುನೀನಾ-**
**ಮನ್ವೇಷಣೀಯಚರಣೋ ನಿಲಯಾತ್ ಸಹಶ್ರೀಃ ॥೩೭॥**

ತದಾ ಏವ=ಆ ಕ್ಷಣದಲ್ಲಿಯೇ ಸ್ವಾನಾಂ=ತನ್ನವರಾದ ಜಯವಿಜಯರ ಸದತಿಕ್ರಮಂ=ಸಜ್ಜನರಾದ ಸನಕಾದಿಗಳ ವಿಷಯದಲ್ಲಿ ಮಾಡಿದ ಅಪರಾಧವನ್ನು ವಿಬುಧ್ಯ=ತಿಳಿದು ಆರ್ಯಹೃದ್ಯಃ=ಜ್ಞಾನಿಗಳ ಹೃದಯದಲ್ಲಿರುವ (ಸನಕಾದಿಗಳಿಂದ ಧ್ಯೇಯನಾದ ಎಂದರ್ಥ) ಪರಮಹಂಸಮಹಾಮುನೀನಾಂ=ಸನ್ಯಾಸಿಶ್ರೇಷ್ಠರಿಂದಲೂ ಮುನಿಗಳಿಂದಲೂ ಅನ್ವೇಷಣೀಯಚರಣಃ=ಹುಡುಕಲ್ಪಡುವ ಪಾದವುಳ್ಳ ಅರವಿಂಧನಾಭಃ=ಕಮಲನಾಭನಾದ ಭಗವಾನ್=ಶ್ರೀಹರಿಯು ಸಹಶ್ರೀಃ=ಲಕ್ಷ್ಮೀಸಹಿತನಾಗಿ ನಿಲಯಾತ್=ತನ್ನಸ್ಥಾನದಿಂದ ಅಥವಾ (ಪಾಠಾಂತರ, ಚಲಯನ್=ಕಾಲನಡುಗೆಯಿಂದ,) ತಸ್ಮಿನ್‌ಯಯೌ=ಅವರಿರುವ ಸ್ಥಳಕ್ಕೆ ಬಂದನು. ನಡೆದು ಬಂದನು ಎಂದು ಹೇಳುವುದರಿಂದ ಭಗವಂತನಿಗೆ ಬ್ರಾಹ್ಮಣರಲ್ಲಿರುವ ಭಕ್ತಿಯು ತಿಳಿಯುವುದು. ಲಕ್ಷ್ಮೀಸಹಿತನೆಂದು ಹೇಳಿದ್ದರಿಂದ ಗೃಹಸ್ಥನು ಹೆಂಡತಿಸಮೇತನಾಗಿ ಅತಿಥ್ಯಾದಿಗಳನ್ನು ಮಾಡಬೇಕು ಎಂದು ಸೂಚಿತವಾಗುವುದು. ಅಥವಾ ಲಕ್ಷ್ಮೀನಿರೀಕ್ಷಣದಿಂದಲೂ ಅವರು ಧನ್ಯರಾಗಲೆಂದು ಹಾಗೆ ಹೇಳಿರುವರು ॥೩೭॥

**ತಂ ತ್ವಾಽಽಗತಂ ಪ್ರತಿಹೃತೌಪಯಿಕಂ ಸ್ವಪುಂಭಿ-**
**ಸ್ತೇಽಚಕ್ಷತಾಕ್ಷವಿಷಯಂ ಸ್ವಸಮಾಧಿಗಮ್ಯಂ ।**
**ಹಂಸಶ್ರಿಯೋರ್ವ್ಯಜನಯೋಃ ಶಿವವಾಯುಲೋಲ-**
**ಶುಭ್ರಾತಪತ್ರಶಶಿಕೇಶರಶೀಕರಾಂಬುಮ್ ॥೩೮॥**

ತೇ=ಸನಕಾದಿಗಳು ಸ್ವಸಮಾಧಿಗಮ್ಯಂ=ತಮ್ಮ ಹೃದಯದಲ್ಲಿ ಧ್ಯಾನಕಾಲದಲ್ಲಿ ಕಾಣಿಸುವ ಸ್ವಪುಂಭಿಃ=ತನ್ನಭೃತ್ಯರಿಂದ ಪ್ರತಿಹೃತೌಪಯಿಕಂ=ಅಪೇಕ್ಷಿತವಾದ ಅತಿಥಿ ಸತ್ಕಾರಕ್ಕೆ ಉಪಯುಕ್ತವಾದ ದ್ರವ್ಯಗಳಿಂದ ಕೂಡಿದ ಅಥವಾ ತರಲ್ಪಟ್ಟ ಗಮನೋಪಯುಕ್ತಗಳಾದ ಛತ್ರ ಚಾಮರ ಪಾದುಕಾದಿಗಳುಳ್ಳ ಹಂಸಶ್ರಿಯೋಃ=ಹಂಸದಂತೆ ಶುಭ್ರವಾದ ವ್ಯಜನಯೋಃ=ಎರಡೂ ಕಡೆಯಲ್ಲಿ ಚಲಿಸುತ್ತಿರುವ ಬೀಸಣಿಕೆಗಳ ಮೇಲೆ ಶಿವ=ಅನುಕೂಲವಾದ ವಾಯು=ಗಾಳಿಯಿಂದ ಲೋಲ ಚಂಚಲವಾದ ಶುಭ್ರಾತಪತ್ರ=ಶ್ವೇತಛತ್ರನಾದ ಶಶಿ=ಚಂದ್ರನ ಕೇಶರ=ಕಿರಣಗಳಿಂದ ಬೀಳುವ ಶೀಕರಾಂಬುಂ=ತಣ್ಣಗಿನ ನೀರುಳ್ಳ ಅಕ್ಷವಿಷಯಂ=ಹೊರಗಿನ ತಮ್ಮ ಕಣ್ಣಿಗೆ ವಿಷಯನಾದ ಆಗತಂ=ಬಂದಿರುವ ತಂ ತು=ಲಕ್ಷ್ಮೀಸಹಿತನಾದ ಶ್ರೀಹರಿಯನ್ನು ಅಚಕ್ಷತ=ನೋಡಿದರು ॥೩೮॥

ಮತ್ತೆ ಪರಮಾತ್ಮನನ್ನೇ ವರ್ಣಿಸುವರು –

**ಕೃತ್ಸ್ನಪ್ರಸಾದಸುಮುಖಂ ಸ್ಪೃಹಣೀಯಧಾಮ**
**ಸ್ನೇಹಾವಲೋಕಕಲಯಾ ಹೃದಿ ಸಂಸ್ಪೃಶಂತಂ ।**

**ಶ್ಯಾಮೇ ಪೃಥಾವುರಸಿ ಶೋಭಿತಯಾ ಶ್ರಿಯಾ ಸ್ವ-**
**ಗ್ರೀವಾಮಣಿಂ ಸುಭಗಯಂತಮಿವಾತ್ಮಧಿಷ್ಣ್ಯಂ ॥೩೯॥**

ಕೃತ್ಸ್ನಪ್ರಸಾದಸುಮುಖಂ=ಪೂರ್ಣಾನುಗ್ರಹದಿಂದ ವಿಕಸಿತವಾದ ವದನವುಳ್ಳ ಸ್ಪೃಹಣೀಯಧಾಮ=ಅಪೇಕ್ಷಣೀಯವಾದ ಗುಣಗಳಿಗೆ ಆವಾಸಸ್ಥಾನನಾದ, ಸ್ನೇಹಾ-ವಲೋಕಕಲಯಾ=ಪ್ರೇಮಪೂರ್ವಕವಾದ ತನ್ನ ನೋಟದಿಂದ, ಹೃದಿ ಸಂಸ್ಪೃಶಂತಂ=ಸುಖವನ್ನುಂಟುಮಾಡುವ (ಹೃದಯಸ್ಪರ್ಶಿಯಾದ ನೋಟವುಳ್ಳ), ಶ್ಯಾಮೇ=ಇಂದ್ರನೀಲದಂತೆ ಕಾಂತಿಯುಳ್ಳ, ಪೃಥೌ=ವಿಸ್ತಾರವಾದ, ಉರಸಿ=ವಕ್ಷಸ್ಥಳದಲ್ಲಿ ಶೋಭಿತಯಾ=ಅಲಂಕೃತವಾದ, ಶ್ರಿಯಾ=ಶ್ರೀವತ್ಸರೂಪವಾದ, ಕಾಂತಿಯಿಂದ ಆತ್ಮಧಿಷ್ಣ್ಯಂ=ಬ್ರಹ್ಮದೇವರ ಆವಾಸಸ್ಥಾನವಾದ ಸ್ವಗ್ರೀವಾಮಣಿಂ=ತನ್ನ ಕುತ್ತಿಗೆ-ಯಲ್ಲಿರುವ ಕೌಸ್ತುಭಮಣಿಯನ್ನು ಸುಭಗಯಂತಂ=ಒಳ್ಳೆಯ ಕಾಂತಿಯುಕ್ತವನ್ನಾಗಿ ಮಾಡುವ ಭಗವಂತನನ್ನು ನೋಡಿದರು. ಈ ದ್ವಿತೀಯಾಂತಪದಗಳಿಗೆ ಅಚಕ್ಷತ (೩೮ನೇಶ್ಲೋಕ) ಎಂಬ ಹಿಂದಿನ ಪದದಿಂದಾಗಲಿ ನೇಮುಃ(೪೨ನೇಶ್ಲೋಕ) ಎಂಬ ಮುಂದಿನ ಪದದಿಂದಾಗಲಿ ಅನ್ವಯ ತಿಳಿಯಬೇಕು. ನೋಡಿದರು ಅಥವಾ ನಮಸ್ಕರಿಸಿದರು ಎಂದರ್ಥ.

ಆತ್ಮಧಿಷ್ಣ್ಯಂ ಎಂಬುದಕ್ಕೆ ಬ್ರಹ್ಮಾವಾಸಸ್ಥಾನವೆಂದು ಅರ್ಥಮಾಡಿದೆ, ಅದಕ್ಕೆ ಪ್ರಮಾಣ ಹೇಳುವರು -

**ಕೌಸ್ತುಭೋ ಬ್ರಹ್ಮಣೋ ರೂಪಂ ಪ್ರಾಣಶ್ಚೂಡಾಮಣಿಸ್ತಥಾ । ಇತಿ ಚ ।**

ಕೌಸ್ತುಭವು ಬ್ರಹ್ಮದೇವರ ಪ್ರತಿಮೆಯು ಮುಖ್ಯಪ್ರಾಣನು ಚೂಡಾಮಣಿ ಯಲ್ಲಿರುವವನು ಎಂದರ್ಥ. ಇದರಂತೆ ಚಂದ್ರನು ಛತ್ರದಲ್ಲಿರುವನು ಎಂದು ತಿಳಿಯಬೇಕು ॥೩೯॥

**ಪೀತಾಂಶುಕಂ ಪೃಥುನಿತಂಬಮಧಿಸ್ಫುರಂತ್ಯಾ**
**ಕಾಂಚ್ಯಾಽಲಿಭಿರ್ವಿರುತಯಾ ವನಮಾಲಯಾ ಚ ।**
**ವಲ್ಗುಪ್ರಕೋಷ್ಠವಲಯಂ ವಿನತಾಸುತಾಂಸೇ**
**ವಿನ್ಯಸ್ತಹಸ್ತಮಿತರೇಣ ಧುನಾನಮಬ್ಜಂ ॥೪೦॥**

ಪೀತಾಂಶುಕಂ=ಪಿತಾಂಬರವನ್ನು ಧರಿಸಿದ, ಪೃಥುನಿತಂಬಂ=ವಿಸ್ತೀರ್ಣವಾದ ಟೊಂಕದ ಸುತ್ತಲೂ ಅಧಿಸ್ಫುರಂತ್ಯಾ= ಹೊಳೆಯುವ, ಕಾಂಚ್ಯಾ=ಉಡುದಾರದಿಂದ, ಅಲಿಭಿಃ=ಭ್ರಮರಗಳಿಂದ, ವಿರುತಯಾ=ಶಬ್ದ ಮಾಡಲ್ಪಡುವ, ವನಮಾಲಯಾ=

ವನಮಾಲೆಯಿಂದ ಶೋಭಿಸುವ, ವಲ್ಗುಪ್ರಕೋಷ್ಠವಲಯಂ=ಸುಂದರವಾದ ಮಣಿಬಂಧದಲ್ಲಿರುವ ಕಂಕಣಗಳುಳ್ಳ, ವಿನತಾಸುತಾಂಸೇ=ಗರುಡನ ಹೆಗಲ ಮೇಲೆ (ಮುಂಗೈ) ವಿನ್ಯಸ್ತಹಸ್ತಂ=ಎಡಗೈಯನ್ನಿರಿಸಿದ ಇತರೇಣ=ಬಲಗೈಯಿಂದ, ಅಬ್ಜಂ ಧುನಾನಂ=ಕಮಲವನ್ನು ತಿರುಗಿಸುವ ಭಗವಂತನನ್ನು ನೋಡಿದರು. ॥೪೦॥

**ವಿದ್ಯುತ್ಕ್ಷಿಪನ್ಮಕರಕುಂಡಲಮಂಡನಾರ್ಹ-**
**ಗಂಡಸ್ಥಲೋನ್ನಸಮುಖಂ ಮಣಿಮತ್ಕಿರೀಟಂ ।**
**ದೋರ್ದಂಡಖಂಡವಿವರೇ ಚರತಾ ಪರಾರ್ಘ್ಯ-**
**ಹಾರೇಣ ಕಂಧರಗತೇನ ಚ ಕೌಸ್ತುಭೇನ ॥೪೧॥**

ವಿದ್ಯುತ್=ಮಿಂಚನ್ನು, ಕ್ಷಿಪತ್=ಅಣಕಿಸುವ, ಮಕರಕುಂಡಲ=ಮೊಸಳೆಯಾಕಾರದ ಕುಂಡಲಗಳಿಗೆ, ಮಂಡನಾರ್ಹ=ಅಲಂಕಾರಯೋಗ್ಯಗಳಾದ, ಗಂಡಸ್ಥಲ=ಕಪೋಲಗಳುಳ್ಳ, ಮತ್ತು ಉತ್=ಉನ್ನತವಾದ, ನಸ=ನಾಸಿಕಾಯುಕ್ತವಾದ, ಮುಖಂ=ಮುಖವುಳ್ಳ ಮಣಿಮತ್ಕಿರೀಟಂ=ಪ್ರಶಸ್ತವಾದ ಮಣಿಗಳಿಂದ ಖಚಿತವಾದ ಕಿರೀಟವನ್ನು ಧರಿಸಿದ, ದೋರ್ದಂಡ=ಬಾಹುಗಳ, ಖಂಡ=ಸಮೂಹದ, ವಿವರೇ=ಮಧ್ಯದಲ್ಲಿ ಚರತಾ=ಸಂಚರಿಸುವ, ಪರಾರ್ಘ್ಯಹಾರೇಣ=ಅನರ್ಘ್ಯವಾದ (ಬಹಳ ಬೆಲೆ ಬಾಳುವ) ಅಥವಾ ಬೆಲೆ ಕಟ್ಟಲಾಗದ ಮುತ್ತಿನ ಹಾರದಿಂದ, ಕಂಧರಗತೇನ ಕೌಸ್ತುಭೇನ ಚ=ಕುತ್ತಿಗೆಯಲ್ಲಿರುವ ಕೌಸ್ತುಭಮಣಿಯಿಂದಲೂ ಯುಕ್ತನಾದ ಹರಿಯನ್ನು ನೋಡಿದರು ॥೪೧॥

**ಅತ್ರೋಪಸೃಷ್ಟಮಿತಿ ಚೋತ್ಸ್ಮಿತಮಿಂದಿರಾಯಾಃ**
**ಸ್ವಾನಾಂ ಧಿಯಾ ವಿರಚಿತಂ ಬಹುಸೌಷ್ಠವಾಢ್ಯಂ ।**
**ಮಹ್ಯಂ ಭವಸ್ಯ ಭವತಾಂ ಭಜನೀಯಮಂಗಂ**
**ನೇಮುರ್ನಿರೀಕ್ಷ್ಯ ನ ವಿತೃಪ್ತದೃಶೋ ಮುದಾ ಕೈಃ ॥೪೨॥**

ಅತ್ರ=ನಾನಿರುವ ಸ್ಥಳದಲ್ಲಿ (ವಕ್ಷಸ್ಥಳದಲ್ಲಿ) ಉಪಸೃಷ್ಟಂ=ನನ್ನ ಸಮೀಪದಲ್ಲಿಯೇ ಇದೆ, ಇತಿ=ಎಂಬ ಕಾರಣದಿಂದ ಇಂದಿರಾಯಾಃ ಚ=ಲಕ್ಷ್ಮೀದೇವಿಗೂ ಸಹ, ಉತ್ಸ್ಮಿತಂ=ಉತ್ಕೃಷ್ಟವಾದ ಕೋಪ ಬಂದಿತು. ಎಂದು ಸ್ವಾನಾಂ ಧಿಯಾ ವಿರಚಿತಂ= ತಮ್ಮ ಭಕ್ತರ ಬುದ್ಧಿಯಿಂದ ಸ್ಮರಿಸಲ್ಪಟ್ಟ, ಬಹುಸೌಷ್ಠವಾಢ್ಯಂ=ಬಹುಸೌಭಗಾಢ್ಯಂ= ಅತಿಯಾದ ಸೌಂದರ್ಯಯುತವಾದ ಅಪರಿಮಿತ ಐಶ್ವರ್ಯಾದಿಗುಣಪೂರ್ಣವಾದ ಮಹ್ಯಂ=ನನಗೂ ಭವಸ್ಯ=ರುದ್ರದೇವರಿಗೂ ಭವತಾಂ=ನಿಮಗೂ ಭಜನೀಯಂ=ಸೇವ್ಯವಾದ ಅಂಗಂ=ಅವಯವವನ್ನು ನಿರೀಕ್ಷ್ಯ=ನೋಡಿ ನವಿತೃಪ್ತ-

ದೃಶಃ=ವಿಶೇಷವಾಗಿ ತೃಪ್ತಿಪಡೆಯದೆ ಇರುವ ಸನಕಾದಿಗಳು ಕೈಃ ನೇಮುಃ=ಶಿರಬಾಗಿ ನಮಸ್ಕರಿಸಿದರು; ದಂಡವತ್ಪ್ರಣಾಮಮಾಡಿದರು.

ಉತ್ಸ್ಮೃತಂ=ಎಂಬ ಪಾಠದಲ್ಲಿಯೂ ಇದೇ ಅರ್ಥ. ಆಸ್ಮೃತಂ=ಎಂಬ ಪಾಠವಿದ್ದಾಗ ಹಾರಕೌಸ್ತುಭಮಣಿಗಳು ಬ್ರಹ್ಮಾದಿಗಳಿಂದಲೂ ವಂದ್ಯಳಾದ ಲಕ್ಷ್ಮೀ-ದೇವಿಯ ಸಮೀಪದಲ್ಲಿ ಇವೆ. ಏನು ಅವುಗಳ ಭಾಗ್ಯವೆಂದು ಭಕ್ತರಿಂದ ಸ್ಮರಿಸಲ್ಪಟ್ಟ ಎಂದರ್ಥ. 'ಸ್ವಾನಾಂ ಧಿಯಾ ವಿರಚಿತಂ' ಎಂಬುದು ಪ್ರತ್ಯೇಕ ವಿಶೇಷಣವು. ಅಥವಾ ಅತ್ರ=ಕೇಶದಿಂದ ಪಾದದವರೆಗಿರುವ ದೇಹದಲ್ಲಿ ಈ ಹೃದಯವೇ ಶ್ರೇಷ್ಠವೆಂದು ನಿಶ್ಚಯಿಸಿದ ಹೀಗೂ ಅರ್ಥ.

ವಿರಚಿತ ಎಂದರೆ ಮಾಡಲ್ಪಟ್ಟ ಎಂದರ್ಥ ರೂಢಿಯಲ್ಲಿದ್ದೆ, ಸ್ಮೃತ ಎಂದು ಹೇಗೆ ವ್ಯಾಖ್ಯಾನ ಎಂದರೆ ರಚನಶಬ್ದಕ್ಕೆ ಸ್ಮರಣ ಎಂಬರ್ಥದಲ್ಲಿ ವಿದ್ವದ್ರೂಢಿ ಇದೆ ಎಂದು ಪ್ರಮಾಣದಿಂದ ತಿಳಿಸುವರು –

**ಅವಿದ್ಯಮಾನಕರಣಂ ವಿದ್ಯಮಾನಸ್ಮೃತಿಸ್ತಥಾ ।**
**ಉಭಯಂ ರಚನಂ ಪ್ರೋಕ್ತಂ ಪೂರ್ವಸಿದ್ಧೇಷು ತು ಸ್ಮೃತಿಃ ॥**

**ಇತಿ ಶಬ್ದನಿರ್ಣಯೇ ।**

ಇಲ್ಲದಿರುವುದನ್ನು ಮಾಡುವುದು, ಇದ್ದದ್ದನ್ನು ಸ್ಮರಿಸುವುದು ಎಂಬ ಎರಡರ್ಥ-ದಲ್ಲಿಯೂ ರಚನ ಎಂಬ ಶಬ್ದವಿದೆ. ಇದ್ದುದರ ವಿಷಯದಲ್ಲಿ ಸ್ಮರಣವೆಂದರ್ಥ. ಭಗವಂತನ ಅಂಗವು ಮೊದಲೇ ಇರುವುದರಿಂದ ಇಲ್ಲಿ ವಿರಚಿತ ಎಂದರೆ ತನ್ನ ಬುದ್ಧಿಗನುಸಾರವಾಗಿ ಸ್ಮರಿಸುವುದು ಎಂದರ್ಥವನ್ನೇ ಸ್ವೀಕರಿಸಬೇಕು ॥೪೨॥

**ತಸ್ಯಾರವಿಂದನಯನಸ್ಯ ಪದಾರವಿಂದ-**
**ಕಿಂಜಲ್ಕಮಿಶ್ರತುಲಸೀಮಕರಂದವಾಯುಃ ।**
**ಅಂತರ್ಗತಃ ಸ್ವವಿವರೇಣ ಚಕಾರ ತೇಷಾಂ**
**ಸಂಕ್ಷೋಭಮಕ್ಷರಜುಷಾಮಪಿ ಚಿತ್ತತನ್ವೋಃ ॥೪೩॥**

ಅರವಿಂದನಯನಸ್ಯ=ಕಮಲದಂತೆ ಕಣ್ಣುಳ್ಳ ತಸ್ಯ=ಪರಮಾತ್ಮನ ಪದಾರವಿಂದ-ಕಿಂಜಲ್ಕಮಿಶ್ರತುಲಸೀಮಕರಂದವಾಯುಃ=ಪಾದಗಳಲ್ಲಿ ಸಮರ್ಪಿಸಿದ ಕಮಲಗಳ ಕೇಸರಗಳಿಂದ ಕೂಡಿದ ಅಲ್ಲಿಯೇ ಸಮರ್ಪಿಸಿದ ತುಲಸಿಯ ಸಿಹಿಯಾದ ರಸದ ವಾಸನೆಯಿಂದ ಕೂಡಿದ ಗಾಳಿಯು ಸ್ವವಿವರೇಣ=ಮೂಗಿನ ರಂಧ್ರಗಳಿಂದ ಅಂತರ್ಗತ=ಒಳಗೆ ಪ್ರವಿಷ್ಟವಾಗಿ ಅಕ್ಷರಜುಷಾಂ=ಅಕ್ಷರನಾಮಕ ಭಗವಂತನನ್ನು ಸೇವಿಸುವ ಅಭ್ಯಾಸವಿರುವ ಸನಕಾದಿಗಳಿಗೂ ತೇಷಾಂ=ಪಾದಗಳಿಗೆ ನಮಸ್ಕರಿಸಿದ

ಸನಕಾದಿಗಳ ಚಿತ್ತತನ್ವೋಃ=ಮನಸ್ತನುಗಳಿಗೆ ಕ್ಷೋಭಂ=ಒಂದು ತರಹ ವಿಕಾರವನ್ನು ಚಕಾರ=ಉಂಟುಮಾಡಿತು ಅಂದರೆ ಮನದಲ್ಲಿ ಹರ್ಷವನ್ನು ತನುವಿನಲ್ಲಿ ರೋಮಾಂಚನವನ್ನುಂಟು ಮಾಡಿತು.

ಅಕ್ಷರಜುಷಾಂ ಎಂಬುದಕ್ಕೆ ಇಲ್ಲಿ ಅಭಿಪ್ರೇತಾರ್ಥ ಹೇಳುವರು-

**ಅಕ್ಷರಜುಷಾಮಪಿ ತದ್ರೂಪಸೇವಾಭ್ಯಾಸಿನಾಮಪಿ ।**

ಭಗವಂತನ ರೂಪಗಳನ್ನು ಸೇವಿಸುವಅಭ್ಯಾಸವುಳ್ಳವರಿಗೂ ಎಂದರ್ಥ.ಇದರಿಂದ ಭಗವಂತನ ಪಾದಗಳಿಗೆ ಸಮರ್ಪಿಸಿದ ಕಮಲಕೇಸರ ತುಳಸಿಗೆ ಸಾಮರ್ಥ್ಯ ಹೀಗೆ ಎಂದು ಹೇಳಿ ಭಗವನ್ಮಹಿಮೆಯ ಅತಿಶಯ ತಿಳಿಸಿದಂತಾಯಿತು ॥೪೩॥

ಹರ್ಷದಿಂದಾದ ಅವರ ಸಂಭ್ರಮವನ್ನು ಹೇಳುವರು -

**ತೇ ವಾ ಅಮುಷ್ಯ ವದನಾಸಿತಪದ್ಮಕೋಷ-**
**ಮುದ್ವೀಕ್ಷ್ಯ ಸುಂದರತರಾಧರಕುಂದಹಾಸಂ ।**
**ಲಬ್ಧಾಶಿಷಃ ಪುನರವೇಕ್ಷ್ಯ ತದೀಯಮಂಘ್ರಿ-**
**ದ್ವಂದ್ವಂ ನಖಾರುಣಮಣಿಶ್ರಯಣಂ ನಿದಧ್ಯುಃ ॥೪೪॥**

ತೇ ವೈ=ಆ ಸನಕಾದಿಗಳಾದರೂ ವದನಾಸಿತಪದ್ಮಕೋಷಂ=(ಶಂ) ಮುಖವೆಂಬ ನೀಲಿಕಮಲದ ಮೊಗ್ಗನ್ನು ಸುಂದರತರಾಧರಕುಂದಹಾಸಂ=ಅತ್ಯಂತ ಸುಂದರವಾದ ಕೆಳತುಟಿ ಮತ್ತು ಕುಂದಪುಷ್ಪದಂತೆ ಧವಲವಾದ ಮಂದಹಾಸವಿರುವುದನ್ನು ಉದ್ವಿಕ್ಷ=ಮೇಲೆ ಮುಖ ಮಾಡಿ ನೋಡಿ ನಖಾರುಣಮಣಿಶ್ರಯಣಂ=ಉಗುರು-ಗಳೆಂಬ ಕೆಂಪಾದ ಮಣಿಗಳಿಗೆ ಆಶ್ರಯವಾದ ತದೀಯಂ ಅಂಘ್ರಿದ್ವಂದ್ವಂ= ಪಾದದ್ವಂದ್ವಗಳನ್ನು ಪುನರವೇಕ್ಷ್ಯ=ಮತ್ತೊಮ್ಮೆ ನೋಡಿ ಲಬ್ಧಾಶಿಷಃ=ಮನೋರಥ-ವನ್ನು ಪಡೆದವರಾಗಿ ನಿದಧ್ಯುಃ=ಹೃದಯದಲ್ಲಿ ಚೆನ್ನಾಗಿ ಸ್ಥಾಪಿಸಿದರು ಪಾದಗಳಿಗೆ ನಮಸ್ಕರಿಸಿದ್ದಲ್ಲದೆ ತಾವು ಗಿಡ್ಡವಿರುವುದರಿಂದ ಭಗವಂತನು ಎತ್ತರವಾಗಿರುವುದ-ರಿಂದ ಮೇಲೆ ಮುಖ ಮಾಡಿ ಅವನನ್ನು ಮುಡಿಯಿಂದ ಅಡಿಯವರೆಗೆ ಮತ್ತೊಮ್ಮೆ ನೋಡಿ ಆನಂದಿಸಿದರೆಂದರ್ಥ ॥೪೪॥

**ಪುಂಸಾಂ ಗತಿಂ ಮೃಗಯತಾಮಿಹ ಯೋಗಮಾರ್ಗೈ-**
**ರ್ಧ್ಯಾನಾಸ್ಪದಂ ಬಹುಮತಂ ನಯನಾಭಿರಾಮಂ ।**
**ತೇ ತದ್ವಪುರ್ದರ್ಶಯಾನಮನನ್ಯಸಿದ್ಧೈ-**
**ರೌತ್ಪತ್ತಿಕೈಃ ಸಮಗೃಣನ್ ಯುತಮಷ್ಟಭೋಗೈಃ ॥೪೫॥**

ತೇ=ಸನಕಾದಿಗಳು ಇಹ=ಅಧಿಕಾರಿಗಳಲ್ಲಿ ಯೋಗಮಾರ್ಗೈಃ=ಜ್ಞಾನ ಮುಂತಾದ ಉಪಾಯಗಳೆಂಬ ಹಾದಿಯಿಂದ ಗತಿಂ=ಮೋಕ್ಷವನ್ನು ಮೃಗಯತಾಂ ಪುಂಸಾಂ= ಹುಡುಕುವ ಜನರಿಗೆ ಧ್ಯಾನಾಸ್ಪದಂ=ಧ್ಯಾನಕ್ಕೆ ವಿಷಯವಾದ ಬಹುಮತಂ= ಪೂರ್ಣವೆಂದು ತಿಳಿಯಲ್ಪಟ್ಟ ಅನನ್ಯಸಿದ್ಧೈಃ=ಬೇರೆಯದರಿಂದ ಪಡೆಯದಿರುವ ಔತ್ಪತ್ತಿಕೈಃ=ಸ್ವಾಭಾವಿಕಗಳಾದ ಅಷ್ಟಭೋಗೈಃ=ಅಣಿಮಾದ್ಯಷ್ಟೈಶ್ವರ್ಯಗಳಿಂದ ಯುತಂ=ಕೂಡಿದ ನಯನಾಭಿರಾಮಂ=ಕಣ್ಣುಗಳಿಗೆ ಮುದವನ್ನೀವ ತದ್ವಪುಃ ದರ್ಶಯಾನಂ=ಆತನ ಶರೀರವನ್ನು ತೋರಿಸುವ ಭಗವಂತನನ್ನು ಸಮಗೃಣನ್= ಚೆನ್ನಾಗಿ ಸ್ತುತಿಸಿದರು ॥೪೫॥

**ಕುಮಾರಾ ಊಚುಃ**

**ಯೋಽನ್ತರ್ಹಿತೋ ಹೃದಿ ಗತೋಽಪಿ ದುರಾತ್ಮನಾಂ ತ್ವ-**
**ಮದ್ಯೈಷಿ ನೋ ನಯನಮೂಲಮನಂತರಾದ್ಧಃ ।**
**ಯರ್ಹ್ಯೇವ ಕರ್ಣವಿವರೇಣ ಗುಹಾಂ ಗತೋ ನಃ**
**ಪಿತ್ರಾನುವರ್ಣಿತರಹೋ ಭವದುದ್ಭವೇನ ॥೪೬॥**

ಅನಂತ=ಶ್ರೀಹರಿಯೇ ಭವದುದ್ಭವೇನ=ನಿನ್ನಿಂದ ಉತ್ಪತ್ತಿಯುಳ್ಳ ನಃ ಪಿತ್ರಾ= ನಮ್ಮ ತಂದೆಯಾದ ಬ್ರಹ್ಮದೇವನಿಂದ ಯರ್ಹಿ ಏವ=ಯಾವಾಗ ಅನುವರ್ಣಿತರಹಃ= ಉಪದೇಶಿಸಲ್ಪಟ್ಟ ರಹಸ್ಯವುಳ್ಳ ಶ್ರೀಹರಿಯು ಕರ್ಣವಿವರೇಣ=ಕಿವಿಯಮಾರ್ಗ- ದಿಂದ ನಃ ಗುಹಾಂಗತಃ=ನಮ್ಮ ಹೃದಯಗುಹೆಯನ್ನು ಪ್ರವೇಶಿಸಿದನೋ ತರ್ಹಿ= ಆಗಲೇ ಧ್ಯಾತಃ=ಧ್ಯಾನಮಾಡಲ್ಪಟ್ಟಿರುವಿ. ಆದರೂ ಹೃದಿಗತೋಽಪಿ=ಹೃದಯದಲ್ಲೇ ಇದ್ದರೂ ದುರಾತ್ಮನಾಂ=ದುಷ್ಟಮನಸ್ಸಿನವರಿಗೆ ಅಂತರ್ಹಿತಃಅಸಿ=ಕಾಣದವನಾಗಿ- ದ್ದವನು ಯಃ=ಯಾವನೋ ಸಃ ತ್ವಂ=ಆ ನೀನು ಅದ್ಯ=ಈಗ ರಾದ್ಧಃಯತಃ= ಅಘಟಿತಘಟಕ ಸಾಮರ್ಥ್ಯನಾದುದರಿಂದ ಅದ್ಯ=ಈ ದಿನ ನಃ=ನಮ್ಮ ನಯನ- ಮೂಲಂ ಏಷಿ=ಕಣ್ಣುಗಳಿಗೆ ಗೋಚರನಾಗಿರುವಿ ॥೪೬॥

ನಿಮ್ಮ ತಂದೆಯು ಉಪದೇಶಿಸಿದ ಪರಮಾತ್ಮ ನಾನಲ್ಲ, ಅವನು ಅವ್ಯಕ್ತನು ನಾನಾದರೋ ನಿಮ್ಮಿಂದ ನೋಡಲ್ಪಟ್ಟಿರುವೆನು ಎಂದರೆ ಅವನೇ ನೀನು ಆ ಲಕ್ಷಣಗಳನ್ನೇ ನಿನ್ನಲ್ಲಿ ಕಾಣುವೆವು ಎನ್ನುತ್ತಾರೆ -

ತಂ ತ್ವಾ ವಿದಾಮ ಭಗವನ್ ಪರಮಾತ್ಮತತ್ತ್ವಂ
ಸತ್ತ್ವೇನ ಸಂಪ್ರತಿ ರತಿಂ ರಚಯಂತಮೇಷಾಂ ।
ಯತ್ತೇಽನುಭಾವವಿದಿತೈರ್ದೃಢಭಕ್ತಿಯೋಗೈ-
ರುದ್ಗ್ರಂಥಯೋ ಹೃದಿ ವಿದುರ್ಮುನಯೋ ವಿರಾಗಾಃ ॥

ಹೇ ಭಗವನ್=ಶ್ರೀಹರಿಯೇ ಅನುಭಾವವಿದಿತೈಃ=ನಿನ್ನ ದಯೆಯಿಂದ ತಿಳಿದ, ದೃಢಯೋಗೈಃ=ದೃಢಭಕ್ತಿ ಎಂಬ ಮೋಕ್ಷೋಪಾಯಗಳಿಂದ ವಿರಾಗಾಃ=ವಿರಕ್ತರಾದ ಆದ್ದರಿಂದಲೇ ಉದ್ಗ್ರಂಥಯಃ=ಅಹಂಕಾರವೆಂಬ ಬಂಧವನ್ನು ಕಳೆದುಕೊಂಡಿರುವ ಮುನಯಃ=ಜ್ಞಾನಿಗಳು ಯತ್=ಯಾವನನ್ನು ವಿದುಃ=ತಿಳಿದರೋ ಅಂಥ ತೇ= ನಿನ್ನ ಮತ್ತು ಸಂಪ್ರತಿ=ಸ್ಥಿತಿಕಾಲದಲ್ಲಿ ಸತ್ವೇನ=ಸತ್ವಗುಣದಿಂದ ಏಷಾಂ=ಜನರಿಗೆ ರತಿಂ ರಚಯಂತಂ=ಸುಖವನ್ನುಂಟುಮಾಡುವ ಪರಮಾತ್ಮತತ್ವಂ=ಪರಮಾತ್ಮನ ಲಕ್ಷಣಗಳುಳ್ಳವನೆಂದು ತಂ ತ್ವಾಂ=ಆ ನಿನ್ನನ್ನು ವಿದಾಮಃ=ತಿಳಿಯುವೆವು. ನಮ್ಮ ತಂದೆಯು ಹೇಳಿದ ಪಾಲಕತ್ವ ಮತ್ತು ಯೋಗಿಗಳಿಗೆ ತಿಳಿಯಲ್ಪಡುವವನೆಂಬ ಎರಡೂ ಲಕ್ಷಣಗಳನ್ನು ನಿನ್ನಲ್ಲಿ ಕಾಣುವೆವು. ಕಾರಣ ಅವನೇ ನೀನು ಎಂದು ಭಾವ ॥೪೭॥

ಮುನಿಗಳು ಇತರರಂತೆ ಮೋಕ್ಷಾದಿಗಳನ್ನು ಪಡೆಯಲು ಹೃದಯದಲ್ಲಿ ಶ್ರೀಹರಿಯನ್ನು ತಿಳಿದರೆ ಎಂದರೆ ಇಲ್ಲವೆಂದು ಹೇಳುವರು –

**ನಾತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಂ**
**ಕಿಂ ಚಾನ್ಯದರ್ಪಿತಭಯಂ ಭ್ರುವ ಉನ್ನಯೈಸ್ತೇ ।**
**ಯೇಽಂಗ ತ್ವದಂಘ್ರಿಶರಣಾ ಭವತಃ ಕಥಾಯಾಃ**
**ಕೀರ್ತನ್ಯತೀರ್ಥಯಶಸಃ ಕುಶಲಾ ರಸಜ್ಞಾಃ ॥೪೮॥**

ಹೇ ಅಂಗ=ಸ್ವಾಮಿಯಾದ ಶ್ರೀಹರಿಯೇ ಯೇ=ಯಾರು ತ್ವದಂಘ್ರಿಶರಣಾಃ= ನಿನ್ನ ಪಾದಗಳೇ ಆಶ್ರಯವಾಗಿವುಳ್ಳ ನಿನ್ನ ಭಕ್ತರು ಕೀರ್ತನ್ಯತೀರ್ಥಯಶಸಃ=ಅವಶ್ಯ ಕೀರ್ತನೆ ಮಾಡಲೇಬೇಕಾದ ಶುದ್ಧವಾದ ಯಶಸ್ಸುಳ್ಳ ಭವತಃ=ನಿನ್ನ ಕಥಾಯಾಃ ರಸಜ್ಞಾಃ ಕಥೆಯನ್ನು ಕೇಳುವುದರಿಂದ ಉಂಟಾದ ಬ್ರಹ್ಮಜ್ಞಾನದಿಂದ ಅಭಿವ್ಯಕ್ತವಾದ ಸ್ವಲ್ಪ ಸ್ವರೂಪಸುಖಾನುಭವವುಳ್ಳ ಕುಶಲಾಃ=ನೀಚೋಚ್ಚಗಳನ್ನು ತಿಳಿದವರೋ ತೇ= ಉತ್ತಮಾಧಿಕಾರಿಗಳು ತೇ=ನಿನ್ನ ಆತ್ಯಂತಿಕಂ ಪ್ರಸಾದಂ=ಅಧಮಾಧಿಕಾರಿಗಳಿಗೆ ಉಂಟಾಗುವ ಭಕ್ತಿಜ್ಞಾನಪರಿಪಾಕದ ನಂತರ ಆಗುವ ಮೋಕ್ಷಕ್ಕೆ ನೇರವಾಗಿ ಕಾರಣ– ವಾದ ಪ್ರಸಾದವನ್ನು ಅಂದರೆ ಅದರಿಂದಾಗುವ ಮೋಕ್ಷವನ್ನೂ ನ ವಿಗಣಯಂತಿ= ದೊಡ್ಡದೆಂದು ತಿಳಿಯುವುದಿಲ್ಲ. ಅವರಿಗೆ ಈಗಲೇ ಹೆಚ್ಚಿನ ಸುಖವಿದೆ. ತೇ=ಅವರು ಭ್ರುವಃ ಉನ್ನಯೈಃ=ಹುಬ್ಬಿನ ವಿಲಾಸ ವಿಶೇಷದಿಂದ ಅರ್ಪಿತಭಯಂ=ಕೆಳಗೆ ಬೀಳುವೆನೆಂಬ ಭಯವುಳ್ಳ ಸ್ವರ್ಗಾದಿಗಳನ್ನು ನ ವಿಗಣಯಂತಿ ಕಿಂ ಚ= ಲೆಕ್ಕಿಸುವುದಿಲ್ಲವೆಂದು ಬೇರೆ ಹೇಳಬೇಕೆ ? ಸ್ವತಃಸಿದ್ಧವೆಂದರ್ಥ.

ಈ ಶ್ಲೋಕದಲ್ಲಿ ಯಾರು ನಿನ್ನ ಕಥಾಶ್ರವಣಾದಿಗಳಿಂದುಂಟಾದ ಪರೋಕ್ಷ ಜ್ಞಾನದಿಂದ ಸ್ವರೂಪಸುಖವುಳ್ಳವರೋ ಅವರು ನಿನ್ನ ಅತ್ಯರ್ಥಪ್ರಸಾದವನ್ನಾಗಲಿ ಮೋಕ್ಷವನ್ನಾಗಲಿ ಇಚ್ಛಿಸುವುದಿಲ್ಲ ಎಂದು ಹೇಳಿದ್ದರಿಂದ ಜೀವನ್ಮುಕ್ತರಿಗೆ ಬ್ರಹ್ಮಜ್ಞಾನ-ದಿಂದ ಮೋಕ್ಷಕ್ಕಿಂತ ಮೊದಲು ಸ್ವರೂಪಾನಂದಾಭಿವ್ಯಕ್ತಿರೂಪ ಮುಕ್ತಿ ಇದೆ ಎಂದು ತಿಳಿಯುವುದು. ಅದು ಹೇಗೆ ಸಾಧ್ಯ? ಅವರು ಪುನಃಶ್ರವಣಾದಿಗಳನ್ನು ಮಾಡವುದು ವ್ಯರ್ಥವಾಗಬೇಕಾಗುವುದು. ಆದ ಕಾರಣ ಇಲ್ಲಿ ಅಭಿಮತವಾದ ಆನಂದದ ಅಭಿವ್ಯಕ್ತಿಯನ್ನು ಪ್ರಮಾಣದಿಂದ ತಿಳಿಸುವರು.

**''ಭಕ್ತಿಜ್ಞಾನಪರೀಪಾಕಾತ್ ಕಿಂಚಿತ್ ಪೂರ್ವಂ ಚ ಮುಚ್ಯ ತೇ ।**
**ದರ್ಶನೇನ ಹರೇಸ್ತತ್ರ ನಾನಂದಃ ಪೂರ್ಣತಾಂ ವ್ರಜೇತ್'' ॥**

**ಇತಿ ಬ್ರಹ್ಮತರ್ಕೇ ॥**

**ಅತೋಽನಪೇಕ್ಷಾಣಾಮಾನಂದೋದ್ರೇಕೋ ಮೋಕ್ಷೇಚ್ಛುಭ್ಯಃ । ತೇಷಾಂ ಪರೀಪಾಕತಃ ಪೂರ್ವಂ ಬ್ರಹ್ಮದೃಷ್ಟ್ಯಾ ಮುಕ್ತಿಪ್ರಾಪ್ತೇಃ ॥**

**''ಮುಮುಕ್ಷೋಃ ಕೇವಲೋ ಭಕ್ತೋ ಮುಕ್ತಾವಪಿ ಸುಖೀ ಭವೇತ್'' ।**

**ಇತಿ ಚ ॥**

ಉತ್ತಮಾಧಿಕಾರಿಗಳಿಗೆ ಭಕ್ತಿಜ್ಞಾನಪರಿಪಾಕ ಸಾಧ್ಯವಾದ ಆತ್ಯಂತಿಕ ಪ್ರಸಾದವಾಗುವ ಮೊದಲೇ ಶ್ರೀಹರಿಯ ಅಪರೋಕ್ಷಜ್ಞಾನದಿಂದ ''ಕಿಂಚಿತ್ ಮುಚ್ಯತೇ'' ಎಂದರೆ ಪ್ರಾಯಃ ಸ್ವರೂಪನಂದಾಭಿವ್ಯಕ್ತಿಯಾಗುವುದು. ಆದರೂ ಆಗ ತನ್ನ ಯೋಗ್ಯತೆ-ಗನುಗುಣವಾದ ಪೂರ್ಣತೆಯಾಗಿರುವುದಿಲ್ಲ ಕಾರಣ ಜೀವನ್ಮುಕ್ತರಾದ ಉತ್ತಮಾಧಿ ಕಾರಿಗಳು ಮಾಡುವ ಶ್ರವಣಾದಿಗಳು ವ್ಯರ್ಥವಲ್ಲ.

ಹಾಗಾದರೆ ಆತ್ಯಂತಿಕ ಪ್ರಸಾದವನ್ನು ಲೆಕ್ಕಿಸುವದಿಲ್ಲವೆಂಬುದರ ಅರ್ಥವೇನು ? ಸ್ವಯೋಗ್ಯಪೂರ್ತಿಗಾಗಿ ಅದರ ಅಪೇಕ್ಷೆ ಬೇಕಲ್ಲ? ಎಂದರೆ ಅಭಿಪ್ರಾಯ ತಿಳಿಸುವರು ಅತೋ ಎಂಬ ವಾಕ್ಯದಿಂದ. ಯಾವ ಕಾರಣ ಉತ್ತಮರಾದ ಜ್ಞಾನಿಗಳಿಗೆ ಬ್ರಹ್ಮಜ್ಞಾನ-ದಿಂದಲೇ ಬಹುತರಾನಂದದ ಅಭಿವ್ಯಕ್ತಿ ಆಗುವುದೆಂದು ಪ್ರಮಾಣ ಸಿದ್ಧವೋ ಆಕಾರಣದಿಂದ ಮೋಕ್ಷವನ್ನು ಇಚ್ಛಿಸುವವರಿಗಿಂತಲೂ ಹೆಚ್ಚಾಗಿ ಮೋಕ್ಷವನ್ನಿಚ್ಛಿಸದ ಉತ್ತಮಾಧಿಕಾರಿಗಳಿಗೆ ಆನಂದಾಭಿವ್ಯಕ್ತಿಯಾಗುವುದು. ಅಂದರೆ ಸ್ವಯೋಗ್ಯ-ಪೂರ್ತಿಯನ್ನೂ ಅವರು ಇಚ್ಛಿಸುವುದಿಲ್ಲ. ಇಂಥವರಿಗೆ ಭಕ್ತಿ ಜ್ಞಾನಪರಿಪಾಕಕ್ಕೂ ಮೊದಲು ಅಧಮಾಧಿಕಾರಿಗಳು ಹೊಂದುವ ಮುಕ್ತಿಗಿಂತ ಹೆಚ್ಚಿನ ಮುಕ್ತಿ ದೊರಕಿರುವುದರಿಂದ ಅಧಮಾಧಿಕಾರಿಗಳು ಹೊಂದುವ ಅತ್ಯಂತಿಕ ಪ್ರಸಾದವನ್ನೂ ಮೋಕ್ಷವನ್ನೂ ಪರಿಗಣಿಸುವುದಿಲ್ಲವೆಂದರ್ಥ.

ಉತ್ತಮಾಧಿಕಾರಿಗಳು ತಮಗೆ ಜೀವನ್ಮುಕ್ತಿಯಲ್ಲಿಯೇ ಅಧಮರ ಸಂಪೂರ್ಣ ಮುಕ್ತಿಗಿಂತ ಹೆಚ್ಚಿನ ಆನಂದವಿರುವುದರಿಂದ ಅಧಮರ ಮುಕ್ತಿಯನ್ನು ಅಪೇಕ್ಷಿಸು-ವುದಿಲ್ಲವೆಂದು ಮೂಲಾಭಿಪ್ರಾಯ.

ಈ ವಿಷಯದಲ್ಲಿ ಪ್ರಮಾಣ ಮುಮುಕ್ಷೋಃ ಎಂಬುದು. ಭಕ್ತಃಕೇವಲಃ= ಅಪೇಕ್ಷಾರಹಿತನಾದ ಭಕ್ತನು ಮುಕ್ತಾವಪಿ=ಜೀವನ್ಮುಕ್ತಿಯಲ್ಲಿ ಮತ್ತು ಮುಕ್ತಿಯಲ್ಲಿಯೂ ಮುಮುಕ್ಷೋಃ=ಮೋಕ್ಷಾಪೇಕ್ಷಿಯಕ್ಕಿಂತ ಹೆಚ್ಚಿನ ಸುಖೀ=ಸುಖವುಳ್ಳವನಾಗುವನು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ ||೪೮||

ನಿನ್ನ ಸೇವಕರಿಗಿತ್ತ ಶಾಪದಿಂದ ಬಂದ ಪಾಪದ ಫಲವಾದ ದುಃಖ ನಮಗೆ ಅವಶ್ಯ ಆಗಲಿ ಎಂದು ಪ್ರಾರ್ಥಿಸುವರು –

**ಕಾಮಂ ವ್ರಜೇಮ ವೃಜಿನೈರ್ನಿರಯೇಷು ನಷ್ಟಾ-**
**ಶ್ಚೇತೋಲಿವದ್ ಯದಿ ನು ತೇ ಪದಯೋ ರಮೇತ ।**
**ವಾಚಶ್ಚ ನಸ್ತುಲಸಿವದ್ ಯದಿ ತೇಽಂಘ್ರಿಶೋಭಾಃ**
**ಪೂರ್ಯೇತ ತೇ ಗುಣಗಣೈರ್ಯದಿ ಕರ್ಣರಂಧ್ರಃ ||೪೯||**

ವೃಜಿನೈಃ=ಶಾಪವನ್ನು ಕೊಟ್ಟ ಪಾಪಗಳಿಂದ ನಿರಯೇಷು=ನರಕಗಳಲ್ಲಿ ನಷ್ಟಾಃ= ಕ್ಲೇಶಯುತರಾಗಿ ಕಾಮಂ ವ್ರಜೇಮ=ಹೋಗುವೆವು. ಆದರೆ ಯದಿ=ಒಂದುವೇಳೆ ಚೇತಃ=ನಮ್ಮ ಮನಸ್ಸು ಅಲಿವತ್=ಭ್ರಮರದಂತೆ ಮುಳ್ಳುಗಳನ್ನು ಚುಚ್ಚಿಕೊಂಡರೂ ಹೂವಿನಲ್ಲಿಯೇ ರಮಿಸುವದೋ ಹಾಗೆಯೇ ತೇ=ನಿನ್ನ ಪದಯೋಃ= ಪಾದಾರವಿಂದಗಳಲ್ಲಿ ರಮೇತ=ವಿಘ್ನಗಳನ್ನು ಲೆಕ್ಕಿಸದೇ ಆಸಕ್ತವಾಗುವುದಾದರೆ ಮತ್ತು ನಃ=ನಮ್ಮ ವಾಚಃ=ಮಾತುಗಳು ತುಲಸೀವತ್=ತುಲಸಿಯು ಹೇಗೆ ನಿನ್ನ ಪ್ರೀತಿಗಾಗಿಯೇ ನಿನ್ನ ಪಾದಗಳಲ್ಲಿ ಶೋಭಿಸುವುದೋ ತಥಾ=ಹಾಗೆ ಅಂಘ್ರಿಶೋಭಾಃ= ನಿನ್ನ ಅಂಘ್ರಿಗಳಿಂದ ಶೋಭಿಸುವುವಾದರೆ ಮತ್ತು ಯದಿ ಕರ್ಣರಂಧ್ರಃ=ಕಿವಿಗಳು ತೇ=ಗುಣಗಣೇ ಪೂರ್ಯೇತ=ನಿನ್ನ ಗುಣಗಳ ಸಮೂಹದಿಂದ ತುಂಬುವುದಾದರೆ ಯಥೇಷ್ಟವಾಗಿ ಹೋಗುವೆವು.

ಈ ಶ್ಲೋಕದಲ್ಲಿ ಪಾಪಫಲವಾದ ದುಃಖಭೋಗವನ್ನು ಹೇಗೆ ಪ್ರಾರ್ಥಿಸುವುದು ಅನಿಷ್ಟವಲ್ಲವೇ? ಮತ್ತು ನರಕದಲ್ಲಿ ಮನಸ್ಸು ಮೊದಲಾದವುಗಳಿಗೆ ಭಗವದ್ವಿಷಯ-ಕತ್ವರೂಪ ಭಕ್ತಿವರ್ಧನೆಯನ್ನು ಏಕೆ ಪ್ರಾರ್ಥಿಸುವರು ? ಎಂಬೆರಡು ಪ್ರಶ್ನೆಗೆ ಪ್ರಮಾಣದ ಮೂಲಕ ಉತ್ತರಿಸುವರು –

**ಯಾವತ್ ಪರಮಭಕ್ತೈಸ್ತು ಭುಜ್ಯತೇ ದುಃಖಮುಲ್ಬಣಂ ।**
**ತಾವನ್ಮುಕ್ತೌ ಸುಖೋದ್ರೇಕಃ ತತ್ರ ಚೇದ್ಭಕ್ತಿವರ್ಧನಂ ॥ ಇತಿ ಚ ।**

ಪರಮಭಕ್ತರು ಬಹಳವಾದ ಕಾರ್ಯಕ್ಲೇಶರೂಪತಪಸ್ಸಿನಿಂದಾಗುವ ಅಥವಾ ಉತ್ತಮಾಪರಾಧರೂಪ ಪಾಪಜನ್ಯವಾದ ದುಃಖವನ್ನು ಎಷ್ಟು ಅನುಭವಿಸುವರೋ ಅಷ್ಟೇ ಹೆಚ್ಚು ಸುಖವು ಮುಕ್ತಿಯಲ್ಲಿ ಆಗುವುದು. ಆದರೆ ದುಃಖ ಅನುಭವಿಸು-ವಾಗಲೂ ಹರಿಭಕ್ತಿ ಲೋಪವಾಗದಿದ್ದರೆ ಮಾತ್ರ ಅದರಿಂದ ಮುಕ್ತಿಯಲ್ಲಿ ಆನಂದೋದ್ರೇಕವಾಗುವುದು, ಆದ ಕಾರಣ ಈ ರೀತಿ ಪ್ರಾರ್ಥನೆ ಉಚಿತವೆ ॥೪೯॥

**ಪ್ರಾದುಶ್ಚಕರ್ಥ ಯದಿದಂ ಪುರಹೂತ ರೂಪಂ**
**ತೇನೇಶ ನಿರ್ವೃತಿಮವಾಪುರಲಂ ದೃಶೋ ನಃ ।**
**ತಸ್ಮಾ ಇದಂ ಭಗವತೇ ನಮ ಉದ್ವಿಧೇಮ**
**ಯೋಽನಾತ್ಮನಾಂ ದುರುದಯೋ ಭಗವಾನ್ ಪ್ರತೀತಃ ॥**

***॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಷೋಡಶೋಽಧ್ಯಾಯಃ ॥***

ಭೋ ಪುರುಹೂತ=ಬಹಳ ಕೀರ್ತಿಯುಳ್ಳವನೇ ಯದಿದಂ ರೂಪಂ=ಈ ರೂಪವನ್ನು ಪ್ರಾದುಶ್ಚಕರ್ಥ=ಪ್ರಕಟಗೊಳಿಸಿರುವಿಯೋ ತೇನ=ಅದರಿಂದ ನಃ= ನಮ್ಮ ದೃಶಃ=ಕಣ್ಣುಗಳು ಅಲಂ ನಿರ್ವೃತಿಂ ಅವಾಪುಃ=ವಿಪುಲವಾದ ಸುಖವನ್ನು ಹೊಂದಿದವು ಯಃ=ಯಾವನು ಅನಾತ್ಮನಾಂ=ಇಂದ್ರಿಯಜಯವಿಲ್ಲದವರಿಗೆ ದುರುದಯಃ=ಕಾಣಿಸದಿರುವವನು ಉತ್ ಪ್ರತೀತಃ=ಉತ್ಕೃಷ್ಟವಾಗಿ ಸಾಕ್ಷಾತ್ಕೃತ-ನಾಗಿರುವಿ ತಸ್ಮೈಭಗವತೇ=ನಿನಗೆ ಇದಂ ನಮಃ ವಿಧೇಮ=ಪ್ರತಿಯಾಗಿ ನಮಸ್ಕರಿಸುವೆವು ॥೫೦॥

*ಇಲ್ಲಿಗೆ ಹದಿನಾರನೆಯ ಅಧ್ಯಾಯವು ಮುಗಿಯಿತು*

# ಹದಿನಾರನೆಯ ಅಧ್ಯಾಯದ ತಾತ್ಪರ್ಯ

ಮೈತ್ರೇಯರು - ಹೇ ವಿದುರ ! ದಿತಿಗೆ ಅಸುರಾರಿಯು ತನ್ನ ಮಕ್ಕಳನ್ನು ಕೊಲ್ಲುವನೆಂಬ ಶಂಕೆಯು ಪ್ರಬಲಿಸಿತು. ಇತರ ತೇಜಸ್ವಿಗಳ ತೇಜಸ್ಸನ್ನು ಹೋಗಲಾಡಿಸುವ ಆ ಕಶ್ಯಪರ ವೀರ್ಯವನ್ನು ಒಂದುನೂರು ವರ್ಷಗಳ ಕಾಲ ಗರ್ಭದಲ್ಲಿ ಧಾರಣಮಾಡಿದಳು. ಲೋಕಗಳಲ್ಲೆಲ್ಲ ಬೆಳಕು ಹೋಗಿ ಕತ್ತಲೆ ಕವಿಯಿತು. ಲೋಕಪಾಲಕರಾದ ಇಂದ್ರಾದಿಗಳು ಇದನ್ನು ಪರಿಹರಿಸಲು ಸಾಮರ್ಥ್ಯವಿಲ್ಲದವರಾದರು. ಆಗವರು ಬ್ರಹ್ಮದೇವರಲ್ಲಿಗೆ ಬಂದು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿರುವ ಕತ್ತಲೆಯನ್ನು ಅವರಿಗೆ ವಿಜ್ಞಾಪಿಸಿಕೊಂಡರು.

ದೇವತೆಗಳು - 'ದೇವ ದೇವ', ನಾವು ಅತಿಶಯವಾಗಿ ಉದ್ವೇಗಗೊಂಡಿರುವ ಈ ಕತ್ತಲೆಯನ್ನು ಸಮರ್ಥನಾದ ನೀನು ತಿಳಿದೇ ಇರುವೆ. ನೀನೇ ಜಗತ್ತನ್ನು ರಕ್ಷಿಸುವವನು. ಲೋಕಪಾಲಕರಲ್ಲಿ ಅಗ್ರೇಸರನು. ಹಿಂದಿನ ಮತ್ತು ಮುಂದಿನ (ಅಂದಮೇಲೆ ಈಗಿನ) ಜೀವರ ಮನಸ್ಸಿನಲ್ಲಿರುವುದನ್ನು ನೀನು ಬಲ್ಲೆ. ಉತ್ತಮರ ಮತ್ತು ಅಧಮರ ಮನಸ್ಸಿನ ಭಾವಗಳೂ ನಿನಗೆ ತಿಳಿಯದೆ ಇಲ್ಲ. ನಿನ್ನ ಈ ವಿಶಿಷ್ಟ ಜ್ಞಾನವು ಎಂದೂ ನಶಿಸುವುದಿಲ್ಲ. ಶ್ರೀಹರಿಯ ಅನುಗ್ರಹದಿಂದ ಈ ಜಗತ್ತೆಲ್ಲವನ್ನೂ ನೀನು ಬಲ್ಲೆ. ಅವನ ಆಜ್ಞೆಯಂತೆ ರಜಸ್ಸು ಮೊದಲಾದ ಗುಣಗಳನ್ನು ಹೊಂದಿರುವ ನಿನ್ನ ಜ್ಞಾನಕ್ಕೆ ಆ ಗುಣಗಳು ಎಂದೂ ಅಡ್ಡಿ ಬರಲಾರವು. ಈ ವಿಚಿತ್ರ ಬ್ರಹ್ಮಾಂಡವನ್ನು ಸೃಷ್ಟಿಸಿದ ನಿನ್ನ ಜ್ಞಾನವು ಅಗಾಧವಾದುದು. ಅವ್ಯಕ್ತನಾದ ಶ್ರೀಹರಿಯ ಮಗನಾದ ನಿನ್ನಲ್ಲಿ ಶ್ರೀಹರಿಯ ಅನುಗ್ರಹವು ಎಷ್ಟೆಂದು ಹೇಳೋಣ. ನೀನು ಸಮಸ್ತ ಜೀವರಿಗೂ ದೇಹಗಳನ್ನು ಕೊಟ್ಟು ಸೃಷ್ಟಿಸುವವನು; ಶ್ರೀಹರಿಯನ್ನೇ ನಿರಂತರ ಧ್ಯಾನಮಾಡುವವನು; ನಿನ್ನಲ್ಲಿ ಎಲ್ಲ ಜಗತ್ತೂ ಪೋಣಿಸಿಕೊಂಡಿರುವುದು; ಸಕಲ

ಜೀವರಿಗಿಂತ ನೀನೇ ಉತ್ತಮನು; ಕಾರ್ಯಕಾರಣಪ್ರಪಂಚದಲ್ಲಿ ಎಲ್ಲೆಡೆಯಲ್ಲಿಯೂ ವ್ಯಾಪ್ತನಾಗಿ ಮುಕ್ತಾಮುಕ್ತ ಜೀವರಿಗೆ ಸುಖವನ್ನು ನೀನೇ ಕೊಡುವೆ. ಇಂತಹ ನೀನು ಅಷ್ಟಾಂಗಸಿದ್ಧಿಯನ್ನು ಪಡೆದು, ಶ್ವಾಸ, ಇಂದ್ರಿಯ ಮನಸ್ಸುಗಳನ್ನು ಗೆದ್ದು ಶ್ರೀಹರಿಯನ್ನೇ ಸರ್ವೋತ್ತಮನೆಂದು ಉಪಾಸಿಸುವ ಭಗವದ್ಭಕ್ತರ ವಿಷಯದಲ್ಲಿ ಪ್ರಸನ್ನನಾಗುವೆ. ಹೀಗೆ ನಿನ್ನನ್ನು ಪ್ರಸನ್ನೀಕರಿಸಿಕೊಂಡ ಭಗವದ್ಭಕ್ತರಿಗೆ ಪರಾಭವವೆಲ್ಲಿ ಬಂತು ? ನಿನ್ನ ಮಾತುಗಳೆನಿಸುವ ವೇದವಾಕ್ಯಗಳಂತೆ ನಡೆಯುವ ಸಜ್ಜನರಿಗೆ ನೀನೇ ಶ್ರೀಹರಿಯ ಇಚ್ಛೆಯಂತೆ ಯೋಗ್ಯಫಲಗಳನ್ನು ಕೊಡುವೆ. ಮೂಗುದಾರದಿಂದ ಬದ್ಧವಾದ ಹಸುವಿನಂತೆ ಎಲ್ಲರೂ ನಿನ್ನ ನಿಯಮಕ್ಕೆ ಬದ್ಧರು. ಎಲ್ಲರೂ ನಿನ್ನನ್ನು ಪೂಜಿಸುವರು. ಆದ್ದರಿಂದ ಜೀವರಲ್ಲೆಲ್ಲ ನೀನೇ ಮುಖ್ಯನು. ನಿನಗೆ ನಮಸ್ಕಾರ. ದಿತಿದೇವಿಯ ಗರ್ಭದಿಂದುಂಟಾದ ಕತ್ತಲೆಯಿಂದ ನಮ್ಮ ಕರ್ಮಗಳನ್ನು ನಾವು ಮಾಡಲು ಸಾಧ್ಯವಿಲ್ಲ. ಬ್ರಹ್ಮದೇವ, ನೀನೇ ನಮಗೆ ಒಳ್ಳೆಯದನ್ನು ಮಾಡಬೇಕು. ಕರುಣಾಪೂರ್ಣ ಕಟಾಕ್ಷದಿಂದ ನಮ್ಮ ಕಡೆ ನೋಡು. ಕಶ್ಯಪರು ತಮ್ಮ ತೇಜಸ್ಸನ್ನು ದಿತಿಯಲ್ಲಿಟ್ಟಿರುವರು. ಸಮಿತ್ತುಗಳಿಂದ ಅಗ್ನಿಯು ಪ್ರಜ್ವಲಿಸುವಂತೆ ದಿನದಿನಕ್ಕೂ ಈ ಗರ್ಭವು ಬೆಳೆದು ಎಲ್ಲ ಗ್ರಹಗಳ ತೇಜಸ್ಸನ್ನೂ ತಡೆದು ದಿಕ್ಕುಗಳನ್ನೇ ಕಗ್ಗತ್ತಲೆಯಿಂದ ತುಂಬುತ್ತಿದೆ. ಇದಕ್ಕೆ ಪರಿಹಾರವನ್ನು ನೀನೇ ಮಾಡಬೇಕು' ಎಂದರು.

ವಿದುರ ! ವೇದಪ್ರತಿಪಾದ್ಯರಾದ ಬ್ರಹ್ಮದೇವರು ಇದನ್ನು ಕೇಳಿ ನಕ್ಕುಬಿಟ್ಟರು. ದೇವತೆಗಳನ್ನು ಸಂತೋಷಪಡಿಸುವವರಾಗಿ ಅರ್ಥಗರ್ಭಿತವಾದ ಮಾತುಗಳಿಂದ ಉತ್ತರಿಸಿದರು. ದೇವತೆಗಳಿರಾ ! ನಿಮಗಿಂತ ಮುಚೆಯೇ ನನ್ನ ಮನಸ್ಸಿನಿಂದ ಸನಕ, ಸನಂದನ, ಸನತ್ಕುಮಾರ ಮತ್ತು ಸನತ್ಸುಜಾತರೆಂಬ ನಾಲ್ವರು ಕುಮಾರರನ್ನು ಸೃಷ್ಟಿಸಿದ್ದೆನು. ಅವರು ಲೌಕಿಕವಿಷಯಗಳಲ್ಲಿ ಆಸಕ್ತರಲ್ಲ. ಆದರೂ ಅಂತರಿಕ್ಷ ಮಾರ್ಗದಿಂದ ಲೋಕಗಳನ್ನು ಸುತ್ತುತ್ತಿದ್ದರು.

'ಒಂದು ದಿನ ನಿರ್ದೋಷನಾದ ಶ್ರೀಹರಿಯ ವೈಕುಂಠಲೋಕಕ್ಕೆ ಹೋದರು. ಆ ಲೋಕವನ್ನು ವಂದಿಸದ ಜನರಿಲ್ಲ. ಪ್ರತಿದಿನವೂ ಶ್ರೀಹರಿಯು ಸುಪ್ರೀತನಾಗಲಿ ಎಂಬ ಭಗವದರ್ಪಣ ಬುದ್ಧಿಯಿಂದ ಧರ್ಮಕಾರ್ಯಗಳನ್ನು ಮಾಡಿ ಶ್ರೀಹರಿಯನ್ನು ಆರಾಧಿಸಿದ ಜನರು ಈ ಲೋಕವನ್ನು ಸೇರುವರು. ಅಲ್ಲಿರುವವರು ಶ್ರೀಹರಿಯ ರೂಪಕ್ಕೆ ಸದೃಶವಾದ ರೂಪದಿಂದ ವಿರಾಜಿಸುವರು. ಸರ್ವೋತ್ತನಾದ ಶ್ರೀಹರಿಯು ಎಲ್ಲರಿಗೂ ಆಶ್ರಯನು. ಅನಂತಾನಂತಪೂಪಳುಳ್ಳವನು. ಸಕಲ ವೇದಗಳೂ ಇವನ ಅನಂತಗುಣಗಳನ್ನು ಗಾನಮಾಡುತ್ತವೆ. ಇಂತಹ ಶ್ರೀಹರಿಯು ರಜಸ್ತಮೋಗುಣಗಳನ್ನು ಬಿಟ್ಟು ಶುದ್ಧ ಸತ್ವಗುಣವನ್ನು ಸ್ವೀಕರಿಸಿ ತನ್ನ ಭಕ್ತರ

ಸರ್ವಸ್ವವನ್ನೂ ರಕ್ಷಿಸುತ್ತ ಅಲ್ಲಿ ನೆಲಸಿ ವ್ಯಕ್ತನಾಗಿರುವನು. ಅಲ್ಲಿ ನಿಃಶ್ರೇಯಸವೆಂಬ ಉದ್ಯಾನವನವಿದೆ. ಅದರಲ್ಲಿರುವ ಗಿಡಗಳೆಲ್ಲವೂ ಬೇಡಿದವರ ಇಷ್ಟಾರ್ಥವನ್ನು ಪೂರೈಸುವುವು. ಯಾವಾಗಲೂ ಎಲ್ಲ ಋತುಗಳ ಕಾಂತಿಯನ್ನೂ ಹೊಂದಿರುವುವು. ಪರಬ್ರಹ್ಮವಸ್ತುವೇ ವನದ ರೂಪದಲ್ಲಿ ಇದ್ದಂತೆ ಇರುವುದಾವನ. ಆ ವೈಕುಂಠದಲ್ಲಿ ಮುಕ್ತಸ್ಥಾನ, ಅಮುಕ್ತಸ್ಥಾನವೆಂಬ ಎರಡು ಭಾಗಗಳು. ಅಮುಕ್ತರು ಮುಕ್ತಸ್ಥಾನಕ್ಕೆ ಹೋಗುವಂತಿಲ್ಲ. ತಮ್ಮ ಸಾಧನೆಯನ್ನು ಮುಗಿಸಿಕೊಂಡು ಕರ್ಮಕ್ಷಯಕ್ಕಾಗಿ ಕಾದಿರುವರು. ಇವರು ಆ ವನದಲ್ಲಿ ನೀರಿನ ದಡದಲ್ಲಿ ಬೆಳೆದಿರುವ ವಾಸಂತೀಲತೆಯ ಪುಷ್ಪಗಳ ವಾಸನೆಯನ್ನು ಹೊತ್ತು ತರುವ ಗಾಳಿಯಿಂದ ಮುಗ್ಧರಾಗುವರು. ಆದರೂ ಕೆಲವು ವೇಳೆ ಆ ವಾಯುವನ್ನೂ ಗಮನಿಸದೆ ತಮ್ಮ ತಮ್ಮ ಸ್ತ್ರೀಯರೊಂದಿಗೆ ವಿಮಾನದಲ್ಲಿ ಕುಳಿತು ಶ್ರೀಹರಿಯ ಚರಿತ್ರೆಯನ್ನು ಗಾನಮಾಡುವರು. ಪರಮಾತ್ಮನ ಚರಿತ್ರೆಯು ಜಗತ್ತಿನ ಜೀವರ ಪಾಪರಾಶಿಗಳನ್ನು ಹೋಗಲಾಡಿಸುವ ಮಹಾಮಹಿಮೆಯುಳ್ಳದ್ದು. ಅಲ್ಲಿರುವ ತಿರ್ಯಗ್ಜಂತುಗಳೂ ಸ್ಥಾವರಗಳೂ ಸಹ ಜ್ಞಾನದಿಂದ ಶ್ರೀಹರಿಯನ್ನು ಒಲಿಸಿಕೊಂಡು ಅದರ ಫಲವಾಗಿ ವೈಕುಂಠವನ್ನು ಸೇರಿದವುಗಳು. ಆದ್ದರಿಂದ ಅಲ್ಲಿರುವ ದುಂಬಿಗಳೂ ಶ್ರೀಹರಿಯ ಪೂಜಾಕಾಲವನ್ನರಿತು ಅವನ ಚರಿತ್ರೆಯನ್ನು ಸಪ್ತಸ್ವರಗಳಿಂದ ಗಾನಮಾಡುವವು. ಆಗ ಪಾರಿವಾಳ, ಕೋಗಿಲೆ ಮೊದಲಾದ ಹಕ್ಕಿಗಳೂ ಉಚ್ಚವಾದ ಸ್ವರದಲ್ಲಿ ತ್ರಿಮಾತ್ರಾಕಾಲದಲ್ಲಿ ಕಲಕಲಶಬ್ದಮಾಡುತ್ತಾ ಗಾನಮಾಡುವುವು. ಆಗ ಮುಕ್ತರಾದ ಭಕ್ತರು ಮಂದಾರ ಮೊದಲಾದ ವಿವಿಧ ಪುಷ್ಪಗಳಿಂದಲೂ ತುಳಸೀದಳಗಳಿಂದಲೂ ಶ್ರೀಹರಿಯನ್ನು ಪೂಜಿಸುವರು. ಶ್ರೀಹರಿಯು ಅವುಗಳಲ್ಲೆಲ್ಲ ತುಳಸೀದಳಗಳನ್ನು ಮಾತ್ರ ವಿಶೇಷವಾಗಿ ಕೈಯಲ್ಲಿ ಹಿಡಿದು ಮೂಸಿನೋಡುತ್ತ ಅನುಗ್ರಹಿಸಿ ಆಭರಣವಾಗಿ ಧರಿಸುವನು. ಆಗ ಮಿಕ್ಕ ಪುಷ್ಪಾಭಿಮಾನಿ ಜೀವರು (ದೇವತೆಗಳು) ಅಸೂಯೆ ಪಡದೆ 'ತುಳಸಿಯು ತನ್ನನ್ನು ಶ್ರೀಹರಿಯು ಆಘ್ರಾಣಿಸುವಂತೆ ಹೆಚ್ಚು ತಪಸ್ಸುಮಾಡಿ ಒಲಿಸಿಕೊಂಡಿರುವಳೆಂದು' ಅವಳ ತಪಸ್ಸನ್ನು ಹೊಗಳುವರು. ಆ ವೈಕುಂಠಲೋಕದಲ್ಲಿ ಎಲ್ಲೆಲ್ಲಿ ನೋಡಿದರೂ ಆಕಾಶದಲ್ಲಿ ಪದ್ಮರಾಗ, ಇಂದ್ರನೀಲ ಮೊದಲಾದ ರತ್ನಗಳಿಂದ ಬಂಗಾರದಲ್ಲಿ ಮಾಡಿದ ವಿಮಾನಗಳು ತುಂಬಿರುವವು. ಅವುಗಳಲ್ಲಿ ಕುಳಿತಿರುವ ಮುಕ್ತಜೀವರು ಶ್ರೀಹರಿಯ ಪಾದವಂದನೆಗಳಿಂದಲೇ ತೃಪ್ತರಾಗಿರುವರು. ಅವರ ಜೊತೆಯಲ್ಲಿ ಸುಂದರಿಯರಾದ ಮಂದಹಾಸದ ಕಾಂತೆಯರಿದ್ದರೂ ಅವರ ಹಾವಭಾವ ವಿಲಾಸಗಳಿಂದ ಈ ಪುರುಷರ ಮನಸ್ಸು ಕಲುಷಿತವಾಗುವುದಿಲ್ಲ. ಇವರು ಶ್ರೀಹರಿಯನ್ನೇ ನೆನೆಯುತ್ತಿರುವರು. ಹೆಚ್ಚೇನು ! ಪ್ರಪಂಚದಲ್ಲೆಲ್ಲ ಅತ್ಯಂತ ಸುಂದರಿಯಾದವಳು ಲಕ್ಷ್ಮೀದೇವಿ. ಆಕೆಗೆ ಜನನ ಮರಣ

ಮೊದಲಾದ ದೋಷಗಳಿಲ್ಲ. ಆಕೆಯ ಅನುಗ್ರಹವನ್ನು ಸಂಪಾದಿಸಲು ಬ್ರಹ್ಮಾದಿ ದೇವತೆಗಳೆನಿಸಿದ ನಾವು ಉಪಾಸನೆ ಮಾಡುತ್ತೇವೆ. ಇಂತಹ ಲಕ್ಷ್ಮೀದೇವಿಯು ಆ ಶ್ರೀಹರಿಯ ಮನೆಯಲ್ಲಿ ತಾನೇ ತನ್ನ ನೂಪುರಾಲಂಕೃತವಾದ ಕಾಲುಗಳಿಂದ ನಡೆಯುತ್ತಾ ಕನ್ಯೆದಿಲೆಯಿಂದ ಧೂಳು ಹೊಡೆಯುತ್ತಿರುವಳಾಗಿ ಆ ಮನೆಯ ಬಂಗಾರದಲ್ಲಿ ಕಟ್ಟಿದ ಸ್ಪಟಿಕಶಿಲೆಯ ಗೋಡೆಗಳಲ್ಲಿ ಪ್ರತಿಬಿಂಬಿತಳಾಗಿ ಕಾಣುತ್ತಾಳೆ. ಈ ಲಕ್ಷ್ಮೀದೇವಿಯು ತನ್ನ ಕೋಟಿಗಟ್ಟಲೆ ದಾಸಿಯರಿಂದ ಕೂಡಿ ತನ್ನ ಕಮಲವನಕ್ಕೆ ಹೋಗಿ ಅಲ್ಲಿ ತುಳಸೀದಳಗಳಿಂದ ಶ್ರೀಹರಿಯನ್ನು ಪೂಜಿಸುವಳು. ಆಗ ಪಕ್ಕದಲ್ಲಿದ್ದ ಹವಳದ ಕಟ್ಟೆಯ ನಿರ್ಮಲವಾದ ಅಮೃತರಸದ ಭಾವಿಗಳಲ್ಲಿ ಆಕೆಯ ನೆರಳು ಬೀಳುವುದು. ಆ ನೆರಳಿನಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಾ ಲಕ್ಷ್ಮಿಯು ತನ್ನ ಮುಂಗೂದಲುಗಳು ಹರಿದುಹಂಚಾಗದೆ ಸರಿಯಾಗಿರುವುದನ್ನೂ ತನ್ನ ಮೂಗು ಮೇಲಕ್ಕೆ ಎದ್ದಂತಿರುವುದನ್ನೂ ನೋಡಿ ಶ್ರೀಹರಿಯು ತನ್ನ ಮುಖವನ್ನು ಚುಂಬಿಸಿರುವನೆಂದು ತಿಳಿಯುವಳು. (ಶ್ರೀಹರಿಯ ಈ ಕ್ರೀಡೆಗಳು ಲಕ್ಷ್ಮಿಯ ಸಂತೋಷಕ್ಕಾಗಿ) (ಇದರಿಂದ ವೈಕುಂಠಲೋಕವು ಶೂನ್ಯವಲ್ಲವೆಂದು ಹೇಳಿರುವರು)

ಶ್ರೀಹರಿಯು ಎಲ್ಲರ ಪಾಪಗಳನ್ನೂ ಹೋಗಲಾಡಿಸುವವನು. ಆದರೂ ಅವನ ಚರಿತ್ರೆಯನ್ನು ಅನುವಾದ (ಸಂಧಾನ) ಮಾಡದೆ ಅಸುರ ಸ್ವಭಾವದ ಜೀವರು ಯಥಾರ್ಥಜ್ಞಾನವನ್ನು ಹೋಗಲಾಡಿಸುವ ಲೌಕಿಕವಾದ ರತಿವರ್ಣನೆಗಳನ್ನೇ ಕೇಳುತ್ತಾ ಮನನಮಾಡುತ್ತಾ ಇರುವರು. ಇಂತಹವರು ಈ ವೈಕುಂಠವನ್ನು ಸೇರುವುದಿಲ್ಲ. ಅದಕ್ಕೆ ಬದಲು ಆ ಮಂದಭಾಗ್ಯರು ಆ ಕೆಟ್ಟಕಥೆಗಳನ್ನು ಅನುಸಂಧಾನ ಮಾಡಿದುದರ ಫಲವಾಗಿ ಅಂಧಂತಮಸ್ಸನ್ನು ಸೇರುವರು. ಇದನ್ನು ಅವರು ತಪ್ಪಿಸಿಕೊಳ್ಳಲಾಗುವುದಿಲ್ಲ. ಆ ತಮಸ್ಸಿನಲ್ಲಿ ಅವರಿಗೆ ಯಾರೂ ಆಶ್ರಯರು ಇರುವುದಿಲ್ಲ. ಇವರು ಸಾಧನೆಗನುಕೂಲವೆಂದು ದೇವತೆಗಳಿಂದಲೂ ಪ್ರಾರ್ಥಿತವಾದ ಮನುಷ್ಯಯೋನಿಯಲ್ಲಿ ಬಂದಿದ್ದರೂ, ಆ ಜನ್ಮದಲ್ಲಿ ಧರ್ಮಕಾರ್ಯಗಳನ್ನು ಮಾಡಿ ತತ್ವಜ್ಞಾನವನ್ನು ಸಂಪಾದಿಸಬಹುದಾಗಿದ್ದರೂ ಶ್ರೀಹರಿಯ ಆರಾಧನೆಯನ್ನು ಮಾಡುವುದೂ ಇಲ್ಲ, ಅವನ ಜ್ಞಾನವನ್ನು ಉಪದೇಶಿಸುವುದೂ ಇಲ್ಲ, ಅಯೋಗ್ಯರಾದ ಇವರನ್ನು ಶ್ರೀಹರಿಯ ಬಂಧಕಶಕ್ತಿಯೇ ಮೋಹಿತರನ್ನಾಗಿ ಮಾಡುವುದು. ಆದರೆ ವೈಕುಂಠಕ್ಕೆ ಬರುವ ಜೀವರ ಸಾಧನೆಯೇ ಬೇರೆ. ಅವರು ದೇವೋತ್ತಮನಾದ ಶ್ರೀಹರಿಯನ್ನು ನಿರಂತರ ಜನ್ಮಜನ್ಮಗಳಲ್ಲಿ ಸೇವಿಸುವರು. ಅವರು ಯಮಲೋಕಕ್ಕೆ ದೂರರು. ಅವರ ನಡೆನುಡಿಗಳನ್ನು ಕಲಿಯಲು ಎಲ್ಲರೂ ಆಶಿಸುವರು. ಕೀರ್ತಿವಂತರಾದ ಅವರು ಸರ್ವಸ್ವಾಮಿಯಾದ ಶ್ರೀಹರಿಯ

ಕೀರ್ತಿಯನ್ನು ಪರಸ್ಪರ ಹೇಳಿಕೊಳ್ಳುವುದರಲ್ಲಿ ಆಸಕ್ತರಾಗಿ ಮೈಮರೆತು ಕಣ್ಣಿನಿಂದ ಆನಂದಬಾಷ್ಪವು ಧಾರಾಕಾರವಾಗಿ ಸುರಿಯುತ್ತಿರಲು ರೋಮಾಂಚಿತರಾಗಿ ಸುಖಿಸುವರು. ಅವರೇ ಎಲ್ಲ ಲೋಕಗಳಿಂದಲೂ ಉನ್ನತ (ಉತ್ತಮ)ವಾದ ವೈಕುಂಠವನ್ನು ಸೇರುವರು.

'ಈ ವೈಕುಂಠಲೋಕವು ಎಲ್ಲ ಜೀವರಿಂದಲೂ ವಂದ್ಯವಾದುದು. ಅದರಲ್ಲಿ ದೇವತಾಶ್ರೇಷ್ಠರ ಮನೆಗಳ ಗೋಪುರಗಳು ಅನೇಕ ಬಣ್ಣಗಳಿಂದ ಪ್ರಕಾಶಮಾನ-ವಾಗಿರುವುವು. ಅಲ್ಲಿಯೇ ಮುಕ್ತಾಮುಕ್ತಸ್ವಾಮಿಯಾದ ಶ್ರೀಹರಿಯು ತನ್ನ ಮನೆಯೆಂಬ ವಿಶೇಷಾಭಿಮಾನದಿಂದ ವ್ಯಕ್ತನಾಗಿರುವನು. ಹಿಂದೆ ಎಂದೂ ಕಾಣದ ಈ ವೈಕುಂಠಲೋಕವನ್ನು ಸನಕಾದಿಗಳು ತಮ್ಮ ಶ್ರೀಹರಿಯ ಉಪಾಸನಾಬಲದಿಂದ ಸೇರಿದವರಾಗಿ ಅತ್ಯಂತ ಆನಂದಪಟ್ಟರು. ಆ ನಾಲ್ವರು ಕುಮಾರಕರೂ ಒಂದೇ ವಯಸ್ಸಿನವರೇ. ಮುನಿಗಳಾದ ಇವರು ಆ ಏಳು ಪ್ರಾಕಾರದ ವೈಕುಂಠಲೋಕದಲ್ಲಿ ಆರು ಪ್ರಾಕಾರಗಳ ಹೆಬ್ಬಾಗಿಲುಗಳನ್ನು ದಾಟಿ ನಡೆದರು. ಅಲ್ಲಿ ಯಾರೂ ಅವರನ್ನು ತಡೆಯಲಿಲ್ಲ. ಏಳನೆಯ ಪ್ರಾಕಾರದ ಹೆಬ್ಬಾಗಿಲಿಗೆ ಬಂದಾಗ ಅಲ್ಲಿ ದ್ವಾರವನ್ನು ಕಾಯುತ್ತಿದ್ದ ಜಯವಿಜಯರನ್ನು ಕಂಡರು. ಆ ದ್ವಾರಪಾಲಕರು ಕೈಯಲ್ಲಿ ಗದೆಯನ್ನು ಹಿಡಿದಿದ್ದರು. ಬಹು ಬೆಲೆಬಾಳುವ ಕೇಶಾಭರಣ, ಕರ್ಣಾಭರಣ ಮತ್ತು ಕಿರೀಟಗಳಿಂದ ಅಲಂಕೃತರಾಗಿದ್ದರು. ಶ್ಯಾಮವರ್ಣದ ಅವರ ಆ ನಾಲ್ಕು ಕೈಗಳ ಮಧ್ಯದಲ್ಲಿ ವನಮಾಲೆಯು ಹಾರದಂತೆ ಕೊರಳಿನಿಂದ ಇಳಿಬಿದ್ದಿತ್ತು. ಆ ವನಮಾಲೆಯ ರಸವನ್ನು ಪಾನಮಾಡಲು ಬಂದ ದುಂಬಿಗಳು ರಸಪಾನದಿಂದ ಮತ್ತವಾಗಿದ್ದವು. ಅವರ ವಕ್ರವಾದ ಹುಬ್ಬು, ಸ್ಪಷ್ಟವಾಗಿ ಕಾಣುತ್ತಿದ್ದ ಕೆಂಪುಕುಡಿ-ಗಣ್ಣಿನ ನೋಟ, ಇವು ಅವರಿಗೆ ಸ್ವಲ್ಪ ಕೋಪವಿತ್ತೆಂದು ಸೂಚಿಸುತ್ತಿದ್ದುವು. ಅವರು ಒಳಹೋಗುವವರ ಮತ್ತು ಹೊರ ಬರುವವರ ವಿಚಾರಮಾಡುತ್ತಿದ್ದಂತೆ ತೋರುತ್ತಿತ್ತು. ಬಂದಿದ್ದ ಸನಕಾದಿಗಳು ಅವರು ನೋಡುತ್ತಿದ್ದಂತೆಯೇ ಅವರನ್ನು ಕೇಳದೆಯೇ ಆ ಹೆಬ್ಬಾಗಿಲಿನೊಳಕ್ಕೆ ನುಗ್ಗಿದರು. ಹಿತ್ತಾಳೆ ಮತ್ತು ವಜ್ರಶಿಲೆಯ ಬಾಗಿಲುಗಳು ಆರನ್ನೂ ಅವರು ದಾಟಿಬಂದಿದ್ದರು. ಅವರು ಎಲ್ಲೆಲ್ಲಿಯೂ ಅಂತರ್ಯಾಮಿಯಾದ ಶ್ರೀಹರಿಯನ್ನೇ ಕಾಣುವರು. ಆದ್ದರಿಂದಲೇ ಅವರಿಗೆ ಯಾವುದರಲ್ಲೂ ಆಶೆಯಿರಲಿಲ್ಲ. ಅವರನ್ನು ಎಲ್ಲಿಯೂ ಯಾರೂ ತಡೆಯುತ್ತಿರ-ಲಿಲ್ಲ. ಅವರಿಗೆ ಯಾರ ಹೆದರಿಕೆಯೂ ಇರಲಿಲ್ಲ. ವೃದ್ಧರಾದರೂ ಐದು ವರ್ಷದವ-ರಂತೆ ಕಾಣುತ್ತಿದ್ದ ದಿಗಂಬರರಾದ ಆ ಮುನಿಗಳು ಪರಮಾತ್ಮಸ್ವರೂಪವನ್ನು ಚೆನ್ನಾಗಿ ತಿಳಿದವರು. ಆದರೂ ಅವರನ್ನು ಕಂಡ ಜಯವಿಜಯರು, ಅವರು ತಡೆಗೆ

ಅರ್ಹರಲ್ಲದಿದ್ದರೂ, ತಮ್ಮ ಕೈಯಲ್ಲಿದ್ದ ದಂಡದಿಂದ ಅವರನ್ನು ತಡೆದರು. ಅವರ ಪ್ರಭಾವವನ್ನು ಈ ದ್ವಾರಪಾಲಕರು ಲೆಕ್ಕಿಸಲಿಲ್ಲ. ಜಯ ವಿಜಯರಿಗೆ ತಾತ್ಕಾಲಿಕ-ವಾಗಿ ಶ್ರೀಹರಿಗೆ ವಿರುದ್ಧವಾಗಿ ನಡೆಯುವ ಸ್ವಭಾವ ಬ್ರಹ್ಮದೇವರ ಶಾಪದ ಫಲವಾಗಿ ಬಂದಿತ್ತು. ಅದು ಕೃಷ್ಣಾವತಾರದವರೆಗೂ ಮುಂದುವರೆಯುತ್ತಿತ್ತು. ಆದ್ದರಿಂದಲೇ ದ್ವಾರಪಾಲಕರು ಸನಕಾದಿಗಳನ್ನು ತಡೆದರು.

ಸನಕಾದಿಗಳು ಪೂಜ್ಯತಮರು. ಆದರೂ ಮಿಕ್ಕ ದೇವತೆಗಳು ನೋಡುತ್ತಿದ್ದಂತೆಯೇ ಶ್ರೀಹರಿಯ ದ್ವಾರಪಾಲಕರು ಅವರನ್ನು ತಡೆದರು. ಅವರು ಅತ್ಯಂತ ಸ್ನೇಹಿತನೆನಿಸಿದ ಶ್ರೀಹರಿಯನ್ನು ನೋಡಲು ಬಂದಿದ್ದರು. ಅವರ ಈ ಇಚ್ಛೆಗೆ ಅಡ್ಡಿಬಂದುದಕ್ಕಾಗಿ ಅವರಿಗೆ ಕೋಪಬಂದಿತು. ಕಣ್ಣುಗಳು ಕೆಂಪೇರಿದುವು. ಸಿಟ್ಟಿನಿಂದ ಅವರು, ಈ ವೈಕುಂಠಕ್ಕೆ ಬರಬೇಕಾದರೆ ಅತಿಶಯವಾಗಿ ಪರಮಾತ್ಮನನ್ನು ಸೇವಿಸಿರಬೇಕು. ಅಂದಮೇಲೆ ಶ್ರೀಹರಿಯ ಭಕ್ತರನ್ನು ಒಂದೇ ರೀತಿಯಲ್ಲಿ ಕಾಣಬೇಕೇ ವಿನಹ ಅವರಲ್ಲಿ ಬೇಡದವರು ಬೇಕಾದವರು ಎಂಬ ವ್ಯತ್ಯಾಸ ಮಾಡುವಂತಿಲ್ಲ. ಹಾಗೆ ಮಾಡುವುದು ತಾಮಸಬುದ್ಧಿಯು. ಅದಕ್ಕೆ ಇಲ್ಲಿ ಎಡೆಇಲ್ಲ. ಶ್ರೀಹರಿಯು ಅತ್ಯಂತ ಶಾಂತಮೂರ್ತಿಯು; ಆನಂದಸ್ವರೂಪಿ; ಪರಿಪೂರ್ಣನು. ಅವನಿಗೆ ಯಾರಲ್ಲಿಯೂ ವೈರವಿಲ್ಲ. ಅಂತರ್ಯಾಮಿಯಾದ ಅವನಿಗೆ ಪ್ರತಿದ್ವಂದ್ವಿಗಳಿಲ್ಲ. ಅಪ್ರಾಕೃತರೂಪಿಯಾದ ಅವನನ್ನು ಯಾವನೂ ತೊಂದರೆ-ಪಡಿಸಲಾರ. ಹೀಗಿರುವಾಗ ಯಾರ ವಿಷಯದಲ್ಲಿಯೂ ಸಂದೇಹಪಡಬೇಕಾಗಿಲ್ಲ. ಮುಕ್ತಾಮುಕ್ತರಲ್ಲಿ ಅಂತರ್ಯಾಮಿಯಾಗಿರುವ ಶ್ರೀಹರಿಯ ರೂಪಗಳಲ್ಲಿ ಭೇದವಿಲ್ಲ. ಮಹಾಕಾಶ ಘಟಾಕಾಶಗಳಂತೆ ಅಂತರ್ಯಾಮಿಯಾದ ಭಗವದ್ರೂಪ-ಗಳೂ ವ್ಯಾಪ್ತವಾದ ಬಾಹ್ಯರೂಪವೂ ಒಂದೇ ಎಂಬುದು ಜ್ಞಾನಿಗಳ ಮತ. ನೀವು ದೇವತೆಗಳಂತೆ ಕಂಡರೂ ಈ ಭಗವದ್ರೂಪಗಳಲ್ಲಿ ಭೇದವನ್ನು ತಿಳಿದಿರುವಿರೇನು? ಶ್ರೀಹರಿಗೂ ಮತ್ತೊಬ್ಬರಿಂದ ಭಯವುಂಟೆಂಬ ನಿಮ್ಮ ಅಜ್ಞಾನಕ್ಕೆ ಏನು ಹೇಳೋಣ! ಭಗವದ್ರೂಪಗಳಲ್ಲಿ ಭೇದವನ್ನು ತಿಳಿದವನು ತಮಸ್ಸಿಗೇ ಸಲ್ಲುವನು. ಕಪಟಬುದ್ಧಿಗಳಾದ ನೀವು ಹೀಗೆ ತಿಳಿದುದು ಯುಕ್ತವೆಂದು ನಮಗನಿಸುವುದಿಲ್ಲ. ಈ ಅಪರಾಧಕ್ಕಾಗಿ ನೀವು ಶ್ರೀಹರಿಗೆ ಶತ್ರುಗಳೆನಿಸುವ ಮೂರು ದೇಹಗಳನ್ನು ಹೊಂದಿರಿ'ಎಂದು ಶಪಿಸಿದರು.

ಬ್ರಹ್ಮಶಾಪ ಯಾವ ಅಸ್ತ್ರಗಳಿಂದಲೂ ನಿವಾರಿಸಲ್ಪಡತಕ್ಕದ್ದಲ್ಲ. ಸಜ್ಜನರಾದ ಜಯವಿಜಯರಿಗೆ ಈ ಭಯಂಕರ ಶಾಪವನ್ನು ಕೇಳಿ ಬಹು ಭಯವಾಯಿತು. ಅತ್ಯಂತ ಕಾತುರತೆಯಿಂದವರು ಸನಕಾದಿಗಳ ಪಾದಕ್ಕೆ ಬಿದ್ದರು. 'ಪೂಜ್ಯರೆ, ನಮ್ಮ

ಅಪರಾಧಕ್ಕೂ ಮೀರಿದ ಶಿಕ್ಷೆಯನ್ನು ತಾವು ವಿಧಿಸಿದ್ದೀರಿ. ಇದರಿಂದ ನಾವು ಬ್ರಹ್ಮ ಮೊದಲಾದ ದೇವತೆಗಳನ್ನು ತಿರಸ್ಕರಿಸಿದ್ದರೂ ಅದಕ್ಕೂ ಶಿಕ್ಷೆಯಾದಂತಾಯಿತು. ನಾವೇನೋ ತಮ್ಮ ಶಾಪದ ಫಲವಾಗಿ ಅಸುರದೇಹಗಳನ್ನು ನಮ್ಮ ಅಂಶಗಳಿಂದ ಹೊಂದುತ್ತೇವೆ. ಆದರೆ ವೈಕುಂಠದಲ್ಲಿ ಇರುವ ಅಂಶಿಗಳಾದ ನಮಗೆ ಭಗವಂತನ ಯಥಾರ್ಥ ಸ್ಮರಣೆಯನ್ನು ಹಾಳುಮಾಡುವ ಅಜ್ಞಾನವು ಬರದಂತೆ ತಾವು ಅನುಗ್ರಹಿಸಬೇಕು' ಎಂದು ಬೇಡಿಕೊಂಡರು.

ಮನನಶೀಲರಾದ ಪರಮಹಂಸರೂ ಹುಡುಕಬೇಕಾದ ಪಾದಗಳುಳ್ಳವನು ಶ್ರೀಹರಿ. ಪರಮಭಕ್ತರಾದ ಸನಕಾದಿಗಳಲ್ಲಿ ತನ್ನವರು ಮಾಡಿದ ಅಪರಾಧವನ್ನು ಕೇಳಿ ಅವನು ಲಕ್ಷ್ಮಿಯೊಡನೆ ಮುಕ್ತಸ್ಥಾನದಿಂದ ಹೊರಟು ಸನಕಾದಿಗಳಿದ್ದ ಏಳನೆಯ ಬಾಗಿಲಬಳಿಗೆ ಬಂದನು. ಇದಕ್ಕಾಗಿ ಅವನು ಯಾವ ವಾಹನವನ್ನೂ ಉಪಯೋಗಿಸಿಕೊಳ್ಳಲಿಲ್ಲ. ಭಕ್ತರು ಏಕಾಗ್ರಚಿತ್ತದಿಂದ ತಿಳಿಯುವ ತನ್ನ ಸಚ್ಚಿದಾನಂದರೂಪವನ್ನು ಸನಕಾದಿಗಳ ಕಣ್ಣಿಗೆ ಕಾಣುವಂತೆ ಮಾಡಿದನು. ಸನಕಾದಿಗಳಿಗೆ ಬಂದಿದ್ದ ಕೋಪವು ಹೋಯಿತು. ಹಾಗೆ ಕಣ್ಣಿಗೆ ಬಿದ್ದ ಶ್ರೀಹರಿಯ ವೈಭವವನ್ನು ಅವರು ನೋಡುತ್ತ ಭಕ್ತಿ ಪರವಶರಾದರು. ಹಂಸದಂತೆ ಬೆಳ್ಳಗಿರುವ ಚಾಮರಗಳ ಗಾಳಿಯಿಂದ ಶ್ರೀಹರಿಯ ಶ್ವೇತಛತ್ರವು ಆಡುತ್ತಿತ್ತು. ತುಂಬು ಪ್ರಸನ್ನವಾದ ಮುಖ. ಆಕರ್ಷಣೀಯವಾದ ತೇಜಃಪುಂಜವಾದ ದೇಹ. ಅವನ ನೋಟದಲ್ಲಿ ಸ್ನೇಹವು ತುಂಬಿ ಭಕ್ತರ ಹೃದಯದಲ್ಲಿ ಸ್ಪರ್ಶಸುಖವನ್ನು ತರುತ್ತಿತ್ತು. ವಿಶಾಲವಾಗಿಯೂ ಕಪ್ಪಗೂ ಇರುವ ಅವನ ವಕ್ಷಸ್ಸಿನಲ್ಲಿ ಶ್ರೀವತ್ಸರೂಪದಲ್ಲಿ ಲಕ್ಷ್ಮಿಯು ನೆಲಸಿದ್ದಳು. ಕಂಠದಲ್ಲಿ ಬ್ರಹ್ಮದೇವರು ಕೌಸ್ತುಭಮಣಿಯಾಗಿ ಸೇವೆಸಲ್ಲಿಸಿದ್ದರು. ಅವನ ವಿಶಾಲವಾದ ನಿತಂಬಪ್ರದೇಶವು ಪೀತಾಂಬರದಿಂದ ಆವೃತವಾಗಿತ್ತು. ಅದರಲ್ಲಿ ಸಾವಿರಾರು ಎಳೆಗಳುಳ್ಳ ನಡುಪಟ್ಟಿಯನ್ನು ಧರಿಸಿದ್ದನು. ಅವನು ಹಾಕಿದ್ದ ವನಮಾಲೆಯಲ್ಲಿ ಕುಳಿತು ದುಂಬಿಗಳು ಝೇಂಕರಿಸುತ್ತಿದ್ದವು. ಸುಂದರವಾದ ಮುಂಗೈಯಲ್ಲಿ ಬಳೆಗಳಿದ್ದವು. ಎಡಗೈಯನ್ನು ಗರುಡನ ಹೆಗಲ ಮೇಲಿಟ್ಟು ಬಲಗೈಯಿಂದ ಕಮಲವನ್ನು ಆಡಿಸುತ್ತಿದ್ದನು. ಮಿಂಚನ್ನೂ ತಿರಸ್ಕರಿಸುವ ಕಿವಿಯ ಆಭರಣಗಳು ಅವನ ಕೆನ್ನೆಗಳಲ್ಲಿ ಅಲಂಕೃತವಾಗಿದ್ದವು. ಎತ್ತರವಾದ ಮೂಗು. ಸುಂದರವಾದ ಮುಖ. ರತ್ನಮಯಾವಾದ ಕಿರೀಟ. ಬಹು ಬೆಲೆ ಬಾಳುವ ಹಾರವು ಅವನ ಎರಡು ತೋಳುಗಳ ನಡುವೆ ಹಾರಾಡುತ್ತಿತ್ತು. ಲಕ್ಷ್ಮೀದೇವಿಯೂ ಸಹ ಈ ರೂಪವು ಈಗ ತಾನೇ ಕಲ್ಪಿತವಾಯಿತೆಂದು ತಿಳಿಯುವುದಲ್ಲ. ಶಿರಸ್ಸಿನಿಂದ ಹಿಡಿದು ಕಾಲಿನವರೆಗೂ ಇರುವ ಈ ರೂಪವು ಇಷ್ಟೇ ಎಂದು ನಾನು ತಿಳಿದಿದ್ದೇನೆ

ಎನ್ನುವುದಲ್ಲ. ಅನಾದಿನಿತ್ಯವೂ ಅಪರಿಮಿತವೂ ಆದರೂಪ. ಭಕ್ತರು ಮನಸ್ಸಿನಲ್ಲಿಯೇ ಅಪರೋಕ್ಷದಿಂದ ಕಾಣುವ ರೂಪವೇ ಅದು. ಹೆಚ್ಚೇನು. ಅತ್ಯಂತ ಸುಂದರವಾ-ದುದು ಆ ರೂಪ. ಇದನ್ನೇ ಬ್ರಹ್ಮರುದ್ರಾದಿ ಎಲ್ಲ ದೇವತೆಗಳಿಗೂ ಶ್ರೀಹರಿಯು ಅವರ ಭಕ್ತಿಯ ಫಲವಾಗಿ ತೋರಿಸಿದ್ದನು. ಇಂತಹ ಸಚ್ಚಿದಾನಂದ ರೂಪನಾದ ಶ್ರೀಹರಿಯನ್ನು ಕಂಡ ಸನಕಾದಿಗಳಿಗೆ ಎಷ್ಟು ನೋಡಿದರೂ ತೃಪ್ತಿಯಾಗಲಿಲ್ಲ. ಸಂತೋಷಭರಿತರಾದ ಅವರು ಶ್ರೀಹರಿಗೆ ಸಾಷ್ಟಾಂಗಪ್ರಣಾಮ ಮಾಡಿದರು.

ಈ ಬಗೆಯ ಶ್ರೀಹರಿಯ ರೂಪವನ್ನು ಅವರು ಯಾವಾಗಲೂ ತಮ್ಮ ಹೃದಯದಲ್ಲಿ ಕಾಣುತ್ತಿದ್ದರು. ಆದರೂ ಈಗ ಶ್ರೀಹರಿಯ ಪಾದಾರವಿಂದಗಳ ಪರಾಗದಿಂದ ಕೂಡಿದ ತುಲಸಿಯ ಮಕರಂದದಿಂದ ಕೂಡಿದ ಮಂದವಾಯುವು ಅವರ ಮೂಗಿನ ರಂಧ್ರಗಳ ಮೂಲಕ ಒಳಗೆ ಹೋದಕೂಡಲೆ ಅವರ ಮನಸ್ಸು ವಿಕಾಸಹೊಂದಿತು. ಮೈನವಿರೆದ್ದಿತು. ಎತ್ತರವಾದ ಆ ಶ್ರೀಹರಿಯ ಬಾಹ್ಯರೂಪವನ್ನು ನೋಡುತ್ತಿದ್ದ ಗಿಡ್ಡರಾದ ಅವರು ಮುಖವನ್ನು ಮೇಲಕ್ಕೆತ್ತಿ ಶ್ರೀಹರಿಯ ಮಂದಹಾಸಯುಕ್ತ ಮುಖವನ್ನು ನೋಡಿದ್ದರು. ತಾವು ಧನ್ಯರೆಂದು ತಿಳಿದು ಮುಖವನ್ನು ತಗ್ಗಿಸಿ ಕೆಂಪಗಿರುವ ಉಗುರುಗಳಿಂದ ಅಲಂಕೃತವಾಗಿದ್ದ ಪಾದಗಳನ್ನು ಕಂಡರು ಹಾಗೆಯೇ ತಮ್ಮ ಅಂತಸ್ಥನಾದ ಶ್ರೀಹರಿಗೂ ಬಾಹ್ಯದಲ್ಲಿ ಕಂಡ ಶ್ರೀಹರಿಗೂ ಭೇದವಿಲ್ಲವೆಂದು ಉಪಾಸಿಸಿದರು. ಸದ್ಗತಿಯನ್ನು ಹೊಂದಲು ಬಯಸುವ ಮುಮುಕ್ಷುಗಳು ಶ್ರೀಹರಿಯನ್ನು ಭಕ್ತಿಜ್ಞಾನಗಳಿಂದ ಉಪಾಸನೆ ಮಾಡುವರು. ಪರಿಪೂರ್ಣನೆಂದು ತಿಳಿಯುವರು. ಶ್ರೀಹರಿಯ ಗುಣಗಳು ಸಹಜವಾದುವು. ಮತ್ತೆ ಯಾರಲ್ಲಿಯೂ ಅಂತಹ ಗುಣಗಳನ್ನು ಕಾಣುವುದು ಸಾಧ್ಯವಿಲ್ಲ. ಅಂತಹ ಸರ್ವೋತ್ತಮರೂಪವನ್ನು ಕಂಡ ಅವರು 'ದೇವ ದೇವ !' ನೀನು ದುರಾತ್ಮರ ಹೃದಯದಲ್ಲಿಯೂ ಇರುವೆ ಆದರೂ ಅವರಿಗೆ ನಿನ್ನನ್ನು ತೋರಗೊಡುವುದಿಲ್ಲ. ಅನಂತ ಮಹಿಮನಾದ ನೀನು ಇಂದು ನಮ್ಮ ಕಣ್ಣಿಗೆ ಕಾಣಿಸಿರುವೆ. ನಮ್ಮ ತಂದೆಯಾದ ಬ್ರಹ್ಮದೇವರು ಯಾವ ಲಕ್ಷಣಗಳಿಂದ ನಿನ್ನನ್ನು ನಮಗೆ ಉಪದೇಶಿಸಿದ್ದರೋ, ಯಾವ ರೂಪದಿಂದ ನೀನು ನಮ್ಮ ಮನಸ್ಸಿನಲ್ಲಿ ವ್ಯಕ್ತನಾಗುತ್ತಿದ್ದೆಯೋ ಅದೇ ರೂಪದಿಂದ ಇಂದು ಹೊರಗೂ ಕಾಣಿಸಿರುವೆ. ನೀನೀಗ ಸತ್ವಗುಣವನ್ನು ಪರಿಗ್ರಹಿಸಿ ಲೋಕವನ್ನು ಸಂತೋಷಪಡಿಸುತ್ತಿದ್ದೀಯೆ. ನಿನ್ನ ಮಹಾಮಹಿಮೆಯನ್ನು ಮನಗಂಡ, ವಿರಕ್ತರಾದ ಜ್ಞಾನಿಗಳು ನಿನ್ನಲ್ಲಿ ಅನುರಕ್ತರಾಗಿ ಉಪಾಸನೆ ಮಾಡಿ ನಿನ್ನನ್ನು ಹೃದಯದಲ್ಲಿ ಕಾಣುವರು. ಅಂತಹ ಪರಮಾತ್ಮನೇ ನೀನೆಂದು ನಾವು ತಿಳಿದಿದ್ದೇವೆ. ನಿನ್ನ ಏಕಾಂತಭಕ್ತರು ಮೋಕ್ಷವನ್ನು ಅಪೇಕ್ಷಿಸುವ

ಭಕ್ತರಿಗಾಗುವ (ಅಪೂರ್ಣ) ಆನಂದದ ಮೋಕ್ಷವನ್ನೂ ಮುಖ್ಯವೆಂದು ಬಗೆಯದೆ ನಿನ್ನ ಪಾದಾರವಿಂದದ ಸೇವೆಯಲ್ಲಿಯೇ ಮಗ್ನರಾಗಿರುವರು. ಇವರಿಗೆ ಮುಕ್ತಿಯಲ್ಲಿ ಅತಿಶಯ (ಪೂರ್ಣ)ವಾದ ಆನಂದವು ಅದರ ಫಲವಾಗಿ ದೊರೆಯುವುದು. ಇಂತಹ ಏಕಾಂತಭಕ್ತರಿಗೆ ನಿನ್ನ ಇಚ್ಛೆಯಂತೆ ನಷ್ಟವಾಗುವ ಭಯಯುಕ್ತವಾದ ಬ್ರಹ್ಮ ಮೊದಲಾದ ಪದವಿಗಳಲ್ಲಿ ಆಸೆಯಿಲ್ಲವೆಂದು ಬೇರೆಯಾಗಿ ಹೇಳಬೇಕಾದ್ದಿಲ್ಲ. ಅವರು ಪರಿಶುದ್ಧ ಕೀರ್ತಿಯ ನಿನ್ನ ಕಥೆಯ ರಸದ ರುಚಿಯನ್ನು ಬಲ್ಲರು. ಹೆಚ್ಚು ಪ್ರಯೋಜನವನ್ನು ಪಡೆಯುವುದರಲ್ಲಿ ಕುಶಲರು. ಆದ್ದರಿಂದಲೇ ನಿನ್ನ ಪಾದಗಳನ್ನೇ ಅವರು ಆಶ್ರಯಿಸಿರುವರು. ಹೀಗೆ ಏಕಾಂತ ಭಕ್ತರಿಂದ ಸೇವಿತನಾದ ನಿನ್ನ ಪಾದಗಳಲ್ಲಿಯೇ ದುಂಬಿಯಂತೆ ನಮ್ಮ ಮನಸ್ಸು ರಮಿಸುವುದಾದರೆ, ತುಲಸಿಯಂತೆ ನಮ್ಮ ಮಾತುಗಳು ಸ್ತೋತ್ರವಾಗಿ ನಿನ್ನ ಪಾದಗಳನ್ನು ಶೋಭಿಸುವುದಾರೆ, ನಿನ್ನ ಗುಣಸಮೂಹಗಳನ್ನು ಕೇಳಿ ನಮ್ಮ ಕಿವಿಗಳು ಪೂರ್ಣವಾಗುವುದಾದರೆ ನಾವು ಪಶು ಮೊದಲಾದ ನೀಚಯೋನಿಗಳಲ್ಲಿಯೂ ದುಃಖದಿಂದ ಕ್ಲೇಶಪಡಲು ಹಿಂಜರಿಯುವುದಿಲ್ಲ. ನಿನ್ನ ಕೀರ್ತಿಯು ಪೂರ್ಣವಾದುದು. ನಿನ್ನ ಅನುಗ್ರಹದಿಂದ ಈ ನಿನ್ನ ಸಚ್ಚಿದಾನಂದ ರೂಪವನ್ನು ನೋಡಿ ನಮ್ಮ ಕಣ್ಣುಗಳು ಸುಖವನ್ನು ಹೊಂದಿದುವು. ಹೀಗೆ ನಮ್ಮಲ್ಲಿ ಅನುಗ್ರಹ ತೋರಿದ ನಿನಗೆ ನಾವು ಭಕ್ತಿಯುಕ್ತವಾದ ಪ್ರಣಾಮವನ್ನು ಮಾಡುತ್ತೇವೆ. ಭಕ್ತರಿಗೆ ಮಾತ್ರ ನೀನು ನಿನ್ನ ರೂಪವನ್ನು ವ್ಯಕ್ತಪಡಿಸುವೆ. ದುಷ್ಟರಿಗೆ ಎಂದೂ ಪ್ರಕಾಶಪಡಿಸುವುದಿಲ್ಲ.' ಎಂದು ಮನಸಾರೆ ಸ್ತೋತ್ರ ಮಾಡಿದರು.

  

## ಅಥ ಸಪ್ತದಶೋಽಧ್ಯಾಯಃ

ದುಸ್ತರವಾದ ಆಪತ್ತನ್ನು ಪರಿಹರಿಸಲು ಭಕ್ತಿಯಿಂದ ಶ್ರೀಹರಿಯನ್ನು ಪ್ರಾರ್ಥಿಸುವುದೇ ಉಪಾಯವೆಂದು ಈ ಅಧ್ಯಾಯದಲ್ಲಿ ಪ್ರತಿಪಾದಿಸುವರು. ಮೊದಲಿಗೆ ಭಕ್ತಪರಾಧೀನ ನಾನು ಎಂದು ಪ್ರಕಟಿಸುವ ಶ್ರೀಹರಿಯು ಸನಕಾದಿಗಳನ್ನು ಕುರಿತು ಆಡಿದ ಸ್ನೇಹಪೂರ್ವಕ ವಚನಗಳನ್ನು ತಿಳಿಸುವರು–

**ಬ್ರಹ್ಮೋವಾಚ**

**ಇತಿ ತದ್ ಗೃಣತಾಂ ತೇಷಾಂ ಮುನೀನಾಂ ಯೋಗಧರ್ಮಿಣಾಂ ।**
**ಪ್ರತಿನಂದ್ಯ ಜಗಾದೇದಂ ವಿಕುಂಠನಿಲಯೋ ವಿಭುಃ ॥೧॥**

ಇತಿ=ಈ ರೀತಿಯಾಗಿ ಗೃಣತಾಂ=ಹೇಳುವ ಯೋಗಧರ್ಮಿಣಾಂ=ಭಕ್ತಿಯೇ ಧರ್ಮವಾಗಿವುಳ್ಳ ಮುನೀನಾಂ=ಜ್ಞಾನಿಗಳಾದ ಸನಕಾದಿಗಳ ತತ್=ಸ್ತವನವನ್ನು ಪ್ರತಿನಂದ್ಯ=ಅಭಿನಂದಿಸಿ ವಿಕುಂಠನಿಲಯಃ=ವೈಕುಂಠವಾಸಿಯಾದ ವಿಭುಃ=ವ್ಯಾಪ್ತ-ನಾದ ಶ್ರೀಹರಿಯು ಇದಂ=ಮುಂದೆ ಹೇಳುವುದನ್ನು ಜಗಾದ=ಹೇಳಿದನು ॥೧॥

**ಶ್ರೀಭಗವಾನುವಾಚ**

**ಏತೌ ವೈ ಪಾರ್ಷದೌ ಮಹ್ಯಂ ಜಯೋ ವಿಜಯ ಏವ ಚ ।**
**ಕದರ್ಥೀಕೃತ್ಯ ಮಾಂ ಯದ್ ವೋ ಬಹ್ವಧತ್ತಾಮತಿಕ್ರಮಮ್ ॥೨॥**

ಏತೌ=ಈ ಮಹ್ಯಂ=ನನ್ನ ಪಾರ್ಷದೌ=ದ್ವಾರಪಾಲಕರಾದ ಜಯಃ ವಿಜಯಃ ಚ=ಜಯವಿಜಯರು ಮಾಂ=ನನ್ನನ್ನು ಕದರ್ಥೀಕೃತ್ಯ=ಲೆಕ್ಕಿಸದೆ ತುಚ್ಛೀಕರಿಸಿ, ವಃ= ನಿಮಗೆ ಬಹು ಅತಿಕ್ರಮಂ ಅಧತ್ತಾಂ=ಬಹಳ ಅಪರಾಧ ಮಾಡಿರುವರು ಯತ್= ಯಾವ ಕಾರಣ ತತ್=ಆ ಕಾರಣ ॥೨॥

**ಯಸ್ತ್ವೇತಯೋರ್ಧೃತೋ ದಂಡೋ ಭವದ್ಭಿರ್ಮಾಮನುವ್ರತೈಃ ।**
**ಸ ಏವಾನುಮತೋಽಸ್ಮಾಭಿರ್ಮುನಯೋ ದೇವಹೇಲನಾತ್ ॥೩॥**

ಹೇ ಮುನಯಃ=ಎಲೋ ಮುನಿಗಳೆ ಮಾಂ ಅನುವ್ರತೈಃ=ನನ್ನನ್ನು ಅನುಸರಿ- ಸುವ ಭವದ್ಭಿಃ=ನಿಮ್ಮಿಂದ ಏತಯೋಃ=ಇವರಿಗೆ ದೇವಹೇಲನಾತ್=ಬ್ರಹ್ಮಾದಿ- ದೇವತೆಗಳಿಗೆ ಮಾಡಿದ ಅಪರಾಧಕ್ಕೂ ಯಃ ದಂಡಃ ಧೃತಃ=ಯಾವ ಶಿಕ್ಷೆ ವಿಧಿ ಸಲ್ಪಟ್ಟಿದೆಯೋ ಸಃ ಏವ=ಅದೇ ಅಸ್ಮಾಭಿಃ=ನಮ್ಮಿಂದ ಅನುಮತಃ=ಅಂಗೀಕರಿಸ- ಲ್ಪಟ್ಟಿದೆ ॥೩॥

**ತದ್ವಃ ಪ್ರಸಾದಯಾಮ್ಯದ್ಯ ಬ್ರಹ್ಮ ದೈವಂ ಪರಂ ಹಿ ಮೇ ।**
**ತದ್ಧ್ವೀವಾತ್ಮಕೃತಂ ಮನ್ಯೇ ಯತ್ ಸ್ವಪುಂಭಿರಸತ್ಕೃತಾಃ ॥೪॥**

ಹಿ=ಯಾವ ಕಾರಣ ಬ್ರಹ್ಮ=ಬ್ರಾಹ್ಮಣಕುಲವು ಮೇ=ನನಗೆ ಪರಂ ದೈವಂ= ಪರದೇವತೆಯಂತೆ ಪ್ರಿಯವಾದುದು, ತತ್=ಆದ ಕಾರಣ ಯತ್=ಯಾವ ಸ್ವಪುಂಭಿಃ=ನನ್ನ ಭೃತ್ಯರಿಂದ ಅಸತ್ಕೃತಾಃ=ಅವಮಾನಿಸಲ್ಪಟ್ಟಿರೋ ತತ್ ಏವ=ಅದನ್ನೇ ಆತ್ಮಕೃತಂ ಮನ್ಯೇ=ನಾನು ಮಾಡಿದ್ದೆಂದು ತಿಳಿಯುವೆ ತತ್=ಆದ್ದರಿಂದ (ಅದ್ಯ=ಈಗ) ವಃ=ನಿಮ್ಮನ್ನು ಪ್ರಸಾದಯೇ= ಪ್ರಸನ್ನಗೊಳಿಸುವೆನು.

ವಿಜಯಧ್ವಜರ ಪ್ರಕಾರ - ಸರ್ವೇಷಾಂ ಎಂದು ಅಧ್ಯಾಹಾರ ಮಾಡಿ ಮೇ=ನನ್ನ ಭಕ್ತಿಯುಕ್ತವಾದ ಬ್ರಹ್ಮ=ವಿಪ್ರಕುಲವು ಸರ್ವೇಷಾಂ ಪರದೈವಂ=ಎಲ್ಲರಿಗೂ ಪೂಜ್ಯವು ಹಿ=ಪ್ರಸಿದ್ಧವು. ಮೇಪರಂ ನನ್ನ ತಾತ್ಪರ್ಯಯುಕ್ತವು ಎಂದರ್ಥ ॥೪॥

**ಯನ್ನಾಮಾನಿ ಚ ಗೃಹ್ಣಾತಿ ಲೋಕೋ ಭೃತ್ಯೇ ಕೃತಾಗಸಿ ।**
**ಸೋಽಸಾಧುವಾದಸ್ತತ್ಕೀರ್ತಿಂ ಹಂತಿ ತ್ವಚಮಿವಾಮಯಃ ॥೫॥**

ಭೃತ್ಯೇ=ಸೇವಕನು ಕೃತಾಗಸಿ ಸತಿ=ಅಪರಾಧಮಾಡುತ್ತಿರಲು ಲೋಕಃ=ಜನರು ಯನ್ನಾಮಾನಿ ಚ ಗೃಹ್ಣಾತಿ=ಯಾವ ಯಜಮಾನನ ಹೆಸರನ್ನೂ ಸ್ವೀಕರಿಸುವರೋ (ಇವನ ಸೇವಕ ಹೀಗೆ ಮಾಡಿದ ಎಂದು) ಸಃ ಅಸಾಧುವಾದಃ=ಆ ದುಷ್ಟಮಾತುಗಳು ತತ್ಕೀರ್ತಿಂ=ಆ ಯಜಮಾನನ ಕೀರ್ತಿಯನ್ನು ಆಮಯಃ=ಕುಷ್ಠರೋಗವು ತ್ವಚಮಿವ=ಚರ್ಮವನ್ನು ದೂಷಿಸುವಂತೆ ಹಂತಿ=ನಾಶಮಾಡುವುದು ॥೫॥

ನನಗೆ ಬ್ರಾಹ್ಮಣರು ಪ್ರಿಯವೆಂದು ಹೇಳಿದ್ದನ್ನು ಅವರೇ ಏಕೆ ನನಗೆ ಪ್ರಿಯರೆಂದು ತಿಳಿಸುತ್ತ ವಿಶದಪಡಿಸುವನು.

**ಯಸ್ಯಾಮೃತಾಮಲಯಶಃಶ್ರವಣಾವಗಾಹಃ**
**ಸದ್ಯಃ ಪುನಾತಿ ಜಗದಾಶ್ವಪಚಂ ವಿಕುಂಠಃ ।**
**ಸೋಽಹಂ ಭವದ್ಭ್ಯ ಉಪಲಬ್ದಸುತೀರ್ಥಕೀರ್ತಿ-**
**ಶ್ಛಿಂದ್ಯಾಂ ಸ್ವಬಾಹುಮಪಿ ವಃ ಪ್ರತಿಕೂಲವೃತ್ತಿಮ್ ॥೬॥**

ಯಸ್ಯ=ಯಾವ ನನ್ನ ಅಮೃತಯಶಃ=ದೋಷರಹಿತ ನಿರ್ದುಷ್ಟವಾದ ಮುಕ್ತಿಪ್ರದವಾದ ಕೀರ್ತಿಯ ಶ್ರವಣಾವಗಾಹಃ=ಕೇಳುವುದೆಂಬ ಸ್ನಾನವು ಸದ್ಯಃ= ತತ್‌ಕ್ಷಣದಲ್ಲಿ ಆಶ್ವಪಚಂ ಜಗತ್=ಚಂಡಾಲರನ್ನೂ ಸೇರಿಸಿಕೊಂಡ ಜಗತ್ತನ್ನು ಪುನಾತಿ= ಪವಿತ್ರಗೊಳಿಸುವುದು. ಸಃ ಅಹಂ ವಿಕುಂಠಃ=ಅಂತಹ ವಿಕುಂಠನೆನಿಸಿದ ನಾನು ಭವದ್ಭ್ಯಃ=ನಿಮ್ಮಿಂದ ಉಪಲಬ್ಧಸುತೀರ್ಥಕಿರ್ತಿಃ=ಉಪಲಬ್ಧ=ಪ್ರಾಪ್ತವಾದ ಅಂದರೆ ವಿಸ್ತೃತವಾದ ಸುತೀರ್ಥ=ಅತ್ಯಂತ ಪವಿತ್ರವಾದ ಕೀರ್ತಿಯುಳ್ಳವನು ಕಾರಣ ವಃ= ನಿಮಗೆ ಪ್ರತಿಕೂಲವೃತ್ತಿಂ=ವಿರುದ್ಧಾಚರಣೆಯುಳ್ಳ ಸ್ವಬಾಹುಮಪಿ=ನನ್ನ ಬಾಹು- ಜಾತರಾದ ಕ್ಷತ್ರಿಯರಾಜನನ್ನೂ ಛಿಂದ್ಯಾಂ=ಕತ್ತರಿಸುವೆನು. ಬೇರೆಯವರ ಪಾಡೇನು ಎಂದರ್ಥ. ನನ್ನ ಕೀರ್ತಿಯನ್ನು ಜಗತ್ತಿನಲ್ಲಿ ವಿಸ್ತರಿಸುವವರು ನೀವಾದ ಕಾರಣ ನಿಮಗೆ ಪ್ರತಿಕೂಲರಾಡವರನ್ನು ಶಿಕ್ಷಿಸುವೆನೆಂದು ಭಾವ ॥೬॥

ಶ್ರೀಹರಿಯು ಬ್ರಾಹ್ಮಣರ ಸೇವೆಯಿಂದ ತನಗೆ ಗುಣಗಳು ಬಂದಿವೆ ಎಂದು ಹೇಳುವನೆಂದು ಹೇಳವರು –

**ಯತ್ಸೇವಯಾ ಚರಣಪದ್ಮಪವಿತ್ರರೇಣೋಃ**
**ಸದ್ಯಃ ಕ್ಷತಾಖಿಲಮಲಂ ಪ್ರತಿಲಬ್ಧಶೀಲಂ ।**
**ನ ಶ್ರೀರ್ವಿರಕ್ತಮಪಿ ಮಾಂ ವಿಜಹಾತಿ ಯಸ್ಯಾಃ**
**ಪ್ರೇಕ್ಷಾಲವಾರ್ಥಮಿತರನ್ನಿಯಮೋಽರ್ಹತೇ ಮತ್ ॥೭॥**

ಯತ್=ಯಾವಕಾರಣ ವಿಪ್ರಾಣಾಂ=ಬ್ರಾಹ್ಮಣರ ಚರಣಪದ್ಮ ಪವಿತ್ರರೇಣೋಃ= ಪಾದಕಮಲಗಳ ಪವಿತ್ರವಾದ ಧೂಳಿಯ ಸೇವಯಾ=ಸೇವೆ ಮಾಡಿದ್ದರಿಂದ ಸದ್ಯಃ= ತತ್‌ಕ್ಷಣದಲ್ಲಿ ಕ್ಷತಾಖಿಲಮಲಂ=ಎಲ್ಲ ಪಾಪಗಳನ್ನು ಕಳೆದುಕೊಂಡ ಪ್ರತಿಲಬ್ಧಶೀಲಂ= ಶ್ರೀವತ್ಸಲಾಂಛನವನ್ನು ಪಡೆದ ಅಥವಾ ಐಶ್ವರ್ಯಾದಿಗುಣಗಳನ್ನು ಪಡೆದ ಸ್ವಭಾವವುಳ್ಳ ವಿರಕ್ತಮಪಿ=ವಿಶಿಷ್ಟನಾದ ನನ್ನಲ್ಲಿಯೇ ರಕ್ತನಾದ ಅಂದರೆ ಸ್ವರತನಾದ ಆದ್ದರಿಂದಲೇ ಯಾವ ವಿಷಯಾಪೇಕ್ಷೆ ಇಲ್ಲದ ರಮೆಯನ್ನೂ ನನ್ನ ಸುಖಕ್ಕಾಗಿ

ಅಪೇಕ್ಷಿಸದಿದ್ದರೂ ಯಸ್ಯಾಃ=ಯಾವಳ ಪ್ರೇಕ್ಷಾಲವಾರ್ಥಂ=ಕೃಪಾಕಟಾಕ್ಷದ ಲೇಶಕ್ಕಾಗಿ ಮದಿತರನ್ನಿಯಮಃ=ನನ್ನಿಂದಭಿನ್ನರಾದ ಬ್ರಹ್ಮಾದಿದೇವತೆಗಳೆಲ್ಲರ ವ್ರತಾನುಷ್ಠಾನಾದಿ ನಿಯಮವು ಅರ್ಹತೇ=ಯೋಗ್ಯವಾಗುವುದೋ ಸಾ ಶ್ರೀಃ=ಅಂಥ ಲಕ್ಷ್ಮೀದೇವಿಯು ಮಾಂ=ನನ್ನನ್ನು ನ ವಿಜಹಾತಿ=ಬಿಡಲಾರಳು. ಇತಿ=ಆಕಾರಣ ಇಂಥ ನಿಮ್ಮ ವಿರುದ್ಧರಾದ ಕ್ಷತ್ರಿಯರನ್ನೂ ನಿಗ್ರಹಿಸುವೆನು ಎಂದು ಹಿಂದೆ ಅನ್ವಯ ತಿಳಿಯಬೇಕು. ನಿನ್ನ ಹೆಂಡತಿಯಾದ್ದರಿಂದ ನಿನ್ನನ್ನು ಬಿಡದಿರುವುದು ಏನು ಮಹಾವಿಶೇಷ ಎಂಬ ಶಂಕೆಗೆ ಅವಳೂ ಸಾಮಾನ್ಯಳಲ್ಲ ಬ್ರಹ್ಮಾದಿಗಳಿಗೆ ಅನುಗ್ರಾಹಕಳು ಎಂದು ತಿಳಿಯಬೇಕು.

ಈ ಶ್ಲೋಕದಲ್ಲಿ ಸರ್ವೋತ್ತಮನಾದ ಭಗವಂತನಿಗೆ ಬ್ರಾಹ್ಮಣರ ಸೇವೆಯಿಂದ ಗುಣಗಳಪ್ರಾಪ್ತಿ ಲಕ್ಷ್ಮೀದೇವಿಯ ಪ್ರಾಪ್ತಿಯೂ ಹೇಳಲ್ಪಡುವುದು. ಇದು ಪ್ರಮಾಣ ಬಾಧಿತವು ಆದ ಕಾರಣ ಪ್ರಮಾಣದಿಂದಲೇ ಇದರ ತಾತ್ಪರ್ಯ ಹೇಳುವರು –

**ಸರ್ವೋತ್ತಮೋಽಪಿ ಭಗವಾನ್ ವಿಪ್ರಾದೇಃ ಪೂಜನಾಯ ತು ।**
**ಗುಣಲಬ್ಧಿಂ ತತೋ ಬ್ರೂತೇ ನಿತ್ಯಪೂರ್ಣಗುಣೋಽಪಿ ಸನ್ ॥**
**ಬ್ರೂಯುಶ್ಚಾನ್ಯೇ ಕ್ವಚಿತ್ತತ್ತು ತದುಕ್ತೇರನುಸಾರತಃ ।**
**ಉಪಾದತ್ತೇ ವರಾಂಶ್ಚಾಪಿ ಲೋಕಾನಾಂ ಮೋಹನಾಯ ಚ ॥**

**ಇತಿ ಕೌರ್ಮೇ ।**

ಯದ್ಯಪಿ ಭಗವಂತನು ಸರ್ವೋತ್ತಮನು ನಿತ್ಯಗುಣಪೂರ್ಣನು, ಆದರೂ ಬ್ರಾಹ್ಮಣರಿಗೆ ದೇವತೆಗಳಿಗೆ ಪೂಜ್ಯತೆಯನ್ನು ತಿಳಿಸುವುದಕ್ಕಾಗಿಯೇ ಅವರಿಂದ ತನಗೆ ಗುಣಲಾಭವಾಯಿತೆಂದು ಹೇಳುವನು. ಹಲವು ಸ್ಥಳದಲ್ಲಿ ಅವನ ಮಾತಿಗೆ ಅನುಗುಣವಾಗಿ ಬೇರೆಯವರು ಅಂದರೆ ಬ್ರಹ್ಮದೇವರು ದೇವತೆಗಳಿಗೆ, ಮೈತ್ರೇಯರು ವಿದುರನಿಗೆ, ಶುಕಾಚಾರ್ಯರು ಪರಿಕ್ಷಿತನಿಗೆ, ಸೂತರು ಶೌನಕರಿಗೆ ಹೇಳುವರು (ಅದು ಅವನ ಅನುವಾದವಿದ್ದಂತೆ ಎಂದು ಭಾವ). ಅದರಂತೆ ಅಜ್ಞರಿಗೆ ಮೋಹಗೊಳಿಸಲು ಮತ್ತು ದೇವತೆಗಳಿಗೆ ಬ್ರಾಹ್ಮಣರಿಗೆ ಪೂಜ್ಯತೆ ತಿಳಿಸಲು ಅವರಿಂದ ವರಗಳನ್ನು ಪಡೆಯುವನು. ಇದೆಲ್ಲ ವಿಡಂಬನೆ.

ಈ ಶ್ಲೋಕದಲ್ಲಿ ಯತ್ಸೇವಯಾ ಎಂಬುದು ಒಂದೇ ಪದವೆಂದಾದರೆ ಯಾರ ಚರಣರೇಣುಸೇವೆಯಿಂದ ಗುಣಗಳನ್ನು ಪಡೆದು ನನ್ನನ್ನು ಶ್ರೀಯು ಬಿಡಲಾರಳೋ ಅವರ ಪ್ರತಿಕೂಲವಾಗಿ ನಡೆದವರನ್ನು ಛೇದಿಸುವೆನು ಎಂದರ್ಥವಾದರೂ ಶೀಲಾದಿಗುಣಪ್ರಾಪ್ತಿಗಾಗಲಿ ಲಕ್ಷ್ಮೀದೇವಿಯು ತನ್ನನ್ನು ಬಿಡದಿರವುದಕ್ಕಾಗಲಿ ಸಾಕ್ಷಾತ್ತಾಗಿ ಛಿಂದ್ಯಾಂ ಎನ್ನುವುದಕ್ಕೆ ಕಾರಣತ್ವ ತಿಳಿಯುವುದಿಲ್ಲ, ಜ್ಞಾಪಕ–

ವಿಲ್ಲದ್ದರಿಂದ ಆದ್ದರಿಂದ 'ವಿಪ್ರಾಣಾಂ' ಎಂದು 'ಇತಿ' ಎಂದೂ ಅಧ್ಯಾಹಾರ ಮಾಡಿ ಯತ್ ಎಂಬುದಕ್ಕೆ ಯಾವ ಕಾರಣ ಎಂಬರ್ಥವನ್ನೂ ಅಧ್ಯಾಹರಿಸಿದ ಇತಿ ಶಬ್ದದೊಡನೆ ಅನ್ವಯವನ್ನೂ ಇಟ್ಟುಕೊಂಡು ಯೋಜನೆಯನ್ನು ತೋರಿಸುವರು –

**ವಿಪ್ರಾಣಾಂ ಚರಣಪದ್ಮಪವಿತ್ರರೇಣೋಃ ಸೇವಯಾ ಪ್ರತಿಲಬ್ಧಶೀಲಂ ಶ್ರೀಃ ನ ಜಹಾತೀತಿ ಯತ್ ಅತಃ ಛಿಂದ್ಯಾಂ ।**

ಬ್ರಾಹ್ಮಣರ ಸೇವೆಯಿಂದಲೇ ಗುಣಗಳು ಬಂದಿವೆ. ಅವರ ಸೇವೆ ಮಾಡಿದ್ದರಿಂದ ಲಕ್ಷ್ಮೀದೇವಿಯು ನನ್ನನ್ನು ಬಿಟ್ಟಿಲ್ಲ, ಯಾವ ಕಾರಣ ಆ ಕಾರಣ ಅವರ ವಿರುದ್ಧರಾದವರನ್ನು ಛೇದಿಸುವೆನೆಂದರ್ಥ.

ಕ್ಷತಾಖಿಲಮಲಂ ಎಂದದ್ದರಿಂದ ವಿಷ್ಣುವಿ ಗೆ ದೋಷಪ್ರಸಕ್ತಿ ತೋರುವುದು ಅದರ ಅಭಿಪ್ರಾಯವನ್ನು ಶ್ರುತಿಯಿಂದಲೇ ತಿಳಿಸುವರು –

**ಅನುಕ್ತಾಶ್ಚ ಗುಣಾ ವಿಷ್ಣೋರುಕ್ತಾ ದೋಷಾ ನ ತಸ್ಯ ತು ।**
**ಅಜ್ಞಾನಾದ್ದೋಷವಿಜ್ಞಾನಂ ಗುಣಜ್ಞಾನಂ ಯಥಾರ್ಥತಃ ॥**

**ಇತಿ ಪೈಂಗಿಶ್ರುತಿಃ ।**

ಶ್ರುತ್ಯಾದಿಗಳಲ್ಲಿ ಹೇಳಿದ ಹೇಳದ ಗುಣಗಳೂ ಇವೆ ಎಂದು ತಿಳಿಯಬೇಕು. ದೋಷಗಳನ್ನು ಹೇಳಿದ್ದರೂ ಇವೇ ಎಂದು ತಿಳಿಯಬಾರದು. ಆ ವಾಕ್ಯದ ತಾತ್ಪರ್ಯ ತಿಳಿಯದೇ ಅಂದರೆ ವಿಪರೀತ ತಿಳಿದು ದೋಷ ಹೇಳಿದಂತೆ ಅನಿಸುವುದು, ವಸ್ತುತಃ ಹೇಳಿರುವುದೇ ಇಲ್ಲ. ಸರಿಯಾದ ತಾತ್ಪರ್ಯಜ್ಞಾನದಿಂದ ಗುಣಗಳ ಜ್ಞಾನವಾಗುವುದು. ದೋಷ ಹೇಳುವಲ್ಲಿ ಆ ವಾಕ್ಯಕ್ಕೆ ತಾತ್ಪರ್ಯವಿರುವುದಿಲ್ಲ.

ಹಾಗಾದರೆ ಎಲ್ಲಿ ತಾತ್ಪರ್ಯ ಆ ವಾಕ್ಯಗಳಿಗೆ ಎಂದರೆ ಪ್ರಮಾಣದಿಂದಲೇ ತಿಳಿಸುವರು –

**ವಿಪ್ರಾಣಾಂ ಚಾಪಿ ಭಕ್ತಾನಾಮನ್ಯೇಷಾಂ ಚ ಜನಾರ್ದನಃ ।**
**ಬ್ರಹ್ಮಣಃ ಶಂಕರಾದ್ವಾಪಿ ದೇವತಾಭ್ಯಸ್ತಥೈವ ಚ ॥**
**ಆತ್ಮನಶ್ಚ ಶ್ರಿಯಶ್ಚೈವ ಸಕಾಶಾತ್ ಪ್ರಿಯತಾಮಪಿ ।**
**ಪೂಜ್ಯತಾಮತ್ಯಯುಕ್ತಂ ಚ ವದೇತ್ ಕ್ವಾಪಿ ವಿಮೋಹಯನ್ ॥**

**ಇತಿ ಸ್ಕಾಂದೇ ।**

ಕೆಲವು ಸಲ ಅಸುರಜನ ಮೋಹನಕ್ಕಾಗಿ ಅವರಲ್ಲಿ ಪೂಜ್ಯತೆ ಮತ್ತು ಪ್ರಿಯತ್ವವಿಲ್ಲದಿದ್ದರೂ ಭಕ್ತರಾದ ಬ್ರಾಹ್ಮಣರಿಗೆ ಬ್ರಹ್ಮದೇವರು, ರುದ್ರದೇವರು

ಲಕ್ಷ್ಮೀದೇವಿಯರಿಗಿಂತಲೂ ತನಗೆ ಪ್ರಿಯತೆಯನ್ನು ಪೂಜ್ಯತೆಯನ್ನೂ ಬ್ರಾಹ್ಮಣರ ಅನುಗ್ರಹದಿಂದ ಸಕಲಪಾಪಗಳನ್ನು ಕಳೆದುಕೊಂಡವನೆಂದೂ ಹೇಳುವನು. ಎಂದು ಸ್ಕಾಂದ ಪುರಾಣದಲ್ಲಿದೆ ॥೭॥

ಮುಂದೆ ಹೇಳುವ ಕಾರಣದಿಂದಲೂ ಬ್ರಾಹ್ಮಣರು ಪೂಜ್ಯರೆಂದು ಹೇಳುವನು

**ನಾಹಂ ತಥಾದ್ಮಿ ಯಜಮಾನಹವಿರ್ವಿತಾನೈ-**
**ಶ್ಚ್ಯೋತದ್‌ಘೃತಪ್ಲುತಮದನ್ ಹುತಭುಙ್ಮುಖೇನ ।**
**ಯದ್ ಬ್ರಾಹ್ಮಣಸ್ಯ ಮುಖತಶ್ಚರತೋಽನುಘಾಸಂ**
**ತುಷ್ಟಸ್ಯ ಮಯ್ಯವಹಿತೈರ್ನಿಜಕರ್ಮಪಾಕೈಃ ॥೮॥**

ಯತ್=ಯಾವ ರೀತಿಯಾಗಿ ಮಯಿ=ನನ್ನಲ್ಲಿ ಅವಹಿತೈಃ=ಅರ್ಪಿಸಲ್ಪಟ್ಟ ನಿಜಕರ್ಮಪಾಕೈಃ=ತಮ್ಮಕರ್ಮಗಳ ಫಲದಿಂದ ತುಷ್ಟಸ್ಯ=ಸಂತುಷ್ಟರಾದ ನಿಷ್ಕಾಮ-ಕರ್ಮ ಮಾಡುವುದರಿಂದ ಸಂತುಷ್ಟರಾದ ಚರತಃ=ಭೋಜನಮಾಡುವ ಬ್ರಾಹ್ಮಣಸ್ಯ=ಬ್ರಹ್ಮಜ್ಞಾನಿಯ ಮುಖತಃ=ಮುಖದಿಂದ ಅನುಘಾಸಂ=ಪ್ರತಿಯೊಂದು ತುತ್ತನ್ನು ಅದ್ಮಿ=ತಿನ್ನುವೆನು ತಿಂದು ಪ್ರೀತನಾಗುವೆನು. ತಥಾ=ಹಾಗೆ ಅಹಂ=ನಾನು ವಿತಾನೈಃ=ವಿಸ್ತೃತವಾದ ಮಂತ್ರಪೂರ್ವಕವಾಗಿ ಕೊಡಲ್ಪಟ್ಟ ಚ್ಯೋತತ್= ಸೋರುತ್ತಿರುವ ಘೃತಪ್ಲುತಂ=ತುಪ್ಪದಿಂದ ಮಿಶ್ರಿತವಾದ ಯಜಮಾನಸ್ಯ=ಯಜ್ಞ ಮಾಡುವವನ ಹವಿಃ=ಪುರೋಡಾಶ ಮುಂತಾದವನ್ನು ಅದನ್ ಅಪಿ=ಸ್ವೀಕಾರ ಮಾಡಿದರೂ ನ ಅದ್ಮಿ=ತೃಪ್ತಿ ಹೊಂದುವುದಿಲ್ಲ ॥೮॥

ಮತ್ತೆ ಅಸುರಜನ ಮೋಹನಕ್ಕಾಗಿ ಹೇಳುವನು –

**ಯೇಷಾಂ ಬಿಭರ್ಮ್ಯಹಮಖಂಡವಿಕುಂಠಯೋಗ-**
**ಮಾಯಾವಿಭೂತಿರಮಲಾಂಘ್ರಿರಜಃ ಕಿರೀಟೈಃ ।**
**ವಿಪ್ರಾಂಸ್ತು ಕೋ ನ ವಿಷಹೇತ ಯದರ್ಹಣಾಂಭಃ**
**ಸದ್ಯ ಪುನಾತಿ ಸಹಚಂದ್ರಲಲಾಮಲೋಕಾನ್ ॥೯॥**

ಅಖಂಡ=ಪೂರ್ಣವಾದ ವಿಕುಂಠ=ಅಪ್ರತಿಹತವಾದ ಯೋಗಮಾಯಾ ವಿಭೂತಿಃ=ಯೋಗಸಾಮರ್ಥ್ಯ(ಸ್ವರೂಪಭೂತವಾದ)ದಿಂದ ಪ್ರಾಪ್ತವಾದ ಪರಮೈ-ಶ್ವರ್ಯವುಳ್ಳ ಮತ್ತು ಯದರ್ಹಣಾಂಭಃ=ಯಾವ ನನ್ನ ಪಾದಪೂಜೆ ಮಾಡಿದ ನೀರೆನಿಸಿದ ಗಂಗೆಯು ಸಹಚಂದ್ರಲಲಾಮಲೋಕಾನ್=ರುದ್ರದೇವರಿಂದ ಸಹಿತ-ವಾದ ಲೋಕಗಳನ್ನು ಸದ್ಯಃ ಪುನಾತಿ=ತತ್‌ಕ್ಷಣದಲ್ಲಿ ಪವಿತ್ರಗೊಳಿಸುವುದೋ ಸಃ

ಅಹಂ=ಅಂಥ ನಾನು ಯೇಷಾಂ=ಯಾವ ಬ್ರಾಹ್ಮಣರ ಅಮಲಾಂಘ್ರಿರಜಃ= ನಿರ್ಮಲವಾದ ಪಾದಧೂಳಿಯನ್ನು ಕಿರೀಟೈಃ=ಅನೇಕ ಅವತಾರಗಳಲ್ಲಿ ಕಿರೀಟ-ಗಳಿಂದ ಬಿಭರ್ಮಿ=ಧಾರಣಮಾಡುವೆನೋ, ತಾನ್ ವಿಪ್ರಾನ್=ಅಂಥ ಬ್ರಾಹ್ಮಣರನ್ನು ಕಃ ನ ವಿಷಹೇತ=ಯಾರು ತಾನೆ ಸಹಿಸಲಾರರು. ಅಂದರೆ ಅವರು ಅಪರಾಧ ಮಾಡಿದರೂ ಎಲ್ಲರೂ ಸಹಿಸುವರು ಸಹಿಸಲೇಬೇಕು ಎಂದು ಭಾವ ॥೯॥

ಅನರ್ಥಕಾರಣವಾದುದರಿಂದ ಬ್ರಾಹ್ಮಣದ್ರೋಹವನ್ನು ಸರ್ವಥಾ ಮಾಡಬಾರದು ಎಂದು ಹೇಳುವನು –

**ಯೇ ಮೇ ತನೂರ್ದ್ವಿಜವರಾನ್ ದುದುಹುರ್ಮದೀಯಾನ್**
**ಭೂತಾನ್ಯಲಬ್ಧಶರಾಣನಿ ಚ ಭೇದಬುಧ್ಯಾ ।**
**ದ್ರಕ್ಷಂತ್ಯಘಕ್ಷತದೃಶೋ ಹ್ಯಭಿಮನ್ಯವಸ್ತಾನ್**
**ಗೃಧ್ರಾ ರುಷಾ ಮಮ ಕೃಷನ್ತ್ಯಧಿದಂಡನೇತುಃ ॥೧೦॥**

ಮೇ ತನೂಃ=ನನ್ನ ಪ್ರತಿಮಾಸ್ಥಾನೀಯರಾದ ಮದಿಯಾನ್=ನನ್ನಭಕ್ತರನ್ನು ಯೇ=ಯಾರು ದುದುಹುಃ=ಹಣ ಮುಂತಾದವನ್ನು ಕಿತ್ತುಕೊಂಡಿರುವರೋ ದುದ್ರಹುಃ ಎಂಬ ಪಾಠದಲ್ಲಿ ದ್ರೋಹಮಾಡುವರೋ ಯೇ ಚ=ಯಾರು ಅಘಕ್ಷತದೃಶಃ=ಪಾಪದಿಂದ ಕುರುಡಾದ ಕಣ್ಣುಳ್ಳವರಾಗಿ ಅಲಬ್ಧಶರಣಾನಿ=ರಕ್ಷಕ-ರಹಿತವಾದ ಭೂತಾನಿ=ಪ್ರಾಣಿಗಳನ್ನು ಭೇದಬುಧ್ಯಾ=ತಮ್ಮಿಂದ ರಕ್ಷ್ಯರಾದ ಮಕ್ಕಳು ಮುಂತಾದವರಿಂದ ಭಿನ್ನರೆಂದು ತಿಳಿಯುವರೋ ತಾನ್=ಅಂಥವರನ್ನು ಮಮ ಅಧಿದಂಡನೇತುಃ=ನನ್ನಿಂದ ಅಧಿಕೃತನಾದ ಶಿಕ್ಷೆಯನ್ನು ಮಾಡುವ ಯಮನ ಅಭಿಮನ್ಯವಃ=ಸುತ್ತಲೂ ಸಿಟ್ಟುಳ್ಳ ಗೃಧ್ರಾಃ=ಹದ್ದುಗಳು ರುಷಾ=ಸಿಟ್ಟಿನಿಂದ ಕೃಷಂತಿ= ತಮ್ಮ ಚಂಚುಗಳಿಂದ ಕಿತ್ತು ತಿನ್ನುವವು ಎಂದು ಭಾವ ॥೧೦॥

ಈಗ ಬ್ರಾಹ್ಮಣರ ಪೂಜೆಯಿಂದ ನಾನು ವಶನಾಗುವೆನೆಂದು ಹೇಳುವನು–

**ಯೇ ಬ್ರಾಹ್ಮಣಾನ್ ಮಯಿ ಧಿಯಾ ಕ್ಷಿಪತೋಽರ್ಚಯಂತಿ**
**ತುಷ್ಯದ್ಹೃದಃ ಸ್ಮಿತಸುಧೋಕ್ಷಿತಪದ್ಮವಕ್ತ್ರಾಃ ।**
**ವಾಣ್ಯಾಽನುರಾಗಕಲಯಾಽಽತ್ಮಜವದ್ ಗೃಣಂತಃ**
**ಸಂಬೋಧಯಂತ್ಯಹಮಿವಾಹಮುಪಾಕೃತಸ್ತೈಃ ॥೧೧॥**

ಯೇ=ಯಾರು ಕ್ಷಿಪತಃ=ನಿಂದಿಸುವವನಾದರೂ ಬ್ರಾಹ್ಮಣಾನ್=ಬ್ರಾಹ್ಮಣರನ್ನು ಮಯಿ ಧಿಯಾ=ಇವರಲ್ಲಿ ನನ್ನ ವಿಶೇಷ ಸನ್ನಿಧಾನವಿದೆ ಎಂದು ತಿಳಿದು

ಅರ್ಚಯಂತಿ=ಪೂಜಸುವರೋ, ತುಷ್ಯದ್ಧ್ನದಃ=ಸಂತುಷ್ಟವಾದ ಮನ(ಸ್ಸಿನಿಂದ) ಸ್ಲ್ಖವನಾಗಿ ಸ್ಮಿತಸುಧೋಕ್ಷಿತಪದ್ಮವಕ್ತ್ರಾಃ=ಮಂದಹಾಸವೆಂಬ ಅಮೃತದಿಂದ ಸಿಂಪಡಿಸಲ್ಪಟ್ಟ ಪದ್ಮದಂತೆ ಅರಳಿದಮುಖವುಳ್ಳವರಾಗಿ ಅನುರಾಗಕಲಯಾ ವಾಣ್ಯಾ= ಸ್ನೇಹಪೂರಿತವಾದ ಮಾತುಗಳಿಂದ ಆತ್ಮಜವತ್=ಸಿಟ್ಟಾದ ತಂದೆಯನ್ನು ಮಗನು ಸ್ತುತಿಸುವಂತೆ ಗೃಣಂತಃ=ಸ್ತುತಿಸುತ್ತ ಅಹಮಿವ=ನನ್ನಂತೆ ಸಂಬೋಧಯಂತಿ= ಸಂಬೋಧಿಸುವರೋ ತೈಃ=ಅವರಿಂದ ಅಹಂ=ನಾನು ಉಪಾಕೃತಃ ವಶೀಕೃತ-ನಾಗುವೆನು ॥೧೧॥

ಈಗ ತನ್ನ ಸೇವಕರ ಮೋಚನವನ್ನು ಪ್ರಾರ್ಥಿಸುವನು –

**ತನ್ಮೇ ಸ್ವಭರ್ತುರವಸಾಯಮಲಕ್ಷಮಾಣೌ**
**ಯುಷ್ಮದ್ವ್ಯತಿಕ್ರಮಗತಿಂ ಪ್ರತಿಪದ್ಯ ಸದ್ಯಃ ।**
**ಭೂಯೋ ಮಮಾಂತಿಕಮಿತಾಂ ತದನುಗ್ರಹೋ ಮೇ**
**ಯತ್ ಕಾಲತೋಽಪ್ಯವಿರಮೋ ಹೃತಯೋರ್ವಿವಾಸಃ ॥**

ತತ್=ಬ್ರಾಹ್ಮಣರು ನನಗೆ ಪ್ರಿಯರಾದುದರಿಂದ ಅವರ ವಿರೋಧಿಗಳು ನನ್ನ ವಿರೋಧಿಗಳೇ ಆದ್ದರಿಂದ ಸ್ವಭರ್ತುಃ ಮೇ=ತಮ್ಮಯಜಮಾನನಾದ ನನ್ನ ಅವಸಾಯಂ=ಬ್ರಾಹ್ಮಣರನ್ನು ಗೌರಿಸಬೇಕೆಂಬ ನಿಶ್ಚಯವನ್ನು ಅಲಕ್ಷಮಾಣೌ= ತಿಳಿಯದಿರುವ ಜಯವಿಜಯರು ಯುಷ್ಮದ್ವ್ಯತಿಕ್ರಮಗತಿಂ=ನಿಮಗೆ ಮಾಡಿದ ಅಪರಾಧಕ್ಕೆ ಯೋಗ್ಯವಾದ ಅಸುರಯೋನಿಯನ್ನು ಸದ್ಯಃ=ಬೇಗನೆ ಪ್ರತಿಪದ್ಯ ಹೊಂದಿ ಭೂಯಃ=ಮತ್ತೆ ಮಮಾಂತಿಕಂ=ನನ್ನ ಸಮೀಪಕ್ಕೆ ಇತಾಂ=ಬರಲಿ. ಯತ್=ಯಾವ ಕಾರಣ ಹೃತಯೋಃ=ನಿಮ್ಮ ಶಾಪದಿಂದ ಸ್ಥಾನವನ್ನು ಕಳೆದುಕೊಂಡ-ವರಿಗೆ ವಿವಾಸಃ=ಅಸುರದೇಹದಲ್ಲಿರುವುದು ಕಾಲತೋಪಿ=ಬಹುಕಾಲವಾದರೂ ಅವಿರಮಃ=ಮುಗಿಯದಿರುವುದು ಆದ್ದರಿಂದ ತತ್=ಪುನಃ ನನ್ನ ಹತ್ತಿರ ಬರುವುದು ಮಮ ಅನುಗ್ರಹಃ=ನನ್ನಲ್ಲಿ ನೀವು ಮಾಡುವ ಅನುಗ್ರಹವು.

ವಿಜಯಧ್ವಜರ ಪ್ರಕಾರ ಮಮ ಅನುಗ್ರಹಃ=ಎಂದರೆ ನನ್ನ ಅನುಗ್ರಹವೆಂದರ್ಥ. ನನ್ನ ಅನುಗ್ರಹವಿಲ್ಲದಿದ್ದರೆ ಬಲವಾದ ಬ್ರಾಹ್ಮಣರ ಶಾಪದಿಂದ ಎಂದೂ ಅಸುರಯೋನಿಯಿಂದ ಬಿಡುಗಡೆಯೆ ಇಲ್ಲದಾಗುವುದು ಎಂದು ಭಾವ. ಯಾದವಾರ್ಯರ ಪ್ರಕಾರ ಶಾಪವು ನಿರಂತರವಾದುದರಿಂದ ಬೇಗನೆ ತಿರುಗಿ ಬರುವಂತೆ ಆದರೆ ನನ್ನ ಮೇಲೆ ನೀವು ಅನುಗ್ರಹಿಸಿದಂತೆ ಎಂದು ಭಾವ ॥೧೨॥

**ಬ್ರಹ್ಮೋವಾಚ**

**ಅಥ ತಸ್ಯೋಶತೀಂ ದೇವಿಮೃಷಿಕುಲ್ಯಾಂ ಸರಸ್ವತೀಂ ।**
**ಆಸ್ವಾದ್ಯ ಮನ್ಯುದಷ್ಟಾನಾಂ ತೇಷಾಮಾತ್ಮಾಪ್ಯತೃಪ್ಯತ ॥೧೩॥**

ಅಥ=ನಂತರ ಉಶತೀಂ=ಅಭೀಷ್ಟಪ್ರದವಾದ ಋಷಿಕುಲ್ಯಾಂ=ಋಷಿಕುಲದ ಸ್ತೋತ್ರರೂಪವಾದ ದೇವೀಂ=ಆಶ್ಚರ್ಯಕರ ಪದಗಳಿಂದಲೂ ಗಂಭೀರವಾಗಿಯೂ ಅಬಾಧಿತವಾಗಿಯೂ ಪ್ರಕಾಶಮಾನವಾದ ಸರಸ್ವತೀಂ=ಮಾತುಗಳನ್ನು ಆಸ್ವಾದ್ಯ= ಶ್ರವಣ ಮಾಡಿ (ಮಾಧುರ್ಯವನ್ನು ಅನುಭವಿಸಿ) ಮನ್ಯುದಷ್ಟಾನಾಂ ಅಪಿ= ಸಿಟ್ಟೆಂಬಹಾವಿನಿಂದ ಕಚ್ಚಲ್ಪಟ್ಟಿದ್ದರೂ ಅವರ ಆತ್ಮಾ=ಮನಸ್ಸು ಅತೃಪ್ಯತ=ಕೋಪ ಹೋಗಿ ಆನಂದಪೂರ್ಣವಾಯಿತು.

ನದೀಪರವಾಗಿ - ಮುನಿಗಳಿಗೆ ಪ್ರಿಯವಾದ ದೇವತೆಗಳ ಕ್ರೀಡಾಸ್ಥಾನವಾದ ಸರಸ್ವತೀನದಿಯಲ್ಲಿ ಸ್ನಾನಮಾಡಿ ದೇಹವು ವಿಷವನ್ನು ಕಳೆದುಕೊಂಡು ಮೊದಲಿನಂತಾಯಿತು ಎಂದು ಭಾವ.

ಈ ಶ್ಲೋಕದಲ್ಲಿರುವ ದೇವೀಂ ಋಷಿಕುಲ್ಯಾಂ ಎಂಬ ಪದಗಳಿಗೆ ಪ್ರಕೃತೋಪಯುಕ್ತ ಅರ್ಥವನ್ನು ತಿಳಿಸುವರು –

**ದೇವೀಂ ದ್ಯೋತಮಾನಾಂ । ಋಷಿಕುಲ್ಯಾಂ ಋಷಿಕುಲಸ್ತುತಿಪರಾಂ ।**

ಪ್ರಕಾಶಮಾನವಾದ ಋಷಿಗಳ ಕುಲವನ್ನು ಸ್ತುತಿಸುವಲ್ಲಿ ತಾತ್ಪರ್ಯವುಳ್ಳ ಎಂದರ್ಥ. ಇದರಿಂದ ಅಬಾಧಿತ ಅರ್ಥಪ್ರತಿಪಾದಕವೆಂದು ಹೇಳಿದಂತಾಯಿತು ಎಂದು ತಿಳಿಯಬೇಕು ॥೧೩॥

**ಸತೀಂ ವ್ಯಾದಾಯ ಶೃಣ್ವಂತೋ ಲಘ್ವೀಂ ಗುರ್ವರ್ಥಗಹ್ವರಾಂ ।**
**ವಿಗಾಹ್ಯಾಗಾಧಗಂಭೀರಾಂ ನ ವಿದುಸ್ತಚ್ಚಿಕೀರ್ಷಿತಂ ॥೧೪॥**

ಸತೀಂ=ನಿರ್ದುಷ್ಟವಾದ ಲಘ್ವೀಂ=ಮಿತಾಕ್ಷರಗಳುಳ್ಳ ಗುರ್ವರ್ಥಗಹ್ವರಾಂ= ಮಹತ್ತರವಾದ ಅರ್ಥಗಳಿಂದ ಪ್ರವೇಶಿಸಲಾಗದ ಅಗಾಧಾಂ=ತಲಸ್ಪರ್ಶಿಯಾಗದ ಅಭಿಪ್ರಾಯವನ್ನು ತಿಳಿಯಲಾಗದ ಗಂಭೀರಾಂ=ಅರ್ಥತಃ ಅವಗಾಹನ ಮಾಡಲಾಗದ ಮಾತನ್ನು ವ್ಯಾದಾಯ ಶೃಣ್ವಂತಃ=ಬಾಯಿ ತೆರೆದು ಕಿವಿಗೊಟ್ಟು ಆಲಿಸುವ ಸನಕಾದಿಗಳು ತಚ್ಚಿಕೀರ್ಷಿತಂ ನ ವಿದುಃ=ಪರಮಾತ್ಮನು ಏನು (ಮಾಡಲು ಹೊರಟಿರುವನು) ತಿಳಿಸಲು ಹೊರಟಿರುವನೆಂದು ತಿಳಿಯಲಿಲ್ಲ. ಮಾತುಗಳ ಮಾಧುರ್ಯವನ್ನು ಆಸ್ವಾದಿಸಿ ಮನಸ್ತೃಪ್ತಿಯಾಯಿತು, ಹೊರತು ಅರ್ಥಜ್ಞಾನದಿಂದಲ್ಲ. ಅದು ಅವರಿಗೆ ಆಗಲೇ ಇಲ್ಲವೆಂದು ಭಾವ ॥೧೪॥

ಹಾಗಾದರೆ ತಿಳಿದಷ್ಟಾದರೂ ಅಥವಾ ತಿಳಿಯುವವರೆಗೆ ಏನೂ ಮಾಡಲಿಲ್ಲವೇ ಎಂದರೆ ಹೇಳುವರು –

**ತೇ ಯೋಗಮಾಯಯಾऽರಬ್ಧಪಾರಮೇಷ್ಠ್ಯಮಹೋದಯಂ ।**
**ಪ್ರೋಚುಃ ಪ್ರಾಂಜಲಯೋ ವಿಪ್ರಾಃ ಪ್ರಹೃಷ್ಟಾಃ ಕಂಪಿತತ್ವಚಃ ॥೧೫॥**

ಕಂಪಿತತ್ವಚಃ=ರೋಮಾಂಚಗೊಂಡ ಪ್ರಹೃಷ್ಟಾಃ=ಸಂತೋಷಗೊಂಡಂತೆ ವಿಪ್ರಾಃ= ಆ ಸನಕಾದಿಬ್ರಾಹ್ಮಣರು ಪ್ರಾಂಜಲಯಃ=ಕೈಜೋಡಿಸಿ ಯೋಗಮಾಯಯಾ=ತನ್ನ ಸ್ವರೂಪೇಚ್ಛೆಯಿಂದುಂಟಾದ ಹುಬ್ಬನ್ನು ಹಾರಿಸುವುದರಿಂದ ಆರಬ್ಧ=ಉಂಟಾದ ಪಾರಮೇಷ್ಠ್ಯಮಹೋದಯಂ=ಬ್ರಹ್ಮಪದಸಂಬಂಧಿಯಾದ ಮಹದೈಶ್ವ್ಯರ್ಯವುಳ್ಳ ಹರಿಯನ್ನು ಕುರಿತು ಪ್ರೋಚುಃ=ಮಾತಾಡಿದರು.

ಈ ಶ್ಲೋಕದಲ್ಲಿ ಯೋಗಮಾಯಾಶಬ್ದಕ್ಕೆ ಅನಿರ್ವಾಚ್ಯ ಅವಿದ್ಯಾ ಎಂದರ್ಥವಲ್ಲ. ನಾವು ಹೇಳಿದುದೆ ಸರಿಯಾದ ಅರ್ಥ ಎಂಬುದಕ್ಕೆ ಪ್ರಮಾಣ ತೋರಿಸುವರು.

**"ತದ್ಭ್ರೂವಿಜೃಂಭಃ ಪರಮೇಷ್ಠ್ಯಧಿಷ್ಣ್ಯಂ ಇತ್ಯುಕ್ತಂ ।**

ಭಗವಂತನ ಭ್ರೂವಿಲಾಸವು ಬ್ರಹ್ಮಪದವಿಗೆ ಜನಕವೆಂದು ಹಿಂದೆ ಹೇಳಿದೆ ಆದ್ದರಿಂದ ಇಲ್ಲಿ ಅದೇ ರೀತಿ ಅರ್ಥ ಹೇಳಬೇಕು ಎಂದು ಭಾವ ॥೧೫॥

'ತದನುಗ್ರಹೋ ಮೇ' ಎಂಬುದಕ್ಕೆ ಪ್ರತೀತಾರ್ಥ ಸರಿಯಲ್ಲವೆಂದು ಹೇಳುವರು

**ಋಷಯ ಊಚುಃ**

**ನ ವಯಂ ಭಗವಾನ್ ವಿದ್ಮಸ್ತವ ದೇವ ಚಿಕೀರ್ಷಿತಂ ।**
**ಕೃತೋ ಮೇऽನುಗ್ರಹಶ್ಚೇತಿ ಯದಧ್ಯಕ್ಷಃ ಪ್ರಭಾಷಸೇ ॥೧೬॥**

ಹೇ ದೇವ=ಪರಮಾತ್ಮನೇ ಯತ್=ಯಾವ ಕಾರಣ ಅಧ್ಯಕ್ಷಃ=ಎಲ್ಲರಿಗೂ ನಿಯಾಮಕನು ಯಾರ ಅನುಗ್ರಹಾಪೇಕ್ಷೆಯೂ ನಿನಗಿಲ್ಲ, ಹೀಗಿದ್ದರೂ ಮೇ=ನನಗೆ ಅನುಗ್ರಹಃ ಕೃತಃ=ಅನುಗ್ರಹ ಮಾಡಲ್ಪಟ್ಟಿತು ಇತಿ=ಎಂದು ಪ್ರಭಾಷಸೇ= ಮಾತನಾಡುತ್ತಿರುವಿ ಆದ್ದರಿಂದ ತವ ಚಿಕಿರ್ಷತಂ=ನಿನಗೆ ಹೇಳಬೇಕಾದದ್ದು ಏನೆಂದು ವಯಂ ನಾವು ನ ವಿದ್ಮಃ=ತಿಳಿಯಲಾರೆವು. ಅಂದರೆ ಮೇಲೆ ತೋರುವ ಅರ್ಥ ಸರಿಯಲ್ಲ ನಿನ್ನ ತಾತ್ಪರ್ಯವಿಷಯವಾದ ಅರ್ಥ ಬೇರೆಯೇ ಇದೆ ಎಂದು ತಿಳಿಯುವೆವು ಎಂದು ಭಾವ ॥೧೬॥

"ಬ್ರಹ್ಮದೈವಂ ಪರಂ ಹಿ ಮೇ" ಎಂಬುದಕ್ಕೂ ತೋರುವ ಅರ್ಥಸರಿಯಲ್ಲ-ವೆಂದು ಹೇಳುವರು-

**ಬ್ರಹ್ಮಣ್ಯಸ್ಯ ಪರಂ ದೈವಂ ಬ್ರಾಹ್ಮಣಾಃ ಕಿಲ ತೇ ಪ್ರಭೋ ।**
**ವಿಪ್ರಾಣಾಂ ದೇವದೇವಾನಾಂ ಭಗವಾನಾತ್ಮದೈವತಂ ॥೧೭॥**

ಹೇ ಪ್ರಭೋ=ಸ್ವಾಮಿಯೇ ಬ್ರಹ್ಮಣ್ಯಸ್ಯ=ಬ್ರಾಹ್ಮಣರಿಂದ ಪೂಜ್ಯನಾದ ತೇ=ನಿನಗೆ ಬ್ರಾಹ್ಮಣಾಃ ಪರಂ ದೈವಂ ಕಿಲ=ಬ್ರಾಹ್ಮಣರು ಪರದೇವತೆಗಳಷ್ಟೇ (ಕಿಲ ಎಂಬುದರಿಂದ ಪ್ರತೀತಾರ್ಥ ಬಾಧಿತವೆಂದು ಸೂಚಿಸುವರು) ದೇವದೇವಾನಾಂ =ದೇವತೆಗಳಿಗೂ ಪೂಜ್ಯರಾದ ವಿಪ್ರಾಣಾಂ=ಬ್ರಾಹ್ಮಣರಿಗೆ ಭಗವಾನ್=ಪರಮಾತ್ಮನು ಆತ್ಮದೈವತಂ= ಕುಲದೇವತೆಯು ಎಂದು ಭಾವ ॥೧೭॥

ಬ್ರಾಹ್ಮಣರಿಂದ ಮಾಡಲ್ಪಡುವ ಧರ್ಮದ ರಕ್ಷಕನಾದ್ದರಿಂದ ಅವರಿಗೆ ದೇವತೆ ಎಂದು ಹೇಳುವರು -

**ತ್ವತ್ತಃ ಸನಾತನೋ ಧರ್ಮೋ ರಕ್ಷ್ಯತೇ ತನುಭಿಸ್ತವ ।**
**ಧರ್ಮಸ್ಯ ಪರಮೋ ಗುಹ್ಯೋ ನಿರ್ವಿಕಾರೋ ಭವಾನ್ ಮತಃ ॥೧೮॥**

ತ್ವತ್ತಃ=ನಿನ್ನ ಮೂಲರೂಪದಿಂದ ತವ ತನುಭಿಃ=ನಿನ್ನ ಕಪಿಲಾದಿಅವತಾರ-ಗಳಿಂದಲೂ ಧರ್ಮಃ=ಧರ್ಮವು ರಕ್ಷ್ಯತೇ=ರಕ್ಷಿಸಲ್ಪಡುವುದು. ಧರ್ಮಸ್ಯ= ಧರ್ಮಾಭಿಮಾನಿಯಾದ ಯಮಧರ್ಮನಿಗೂ ಗುಹ್ಯಃ=ತಿಳಿಯಲಾಗದವನು, ಪರಮಃ=ಸರ್ವೋತ್ತಮನು ನಿರ್ವಿಕಾರಃ=ವಿಕಾರರಹಿತನು ಎಂದು ಭವಾನ್= ತಾವು ಮತಃ=ವೇದದಿಂದ ತಿಳಿಯಲ್ಪಟ್ಟವನು, ಆದ್ದರಿಂದ ನಿನಗೆ ಬ್ರಾಹ್ಮಣರು ದೇವರಾಗುವುದು ಹೇಗೆ ಸಾಧ್ಯ ॥೧೮॥

ಮುಂದೆ ಹೇಳುವ ಕಾರಣದಿಂದಲೂ "ತದನುಗ್ರಹೋ ಮೇ" ಎಂಬ ವಾಕ್ಯವು ಮೇಲೆ ತೋರುವ ಅರ್ಥವುಳ್ಳದ್ದಲ್ಲವೆಂದು ಹೇಳುವರು -

**ತರಂತಿ ಹ್ಯಂಜಸಾ ಮೃತ್ಯುಂ ನಿವೃತ್ತಾ ಯದನುಗ್ರಹಾತ್ ।**
**ಯೋಗಿನಃ ಸ ಭಗವಾನ್ ಕಿಂಸ್ವಿದನುಗೃಹ್ಯೇತ ಯತ್ ಪರೈಃ ॥೧೯॥**

ನಿವೃತ್ತಾಃ=ನಿಷ್ಕಾಮಕರ್ಮದಲ್ಲಿ ನಿರತರಾದ ಯೋಗಿನಃ=ಯೋಗಿಗಳು ಯದನುಗ್ರಹಾತ್=ಯಾವ ನಿನ್ನ ಅನುಗ್ರಹದಿಂದ ಮೃತ್ಯುಂ=ಸಂಸಾರವನ್ನು ಅಂಜಸಾ ತರಂತಿ=ಮತ್ತೆ ಬರದಂತೆ ದಾಟುವರು. ಸಃ=ಅಂಥ ನೀನು ಭಗವಾನ್=ಶ್ರೀಹರಿಯು ಪರೈಃ=ಬೇರೆಯವರಾದ ಬ್ರಾಹ್ಮಣಾದಿಗಳಿಂದ ಅನುಗೃಹ್ಯೇತ ಇತಿ ಯತ್=

ಅನುಗ್ರಹದಿಂದ ಜೀವಿಸುವೆನೆಂಬುದೇನಿದೆಯೋ ತತ್=ಅದು ಕಿಂಸ್ವಿತ್=ಬ್ರಾಹ್ಮಣರ ಸ್ತೋತ್ರವಲ್ಲದೆ ಮತ್ತೇನು ? ಬೇರೆನಲ್ಲವೆಂದರ್ಥ ॥೧೯॥

ಬ್ರಾಹ್ಮಣರ ಪವಿತ್ರ ಪಾದುರೇಣುವಿನ ಸೇವೆಯಿಂದ ಒಳ್ಳೆ ಗುಣಗಳನ್ನು ಹೊಂದಿದ ನನ್ನನ್ನು ಲಕ್ಷ್ಮೀದೇವಿಯೂ ಬಿಡಲಾರಳು ಎಂದು ಹೇಳಿದುದು ಪ್ರತೀತಾರ್ಥವಲ್ಲ ಎಂದು ಹೇಳುವರು –

**ಯಂ ವೈ ವಿಭೂತಿರುಪಯಾತ್ಯನುವೇಲಮನ್ಯೈ-**
**ರರ್ಥಾರ್ಥಿಭಿಃ ಸ್ವಶಿರಸಾ ಧೃತಪಾದರೇಣುಃ ।**
**ಧನ್ಯಾರ್ಪಿತಾಂಘ್ರಿತುಲಸೀನವದಾಮಧಾಮ್ನೋ**
**ಲೋಕಂ ಮಧುವ್ರತಪತೇರಿವ ಕಾಮಯಾನಾ ॥೨೦॥**

ಅನ್ಯೈಃ=ಬ್ರಹ್ಮಾದಿಗಳಿಂದ ಅರ್ಥಾರ್ಥಿಭಿಃ=ನಾಲ್ಕುವಿಧ ಪುರುಷಾರ್ಥವನಿಚ್ಛಿಸುವ ಜ್ಞಾನಾದಿಗಳನ್ನಿಚ್ಛಿಸುವ ಬ್ರಾಹ್ಮಣರಿಂದ ಸ್ವಶಿರಸಾ=ತಮ್ಮ ಶಿರಸ್ಸಿನಿಂದ ಧೃತಪಾದ-ರೇಣುಃ=ಧರಿಸಲ್ಪಟ್ಟ ಪಾದಧೂಳಿಯುಳ್ಳ ವಿಭೂತಿಃ=ಮಹಾಲಕ್ಷ್ಮೀದೇವಿಯು ವಕ್ಷಸ್ಥಳದಲ್ಲಿದ್ದರೂ ಮಧುವ್ರತಪತೇಃ=ಸಾರಗ್ರಾಹಿಗಳಿಗೆ ಪತಿಯಾದ ನಿನ್ನ ಧನ್ಯಾರ್ಪಿ-ತಾಂಘ್ರಿ=ಭಕ್ತರಿಂದ ಸಮರ್ಪಿತವಾದ ಪಾದಗಳಲ್ಲಿರುವ ತುಲಸೀನವದಾಮಧಾಮ್ನಃ= ತುಳಸಿಯ ನೂತನವಾದ ಮಾಲೆಯ ಸ್ವರೂಪದ (ಮಾಲೆಯ ರೂಪದಿಂದ ಪಾದಗಳಲ್ಲಿರುವ ತುಳಸಿಯ) ಲೋಕಂ=ಸ್ಥಾನವನ್ನು ಕಾಮಯಾನಾ ಇವ= ಸ್ಪರ್ಧಿಸುವಳಂತೆ ಯಂ=ಯಾವನನ್ನು ಅನುವೇಲಂ=ಪ್ರತಿಯೊಂದೂ ಕಾಲದಲ್ಲಿ ಉಪಯಾತಿ=ಸೇವಿಸಲು ಬರುವಳು.

ಇದರಿಂದ ಬ್ರಾಹ್ಮಣರು ಮತ್ತು ಬ್ರಹ್ಮಾದಿಗಳಿಂದ ಸೇವ್ಯಳಾದ ಲಕ್ಷ್ಮಿಯಿಂದ ಸೇವ್ಯನಾದ ನಿನ್ನ ಬ್ರಾಹ್ಮಣರ ಸೇವೆಯಿಂದ ಲಕ್ಷ್ಮಿಯು ನನ್ನನ್ನು ಬಿಡಲಾರಳು ಎಂಬ ಮಾತು ಮೇಲೆ ತೋರುವ ಅರ್ಥಉಳ್ಳದ್ದಲ್ಲವೆಂಬುದನ್ನು ಉಪಪಾದಿಸಿ-ದಂತಾಯಿತು. ಸ್ವಾಭಾವಿಕವಾಗಿಯೇ ಸೇವಿಸುವಳು. ಇಲ್ಲಿ ಹೀಗೆ ಉತ್ಪ್ರೇಕ್ಷೆ-ಬ್ರಹ್ಮಾದಿಗಳಿಗಿಂತ ಉತ್ತಮಳಾದ ರಮೆಯು ತಾನು ಹರಿಯ ವಕ್ಷಸ್ಥಳದಲ್ಲಿದ್ದರೂ ತುಲಸಿಯಸ್ಥಾನವಾದ ಶ್ರೀಹರಿಯ ಪಾದಗಳನ್ನು ತನ್ನ ಸ್ಥಾನಕ್ಕಿಂತಲೂ ಶ್ರೇಷ್ಠವೆಂದು ತಿಳಿದು ತುಳಸಿಯೊಡನೆ ಸ್ಪರ್ಧೆಯಿಂದಲೋ ಎನ್ನುವಂತೆ ಪಾದಗಳನ್ನು ಅಪೇಕ್ಷಿಸಿ ಸೇವಿಸಲು ಬರುವಳು. ತನ್ನ ಸ್ಥಾನಕ್ಕಿಂತ ತುಲಸೀಸ್ಥಾನ ಶ್ರೇಷ್ಠವೆಂದು ತಿಳಿಯಲು ಕಾರಣವೇನೆಂದರೆ ಭಗವಂತನು ತುಲಸಿಗೆ ಪಾದಗಳನ್ನು ಸ್ಥಾನವನ್ನಾಗಿ ಕೊಟ್ಟಿರುವನು ಆದ್ದರಿಂದಲೇ ಭಕ್ತರು ಅಲ್ಲಿಯೆ ತುಳಸಿಯನ್ನು ಅರ್ಪಿಸುವರು.

ತುಲಸಿಯಾದರೋ ಭಗವಂತನಿಗೆ ಅತಿಪ್ರಿಯಳು ಎಂಬುದು ಪ್ರಸಿದ್ಧ. ಅವನು ಸಾರಗ್ರಾಹಿಗಳಿಗೆ ಪತಿಯೆಂದ ಮೇಲೆ ತುಳಸಿಯಲ್ಲಿ ಅವನಿಂದ ಗ್ರಾಹ್ಯವಾದ ಸಾರವಿದೆ ಎಂದಾಯಿತು. ಅಂಥವಳಿಗೆ ಸಾಮಾನ್ಯ ಸ್ಥಾನ ಕೊಡಲಾರನು ಕಾರಣ ಪಾದಗಳೆಂಬ ತುಳಸಿಯ ಸ್ಥಾನವು ನನ್ನ ಸ್ಥಾನದಂತೆ ಉತ್ತಮವೇ ಇರಬೇಕು ಎಂದು ಭಾವಿಸಿದಳು ಲಕ್ಷ್ಮೀದೇವಿ ಎಂದು ತಿಳಿಯಬೇಕು. ॥೨೦॥

ಏಳನೇ ಶ್ಲೋಕದಲ್ಲಿ ವಿರಕ್ತಮಪಿ ಎಂದು ರಮೆಯಲ್ಲಿ ವೈರಾಗ್ಯವಿದೆ ಎಂದು ಹೇಳಿದ್ದೂ ಸಹ ಅವಳಲ್ಲಿ ಸರ್ವಥಾ ರಾಗವಿಲ್ಲವೆಂದಲ್ಲ, ಆದರೆ ಕಾಮ ಪ್ರಯುಕ್ತರಾಗವಿಲ್ಲವೆಂಬ ಅಭಿಪ್ರಾಯದಿಂದ ಎಂದು ಹೇಳುವರು -

**ಯಸ್ತಾಂ ವಿವಿಕ್ತಚರಿತ್ರೈರನುವರ್ತಮಾನಾಂ**
**ನಾತ್ಯಾದ್ರಿಯತ್ ಪರಮಭಾಗವತಪ್ರಸಂಗಃ ।**
**ಸತ್ವಂ ದ್ವಿಜಾನುಪಥಪುಣ್ಯರಜಃಪುನೀತಿಃ**
**ಶ್ರೀವತ್ಸಲಕ್ಷ್ಮ ಕಿಮಗಾ ಭಗಭಾಜನತ್ವಂ ॥೨೧॥**

ಪರಮಭಾಗವತಪ್ರಸಂಗಃ=ಸರ್ವೋತ್ತಮ ಭಗವದ್ಭಕ್ತಳೆಂದು ಅವಳಲ್ಲಿ ಉತ್ತಮ ಸ್ನೇಹವುಳ್ಳಯಃ=ಯಾವ ನೀನು ವಿವಿಕ್ತಚರಿತ್ರೈಃ=ಅಸಾಧಾರಣ ಪರಿಚರಣೆಗಳಿಂದ (ಸೇವೆಗಳಿಂದ) ಅನುವರ್ತಮಾನಾಂ=ಅನುಸರಿಸುವ ತಾಂ=ಲಕ್ಷ್ಮೀದೇವಿಯನ್ನು ನ ಅತ್ಯಾದ್ರಿಯತ್=ಸ್ತ್ರೈಣನಂತೆ ಕಾಮದಿಂದ ಆದರಿಸಿಲ್ಲವೋ ಸಃ ತ್ವಂ=ಅಂಥನೀನು ದ್ವಿಜಾನುಪಥಪುಣ್ಯರಜಃಪುನೀತಿಃ=ಬ್ರಾಹ್ಮಣರಿಗೆ ಅನುಸರಿಸಿ ನಡೆದಾಗ (ಹಿಂದೆ ನಡೆದಾಗ) ಪುಣ್ಯಕರವಾದ ಪಾದಧೂಳಿಯಿಂದ ಪಾವಿತ್ರ್ಯವನ್ನು ನೀಡುವವನು. ಬ್ರಾಹ್ಮಣರ ಪಾದಧೂಳಿಯ ಸೇವೆಯಿಂದ ಶ್ರೀವತ್ಸಲಕ್ಷ=ಶ್ರೀವತ್ಸಲಾಂಛನ ಸ್ವಭಾವವನ್ನೂ ಭಗಬಾಜನತ್ವಂ=ಐಶ್ವರ್ಯಾದಿಗುಣಪಾತ್ರತೆಯನ್ನು ಅಗಾಃ ಕಿಂ ಪಡೆದಿರುವೆ ಏನು? ಎಂದು ಆಕ್ಷೇಪ. ಆದ್ದರಿಂದ ನೀನು ಹೇಳಿದುದೆಲ್ಲವೂ ನಮ್ಮನ್ನು ಸ್ತುತಿಸಲು ಅಸುರ ಜನ ಮೋಹಗೊಳಿಸಲು ಎಂದೇ ನಾವು ಭಾವಿಸಿರುವೆವು.

ಈ ಶ್ಲೋಕದಲ್ಲಿ ಪರಮ ಭಾಗವತಪ್ರಸಂಗಃ ಎಂದರೆ ಶ್ರೇಷ್ಠ ಭಗವದ್ಭಕ್ತರಲ್ಲಿ ಒಳ್ಳೆಸ್ನೇಹವುಳ್ಳ ಪರಮಭಾಗವತೇಷು ಪ್ರಕೃಷ್ಟಃ ಸಂಗಃ ಸ್ನೇಹಃ ಯಸ್ಯ ಸಃ, ಎಂದು ವಿಗ್ರಹ ಮಾಡಿಕೊಂಡು ಶ್ರೀಹರಿಯು ತಾಂ ನ ಅತ್ಯಾದ್ರಿಯತ್ ಎಂದು ಇತರ ಭಗವದ್ಭಕ್ತರಿಗಿಂತ ಲಕ್ಷ್ಮೀದೇವಿಯಲ್ಲಿ ಭಗವಂತನಿಗೆ ಆದರವಿಲ್ಲವೆಂದು ತೋರುವುದು ಕಾರಣ ತಾತ್ಪರ್ಯ ಹೇಳುವರು -

**ಪರಮಭಾಗವತತ್ವೇನ ತಸ್ಯಾಂ ಅತ್ಯಾದರಃ । ನ ತು ಕಾಮಾತ್ ।**

ಇದರಿಂದ ಪರಮಭಾಗವತಪದವು ಭಾವಪ್ರಧಾನ ಮತ್ತು ತೃತೀಯಾಂತ ಮತ್ತು ರಮಾಪರವೆಂದು ಸೂಚಿಸಿದಂತಾಯಿತು. ಪರಮಭಾಗವತತ್ವೇನ ಪ್ರಸಂಗಃ ಯಸ್ಯ ಸಃ ಎಂದು ವಿಗ್ರಹ. ನ ಆತ್ಯಾದ್ರಿಯತ್ ಎಂದು ಹೇಳಿದರೆ ರಮೆಯಲ್ಲಿ ಭಗವದಾದರ ಹೇಳುವ ವಾಕ್ಯವಿರೋಧವೂ ಪರಿಹೃತವಾಯಿತು. ಆದರವಿಲ್ಲವೆಂದರೆ ಕಾಮುಕತೆ-ಯಿಂದ ಆದರವಿಲ್ಲ ಎಂದರ್ಥ. ಆದರವಿದೆ ಎಂಬುದಕ್ಕೆ ಸರ್ವೋತ್ತಮ ಭಗವದ್ಭಕ್ತಳೆಂದು ಆದರವಿದೆ ಎಂದು ಭಾವ. ಇದು ಸರಿ. ಇವಳು ಪರಮ ಭಾಗವತಳಾಗುವುದಕ್ಕೆ ಬೇಕಾದ ಗುಣಗಳನ್ನು ಪಡೆದಿರುವಳೇ ? ಎಂದರೆ ಪ್ರಮಾಣ ಹೇಳುವರು.

**''ಹರಿಭಕ್ತಿರ್ಹರೇಃ ಪ್ರೀತಿರ್ಜ್ಞಾನಾನಂದಾದಯೋ ಗುಣಾಃ ।**
**ಅಧಿಕಾರೇ ಚ ಮುಕ್ತೌ ಚ ಬ್ರಹ್ಮವಾಯ್ವೋಶ್ಚ ತತ್ ಸ್ತ್ರಿಯೋಃ ॥**
**ಶೇಷವೀಂದ್ರಹರಾಣಾಂ ಚ ತತ್ಸ್ತ್ರೀಣಾಂ ವಾಸವಾದಿನಾಂ ।**
**ಯಥಾಕ್ರಮಂ ತು ವಿಜ್ಞೇಯಾ ಭೂಮೌ ಕಾರಣತೋಽನ್ಯಥಾ ।**
**ದೇಹಸ್ಯ ಲಕ್ಷಣಂ ನೈವ ಭೂಮಾವಪ್ಯನ್ಯಥಾಭವೇತ್ ।**
**ಬ್ರಹ್ಮಾದಿಷು ಕ್ರಮೇಣೈವ ನಿತ್ಯಂ ಸ್ಯಾದ್ದೇಹಲಕ್ಷಣಂ ।**
**ಶ್ರೀಯೋಽಧಿಕಾ ಗುಣಾಃ ಸರ್ವೇ ಸರ್ವೇಭ್ಯೋ ನಿಯಮೇನ ತು ।**
**ಉಕ್ತಾಶ್ಚೈವಾಪ್ಯನುಕ್ತಾಶ್ಚ ತತೋ ವಿಷ್ಣೋರ್ನಸಂಶಯಃ'' ॥**

**ಇತಿ ತತ್ವನಿರ್ಣಯೇ॥**

ಬ್ರಹ್ಮದೇವರು ವಾಯುದೇವರು ಅವರ ಪತ್ನಿ ಸರಸ್ವತೀಭಾರತೀಯರಿಗೆ ಶೇಷ ಗರುಡರುದ್ರದೇವರಿಗೆ ಅವರ ಪತ್ನಿಯರಾದ ವಾರುಣೀಸೌಪರ್ಣಿಪಾರ್ವತಿಯರಿಗೂ ಇಂದ್ರಾದಿದೇವತೆಗಳಿಗೂ ತಮ್ಮ ತಮ್ಮ ಪದವಿಯಲ್ಲಿರುವಾಗಲೂ ಮುಕ್ತಿಯಲ್ಲಿಯೂ ಶ್ರೀಹರಿಯಲ್ಲಿ ಭಕ್ತಿಯು ಜ್ಞಾನಾನಂದಾದಿಗುಣಗಳು ಇವರ ಮೇಲೆ ಶ್ರೀಹರಿಯ ಪ್ರೀತಿಯೂ ಕ್ರಮವಾಗಿ ತಾತರಮ್ಯಾನುಗುಣವಾಗಿ ಇರುವವೆಂದು ತಿಳಿಯಬೇಕು. ಭೂಮಿಯಲ್ಲಿ ಅವತರಿಸಿದಾಗ ಮಾನುಷಾನ್ನಭೋಗ ಮುಂತಾದ ಕಾರಣದಿಂದ ಗುಣಗಳಲ್ಲಿ ವ್ಯತ್ಯಾಸ ಕಂಡು ಬರುವುದು. ಅವತಾರಗಳಲ್ಲಿಯೂ ದೇಹದ ಲಕ್ಷಣಗಳು ವ್ಯತ್ಯಾಸಗೊಳ್ಳುವುದಿಲ್ಲ.

ಬ್ರಹ್ಮಾದಿಗಳ ದೇಹದಲ್ಲಿ ಲಕ್ಷಣಗಳು ಮೂವತ್ತೆರಡರಲ್ಲಿ ಯಾರಿಗೆ ಎಷ್ಟು ಕ್ಲೃಪ್ತವಾಗಿದೆಯೋ ಅಷ್ಟು ಯಾವಾಗಲೂ ಇರುವುವು. ಲಕ್ಷ್ಮೀದೇವಿಗೆ ಹರಿಭಕ್ತಿ ಮುಂತಾದ ಎಲ್ಲ ಗುಣಗಳು ಎಲ್ಲರಿಗಿಂತ ಹೆಚ್ಚಾಗಿ ನಿಯಮೇನ ಇರುವವು.

ಅವಳಿಗಿಂತ ಅಧಿಕವಾಗಿ ವೇದಾದಿಗಳಲ್ಲಿ ಹೇಳಿದ ಹೇಳದಿರುವ ಗುಣಗಳು ವಿಷ್ಣುವಿನಲ್ಲಿವೆ. ಇದರಲ್ಲಿ ಸಂಶಯವಿಲ್ಲ ಎಂದು ತತ್ವನಿರ್ಣಯ ಎಂಬ ಗ್ರಂಥದಲ್ಲಿ ಹೇಳಿದೆ.

ಇದರಿಂದ ವಿವಿಕ್ತಚರಿತೈಃ ಅನುವರ್ತಮಾನಾಂ ಎಂಬುದಕ್ಕೆ ಸೇವಕತಾರತಮ್ಯ ಕೊನೆಯಲ್ಲಿರುವ ಭಕ್ತ್ಯಾದಿಪೂರ್ವಕ ಸೇವೆಯಿಂದ ಅನುಸರಿಸುವ ಎಂದು ಅರ್ಥ ಮಾಡಿದಂತಾಗಿ ಲಕ್ಷ್ಮೀದೇವಿಯು ಪರಮಭಾಗವತಳೆಂಬುದಕ್ಕೆ ಉಪಪಾದಕ-ವಾಯಿತು. ॥೨೧॥

ನಾನೇಕೇ ನಿಮ್ಮನ್ನು ಸ್ತುತಿಸಬೇಕು ಎಂದರೆ ಜಗದ್ಧಾರಕಧರ್ಮಪ್ರವರ್ತಕರು ಬ್ರಾಹ್ಮಣರಾದ್ದರಿಂದ ಎಂದು ಹೇಳುವರು –

**ಧರ್ಮಸ್ಯ ತೇ ಭಗವತಸ್ತ್ರಿಯುಗ ತ್ರಿಭಿಸ್ಸ್ವೈಃ**
**ಪದ್ಭಿಶ್ಚರಾಚರಮಿದಂ ದ್ವಿಜದೇವತಾರ್ಥಂ ।**
**ನೂನಂ ಭೃತಂ ತದಭಿಘಾತಿರಜಸ್ತಮಶ್ಚ**
**ಸತ್ವೇನ ನೋ ವರದಯಾ ತನುವಾ ನಿರಸ್ಯ ॥೨೨॥**

ಹೇ ತ್ರಿಯುಗ=ಮೂರು ಯುಗಗಳಲ್ಲಿ ಮಾತ್ರ ಅವತಾರ ಮಾಡುವವನೇ ಧರ್ಮಸ್ಯ=ಧಾರಕನಾದ ತೇ=ನಿನ್ನ ಭಗವತಃ=ಐಶ್ವರ್ಯಶಾಲಿಯಾದ ಸ್ವೈಃ= ಸ್ವರೂಪಭೂತವಾದ ತ್ರಿಭಿಃ ಪದ್ಭಿಃ=ಅನಂತಾಸನ, ವೈಕುಂಠ, ಕ್ಷೀರಸಾಗರಗಳಲ್ಲಿರುವ ಅಂಶಗಳಿಂದ ಚರಾಚರಂ ಇದಂ=ಚೇತನಾಚೇತನ ಪ್ರಪಂಚವನ್ನು ದ್ವಿಜದೇವತಾರ್ಥಂ ಬ್ರಾಹ್ಮಣರಿಂದ ಮಾಡುವ ದೇವತೋದ್ದೇಶ್ಯಕ ಧರ್ಮದ ಪ್ರವೃತ್ತಿಗಾಗಿ ತದಭಿಘಾತಿ=ಆಧರ್ಮಕ್ಕೆ ಘಾತಕಗಳಾದ ರಜಃ ತಮಶ್ಚ=ರಜೋಗುಣ ತಮೋಗುಣ-ವುಳ್ಳವರನ್ನು ವರದಯಾ ತನುವಾ=ಕಪಿಲಾವತಾರದಿಂದ ನಃ=ಬ್ರಾಹ್ಮಣರಾದ ನಮ್ಮಗಳ ಸತ್ವೇನ=ಸತ್ವಗುಣದ ಅಭಿವೃದ್ಧಿ ಮಾಡುವುದರಿಂದ ನಿರಸ್ಯ=ನಿರಾಕರಿಸಿ ನೂನಂ ಭೃತಂ=ನಿಶ್ಚಯವಾಗಿ ಪಾಲಿತವಾಗಿದೆ.

ಇಲ್ಲಿ ಭಗವಂತನು ಧರ್ಮಶಬ್ದವ್ಯಾಚ್ಯನೇಕೆಂದು ಪ್ರಮಾಣದಿಂದ ಹೇಳುವರು.

**''ಧಾರಣಾದ್ಭಗವಾನ್ ಧರ್ಮೋ ಯಮನಾದ್ಯಮ ಉಚ್ಯತೇ'' ।**
**ಇತಿ ಶಬ್ದನಿರ್ಣಯೇ ।**

ಭಗವಂತನು ಎಲ್ಲ ಜಗತ್ತನ್ನು ಧಾರಣ ಮಾಡುವುದರಿಂದ ಧರ್ಮನೆಂದು ನಿಯಮನ ಮಾಡುವುದರಿಂದ ಯಮನೆಂದೂ ಕರೆಸಿಕೊಳ್ಳುವನು.

ತ್ರಿಭಿಃ ಎಂದರೆ ತಪಃ, ಶೌಚ, ದಯಾ ಎಂಬ ಮೂರಂಶಗಳಿಂದ ನಮಗೆ ವರಪ್ರಸಾದವಾದ ಸತ್ವದೇಹದಿಂದ ಎಂದು ಅರ್ಥ ತೋರುವುದು, ಕಾರಣ ಈ ಶ್ಲೋಕವನ್ನು ಪ್ರಮಾಣದಿಂದ ವ್ಯಾಖ್ಯಾನಿಸುವರು –

**''ಅನಂತಾಸನವೈಕುಂಠಕ್ಷೀರಸಾಗರಗೈಸ್ತ್ರಿಭಿಃ ।**
**ರಕ್ಷಾಂ ಕರೋತಿ ಭಗವಾನ್ ಕಪಿಲಃ ಸತ್ವವರ್ಧನಾತ್ ।**
**ಅಸತ್ವೋಽಪಿ ರಜಶ್ಚೈವ ತಮಶ್ಚಾಪಿ ನಿರಸ್ಯ ತು'' ॥ ಇತಿ ಮೂರ್ತಿಭೇದೇ ॥**
**''ಕಪಿಲೋ ವರದಶ್ಚೈವ ವಿಕಲಶ್ಚೇತಿ ಕಥ್ಯತೇ'' । ಇತಿ ಚ ।**
**ಅತಃ ಸತ್ವಸ್ಯ ಕರಣತ್ವಮಾತ್ರಂ ಕಪಿಲೋ ವರದಾತನುಃ ॥**

ಭಗವಂತನು ಅನಂತಾಸನ, ವೈಕುಂಠ, ಕ್ಷೀರಸಾಗರಳಲ್ಲಿರುವ ಮೂರು ರೂಪಗಳಿಂದ, ಕಪಿಲನಾಮಕ ಪರಮಾತ್ಮನು ಸತ್ವಗುಣರಹಿತನಾದರೂ ಸತ್ವಗುಣ ಅಭಿವೃದ್ಧಿಗೊಳಿಸಿ ರಜೋಗುಣ, ತಮೋಗುಣವುಳ್ಳವರನ್ನು ನಿರಾಸ ಮಾಡಿ ರಕ್ಷಣೆ ಮಾಡುವನು ಎಂದು ಮೂರ್ತಿಭೇದವೆಂಬ ಗ್ರಂಥದಲ್ಲಿದೆ. ಕಪಿಲ, ವರದ, ವಿಕಲ ಎಂದು ಶ್ರೀಹರಿಯೇ ಹೇಳಲ್ಪಡುವನು. ಯಾವಕಾರಣದಿಂದ ಸತ್ವವಿಲ್ಲದಿದ್ದರೂ ಸತ್ವವನ್ನು ಬೆಳೆಸುವುದರಿಂದ ಎಂದು ಹೇಳಿದೆಯೋ ಮತ್ತು ''ವರದ'' ಎಂಬ ಶಬ್ದಕ್ಕೆ ಕಪಿಲ ಎಂದರ್ಥ ಅಭಿಧಾನ ಸಿದ್ಧವಾಗಿದೆಯೋ ಆದ್ದರಿಂದ ಸತ್ವೇನ ಎಂಬಲ್ಲಿ ಹೇಳಿದ ಸತ್ವ ರಜಸ್ತಮೋನಿರಸನದಲ್ಲಿ ಕರಣತ್ವವನ್ನೂ ಹೇಳುವುದು, ವರದಯಾ ತನುವಾ ಎಂಬಲ್ಲಿ ಹೇಳಿದ ವರದಾತನುವು ಕಪಿಲನೇ ಎಂದು ತಿಳಿಯಬೇಕು ಎಂದು ತಾತ್ಪರ್ಯದ ಭಾವ ॥೨೨॥

ಧರ್ಮಪ್ರವರ್ತಕರಾದ ಬ್ರಾಹ್ಮಣರ ಸ್ತೋತ್ರವನ್ನು ಒಂದು ವೇಳೆ ನೀನು ಮಾಡದೆ ಹೋದರೆ ಏನು ಬಾಧಕವೆಂದು ಹೇಳುವರು –

**ನ ತ್ವಂ ದ್ವಿಜೋತ್ತಮಕುಲಂ ಯದಿಹಾತ್ಮಗೋಪಂ**
**ಗೋಪ್ತಾ ವೃಷ ಸ್ವರ್ಹಣೇನ ಸುಸೂನೃತೇನ ।**
**ತರ್ಹ್ಯೇವ ನಕ್ಷ್ಯತಿ ಶಿವಸ್ತವ ದೇವ ಪಂಥಾ-**
**ಲೋಕೋಽಗ್ರಹೀಷ್ಯದೃಷಭಸ್ಯ ಹಿ ಯತ್ ಪ್ರಮಾಣಮ್ ॥**

ಹೇ ವೃಷ ಹೇ ದೇವ=ಹೇ ಶ್ರೇಷ್ಠನೇ ಕ್ರೀಡಾದಿಗುಣವಿಶಿಷ್ಟನೆ ತ್ವಂ=ನೀನು ಆತ್ಮಗೋಪಂ=ನೀನೆ ರಕ್ಷಕನಾಗಿವುಳ್ಳ ದ್ವಿಜೋತ್ತಮಕುಲಂ=ಬ್ರಾಹ್ಮಣಶ್ರೇಷ್ಠರ ಸಮೂಹವನ್ನು ಇಹ=ಜಗತ್ತಿನಲ್ಲಿ ಸುಸೂನೃತೇನ=ಮಂಗಲಕರಗಳಾದ ಮಧುರ ಮಾತುಗಳುಳ್ಳ ಸ್ವರ್ಹಣೇನ=ಒಳ್ಳೆಯ ಸತ್ಕಾರದಿಂದ ಯದಿ ನ ಗೋಪ್ತಾ=ಒಂದು

ವೇಳೆ ರಕ್ಷಿಸದಿದ್ದರೆ ತರ್ಹಿ=ಆಗಲೇ ತವ=ನಿನ್ನ ಶಿವಃ=ಶುದ್ಧವಾದ ಪಂಥಾಃ=ನಿನ್ನ ಪ್ರೀತಿಗೆ ಕಾರಣವಾದ ಧರ್ಮಮಾರ್ಗವು ನಕ್ಷ್ಯತಿ=ನಾಶವಾಗುವುದು. ಹಿ=ಯಾವ ಕಾರಣ ಲೋಕಃ=ಜನರು ಋಷಭಸ್ಯ=ಸದ್ಧರ್ಮಪ್ರವರ್ತಕನ ಯತ್ಪ್ರಮಾಣಂ= ಯಾವ ವಾಕ್ಯ ಮೂಲಕ ಆಚರಣವೋ ತತ್=ಅದನ್ನೇ ಅಗ್ರಹೀಷ್ಯತ್= ಸ್ವೀಕರಿಸುವರು.

"ಯದ್ಯದಾಚರತಿಶ್ರೇಷ್ಠಃ ತತ್ತದೇವೇತರೋ ಜನಃ ಎಂದಿರುವುದರಿಂದ ನೀನು ಬ್ರಾಹ್ಮಣರನ್ನು ಆದರಿಸದಿದ್ದರೆ ಜನರೂ ಸಹ ಆದರಿಸುವುದಿಲ್ಲ ಹೀಗಾಗಿ ಧರ್ಮ ಮಾರ್ಗವೇ ನಶಿಸುವುದು.

ಇಲ್ಲಿ ಆತ್ಮಗೋಪಂ ಎಂಬುದಕ್ಕೆ ತನ್ನ ರಕ್ಷಕನೆಂಬ ಅರ್ಥವಾಗದಿರಲು ತಾತ್ಪರ್ಯ ಹೇಳುವರು–

**"ಆತ್ಮೈವ ಗೋಪೋ ಯಸ್ಯ ತದಾತ್ಮಗೋಪಂ"**

ತಾನೇ ರಕ್ಷಕನಾಗಿವುಳ್ಳ ಎಂದರ್ಥ.

ನಾಶವಾದರೆ ಆಗಲಿ ಏನು ದೋಷವೆಂದರೆ ಹೇಳುವರು–

**ತತ್ತೇಽನಭೀಷ್ಟಮಿವ ಸತ್ವನಿಧೇರ್ವಿಧಿತ್ಸೋಃ**
**ಕ್ಷೇಮಂ ಜನಾಯ ನಿಜಶಕ್ತಿಭಿರುದ್ಧೃತಾರೇಃ ।**
**ನೈತಾವತಾ ತ್ರ್ಯಧಿಪತೇರ್ಬತ ವಿಶ್ವಭರ್ತು-**
**ಸ್ತೇಜಃ ಕ್ಷತಿಸ್ತ್ವವನತಸ್ಯ ಸ ತೇ ವಿನೋದಃ ॥೨೪॥**

ನಿಜಶಕ್ತಿಭಿಃ=ಸ್ವಾಭಾವಿಕವಾದ ಜ್ಞಾನಬಲಶಕ್ತಿಗಳುಳ್ಳ ವ್ಯಾಸಕಪಿಲರಾಮಕೃಷ್ಣ ಮುಂತಾದರೂಪಗಳಿಂದ ಉದ್ಧತಾರೇಃ=ಧರ್ಮದ ಪ್ರತಿಪಕ್ಷವನ್ನು ನಾಶ ಮಾಡಿದ ಸತ್ವನಿಧೇಃ=ಬಲಜ್ಞಾನಸುಖಪೂರ್ಣನಾದ ಜನಾಯ=ಜನರಿಗೆ ಕ್ಷೇಮಂ=ಕಲ್ಯಾಣ– ವನ್ನು ವಿಧಿತ್ಸೋಃ=ಮಾಡಲಿಚ್ಛಿಸುವ ತೇ=ನಿನಗೆ ತತ್=ಧರ್ಮಮಾರ್ಗದ ನಾಶನವು ಅನಭೀಷ್ಟಮಿವ=ದುಃಖಜನಕವಿದ್ದಂತೆಯೇ. ಆನಂದಪೂರ್ಣನಾದ ನಿನಗೆ ದುಃಖ– ವಿಲ್ಲದಿದ್ದರೂ ಧರ್ಮನಾಶವಾಗಬಾರದು ಎಂಬ ನಿನ್ನ ಅಭಿಪ್ರಾಯಕ್ಕೆ ವಿಷಯ– ವಾದುದು, ಆದ್ದರಿಂದ ಅಪ್ರಿಯವು.ಕಾರಣ ನೀನು ಬ್ರಾಹ್ಮಣ ಸತ್ಕಾರ ಮಾಡುವುದು ಯುಕ್ತವೇ ಆಗಿದೆ. ಏತಾವತಾ=ಸತ್ಕಾರ ಮಾಡುವುದರಿಂದ ಅವನತಸ್ಯ= ಧರ್ಮರಕ್ಷಣೆಗಾಗಿ ನಮಸ್ಕಾರ ಮಾಡಿದ ತ್ರ್ಯಧಿಪತೇ=ಮೂರು ಲೋಕಕ್ಕೆ ಒಡೆಯನಾದ ವಿಶ್ವಭರ್ತುಃ=ಸಮಸ್ತರನ್ನೂ ರಕ್ಷಿಸುವ ತೇ=ನಿನ್ನ ತೇಜಃಕ್ಷತಿಃ

ತ್ರಿಭಿಃ ಎಂದರೆ ತಪಃ, ಶೌಚ, ದಯಾ ಎಂಬ ಮೂರಂಶಗಳಿಂದ ನಮಗೆ ವರಪ್ರಸಾದವಾದ ಸತ್ವದೇಹದಿಂದ ಎಂದು ಅರ್ಥ ತೋರುವುದು, ಕಾರಣ ಈ ಶ್ಲೋಕವನ್ನು ಪ್ರಮಾಣದಿಂದ ವ್ಯಾಖ್ಯಾನಿಸುವರು –

**''ಅನಂತಾಸನವೈಕುಂಠಕ್ಷೀರಸಾಗರಗೈಸ್ತ್ರಿಭಿಃ ।**
**ರಕ್ಷಾಂ ಕರೋತಿ ಭಗವಾನ್ ಕಪಿಲಃ ಸತ್ವವರ್ಧನಾತ್ ।**
**ಅಸತ್ವೋಽಪಿ ರಜಶ್ಚೈವ ತಮಶ್ಚಾಪಿ ನಿರಸ್ಯ ತು'' ॥ ಇತಿ ಮೂರ್ತಿಭೇದೇ ॥**
**''ಕಪಿಲೋ ವರದಶ್ಚೈವ ವಿಕಲಶ್ಚೇತಿ ಕಥ್ಯತೇ'' । ಇತಿ ಚ ।**
**ಅತಃ ಸತ್ವಸ್ಯ ಕರಣತ್ವಮಾತ್ರಂ ಕಪಿಲೋ ವರದಾತನುಃ ॥**

ಭಗವಂತನು ಅನಂತಾಸನ, ವೈಕುಂಠ, ಕ್ಷೀರಸಾಗರಳಲ್ಲಿರುವ ಮೂರು ರೂಪಗಳಿಂದ, ಕಪಿಲನಾಮಕ ಪರಮಾತ್ಮನು ಸತ್ವಗುಣರಹಿತನಾದರೂ ಸತ್ವಗುಣ ಅಭಿವೃದ್ಧಿಗೊಳಿಸಿ ರಜೋಗುಣ, ತಮೋಗುಣವುಳ್ಳವರನ್ನು ನಿರಾಸ ಮಾಡಿ ರಕ್ಷಣೆ ಮಾಡುವನು ಎಂದು ಮೂರ್ತಿಭೇದವೆಂಬ ಗ್ರಂಥದಲ್ಲಿದೆ. ಕಪಿಲ, ವರದ, ವಿಕಲ ಎಂದು ಶ್ರೀಹರಿಯೇ ಹೇಳಲ್ಪಡುವನು. ಯಾವಕಾರಣದಿಂದ ಸತ್ವವಿಲ್ಲದಿದ್ದರೂ ಸತ್ವವನ್ನು ಬೆಳೆಸುವುದರಿಂದ ಎಂದು ಹೇಳಿದೆಯೋ ಮತ್ತು ''ವರದ'' ಎಂಬ ಶಬ್ದಕ್ಕೆ ಕಪಿಲ ಎಂದರ್ಥ ಅಭಿಧಾನ ಸಿದ್ಧವಾಗಿದೆಯೋ ಆದ್ದರಿಂದ ಸತ್ವೇನ ಎಂಬಲ್ಲಿ ಹೇಳಿದ ಸತ್ವ ರಜಸ್ತಮೋನಿರಸನದಲ್ಲಿ ಕರಣತ್ವವನ್ನೂ ಹೇಳುವುದು, ವರದಯಾ ತನುವಾ ಎಂಬಲ್ಲಿ ಹೇಳಿದ ವರದಾತನುವು ಕಪಿಲನೇ ಎಂದು ತಿಳಿಯಬೇಕು ಎಂದು ತಾತ್ಪರ್ಯದ ಭಾವ ॥೨೨॥

ಧರ್ಮಪ್ರವರ್ತಕರಾದ ಬ್ರಾಹ್ಮಣರ ಸ್ತೋತ್ರವನ್ನು ಒಂದು ವೇಳೆ ನೀನು ಮಾಡದೆ ಹೋದರೆ ಏನು ಬಾಧಕವೆಂದು ಹೇಳುವರು –

**ನ ತ್ವಂ ದ್ವಿಜೋತ್ತಮಕುಲಂ ಯದಿಹಾತ್ಮಗೋಪಂ**
**ಗೋಪ್ತಾ ವೃಷ ಸ್ವರ್ಹಣೇನ ಸುಸೂನೃತೇನ ।**
**ತರ್ಹ್ಯೇವ ನಙ್ಕ್ಷ್ಯತಿ ಶಿವಸ್ತವ ದೇವ ಪಂಥಾ-**
**ಲೋಕೋಽಗ್ರಹೀಷ್ಯದೃಷಭಸ್ಯ ಹಿ ಯತ್ ಪ್ರಮಾಣಮ್ ॥**

ಹೇ ವೃಷ ಹೇ ದೇವ=ಹೇ ಶ್ರೇಷ್ಠನೇ ಕ್ರೀಡಾದಿಗುಣವಿಶಿಷ್ಟನೆ ತ್ವಂ=ನೀನು ಆತ್ಮಗೋಪಂ=ನೀನೆ ರಕ್ಷಕನಾಗಿವುಳ್ಳ ದ್ವಿಜೋತ್ತಮಕುಲಂ=ಬ್ರಾಹ್ಮಣಶ್ರೇಷ್ಠರ ಸಮೂಹವನ್ನು ಇಹ=ಜಗತ್ತಿನಲ್ಲಿ ಸುಸೂನೃತೇನ=ಮಂಗಲಕರಗಳಾದ ಮಧುರ ಮಾತುಗಳುಳ್ಳ ಸ್ವರ್ಹಣೇನ=ಒಳ್ಳೆಯ ಸತ್ಕಾರದಿಂದ ಯದಿ ನ ಗೋಪ್ತಾ=ಒಂದು

ವೇಳೆ ರಕ್ಷಿಸದಿದ್ದರೆ ತರ್ಹಿ=ಆಗಲೇ ತವ=ನಿನ್ನ ಶಿವಃ=ಶುದ್ಧವಾದ ಪಂಥಾಃ=ನಿನ್ನ ಪ್ರೀತಿಗೆ ಕಾರಣವಾದ ಧರ್ಮಮಾರ್ಗವು ನಕ್ಷ್ಯತಿ=ನಾಶವಾಗುವುದು. ಹಿ=ಯಾವ ಕಾರಣ ಲೋಕಃ=ಜನರು ಋಷಭಸ್ಯ=ಸದ್ಧರ್ಮಪ್ರವರ್ತಕನ ಯತ್‌ಪ್ರಮಾಣಂ= ಯಾವ ವಾಕ್ಯ ಮೂಲಕ ಆಚರಣವೋ ತತ್=ಅದನ್ನೇ ಅಗ್ರಹೀಷ್ಯತ್= ಸ್ವೀಕರಿಸುವರು.

"ಯದ್ಯದಾಚರತಿಶ್ರೇಷ್ಠಃ ತತ್ತದೇವೇತರೋ ಜನಃ ಎಂದಿರುವುದರಿಂದ ನೀನು ಬ್ರಾಹ್ಮಣರನ್ನು ಆದರಿಸದಿದ್ದರೆ ಜನರೂ ಸಹ ಆದರಿಸುವುದಿಲ್ಲ ಹೀಗಾಗಿ ಧರ್ಮ ಮಾರ್ಗವೇ ನಶಿಸುವುದು.

ಇಲ್ಲಿ ಆತ್ಮಗೋಪಂ ಎಂಬುದಕ್ಕೆ ತನ್ನ ರಕ್ಷಕನೆಂಬ ಅರ್ಥವಾಗದಿರಲು ತಾತ್ಪರ್ಯ ಹೇಳುವರು–

**"ಆತ್ಮೈವ ಗೋಪೋ ಯಸ್ಯ ತದಾತ್ಮಗೋಪಂ"**

ತಾನೇ ರಕ್ಷಕನಾಗಿವುಳ್ಳ ಎಂದರ್ಥ.

ನಾಶವಾದರೆ ಆಗಲಿ ಏನು ದೋಷವೆಂದರೆ ಹೇಳುವರು–

**ತತ್ತೇಽನಭೀಷ್ಟಮಿವ ಸತ್ವನಿಧೇರ್ವಿಧಿತ್ಸೋಃ**
**ಕ್ಷೇಮಂ ಜನಾಯ ನಿಜಶಕ್ತಿಭಿರುದ್ಧತಾರೇಃ ।**
**ನೈತಾವತಾ ತ್ರ್ಯಧಿಪತೇರ್ಬತ ವಿಶ್ವಭರ್ತು-**
**ಸ್ತೇಜಃ ಕ್ಷತಿಸ್ತ್ವವನತಸ್ಯ ಸ ತೇ ವಿನೋದಃ ॥೨೪॥**

ನಿಜಶಕ್ತಿಭಿಃ=ಸ್ವಾಭಾವಿಕವಾದ ಜ್ಞಾನಬಲಶಕ್ತಿಗಳುಳ್ಳ ವ್ಯಾಸಕಪಿಲರಾಮಕೃಷ್ಣ ಮುಂತಾದರೂಪಗಳಿಂದ ಉದ್ಧತಾರೇಃ=ಧರ್ಮದ ಪ್ರತಿಪಕ್ಷವನ್ನು ನಾಶ ಮಾಡಿದ ಸತ್ವನಿಧೇಃ=ಬಲಜ್ಞಾನಸುಖಪೂರ್ಣನಾದ ಜನಾಯ=ಜನರಿಗೆ ಕ್ಷೇಮಂ=ಕಲ್ಯಾಣ- ವನ್ನು ವಿಧಿತ್ಸೋಃ=ಮಾಡಲಿಚ್ಛಿಸುವ ತೇ=ನಿನಗೆ ತತ್=ಧರ್ಮಮಾರ್ಗದ ನಾಶನವು ಅನಭೀಷ್ಟಮಿವ=ದುಃಖಜನಕವಿದ್ದಂತೆಯೇ. ಆನಂದಪೂರ್ಣನಾದ ನಿನಗೆ ದುಃಖ- ವಿಲ್ಲದಿದ್ದರೂ ಧರ್ಮನಾಶವಾಗಬಾರದು ಎಂಬ ನಿನ್ನ ಅಭಿಪ್ರಾಯಕ್ಕೆ ವಿಷಯ- ವಾದುದು, ಆದ್ದರಿಂದ ಅಪ್ರಿಯವು.ಕಾರಣ ನೀನು ಬ್ರಾಹ್ಮಣ ಸತ್ಕಾರ ಮಾಡುವುದು ಯುಕ್ತವೇ ಆಗಿದೆ. ಏತಾವತಾ=ಸತ್ಕಾರ ಮಾಡುವುದರಿಂದ ಅವನತಸ್ಯ= ಧರ್ಮರಕ್ಷಣೆಗಾಗಿ ನಮಸ್ಕಾರ ಮಾಡಿದ ತ್ರ್ಯಧಿಪತೇ=ಮೂರು ಲೋಕಕ್ಕೆ ಒಡೆಯನಾದ ವಿಶ್ವಭರ್ತುಃ=ಸಮಸ್ತರನ್ನೂ ರಕ್ಷಿಸುವ ತೇ=ನಿನ್ನ ತೇಜಃಕ್ಷತಿಃ

ನ=ಮಾನಭಂಗವೇನಲ್ಲ. ಏಕೆಂದರೆ ಸಃ=ನೀನು ಮಾಡುವ ಪ್ರಣಾಮಾದಿಗಳು ತೇವಿನೋದಃ ತು=ನಿನ್ನ ಕ್ರೀಡಾರೂಪವೇ ಆಗಿದೆ.

ಇಲ್ಲಿ ಅನಭೀಷ್ಟಮಿವ ಎಂದದ್ದರಿಂದ ಮತ್ತು ಅಭೀಷ್ಟವಾಗಿದೆ ಎಂದರ್ಥ ತೋರುವುದು. ಕಾರಣ ಇವಶಬ್ದ ಸೂಚಿತವಾದ ಅರ್ಥವನ್ನು ತಿಳಿಸಲು ಪ್ರಮಾಣ ಹೇಳುವರು –

**''ಅಸುರಾ ಅಪ್ರಿಯಾಶ್ಚಾಪಿ ನಿತ್ಯಾನಂದಾನ್ನ ಲೋಕವತ್ ।**
**ನಿಷೇಧ್ಯಬುದ್ಧಿವಿಷಯಮಪ್ರಿಯಂ ಹಿ ಹರೇರ್ಮತಂ'' ॥ ಇತಿ ಚ ।**
**ತಸ್ಮಾದನಭೀಷ್ಟಮಿವ ।**

ಯದ್ಯಪಿ ಅಸುರರು ಶ್ರೀಹರಿಗೆ ಅಪ್ರಿಯರು. ಆದರೂ ಶ್ರೀಹರಿಯು ನಿತ್ಯಾನಂದಪೂರ್ಣನಾದ್ದರಿಂದ ಲೋಕದಲ್ಲಿ ದುಃಖಜನಕವಾದುದು ಅಪ್ರಿಯ-ವೆನಿಸಿಕೊಂಡಂತೆ ಶ್ರೀಹರಿಗೆ ದುಃಖಜನಕವಲ್ಲ. ಶ್ರೀಹರಿಗೆ ಅಪ್ರಿಯವೆಂದು ಇದು ಆಗಬಾರದು (ಇದಂ ಮಾಭೂತ್) ಎಂದು ಅವನ ನಿಷೇಧಬುದ್ಧಿಗೆ ವಿಷಯ-ವಾದುದು ಅಪ್ರಿಯವೆನಿಸಿಕೊಳ್ಳುವುದು. ಹೀಗೆ ಪ್ರಮಾಣದಲ್ಲಿ ಹರಿಗೆ ಅಪ್ರಿಯ ಎಂಬ ಶಬ್ದಕ್ಕೆ ಬೇರೆ ಅರ್ಥವನ್ನು ಹೇಳಿದ್ದರಿಂದ ಧರ್ಮಮಾರ್ಗನಾಶನವು ವಸ್ತುತಃ ನಿಷೇಧಬುದ್ಧಿವಿಷಯವೆಂದು ಅಪ್ರಿಯವಾಗಿದೆ (ಧರ್ಮನಾಶವಾಗಬಾರದು ಎಂದು ಹರಿಯ ಅಭಿಪ್ರಾಯ) ಆದರೂ ಲೋಕದಂತೆ ದುಃಖದಾಯಕವಲ್ಲ ಎಂದು ಸೂಚಿಸಲು ಮೂಲದಲ್ಲಿ ಇವಶಬ್ದ ಇಟ್ಟಿರುವರು ಎಂದು ಭಾವ ॥೨೪॥

ಶಾಪದ ಆಗ್ರಹವನ್ನು ಬಿಟ್ಟು ವಿಜ್ಞಾಪಿಸುವರು –

**ಯಂ ವಾನಯೋರ್ದಮಮಧೀಶ ಭವಾನ್ ವಿಚಷ್ಟೇ**
**ವೃತ್ತಿಂ ಚ ವಾ ತದನುಮನ್ಮಹಿ ನಿರ್ವ್ಯಲೀಕಂ ।**
**ಅಸ್ಮಾಸು ವಾ ಯ ಉಚಿತೋ ಧ್ರಿಯತಾಂ ಸ ದಂಡೋ**
**ಯೇನಾಗಸೌ ವಯಮಯುಂಕ್ಷ್ಮಹಿ ಕಿಲ್ಬಿಷೇಣ ॥೨೫॥**

ಭೋ ಅಧೀಶ=ಹೇ ಅಖಂಡೇಶನೆ ಭವಾನ್=ನೀನು (ತಾವು) ಅನಯೋಃ= ಜಯವಿಜಯರಿಗೆ ಯಂ ದಮಂ=ಯಾವ ಶಿಕ್ಷೆಯನ್ನು ಅಂದರೆ ನಾವು ಕೊಟ್ಟಿರುವುದನ್ನೋ ಬೇರೆಯದನ್ನೋ ವಿಚಷ್ಟೇ=ಉಚಿತವೆಂದು ಕಾಣುವಿಯೋ ವಾ=ಅಥವಾ ವೃತ್ತಿಂ ಚ=ಇಲ್ಲೇ ಇರಲಿ ಎಂದು ವಿಚಷ್ಟೇ=ತಿಳಿಯುವಿಯೋ ತತ್= ಅದೆಲ್ಲವನ್ನೂ ನಿರ್ವ್ಯಲೀಕಂ=ನಿಷ್ಕಪಟದಿಂದ ಅನುಮನ್ಮಹಿ=ಅಂಗೀಕರಿಸುವೆವು.

ಯೇ ವಯಂ=ಯಾವ ನಾವು ಅನಾಗಸೌ=ನಿರಪರಾಧಿಗಳಾದ ನಿನ್ನ ಸೇವಕರನ್ನು ಕಿಲ್ಬಿಷೇಣ=ಶಾಪದಿಂದ ಅಯುಂಕ್ಷಹಿ=ಯೋಜಿಸಿರುವೆವ್ವೋ(ನಿರಪರಾಧಿಗಳಿಗೆ ಶಾಪ ಕೊಟ್ಟಿರುವೆವ್ವೋ ಎಂದರ್ಥ)ಅಸ್ಮಾಸು=ಅಂಥ ನಮಗೆ ಯಃ=ಯಾವುದು ಉಚಿತಃ= ಯೋಗ್ಯವಾದ ಸಃ ದಂಡಃ=ಆ ಶಿಕ್ಷೆಯು ಧ್ರಿಯತಾಂ=ಮಾಡಲ್ಪಡಲಿ ॥೨೫॥

ಸರ್ವಪ್ರೇರಕನಾದ ನಾನೇ ಶಾಪಕೊಡಿಸಿದವನು ಅದರಲ್ಲಿ ನಿಮ್ಮದೇನು ಅಪರಾಧವಿಲ್ಲ ಎಂದು ಆಶ್ವಾಸನೆಯಿತ್ತು ಶಾಪ ಮುಕ್ತಿಯನ್ನು ಹೇಳುವನು-

**ಶ್ರೀಭಗವಾನುವಾಚ**

**ಏತೌ ಸುರೇತರಗತಿಂ ಪ್ರತಿಪದ್ಯ ಸದ್ಯಃ**
**ಸಂರಂಭಸಂಭೃತಸಮಾಧ್ಯನುಬದ್ಧಯೋಗೌ ।**
**ಭೂಯಃ ಸಕಾಶಮುಪಯಾಸ್ಯತ ಆಶು ಯೋ ವಃ**
**ಶಾಪೋ ಮಯ್ಯೈವ ವಿಹಿತಸ್ತದವೈತ ವಿಪ್ರಾಃ ॥೨೬॥**

ಹೇ ವಿಪ್ರಾಃ=ಎಲೊ ಬ್ರಾಹ್ಮಣರೆ ಏತೌ=ಇವರು ಸದ್ಯಃ=ಬೇಗನೆ ಸುರೇತರಗತಿಂ= ಅಸುರದೇಹವನ್ನು ಪ್ರತಿಪದ್ಯ=ಹೊಂದಿ ಸಂರಂಭ=ದ್ವೇಷೋತ್ಕರ್ಷದಿಂದ ಸಂಭೃತ= ಸಂಪಾದಿತವಾದ ಸಮಾಧಿ=ಚಿತ್ತೈಕಾಗ್ರತೆಯಿಂದ ಅನುಬದ್ಧ=ದೃಢೀಕೃತವಾದ ಯೋಗಃ=ಉಪಾಯವುಳ್ಳವರಾಗಿ ಆಶು=ಬೇಗನೆ ಭೂಯಃ=ಮತ್ತೆ ಸಕಾಶಂ=ನನ್ನ ಹತ್ತಿರಕ್ಕೆ ಉಪಯಾಸ್ಯತ=ಬರಲಿ ಯಃ ಯಾವುದು ವಃ=ನೀವು ಕೊಟ್ಟ ಶಾಪವಿದೆಯೋ ಸೋಪಿ=ಅದೂ ಸಹ ಮಯಾ ಏವ ನನ್ನಿಂದಲೇ ಪ್ರೇರಿತವಾದುದು ಎಂದು ತತ್= ಶಾಪದಾನವನ್ನು ಅವೈತ=ತಿಳಿಯಿರಿ.

ಈ ಶ್ಲೋಕದಲ್ಲಿ ದ್ವೇಷ ಮತ್ತು ಸಮಾಧಿಯೋಗಗಳನ್ನು ಒಂದೆಡೆ ಒಂದೇ ಕಾಲದಲ್ಲಿ ಹೇಗೆ ಹೇಳುವರು ? ಅವೆರಡು ವಿರುದ್ಧವಲ್ಲವೇ ಎಂಬ ಶಂಕೆಗೆ ಸಮಾಧಾನ ಪ್ರಮಾಣದಿಂದ ಹೇಳುವರು –

**''ಅಂತರ್ಭಕ್ತಾ ಬಹಿಃ ಕ್ರುದ್ಧಾ ಹಿರಣ್ಯಾದ್ಯಾ ಹರಿಂ ಪ್ರತಿ ।**
**ಸರ್ವಕ್ರುದ್ಧಾಃ ಶಂಬರಾದ್ಯಾ ಅಂತಃ ಕ್ರೋಧವಶಾಸ್ತಥಾ'' ॥ ಇತಿ ಚ ।**

ಶ್ರೀಹರಿಯ ವಿಷಯದಲ್ಲಿ ಹಿರಣ್ಯಕಶಿಪು ಹಿರಣ್ಯಾಕ್ಷ, ಬಲಿಚಕ್ರವರ್ತಿ ಮೊದಲಾದವರು ಅಂತಃ ಭಕ್ತಾಃ=ಸ್ವರೂಪಮನಸಿನಲ್ಲಿ ಭಕ್ತಿಯುಳ್ಳವರು ಬಹಿಃ- ಕ್ರುದ್ಧಾಃ=ಜಡಮನಸಿನಲ್ಲಿ ದ್ವೇಷವುಳ್ಳವರು. ಸರ್ವಕ್ರುದ್ಧಾಃ=ಒಳಗೂ ಹೊರಗೂ ದ್ವೇಷಿಗಳು ಶಂಬರಾಸುರ ಮುಂತಾದವರು. ಕ್ರೋಧವಶರೆಂಬ ಅಸುರರು ಒಳಗೆ

ದ್ವೇಷವುಳ್ಳವರು. ಹೊರಗೆ ಭಕ್ತರು. ಹೀಗೆ ಭಕ್ತಿದ್ವೇಷಗಳಿಗೆ ಅಧಿಕರಣವಾದ ಮನಸ್ಸು ಬೇರೆ ಆದ್ದರಿಂದ ವಿರೋಧವಿಲ್ಲ ॥೨೬॥

**ಬ್ರಹ್ಮೋವಾಚ**

**ಅಥ ತೇ ಮುನಯೋ ದೃಷ್ಟ್ವಾ ನಯನಾನಂದಭಾಜನಂ ।**
**ವೈಕುಂಠಂ ತದದಿಷ್ಠಾನಂ ವಿಕುಂಠಂ ಚ ಸ್ವಯಂಭುವಂ ॥೨೭॥**

**ಭಗವಂತಂ ಪರಿಕ್ರಮ್ಯ ಪ್ರಣಿಪತ್ಯಾನುಮಾನ್ಯ ಚ ।**
**ಪ್ರತಿಜಗ್ಮುಃ ಪ್ರಮುದಿತಾಃ ಶಂಸಂತೋ ವೈಷ್ಣವೀಂ ಶ್ರಿಯಂ ॥೨೮॥**

ತೇ ಮುನಯಃ ಆ ಸನಕಾದಿಗಳು ನಯನಾನಂದಭಾಜನಂ=ಕಣ್ಣುಗಳಿಗಾನಂದ-ವನ್ನುಂಟುಮಾಡುವ ಸ್ವಯಂಭುವಂ=ಸ್ವತಂತ್ರನಾಗಿರುವ ವಿಕುಂಠಂ ಪರಮಾತ್ಮ-ನನ್ನು ತದಧಿಷ್ಠಾನಂ=ಅವನಿಗೆ ಆಶ್ರಯವಾದ, ವೈಕುಂಠಂ=ವೈಕುಂಠವನ್ನು ದೃಷ್ಟ್ವಾ= ನೋಡಿ ಭಗವಂತಂ=ಪರಮಾತ್ಮನನ್ನು ಪರಿಕ್ರಮ್ಯ ಪ್ರದಕ್ಷಿಣೆ ಮಾಡಿ ಪ್ರಣಿಪತ್ಯ= ನಮಸ್ಕರಿಸಿ ಅನುಮಾನ್ಯ=ಚೆನ್ನಾಗಿ ಗೌರವಿಸಿ ಪ್ರಮುದಿತಾಃ=ಸಂತುಷ್ಟರಾಗಿ ವೈಷ್ಣವೀಂ ಶ್ರಿಯಂ=ವಿಷ್ಣುವಿನ ಸ್ವರೂಪಕಾಂತಿಯನ್ನು ಶಂಸಂತಃ ಸ್ತುತಿಸುತ್ತ ಪ್ರತಿಜಗ್ಮುಃ= ಅಲ್ಲಿಂದ ಹೊರಟರು ॥೨೮॥

ಇಲ್ಲಿ ಶ್ರೀಶಬ್ದದಿಂದ ಲಕ್ಷ್ಮೀದೇವಿಯನ್ನು ಸ್ವೀಕರಿಸಿದರೆ ಅಸಂಗತವಾಗುವುದೆಂದು ಶ್ರೀಶಬ್ದವಾಚ್ಯವಾದುದನ್ನು ಪ್ರಮಾಣದಿಂದ ತಿಳಿಸುವರು–

**''ಸ್ವರೂಪಶ್ರೀಸ್ತಥಾ ಭಾರ್ಯಾ ದ್ವೇಧಾ ಶ್ರೀಸ್ತು ಹರೇರ್ಮತಾ''। ಇತಿ ಚ ।**

ಸ್ವರೂಪಸೌಂದರ್ಯ ಮತ್ತು ಹೆಂಡತಿಯಾದ ಲಕ್ಷ್ಮೀದೇವಿ ಹೀಗೆ ಎರಡು ಹರಿಸಂಬಂಧಿಯಾದ ಶ್ರೀಗಳು ಪ್ರಮಾಣಸಿದ್ಧವಾಗಿವೆ ಎಂದರ್ಥ ॥೨೮॥

**ಭಗವಾನನುಗಾವಾಹ ಯಾತಂ ಮಾ ಭೈಷ್ಟಮಸ್ತು ಶಮ್ ।**
**ಬ್ರಹ್ಮತೇಜಃ ಸಮರ್ಥೋಽಪಿ ಹಂತುಂ ನೇಚ್ಛೆ ಮತಂ ತು ಮೇ॥೨೯॥**

ಭಗವಾನ್=ಶ್ರೀಮನ್ನಾರಾಯಣನು ಅನುಗೌ=ತನ್ನ ಸೇವಕರಿಗೆ ಯಾತಂ= ಶಾಪದ ಪ್ರಕಾರ ಹೊರಡಿರಿ ಮಾಂ ಭೈಷ್ಟಂ ಹೆದರಬೇಡಿರಿ ಶಂ ಅಸ್ತು=ನಿಮಗೆ ಕಲ್ಯಾಣವಿರಲಿ ಸಮರ್ಥೋಽಪಿ=ಶಕ್ತನಾಗಿದ್ದರೂ ಬ್ರಹ್ಮತೇಜಃ=ಬ್ರಾಹ್ಮಣರ ಸಾಮರ್ಥ್ಯ-ವನ್ನು ಹಂತುಂ ನೇಚ್ಛೆ ನಾಶಪಡಿಸಲು ಇಚ್ಛಿಸಲಾರೆ ತತ್=ಅವರ ಶಾಪವು ಮೇ ಮತಂ ನನಗೆ ಸಮ್ಮತವೆ ಆಗಿದೆ ॥೨೯॥

ಏಕೆ ಸಮ್ಮತವೆಂದರೆ ಕಾರಾಣಾಂತರವಿದೆ ಎಂದು ಹೇಳುವರು –

**ಏತತ್ ಪುರೈವ ನಿರ್ದಿಷ್ಟಂ ರಮಯಾ ಕ್ರುದ್ಧಯಾ ಯದಾ ।**
**ತದಾಽಪವಾರಿತಾ ದ್ವಾರಿ ವಿಶಂತೀ ಮಯ್ಯುಪಾರತೇ ॥೩೦॥**

ಮಯಿ=ನಾನು ಉಪಾರತೇ ಸತಿ=ಯೋಗನಿದ್ರೆಯನ್ನು ಮಾಡುತ್ತಿರುವಾಗ ವಿಶಂತೀ=ಪ್ರವೇಶಮಾಡುತ್ತಿರುವ ರಮಾದೇವಿಯು ಯದಾ=ಯಾವಾಗ ದ್ವಾರಿ= ಬಾಗಿಲದಲ್ಲಿ ಅಪವಾರಿತಾ=ನಿವಾರಿಸಲ್ಪಟ್ಟಳೋ ತದಾ=ಆಗಲೇ ಕ್ರುದ್ಧಯಾ ಕುಪಿತಳಾದ ರಮಯಾ=ಲಕ್ಷ್ಮೀದೇವಿಯಿಂದಲೇ ಏತತ್=ನಿಮ್ಮ ದಂಡನೆಯು ಪುರೈವ=ಹಿಂದೆಯೇ ನಿರ್ದಿಷ್ಟಂ=ನಿಗದಿತವಾಗಿತ್ತು ವಿಧಿಸಲ್ಪಟ್ಟಿತ್ತು ॥೩೦॥

**ಮಯಿ ಸಂರಂಭಯೋಗೇನ ನಿಸ್ತೀರ್ಯ ಬ್ರಹ್ಮಹೇಲನಂ ।**
**ಪ್ರತ್ಯೇಷ್ಯತಂ ನಿಕಾಶಂ ಮೇ ಕಾಲೇನಾಲ್ಪೀಯಸಾ ಪುನಃ ॥೩೧॥**

ಮಯಿ=ನನ್ನಲ್ಲಿ ಸಂರಂಭಯೋಗೇನ=ದ್ವೇಷಪೂರ್ವಕ ಭಕ್ತಿಯೋಗದಿಂದ ಬ್ರಹ್ಮಹೇಲನಂ=ಬ್ರಾಹ್ಮಣರ ಅವಮಾನದಿಂದ ಬಂದ ಶಾಪವನ್ನು ನಿಸ್ತೀರ್ಯ=ದಾಟಿ ಪುನಃ=ಮತ್ತೆ ಅಲ್ಪೀಯಸಾ ಕಾಲೇನ=ಸ್ವಲ್ಪೇಕಾಲದಿಂದ (ದಲ್ಲಿ) ಮೇ=ನನ್ನ ನಿಕಾಶಂ ಸಮೀಪಕ್ಕೆ ಪ್ರತ್ಯೇಷ್ಯತಂ ತಿರುಗಿಬನ್ನಿರಿ.

ಮೇಲಿನ ಶ್ಲೋಕದಲ್ಲಿ ಬ್ರಹ್ಮಶಾಪನಿವಾರಣೆಗೆ ಭಕ್ತಿಯೋಗದಂತೆ ದ್ವೇಷವೂ ಕಾರಣವೆಂದು ತಿಳಿದು ಬರುವುದು. ಏಕೆಂದರೆ ದ್ವೇಷಕ್ಕೆ ಬೇರೆ ಫಲವನ್ನು ಹೇಳದಿರುವುದರಿಂದ ಅದನ್ನು ಹೇಳಬೇಕಿರಲಿಲ್ಲ ಎಂಬ ಶಂಕೆಗೆ ಪ್ರಮಾಣ ಉದಾಹರಿಸಿ ತಾತ್ಪರ್ಯ ಹೇಳುವರು –

**"ಅಂತರ್ಭಕ್ತಾ ಬಹಿರ್ವೈರಾ ಹಿರಣ್ಯಾದ್ಯಾ ಹರೇರ್ಮತಾಃ ।**
**ತತ್ರ ಭಕ್ತ್ಯಾಽಭವನ್ ಪೂತಾ ದ್ವೇಷ ಆವೇಶಕಾನ್ ಗತಃ ।**
**ಬ್ರಹ್ಮಜಾ ಅಸುರಾ ಯೇ ತು ವಿಷ್ಣೋಃ ಪಾರ್ಷದೌ ಗತಾಃ ।**
**ಬಲ್ಯಾದೀಂಶ್ಚ (ಕಲ್ಯಾದ್ಯಾಶ್ಚ) ಹರೇರ್ದ್ವೇಷಂ ತತಃ ಕೃತ್ವಾ ತಮೋಗತಾಃ" ॥**
**॥ಇತಿ ಚ ।**

**ತಸ್ಮಾತ್ ಸಂರಂಭೋಽಲ್ಪ(ವಾಚೀನ)ಫಲಃ ಕಥ್ಯತೇ ಏವ । ಭಕ್ತಿಯೋಗ ಏವ ಬ್ರಹ್ಮಹೇಲನನಿಸ್ತಾರಕಃ ।**

ಹಿರಣ್ಯಕಶಿಪು ಮುಂತಾದವರು ಸ್ವರೂಪದಲ್ಲಿ ಹರಿಭಕ್ತರು. ಬಹಿರ್ಮನಸಿನಲ್ಲಿ ದ್ವೇಷವುಳ್ಳವರು. ಅದರಲ್ಲಿ ಸ್ವರೂಪಭಕ್ತಿಯಿಂದಲೇ ಬ್ರಾಹ್ಮಣರ ಅವಮಾನದಿಂದ

ಬಂದ ಶಾಪದ ಫಲವನ್ನು ದಾಟಿ ಶುದ್ಧರಾದರು. ಬಾಹ್ಯಮನಸಿನಲ್ಲಿರುವ ದ್ವೇಷದ ಫಲ ಜಯವಿಜಯರಲ್ಲಿ ಆವಿಷ್ಟರಾದ ಅಸುರರಿಗೆ ಪ್ರಾಪ್ತವಾಯಿತು. ಬ್ರಹ್ಮದೇವರಿಂದ ಜನಿಸಿದ ಆಸುರರು ಶ್ರೀಹರಿಯ ದ್ವಾರಪಾಲಕರಾದ ಜಯವಿಜಯ-ರಲ್ಲಿಯೂ ಬಲಿಚಕ್ರವರ್ತಿ ಮುಂತಾದವರಲ್ಲಿಯೂ ಪ್ರವೇಶಿಸಿದರು. ಅವರು ಅಲ್ಲಿದ್ದು ಹರಿಯ ದ್ವೇಷ ಮಾಡಿ ಅದರಿಂದ ತಮಸ್ಸಿಗೆ ಹೋದರು. ಯಾವ ಕಾರಣ ಬಾಹ್ಯಮನಸಿನಲ್ಲಿರುವ ದ್ವೇಷವು ಆವಿಷ್ಟ ಅಸುರರಿಗೆ ಹೋಯಿತು ಭಕ್ತರಿಗೆ ಫಲಪ್ರದವಾಗಲಿಲ್ಲ, ಆದ್ದರಿಂದ ಭಕ್ತಿಯೋಗವೆ ಬ್ರಾಹ್ಮಣರ ಅವಮಾನದ ಶಾಪವಿಮೋಚಕವು ದ್ವೇಷವು ಅಧೋಗತಿಗೆ ಕಾರಣವಾಗಿದೆ. ಇದ್ದದ್ದನ್ನು ಹೇಳಿದರಷ್ಟೇ ಹೊರತು ದ್ವೇಷವು ಬ್ರಹ್ಮಹೇಲನ ನಿಸ್ತಾರಕವೆಂದಲ್ಲ. "ಅವಾಚೀನಫಲಃ" ಎಂಬ ಪಾಠದ ಅರ್ಥ. "ಅಲ್ಪಫಲಃ"ಎಂಬ ಪಾಠವಿದ್ದಾಗ ಭಕ್ತರಿಗೆ ಅಸುರಾವೇಶ-ದಿಂದುಂಟಾಗುವ ದ್ವೇಷವು ಅಲ್ಪಕಾಲದಲ್ಲಿ ಜ್ಞಾನ ಭಕ್ತಿಹ್ರಾಸರೂಪ ಅಲ್ಪ ಫಲಕವಾದುದರಿಂದ ಅದನ್ನು ವಿವಕ್ಷೆ ಮಾಡದೆ ದ್ವೇಷಕ್ಕೂ ಶುಭಫಲವೇ ಅಸುರ ಜನಮೋಹನಕ್ಕಾಗಿ ಹೇಳಲ್ಪಡುವದು. ಕಥ್ಯತೇ ಏವ ಎಂಬ ಏವಕಾರದಿಂದ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದು ಸೂಚಿಸುವರು ॥೩೧॥

**ದ್ವಾಸ್ಥಾವಾದಿಶ್ಯ ಭಗವಾನ್ ವಿಮಾನಶ್ರೇಣಿಭೂಷಣಂ ।**
**ಸರ್ವಾತಿಶಯಯಾ ಲಕ್ಷ್ಮ್ಯಾ ಜುಷ್ಟಂ ಸ್ವಂ ಧಿಷ್ಣ್ಯಮಾವಿಶತ್ ॥೩೨॥**

ಭಗವಾನ್=ಶ್ರೀಹರಿಯು ದ್ವಾಸ್ಥೌ=ದ್ವಾರಪಾಲಕರಾದ ಜಯವಿಜಯರಿಗೆ ಆದಿಶ್ಯ=ಆಜ್ಞೆ ಮಾಡಿ ವಿಮಾನಶ್ರೇಣಿಭೂಷಣಂ ಸಾರ್ವಭೌಮರ ಸೌಧಶ್ರೇಣಿಗೆ (ಸಾಲು) ಅಲಂಕಾರಪ್ರಾಯವಾದ ಸರ್ವಾತಿಶಯಯಾ=ಎಲ್ಲಕ್ಕಿಂತ ಹೆಚ್ಚಾದ ಲಕ್ಷ್ಮ್ಯಾ=ಕಾಂತಿಯಿಂದ ಜುಷ್ಟಂ=ಯುಕ್ತವಾದ ಸ್ವಂ ದಿಷ್ಣ್ಯಂ ತನ್ನ ಸ್ಥಾನವನ್ನು ಆವಿಶತ್=ಪ್ರವೇಶಿಸಿದನು ॥೩೨॥

ದುರ್ಮದವುಳ್ಳವರಿಗೆ ದಂಡವೇ ಮದಶಾಂತಿಗೆ ಕಾರಣವೆಂದು ಹೇಳುವರು–

**ತೌ ತು ಗಿರ್ವಾಣಋಷಭೌ ದುಸ್ತರಾದ್ಧರಿಲೋಕತಃ ।**
**ಹತಶ್ರಿಯೌ ಬ್ರಹ್ಮಶಾಪಾದಭೂತಾಂ ವಿಗತಸ್ಮಯೌ ॥೩೩॥**

ಗಿರ್ವಾಣಋಷಭೌ=ದೇವತೆಗಳಶ್ರೇಷ್ಠರಾಗಿವುಳ್ಳ ತೌ ತು=ದ್ವಾರಪಾಲಕ-ರಾದರೂ ದುಸ್ತರಾತ್‌ಬ್ರಹ್ಮಶಾಪಾತ್=ಮೀರಲಾಗದ ಮುನಿಗಳ ಶಾಪದಿಂದ ಹತಶ್ರಿಯೌ=ಕಾಂತಿಯನ್ನು ಕಳೆದುಕೊಂಡು ಹರಿಲೋಕತಃ=ಹರಿಲೋಕದಲ್ಲಿಯೇ ವಿಗತಸ್ಮಯೌ ಅಭೂತಾಂ=ಗರ್ವರಹಿತರಾದರು ॥೩೩॥

**ತದಾ ವಿಕುಂಠಧಿಷಣಾತ್ ತಯೋರ್ನಿಪತಮಾನಯೋಃ ।**
**ಹಾಹಾಕಾರೋ ಮಹಾನಾಸೀದ್ ವಿಮಾನಾಗ್ರೇಷು ಪುತ್ರಕಾಃ॥೩೪॥**

ಹೇ ಪುತ್ರಕಾಃ=ಎಲೋ ದೇವತೆಗಳೆ ತದಾ=ಆಗ ವಿಕುಂಠಧಿಷಣಾತ್=ಶ್ರೀಹರಿಯ ಸ್ಥಾನವಾದ ವೈಕುಂಠದಿಂದ ತಯೋಃ=ಜಯವಿಜಯರು ನಿಪತ-ಮಾನಯೋಃ=ಬೀಳುವಾಗ ವಿಮಾನಾಗ್ರೇಷು ಸ್ಥಿತಾನಾಂ=ಉಪ್ಪರಿಗೆಯಲ್ಲಿರುವ ಜನರಲ್ಲಿ ಮಹಾನ್ ಹಾಹಾಕಾರಃ ಆಸೀತ್ ಭಾರಿ ಹಾಹಾಕಾರ ಉಂಟಾಯಿತು.

**ತಾವೇವ ಹ್ಯಧುನಾ ಪ್ರಾಪ್ತೌ ಪಾರ್ಷದಾ ವೃಷಭೌ ಹರೇಃ ।**
**ದಿತೇರ್ಜಠರಮಾವಿಷ್ಟಂ ಕಾಶ್ಯಪಂ ತೇಜ ಉಲ್ಬಣಂ ॥೩೫॥**

ಹರೇಃ=ಶ್ರೀಹರಿಯ ಋಷಭೌ=ಶ್ರೇಷ್ಠರಾದ ಪಾರ್ಷದೌ= ದ್ವಾರಪಾಲಕರಾದ ತಾವೇವ=ಜಯವಿಜಯರು ಅಧುನಾ=ಈಗ ದಿತೇಃ=ದಿತಿದೇವಿಯ ಜಠರಂ ಗರ್ಭವನ್ನು ಆವಿಷ್ಟಂ=ಪ್ರವೇಶಿಸಿದ ಕಾಶ್ಯಪಂ=ಕಶ್ಯಪರ ಉಲ್ಬಣಂ=ಸಮರ್ಥವಾದ ತೇಜಃ=ವೀರ್ಯವನ್ನು ಪ್ರಾಪ್ತೌ=ಹೊಂದಿರುವರು ॥೩೫॥

**ತಯೋರಸುರಯೋರದ್ಯ ತೇಜಸಾ ಯಮಯೋರ್ಹಿವಃ ।**
**ಆಕ್ಷಿಪ್ತಂ ತೇಜ ಏತರ್ಹಿ ಭಗವಾಂಸ್ತದ್ ವಿಧಿತ್ಸತಿ ॥೩೬॥**

ಅದ್ಯ=ಈಗ ಅಸುರಯೋಃ=ಅಸುರಾವಿಷ್ಟರಾದ ಯಮಯೋಃ ಅವಳಿಯಾದ ತಯೋಃ=ಜಯವಿಜಯರ ತೇಜಸಾ=ಸಾಮರ್ಥ್ಯದಿಂದ ವಃ=ನಿಮ್ಮ ತೇಜಃ=ಸಾಮರ್ಥ್ಯವು ಸೂರ್ಯಪ್ರಕಾಶವು ಆಕ್ಷಿಪ್ತಂ=ಅಭಿಭೂತವಾಗಿದೆ (ಮುಚ್ಚಿದೆ) ಏತರ್ಹಿ=ಈಗ ಭಗವಾನ್= ಶ್ರೀಹರಿಯು ತತ್=ಅದರ ಪ್ರತೀಕಾರವನ್ನು ವಿಧಿತ್ಸತಿ=ಮಾಡಲಿಚ್ಛಿಸುವನು. ಅಪರಾಧ ಪರಿಪೂರ್ಣವಾದಮೇಲೆ ಮುಂದೆ ಸಂಹರಿಸುವ-ನಾದ್ದರಿಂದ ಈಗ ಇಚ್ಛೆಮಾತ್ರ ಎಂದು ಭಾವ ॥೩೬॥

ಈಗಲೇ ನೀವೇ ಏನಾದರೂ ಉಪಾಯ ಮಾಡಬಹುದಲ್ಲ ಎಂದರೆ ಹೇಳುವರು

**ವಿಶ್ವಸ್ಯ ಯಃ ಸ್ಥಿತಿಲಯೋದ್ಭವಹೇತುರಾದ್ಯೋ**
**ಯೋಗೇಶ್ವರೈರಪಿ ದುರತ್ಯಯಯೋಗಮಾರ್ಗಃ ।**
**ಕ್ಷೇಮಂ ವಿಧಾಸ್ಯತಿ ಸ ನೋ ಭಗವಾನ್ ತ್ರ್ಯಧಿಶ-**
**ಸ್ತಾತ್ರಾಽಸ್ಮದೀಯವಿಮೃಶೇನ ಕಿಯಾನಿಹಾರ್ಥಃ ॥೩೭॥**

*॥ ಇತಿ ಶ್ರೀಮದ್ಭಾಗವತೇ ತೃತೀಯಸ್ಕಂಧೇ ಸಪ್ತದಶೋಽಧ್ಯಾಯಃ ॥*

ಯಃ=ಯಾವ ಭಗವಂತನು ವಿಶ್ವಸ್ಯ=ಪ್ರಪಂಚದ ಸ್ಥಿತಿಲಯೋದ್ಭವಹೇತುಃ= ಉತ್ಪತ್ತಿ, ಸ್ಥಿತಿ, ಸಂಹಾರಕಾರಣನೋ ಯೋಗೇಶ್ವರೈಃ ಅಪಿ=ಬ್ರಹ್ಮಾದಿದೇವತೆ-ಗಳಿಂದಲೂ ದುರತ್ಯಯಯೋಗಮಾರ್ಗಃ=ತಿಳಿಯಲಾಗದ ಉಪಾಯದ ಪ್ರಕಾರವುಳ್ಳ ತ್ರ್ಯಧೀಶಃ=ಮೂರುಲೋಕಕ್ಕೆ ಒಡೆಯನಾದ ಇಂದ್ರಾದಿಗಳಿಗೆ ನಿಯಾಮಕನಾದ ತ್ರಾತಾ=ರಕ್ಷಣಸ್ವಭಾವದವನಾದ ಆದ್ಯಃ=ಸರ್ವಕಾರಣನಾದ ಭಗವಾನ್=ಶ್ರೀಹರಿಯು ಕ್ಷೇಮಂ ವಿಧಾಸ್ಯತಿ ರಕ್ಷಣೆ ಮಾಡುವನು ಅಸ್ಮದೀಯ ವಿಮೃಶೇನ ಇಹ ಅರ್ಥಃ ಕಿಯಾನ್=ನಾವು ಮಾಡುವ ಉಪಾಯ ವಿಚಾರದಿಂದ ಪ್ರಯೋಜನ ಎಷ್ಟಾದೀತು ? ಅತ್ಯಲ್ಪವು ಪ್ರಯೋಜನ ಆಗದೆಯಿರಬಹುದು. ಸ್ಯಾದಧ್ಯಧಿಕ ಈಶ್ವರೇ ಎಂದು ಯಾದವ ಕೋಶವಿರುವುದರಿಂದ (ತ್ರಯಾಣಾಂ ಅಧಿಈಶ್ವರಾಃ ತೇಷಾಂ ಈಶಃ ತ್ರ್ಯಧೀಶಃ ಎಂದಾಗುವುದು.) ಉಪಾಯಾಭಿಜ್ಞನು ರಕ್ಷಣಶೀಲನು ಅವನೇ ಮುಖ್ಯವಾಗಿ ಎಲ್ಲ ಮಾಡುವನು ಆದ್ದರಿಂದ ನಿಮ್ಮನ್ನು ರಕ್ಷಿಸಿಯೇ ರಕ್ಷಿಸುವನು ಎಂದು ಭಾವ ॥೩೭॥

*ಇಲ್ಲಿಗೆ ಹದಿನೇಳನೆಯ ಅಧ್ಯಾಯವು ಮುಗಿಯಿತು*

*ಸಮಾಪ್ತಶ್ಚಾಯಂ ಗ್ರಂಥಃ*

# ಹದಿನೇಳನೆಯ ಅಧ್ಯಾಯದ ತಾತ್ಪರ್ಯ

ಬ್ರಹ್ಮ-ಸರ್ವತ್ರ ವ್ಯಾಪ್ತನಾದರೂ ವೈಕುಂಠವಾಸಿಯೆನಿಸಿದ ಶ್ರೀಹರಿಯು ಭಕ್ತರಾದ ಆ ಸನಕಾದಿಗಳ ಸ್ತೋತ್ರವನ್ನು ಮೆಚ್ಚಿದನು. ಮತ್ತು ಅವರನ್ನು ಕುರಿತು "ನನ್ನ ದ್ವಾರಪಾಲಕರಲ್ಲಿ ಮುಖ್ಯರಾದ ಈ ಜಯವಿಜಯರು ನನ್ನನ್ನು ಲೆಕ್ಕಿಸಲಿಲ್ಲ. ನಿಮ್ಮನ್ನು ತಡೆದು ಬಹಳ ಅಪರಾಧವನ್ನು ಮಾಡಿರುವರು. ನನ್ನ ವ್ರತವನ್ನೇ ವ್ರತವಾಗಿಉಳ್ಳ ನೀವು ಇವರಿಗೆ ಕೊಟ್ಟ ಶಿಕ್ಷೆಯು ನನಗೆ ಅನುಮತವಾದುದೇ. ಮುನಿಗಳೇ, ಎಂದೂ ದೇವತೆಗಳನ್ನು ತಿರಸ್ಕರಿಸುವುದು ಯುಕ್ತವಲ್ಲ. ನನ್ನ ಭಕ್ತರು ಎಲ್ಲರಿಗೂ ಅತ್ಯಂತ ಪೂಜ್ಯರಾದ ದೇವತೆಗಳು. ಅವರು ನನ್ನನ್ನೇ ಸ್ವಾಮಿಯೆಂದು ಯಾವಾಗಲೂ ಸ್ಮರಿಸುವರು. ಪರಿವಾರದವರು ಮಾಡಿದ ಅಪರಾಧವು ಯಜಮಾನನೇ ಮಾಡಿದಂತೆ ಅಲ್ಲವೇ ! ಆದ್ದರಿಂದ ಇವರು ಮಾಡಿದ ಅಪರಾಧವು ನಾನು ಮಾಡಿದಂತೆಯೇ ಸರಿ. ತಾವು ಪ್ರಸನ್ನರಾಗಿರಿ. ಭೃತ್ಯನು ಅಪರಾಧ ಮಾಡಿದಾಗ ಜನರು ಯಜಮಾನನ ಹೆಸರು ಹೇಳಿ ದೂಷಿಸುವರಷ್ಟೆ ಈ ದೂಷಣೆಯು ಯಜಮಾನನ ಕೀರ್ತಿಯನ್ನೇ ನಾಶಮಾಡುವುದು. ಶರೀರದಲ್ಲಿ ಹುಟ್ಟಿದ ಕುಷ್ಠರೋಗವು ಚರ್ಮದ ಸೌಂದರ್ಯವನ್ನೇ ಹೋಗಲಾಡಿಸುವುದಲ್ಲವೆ ! ನನ್ನ ಶುದ್ಧವಾದ ಕೀರ್ತಿಯು ಮೋಕ್ಷವನ್ನೇ ಕೊಡುವುದು. ಅಂತಹ ಕೀರ್ತಿಯನ್ನು ಶ್ರವಣಮಾಡಿದರೆ ಚಂಡಾಲನೂ ಪರಿಶುದ್ಧನಾಗುವನು. ನನ್ನ ಇಂತಹ ಪವಿತ್ರ ಕೀರ್ತಿಗೆ ನೀವೇ ಕಾರಣರು. (ಪ್ರಶಂಸೆಗಾಗಿ ಹೇಳಿದ್ದು) ಬ್ರಾಹ್ಮಣರ ಪಾದ ಧೂಳು ಅತಿ ಪವಿತ್ರವಾದುದು. ಅದರ ಸೇವೆಯಿಂದ ಅವರ ಸ್ವಭಾವವನ್ನೇ ನಾನು ವಿಡಂಬಿಸುವೆನು. ನನ್ನ ನಾಮಸಂಕೀರ್ತನೆಯು ಜನರ ಎಲ್ಲ ಪಾಪವನ್ನೂ ಹೋಗಲಾಡಿಸುವುದು. ನಾನು ಸ್ವರಮಣನು. ಮತ್ತೊಬ್ಬರ ಅಪೇಕ್ಷೆಯೇ ನನಗಿಲ್ಲ. ಹೀಗಿದ್ದೂ ಅತ್ಯಂತ ಭಕ್ತಳಾದ ಲಕ್ಷ್ಮಿಯ ಕಟಾಕ್ಷವೀಕ್ಷಣೆಗಾಗಿ ಬ್ರಹ್ಮಾದಿ ದೇವತೆಗಳು ತಪಸ್ಸು ಮಾಡುವರು. ಹೀಗೆ ಸರ್ವೋತ್ತಮನಾಗಿದ್ದರೂ ನಾನು ಬ್ರಹ್ಮಜ್ಞಾನಿಗಳಿಗೆ ಪ್ರತಿಕೂಲವಾದ ವ್ಯಾಪಾರವನ್ನು ಮಾಡುವುದಿಲ್ಲ. ಹಾಗೇನಾದರೂ ನನ್ನ ಬಾಹುಗಳು ವ್ಯಾಪಾರ ಮಾಡಿದಲ್ಲಿ ನಾನು ಅವುಗಳನ್ನು ಕತ್ತರಿಸಲು ಸಿದ್ಧನಿರುವೆನು. ಉತ್ಕೃಷ್ಟವಾದ ಯಜ್ಞಗಳಲ್ಲಿ ತುಪ್ಪದ ಕಾಲುವೆಯನ್ನೇ ಹರಿಸಿ ಹವಿಸ್ಸನ್ನು ಅಗ್ನಿಯ ಮೂಲಕ ನನಗೆ ಸಮರ್ಪಿಸಿದರೂ ನನಗೆ ಅಷ್ಟೊಂದು ತೃಪ್ತಿಯಾಗುವುದಿಲ್ಲ. ನನ್ನಲ್ಲಿಯೇ ಅನುರಕ್ತರಾದ, ಆದ್ದರಿಂದಲೇ ಕರ್ಮಫಲವಾಗಿ ನಾನು ಕೊಟ್ಟಿದ್ದರಿಂದಲೇ ತೃಪ್ತರಾದ ಬ್ರಹ್ಮಜ್ಞಾನಿಗಳು ನನ್ನನ್ನು ಸ್ಮರಿಸಿಕೊಂಡು ತಿನ್ನುವ ಪ್ರತಿಯೊಂದು ತುತ್ತಿನಿಂದಲೂ ನಾನು ಅತ್ಯಂತ ತೃಪ್ತನಾಗುವೆನು. ಬ್ರಹ್ಮನು ನನ್ನ

ಪಾದಗಳನ್ನು ತೊಳೆದ ನೀರು ದೇವಗಂಗೆಯೆನಿಸಿ ಚಂದ್ರಶೇಖರನೇ ಮೊದಲಾದ ಎಲ್ಲ ಲೋಕಪಾಲಕರನ್ನೂ ಅವರ ಲೋಕದ ಜನರನ್ನೂ ಸ್ನಾನಮಾತ್ರದಿಂದ ಪವಿತ್ರಗೊಳಿಸುತ್ತಿರುವುದು. ಇಂತಹ ನಾನು ನನ್ನ ಸ್ವರೂಪವೇ ಆದ ನನ್ನ ಇಚ್ಛೆಯಿಂದ ವಿವಿಧ ಅವತಾರಗಳನ್ನು ಮಾಡುವೆನು. ಆ ಎಲ್ಲ ಅವತಾರಗಳಲ್ಲಿಯೂ ಬ್ರಾಹ್ಮಣರ ಪಾದಧೂಳನ್ನು ರಕ್ಷಕರಿಲ್ಲದ ಪ್ರಾಣಿಗಳನ್ನಾಗಲಿ ನನ್ನ ಈ ಚಲಪ್ರತಿಮೆಗಳಾದ ಬ್ರಾಹ್ಮಣರನ್ನಾಗಲಿ ತಿರಸ್ಕರಿಸಿದವರು ಕೇವಲ ಕುರುಡರು.. ಪಾಪದಿಂದ ಅವರ ದೃಷ್ಟಿಯೇ ನಷ್ಟವಾಗಿರುವುದು. ಅವರು ಕೋಪದಿಂದ ಹೀಗೆ ಮಾಡುವರು. ಆದರೆ ನನ್ನಿಂದ ನಿಯಮಿತನಾದ ಅಪರಾಧಿಗಳನ್ನು ಶಿಕ್ಷಿಸುವ ಯಮನು ಇವರನ್ನು ಶಿಕ್ಷಿಸದೆ ಬಿಡುವುದಿಲ್ಲ. ಅವನ ಹದ್ದುಗಳು ಇಂತಹ ದುಷ್ಟರ ಕಣ್ಣುಗಳನ್ನು ಕಿತ್ತು ಅವರನ್ನು ತಿನ್ನುವುವು. ಆದರೆ ಯಾರು ಬ್ರಹ್ಮಜ್ಞಾನಿಗಳು ಕೋಪಗೊಂಡಿದ್ದರೂ, ಆಕ್ಷೇಪಿಸುತ್ತಿದ್ದರೂ ಬಿಡದೆ ನನ್ನ ಸನ್ನಿಧಾನಯುಕ್ತರೆಂದು ಅವರನ್ನು ಪೂಜಿಸುವರೋ, ಅನುರಾಗದಿಂದ ಮಕ್ಕಳನ್ನು ಕರೆಯುವಂತೆ ಭಕ್ತಿಯಿಂದ ಅವರನ್ನು ಸಂಬೋಧಿಸುವರೋ (ನಾನೂ ಅವರನ್ನು ಹಾಗೆಯೇ ಸಂಬೋಧಿಸುವೆನು) ಅಂತಹ ಸಂತುಷ್ಟರಾದ ನಗುಮುಖದ ಭಕ್ತರಿಗೆ ನಾನು ಯಾವಾಗಲೂ ವಶನಾಗಿರುವೆನು. ಯಜಮಾನನಾದ ನಾನು ಇಷ್ಟೊಂದು ಬ್ರಾಹ್ಮಣಪ್ರಿಯನೆಂದು ತಿಳಿದೂ ಈ ಇಷ್ಟವನ್ನು ಸ್ವಲ್ಪವೂ ವಿಚಾರಮಾಡದೆ ಇವರು ನಿಮ್ಮನ್ನು ತಡೆದುದಕ್ಕೆ ಅಸುರಯೋನಿಯನ್ನು ಹೊಂದುವುದು ಯುಕ್ತವೇ. ಆದರೂ ನಿಮ್ಮ ಶಾಪದಂತೆ ಇವರಿಗೆ ಎಷ್ಟು ಕಾಲವಾದರೂ ಆ ಅಸುರಯೋನಿಯಿಂದ ಬಿಡುಗಡೆಯೇ ಇಲ್ಲ. ಹೀಗಿರುವಾಗ ಇವರು ಹೆಚ್ಚುಕಾಲವಿಳಂಬವಿಲ್ಲದೆ ಮತ್ತೆ ನನ್ನ ಸಮೀಪಕ್ಕೆ ಬರಲಿ ಎಂದು ನಿಮ್ಮ ಶಾಪಕ್ಕೆ ಒಂದು ಅವಧಿಯನ್ನು ಕಲ್ಪಿಸುವೆನು. ಇದೇ ನಾನು ಇವರಲ್ಲಿ ಮಾಡುವ ಅನುಗ್ರಹ. ಇದು ನಿಮಗೂ ಒಪ್ಪಿಗೆಯೆಂದೇ ಭಾವಿಸುವೆನು.' ಎಂದು ನುಡಿದನು.

ಆ ಶ್ರೀಹರಿಯ ಮಾತು ಸರಸ್ವತೀನದಿಯಂತೆ ಎಲ್ಲರ ಅಭಿಷ್ಟವನ್ನೂ ಕೊಡುವುದಾಗಿತ್ತು. ಋಷಿಸಮೂಹಕ್ಕೇ ಪ್ರಿಯವಾಗಿತ್ತು. ಅರ್ಥಗರ್ಭಿತವಾದ ಈ ಮಾತುಗಳನ್ನು ಕೇಳಿ ಕೋಪಗೊಂಡಿದ್ದ ಋಷಿಗಳ ಮನಸ್ಸು ಶಾಂತವಾಯಿತು. ಸ್ವಲ್ಪ ಶಬ್ದಗಳಿದ್ದರೂ ಅರ್ಥದಿಂದ ಅಗಾಧವೂ ಗಭೀರವೂ ಆದ ಆ ಪರಮಾತ್ಮನ ಮಾತನ್ನು ಆಶ್ಚರ್ಯದಿಂದ ಬಾಯಿಬಿಟ್ಟು ಕೇಳಿದರೇ ಹೊರತು ಆ ಋಷಿಗಳು ಶ್ರೀಹರಿಯ ಅಭಿಪ್ರಾಯವನ್ನು ತಿಳಿಯಲು ಅಸಮರ್ಥರಾದರು. ಶ್ರೀಹರಿಯ ಮಹಿಮೆಯು ಅವರಿಗೆ ತಿಳಿಯದೆ ಇಲ್ಲ. ಸಮಸ್ತ ಐಶ್ವರ್ಯದಿಂದ ತುಂಬಿದ ಬ್ರಹ್ಮಪದವಿಯನ್ನೂ ಶ್ರೀಹರಿಯು ತನ್ನ ಇಚ್ಛಾಮಾತ್ರದಿಂದ ಸೃಷ್ಟಿಸಿದವನು. ಇಂತಹ

ಶ್ರೀಹರಿಯು ತಮ್ಮಲ್ಲಿ ಅನುಗ್ರಹಮಾಡಿ ದರ್ಶನಕೊಟ್ಟದ್ದಕ್ಕಾಗಿ ಅವರ ಮೈ ರೋಮಾಂಚಿತವಾಯಿತು. ಶ್ರೀಹರಿಯಲ್ಲಿಯೇ ಮನಸ್ಸಿಟ್ಟು ಆನಂದಿಸುವ ಅವರು ಭಕ್ತಿಯಿಂದ ಕೈಮುಗಿದು ವಿನಯದಿಂದ 'ದೇವ ದೇವ ಪೂಜ್ಯನಾದ ನಿನ್ನ ಅಭಿಪ್ರಾಯವನ್ನು ನಾವು ತಿಳಿಯಲಾರೆವು. ಸರ್ವಸ್ವಾಮಿಯಾದ ನೀನು ನೀವು ಕೊಟ್ಟ ಶಿಕ್ಷೆ ನನಗೆ ಸಮ್ಮತವೆಂದೂ ನಾನಿವರಲ್ಲಿ ಅನುಗ್ರಹಮಾಡಿರುವೆನೆಂದೂ ಹೇಳುತ್ತಿದ್ದಿ. ಈ ನಿನ್ನ ಮಾತಿನ ಅಭಿಪ್ರಾಯವಾದರೂ ಏನು ? ಪ್ರಭುವೇ ! ದೇವತೆಗಳಿಗೂ ಬ್ರಾಹ್ಮಣರಿಗೂ ನೀನೇ ಕುಲದೇವತೆಯು. ಅಂತಹ ನಿನಗೆ ಬ್ರಾಹ್ಮಣಪ್ರಿಯನಿಗೆ ಬ್ರಾಹ್ಮಣರು ಉತ್ತಮ ದೇವತೆಗಳಲ್ಲವೆ ! ಹೀಗೆ ನೀನು ಇತರರನ್ನು ಮೋಹಿಸಬಹುದಾದರೂ ನಾವು ಮೋಹಗೊಳ್ಳುವುದಿಲ್ಲ. ನೀನು ಆಡುತ್ತಿರುವ ಈ ಮಾತುಗಳು ಕೇವಲ ಬ್ರಾಹ್ಮಣರನ್ನು ಪ್ರಶಂಸಿಸಲು ನೀನು ಹೀಗೆ ಹೇಳುತ್ತೀಯೆಂಬುದನ್ನು ನಾವು ಬಲ್ಲೆವು. ವರ್ಣ ಮತ್ತು ಆಶ್ರಮಗಳ ಧರ್ಮಗಳು ಸನಾತನಗಳಾಗಿದ್ದರೂ ನಿನ್ನಿಂದಲೇ ರೂಪುಗೊಳ್ಳುವುವು. ಅವುಗಳಿಗೆ ಧಕ್ಕೆ ಬಂದಾಗ ನೀನೇ ಅವತಾರಗಳನ್ನು ಮಾಡಿ ಅವುಗಳನ್ನು ಉಳಿಸುವೆ. ಸರ್ವಧಾರಕನಾದ ನೀನೇ ಧರ್ಮಪದದ ಮುಖ್ಯಾರ್ಥವು. ನೀನೇ ನಿರ್ವಿಕಾರನಾದ್ದರಿಂದ ನಿತ್ಯಫಲವನ್ನು ಕೊಡುವನಾದ್ದರಿಂದ ಸಕಲ ಸತ್ಕರ್ಮಗಳ ಫಲವೆನಿಸುವೆ. ನಿನ್ನನ್ನು ಸಂಪೂರ್ಣವಾಗಿ ವಾಯುದೇವರೂ ತಿಳಿಯಲಾರರು. ಆದರೂ ನೀನು ಅವರವರ ಯೋಗ್ಯತೆಗೆ ತಕ್ಕಂತೆ ಎಲ್ಲರ ಜ್ಞಾನಕ್ಕೂ ವಿಷಯನಾಗಿರುವೆ. ನಿಷ್ಕಾಮನೆಯಿಂದ ನಿನ್ನ ಪ್ರೀತಿಗಾಗಿಯೇ ಕರ್ಮಗಳನ್ನು ಮಾಡುವ ಭಕ್ತರು ನಿನ್ನ ಅನುಗ್ರಹದಿಂದ ಈ ಜನನಮರಣರೂಪವಾದ ಸಂಸಾರದಿಂದ ಸಂಪೂರ್ಣವಾಗಿ ಮುಕ್ತರಾಗುವರು. ಇಂತಹ ನಿನಗೆ ಮತ್ತೊಬ್ಬರಿಂದ ಯಾವ ಅನುಗ್ರತಾನೇ ಬೇಕು ? ಬ್ರಹ್ಮಾದಿ ದೇವತೆಗಳು ಲಕ್ಷ್ಮೀದೇವಿಯ ಪಾದಧೂಳನ್ನು ತಮ್ಮತಮ್ಮ ತಲೆಯಲ್ಲಿ ಧರಿಸಿ ಭಕ್ತಿಜ್ಞಾನಾದಿ ಪುರುಷಾರ್ಥಗಳಿಗಾಗಿ ಸೇವಿಸುವರು. ವಿಭೂತಿಯೆಂದು ಕರೆಸಿಕೊಳ್ಳುವ ಆ ಲಕ್ಷ್ಮಿಯು ಸ್ಪರ್ಧೆ ಮೊದಲಾದ ದೋಷಗಳಿಲ್ಲದವಳಾದರೂ ಭಕ್ತರು ಪೂಜಿಸಿದ ತುಳಸೀನವಮಾಲೆಯನ್ನು ಧರಿಸಿರುವ ನಿನ್ನ ಪಾದಗಳಲ್ಲಿ ಇರುವ ತುಳಸಿಯ ಸ್ಥಾನವನ್ನು ಸ್ಪರ್ಧೆಯಿಂದಲೊ ಎಂದಂತೆ ಅಪೇಕ್ಷಿಸುವಳಾಗಿ ಯಾವಾಗಲೂ ಸೇವಿಸುತ್ತಿರುವಳು. ಲಕ್ಷ್ಮಿಯು ನಿನ್ನನ್ನು ಸೇವಿಸುವಂತೆ ಮತ್ತಾರೂ ಸೇವಿಸಲು ಸಾಧ್ಯವಿಲ್ಲ. ಆದರೂ ನೀನವಳನ್ನು ಉತ್ತಮಭಕ್ತಳೆಂದು ಹೆಚ್ಚು ಆದರಿಸುವೆಯೇ ಹೊರತು ಕಾಮುಕನಂತೆ ಕಾಮನೆಯಿಂದ ಆದರಿಸುತ್ತಿಲ್ಲ. ಭಕ್ತಿಯು ಹೆಚ್ಚಿದಂತೆ ನಿನ್ನ ಒಲುಮೆಯನ್ನೂ ಹೆಚ್ಚು ತೋರಿಸುವವನು ನೀನು. ಹೀಗಿದ್ದೂ ನಿನಗೆ ಬ್ರಾಹ್ಮಣರ ಪವಿತ್ರಪಾದಧೂಳಿನಿಂದ ಶ್ರೀವತ್ಸ ಚಿಹ್ನೆಯು ದೊರೆಯಿತೇ ? ಸಕಲ ಸೌಭಾಗ್ಯಕ್ಕೆ ಆಶ್ರಯನಾದ ನಿನಗೆ ಅದರಿಂದ ಸೌಭಾಗ್ಯವು

ಬಂದಿತೇ ? ಎಂದೂ ಇಲ್ಲ. ಆದರೂ ಹಾಗೆ ಪ್ರಶಂಸಿರುವೆ. ಹೇ ದೇವ, ನೀನು ಕೃತ, ತ್ರೇತಾ, ಮತ್ತು ದ್ವಾಪರಯುಗಗಳಲ್ಲಿ ಮಾತ್ರ ಅವತರಿಸುವವನು. ಭಕ್ತರಿಗೆ ಜ್ಞಾನವನ್ನು ಕೊಡುವುದರಲ್ಲಿಯೇ ನಿರತವಾದ ನಿನ್ನ ಕಪಿಲರೂಪದಿಂದ ರಜಸ್ತಮಸ್ಸು-ಗಳನ್ನು ಹೋಗಲಾಡಿಸಿ ಸತ್ವಗುಣವನ್ನೇ ಹೆಚ್ಚಿಸಿದೆ. ನೀನೇ ಸರ್ವಾಧಾರಕನು. ಅನಂತಾಸನ, ಶ್ವೇತದ್ವೀಪ ಮತ್ತು ವೈಕುಂಠಗಳಲ್ಲಿ ವ್ಯಕ್ತವಾಗಿರುವ ನಿನ್ನ ಮೂರು ರೂಪಗಳಿಂದ ಈ ಸಮಸ್ತ ಪ್ರಪಂಚವನ್ನೂ ಬ್ರಾಹ್ಮಣರು ಮತ್ತು ದೇವತೆಗಳ ಪ್ರಯೋಜನಕ್ಕಾಗಿ ರಕ್ಷಿಸುತ್ತಿರುವೆ. ಈ ಸೃಷ್ಟಿಗೆ ಮತ್ತೊಂದು ಪ್ರಯೋಜನವಿಲ್ಲ. ಪರಮೈಶ್ವರ್ಯವಂತನಾದ ನೀನು ನಿನ್ನಿಂದಲೇ ರಕ್ಷಿತವಾಗುವ ಈ ಬ್ರಾಹ್ಮಣ ಕುಲವನ್ನು ಮಂಗಳ ಮಧುರ ಮಾತುಗಳಿಂದ ಸತ್ಕರಿಸಿ ಕಾಪಾಡದೆ ಹೋದಲ್ಲಿ ತತ್ವಜ್ಞಾನಮಾರ್ಗವೂ ಶಿಷ್ಟಾಚಾರವೂ ಉಳಿಯುವುದಿಲ್ಲ. ಜನರು ಯೋಗ್ಯರು ಮಾಡುವ ಸರಿಯಾದ ಕೆಲಸಗಳನ್ನೇ ಅನುಸರಿಸಿ ನಡೆಯುವರಲ್ಲವೇ ! ದೇವ ! ನೀನು ಯೋಗ್ಯರಿಗೆ ಸುಖವನ್ನು ಕೊಡುವವನು. ಅವರಿಗೆ ಮೋಕ್ಷ ಮೊದಲಾದ ಸಮಸ್ತ ಮಂಗಳಗಳನ್ನೂ ಕೊಡುವವನು. ಮೋಕ್ಷಕ್ಕೆ ಪ್ರತಿಬಂಧಕಗಳಾದ ಅಜ್ಞಾನ ಮೊದಲಾದುವನ್ನು ನಿನ್ನ ಸಾಮರ್ಥ್ಯದಿಂದಲೇ ನೀನು ಹೋಗಲಾಡಿಸುವೆ. ಇಂತಹ ನಿನಗೆ ಧರ್ಮನಾಶವು ಎಂದೂ ಪ್ರಿಯವಲ್ಲ. ಅಧರ್ಮವನ್ನು ನಿಷೇಧಿಸಬೇಕೆಂದೇ ನಿನ್ನ ಇಷ್ಟ. ಮೂರು ಲೋಕಗಳಿಗೂ ಅಧಿಪತಿಯಾದ ನೀನು ಬ್ರಾಹ್ಮಣರಿಗೆ ತಲೆಬಗ್ಗಿಸಿದ ಮಾತ್ರಕ್ಕೆ ನಿನ್ನ ಹಿರಿಮೆಗೆ ಹಾನಿಯಿಲ್ಲ. ಇದೆಲ್ಲ ನಿನಗೆ ಕ್ರೀಡೆ ಮಾತ್ರ. ಮಹಾಸ್ವಾಮಿನ್, ನೀನು ಈ ಜಯವಿಜಯರಿಗೆ ಶಿಕ್ಷೆಯಾದರೂ ಮಾಡು ಅಥವಾ ಅವರನ್ನು ಇಲ್ಲಿಯೇ ಇರಿಸಿಕೋ ನೀನು ಮಾಡಿದ್ದು ನಮಗೂ ಸಮ್ಮತ. ಸ್ವರೂಪದಿಂದ ಇವರು ನಿರಪರಾಧಿಗಳು ಅವರಲ್ಲಿ ದೋಷವೆಣಿಸಿದ ನಮ್ಮನ್ನಾದರೂ ಶಿಕ್ಷಿಸು', ಎಂದು ವಿಜ್ಞಾಪಿಸಿದರು.

ಅವರ ಈ ಬಿನ್ನಹಕ್ಕೆ ಉತ್ತರವಾಗಿ ಶ್ರೀಹರಿಯು 'ಬ್ರಾಹ್ಮಣರೇ, ಈ ಜಯವಿಜಯರು ಕಾಲವಿಳಂಬವಿಲ್ಲದೆ ಅಸುರದೇಹವನ್ನು ಸೇರಿ ಅಲ್ಲಿ ದ್ವೇಷಮಾಡುವ ಜೀವನ ಜೊತೆಯಲ್ಲಿ ಇದ್ದರೂ ನನ್ನಲ್ಲಿ ಏಕಾಗ್ರತೆಯಿಂದ ಕೂಡಿದ ಭಕ್ತಿಯನ್ನು ಹೊಂದಿದವರಾಗಿ ಮತ್ತೆ ನನ್ನಲ್ಲಿಗೇ ಬರುವರು. ನೀವು ಕೊಟ್ಟ ಶಾಪವು ನಾನು ಕೊಟ್ಟಂತೆಯೇ ಸರಿ' ಎಂದು ನುಡಿದನು.

ನಯನಾನಂದಕರವಾದ ಶ್ರೀಹರಿಯ ರೂಪವನ್ನೂ ಅವನು ವ್ಯಕ್ತವಾಗಿರುವ ವೈಕುಂಠವನ್ನೂ ನೋಡಿದ ಸನಕಾದಿಗಳು ನಿರ್ದೋಷನಾದ ಶ್ರೀಹರಿಗೆ ಬಲಬಂದು ಸಾಷ್ಟಾಂಗ ನಮಸ್ಕಾರಮಾಡಿ ಅವನ ಅಪ್ಪಣೆಯನ್ನು ಪಡೆದು ಆನಂದದಿಂದ ಶ್ರೀಹರಿಯ ಸ್ವರೂಪವನ್ನು ಹೊಗಳುತ್ತಾ ಹಿಂತಿರುಗಿದರು.

ಶ್ರೀಹರಿಯು ಜಯವಿಜಯರನ್ನು ಕುರಿತು 'ಹೋಗಿರಿ. ನೀವು ಹೆದರಬೇಡಿ. ನಿಮಗೆ ಒಳ್ಳೆಯದಾಗುವುದು. ಬ್ರಾಹ್ಮಣರ ಶಾಪವನ್ನು ತಪ್ಪಿಸುವ ಸಾಮರ್ಥ್ಯವು ನನಗಿದ್ದರೂ ಹಾಗೆಂದೂ ನಾನು ಮಾಡುವುದಿಲ್ಲ. ಬ್ರಾಹ್ಮಣತೇಜಸ್ಸನ್ನು ನಿರರ್ಥಕ ಮಾಡಲು ನಾನು ಇಷ್ಟಪಡುವುದಿಲ್ಲ. ಅಲ್ಲದೆ ನೀವು ನಿಮ್ಮ ಅಧಿಕಾರವನ್ನು ವಿವೇಚನೆ ಇಲ್ಲದೆ ಉಪಯೋಗಿಸುತ್ತೀರಿ ಎಂಬ ಅಂಶವನ್ನು ನಿಮ್ಮಿಂದ ತಡೆಯಲ್ಪಟ್ಟ ಲಕ್ಷ್ಮಿಯೇ ನನಗೆ ಹಿಂದೆ ತಿಳಿಸಿದ್ದಳು. ಆದರೆ ನಿಮ್ಮಲ್ಲಿ ಈ ಒಂದು ಅನುಗ್ರಹವನ್ನು ಮಾಡುತ್ತೇನೆ. ನೀವು ದ್ವೇಷಮಾಡುವ ಅಸುರ ಜೀವನ ಜೊತೆಯಲ್ಲಿ ಒಂದೇ ದೇಹದಲ್ಲಿದ್ದರೂ ನಿಮಗೆ ಭಕ್ತಿಯು ಕುಗ್ಗದಿರುವುದು. ಆ ಭಕ್ತಿಯ ಫಲವಾಗಿ ಈ ನಿಮ್ಮ ಬ್ರಾಹ್ಮಣ ತಿರಸ್ಕಾರ ರೂಪವಾದ ಅಪರಾಧವನ್ನು ಕಳೆದುಕೊಂಡು ಶುದ್ಧರಾಗುವಿರಿ. ಅಲ್ಪಕಾಲದಲ್ಲಿಯೇ ಮತ್ತೆ ನ್ನ ಬಳಿಗೆ ಬರುವಿರಿ' ಎಂದು ಅಪ್ಪಣೆಮಾಡಿ ಅತ್ಯಂತ ಸುಂದರವೂ ಅನೇಕ ಗೋಪುರಗಳಿಂದ ಅಲಂಕೃತವೂ ಆಗಿದ್ದ ತನ್ನ ಮನೆಯೊಳಗೆ ಪ್ರವೇಶಿಸಿದನು.

ದೇವತೆಗಳಾಗಿದ್ದರೂ ಜಯವಿಜಯರು ಆ ಬ್ರಾಹ್ಮಣ ಶಾಪವನ್ನು ಮೀರುವ ಸ್ಥಿತಿಯಲ್ಲಿರಲಿಲ್ಲ. ವೈಕುಂಠ ಲೋಕವನ್ನು ಬಿಟ್ಟು ಹೊರಟರು. ಅವರ ಗರ್ವವು ಸಂಪೂರ್ಣವಾಗಿ ಹೋಗಿದ್ದಿತು. ಅವರ ಮುಖದಲ್ಲಿ ಕಾಂತಿಯೇ ಇರಲಿಲ್ಲ. ಅವರು ಭೂಮಿಗೆ ಇಳಿಯುತ್ತಿದ್ದಂತೆಲ್ಲ ವಿಮಾನಗಳಲ್ಲಿ ಕುಳಿತು ಅವರನ್ನು ನೋಡುತ್ತಿದ್ದ ಆಯಾಯಾಲೋಕದ ಜನರು ಹಾಯ್ ಹಾಯ್ ಎಂದು ಕೂಗುತ್ತಾ ವಿಷಾದವನ್ನು ವ್ಯಕ್ತಪಡಿಸಿದರು. ಆ ಜಯ ವಿಜಯರೇ ಈಗ ದಿತಿಯ ಉದರದಲ್ಲಿ ಕಶ್ಯಪರ ವೀರ್ಯವನ್ನು ಆಶ್ರಯಿಸಿ ಪ್ರವೇಶಿಸಿರುವರು. ಅಸುರದೇಹಗತರಾದ ಆ ಇಬ್ಬರ ತೇಜಸ್ಸಿನಿಂದ ನಿಮ್ಮ ಸಾಮರ್ಥ್ಯವೆಲ್ಲವೂ ಕುಗ್ಗಿದೆ. ಇದಕ್ಕೆ ಪ್ರತೀಕಾರವನ್ನು ಶ್ರೀಹರಿಯು ಮಾಡಲಿರುವನು. ಆ ಶ್ರೀಹರಿಯೇ ಜಗತ್ತಿನ ರಕ್ಷಣೆ, ನಾಶ ಮತ್ತು ಸೃಷ್ಟಿಗಳಿಗೆ ಮುಖ್ಯಕಾರಣನು. ಅವನು ಏನು ಮಾಡಲಿರುವನೆಂದು ನಾವು ಯಾರು ತಿಳಿಯಲಾರೆವು. ನಮ್ಮ ಪದವಿಗಳೆಲ್ಲ ಅವನ ಅಧೀನ. ರಕ್ಷಕನಾದ ಅವನು ನಮಗೆಲ್ಲ ಕ್ಷೇಮವನ್ನು ಮಾಡಿಯೇ ಮಾಡುವನು. ನಮ್ಮ ವಿಮರ್ಶೆಗಳಿಂದ ಯಾವ ಪ್ರಯೋಜನವೂ ಆಗಲಾರದು' ಎಂದು ಬ್ರಹ್ಮದೇವರು ನುಡಿದರು.

*ಈ ಸಂಪುಟ ಮುಕ್ತಾಯವಾಯಿತು*





ಶ್ರೀಮದಾಚಾರ್ಯರ ಗ್ರಂಥವನ್ನೂ ಅದಕ್ಕನುಗುಣವಾಗಿ ಭಾಗವತಮೂಲವನ್ನೂ ವ್ಯಾಖ್ಯಾನ ಮಾಡಿದ ಅನೇಕಾನೇಕ ಮಹಾನುಭಾವರು ಇದ್ದಾರೆ. ಜ್ಞಾನಿಗಳು ಪ್ರಸ್ಥಾನತ್ರಯದ ನಂತರ ಅತಿಹೆಚ್ಚಿನ ಪ್ರಮಾಣದಲ್ಲಿ ಭಾಗವತವನ್ನು ವ್ಯಾಖ್ಯಾನಿಸಿದ್ದಾರೆ. ಅವರ ನಾಮಸಂಕೀರ್ತನ ನಮ್ಮ ಪಾಪಪರಿಹಾರ.

ಇದೆಲ್ಲವನ್ನು ಇಟ್ಟುಕೊಂಡು, ಪ್ರಕೃತ ಪಂಡಿತಪ್ರಕಾಂಡರಾದ ಪರಮಪೂಜ್ಯ ಆಚಾರ್ಯರವರು (ಪಂಡಿತ ಗುತ್ತಲ ರಂಗಾಚಾರ್ಯರು) ಶ್ರೀಮದ್ಭಾಗವತಕ್ಕೆ ಕನ್ನಡದಲ್ಲಿ ಅನುವಾದವನ್ನು ರಚಿಸಿದ್ದಾರೆ. ಶ್ರೀಮದ್ಭಾಗವತವನ್ನು ಅನೇಕ ವರ್ಷಗಳಿಂದ ಕನ್ನಡದಲ್ಲಿ ಅನುವಾದಿಸುತ್ತಿರುವರು. ಇದೊಂದು ಅತಿದೀರ್ಘಕಾಲದ ತಪಸ್ಸೆ. ಇದಕ್ಕಾಗಿರುವ ಅವರ ಹಟ ಅನನ್ಯವೂ ಹೌದು. ಆದರ್ಶವೂ ಹೌದು.

ತಮ್ಮ ನಿತ್ಯದ ಅವಿರತ ಪಾಠಪ್ರವಚನಗಳು, ಶ್ರೀಮಠದ ಬೃಹತ್ತಾದ ಜವಾಬ್ದಾರಿ, ವಿದ್ಯಾಪೀಠದ ಹೊಣೆ ಇವುಗಳ ಮಧ್ಯದಲ್ಲಿ ಪ್ರಾಯಃ ಒಂದೂ ದಿನ ಬಿಡದೆ ಒಂಭತ್ತು, ಹತ್ತು, ಹನ್ನೊಂದು, ಹನ್ನೆರಡು ಸ್ಕಂಧಗಳ ಅನುವಾದ ವ್ಯಾಖ್ಯಾನ ಮುಗಿಸಿ ಈಗ "ಮೂರನೆಯ ಸ್ಕಂಧದ" ಅನುವಾದವನ್ನು ಮಾಡುತ್ತಲಿದ್ದಾರೆ.

ಅವರ ಅನುವಾದದ ವೈಶಿಷ್ಟ್ಯವೆಂದರೆ ಪ್ರಾಯಃ ಉಪಲಬ್ಧ ಎಲ್ಲ ಟಿಪ್ಪಣಿಗಳ ಅರ್ಥ ವಿವರಣೆ. ಕೇವಲ ಮೂಲಭಾಗವತಕ್ಕೆ ಅನುವಾದಮಾಡುವದು ಕಠಿಣ. ಅಂಥ ಗ್ರಂಥಗಳು ತುಂಬ ವಿರಳ.

ಹೀಗಿರುವಾಗ ಶ್ರೀಸತ್ಯಧರ್ಮತೀರ್ಥರೇ ಮೊದಲಾದವರು ಬರೆದ ಜಟಿಲ ಟಿಪ್ಪಣಿಗಳ ತುಂಬ ಸರಳ ವಿವರಣೆ ಮಾಡುವದು ಕಠಿಣವೆಂದು ಹೇಳಬೇಕೆ ?

ಒಂಭತ್ತು, ಹತ್ತು, ಹನ್ನೊಂದು ಮೂರು ಸ್ಕಂಧಗಳಲ್ಲಿ ಅನೇಕ ಕಡೆಗೆ ತುಂಬ ಸ್ವಾರಸ್ಯವಾಗಿ ಅನುವಾದಿಸಿದ್ದುಂಟು. ಇದಕ್ಕೆ ಒಂದು ನಿದರ್ಶನ ಶ್ರುತಿಗೀತಾ. ಅಲ್ಲಿ ಅವರ ಕೌಶಲ, ಪಾಂಡಿತ್ಯ ಎದ್ದು ಕಾಣುತ್ತದೆ. ಹೀಗೆ ಅನೇಕ ಉದಾಹರಣಗಳನ್ನು ಕೊಡಬಹುದು.

ಭಾಗವತವನ್ನು ಅಥವಾ ತಾತ್ಪರ್ಯ ಟಿಪ್ಪಣಿಗಳನ್ನು ಸಾಕ್ಷಾತ್ತಾಗಿ ಅರ್ಥಮಾಡಿಕೊಳ್ಳಲಾರದ ಜಿಜ್ಞಾಸುಗಳಿಗೆ, ಅಷ್ಟೇ ಅಲ್ಲ ಅವುಗಳನ್ನು ಅರ್ಥಮಾಡಿಕೊಳ್ಳುವ ವಿದ್ವಾಂಸರಿಗೂ ಸ್ಪಷ್ಟೀಕರಣಕ್ಕಾಗಿ ಇವರ ಈ ಅನುವಾದ ಗ್ರಂಥಗಳು ತುಂಬ ಉಪಯುಕ್ತವಾಗಿವೆ.

ಪಂ. ವಿದ್ಯಾಸಿಂಹಾಚಾರ್ಯ ಮಾಹುಲಿ